ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಶ್ರೀಶಂಕರಾಚಾರ್ಯರವರ ಗ್ರಂಥಗಳು

# ಉಪನಿಷದ್ಭಾಷ್ಯಗಳು

## ಸಂಪುಟ ೪

(ಬೃಹದಾರಣ್ಯಕೋಪನಿಷತ್ತು- ಒಂದನೆಯ ಭಾಗ)

ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೫೩

# ಪ್ರಕಾಶಕರ ಬಿನ್ನಹ



ಶ್ರೀಶಂಕರಾಚಾರ್ಯರವರ ಅಮೋಘವಾದ ಕೃತಿಗಳನ್ನೆಲ್ಲ ಕನ್ನಡಿಸಿ ಮಹಾಜನರ ಮುಂದೆ ಇಡುವ ಸುಯೋಗವು ಕಾರ್ಯಾಲಯಕ್ಕೆ ಇದೀಗ ಲಭಿಸಿರುತ್ತದೆ. ನಮ್ಮನ್ನಾಳುವ ಶ್ರೀಮತ್ಕರ್ಣಾಟಕಸಿಂಹಾಸನಾಧೀಶ್ವರರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು ಜಗತ್ಪ್ರಸಿದ್ಧರಾದ ಆಚಾರ್ಯರವರ ಗ್ರಂಥಗಳೆಲ್ಲವನ್ನೂ ಪರಿಶೋಧಿಸಿ ಸಮೂಲವಾಗಿ ಕನ್ನಡಿಸಿ ಪ್ರಕಟಿಸಬೇಕೆಂದು ಕೊಡಿಸಿರುವ ಉದಾರಾಜ್ಞೆಯನ್ನು ಶಿರಸಾವಹಿಸಿ ಈ ಮಹಾಕಾರ್ಯವನ್ನು ನಾವು ಕೈಗೊಂಡಿರುತ್ತೇವೆ.

ಇದುವರೆಗೆ ನಾವು ಪ್ರಕಟಿಸಿದ್ದ ಕೆಲವು ಗ್ರಂಥಗಳನ್ನು ಈ ಸಲ ಸಂಪೂರ್ಣವಾಗಿ ಪರಿಷ್ಕರಿಸಿ ಭಾಷ್ಯದ ಸಂಸ್ಕೃತಮೂಲ, ಕನ್ನಡ ಅನುವಾದ, ಮುಖ್ಯವಿಷಯಗಳನ್ನು ವಿಶದೀಕರಿಸುವ ಟಿಪ್ಪಣಿಗಳು, ಆಚಾರ್ಯರ ಮಿಕ್ಕ ಗ್ರಂಥಗಳಲ್ಲಿರುವ ವಿಷಯವಿವೇಚನೆಯ ಹೋಲಿಕೆಯನ್ನು ಸುಲಭಗೊಳಿಸುವ ಗ್ರಂಥಪರಾಮರ್ಶಿಕೆಗಳು, ಆಯಾ ಗ್ರಂಥದ ಸಾರ, ಮಂತ್ರಗಳ ಅಥವಾ ಶ್ಲೋಕಗಳ ಅಕ್ಷರಾನುಕ್ರಮಣಿಕೆ, ಶಬ್ದಾನುಕ್ರಮಣಿಕೆ- ಇಷ್ಟನ್ನೂ ಸೇರಿಸಿ ಪರಿಪೂರ್ತಿಗೊಳಿಸಿರುತ್ತದೆ. ಉಳಿದ ಗ್ರಂಥಗಳನ್ನು ಮೊದಲನೆಯ ಸಲಕ್ಕೆ ಕನ್ನಡಿಸಿ ಇದೇ ರೀತಿಯ ಸಲಕರಣೆಗಳೊಡನೆ ಹೊರಕ್ಕೆ ತರಲಾಗಿದೆ. ಗ್ರಂಥದ ಪೀಠಿಕೆಯಲ್ಲಿ ಕಾಣುವ ವಿಷಯವಿವೇಚನೆಯು ವಿಚಾರಪ್ರಚೋದಕವಾಗಿರುವಂತೆ ಏರ್ಪಡಿಸಲಾಗಿದೆ. ಮೂಲಭಾಷ್ಯವನ್ನು ತಕ್ಕಂತೆ ಪ್ರಘಟ್ಟಗಳಾಗಿ ವಿಂಗಡಿಸಿ ತಲೆಬರಹಗಳನ್ನು ಸೇರಿಸಿರುವದು ; ಮುಖ್ಯಪಾಠಭೇದಗಳನ್ನು ಸೂಚಿಸಿರುವದು ; ಪ್ರಮಾಣವಚನಗಳ ಸ್ಥಾನವನ್ನು ಅಲ್ಲಲ್ಲಿಯೇ ತೋರಿಸಿರುವದು ; ಭಾಷ್ಯ, ಅನುವಾದ, ಟಿಪ್ಪಣಿಗಳು- ಮುಂತಾದವುಗಳು ವಿಂಗಡವಾಗಿ ಕಾಣುವಂತೆ ಬೇರೆಬೇರೆಯ ತರದ ಅಚ್ಚಿನ ಅಕ್ಷರಗಳನ್ನು ಆರಿಸಿಕೊಂಡಿರುವದು- ಇವಿಷ್ಟೂ ಈ ಗ್ರಂಥರತ್ನಮಾಲೆಯ ವಿಶೇಷಗಳು.

ಈ ಗ್ರಂಥಾವಳಿಯ ಪ್ರಯೋಜನವು ಕನ್ನಡನಾಡಿನ ಮಹಾಜನಗಳಿಗೆ ಸತತವಾಗಿ ಲಭಿಸುವಂತೆಯೂ, ಇದಕ್ಕೆ ಉದಾರಹಸ್ತಾವಲಂಬನವನ್ನಿತ್ತು ಅಧ್ಯಾತ್ಮಪ್ರಕಾಶಕಾರ್ಯಾಲಯಕ್ಕೆ ಪರಿಪಾಲಕರಾಗಿರುವ ಮಹಾಪ್ರಭುಗಳವರಿಗೆ ಇತ್ತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯವಿಜಯಕೀರ್ತಿವಂಶಾಭಿವೃದ್ಧ್ಯಾದಿಗಳನ್ನು ಸುರಿಮಳೆಗೈಯುವಂತೆಯೂ,ಅನುಗ್ರಹಿಸಬೇಕೆಂದು ಅಖಿಲಾತ್ಮನೂ ಲೋಕಶಂಕರನೂ ಆದ ಭಗವಂತನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಸಂಖ್ಯೆ ೫೬

ಶ್ರೀಶಾಂಕರಭಾಷ್ಯಸಮೇತ

# ಬೃಹದಾರಣ್ಯಕೋಪನಿಷತ್ತು

## ಒಂದನೆಯ ಭಾಗ

(ಮಧುಕಾಂಡವನ್ನೊಳಗೊಂಡ ಮೊದಲನೆಯ ಎರಡು ಅಧ್ಯಾಯಗಳು)

ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ-
ಮುಂತಾದವುಗಳೊಡನೆ

ಬರೆದವರು :
ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೧೦

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೫೭

# ಮೊದಲ ಮಾತು

ಬೃಹದಾರಣ್ಯಕೋಪನಿಷತ್ತಿನ ಪೂರ್ಣವಾದ ಅನುವಾದವನ್ನು ಕನ್ನಡದಲ್ಲಿ ಮಾಡುವ ಪ್ರಯತ್ನವು ಇದು ಮೊಟ್ಟಮೊದಲನೆಯದು. ಈ ಉಪನಿಷತ್ತಿನ ಯಾಜ್ಞವಲ್ಕೀಯಕಾಂಡದ ಒಂದು ಬ್ರಾಹ್ಮಣವನ್ನು ಮಾತ್ರ ಅನೇಕ ವರ್ಷಗಳ ಹಿಂದೆ ಕನ್ನಡಕ್ಕೆ ಪರಿವರ್ತಿಸಿ ಅಚ್ಚಿಗೆ ಸಿದ್ಧವಾಗಿರುವ ಭಾಗವೆಂದು ಕಾರ್ಯಾಲಯದ ಪ್ರಕಟನೆಗಳ ಮೂಲಕ ಮಹಾಜನರಲ್ಲಿ ವಿಜ್ಞಾಪಿಸಿಕೊಳ್ಳಲಾಗಿತ್ತಾದರೂ ಅದು ಅಚ್ಚಾಗಲೇ ಇಲ್ಲ. ಉಪನಿಷತ್ತನ್ನು ಇಷ್ಟು ಸರ್ವಾಂಗಸುಂದರವಾಗಿ ಬೆಳಕಿಗೆ ಹಿಡಿಯುವ ಸುಯೋಗವು ಬರುವದೆಂಬ ಯೋಚನೆಯಂತೂ ನನಗೆ ಒಂದಿಷ್ಟೂ ಹೊಳೆದಿರಲಿಲ್ಲ. ನಮ್ಮನ್ನಾಳುವ ಮಹಾಪ್ರಭುಗಳವರ ಕೃಪಾಬಲದಿಂದ ಪೂರ್ಣಗ್ರಂಥವು ಈಗಲೇ ಹೊರಕ್ಕೆ ಬರುವಂತಾಗಿರುವದು ಉಪನಿಷಚ್ಚಿಂತಕರಿಗೆ ಒಂದು ಮಹಾಯೋಗವೆಂದು ನಾನು ಎಣಿಸುತ್ತೇನೆ. ನಾನು ಅನುವಾದಕ್ಕೆ ಕೈಹಾಕಿ ಅರೆಬರೆಕೆಯಾಗಿ ಹಿಂದೆ ಮಾಡಬಹುದಾಗಿದ್ದ ಕೆಲಸಕ್ಕಿಂತ ಇದು ಬಹುಪ್ರಕಾರಗಳಿಂದ ಹೆಚ್ಚು ಚಿತ್ತಸಮರ್ಪಕವಾಗುವದಕ್ಕೆ ಅವಕಾಶವಾಗಿರುತ್ತದೆ.

ಗ್ರಂಥವು ಬಹಳ ವಿಸ್ತರವಾಗಿರುವದರಿಂದ ಪಾಠಕರ ಸೌಕರ್ಯಕ್ಕಾಗಿ ಅಚ್ಚಿನ ಮೊಳೆಗಳನ್ನು ಉಪಯೋಗಿಸುವ ರೀತಿಯಲ್ಲಿ ಇಲ್ಲಿ ಕೆಲವು ಬದಲಾವಣೆಗಳನ್ನು ಮಾಡಿರುತ್ತದೆ. ಗ್ರಂಥದ ಸಾರವನ್ನು ಪುಸ್ತಕದ ಕೊನೆಗೆ ಸಾಗಿಸಿಡುವದರ ಬದಲು ಆಯಾ ಬ್ರಾಹ್ಮಣಗಳ ಕೊನೆಯಲ್ಲಿಯೇ ಕೊಡಲಾಗಿದೆ. ಗ್ರಂಥದ ಒಳಗೆ ಕಾಣುವ ತಲೆಬರಹಗಳಲ್ಲಿ ಬ್ರಾಹ್ಮಣದ ಮತ್ತು ಕಂಡಿಕೆಯ ವಿಷಯವನ್ನು ತಿಳಿಸುವದಕ್ಕೂ ಭಾಷ್ಯದ ಚರ್ಚೆಯ ವಿಷಯಗಳನ್ನೂ ವಿಭಾಗಗಳನ್ನೂ ತಿಳಿಸುವದಕ್ಕೂ ಬೇರೆಬೇರೆಯ ಆಕಾರದ ಅಕ್ಷರಗಳನ್ನು ಉಪಯೋಗಿಸಿರುವದಲ್ಲದೆ ಚರ್ಚಾಭಾಗಗಳ ವಿಷಯಾನುಕ್ರಮಣಿಕೆಯನ್ನು ಬೇರೆಯಾಗಿಯೇ ಕೊಟ್ಟಿರುತ್ತದೆ. ಸಂಪುಟಗಳ ಭಾಷ್ಯಭಾಗಗಳ ಸಂಖ್ಯೆಯನ್ನೂ ಪುಟಸಂಖ್ಯೆಯನ್ನೂ ಬೇರೆಬೇರೆಯ ಅನುಕ್ರಮದಿಂದಲೇ ಕೊಟ್ಟು ಆಯಾ ಸಂಪುಟಕ್ಕೆ ಕಂಡಿಕೆಗಳ ಅನುಕ್ರಮಣಿಕೆಯನ್ನೂ ಶಬ್ದಾನುಕ್ರಮಣಿಕೆಯನ್ನೂ ಬೇರೆಬೇರೆಯಾಗಿಯೇ ಕೊಟ್ಟಿರುತ್ತದೆ.

ಭಾಷ್ಯವನ್ನು ಅನುವಾದಮಾಡುವದಕ್ಕೆ ಸಹಾಯವಾಗಿ ಉಪಯೋಗಿಸಿರುವ ಗ್ರಂಥಗಳಲ್ಲಿ ಆನಂದಗಿರೀಯ ಟೀಕೆ, ಸುರೇಶ್ವರವಾರ್ತಿಕ– ಇವುಗಳೇ ಅಲ್ಲದೆ ಆಲ್ಮೋರದ ಅದ್ವೈತಾಶ್ರಮದವರು ಪ್ರಕಟಿಸಿರುವ ಸ್ವಾಮಿ ಮಾಧವಾನಂದರ ಅನುವಾದವೂ ಸೇರಿರುತ್ತದೆ. ಆದರೆ ಈ ಯಾವದೊಂದು ಸಾಮಗ್ರಿಯನ್ನೂ

ಎಲ್ಲಾ ವಿಧದಿಂದಲೂ ಪ್ರಮಾಣವೆಂದು ನಾನು ಹಿಡಿದಿರುವದಿಲ್ಲ. ವಿಷಯವನ್ನು ವಿಂಗಡಿಸಿ ತಲೆಬರಹಗಳನ್ನು ಬರೆಯುವದು, ಭಾಷ್ಯವನ್ನು ಪ್ರಘಟ್ಟವಾಗಿ ಒಡೆದುಕೊಳ್ಳುವದು, ಆಯಾ ಬ್ರಾಹ್ಮಣಗಳ ಸಾರವನ್ನು ಗೊತ್ತುಪಡಿಸುವದು, ಟಿಪ್ಪಣಿಗಳನ್ನು ಏರ್ಪಡಿಸುವದು – ಮುಂತಾದವುಗಳಲ್ಲಿ ಪೂರ್ತಿಯಾಗಿ ನನ್ನ ಹೊಣೆಗಾರಿಕೆಯೇ ಇರುತ್ತದೆ.

ಆನಂದಾಶ್ರಮಮುದ್ರಿತಪಾಠವನ್ನೇ ಮುಖ್ಯವಾಗಿ ಅವಲಂಬಿಸಿ ಅನುವಾದವನ್ನು ಮಾಡಿರುತ್ತೇನಾದರೂ ಹಿತಚಿಂತಕಮುದ್ರಣಾಲಯದಲ್ಲಿ ಅಚ್ಚಾಗಿರುವ ದಶೋಪನಿಷತ್ತುಗಳ ಪಾಠ, ಶ್ರೀರಂಗದ ವಾಣೀವಿಲಾಸ ಮುದ್ರಣಾಲಯದ ಉಪನಿಷತ್ತಿನ ಪಾಠ– ಇವುಗಳನ್ನೂ ಹೋಲಿಸಿ ನೋಡಿರುತ್ತೇನೆ. ಈ ಪಾಠಗಳನ್ನು ನಿರ್ಧರಿಸುವದರಲ್ಲಿ ಕಾರ್ಯಾಲಯದ ಅಧ್ಯಾತ್ಮವಿದ್ಯಾಲಯದಲ್ಲಿ ಹಿಂದಕ್ಕೆ ಸಹಾಯೋಪಾಧ್ಯಾಯರಾಗಿದ್ದು, ಈಗ ಶೃಂಗೇರಿಯ ಸಂಸ್ಥಾನದ ಆಸ್ಥಾನವಿದ್ವಾಂಸರಾಗಿರುವ **ಸಾಹಿತ್ಯವೇದಾಂತವಿದ್ವಾನ್ ಬ್ರ॥ ಶ್ರೀ॥ ಕೊಡೂರು ಕೃಷ್ಣಜೋಯಿಸರು** ಸ್ವಲ್ಪಮಟ್ಟಿಗೆ ಸಹಾಯಮಾಡಿರುತ್ತಾರೆ. ಕೈಬರಹದ ಪ್ರತಿಯ ಅವಲೋಕನವೇ ಮುಂತಾದ ಕಾರ್ಯದಲ್ಲಿ ಹೊಳೆನರಸೀಪುರದಲ್ಲಿರುವ ಶ್ರೀಯುತ ಪ್ಲೀಡರ್ ಪಿ. ಎನ್. ನರಸಿಂಹಯ್ಯನವರು ಎಂದಿನಂತೆ ಸಹಾಯಮಾಡಿರುತ್ತಾರೆ. ಅನುವಾದವನ್ನು ಪುನರವಲೋಕನ ಮಾಡುವದು, ಪ್ರೂಫುಗಳನ್ನು ತಿದ್ದುವದು, ಕಾಣ್ವಮಾಧ್ಯಂದಿನಪಾಠಭೇದಗಳನ್ನು ಗೊತ್ತುಪಡಿಸುವದು– ಈ ಭಾಗಗಳಲ್ಲಿ ವೇದಾಂತಶಿರೋಮಣೀತ್ಯಾದಿ ಬಿರುದಾಂಕಿತರಾದ **ಆಸ್ಥಾನವಿದ್ವಾನ್ ವೇ॥ ಬ್ರ॥ ಶ್ರೀ॥ ಎಸ್. ವಿಠ್ಠಲ ಶಾಸ್ತ್ರಿಗಳವರಿಂದಲೂ** ಮತ್ತು ಅಧ್ಯಾತ್ಮವಿದ್ಯಾಲಯದ ಪಂಡಿತರಾಗಿರುವ ಅಧ್ಯಾತ್ಮವಿದ್ಯಾಪ್ರವೀಣ ಬ್ರ॥ಶ್ರೀ॥ **ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ ಶಾಸ್ತ್ರಿಗಳವರಿಂದಲೂ** ಸಹಾಯವಾಗಿರುತ್ತದೆ. ಈ ಮಹಾಶಯರುಗಳಿಗೆಲ್ಲ ನಾನು ನಾರಾಯಣಸ್ಮರಣವನ್ನು ಈ ಮೂಲಕ ತಿಳಿಸುತ್ತೇನೆ.

ಮೊದಲನೆಯ ಸಲಕ್ಕೆ ಕನ್ನಡಕ್ಕೆ ಇಳಿದಿರುವ ಈ ಭಾಷ್ಯಾನುವಾದದಲ್ಲಿ ಕಾಣಬಹುದಾದ ಕುಂದುಕೊರತೆಗಳನ್ನು ಗುಣದೋಷಜ್ಞರಾದ ವಿದ್ವಾಂಸರು ದಯವಿಟ್ಟು ತಿಳಿಸಬೇಕಾಗಿ ಪ್ರಾರ್ಥಿಸಿದೆ. ಆದರಿಂದ ಮುಂದಿನ ಸಂಸ್ಕರಣದಲ್ಲಿ ಗ್ರಂಥವನ್ನು ಇನ್ನೂ ಉತ್ತಮಗೊಳಿಸುವದಕ್ಕೆ ನೆರವಾಗುವದು. ಈಗಿನ ರೂಪದಲ್ಲಿ ಭಾಷ್ಯಾನುವಾದವನ್ನು ಮಾಡಲು ನನ್ನನ್ನು ನಿಮಿತ್ತವಾಗಿ ಮಾಡಿಕೊಂಡಿರುವ ಆಚಾರ್ಯರಿಗೆ ನನ್ನ ಪ್ರಣಾಮಗಳು.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ನಂದನ ಜ್ಯೇಷ್ಠ ಶುದ್ಧ ೫

ಅನುವಾದಕ

# ಪೀಠಿಕೆ



## ಶುಕ್ಲಯಜುರ್ವೇದ

ಬೃಹದಾರಣ್ಯಕೋಪನಿಷತ್ತು ಶುಕ್ಲಯಜುರ್ವೇದಕ್ಕೆ ಸೇರಿದ್ದು. ಯಜುರ್ವೇದವು ಶುಕ್ಲ, ಕೃಷ್ಣ– ಎಂದು ಎರಡು ವಿಧವಾಗಿರುತ್ತದೆ. ಸೂರ್ಯನಿಂದ ಬಂದ ವೇದವು ಶುಕ್ಲಯಜುರ್ವೇದವೆಂದೂ ತಿತ್ತಿರಿಪಕ್ಷಿಯಿಂದ ಭಕ್ಷಿತವಾಗಿ ವಾಂತೋಚ್ಛಿಷ್ಟವಾದದ್ದರಿಂದ ಯಾತಯಾಮವೆನಿಸಿದ ವೇದವು ಕೃಷ್ಣಯಜುರ್ವೇದವೆಂದೂ ಕೆಲವರು ಪೌರಾಣಿಕಾಖ್ಯಾನವನ್ನವಲಂಬಿಸಿ ಹೇಳುತ್ತಿದ್ದಾರೆ. ಶುಕ್ಲಯಜುರ್ವೇದವು ಆದಿತ್ಯನಿಂದ ಯಾಜ್ಞವಲ್ಕ್ಯನಿಗೆ ದೊರೆತದ್ದೆಂಬುದಕ್ಕೆ ಉಪನಿಷತ್ತಿನಲ್ಲಿ (೬–೫–೪)[1] ಆಧಾರವೂ ಇದೆ. ಮಂತ್ರಬ್ರಾಹ್ಮಣಗಳು ಮಿಶ್ರವಾಗಿರುವದರಿಂದ ಕೃಷ್ಣಯಜುರ್ವೇದವೆಂದೂ ಅವು ವಿಂಗಡವಾಗಿರುವದರಿಂದ ಶುಕ್ಲಯಜುರ್ವೇದವೆಂದೂ ಮತ್ತೆ ಕೆಲವರು ವಿವೇಚಿಸಿರುತ್ತಾರೆ. ಶ್ರೀಶಂಕರಾಚಾರ್ಯರವರ ಭಾಷ್ಯದಲ್ಲಿ ಈ ಎರಡನೆಯ ಪಕ್ಷವನ್ನೇ (೬–೫–೪) ಅಂಗೀಕರಿಸಿದೆ.

ಶುಕ್ಲಯಜುರ್ವೇದವು ಕಾಣ್ವ, ಮಾಧ್ಯಂದಿನ– ಎಂಬ ಎರಡು ಮುಖ್ಯ ಶಾಖೆಗಳಾಗಿ ಒಡೆದುಕೊಂಡಿರುತ್ತದೆ. ಕಣ್ವರೆಂಬ ಋಷಿಗಳಿಂದ ಪ್ರವರ್ತಿತವಾಗಿರುವ ಶಾಖೆಯು ಕಾಣ್ವವು ; ಮಧ್ಯಂದಿನರೆಂಬ ಋಷಿಗಳಿಂದ ಪ್ರವರ್ತಿತವಾಗಿರುವದು ಮಾಧ್ಯಂದಿನವು. ನಮ್ಮ ದೇಶದಲ್ಲಿ ಕಾಣ್ವರೇ ಬಹಳವಾಗಿರುತ್ತಾರೆ; ಉತ್ತರದೇಶದಲ್ಲಿ ಮಾಧ್ಯಂದಿನರು ಹೆಚ್ಚಾಗಿರುತ್ತಾರೆ. ಈ ಎರಡು ಶಾಖೆಗಳಿಗೂ ಯಕಾರಕ್ಕೆ ಜಕಾರವನ್ನೂ ಷಕಾರಕ್ಕೆ ಖಕಾರವನ್ನೂ ಉಚ್ಚರಿಸಿ ಅಧ್ಯಯನ ಮಾಡುವದೇ ಮುಂತಾದ ಅಧ್ಯಯನಕ್ರಮದ ಭೇದವು ಕಂಡುಬರುತ್ತದೆ.

## ಶುಕ್ಲಯಜುರ್ವೇದದ ಬ್ರಾಹ್ಮಣ

ಶುಕ್ಲಯಜುರ್ವೇದದಲ್ಲಿ ಸಂಹಿತೆ, ಬ್ರಾಹ್ಮಣ– ಎಂಬ ಅಸಂಕೀರ್ಣವಾದ ಎರಡು ವಿಭಾಗಗಳಿವೆ ಎಂದು ಮೇಲೆ ಹೇಳಿದೆಯಷ್ಟೆ. ಕಾಣ್ವ, ಮಾಧ್ಯಂದಿನ –ಎಂಬ ಎರಡು ಶಾಖೆಗಳಿಗೂ ಇರುವ ಬ್ರಾಹ್ಮಣವನ್ನು **'ಶತಪಥಬ್ರಾಹ್ಮಣ'**ವೆಂದೇ ಕರೆಯುತ್ತಾರೆ. ಮಾಧ್ಯಂದಿನಶತಪಥಬ್ರಾಹ್ಮಣವನ್ನು ಪ್ರೊಫೆಸರ್ ವೀಬರ್ ಎಂಬಾತನು ಯೂರೋಪಿನಲ್ಲಿ ಬೆಳಕಿಗೆ ಹಿಡಿದನು ; ಪ್ರೊಫೆಸರ್

---

1. ಪೀಠಿಕೆಯಲ್ಲಿ ಸಂಕೇತಾಕ್ಷರವಿಲ್ಲದೆ ಕೊಟ್ಟಿರುವ ಮೂರು ಸಂಖ್ಯೆಗಳು ಈ ಉಪನಿಷತ್ತಿನ ಅಧ್ಯಾಯ, ಬ್ರಾಹ್ಮಣ, ಮತ್ತು ಕಂಡಿಕೆಯನ್ನು ಸೂಚಿಸುವವು ; ಭಾ.ಭಾ. ಎಂದರೆ ಈ ಉಪನಿಷತ್ತಿನ ಭಾಷ್ಯಭಾಗಗಳು. ಸಂಕೇತಾಕ್ಷರವನ್ನು ಕೊಟ್ಟಿರುವ ಸಂಖ್ಯೆಗಳು ಆಯಾ ಉಪನಿಷತ್ತು, ಸೂತ್ರ, ಅಥವಾ ಗೀತೆ –ಇವಕ್ಕೆ ಸಂಬಂಧಿಸಿರುತ್ತವೆ.

ಎಗ್ಲಿಂಗ್ ಎಂಬಾತನು ಇಂಗ್ಲಿಷಿನಲ್ಲಿ ಅನುವಾದನಮಾಡಿದನು. ಈ ಎರಡು ಪ್ರಕಟನೆಗಳೂ ಈಗ ಸಾಮಾನ್ಯವಾಗಿ ಸಿಕ್ಕುವಂತಿಲ್ಲ. ಈಚೆಗೆ ನಮ್ಮ ದೇಶ ದಲ್ಲಿ ಕಾಣ್ವಬ್ರಾಹ್ಮಣದ ಕೆಲವು ಭಾಗಗಳು (೨-೨-೪-೧೭ರವರೆಗೆ) ಡಾಕ್ಟರ್ ವಿಲಿಯಮ್ ಕ್ಯಾಲಂಡ್ ಎಂಬಾತನಿಂದ ಶೋಧಿತವಾಗಿ ಅಚ್ಚಾಗಿವೆ; ಮಾಧ್ಯಂ ದಿನಬ್ರಾಹ್ಮಣದ ನಾಲ್ಕು ಕಾಂಡಗಳು ವೇದಾಂತವಿಶಾರದ, ಮೀಮಾಂಸಾ ಕೇಸರಿ, ಪಂಡಿತ ಚಿನ್ನಸ್ವಾಮಿಶಾಸ್ತ್ರಿಗಳವರಿಂದ ಶೋಧಿತವಾಗಿ ಅಚ್ಚಾಗಿವೆ. ಆದರೆ ಶತಪಥಬ್ರಾಹ್ಮಣವನ್ನು ಪೂರ್ಣರೂಪದಿಂದ ಪಡೆಯುವದು, ಬೃಹದಾರಣ್ಯ ಕೋಪನಿಷತ್ತಿನ ಒಂದನೆಯ ಭಾಗವು ಸ್ವಲ್ಪ ಹೆಚ್ಚುಕಡಿಮೆ ಪೂರ್ತಿಯಾಗಿ ಅಚ್ಚಾಗುವವರೆಗೂ, ನಮಗೆ ಸಾಧ್ಯವಾಗಲಿಲ್ಲ. ನಮ್ಮ ದೇಶದಲ್ಲಿ ಈ ಬ್ರಾಹ್ಮಣ ವನ್ನು ಪೂರ್ಣವಾಗಿ ಅಧ್ಯಯನಮಾಡಿರುವವರೂ ಬಹುವಿರಳ. ಆದ್ದರಿಂದ ಶತ ಪಥಬ್ರಾಹ್ಮಣದ ಪರಾಮರ್ಶಿಕೆಗಳ ಸಂಖ್ಯೆಗಳನ್ನು ಮತ್ತೊಬ್ಬರನ್ನವ ಲಂಬಿಸಿಯೇ ನಾವೂ ಕೊಡಬೇಕಾಗಿಬಂತು. ಈಗ ನಮ್ಮ ಸುದೈವದಿಂದ ಬೊಂಬಾಯಿಯಲ್ಲಿರುವ ಲಕ್ಷ್ಮೀವೇಂಕಟೇಶ್ವರ ಸ್ಟೀಮ್ ಪ್ರೆಸ್ಸಿನಲ್ಲಿ ಸಭಾಷ್ಯ ವಾಗಿ ಪೂರ್ಣವಾಗಿ ಪ್ರಕಟಿತವಾಗಿರುವ ಮಾಧ್ಯಂದಿನಶತಪಥಬ್ರಾಹ್ಮಣವು ದೊರೆತಿರುತ್ತದೆ. ಆದ್ದರಿಂದ ಈ ಬ್ರಾಹ್ಮಣದ ಪರಾಮರ್ಶಿಕೆಗಳನ್ನು ಸಾಧ್ಯ ವಾದಮಟ್ಟಿಗೂ ಪರಿಶೋಧಿಸಿರುತ್ತೇವೆ.

ಮಾಧ್ಯಂದಿನಶತಪಥಬ್ರಾಹ್ಮಣದ ಭೂಮಿಕೆಯನ್ನೂ ಕ್ಯಾಲೆಂಡ್ ಮಹಾ ಶಯನ ಕಾಣ್ವಪ್ರಕಟನೆಯ ಭೂಮಿಕೆಯನ್ನೂ ಆಲೋಕಿಸಿದ್ದರಿಂದ ತಿಳಿಯ ಬರುವದೇನೆಂದರೆ, ಕಾಣ್ವಬ್ರಾಹ್ಮಣದಲ್ಲಿ ೧೦೪ ಅಧ್ಯಾಯಗಳಿವೆ, ಮಾಧ್ಯಂದಿನ ಬ್ರಾಹ್ಮಣದಲ್ಲಿ ೧೦೦ ಅಧ್ಯಾಯಗಳು ಸರಿಯಾಗಿವೆ. ಕಾಣ್ವಬ್ರಾಹ್ಮಣದಲ್ಲಿ ೧೭ ಕಾಂಡಗಳಿವೆ; ಮಾಧ್ಯಂದಿನಬ್ರಾಹ್ಮಣದಲ್ಲಿ ೧೪ ಕಾಂಡಗಳಿವೆ. ಕಾಣ್ವದ ಮೊದಲನೆಯ ಏಳು ಕಾಂಡಗಳಲ್ಲಿರುವ ವಿಷಯಗಳು ಮಾಧ್ಯಂದಿನದ ಮೊದಲ ನೆಯ ಐದು ಕಾಂಡಗಳಲ್ಲಿ ಅಡಕವಾಗಿರುತ್ತವೆ. ಈ ಗ್ರಂಥಭಾಗವು ಕಾಣ್ವ ಮಾಧ್ಯಂದಿನಗಳಲ್ಲಿ ಭಿನ್ನಭಿನ್ನವಾಗಿದೆ ಎಂದೂ ಮಾಧ್ಯಂದಿನದ ಮುಂದಿನ ೯ ಕಾಂಡಗಳು ಬಲುಮಟ್ಟಿಗೆ ಕಾಣ್ವಕ್ಕೆ ಸಮಾನವಾಗಿರುತ್ತವೆ ಎಂದೂ ಕ್ಯಾಲೆಂಡ್ ಮಹಾಶಯನು ಹೇಳುತ್ತಾನೆ. ಅಗ್ನಿರಹಸ್ಯಕಾಂಡದ ಅನುಕ್ರಮಸ್ಥಾನವು ಮಾತ್ರ ಈ ಎರಡು ಬ್ರಾಹ್ಮಣಗಳಲ್ಲಿ ಭಿನ್ನಭಿನ್ನವಾಗಿರುತ್ತವೆಯಂತೆ. ಕಾಣ್ವ ಶತಪಥಬ್ರಾಹ್ಮಣವು ನಮಗೆ ಇನ್ನೂ ದೊರೆತಿಲ್ಲವಾದ್ದರಿಂದ[1] ಬೃಹದಾರಣ್ಯಕದಲ್ಲಿ

---

1. ತೆಲುಗುಲಿಪಿಯಲ್ಲಿ ಕಾಣ್ವಬ್ರಾಹ್ಮಣವು ಪೂರ್ಣವಾಗಿ ಅಚ್ಚಾಗಿರುವದಾಗಿ ಈಗ ತಾನೆ ಒಬ್ಬ ಮಿತ್ರರಿಂದ ತಿಳಿಯಬಂದಿದೆ. ಅದು ನಮಗೆ ಸಿಕ್ಕಿದರೆ ಎರಡನೆಯ ಸಂಪುಟ ದಲ್ಲಿ ಈ ವಿಷಯವನ್ನು ಮತ್ತೆ ಪ್ರಸ್ತಾಪಿಸುವೆವು.

ಪರಾಮೃಷ್ಟವಾದ ಕೆಲವು ವಚನಗಳು ಕಾಣ್ವಪಾಠದವೊ, ಅಲ್ಲವೊ?– ಎಂಬ ದನ್ನು ನಿಶ್ಚಯಿಸುವದು ಕಷ್ಟವಾಗಿದೆ. ಇಲ್ಲಿ ನಾವು ಮಾಧ್ಯಂದಿನಪಾಠದ ಸಂಖ್ಯೆಯನ್ನೇ ಕೊಟ್ಟು ಭಾಷ್ಯದ ಉದಾಹರಣೆಯಲ್ಲಿರಬಹುದಾದ ಪಾಠಭೇದ ವನ್ನು ಮಾತ್ರ ಸೂಚಿಸಿರುತ್ತೇವೆ. ಪ್ರಕೃತಭಾಷ್ಯವು ಉಪನಿಷತ್ತಿಗೆ ಮಾತ್ರ ವಾಗಿರುವದರಿಂದ ಈ ಎರಡು ಬ್ರಾಹ್ಮಣಗಳ ವಿಶೇಷವಿಚಾರಕ್ಕೆ ನಾವು ಇಲ್ಲಿ ಕೈಹಾಕಿರುವದಿಲ್ಲ.

## ಬೃಹದಾರಣ್ಯಕೋಪನಿಷತ್ತು

ಈ ಉಪನಿಷತ್ತು ಶತಪಥಬ್ರಾಹ್ಮಣದ ಕೊನೆಯಲ್ಲಿರುವದರಿಂದ ಇದ ರಲ್ಲಿಯೂ ಕಾಣ್ವ, ಮಾಧ್ಯಂದಿನ– ಎಂಬ ಸಮಾಮ್ನಾಯಭೇದವಿರುವದು ಸ್ವಾಭಾವಿಕವಷ್ಟೆ. ಶ್ರೀಶಂಕರಾಚಾರ್ಯರವರು ಕಾಣ್ವಶಾಖೆಗೆ ಸೇರಿದ ಉಪ ನಿಷದ್ಭಾಗಕ್ಕೆ ಭಾಷ್ಯವನ್ನು ಬರೆದಿರುತ್ತಾರೆ. ಶುಕ್ಲಯಜುರ್ವೇದದ ಸಂಹಿತೆಯ ೪೦ನೆಯ ಅಧ್ಯಾಯವಾಗಿರುವ ಈಶಾವಾಸ್ಯೋಪನಿಷತ್ತು (ಸಂಹಿತೋಪನಿಷತ್ತು) ಮತ್ತು ಆರಣ್ಯಕಕ್ಕೆ ಸೇರಿದ ಬೃಹದಾರಣ್ಯಕೋಪನಿಷತ್ತು– ಈ ಎರಡಕ್ಕೂ ಕಾಣ್ವಶಾಖೆಯನ್ನನುಸರಿಸಿಯೇ ಈ ಆಚಾರ್ಯರು ಭಾಷ್ಯವನ್ನು ರಚಿಸಿರು ತ್ತಾರಾದರೂ ಸೂತ್ರಭಾಷ್ಯದಲ್ಲಿಯೂ ಮಿಕ್ಕ ಉಪನಿಷದ್ಭಾಷ್ಯಗಳಲ್ಲಿಯೂ ಪರಾ ಮರ್ಶಿಸಿರುವ ಬೃಹದಾರಣ್ಯಕವಚನಗಳಲ್ಲಿ ಬಲುಮಟ್ಟಿಗೆ ಮಾಧ್ಯಂದಿನಶಾಖೆ ಯನ್ನೇ ಅನುಸರಿಸಿರುವದು ಕಂಡುಬರುತ್ತದೆ. ಪ್ರಕೃತಭಾಷ್ಯದಲ್ಲಿಯೂ ಕೆಲವು ಕಡೆಗಳಲ್ಲಿ ಮಾತ್ರ ಮಾಧ್ಯಂದಿನಪಾಠಭೇದಗಳನ್ನು ಪರಾಮರ್ಶಿಸಿರುವದು ಕಂಡುಬರುತ್ತದೆ. ಈ ಎರಡು ಶಾಖೆಗಳ ಉಪನಿಷತ್ತಿನ ಅಧ್ಯಾಯಾದಿಸಂಖ್ಯಾನು ಕ್ರಮದಲ್ಲಿಯೂ ಹಲವು ಭೇದಗಳಿವೆ; ವಾಚಕರ ಸೌಕರ್ಯಕ್ಕಾಗಿ ಈ ಪಾಠ ಭೇದಗಳನ್ನು ಆಯಾ ಸಂಪುಟದ ಪರಿಶಿಷ್ಟದಲ್ಲಿ ನಾವು ಕೊಟ್ಟಿರುತ್ತೇವೆ; ಸಂಖ್ಯಾ ನುಕ್ರಮದ ಭೇದಗಳನ್ನು ಎರಡನೆಯ ಸಂಪುಟದ ಪರಿಶಿಷ್ಟದಲ್ಲಿ ಕೊಡಬೇಕೆಂದಿ ರುವೆವು. ಆಚಾರ್ಯರು ಕಾಣ್ವಶಾಖೆಯ ಉಪನಿಷತ್ತಿಗೆ ಭಾಷ್ಯವನ್ನು ಬರೆದು ಮಾಧ್ಯಂದಿನಪಾಠಗಳನ್ನೇ ಪ್ರಾಯಿಕವಾಗಿ ಏತಕ್ಕೆ ಪರಾಮರ್ಶಿಸಿರುವರೋ ನಿಶ್ಚಿತವಾಗಿ ಹೇಳುವದಕ್ಕೆ ಬರುವಂತಿಲ್ಲ.

ಕಾಣ್ವಪಾಠದ ಕೊನೆಯಲ್ಲಿರುವ ಪ್ರವರ್ಗ್ಯ, ಬೃಹದಾರಣ್ಯಕ– ಇವು ಗಳನ್ನು ಎರಡು ಬೇರೆಬೇರೆಯ ಕಾಂಡಗಳಾಗಿ ಪರಿಗಣಿಸಿರುವದು ಕೆಲವು ಕೈಬರಹದ ಪುಸ್ತಕಗಳಲ್ಲಿರುವದಾಗಿಯೂ ಈ ಎರಡನ್ನೂ ಒಟ್ಟುಗೂಡಿಸಿ ಆರಣ್ಯಕ ವೆಂಬ ಒಂದೇ ಕಾಂಡವಾಗಿ ಪರಿಗಣಿಸಿರುವದು ಮತ್ತೆಕೆಲವು ಕೈಬರಹದ ಪುಸ್ತಕಗಳಲ್ಲಿರುವದಾಗಿಯೂ ತಿಳಿದುಬಂದಿದೆ. ಮಾಧ್ಯಂದಿನದಲ್ಲಿ ಇವೆರಡೂ ಸೇರಿ

ಒಂದೇ ಕಾಂಡವಾಗಿರುತ್ತದೆ. ಶ್ರೀಶಂಕರಾಚಾರ್ಯರೂ ಇವೆರಡನ್ನೂ ಒಟ್ಟಿಗೂಡಿಸಿ ನಾಲ್ಕು ಅಧ್ಯಾಯಗಳ ಮಧುಕಾಂಡವೆಂಬ ಒಂದೇ ಕಾಂಡವಾಗಿ ಎಣಿಸಿರುತ್ತಾರೆಂಬುದಕ್ಕೆ ಆಧಾರವಿದೆ. ಏಕೆಂದರೆ ಉಪನಿಷತ್ತಿನ ಎರಡನೆಯ ಅಧ್ಯಾಯವನ್ನು ಅವರು ನಾಲ್ಕನೆಯ ಅಧ್ಯಾಯವೆಂದೇ ಕರೆದಿರುತ್ತಾರೆ (ಭಾ. ಭಾ. ೨೫೫); ಮಧುಕಾಂಡದಲ್ಲಿ ನಾಲ್ಕು ಅಧ್ಯಾಯಗಳಿವೆ ಎಂದೂ ಈ ಕಾಂಡದ ಸಮಾಪ್ತಿಯಲ್ಲಿ (ಭಾ. ಭಾ. ೯೧೯) ಬರೆದಿರುತ್ತಾರೆ. ಶತಪಥಬ್ರಾಹ್ಮಣವನ್ನು ಭಾಗಭಾಗವಾಗಿ ವಿಂಗಡಿಸಿಕೊಂಡು ಉಪನಿಷತ್ತನ್ನೇ ಬೇರೆಯಾಗಿ ಅಧ್ಯಯನ ಮಾಡುವ ಪದ್ಧತಿಯು ಬಹುಪ್ರಾಚೀನಕಾಲದಿಂದಲೂ ಇತ್ತೆಂಬುದಕ್ಕೆ ಕಾತ್ಯಾಯನಸೂತ್ರವಲ್ಲದೆ ಮಹಾಭಾರತದ ಒಂದು ಶ್ಲೋಕವೂ ಸಾಕ್ಷಿಯಾಗಿರುತ್ತದೆ: "ತತಃ ಷಷ್ಟಿಪಥಂ ಕೃತ್ಸ್ನಂ ಸರಹಸ್ಯಂ ಸಸಂಗ್ರಹಮ್। ಚಕ್ರೇ ಸಪರಿಶೇಷಂ ಚ ಸೋತ್ತರಂ ಚ ಪ್ರಹರ್ಷತಃ॥" (ಮೋ. ಧ. ೪೩-೧೬). ಈ ಶ್ಲೋಕದಲ್ಲಿ ಬ್ರಾಹ್ಮಣದ ಮೊದಲನೆಯ ಒಂಬತ್ತು ಕಾಂಡಗಳನ್ನು 'ಷಷ್ಟಿಪಥ'ವೆಂದೂ ಹತ್ತನೆಯ ಕಾಂಡವಾದ ಅಗ್ನಿರಹಸ್ಯವನ್ನು 'ರಹಸ್ಯ'ವೆಂದೂ ಅವರೆಗೆ ಹೇಳದಿರುವ ಕರ್ಮಗಳನ್ನು ಸಂಗ್ರಹಿಸಿ ಹೇಳುವ ಹನ್ನೊಂದನೆಯ ಕಾಂಡವನ್ನು 'ಸಂಗ್ರಹ'ವೆಂದೂ ಪ್ರವರ್ಗ್ಯದವರೆಗಿನ ಉಳಿದ ಗ್ರಂಥವನ್ನು 'ಪರಿಶೇಷ'ವೆಂದೂ ಉಪನಿಷತ್ತನ್ನು 'ಉತ್ತರ'ವೆಂದೂ ಪರಾಮರ್ಶಿಸಿದೆ ಎಂದು ಮಾಧ್ಯಂದಿನಶತಪಥಬ್ರಾಹ್ಮಣದ ಭೂಮಿಕೆಯಲ್ಲಿ ಬರೆದಿದೆ. ಇದರ ನಿಜವನ್ನು ಪುರಾತತ್ತ್ವಶೋಧಕರು ನಿಶ್ಚಯಿಸಬೇಕಾಗಿದೆ.

ಈ ಉಪನಿಷತ್ತು ಶತಪಥಬ್ರಾಹ್ಮಣಕ್ಕೆ ಸೇರಿದ್ದಾದ್ದರಿಂದ ಇದರಲ್ಲಿಯೂ ಉದಾತ್ತ, ಅನುದಾತ್ತ- ಎಂಬ ಎರಡೇ ಸ್ವರಗಳಿರುವವೆಂದು ಏರ್ಪಡುತ್ತದೆ. (ಪ್ರತಿಜ್ಞಾಸೂತ್ರ ೧೪, ಭಾಷಿಕಸೂ.೨-ಇವನ್ನು ನೋಡಿ). ಈ ಉಪನಿಷತ್ತನ್ನು ಸ್ವರಯುಕ್ತವಾಗಿ ಅಧ್ಯಯನಮಾಡಿರುವವರು ನಮ್ಮ ದೇಶವಲ್ಲಿ ಕಡಿಮೆಯಾದರೂ ಉತ್ತರದಲ್ಲಿ ಈಗಲೂ ಸಿಕ್ಕುತ್ತಾರೆ. ಸೂತ್ರಭಾಷ್ಯದಲ್ಲಿ (ಸೂ. ಭಾ. ೧-೪-೧೧, ಭಾ. ಭಾ. ೩೫೫) 'ಯಸ್ಮಿನ್ ಪಞ್ಚ ಪಞ್ಚಜನಾಃ' ಎಂಬ ಮಂತ್ರದ ಅರ್ಥವನ್ನು ವಿಚಾರಮಾಡುವಾಗಲೂ ಈ ಉಪನಿಷತ್ತಿನ ಭಾಷ್ಯದಲ್ಲಿ (೧-೩-೨೮, ಭಾ.ಭಾ. ೯೩) ಅಭ್ಯಾರೋಹಜಪದ ಮಂತ್ರಗಳ ಅರ್ಥವನ್ನು ವಿಚಾರಮಾಡುವಾಗಲೂ, ಸ್ವರದ ವಿಚಾರವನ್ನು ಪ್ರಸ್ತಾಪಿಸಿರುತ್ತದೆ. ಆದ್ದರಿಂದ ಬಲ್ಲವರಿಂದ ಸ್ವರವನ್ನು ತಿಳಿದುಕೊಳ್ಳುವದು ಈ ಭಾಷ್ಯಗಳ ಪೂರ್ಣಾಭಿಪ್ರಾಯವನ್ನು ತಿಳಿದುಕೊಳ್ಳುವದಕ್ಕೆ ಸಹಾಯಕವಾಗಿರುವದು.

ಬೃಹದಾರಣ್ಯಕಭಾಷ್ಯವು ಉಪನಿಷದ್ಭಾಷ್ಯಗಳೆಲ್ಲೆಲ್ಲ ಗ್ರಂಥಪರಿಮಾಣದಿಂದ ದೊಡ್ಡದು. ಮಿಕ್ಕ ಉಪನಿಷತ್ತುಗಳ ಭಾಷ್ಯಗಳಲ್ಲಿ ಸಂಕ್ಷೇಪವಾಗಿ ಹೇಳಿರುವ

ಎಷ್ಟೋ ವಿಷಯಗಳನ್ನು ಇಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿರುತ್ತದೆ. ಆಚಾರ್ಯರಿಗೆ ಸಮ್ಮತವಾದ ಅದ್ವೈತವೇದಾಂತದ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ನಿಸ್ಸಂದಿಗ್ಧವಾಗಿ ತಿಳಿದುಕೊಳ್ಳುವದಕ್ಕೆ ಸೂತ್ರಭಾಷ್ಯದಷ್ಟೇ ಈ ಉಪನಿಷತ್ತಿನ ಭಾಷ್ಯವೂ ಅಮೂಲ್ಯಸಾಧನವಾಗಿರುತ್ತದೆ ಎಂದರೂ ಹೆಚ್ಚಾಗುವದಿಲ್ಲ. ಈ ಎರಡು ಭಾಷ್ಯಗಳೂ ಬೇರೆಬೇರೆಯ ದೃಷ್ಟಿಕೋಣಗಳಿಂದ ಬರೆದವುಗಳಾಗಿರುತ್ತವೆ; ಸೂತ್ರಭಾಷ್ಯವು ನ್ಯಾಯಪ್ರಧಾನವಾಗಿದೆ; ಇಲ್ಲಿ ಉಪನಿಷತ್ತಿನ ಗ್ರಂಥಾನುಕ್ರಮದಲ್ಲಿಯೇ ವಿಮರ್ಶೆಯಿದೆ. ಇವೆರಡರಲ್ಲಿ ಒಂದರಲ್ಲಿ ಸಂಗ್ರಹವಾಗಿ ಉಕ್ತವಾಗಿರುವ ವಿಷಯಗಳು ಮತ್ತೊಂದರಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿರುವದರಿಂದ ಇವು ಒಂದಕ್ಕೊಂದು ಪರಿಶಿಷ್ಟದಂತಿವೆ ಎಂದು ಹೇಳಬಹುದು. ಈ ಉಪನಿಷತ್ತಿನ ಭಾಷ್ಯಕ್ಕೆ ಆಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀಸುರೇಶ್ವರಾಚಾರ್ಯರವರ ವಾರ್ತಿಕವಿರುವದೊಂದು ವಿಶೇಷೋಪಕಾರಕವಾಗಿರುತ್ತದೆ. ಶ್ರೀಗೌಡಪಾದರವರ ಮಾಂಡೂಕ್ಯಕಾರಿಕೆ, ಆಚಾರ್ಯರ ಭಾಷ್ಯ, ಮತ್ತು ಸುರೇಶ್ವರರ ವಾರ್ತಿಕ– ಈ ಮೂರನ್ನೂ ವಿಮರ್ಶಕದೃಷ್ಟಿಯಿಂದ ಅಭ್ಯಾಸಮಾಡಿದವರಿಗೆ ಅದ್ವೈತವೇದಾಂತಸಿದ್ಧಾಂತದ ಕೆಚ್ಚು ಎಂಥದ್ದು ಎಂಬುದು ಸಂಪೂರ್ಣವಾಗಿ ಮನದಟ್ಟಾಗುವದರಲ್ಲಿ ಸಂಶಯವಿಲ್ಲ.

## ಈ ಉಪನಿಷದ್ಭಾಷ್ಯವನ್ನು ಬರೆದವರು ಯಾರು?

ಈ ಉಪನಿಷತ್ತಿನ ಭಾಷ್ಯವು ಸುಪ್ರಸಿದ್ಧರಾದ ಶ್ರೀಶಂಕರಾಚಾರ್ಯರವರ ಕೃತಿ ಎಂಬುದಕ್ಕೆ ಈಗಿನ ವಿದ್ವಾಂಸರೆಲ್ಲರ ಸಮ್ಮತಿಯಿದೆ. ವಾರ್ತಿಕಕಾರರಾದ ಸುರೇಶ್ವರಾಚಾರ್ಯರವರು

ಅಶ್ಶೈಲಾದುದಯಾತ್ತಥಾಸ್ತಗಿರಿತೋ ಭಾಸದ್ಯಶೋರಶ್ಮಿಭಿ
ರ್ವ್ಯಾಪ್ತಂ ವಿಶ್ವಮನನ್ಧಕಾರಮಭವತ್ ಯಸ್ಯ ಸ್ಮ ಶಿಷ್ಯೈರಿದಮ್ ।
ಆರಾಜ್ಞಾನಗಭಸ್ತಿಭಿಃ ಪ್ರತಿಹತಶ್ಶನ್ಧ್ರಾಯತೇ ಭಾಸ್ಕರ
ಸ್ತಸ್ಮೈ ಶಂಕರಭಾನವೇ ತನುಮನೋವಾಗ್ಭಿರ್ನಮಸ್ತಾತ್ ಸದಾ ॥

ಎಂದು ಆಚಾರ್ಯರನ್ನು ಹೆಸರಿಟ್ಟು ಕರೆದಿರುತ್ತಾರೆ. ಅವರು ತಮ್ಮ ನೈಷ್ಕರ್ಮ್ಯಸಿದ್ಧಿಯ ಕೊನೆಯಲ್ಲಿ 'ಶ್ರೀಮಚ್ಛಂಕರಪಾದಪದ್ಮಯುಗಲವನ್ನು ಸಂಸೇವನೆಮಾಡಿ' ಪಡೆದುಕೊಂಡ ಜ್ಞಾನವನ್ನೇ ಆ ಗ್ರಂಥದಲ್ಲಿ ತಿಳಿಸಿರುವೆನೆಂದು ಹೇಳಿಕೊಂಡಿರುತ್ತಾರೆ. ಆದ್ದರಿಂದ ಉಪನಿಷದ್ಭಾಷ್ಯವು ಶಂಕರಾಚಾರ್ಯಕೃತವೆಂಬ ಬಗ್ಗೆ ಯಾವ ಸಂಶಯವೂ ಉಳಿಯುವಂತಿಲ್ಲ.

ಆದರೆ ಸೂತ್ರಭಾಷ್ಯಕ್ಕೂ ಈ ಭಾಷ್ಯಕ್ಕೂ ಕೆಲವು ಕಡೆಗಳಲ್ಲಿ ಮತಭೇದವು ಕಂಡುಬರುತ್ತದೆ. ಹೇಗೆಂದರೆ:

(೧) ತ ಏತೇ ವಾಙ್ಮನಃಪ್ರಾಣಾಃ ಸರ್ವ ಏವ ಸಮಾಃ ತುಲ್ಯವ್ಯಾಪ್ತಿಮನ್ತಃ । ಯಾವತ್ಪ್ರಾಣಿಗೋಚರಂ ಸಾಧ್ಯಾತ್ಮಾಧಿಭೂತಂ ವ್ಯಾಪ್ಯ ವ್ಯವಸ್ಥಿತಾಃ । ಅತ ಏವ ಅನನ್ತಾಃ ॥ ಬೃ. ಭಾ. ೧-೫-೧೩ (ಭಾ. ಭಾ. ೨೨೪).

(೨) ಸರ್ವಗತಸ್ಯ ತು ಶರೀರೇಷು ಶರೀರಪರಿಮಾಣವೃತ್ತಿಲಾಭೋ ನ ವಿರುಧ್ಯತೇ ॥ ಬೃ. ಭಾ. ೧-೩-೨೨ (ಭಾ.ಭಾ. ೮೫).

(೩) 'ತ ಏತೇ ಸರ್ವ ಏವ ಸಮಾಃ ಸರ್ವೇಽನನ್ತಾಃ' ಇತಿ ಶ್ರುತೇಃ ಸರ್ವಾತ್ಮಕಾನಿ ತಾವತ್ ಕರಣಾನಿ । ಸರ್ವಾತ್ಮಕಪ್ರಾಣಸಂಶ್ರಯಾಚ್ಚ । ತೇಷಾಮ್ ಆಧ್ಯಾತ್ಮಿಕಾಧಿಭೌತಿಕಪರಿಚ್ಛೇದಃ ಪ್ರಾಣಿಕರ್ಮಜ್ಞಾನಭಾವನಾನಿಮಿತ್ತಃ । ಅತಃ ತದ್ವಶಾತ್ ಸ್ವಭಾವತಃ ಸರ್ವಗತಾನಾಮನನ್ತಾನಾಮಪಿ ಪ್ರಾಣಾನಾಂ ಕರ್ಮಜ್ಞಾನವಾಸನಾನುರೂಪೇಣೈವ ದೇಹಾನ್ತರಾರಮ್ಭವಶಾತ್ ಪ್ರಾಣಾನಾಂ ವೃತ್ತಿಃ ಸಂಕುಚತಿ ವಿಕಸತಿ ಚ ॥ ಬೃ.ಭಾ. ೪-೪-೩.

ಪ್ರಾಣಗಳು ಸರ್ವಗತವೆಂದೂ ಆಯಾ ಪ್ರಾಣಿಗಳಲ್ಲಿ ಕರ್ಮಾನುಗುಣವಾಗಿ ಅವಕ್ಕೆ ವೃತ್ತಿಲಾಭವಾಗಿರುವದೆಂದೂ ಉಪನಿಷತ್ತಿನಲ್ಲಿ ಹೇಳಿದೆ ಎಂಬುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗಿರುತ್ತದೆ.

ಆದರೆ **ಸೂತ್ರಭಾಷ್ಯದಲ್ಲಿ** ಇದಕ್ಕೆ ವಿರುದ್ಧವಾಗಿ ಬರೆದಿರುವಂತೆ ಕಾಣಿಸುತ್ತದೆ. ಹೇಗೆಂದರೆ:

(೧) ಏವಂ ಶ್ರುತ್ಯುಕ್ತೇ ದೇಹಾನ್ತರಪ್ರತಿಪತ್ತಿಪ್ರಕಾರೇ ಸತಿ ಯಾಃ ಪುರುಷಮತಿಪ್ರಭವಾಃ ಕಲ್ಪನಾಃ ವ್ಯಾಪಿನಾಂ ಕರಣಾನಾಮ್ ಆತ್ಮನಶ್ಚ ದೇಹಾನ್ತರಪ್ರತಿಪತ್ತೌ ಕರ್ಮವಶಾತ್ ವೃತ್ತಿಲಾಭಸ್ತತ್ರ ಭವತಿ । ಕೇವಲಸ್ಯೈವಾತ್ಮನೋ ವೃತ್ತಿಲಾಭಸ್ತತ್ರ ಭವತಿ । .... । ಇತ್ಯೇವಮಾದ್ಯಾಃ ಸರ್ವ ಏವಾನಾದರ್ತವ್ಯಾಃ । ಶ್ರುತಿವಿರೋಧಾತ್ ॥ ಸೂ. ಭಾ. ೩-೧-೧ (ಭಾ. ಭಾ. ೨೧೪).

ಬೃಹದಾರಣ್ಯಕದಲ್ಲಿ ಪ್ರತಿಪಾದಿಸಿರುವ ಪ್ರಾಣವೃತ್ತಿಲಾಭಪ್ರಕ್ರಿಯೆಯನ್ನು ಇಲ್ಲಿ 'ಪುರುಷಮತಿಪ್ರಭವ' ಎಂದು ನಿಂದಿಸಿ ತಿರಸ್ಕರಿಸಿದೆ.

(೨) ಸರ್ವಗತಾನಾಮಪಿ ವೃತ್ತಿಲಾಭಃ ಶರೀರದೇಶೇ ಸ್ಯಾತ್ ಇತಿ ಚೇತ್ । ನ । ವೃತ್ತಿಮಾತ್ರಸ್ಯ ಕರಣತ್ವೋಪಪತ್ತೇಃ । ಯದೇವ ಹಿ ಉಪಲಬ್ಧಿಸಾಧನಮ್, ವೃತ್ತಿಃ, ಅನ್ಯದ್ವಾ, ತಸ್ಯೈವ ನಃ ಕರಣತ್ವಮ್ । ಸಂಜ್ಞಾಮಾತ್ರೇ ವಿವಾದಃ ಇತಿ ಕರಣಾನಾಂ ವ್ಯಾಪಿತ್ವಕಲ್ಪನಾ ನಿರರ್ಥಿಕಾ॥ ಸೂ. ಭಾ. ೨-೪-೭ (ಭಾ.ಭಾ. ೧೮೬).

ಇಲ್ಲಿಯೂ ವೃತ್ತಿಲಾಭಪಕ್ಷವನ್ನು ಖಂಡಿಸಿರುವದು ಸ್ಪಷ್ಟವಾಗಿರುತ್ತದೆ. ಸೂತ್ರಭಾಷ್ಯವೂ ಶಂಕರಾಚಾರ್ಯಕೃತವೆಂದೇ ಸುಪ್ರಸಿದ್ಧವಾಗಿರುವದರಿಂದ ಈ ಎರಡು ವಿರುದ್ಧಪಕ್ಷಗಳಿಗೆ ಏಕವಾಕ್ಯತೆ ಹೇಗೆಂಬುದನ್ನು ವಿಮರ್ಶನವಿಚಕ್ಷಣರಾದ ವಿದ್ವಾಂಸರು ನಿರ್ಣಯಿಸಿಕೊಡಬೇಕಾಗಿದೆ. ಇವೆರಡಕ್ಕೂ ವಿರೋಧ

ವೇ ಸಿದ್ಧವಾದರೆ ಸೂತ್ರಭಾಷ್ಯಕಾರರಾದ ಶಂಕರರು ಬೃಹದಾರಣ್ಯಕಭಾಷ್ಯ ಕರ್ತೃಗಳಿಗಿಂತ ಭಿನ್ನರೆಂದು ವಾದಿಸುವವರಿಗೆ ಸ್ವಲ್ಪ ಅವಕಾಶವು ಸಿಕ್ಕಿದಂತೆ ಆಗುವದು.

ಇದರ ನಿಜವು ಹೇಗೇ ಇರಲಿ, ಈ ಎರಡು ಪಕ್ಷಗಳ ವಿರೋಧದಿಂದ ವೇದಾಂತದ ಪರಮಸಿದ್ಧಾಂತಕ್ಕೆ ಯಾವ ಧಕ್ಕೆಯೂ ತಗಲುವಂತಿಲ್ಲವೆಂಬು ದನ್ನು ವಾಚಕರಲ್ಲಿ ನಾವು ಬಿನ್ನವಿಸಿಕೊಳ್ಳಲಿಚ್ಛಿಸುತ್ತೇವೆ. ಬೃಹದಾರಣ್ಯಕ ಭಾಷ್ಯದಲ್ಲಿ "ವೃತ್ತಿಲಾಭೋ ನ ವಿರುಧ್ಯತೇ" (ವೃತ್ತಿಲಾಭವು ವಿರುದ್ಧವಾಗು ವದಿಲ್ಲ, ೧-೩-೨೨, ಭಾ. ಭಾ. ೮೫) ಎಂದು ಬರೆದಿರುವದರಲ್ಲಿ ಯಾರೋ ಪೂರ್ವಪಕ್ಷಿಗಳು ಇಲ್ಲಿ ವಿರೋಧವನ್ನು ಶಂಕಿಸಿದ್ದರೆಂಬ ಸೂಚನೆಯಿದೆ; ಸೂತ್ರ ಭಾಷ್ಯದಲ್ಲಂತೂ ಇದು ವಿರುದ್ಧವೆಂದೇ ಸುಸ್ಪಷ್ಟವಾಗಿ ಹೇಳಿಬಿಟ್ಟಿದೆ. ಆದ್ದರಿಂದ ಆಚಾರ್ಯರಿಗಿಂತ ಮುಂಚೆಯೇ ವೇದಾಂತಿಗಳು ಈ ಎರಡು ಪಕ್ಷಗಳನ್ನೂ ಹಿಡಿದು ವಾದಿಸುತ್ತಿದ್ದರೆಂದು ಊಹಿಸುವದಕ್ಕೆಡೆಯಿದೆ. ಪ್ರಾಣಗಳು ಉತ್ಕ್ರಮಣವಾಗಬೇಕಾದರೆ ಅವು ಪರಿಚ್ಛಿನ್ನವೆಂಬುದನ್ನು ಒಪ್ಪಬೇಕು; ಪ್ರಾಣ ಗಳೆಲ್ಲವೂ ಅನಂತ ಎಂಬ ಶ್ರುತಿಯ ಪ್ರಾಮಾಣ್ಯವನ್ನು ಒಪ್ಪುವವರು ವೃತ್ತಿಲಾಭ ಪಕ್ಷವನ್ನೂ ಒಪ್ಪಬೇಕು. ಆದ್ದರಿಂದ ಆಧಿದೈವಿಕದೃಷ್ಟಿಯಿಂದ ವಾಗಾದಿಗಳು ಅಪರಿಚ್ಛಿನ್ನವೆಂದೂ ಆಧ್ಯಾತ್ಮಿಕದೃಷ್ಟಿಯಿಂದ ಪರಿಚ್ಛಿನ್ನವೆಂದೂ ಹೇಳಬೇಕಾಗು ತ್ತದೆ. ಪರಮಾರ್ಥವಾಗಿ ವ್ಯಾಪಿಗಳಾದ ವಾಗಾದಿಗಳಿಗೆ ಕರ್ಮವಶದಿಂದ ಪರಿ ಚ್ಛೇದವುಂಟಾಗಿರುವದರಿಂದ ವ್ಯಷ್ಟಿಜೀವರ ದೃಷ್ಟಿಯಿಂದ ಕರಣಗಳು ಪರಿಚ್ಛಿನ್ನ ವೆಂಬ ವ್ಯವಹಾರವೇ ಯುಕ್ತತರವು; ಆದ್ದರಿಂದಲೇ ಶ್ರುತಿಯು ಜ್ಞಾನಿಗೆ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, ಅಜ್ಞಾನಿಗಳಿಗೆ ಉತ್ಕ್ರಾಂತವಾಗು ತ್ತವೆ (ಬೃ. ೪-೪-೬) ಎಂಬ ಭೇದವನ್ನು ಅಂಗೀಕರಿಸಿದೆ ಎಂದು ಈ ಎರಡು ಪಕ್ಷಗಳಿಗೂ ಹೊಂದಿಕೆಯನ್ನು ಕಲ್ಪಿಸಬಹುದೆಂದು ತೋರುತ್ತದೆ.

ಈ ದೃಷ್ಟಿಯಿಂದ ನೋಡಿದರೆ ಸೂತ್ರಭಾಷ್ಯದ ಪ್ರಕ್ರಿಯೆಯೇ ಆಚಾರ್ಯ ರಿಗೆ ಹೆಚ್ಚು ಇಷ್ಟವೆಂದೂ ಬೃಹದಾರಣ್ಯಕದಲ್ಲಿ ಹೇಳಿರುವದು ಹಿಂದಿನ ಸಾಂಪ್ರ ದಾಯಿಕವ್ಯಾಖ್ಯಾನವೆಂದೂ ವಾದಿಸುವದಕ್ಕೆ ಬರುತ್ತದೆ. ಹೀಗೆ ಒಂದೊಂದು ಸಂದರ್ಭದಲ್ಲಿ ಪರಮತವನ್ನೇ ತಮ್ಮ ಸಿದ್ಧಾಂತವೆಂಬಂತೆ ಹೇಳಿ ಸ್ಥಲಾಂತರದಲ್ಲಿ ಅದನ್ನು ಖಂಡಿಸಿ ಪರಮಸಿದ್ಧಾಂತವನ್ನು ಸ್ಫುಟಗೊಳಿಸುವದು ಆಚಾರ್ಯರ ಶೈಲಿಯಾಗಿರುತ್ತದೆ. ಉದಾಹರಣೆಗೆ ಸೂತ್ರಭಾಷ್ಯದಲ್ಲಿ (೨-೨-೧೭; ಭಾ.ಭಾ. ೩೮) ಕಾರ್ಯವೆಂಬುದು ಕಾರಣದ ಸಂಸ್ಥಾನಮಾತ್ರವೆಂಬ ಸಾಂಖ್ಯರ ಪ್ರಕ್ರಿಯೆಯನ್ನು ವೈಶೇಷಿಕರ ಖಂಡನೆಗೆ ಉಪಯೋಗಿಸಿಕೊಂಡಿದ್ದರೂ ಗೀತಾ ಭಾಷ್ಯದಲ್ಲಿ (೧೮-೪೮, ಭಾ.ಭಾ; ೫೪೯ರಲ್ಲಿ) ಇದೂ ಅಸತ್ಕಾರ್ಯವಾದವೇ

ಆಗುವದೆಂದು ಸ್ಪಷ್ಟವಾಗಿ ಖಂಡಿಸಿರುತ್ತದೆ. ಚಾರ್ವಾಕಬೌದ್ಧರ ವಾದಗಳನ್ನು ವೈಶೇಷಿಕರ ಅಥವಾ ನೈಯಾಯಿಕರ ವಾದಗಳಿಂದಲೂ ವೈಶೇಷಿಕರ ವಾದಗಳನ್ನು ಸಾಂಖ್ಯರ ಅಥವಾ ಮೀಮಾಂಸಕರ ವಾದಗಳಿಂದಲೂ ಖಂಡಿಸಿ ಕೊನೆಗೆ ಆ ವಾದಗಳನ್ನೂ ಖಂಡಿಸುವದರ ಮೂಲಕ ವೇದಾಂತದ ಪರಮಸಿದ್ಧಾಂತವನ್ನು ಸ್ಫುಟಗೊಳಿಸಿರುವ ಉದಾಹರಣೆಗಳು ಭಾಷ್ಯದಲ್ಲಿ ಅಲ್ಲಲ್ಲಿ ಕಾಣಬರುತ್ತವೆ.

ಭಾಷ್ಯಗಳಿಗೆ ತೋರುವ ಪರಸ್ಪರವಿರೋಧಾಭಾಸಕ್ಕೆ ಮತ್ತೊಂದು ಉದಾಹರಣೆಯನ್ನು ಕೊಡಬಹುದು: **ತೈತ್ತಿರೀಯಭಾಷ್ಯದಲ್ಲಿ** ಬ್ರಹ್ಮದಿಂದ ಆಕಾಶಾದಿಯಾಗಿ ಭೂತಗಳು ಸೃಷ್ಟವಾಗುವವೆಂದು (ತೈ. ಭಾ. ಭಾ. ೧೧೪) ಹೇಳಿದೆ ; **ಮುಂಡಕಭಾಷ್ಯದಲ್ಲಿ** ಬ್ರಹ್ಮದಿಂದ ಅವ್ಯಾಕೃತ, ಪ್ರಾಣ, ಮನಸ್ಸು, ಭೂತಪಂಚಕ, ಲೋಕಗಳು– ಈ ಕ್ರಮದಿಂದ ಸೃಷ್ಟಿಯಾಗಿರುವವೆಂದು ಒಂದು ಕಡೆಯಲ್ಲಿಯೂ (ಮುಂ. ಭಾ. ೧–೧–೮ ಭಾ. ಭಾ. ೨೩) ಪ್ರಾಣ, ಮನಸ್ಸು, ಇಂದ್ರಿಯಗಳು, ಪಂಚಭೂತಗಳು– ಹೀಗೆ ಉಂಟಾಗುವವೆಂದು ಇನ್ನೊಂದು ಕಡೆಯಲ್ಲಿಯೂ (ಮುಂ. ಭಾ. ೨–೧–೩, ಭಾ. ಭಾ. ೫೭) ಹೇಳಿದೆ. ಪ್ರಶ್ನಭಾಷ್ಯದಲ್ಲಿ ಪ್ರಾಣ, ಶ್ರದ್ಧೆ, ಭೂತಪಂಚಕ, ಇಂದ್ರಿಯಗಳು, ಮನಸ್ಸು– ಇವು ಸೃಷ್ಟಿಯಾಗುವವೆಂದು (ಪ್ರ. ಭಾ. ೧–೪, ಭಾ. ಭಾ. ೧೧೨) ಹೇಳಿದೆ. ಸೂತ್ರಭಾಷ್ಯದಲ್ಲಿ– ಕರಣಗಳು ಭೌತಿಕವಾದರೆ ಅವುಗಳ ಸೃಷ್ಟಿಯನ್ನು ಭೂತಗಳ ಸೃಷ್ಟಿಯಿಂದಲೇ ಹೇಳಿದಂತೆ ಆಗುತ್ತದೆ; ಅಭೌತಿಕವಾದರೆ ಮೊದಲು ಕರಣಗಳೂ ಆಮೇಲೆ ಭೂತಗಳೂ ಉತ್ಪನ್ನವಾಗುವವೆಂದಾಗಲಿ, ಮೊದಲೇ ಭೂತಗಳೂ ಆಮೇಲೆ ಕರಣಗಳೂ ಉತ್ಪನ್ನವಾಗುವವೆಂದಾಗಲಿ ಹೇಳಬಹುದಾಗಿವೆ. ಆಥರ್ವಣ(ಮುಂಡಕ)ದಲ್ಲಿರುವದು ಕರಣಭೂತಗಳ ಪಾಠಕ್ರಮವೇ ಹೊರತು ಉತ್ಪತ್ತಿಕ್ರಮವಲ್ಲ ಎಂದು (ಸೂ. ಭಾ. ೨–೩–೧೫, ಭಾ. ಭಾ. ೧೧೭) ಬರೆದಿದೆ. ಪ್ರಕೃತಭಾಷ್ಯದಲ್ಲಿಯೋ ಎಂದರೆ ಮೃತ್ಯುಶಬ್ದವಾಚ್ಯನಾದ ಹಿರಣ್ಯಗರ್ಭನಿಂದ ಮನಸ್ಸುಂಟಾಯಿತು, ಬಳಿಕ ಆಕಾಶಾದಿಕ್ರಮದಿಂದ ಭೂತಪಂಚಕವಾಯಿತು, (೧–೨–೧, ಭಾ. ಭಾ. ೨೩, ೨೭); ಆ ಬಳಿಕ ವಿರಾಟ್ಪುರುಷನೂ (೧–೨–೨, ಭಾ. ಭಾ. ೨೯; ೧–೨–೪, ಭಾ. ಭಾ. ೩೨), ವಿರಾಜನಿಂದ ಮನುವೂ ಮನುವಿನಿಂದ ಮನುಷ್ಯರೂ ಪ್ರಾಣಿಗಳೂ (೧–೪–೩, ಭಾ. ಭಾ. ೧೦೭, ೧–೪–೪, ಭಾ. ಭಾ. ೧೦೮) ಉಂಟಾದವೆಂದು ಹೇಳಿದೆ.

ಮೇಲೆ ಉದಾಹರಿಸಿರುವ ಭಾಷ್ಯಗಳಿಗೆ ವಿರೋಧವಿರುವಂತೆಯೇ ತೋರುತ್ತದೆ. ಮುಂಡಕಭಾಷ್ಯದಲ್ಲಿ ಉತ್ಪತ್ತಿಕ್ರಮವನ್ನು ಹೇಳಿದೆ ಎಂದು (೧–೧–೮, ಭಾ. ಭಾ. ೨೨) ಸ್ಪಷ್ಟವಾಗಿ ಹೇಳಿರುವಲ್ಲಿ ಅದು ಪಾಠಕ್ರಮಮಾತ್ರ

ವೆಂದು ಸೂತ್ರಭಾಷ್ಯದಲ್ಲಿ ಇರುವ ಸ್ಪಷ್ಟೋಕ್ತಿಯನ್ನು ನೋಡಿದವರಿಗೆ ಆ ಎರಡು ಭಾಷ್ಯಗಳು ಏಕಕರ್ತೃಕವಲ್ಲವೆಂದೇ ತೋರುವ ಸಂಭವವಿದೆ.

ಇದರ ತತ್ತ್ವವು ಹೇಗೇ ಇರಲಿ, ಇಲ್ಲಿಯೂ ಭಾಷ್ಯಗಳ ಪರಸ್ಪರ ವಿರೋಧದಿಂದ ವೇದಾಂತದ ಪರಮಸಿದ್ಧಾಂತಕ್ಕೆ ಯಾವ ಧಕ್ಕೆಯೂ ತಗಲುವಂತಿಲ್ಲವೆಂಬುದನ್ನು ಜಿಜ್ಞಾಸುಗಳು ಲಕ್ಷ್ಯದಲ್ಲಿಡಬೇಕು. ಮೊದಲನೆಯದಾಗಿ ಸೃಷ್ಟಿವಾಕ್ಯಗಳು ಆತ್ಮೈಕ್ಯವನ್ನು ತಿಳಿಸುವದಕ್ಕೆ ಬಂದಿರುವದರಿಂದ ಸೃಷ್ಟಿಕ್ರಮದಲ್ಲಿ ಕಾಣಬರಬಹುದಾದ ತಾರತಮ್ಯದಿಂದ ಆ ಸಿದ್ಧಾಂತಕ್ಕೆ ಯಾವ ಅಡ್ಡಿಯನ್ನೂ ತಂದೊಡ್ಡುವಂತಿಲ್ಲ. ಎರಡನೆಯದಾಗಿ ಸೃಷ್ಟಿವಾಕ್ಯಗಳಿಗೆ ಯಾವದಾದರೊಂದು ರೀತಿಯಿಂದ ಏಕವಾಕ್ಯತೆಯನ್ನು ಕಲ್ಪಿಸುವದಕ್ಕೂ ಶಕ್ಯವಿದೆ. ಪ್ರಕೃತವಿರೋಧವು ಆಭಾಸಮಾತ್ರವೆಂಬುದನ್ನು ಮನಗಾಣುವದಕ್ಕೆ ಈ ಗ್ರಂಥಮಾಲೆಯ ಪ್ರಶ್ನೋಪನಿಷತ್ತಿನ ಭಾಷ್ಯಕ್ಕೆ ಬರೆದಿರುವ ಪೀಠಿಕೆಯನ್ನು ವಾಚಕರು ಅವಲೋಕಿಸಬೇಕು. ಆ ಪೀಠಿಕೆಯಲ್ಲಿ ಸೂಚಿತವಾಗಿರುವ ಅಭಿಪ್ರಾಯವನ್ನು ಒಪ್ಪಿಕೊಂಡರೆ ಎಲ್ಲಾ ಸೃಷ್ಟಿವಾಕ್ಯಗಳಿಗೂ ಅನುಕೂಲವಾಗಿ ಹೊಂದುಗಡೆಯಾಗುವದೆಂದು ನಮ್ಮ ಅಭಿಪ್ರಾಯವಿದೆ. ಪರಮಾತ್ಮನನ್ನಾಶ್ರಯಿಸಿರುವ ಅವ್ಯಾಕೃತವು ವ್ಯಾಕೃತಾವಸ್ಥೆಗೆ ತಿರುಗುತ್ತಿರುವಲ್ಲಿ ಹಿರಣ್ಯಗರ್ಭನು ತೋರಿಕೊಳ್ಳುವನು; ಅವನಿಂದ ಸಮಷ್ಟಿಮನಸ್ಸು ಆವಿರ್ಭವಿಸುವದು; ಬಳಿಕ ಸೂಕ್ಷ್ಮಪಂಚಭೂತಗಳೂ ಅವುಗಳಿಂದ ಸ್ಥೂಲಭೂತಗಳೂ ಅಂಡೋತ್ಪತ್ತಿಕ್ರಮದಿಂದ ವಿರಾಟ್ಪುರುಷನೂ ಉಂಟಾಗುವರು. ಆ ವಿರಾಟ್ಪುರುಷನಿಂದ ಮನುವೂ ಅವನಿಂದ ಮಾನವಾದಿಗಳೂ ಉಂಟಾಗುವರು. ಪ್ರಶ್ನದಲ್ಲಿ ಹೇಳಿರುವ ಮನಸ್ಸೂ ಇಂದ್ರಿಯಗಳೂ ಭೂತಗಳಿಂದಾಗುವ ವ್ಯಷ್ಟಿಗಳು- ಎಂಬ ಸೃಷ್ಟಿಕ್ರಮವನ್ನು ಆ ಪೀಠಿಕೆಯಲ್ಲಿ ಪ್ರತಿಪಾದಿಸಿರುತ್ತದೆ.

ಬೃಹದಾರಣ್ಯಕಭಾಷ್ಯದ ಕರ್ತೃವು ಯಾರೆಂಬುದನ್ನು ನಿರ್ಣಯಿಸುವದಕ್ಕೆ ಬಯಸುವ ಪುರಾತತ್ತ್ವಪರಿಶೀಲಕರ ಉಪಯೋಗಕ್ಕೆಂದು ಇಲ್ಲಿ ಇನ್ನೊಂದು ವಿಚಾರವನ್ನು ತಿಳಿಸುವೆವು. ಭಾಷಾಶೈಲಿಯ ದೃಷ್ಟಿಯಿಂದ ನೋಡಿದರೆ ತೈತ್ತಿರೀಯೋಪನಿಷದ್ಭಾಷ್ಯಕ್ಕೂ ಬೃಹದಾರಣ್ಯಕಭಾಷ್ಯಕ್ಕೂ ಒಂದು ವಿಶೇಷವಾದ ಹೋಲಿಕೆಯಿರುವದು ಕಂಡುಬರುತ್ತದೆ. ಪ್ರಸ್ಥಾನತ್ರಯಭಾಷ್ಯಗಳಲ್ಲೆಲ್ಲ ಸೂತ್ರಪ್ರಾಯವಾದ ಸಂಗ್ರಹವಾಕ್ಯಗಳನ್ನು ಅಲ್ಲಲ್ಲಿ ಕೊಟ್ಟು ಅವುಗಳನ್ನು ಮುಂದೆಯೇ ವಿವರಿಸಿರುವ ಪರಿಪಾಟಿಯು ಪ್ರಚುರವಾಗಿರುವದೆಂಬುದು ಭಾಷ್ಯಚಿಂತಕರಿಗೆಲ್ಲ ಪ್ರಸಿದ್ಧವಾಗಿರುವ ವಿಷಯವಷ್ಟೆ. ಆದರೆ ಪೂರ್ವಪಕ್ಷವಾಕ್ಯಗಳನ್ನು ಚೇತ್ ಎಂಬ ನಿಪಾತದಲ್ಲಿ ಕೊನೆಗಾಣುವ ಸಂಗ್ರಹ

ವಾಕ್ಯಗಳಾಗಿ ಕೊಟ್ಟು ಅವುಗಳ ವಿವರಣೆಯನ್ನು ಮತ್ತೆ ಚೇದಂತವಾಗಿ ನಿಲ್ಲಿಸಿರುವದು ತೈತ್ತಿರೀಯಬೃಹದಾರಣ್ಯಕಭಾಷ್ಯಗಳಲ್ಲಿ ಮಾತ್ರ ಪ್ರಚುರವಾಗಿ ರುತ್ತದೆ. ಉದಾಹರಣೆಗೆ ಈ ಕೆಳಗಿನ ಗ್ರಂಥಭಾಗಗಳನ್ನು ಪರಿಶೀಲಿಸಿರಿ :

(೧) ಗತ್ಯೈಶ್ವರ್ಯಾದಿಶ್ರುತಿವಿರೋಧಃ ಇತಿ ಚೇತ್ । ಅಥಾಪಿ ಸ್ಯಾತ್ ಯದ್ಯಪ್ರಾಪ್ಯೋ ಮೋಕ್ಷಃ ತದಾ ಗತಿಶ್ರುತೀನಾಂ "ಸ ಏಕಧಾ" (ಛಾಂ. ೭-೨೬-೨), "ಸ ಯದಿ ಪಿತೃಲೋಕಕಾಮಃ'' (ಛಾಂ. ೮-೨-೧), "ಸ್ತ್ರೀಭಿರ್ವಾ ಯಾನೈರ್ವಾ" (ಛಾಂ. ೮-೧೨-೩) ಇತ್ಯಾದಿಶ್ರುತೀನಾಂ ಚ ಕೋಪಃ ಸ್ಯಾತ್ ಇತಿ ಚೇತ್........ ತೈ. ಭಾ. ೧-೧೧ (ಭಾ. ಭಾ. ೭೬).

(೨) ಕಾರ್ಯಾನ್ತರಮೇವ ಸ್ಯಾತ್ ಇತಿ ಚೇತ್। "ತದೇವಾನುಪ್ರಾವಿಶತ್'' ಇತಿ ಜೀವಾತ್ಮರೂಪಂ ಕಾರ್ಯಂ ನಾಮರೂಪಪರಿಣತಂ ಕಾರ್ಯಾನ್ತರಮೇವ ಆಪದ್ಯತೇ ಇತಿ ಚೇತ್ । .... .... ತೈ.ಭಾ. ೨-೬ (ಭಾ. ಭಾ. ೧೭೨).

(೩) ಪಿಣ್ಡಾದಿವ್ಯತಿರೇಕೇಣ ಮೃದಾದೇರಸತ್ತ್ವಾತ್ ಅಯುಕ್ತಮಿತಿ ಚೇತ್। ಪಿಣ್ಡಾದಿಪೂರ್ವಕಾರ್ಯೋಪಮರ್ದೇ ಮೃದಾದಿಕಾರಣಂ ನೋಪಮೃದ್ಯತೇ ಘಟಾದಿ ಕಾರ್ಯಾನ್ತರೇಽಪಿ ಅನುವರ್ತತೇ ಇತ್ಯೇತತ್ ಅಯುಕ್ತಮ್ । ಪಿಣ್ಡಘಟಾದಿ ವ್ಯತಿರೇಕೇಣ ಮೃದಾದಿಕಾರಣಸ್ಯ ಅನುಪಲಬ್ಧ್ಯಾತ್ ಇತಿ ಚೇತ್ । .... ಬೃ. ಭಾ. ೧-೨-೧, (ಭಾ. ಭಾ. ೧೭).

(೪) ಅಪ್ರಸಿದ್ಧನಾಮಭಿಃ ಸಂಬೋಧನಮ್ ಅಯುಕ್ತಮ್ ಇತಿ ಚೇತ್। ಸನ್ತಿ ಹಿ ಪ್ರಾಣವಿಷಯಾಣಿ ಪ್ರಸಿದ್ಧಾನಿ ಪ್ರಾಣಾದಿನಾಮಾನಿ । ತಾನಿ ಅಪೋಹ್ಯ ಅಪ್ರಸಿದ್ಧೈಃ ಬೃಹತ್ತ್ವಾದಿನಾಮಭಿಃ ಸಂಬೋಧನಮ್ ಅಯುಕ್ತಮ್ । ಲೌಕಿಕ ನ್ಯಾಯಾಪೋಹಾತ್ । ತಸ್ಮಾತ್ ಭೋಕ್ತುರೇವ ಸತಃ ಪ್ರಾಣಸ್ಯ ಅಪ್ರತಿಪತ್ತಿಃ ಇತಿ ಚೇತ್ । .... ಬೃ. ಭಾ. ೨-೧-೧೫ (ಭಾ. ಭಾ. ೨೮೨).

ಇಂಥ ಚೇದಂತವಾದ ಸಂಗ್ರಹವಾಕ್ಯಗಳೂ ಚೇದಂತವಾದ ಅವುಗಳ ವಿವರಣೆಗಳೂ ಈ ಎರಡು ಉಪನಿಷದ್ಭಾಷ್ಯಗಳಲ್ಲಿ ಎಲ್ಲೆಲ್ಲಿಯೂ ಕಾಣಬರುತ್ತವೆ. ಈ ಎರಡು ಉಪನಿಷದ್ಭಾಷ್ಯಗಳಿಗೆ ಮಾತ್ರವೇ ಸುರೇಶ್ವರಾಚಾರ್ಯರ ವಾರ್ತಿಕಗಳಿವೆ ಎಂಬುದನ್ನೂ, ತೈತ್ತಿರೀಯದಲ್ಲಿ ಸಂಗ್ರಹವಾಗಿ ಹೇಳಿರುವ ವಿಷಯವನ್ನೂ ಸೇರಿಸಿಕೊಂಡು ಬೃಹದಾರಣ್ಯಕವಾರ್ತಿಕದಲ್ಲಿ ವಿಸ್ತರಿಸಿದೆ ಎಂಬುದನ್ನೂ ನಾವು ಮನದಂದುಕೊಳ್ಳಬೇಕು. ಉಪದೇಶಸಾಹಸ್ರಿಯ ಪದ್ಯಭಾಗದಿಂದ ಕೆಲವು ಶ್ಲೋಕಗಳನ್ನು ವಾರ್ತಿಕಕಾರರು ನೈಷ್ಕರ್ಮ್ಯಸಿದ್ಧಿಯಲ್ಲಿಯೂ ಬೃಹದಾರಣ್ಯಕ ವಾರ್ತಿಕದಲ್ಲಿಯೂ ಅಲ್ಲಲ್ಲಿ ಉದಾಹರಿಸಿಕೊಂಡಿರುವದೂ ನೈಷ್ಕರ್ಮ್ಯಸಿದ್ಧಿಯ ಅನೇಕಶ್ಲೋಕಗಳು ಬೃಹದಾರಣ್ಯಕವಾರ್ತಿಕದಲ್ಲಿ ಅಡಕವಾಗಿವೆಯೆಂಬುದೂ ಬೃಹದಾರಣ್ಯಕಕರ್ತೃನಿರ್ಧಾರಣೆಗೆ ಪ್ರಯತ್ನಿಸುವವರಿಗೆ ಸಹಾಯಕಸಾಮಗ್ರಿಯನ್ನು ಒದಗಿಸಿಕೊಡಬಹುದೆಂದು ನಮ್ಮ ಭಾವನೆ. ನಾವು ಪುರಾತತ್ತ್ವ ಶೋಧನೆಗೆ ಹೊರಟಿಲ್ಲವಾದ್ದರಿಂದ ಈ ವಿಚಾರವನ್ನು ಇಲ್ಲಿಗೆ ನಿಲ್ಲಿಸಬೇಕಾಗಿದೆ.

# ಆಚಾರ್ಯರವರ ಹಿಂದಿನ ವೇದಾಂತಿಗಳು

ಬೃಹದಾರಣ್ಯಕಭಾಷ್ಯವನ್ನು ಪರೀಕ್ಷಿಸುವಲ್ಲಿ ಆಚಾರ್ಯರಿಗಿಂತ ಹಿಂದಿನ ವೇದಾಂತಿಗಳಲ್ಲಿ ಕೆಲವರ ಪ್ರಕ್ರಿಯೆಗಳು ಅವರಿಗೆ ಸಮ್ಮತವಾಗಿರುತ್ತವೆಯೆಂದೂ ಮತ್ತೆಕೆಲವರ ಪ್ರಕ್ರಿಯೆಗಳು ಅವರಿಗೆ ಅಸಮ್ಮತವಾಗಿರುತ್ತವೆಯೆಂದೂ ಕಂಡುಬರುತ್ತದೆ. ಈ ಭಾಷ್ಯಕಾರರು ತಮ್ಮ ಸಮ್ಮತಿಯನ್ನು ಕೊಟ್ಟು ಉದಾಹರಿಸಿರುವ ಆಚಾರ್ಯರುಗಳಲ್ಲಿ **ದ್ರವಿಡಾಚಾರ್ಯರೆಂಬವರು** ಪ್ರಧಾನರಾಗಿರುತ್ತಾರೆ. ದ್ರವಿಡಾಚಾರ್ಯರ ವ್ಯಾಧಸಂವರ್ಧಿತರಾಜಪುತ್ರಾಖ್ಯಾಯಿಕೆಯ ದೃಷ್ಟಾಂತವನ್ನು ಮಧುಕಾಂಡ (೨-೧-೨, ಭಾ. ಭಾ. ೩೧೬)ದಲ್ಲಿ ಆತ್ಮೈಕತ್ವವಾದವು ಸಂಪ್ರದಾಯವನ್ನು ಬಲ್ಲವರ ಮತವೆಂದು ತಿಳಿಸುವದಕ್ಕಾಗಿ ಉದಾಹರಿಸಿದೆ. ಆನಂದಗಿರಿಗಳು ತಮ್ಮ ಟೀಕೆಯಲ್ಲಿ (ಆನಂದಾಶ್ರಮಮುದ್ರಣ, ಪು. ೬೮೮ರಲ್ಲಿ) ದ್ರವಿಡಾಚಾರ್ಯರ ಹೆಸರನ್ನು ಉಲ್ಲೇಖಿಸಿರುತ್ತಾರೆ. ಇದೇ ಆಚಾರ್ಯರನ್ನು ಮಾಂಡೂಕ್ಯಭಾಷ್ಯದಲ್ಲಿಯೂ (ಮಾಂ.ಕಾ.೨-೨, ಭಾ. ಭಾ. ೧೧೫) ಸಮ್ಮತಿಗಾಗಿ ಉದಾಹರಿಸಿರುವದು ಕಂಡುಬರುತ್ತದೆ.

ಭಾಷ್ಯಕಾರರು ಖಂಡನೆಗೆ ತೆಗೆದುಕೊಂಡಿರುವವರ ಮತಗಳನ್ನು ಶಬ್ದಾನುಕ್ರಮಣಿಕೆಯಲ್ಲಿ 'ಕೇಚಿತ್' ಎಂಬ ಶಬ್ದದ ವಿವರಣೆಯಲ್ಲಿ ಕಾಣಬಹುದು. ಇಂಥ ಮತಗಳಲ್ಲಿ ಕೆಲವನ್ನು ವಾಚಕರು ಮನದಂದುಕೊಳ್ಳಲೆಂದು ಇಲ್ಲಿ ಸಂಗ್ರಹಿಸುವೆವು :

(೧) ಬ್ರಹ್ಮವನ್ನು ಆರಾಧನೆಮಾಡಿ ಬ್ರಹ್ಮಸ್ವರೂಪವನ್ನು ಕಾಲಾಂತರದಲ್ಲಿ ಪಡೆದುಕೊಳ್ಳಬೇಕಾಗಿರುವದೆಂಬ ಭಾಗವತಮತವನ್ನು ಇಲ್ಲಿ (೨-೧-೨೦; ಭಾ. ಭಾ. ೩೧೦ರಲ್ಲಿ) ಉದಾಹರಿಸಿದೆ. (೨) ಜೀವನು ಪರಮಾತ್ಮನ ಅವಸ್ಥೆ, ಶಕ್ತಿ, ವಿಕಾರ– ಎಂದು ವರ್ಣಿಸುತ್ತಿದ್ದ ಮೂರು ಬೇರೆಬೇರೆಯ ಮತಗಳನ್ನೂ ಇಲ್ಲಿ (೨-೧-೨೦, ಭಾ.ಭಾ. ೩೧೭ ; ೩-೮-೧೨, ಭಾ. ಭಾ. ೬೩) ಖಂಡನೆಗಾಗಿ ಪರಾಮರ್ಶಿಸಿದೆ. (೩) 'ಆತ್ಮೇತ್ಯೇವೋಪಾಸೀತ' (ಆತ್ಮನೆಂದೇ ಉಪಾಸನೆಮಾಡಬೇಕು) ಎಂಬ (೧-೪-೭) ವಾಕ್ಯವು ಉಪಾಸನೆಯನ್ನು ವಿಧಿಸುತ್ತದೆಯೆಂದೂ ಆತ್ಮಸ್ವರೂಪಬೋಧಕವಾಕ್ಯಗಳು ಉಪಾಸ್ಯಸ್ವರೂಪವನ್ನು ತಿಳಿಸುತ್ತವೆಯೆಂದೂ ಈ ಉಪಾಸನೆಯಿಂದ ಮೋಕ್ಷವು ಅಥವಾ ಅವಿದ್ಯಾನಿವೃತ್ತಿಯು ಫಲಿಸುತ್ತದೆ ಎಂದೂ ಹೇಳುವವರ ಮತವೊಂದನ್ನೂ ( ೧-೪-೭, ಭಾ. ಭಾ. ೧೩೫ ). (೪) ವೇದಾಂತವಾಕ್ಯಜನ್ಯಜ್ಞಾನವನ್ನು ಆವೃತ್ತಿಮಾಡಿದರೆ ವಿಶಿಷ್ಟವಾದ ಮತ್ತೊಂದು ಜ್ಞಾನವು ಹುಟ್ಟಿ ಅವಿದ್ಯೆಯನ್ನು ಕಳೆಯುತ್ತದೆ ಎಂಬವರ ಮತ್ತೊಂದು ಮತವನ್ನೂ (ಭಾ ಭಾ.೧೩೭) ಇಲ್ಲಿ ಉದಾಹರಿಸಿ ಖಂಡಿಸಿರುತ್ತದೆ.

ಮೇಲೆ ಸಂಕ್ಷೇಪವಾಗಿ ತಿಳಿಸಿರುವ ಮತಗಳಲ್ಲಿ ಯಾವಯಾವದನ್ನು ಯಾರುಯಾರು ಅಂಗೀಕರಿಸಿದ್ದರೆಂಬುದು ನಮಗೆ ನಿಸ್ಪಷ್ಟವಾಗಿ ತಿಳಿದಿರುವದಿಲ್ಲವಾದರೂ ಆಚಾರ್ಯರ ಹಿಂದೆಯೇ ವೇದಾಂತಿಗಳಲ್ಲಿ ಮತಭೇದಗಳು ಉಂಟಾಗಿದ್ದವೆಂಬುದಕ್ಕೆ ಇವು ಸಾಕ್ಷಿಯಾಗಿವೆ. ಆದರೆ ಉಪಾಸನಾವಾದಿಗಳಲ್ಲಾಗಲಿ ಜ್ಞಾನವಾದಿಗಳಲ್ಲಾಗಲಿ ಆತ್ಮೈಕತ್ವವನ್ನೇ ಉಪನಿಷತ್ತುಗಳಲ್ಲಿ ಉಪದೇಶಿಸಿದೆ ಎಂಬ ವಿಷಯಕ್ಕೆ ಆಚಾರ್ಯರ ಕಾಲದಲ್ಲಾಗಲಿ ಅವರ ಹಿಂದೆಯಾಗಲಿ ಯಾವ ಅಭಿಪ್ರಾಯಭೇದವೂ ಇರಲಿಲ್ಲವೆಂಬ ಬಗ್ಗೆ ಈ ಉಪನಿಷದ್ಭಾಷ್ಯದಲ್ಲಿ ಒಂದು ವಾಕ್ಯವಿದೆ. ಅದನ್ನು ಇಲ್ಲಿ ವಾಚಕರ ಮುಂದೆ ಇಡುವೆವು: "ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತೇ ಇತಿ ಅವಿಪ್ರತಿಪತ್ತಿಃ ಸರ್ವೇಷಾಮ್ ಉಪನಿಷದ್ವಾದಿನಾಮ್ ॥" (೨-೧-೨೦, ಭಾ.ಭಾ. ೩೧೬). **ಎಲ್ಲಾ ಉಪನಿಷತ್ತುಗಳಲ್ಲಿಯೂ ವಿಜ್ಞಾನಾತ್ಮನಿಗೂ ಪರಮಾತ್ಮನಿಗೂ ಏಕತ್ವಪ್ರತ್ಯಯವನ್ನೇ ಉಪದೇಶಿಸಿದೆ ಎಂಬ ವಿಷಯದಲ್ಲಿ ಉಪನಿಷದ್ವಾದಿಗಳಲ್ಲಿ ಯಾರಿಗೂ ವಿರುದ್ಧಾಭಿಪ್ರಾಯವಿರುವದಿಲ್ಲ**– ಎಂದು ಇಲ್ಲಿ ಹೇಳಿರುತ್ತದೆ. ಆಚಾರ್ಯರ ಕಾಲಕ್ಕೆ ದ್ವೈತಿವೇದಾಂತಿಗಳೇ ಇರಲಿಲ್ಲ ಎಂಬ ಉಪಸಿದ್ಧಾಂತವೊಂದು ಇದರಿಂದ ಹೊರಡುತ್ತದೆ.

ಭಾಷ್ಯಕಾರರು ಪೂರ್ವಪಕ್ಷವಾಗಿ ಪರಾಮರ್ಶಿಸಿರುವ ಮತಗಳಲ್ಲಿ ಬಹು ಮುಖ್ಯವಾದದ್ದು **ಭರ್ತೃಪ್ರಪಂಚರಮತವು.** ಭರ್ತೃಪ್ರಪಂಚರು ಮಾಧ್ಯಂದಿನ ಪಾಠದ ಬೃಹದಾರಣ್ಯಕದಮೇಲೆ ವಿಸ್ತಾರವಾದ ಭಾಷ್ಯವೊಂದನ್ನು ಬರೆದಿದ್ದರೆಂದೂ ತಮ್ಮ ಪ್ರಕ್ರಿಯೆಯ ಅಸಾಧಾರಣಸ್ವರೂಪವನ್ನು ತಿಳಿಸುವದಕ್ಕಾಗಿ ಆಚಾರ್ಯರು ಈ ಉಪನಿಷತ್ತಿನ ಕಾಣ್ವಪಾಠವನ್ನು ಅನುಸರಿಸಿ ಭಾಷ್ಯವನ್ನು ಬರೆದರೆಂದೂ ಆನಂದಗಿರಿಯ ಟೀಕೆಯಿಂದ ತಿಳಿದುಬರುತ್ತದೆ. ಮಧುಕಾಂಡದಲ್ಲಿ ನಮ್ಮ ಭಾಷ್ಯಕಾರರು ಭರ್ತೃಪ್ರಪಂಚರ ಮತವನ್ನು ಖಂಡಿಸಿರುವ ಸ್ಥಲಗಳನ್ನು ಟೀಕಾನುಸಾರವಾಗಿ ನಾವು ನಿರ್ದೇಶಿಸಿರುತ್ತೇವೆ; ಶಬ್ದಾನುಕ್ರಮಣಿಕೆಯಲ್ಲಿ 'ಭರ್ತೃಪ್ರಪಂಚ' ಎಂಬ ಶಬ್ದದ ವಿವರಣೆಯಲ್ಲಿ ಇವನ್ನು ಸಂಗ್ರಹಿಸಿರುತ್ತದೆ. ಈ ಉಪನಿಷದ್ಭಾಷ್ಯದ ಎರಡನೆಯ ಸಂಪುಟದ ಪೀಠಿಕೆಯಲ್ಲಿ ಭರ್ತೃಪ್ರಪಂಚರ ಪ್ರಕ್ರಿಯೆಗೂ ಭಾಷ್ಯಕಾರರ ಪ್ರಕ್ರಿಯೆಗೂ ಇರುವ ತಾರತಮ್ಯವನ್ನು ತಿಳಿಸಬೇಕೆಂದಿರುವೆವು.

## ಉಪನಿಷತ್ತಿನ ಪ್ರತಿಪಾದ್ಯವಿಷಯ

ಈ ಉಪನಿಷತ್ತು ಮಧುಕಾಂಡ, ಯಾಜ್ಞವಲ್ಕೀಯಕಾಂಡ (ಮುನಿಕಾಂಡ), ಖಿಲಕಾಂಡ– ಎಂಬ ಮೂರು ಕಾಂಡಗಳ ರೂಪದಲ್ಲಿರುತ್ತದೆ. ಈಗ

ನಾವು ಹೊರಕ್ಕೆ ತಂದಿರುವ ಸಂಪುಟದಲ್ಲಿ ಮಧುಕಾಂಡವು ಪೂರ್ಣವಾಗಿರುತ್ತದೆ. ಮಧುಕಾಂಡವು ಆಗಮಪ್ರಧಾನವಾಗಿ (ಎಂದರೆ ಉಪದೇಶಪ್ರಧಾನವಾಗಿ)ಯೂ ಯಾಜ್ಞವಲ್ಕೀಯಕಾಂಡವು ಉಪಪತ್ತಿಪ್ರಧಾನವಾಗಿಯೂ ಅದ್ವೈತವನ್ನು ತಿಳಿಸುತ್ತವೆ. ಖಿಲಕಾಂಡದಲ್ಲಿ ಆತ್ಮನನ್ನು ಸೋಪಾಧಿಕದೃಷ್ಟಿಯಿಂದ ಉಪಾಸನೆಮಾಡಬಹುದಾದ ಕೆಲವು ಪ್ರಕಾರಗಳನ್ನು ತಿಳಿಸಿದೆ. ಕಾಂಡತ್ರಯವೂ ನೇರಾಗಿ ಅಥವಾ ಪರಂಪರೆಯಿಂದ ಅದ್ವೈತಜ್ಞಾನದಿಂದಲೇ ಮುಕ್ತಿಯಾಗುವದೆಂಬುದನ್ನು ಬೇರೆಬೇರೆಯ ಪ್ರಕಾರಗಳಿಂದ ತಿಳಿಸುತ್ತದೆ.

ಮಧುಕಾಂಡದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿವೆಯಾದರೂ ಮೊದಲನೆಯ ಎರಡನೆಯ ಅಧ್ಯಾಯಗಳಲ್ಲಿ ಪ್ರವರ್ಗ್ಯಕರ್ಮಾಂಗವಾದ ಮಧುವನ್ನು ಮಾತ್ರ ತಿಳಿಸಿರುವದರಿಂದ (ಭಾ. ಭಾ. ೪೦೧) ಆಚಾರ್ಯರು ಅದಕ್ಕೆ ಭಾಷ್ಯವನ್ನು ಬರೆದಿಲ್ಲ. ಆತ್ಮಜ್ಞಾನವೆಂಬ ಲಕ್ಷ್ಯವನ್ನು ತಿಳಿಸಿರುವ ಮೂರನೆಯ ನಾಲ್ಕನೆಯ ಅಧ್ಯಾಯಗಳಿಗೆ ಮಾತ್ರ ಭಾಷ್ಯವನ್ನು ರಚಿಸಿರುತ್ತಾರೆ. ಕಾಣ್ವ ಪಾಠದಂತೆ ಉಪನಿಷತ್ತಿನ ಮೊದಲನೆಯ ಎರಡು ಬ್ರಾಹ್ಮಣಗಳಲ್ಲಿ ಅಶ್ವಮೇಧೋಪಾಸನೆಯನ್ನು ತಿಳಿಸುವ ಭಾಗವಿದೆ; ಈ ಬ್ರಾಹ್ಮಣಗಳು ಮಾಧ್ಯಂದಿನದ ಅಗ್ನಿರಹಸ್ಯವೆಂಬ ಹತ್ತನೆಯ ಕಾಂಡದಲ್ಲಿಯೇ ಸೇರಿರುತ್ತವೆಯಾದರೂ ಈ ಉಪಾಸನೆಯನ್ನು ಇಲ್ಲಿ ಹೇಳಿರುವದು ಅಶ್ವಮೇಧಕರ್ಮದಲ್ಲಿ ಅಧಿಕಾರಗಳಿಲ್ಲದ ವೈದಿಕರು ಕೇವಲೋಪಾಸನೆಯಿಂದಲೇ ಅದರ ಫಲವನ್ನು ಪಡೆದುಕೊಳ್ಳಬಹುದೆಂದು ತಿಳಿಸುವದಕ್ಕೆ ಎಂದು (ಭಾ. ಭಾ. ೬) ಆಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ. ಹೀಗೆ ಉಪಾಸನೆಗೇ ಕರ್ಮದ ಹಂಗಿಲ್ಲವೆಂದದ್ದರಿಂದ ಆತ್ಮಜ್ಞಾನವು ಸರ್ವಥಾ ನಿರಪೇಕ್ಷವಾಗಿಯೇ ಪುರುಷಾರ್ಥವನ್ನು ಕೊಡುವದೆಂಬ ಶಾಂಕರಪ್ರಕ್ರಿಯೆಗೆ ಬಲವು ಬಂದಂತೆ ಆಗಿರುತ್ತದೆ.

ಈ ಉಪನಿಷತ್ತಿನ ಒಂದನೆಯ ಅಧ್ಯಾಯದಲ್ಲಿ ಮೊದಲನೆಯ ನಾಲ್ಕು ಬ್ರಾಹ್ಮಣಗಳಲ್ಲಿ ಒಟ್ಟು ಉಪನಿಷತ್ತಿನ ಅರ್ಥವನ್ನು ಸಂಗ್ರಹವಾಗಿ ತಿಳಿಸಿರುತ್ತದೆ. ಕರ್ಮೋಪಾಸನೆಗಳ ಫಲವು ಸ್ಥೂಲವೂ ವ್ಯಕ್ತವೂ ಅನಿತ್ಯವೂ ಆಗಿರುವದರಿಂದ ಅದರಲ್ಲಿ ವಿರಕ್ತರಾದವರಿಗೆ ಜ್ಞಾನದಲ್ಲಿ ಅಧಿಕಾರವೆಂದು ತಿಳಿಸಿರುವದು ಈ ಸಂಗ್ರಹೋಕ್ತಿಯ ಒಂದು ಭಾಗವು (ಭಾ. ಭಾ" ೫, ೬, ೯೭, ೧೦೧), ಸಾಧ್ಯಸಾಧನರೂಪವಾದ ಜಗತ್ತೆಲ್ಲವೂ ವ್ಯಾಕೃತ, ಅವ್ಯಾಕೃತ– ಎಂಬ ಎರಡು ರೂಪಗಳಲ್ಲಿ ತೋರಿಕೊಳ್ಳುತ್ತಿರುವದು ; ಇದರಲ್ಲಿ ಈಶ್ವರ, ಕರ್ತೃಭೋಕ್ತೃಗಳಾದ ಜೀವರುಗಳು, ಕ್ರಿಯಾಕಾರಕಫಲಗಳು– ಎಲ್ಲವೂ ಸೇರಿರುತ್ತವೆ (ಭಾ.ಭಾ. ೧೧೭, ೧೧೯, ೧೨೦, ೧೨೧). ಇದು ವ್ಯಾಕೃತವಾದಾಗ ಈಶ್ವರನು ಪ್ರಾಣಿಗಳ ಕಾರ್ಯಕರಣಸಂಘಾತಗಳಲ್ಲಿ ಪ್ರವಿಷ್ಟನಾಗಿರುತ್ತಾನೆ. ಅವನ

ಸಂಪೂರ್ಣಸ್ವರೂಪವನ್ನು ಅರಿಯಲಾರದೆ ನಾನು ಪ್ರಾಣಿಯು, ವಕ್ತೃ,ದ್ರಷ್ಟೃ, ಶ್ರೋತೃ, ಮಂತೃ- ಎಂದುಮುಂತಾಗಿ ಪರಿಚ್ಛಿನ್ನಭಾವನೆಮಾಡಿಕೊಳ್ಳುವದು ಅವಿದ್ಯೆ (ಭಾ.ಭಾ.೧೩೧, ೧೩೨). ನಾನು ಈ ದ್ರಷ್ಟೃಶ್ರೋತ್ರಾದಿರೂಪಗಳಲ್ಲೆಲ್ಲ ವ್ಯಾಪಿಸಿರುವ ಚೈತನ್ಯಸ್ವರೂಪವಾದ ಆತ್ಮನೇ ಎಂದು ಪೂರ್ಣರೂಪದಿಂದ ಅರಿತುಕೊಳ್ಳುವದು ವಿದ್ಯೆ (ಭಾ.ಭಾ.೧೩೩,೧೪೫). ಮಿಗಿಲಿಲ್ಲದಷ್ಟು ಪ್ರಿಯವಾಗಿರುವ (ಭಾ. ಭಾ. ೧೪೬) ಈ ಬ್ರಹ್ಮವೇ ನನ್ನ ಆತ್ಮನು ಎಂಬ ತಿಳಿವಳಿಕೆಯ ರೂಪವಾದ ವಿದ್ಯೆಯು ಬಂದರೆ ಎಲ್ಲವನ್ನೂ ತಿಳಿದಂತೆ (ಭಾ.ಭಾ.೧೪೪). ಬ್ರಹ್ಮವನ್ನರಿತವನು ದೇವಾದಿಗಳಿಗೂ ಆತ್ಮನಾಗಿರುವದರಿಂದ ಸ್ವತಂತ್ರನು (ಭಾ.ಭಾ. ೧೭೦) ; ಅದನ್ನರಿಯದವನು ದೇವಾದಿಗಳಿಗೆ ಪಶುವಿನಂತೆ ಉಪಕಾರಮಾಡಿಕೊಂಡಿರುವದರಿಂದ ಅಸ್ವತಂತ್ರನು (ಭಾ. ಭಾ. ೧೭೬)- ಎಂದು ವಿದ್ಯಾವಿದ್ಯೆಗಳನ್ನು ವಿಂಗಡಿಸಿ ತೋರಿಸಿರುವದು ಈ ಸಂಗ್ರಹಗ್ರಂಥದ ಎರಡನೆಯ ಭಾಗವು.

ಈ ವಿದ್ಯಾವಿದ್ಯೆಗಳನ್ನು ಉಪನಿಷತ್ತಿನಲ್ಲಿ ಮುಂದೆ ವಿವರಿಸಿದೆ (ಭಾ ಭಾ. ೧೭೭). ಒಂದನೆಯ ಅಧ್ಯಾಯದ ಆರನೆಯ ಬ್ರಾಹ್ಮಣವು ಪೂರ್ಣವಾಗುವವರೆಗೂ ಅವಿದ್ಯೆಯ ವಿಷಯವನ್ನೇ ವಿವರಿಸಿದೆ. ಎರಡನೆಯ ಅಧ್ಯಾಯದಲ್ಲಿ ವಿದ್ಯಾವಿಷಯವನ್ನು ವಿವರಿಸಿದೆ. ಅವಿದ್ಯಾವಿಷಯವು ಶರೀರವೆಂಬ ಕಾರ್ಯ, ಪ್ರಾಣನೆಂಬ ಕರಣ- ಎಂದು ಎರಡು ಬಗೆಯಾಗಿರುವದು. ಕರಣಾತ್ಮನಾದ ಪ್ರಾಣನು ಸಮಷ್ಟಿರೂಪನಾಗಿ ಒಬ್ಬನೇ ಆದರೂ ಸೂರ್ಯಾದಿಬಾಹ್ಯಾಧಾರಗಳಲ್ಲಿ ಬೇರೆಬೇರೆಯಾಗಿದ್ದುಕೊಂಡು ನಾನಾರೂಪನಾಗಿಯೂ ಇರುತ್ತಾನೆ. ಇವನಿಗಿಂತ ಬೇರೆಯಾದ ಆತ್ಮನೇ ಇಲ್ಲ- ಎಂಬ ಪೂರ್ವಪಕ್ಷವನ್ನು ತೆಗೆದು (ಭಾ.ಭಾ. ೨೬೦) ಒಂದನೆಯ ಬ್ರಾಹ್ಮಣದಲ್ಲಿ ಹೇಳಿರುವದೇನೆಂದರೆ, ಈ ಪ್ರಾಣನಿಗಿಂತಲೂ ಅಧಿಕನಾಗಿ ನಿರ್ವಿಶೇಷದಿಂದ ಅಸಂಸಾರಿಯಾದ ಪರಮಾತ್ಮನೊಬ್ಬನು ಇರುತ್ತಾನೆ. ಜಾಗ್ರತ್ತಿನಲ್ಲಿರುವ ನಮ್ಮ ಕಾರ್ಯಕರಣಗಳೂ ಕನಸಿನಲ್ಲಿ ತೋರುವ ವಾಸನೆಗಳೂ ಅವನಿಗೆ ದೃಶ್ಯವಾಗಿರುತ್ತದೆ (ಭಾ. ಭಾ. ೨೭೯). ಸುಷುಪ್ತಿಯಲ್ಲಿ ಅವನಲ್ಲಿಯೇ ಜೀವನು ಒಂದಾಗಿರುತ್ತಾನೆ; ಆಗ ಅವನು ಕ್ರಿಯಾಕಾರಕಫಲಗಳಿಗಿಂತ ವಿಲಕ್ಷಣನೂ (ಭಾ.ಭಾ. ೨೮೮) ಅಸಂಸಾರಿಯೂ (ಭಾ. ಭಾ. ೨೮೯, ೨೯೮, ೩೦೦) ಆಗಿರುತ್ತಾನೆ. ಸುಷುಪ್ತಿಯಲ್ಲಿ ಎಲ್ಲಾ ಪ್ರಾಣಗಳೂ ಲೋಕಗಳೂ ದೇವತೆಗಳೂ ಭೂತಗಳೂ ಈ ಆತ್ಮನಲ್ಲಿ ಲಯವಾಗಿದ್ದು ಬೆಂಕಿಯ ಕಿಡಿಗಳು ಸಿಡಿದುಬರುವಂತೆ ಎಚ್ಚರವಾಗುತ್ತಲೂ ಹೊರತೋರಿಕೊಳ್ಳುವವು (ಭಾ. ಭಾ. ೩೦೩). ಈ ಪರಮಾತ್ಮನು ಸತ್ಯಗಳ ಸತ್ಯವು ; ಏಕೆಂದರೆ ಪ್ರಾಣಗಳು ಸತ್ಯವು, ಇವನು ಅವುಗಳ ಸತ್ಯವಾಗಿರುತ್ತಾನೆ (೩೦೪).

ಎರಡು ಮೂರನೆಯ ಬ್ರಾಹ್ಮಣಗಳಲ್ಲಿ ಪ್ರಾಣಗಳ ಸ್ವರೂಪವನ್ನೂ ಪ್ರಾಣಗಳು ಸತ್ಯವೆಂಬುದು ಹೇಗೆಂಬುದನ್ನೂ ತಿಳಿಸಿ ಪರಮಾತ್ಮನು ಸತ್ಯದ ಸತ್ಯವು ಹೇಗೆಂಬುದನ್ನು ತಿಳಿಸಿದೆ (ಭಾ.ಭಾ. ೩೪೫). ಪರಮಾತ್ಮನನ್ನು ನಿರ್ವಿಶೇಷರೂಪದಿಂದ 'ನೇತಿ ನೇತಿ' ಎಂದು ಮಾತ್ರ ತಿಳಿಸಬಹುದು (ಭಾ.ಭಾ.೩೩೪, ೩೩೫, ೩೪೭, ೩೪೮, ೩೫೦) ಎಂದು ಹೇಳಿದೆ. ನಾಲ್ಕನೆಯ ಬ್ರಾಹ್ಮಣದಲ್ಲಿ ಸರ್ವಕರ್ಮಸಂನ್ಯಾಸಸಹಿತವಾದ ಜ್ಞಾನವೇ ಮೋಕ್ಷಕ್ಕೆ ಸಾಧನವೆಂಬುದನ್ನು (ಭಾ. ಭಾ. ೩೫೩) ತಿಳಿಸಿದೆ. ಆತ್ಮನು ಎಲ್ಲಕ್ಕಿಂತಲೂ ಪ್ರಿಯನೆಂಬುದನ್ನೂ (ಭಾ. ಭಾ. ೩೫೮) ಅವನನ್ನು ಅರಿತರೆ ಎಲ್ಲವನ್ನೂ ಅರಿತಂತೆ ಎಂಬದನ್ನೂ (ಭಾ.ಭಾ. ೩೫೯) ಸದೃಷ್ಟಾಂತವಾಗಿ (ಭಾ. ಭಾ. ೩೬೧ ರಿಂದ ೩೬೯) ತಿಳಿಸಿಕೊಟ್ಟಿದೆ. ಆತ್ಮನೇ ಎಲ್ಲವೂ ಎಂಬುದನ್ನು ಮನಗಂಡ ಜೀವನು ಲವಣಸಮುದ್ರದಲ್ಲಿ ಕರಗುವ ಉಪ್ಪಿನಂತೆ ಪರಮಾತ್ಮನಲ್ಲಿ ಸೇರಿ ಜೀವನ್ಮುಕ್ತನಾಗಿರುವನು (ಭಾ. ಭಾ. ೩೭೧, ೩೭೩), ಅವನ ದೃಷ್ಟಿಯಿಂದ ಜ್ಞಾತೃಜ್ಞೇಯಗಳೆಂಬ ವಿಭಾಗವು ಇರುವದಿಲ್ಲ (ಭಾ. ಭಾ. ೩೭೬,೩೭೭)– ಎಂದು ತಿಳಿಸಿದೆ. ಐದನೆಯ ಬ್ರಾಹ್ಮಣದಲ್ಲಿ ಪೃಥಿವ್ಯಾದಿಭೂತಗಳೂ ದೇವತಾಗಣಗಳೂ ಕಾರ್ಯಕರಣಸಂಘಾತರೂಪವನ್ನು ಧರಿಸಿ ಪರಸ್ಪರವಾಗಿ ಉಪಕಾರ್ಯೋಪಕಾರಕವಾಗಿರುತ್ತವೆಯಾದ್ದರಿಂದ ಮಧು ; ಆದ್ದರಿಂದ ಅವು ಏಕಕಾರಣಪೂರ್ವಕವಾಗಿರಬೇಕು (ಭಾ. ಭಾ. ೩೭೯, ೩೮೧). ಕರ್ಮಕ್ಕೆ ಹೇತುವಾದ ಸತ್ಯಧರ್ಮಗಳೂ ಸಾಮಾನ್ಯವಿಶೇಷರೂಪದಿಂದ ಹೀಗೆಯೇ ಮಧು (ಭಾ.ಭಾ. ೩೮೩,೩೮೪); ಮನುಷ್ಯಾದಿಜಾತಿಯೂ, ತದ್ವಿಶಿಷ್ಟವಾದ ಕಾರ್ಯಕರಣಸಂಘಾತಸಾಮಾನ್ಯವೂ, ಅದರೊಳಗಿನ ಲಿಂಗಶರೀರವೂ, ಅವುಗಳುಳ್ಳ ವಿಜ್ಞಾನಮಯನೂ ಹೀಗೆಯೇ ಪರಸ್ಪರವಾಗಿ ಮಧು (ಭಾ.ಭಾ. ೩೮೬). ಈ ವಿಜ್ಞಾನಮಯನು ಪರಮಾತ್ಮನಿಗಿಂತ ಭಿನ್ನನಲ್ಲವೆಂದು ಅರಿತುಕೊಂಡ ಜ್ಞಾನಿಯು ಪರಮಾತ್ಮಾಭಿನ್ನನಾಗಿರುವದರಿಂದ ಸರ್ವಭೂತಾಧಿಪತಿಯೂ ಸರ್ವರಿಗೂ ರಾಜನೂ ಆಗಿರುತ್ತಾನೆ; ಅವನಲ್ಲಿಯೇ ಸರ್ವಪ್ರಾಣಗಳೂ, ಸರ್ವಾತ್ಮರುಗಳೂ, ಹೆಚ್ಚೇಕೆ ? ಸರ್ವಜಗತ್ತೂ ಹೊಂದಿಕೊಂಡಿರುತ್ತದೆ– ಎಂದು ಆತ್ಮವಿದ್ಯೆಯನ್ನೇ ಪ್ರಕಾರಾಂತರದಿಂದ ತಿಳಿಸಿದೆ.

ಆರನೆಯ ಬ್ರಾಹ್ಮಣದಲ್ಲಿ ಈ ವಿದ್ಯೆಯನ್ನು ಪ್ರಚಾರಕ್ಕೆ ತಂದಿರುವ ಗುರುಶಿಷ್ಯಪರಂಪರೆಯ ಋಷಿಗಳ ವಂಶವನ್ನು ಕೊಟ್ಟಿರುತ್ತದೆ.

## ಭಾಷ್ಯದ ಚರ್ಚೆಗಳು

ಮಧುಕಾಂಡವು ಆಗಮಪ್ರಧಾನವಾಗಿರುವದರಿಂದಲೇ ಇದರಲ್ಲಿ ಕೆಲವು ಯುಕ್ತಿಗಳೂ ಇರುವವೆಂದಾಗುವದಷ್ಟೆ. ಈ ಯುಕ್ತಿಗಳನ್ನು ಭಾಷ್ಯಕಾರರು

ವಿಸ್ತಾರವಾಗಿ ಚರ್ಚಿಸಿರುತ್ತಾರೆ. ಇಂಥ ಚರ್ಚೆಗಳನ್ನು ಮನನಮಾಡುವದರಿಂದ ಜಿಜ್ಞಾಸುಗಳಿಗೆ ವೇದಾಂತಾರ್ಥದ ವಿಷಯದಲ್ಲುಂಟಾಗಬಹುದಾದ ಸಂಶಯಗಳೆಲ್ಲ ನಿವಾರಣೆಯಾಗುವವು. ಈ ಚರ್ಚೆಗಳು ಮತ್ತಷ್ಟು ಸ್ಫುಟವಾಗುವದಕ್ಕೆಂದು ನಾವು ಅವನ್ನು ತಲೆಬರಹಗಳಿಂದ ವಿಂಗಡಿಸಿ ವಾರ್ತಿಕ ಮತ್ತು ಟೀಕೆ- ಇವುಗಳ ಸಹಾಯದಿಂದ ಟಿಪ್ಪಣಿಗಳನ್ನು ಜೋಡಿಸಿರುತ್ತೇವೆ.

## ಮಧುಕಾಂಡದಲ್ಲಿ ಪರಾಮೃಷ್ಟವಾಗಿರುವ ಋಕ್ಕುಗಳು

ಈ ಕಾಂಡದಲ್ಲಿ ತತ್ತ್ವಾರ್ಥವನ್ನು ಸಂಗ್ರಹಿಸಿ ತಿಳಿಸಿರುವ ಕೆಲವು ಋಗ್ವೇದಮಂತ್ರಗಳ ಪರಾಮರ್ಶವಿರುತ್ತದೆ. ಅವುಗಳನ್ನು ವಾಚಕರು ಮನದಂದುಕೊಳ್ಳುವದರಿಂದ ಲಾಭವುಂಟು.

(೧) **ವಾಮದೇವಋಷಿಯು** ಕಂಡುಹಿಡಿದ (ಋ. ಸಂ. ಮಂ. ೪-೨೬-೧) "ಅಹಂ ಮನುರಭವಮ್" ಎಂಬ ಋಕ್ಕಿಗೆ ದೇವತೆಯು ಇಂದ್ರನು. ಈ ಋಕ್ಕಿರುವ ಸೂಕ್ತದಲ್ಲಿ ಇಂದ್ರನು ತನ್ನ ಪರಾಕ್ರಮವನ್ನು ಹೇಳಿಕೊಂಡಿರುತ್ತಾನೆ. ವಾಮದೇವನು ಈ ಮಂತ್ರವನ್ನು ಕಂಡುಹಿಡಿದಾಗ ನಾನು ಬ್ರಹ್ಮವೆಂಬ ಅರಿವು ಅವನಿಗಿತ್ತು ಎಂದು ಈ ಉಪನಿಷತ್ತಿನಲ್ಲಿ (೧-೪-೧೦) ಹೇಳಿದೆ.

(೨) **ಕಕ್ಷೀವಂತನೆಂಬ** ಋಷಿಯಿಂದ ದೃಷ್ಟವಾಗಿರುವ (ಋ.ಸಂ.ಮಂ. ೧-೧೧೬-೧೨) "ತದ್ವಾಂ ನರಾ ಸನಯೇ" ಎಂಬ ಋಕ್ಕೂ (ಋ.ಸಂ.ಮಂ. ೧-೧೧೭-೨೨) "ಆಥರ್ವಣಾಯಾಶ್ವಿನಾ ದಧೀಚೇ" ಎಂಬ ಋಕ್ಕೂ ಅಶ್ವಿನೀದೇವತೆಗಳ ಪರವಾಗಿರುತ್ತವೆ. ಇವನ್ನು ಈ ಉಪನಿಷತ್ತಿನಲ್ಲಿಯೂ ಆ ದೇವತೆಗಳನ್ನು ಸಂಬೋಧಿಸಿಯೇ ಹೇಳಿದೆಯಾದರೂ ಪ್ರವರ್ಗ್ಯಕರ್ಮದ ಮತ್ತು ಆತ್ಮಜ್ಞಾನವೆಂಬ ಕಕ್ಷ್ಯದ ಪರಾಮರ್ಶಕ್ಕೆ ಇವನ್ನು ಉಪಯೋಗಿಸಿಕೊಂಡಿರುತ್ತದೆ.

(೩) **ಗರ್ಗನೆಂಬ** ಋಷಿಯಿಂದ ದೃಷ್ಟವಾಗಿರುವ (ಋ. ಸಂ. ಮಂ. ೬-೪೭-೧೮) "ರೂಪಂ ರೂಪಂ ಪ್ರತಿರೂಪೋ ಬಭೂವ" ಎಂಬ ಮಂತ್ರವು ಋಗ್ವೇದದಲ್ಲಿ ಇಂದ್ರದೇವತಾಕವಾಗಿರುತ್ತದೆ. ಆದರೆ ಉಪನಿಷತ್ತಿನಲ್ಲಿ (೨-೫-೧೯) ಪರಮಾತ್ಮನು ಉಪಾಧಿಗಳಿಂದ ನಾನಾರೂಪವಾಗಿ ಕಾಣುವನೆಂದು ತಿಳಿಸುವದಕ್ಕೆ ಉಪಯೋಗಿಸಿಕೊಂಡಿದೆ.

ಹೀಗೆ ಸಂಹಿತೆಯ ಮಂತ್ರಗಳನ್ನು ತತ್ತ್ವಾರ್ಥಪರವಾಗಿ ಉಪಯೋಗಿಸುವದು ಉಪನಿಷತ್ತುಗಳ ಶೈಲಿಯಾಗಿರುತ್ತದೆ. ಈ ಪದ್ಧತಿಯು ಸರಿಯಲ್ಲವೆಂದೂ ಋಷಿಯ ಮನಸ್ಸಿನಲ್ಲಿ ಈ ಅಭಿಪ್ರಾಯಗಳು ಇದ್ದವೆಂಬುದಕ್ಕೆ

ಪ್ರಮಾಣವಿಲ್ಲವೆಂದೂ ಐತಿಹಾಸಿಕದೃಷ್ಟಿಯ ವಿದ್ವಾಂಸರುಗಳು ಕೆಲವರು ವಾದಿಸುತ್ತಿರುವರು. ಆದರೂ ಕರ್ಮಪರವಾಕ್ಯಗಳಿಗೆ ಜ್ಞಾನೋಪಾಸನೆಗಳಲ್ಲಿಯೂ ಅವಾಂತರತಾತ್ಪರ್ಯವಿರಬಹುದೆಂಬ ಸಾಂಪ್ರದಾಯಿಕಾಭಿಪ್ರಾಯವನ್ನು ಇಲ್ಲಿ ಉದಾಹೃತವಾಗಿರುವಂಥ ಮಂತ್ರಗಳ ಆಧಾರದಿಂದ ಜಿಜ್ಞಾಸುಗಳು ನಂಬುವದಕ್ಕೆ ಅವಕಾಶವಿರುತ್ತದೆ. ಇದು ಹೇಗೇ ಇರಲಿ, ಉಪನಿಷತ್ತುಗಳ ಅರ್ಥವು ಅನುಭವದಲ್ಲಿ ಪರ್ಯವಸಾನವಾಗುವದೆಂದು ಪ್ರತಿಜ್ಞೆ ಮಾಡಿರುವ ಶಾಂಕರವೇದಾಂತದಲ್ಲಿ ಈ ಬಗೆಯ ಸಂಶಯಗಳಿಗೇ ಎಡೆಯಿರುವದಿಲ್ಲವೆಂಬುದು ಸ್ಪಷ್ಟವಾಗಿದೆ.

## ಉಪಸಂಹಾರ

ಈ ಪೀಠಿಕೆಯು ಈಗಾಗಲೆ ದೀರ್ಘವಾಗಿರುತ್ತದೆ. ಆದ್ದರಿಂದ ಇಲ್ಲಿ ವಿವೇಚನೆಮಾಡದೆ ಉಳಿದಿರಬಹುದಾದ ಬೃಹದಾರಣ್ಯಕಭಾಷ್ಯದ ವಿಷಯಗಳನ್ನು ಎರಡನೆಯ ಸಂಪುಟದ ಪೀಠಿಕೆಗೆ ಉಳಿಸಿಕೊಳ್ಳಬೇಕಾಗಿದೆ. ಶ್ರೀಶಂಕರಭಗವತ್ಪಾದರವರ ಉಪನಿಷದ್ಭಾಷ್ಯಗಳನ್ನು ಅವಗಾಹನೆಗೆ ಮಾಡಬೇಕೆಂದಿರುವ ಮುಮುಕ್ಷುಗಳಿಗೆ ಈ ಅನುವಾದದಿಂದ ಒಂದಿಷ್ಟಾದರೂ ಪ್ರಯೋಜನವಾದರೆ ನಾವು ಧನ್ಯರು.

ವಿಜಯಸಂವತ್ಸರದ ಜ್ಯೇಷ್ಠ ಶುದ್ಧ ಪಂಚಮಿ
ಅಧ್ಯಾತ್ಮಪ್ರಕಾಶಕಾರ್ಯಾಲಯ } ಅನುವಾದಕ.

# ವಿಷಯಾನುಕ್ರಮಣಿಕೆ

## ಮಧುಕಾಂಡ - ಒಂದನೆಯ ಅಧ್ಯಾಯ

**ವಿಶೇಷ:** ಇಲ್ಲಿ ಭಾಷ್ಯದ ಚರ್ಚಾಭಾಗಗಳನ್ನು ಸೇರಿಸಿಲ್ಲ. ಕ್ರಂಸದಲ್ಲಿರುವ ಸಂಖ್ಯೆಗಳು ಭಾಷ್ಯಭಾಗಗಳನ್ನು ಸೂಚಿಸುತ್ತವೆ.

### ಭಾಷ್ಯಕಾರರ ಅವತರಣಿಕೆ

ಗ್ರಂಥಾರಂಭಪ್ರತಿಜ್ಞೆ (೧)- ಬೃಹದಾರಣ್ಯಕೋಪನಿಷತ್ತೆಂಬ ನಾಮದ ನಿರ್ವಚನ (೨)- ಕರ್ಮಕಾಂಡಕ್ಕೂ ಉಪನಿಷತ್ತಿಗೂ ಸಂಬಂಧ (೩-೫)- ಅಶ್ವಮೇಧೋಪಾಸನಾಗ್ರಂಥದ ಸಂಬಂಧ (೬)- ಉಪನಿಷತ್ಸಂಬಂಧಭಾಷ್ಯದ ಉಪಸಂಹಾರ (೭).

ಪುಟ ೧-೧೩

### ಒಂದನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೮)- ಅಶ್ವದ ಅವಯವಗಳಲ್ಲಿ ಕಾಲಾದಿದೃಷ್ಟಿ (೯-೧೦)- ಅಶ್ವಮೇಧಸಂಬಂಧಿಯಾದ ಮಹಿಮೆಗಳ ಉಪಾಸನೆ (೧೧-೧೨).

ಪುಟ ೧೪-೨೪

### ಎರಡನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೧೩)- ಕಾರ್ಯಜಗತ್ತು ಮೃತ್ಯುರೂಪಕಾರಣದಿಂದ ಆವೃತವಾಗಿತ್ತು (೧೪)- ಮೃತ್ಯುವೆಂದರೆ ಹಿರಣ್ಯಗರ್ಭ (೨೫)- ಮನಸ್ಸಿನ ಸೃಷ್ಟಿ (೨೬)- ಅಪ್ಪಿನ ಉತ್ಪತ್ತಿ (೨೭)- ವಿರಾಡ್ರೂಪನಾದ ಅಗ್ನಿಯ ಉತ್ಪತ್ತಿ (೨೮-೨೯) ಅಗ್ನಿಯ ಅವಯವಗಳಲ್ಲಿ ಪ್ರಾಗಾದಿದೃಷ್ಟಿ (೩೦-೩೧)- ಸಂವತ್ಸರವಾಕ್ಕುಗಳ ಉತ್ಪತ್ತಿ (೩೨-೩೩)- ಋಗಾದಿಗಳ ಉತ್ಪತ್ತಿ, ಮೃತ್ಯುವಿನ ಅದಿತಿತ್ವ (೩೪-೩೫)- ಪ್ರಜಾಪತಿಯ ಶರೀರವು ಅಶ್ವವಾದದ್ದು (೩೬)- ಅಶ್ವಮೇಧೋಪಾಸನೆಯ ಫಲ (೩೭-೪೨).

ಪುಟ ೨೫-೭೧

### ಒಂದನೆಯ ಎರಡನೆಯ ಬ್ರಾಹ್ಮಣಗಳ ಸಾರ

ಪುಟ ೭೨-೭೪

### ಮೂರನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೪೩)- ಆಖ್ಯಾಯಿಕಾಸಂಬಂಧ (೪೪)- ಪ್ರಾಣಗಳು ದೇವಾಸುರರೆಂಬುದು ಹೇಗೆ ? (೪೫)- ದೇವಾಸುರರ ಸ್ಪರ್ಧೆ (೪೬)- ದೇವತೆಗಳ ಆಲೋಚನೆ (೪೭)- ವಾಗಾದಿದೇವತೆಗಳು ಉದ್ಗಾನಮಾಡಿದ್ದು, ಪಾಪವಿದ್ಧ

ವಾದದ್ದು (೫೪-೬೧)- ಪ್ರಾಣನ ಉದ್ಗಾನ, ಅಸುರರ ವಿನಾಶ (೬೨)- ಪ್ರಾಣೋಪಾಸನೆಯ ಫಲ (೬೩)- ಮುಖ್ಯಪ್ರಾಣನು ಅಂಗಿರಸನು, ವಿಶುದ್ಧನು ಎಂದು ಉಪಾಸನೆಮಾಡಬೇಕು (೬೪-೬೭)- ಪ್ರಾಣನು ದೇವತೆಗಳ ಪಾಪವನ್ನು ದೂರವಾಗಿರಿಸಿ ಅವರನ್ನು ದೇವಭಾವಕ್ಕೆ ತಲುಪಿಸಿದ್ದು (೬೮-೭೪)- ಪ್ರಾಣನು ಅನ್ನವನ್ನು ಆಗಾನಮಾಡಿಕೊಂಡದ್ದು, ವಾಗಾದಿಗಳ ಪೋಷಕನಾದದ್ದು, ಉಪಾಸನೆಯ ಫಲ (೭೫-೭೮) ಪ್ರಾಣನು ಕಾರ್ಯಕರಣಗಳಿಗೆಲ್ಲ ಆತ್ಮನು (೭೯-೮೦)- ಪ್ರಾಣನು ಋಗ್ಯಜುಃಸಾಮಗಳಿಗೂ ಆತ್ಮನು (೮೧-೮೬)- ಪ್ರಾಣನು ಉದ್ಗೀಥಕ್ಕೆ ಆತ್ಮನು (೮೬-೮೮)- ಸಾಮರೂಪನಾದ ಪ್ರಾಣನ ಸ್ವತ್ತು, ಸುವರ್ಣ, ಪ್ರತಿಷ್ಠೆ- ಎಂಬ ಗುಣಗಳು (೮೯-೯೧)- ಪ್ರಾಣೋಪಾಸಕನಿಗೆ ಅಭ್ಯಾರೋಹಜಪವಿಧಿ (೯೨-೯೪)- ಕರ್ಮರಹಿತೋಪಾಸನೆಗೂ ಫಲವುಂಟು (೯೫)- ಪ್ರಾಣೋಪಾಸನೆಯು ಸ್ವರೂಪ (೯೬).

ಪುಟ ೭೫-೧೬೧

**ಮೂರನೆಯ ಬ್ರಾಹ್ಮಣದ ಸಾರ** ಪುಟ ೧೬೨-೧೬೪

## ನಾಲ್ಕನೆಯ ಬ್ರಾಹ್ಮಣ

ಮುಂದಿನ ಗ್ರಂಥದ ಸಂಬಂಧ (೯೫)- ಪ್ರಜಾಪತಿಯು ಅಹಂನಾಮನಾದದ್ದು (೯೮)- ಅವನು ಪುರುಷನೆನಿಸಿದ್ದು (೯೯)- ಜ್ಞಾನಕರ್ಮಭಾವನೆಗಳಿಗೆ ಫಲ (೧೦೦)- ಪ್ರಜಾಪತಿಗೆ ಭಯಪ್ರಾಪ್ತಿ, ಅದರ ನಿವೃತ್ತಿ (೧೦೧-೧೦೩)- ಪ್ರಜಾಪತಿಯು ಮನುಶತರೂಪೆಯರನ್ನು ಸೃಷ್ಟಿಸಿದ್ದು (೧೦೬-೧೦೭)- ಮನುಶತರೂಪೆಯರಿಂದ ಪ್ರಾಣಿಗಳ ಸೃಷ್ಟಿ (೧೦೮)- ಪ್ರಜಾಪತಿಗೆ ಸೃಷ್ಟಿ ಎಂಬ ಹೆಸರು (೧೦೯)- ಪ್ರಜಾಪತಿಯು ದೇವಾದಿಗಳನ್ನು ಸೃಷ್ಟಿಸಿದ್ದು (೧೧೦-೧೧೧)- ಎಲ್ಲವೂ ಅಗ್ನೀಷೋಮದಲ್ಲಿ ಅಡಕ (೧೧೪-೧೧೫)- ಜಗತ್ತಿನ ಅವ್ಯಾಕೃತಾವಸ್ಥೆ (೧೧೬-೧೧೮)- ನಾಮವ್ಯಾಕರಣ, ಈಶ್ವರನ ಪ್ರವೇಶ (೧೧೯-೧೨೦)- ಆತ್ಮನು ಕಾರ್ಯದಲ್ಲಿ ಕಂಡುಬರುತ್ತಿರುವದು ಅಸಂಪೂರ್ಣರೂಪದಿಂದ (೧೨೯-೧೩೨)- ಅವನನ್ನು ಆತ್ಮನೆಂದೇ ಅರಿತರೆ ಪೂರ್ಣಜ್ಞಾನ (೧೩೬)- ಆತ್ಮಜ್ಞಾನದಿಂದ ಎಲ್ಲದರ ಜ್ಞಾನ (೧೪೪-೧೪೬)- ಆತ್ಮನೇ ನಿರತಿಶಯಪ್ರಿಯನು (೧೪೭-೧೪೮) ಬ್ರಹ್ಮವೇ ನನ್ನ ಆತ್ಮನೆಂಬ ಜ್ಞಾನದಿಂದ ಸರ್ವಾತ್ಮಕಭಾವ (೧೪೯,೧೬೨-೧೬೭)- ಬ್ರಹ್ಮಜ್ಞಾನಿಗೆ ದೇವತೆಗಳೂ ಫಲಪ್ರಾಪ್ತಿಗೆ ಅಡ್ಡಿಮಾಡಲಾರರು (೧೬೭-೧೭೦)- ವಿದ್ಯಾವಿದ್ಯೆಗಳ ವಿವೇಕವೇ ಉಪನಿಷತ್ತಿನ ಗುರಿ (೧೭೭)- ಅವಿದ್ಯೆಯ ವಿವರಣೆ: ದೇವತೆಗಳು ಅಜ್ಞಾನಿಗೆ ವಿಘ್ನವನ್ನು ಮಾಡುತ್ತಾರೆ (೧೭೮)- ವರ್ಣಾಶ್ರಮನಿಮಿತ್ತವಾಗಿ ಕರ್ಮಬಂಧ (೧೭೯-೧೮೮)- ಆತ್ಮಜ್ಞಾನಿಗೆ ಕರ್ಮಕ್ಷಯವಿಲ್ಲ (೧೮೯)- ಕರ್ಮಾಧಿಕಾರಿಯು ಎಲ್ಲರಿಗೂ ಉಪಕಾರಕನು (೧೯೨-೧೯೩)- ಅಜ್ಞಾನಿಗೆ ಅಸಂಪೂರ್ಣತ್ವಭಾವನೆ, ಕಾಮ (೧೯೪-೧೯೮)- ಪಾಙ್ಕ್ತಕರ್ಮ (೧೯೯).

ಪುಟ ೧೬೫-೩೫೭

**ನಾಲ್ಕನೆಯ ಬ್ರಾಹ್ಮಣದ ಸಾರ** ಪುಟ ೩೫೮-೩೬೦

## ಐದನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೨೦೦)- ಪಾಙ್ಕ್ತಕರ್ಮದಿಂದ ಸಪ್ತಾನ್ನದ ಸೃಷ್ಟಿ

ಯೂ ವಿನಿಯೋಗವೂ (೨೦೧–೨೦೩, ೨೦೫–೨೦೮)- ಅನ್ನಗಳು ಕ್ಷಯವಾಗುವದಿಲ್ಲವೇಕೆ ? (೨೦೯–೨೧೦)- ಮನೋವಾಕ್ಪ್ರಾಣರೂಪಾನ್ನಗಳ ವಿವರಣೆ (೨೧೧–೨೨೩)- ಈ ಅನ್ನಗಳು ಮೂರೂ ಸಮ, ಅನಂತ ಎಂದು ಉಪಾಸನೆಮಾಡಬೇಕು (೨೨೪)- ಪಾಙ್ಕ್ತದಲ್ಲಿ ವಿತ್ತಕರ್ಮಗಳ ವಿವರಣೆ (೨೨೫–೨೨೯)- ಪುತ್ರ, ಕರ್ಮ, ಅಪರವಿದ್ಯೆ- ಇವುಗಳಿಗೆ ಮನುಷ್ಯಲೋಕ, ದೇವಲೋಕ ಎಂಬ ಸಾಧ್ಯಗಳು (೨೩೦–೨೩೧)- ಪುತ್ರನಿಂದ ಮನುಷ್ಯಲೋಕವನ್ನು ಗೆದ್ದುಕೊಳ್ಳುವ ಸಂಪ್ರತ್ತಿಕರ್ಮ (೨೩೨-೨೪೧)- ತ್ರ್ಯನ್ನಾತ್ಮದರ್ಶನದ ಫಲ (೨೪೨–೨೪೩)- ಪ್ರಾಣವಾಯುಗಳ ವ್ರತ (೨೪೪–೨೫೨)- ಪ್ರಾಣೋಪಾಸನೆಯ ಫಲ (೨೫೩).

ಪುಟ ೩೬೧–೪೪೧

## ಆರನೆಯ ಬ್ರಾಹ್ಮಣ

ಜಗತ್ತೆಲ್ಲ ನಾಮರೂಪಕರ್ಮಾತ್ಮಕ (೨೫೪–೨೫೮)- ಪ್ರಾಣಾತ್ಮವು ನಾಮರೂಪಗಳಿಂದ ಮರೆಯಾಗಿರುವದು (೨೫೯).

ಪುಟ ೪೪೨–೪೪೯

### ಐದನೆಯ ಆರನೆಯ ಬ್ರಾಹ್ಮಣಗಳ ಸಾರ

ಪುಟ ೪೫೦–೪೫೨

# ಮಧುಕಾಂಡ - ಎರಡನೆಯ ಅಧ್ಯಾಯ

## ಒಂದನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೨೬೦)- ಗಾರ್ಗ್ಯಾಜಾತಶತ್ರುಗಳ ಆಖ್ಯಾಯಿಕೆಯ ಪ್ರಯೋಜನ (೨೬೧)- ಗಾರ್ಗ್ಯನು ನಿನಗೆ ಬ್ರಹ್ಮವನ್ನು ಹೇಳಿಕೊಡುವೆನು ಎಂದು ಅಜಾತಶತ್ರುವಿನ ಬಳಿಗೆ ಬಂದದ್ದು (೨೬೨)- ಗಾರ್ಗ್ಯನು ಆದಿತ್ಯಾದಿಬ್ರಹ್ಮಗಳನ್ನು ಉಪದೇಶಿಸಿದ್ದು, ಅಜಾತಶತ್ರುವು ತನಗೆ ಆ ಉಪಾಸನೆಗಳು ಸಂಪೂರ್ಣವಾಗಿ ತಿಳಿದಿವೆ ಎಂದದ್ದು (೨೬೩–೨೭೪)- ಗಾರ್ಗ್ಯನು ಅಜಾತಶತ್ರುವಿಗೆ ಶಿಷ್ಯನಾದದ್ದು (೨೭೫)- ಗಾರ್ಗ್ಯನು ಹೇಳಿದ ಅಪರಬ್ರಹ್ಮೋಪಾಸನೆಯೂ ವಿವಕ್ಷಿತ (೨೭೬–೨೭೭)- ಅಜಾತಶತ್ರುವು ಕೊಟ್ಟ ಸುಪ್ತಪುರುಷನ ದೃಷ್ಟಾಂತ (೨೭೮)- ಸುಪ್ತಪುರುಷನ ಸ್ವರೂಪ (೨೮೭)- ಸುಷುಪ್ತನು ತನ್ನ ಆತ್ಮನಾದ ಬ್ರಹ್ಮದಲ್ಲಿರುತ್ತಾನೆ (೨೮೮-೨೯೧)- ಸ್ವಪ್ನದಲ್ಲಿ ಕಾಣುವ ಅನುಭವಗಳು ಮಿಥ್ಯೆ (೨೯೨-೨೯೫)- ಆತ್ಮನು ಕ್ರಿಯಾಕಾರಕ ಫಲಶೂನ್ಯನು (೨೯೬)- ಸುಷುಪ್ತಿಯಲ್ಲಿ ಆತ್ಮನು ಅದ್ವಿತೀಯಾನಂದರೂಪನು (೨೯೭-೩೦೦)- ಆತ್ಮನಿಂದಲೇ ಪ್ರಾಣಾದಿಗಳ ಉತ್ಪತ್ತಿ (೩೦೩)- ಬ್ರಹ್ಮದ ರಹಸ್ಯಾಭಿಧಾನ (೩೦೪).

ಪುಟ ೪೫೩–೫೭೧

**ಒಂದನೆಯ ಬ್ರಾಹ್ಮಣದ ಸಾರ** ಪುಟ ೫೭೨-೫೭೩

## ಎರಡನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೩೨೮)- ಶಿಶುಸಂಜ್ಞಕಪ್ರಾಣನ ಉಪಾಸನೆಗಳೂ ಅವುಗಳ ಫಲಗಳೂ (೩೨೯-೩೩೩).

ಪುಟ ೫೭೪-೫೮೭

**ಎರಡನೆಯ ಬ್ರಾಹ್ಮಣದ ಸಾರ** ಪುಟ ೫೮೮

## ಮೂರನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೩೩೪)- ಬ್ರಹ್ಮದ ಮೂರ್ತಾಮೂರ್ತರೂಪಗಳ ಆಧ್ಯಾತ್ಮಿಕಾಧಿದೈವತಸ್ವರೂಪದ ವಿವರ (೩೩೫-೩೪೧)- ಲಿಂಗಾತ್ಮನ ರೂಪಗಳು (೩೪೬-೩೪೭)- ಪರಮಾತ್ಮನ ಶುದ್ಧಸ್ವರೂಪವು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದು ವರ್ಣಿಸುವದಕ್ಕೆ ತಕ್ಕದ್ದು (೩೪೮-೩೫೦)- ಪರಮಾತ್ಮನಿಗೆ ಸತ್ಯದ ಸತ್ಯವೆಂಬ ನಾಮವಿರುವದಕ್ಕೆ ಕಾರಣ (೩೫೦).

ಪುಟ ೫೮೯-೬೨೦

**ಮೂರನೆಯ ಬ್ರಾಹ್ಮಣದ ಸಾರ** ಪುಟ ೬೨೧

## ನಾಲ್ಕನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ, ಪಾರಿವ್ರಾಜ್ಯವಿಧಾನಕ್ಕಾಗಿ ಬ್ರಾಹ್ಮಣದ ಆರಂಭ (೩೫೧-೩೫೩)- ವಿತ್ತವು ಅಮೃತತ್ವಕ್ಕೆ ಸಾಧನವಲ್ಲ (೩೫೫)- ಅಮೃತತ್ವಕ್ಕೆ ಸಾಧನವೇನೆಂಬ ಪ್ರಶ್ನೆ (೩೫೬)- ಪ್ರಿಯತಮನಾದ ಆತ್ಮನನ್ನೇ ಶ್ರವಣಾದಿಗಳಿಂದ ಕಂಡುಕೊಳ್ಳಬೇಕು (೩೫೮-೩೫೯)- ದ್ವೈತವೆಲ್ಲ ಆತ್ಮನಲ್ಲಿ ಅಧ್ಯಾರೋಪಿತ, ಅದು ಆತ್ಮನಿಗಿಂತ ವ್ಯತಿರಿಕ್ತವಲ್ಲ (೩೬೦)- ಎಲ್ಲವೂ ಚಿದನುಗತವೆಂಬುದಕ್ಕೆ ದೃಷ್ಟಾಂತಗಳು (೩೬೧-೩೬೩)- ಉತ್ಪತ್ತಿಕಾಲದಲ್ಲಿಯೂ ಎಲ್ಲವೂ ಬ್ರಹ್ಮವೇ (೩೬೪-೩೬೫)- ಪ್ರಲಯಕಾಲದಲ್ಲಿಯೂ ಎಲ್ಲವೂ ಬ್ರಹ್ಮವೇ (೩೬೬-೩೬೭)- ಜ್ಞಾನದಿಂದಾಗುವ ಆತ್ಯಂತಿಕಪ್ರಲಯ (೩೭೦)- ಜ್ಞಾನದಿಂದ ಆತ್ಮನಲ್ಲಿ ಬೆರೆತವನಿಗೆ, ನೀರಿನಲ್ಲಿ ಕರಗಿದ ಉಪ್ಪಿನ ಹರಳಿನ ಹೋಲಿಕೆ (೩೭೧)- ಜ್ಞಾನದಿಂದ ಅಜ್ಞಾನವು ಹೋದರೆ ಆತ್ಮನು ವಿಜ್ಞಾನಘನನು (೩೭೨-೩೭೩)- ಜ್ಞಾನಿಗೆ ಯಾವ ವಿಶೇಷಾಭಿಮಾನವೂ ಇರುವದಿಲ್ಲ (೩೭೪-೩೭೫) - ಅವಿದ್ಯಾವಸ್ಥೆಯಲ್ಲಿರುವ ಕ್ರಿಯಾಕಾರಕಫಲವಿಭಾಗಜ್ಞಾನವು ಜ್ಞಾನಿಗೆ ಇರುವದಿಲ್ಲ (೩೭೬-೩೭೮).

ಪುಟ ೬೨೨-೬೭೨

**ನಾಲ್ಕನೆಯ ಬ್ರಾಹ್ಮಣದ ಸಾರ** ಪುಟ ೬೭೩-೬೭೪

## ಐದನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೩೭೯-೩೮೦)- ಪೃಥಿವ್ಯಾದಿಗಳಿಗೆ ಪರಸ್ಪರಮಧುತ್ವ (೩೮೧)-ಇದೆಲ್ಲವೂ ಆತ್ಮನೇ (೩೮೨)- ಅಬಾದಿಗಳಿಗೆ, ಅಗ್ನ್ಯಾದಿಗಳಿಗೆ, ವಾಯ್ವಾದಿ

ಗಳಿಗೆ, ಆದಿತ್ಯಾದಿಗಳಿಗೆ, ದಿಗಾದಿಗಳಿಗೆ, ಚಂದ್ರಾದಿಗಳಿಗೆ, ವಿದ್ಯುದಾದಿಗಳಿಗೆ, ಗುಡುಗು ಮುಂತಾದವುಗಳಿಗೆ, ಆಕಾಶಾದಿಗಳಿಗೆ ಪರಸ್ಪರಮಧುತ್ವ (೩೮೩–೩೯೧)- ಮುಂದಿನ ಮಧುಪರ್ಯಾಯಗಳ ಸಂಬಂಧ (೩೯೨)- ಧರ್ಮಾದಿಗಳಿಗೆ, ಸತ್ಯಾದಿಗಳಿಗೆ, ಮನುಷ್ಯಾದಿಜಾತಿಗಳಿಗೆ ಕಾರ್ಯಕರಣಸಂಘಾತಾದಿಗಳಿಗೆ ಪರಸ್ಪರಮಧುತ್ವ (೩೯೩–೩೯೬)- ಬ್ರಹ್ಮವಿದ್ಯೆಯಿಂದಾಗುವ ಸರ್ವಾತ್ಮತ್ವ (೩೯೭)- ಬ್ರಹ್ಮಜ್ಞಾನಿಯು ಸರ್ವಾಶ್ರಯನು (೩೯೮)- ಆತ್ಮತತ್ತ್ವವು ಆಗಮಮಾತ್ರಗಮ್ಯ (೩೯೯)- ಬ್ರಹ್ಮವಿದ್ಯೆಯ ಸ್ತುತಿ (೪೦೦–೪೦೭)- ಆತ್ಮನು ಇಂದ್ರಿಯಗಳನ್ನು ನೋಡಿದಾಗ ಅನೇಕರೂಪನು (೪೦೭)- ಇಂದ್ರಿಯಗಳೂ ಪರಮಾತ್ಮನೇ (೪೦೮).

ಪುಟ ೬೨೫–೨೧೮

**ಐದನೆಯ ಬ್ರಾಹ್ಮಣದ ಸಾರ** ಪುಟ ೨೧೯–೨೩೦

## ಆರನೆಯ ಬ್ರಾಹ್ಮಣ

ಬ್ರಹ್ಮವಿದ್ಯೆಯನ್ನು ಉಪದೇಶಿಸಿ ಬ್ರಹ್ಮಾದಿವಂಶಋಷಿಗಳ ಗುರುಶಿಷ್ಯಪರಂಪರೆ.

ಪುಟ ೨೩೧–೨೩೪

## ಪರಿಶಿಷ್ಟ

ಬೃಹದಾರಣ್ಯಕದ ಕಾಣ್ವಮಾಧ್ಯಂದಿನಪಾಠಭೇದಗಳು ಪುಟ ೨೩೫

ಕಂಡಿಕೆಗಳ ವರ್ಣಾನುಕ್ರಮಣಿಕೆ ಪುಟ ೨೩೯

ಶಬ್ದಾನುಕ್ರಮಣಿಕೆ ಪುಟ ೨೪೩

---

# ಮಧುಕಾಂಡದಲ್ಲಿ ಬಂದಿರುವ
# ಭಾಷ್ಯಚರ್ಚೆಗಳ ಅನುಕ್ರಮಣಿಕೆ




## ೧. ಕರ್ಮಕಾಂಡಕ್ಕೂ ಉಪನಿಷತ್ತಿಗೂ ಸಂಬಂಧ

ಕರ್ಮಕಾಂಡದ ವಿಷಯ (೩)- ಆತ್ಮನು ಪ್ರತ್ಯಕ್ಷಾನುಮಾನಗೋಚರನಲ್ಲ (೪)- ಜ್ಞಾನಕಾಂಡದ ವಿಷಯ (೫). ಪುಟ ೩-೧೦

## ೨. ಸತ್ಕಾರ್ಯವಾದಭಾಷ್ಯ

ಶೂನ್ಯವಾದಿಯ ಪಕ್ಷ (೧೫)- ಸಿದ್ಧಾಂತ: ಕಾರ್ಯಕಾರಣಗಳೆರಡೂ ಸತ್ತೇ (೧೬)- ಕಾರಣಸತ್ತ್ವಸ್ಥಾಪನ (೧೭)- ಕಾರಣಾನ್ವಯಬುದ್ಧಿಯು ಸಾದೃಶ್ಯದಿಂದಲ್ಲ (೧೮)- ಕಾರ್ಯಸತ್ತ್ವಸಾಧನ (೧೯). ಪುಟ ೨೬-೪೪

## ೩. ಪ್ರಾಣನಲ್ಲಿ ವಿಶುದ್ಧ್ಯಾದಿಗುಣಗಳು ನಿಜವಾಗಿಯೂ ಇವೆ

ಉಪಾಸನೆಯಲ್ಲಿ ಹೇಳಿದ್ದು ಅಯಥಾರ್ಥವೆಂಬುದಕ್ಕೆ ಪ್ರಮಾಣವಿಲ್ಲ (೪೯)- ನಾಮಾದಿಗಳಲ್ಲಿ ಬ್ರಹ್ಮದೃಷ್ಟಿಯು ಮಿಥ್ಯಾಬುದ್ಧಿಯಲ್ಲ (೫೦)- ಬ್ರಹ್ಮದೃಷ್ಟಿವಿಧಿಯು ಯಥಾರ್ಥಬ್ರಹ್ಮವನ್ನು ತಿಳಿಸುತ್ತದೆ (೫೧)- ಕ್ರಿಯಾಬೋಧಕವಾಕ್ಯಗಳಂತೆ ವಸ್ತುಬೋಧಕವಾಕ್ಯಗಳೂ ಪ್ರಮಾಣ (೫೨)- ಜ್ಞಾನವಾಕ್ಯದಲ್ಲಿ ಅನುಷ್ಠೇಯವಿಲ್ಲದಿದ್ದರೂ ಅದು ಅಪ್ರಮಾಣವಲ್ಲ (೫೩)- ಪ್ರತಿಷೇಧವಾಕ್ಯಗಳಂತೆಯೇ ವಸ್ತುವಾಕ್ಯವೂ ಪ್ರಮಾಣವಾಗಬಹುದು (೫೪)- ನಿತ್ಯಕರ್ಮಗಳನ್ನು ಅವಿದ್ಯಾದೋಷವುಳ್ಳವರಿಗೇ ವಿಧಿಸಿದೆ (೫೫)- ಆತ್ಮಜ್ಞಾನಿಗೆ ನಿತ್ಯಕರ್ಮವೂ ಇಲ್ಲ (೫೬). ಪುಟ ೮೨-೯೯

## ೪. ಪ್ರಜಾಪತಿಗೆ ಏಕತ್ವದರ್ಶನವು ಹೇಗೆ ಆಯಿತು?

ಆಕ್ಷೇಪ: ಏಕತ್ವದರ್ಶನವು ವ್ಯರ್ಥ (೧೦೩)- ಪೂರ್ವಜನ್ಮಕೃತಚಿತ್ತಶುದ್ಧಿಯಿಂದಲೂ ಜ್ಞಾನೋತ್ಪತ್ತಿ (೧೦೪)- ಪ್ರಜಾಪತಿಗೆ ಉಪದೇಶವಿಲ್ಲದೆ ಜ್ಞಾನವುಂಟಾಗುತ್ತದೆ (೧೦೫). ಪುಟ ೧೭೪-೧೭೯

## ೫. ಹಿರಣ್ಯಗರ್ಭನು ಸಂಸಾರಿಯೆ, ಪರಮಾತ್ಮನೆ?

ಹಿರಣ್ಯಗರ್ಭನ ವಿಷಯಕ್ಕೆ ಮತಭೇದಗಳು (೧೧೨)- ಹಿರಣ್ಯಗರ್ಭನಿಗೆ ಉಪಾಧಿವಶದಿಂದ ಸಂಸಾರಿತ್ವ (೧೧೩). ಪುಟ ೧೯೨-೧೯೬

## ೬. ಈಶ್ವರನ ಪ್ರವೇಶದ ವಿಷಯದಲ್ಲಿ ಚರ್ಚೆ

ಜಗತ್ತು ಪರಮೇಶ್ವರನಿಂದಲೇ ವ್ಯಾಕೃತವಾಗುತ್ತದೆ (೧೨೧)- ಪ್ರವೇಶ ಪ್ರಕಾರಗಳ ಮೇಲಿನ ಆಕ್ಷೇಪ (೧೨೨)- ಇಲ್ಲಿ ಸಂಸಾರಿಯ ಪ್ರವೇಶವನ್ನು ಹೇಳಿಲ್ಲ

(೧೨೩)- ಪರಮಾತ್ಮರು ಅನೇಕರಲ್ಲ (೧೨೪)- ಪ್ರವೇಶವಾದ ಬಳಿಕ ಆತ್ಮನು ಸಂಸಾರಿ ಎನ್ನಬಾರದು (೧೨೫)- ಆತ್ಮನು ದುಃಖಿ ಎಂಬುದು ತರ್ಕಕ್ಕೂ ವಿರುದ್ಧ (೧೨೬)- ಪ್ರವೇಶಶ್ರುತಿಗೆ ತಾತ್ಪರ್ಯ (೧೨೭)- ಪ್ರವೇಶವಾಕ್ಯವು ಜ್ಞಾನಕ್ಕಾಗಿ ಬಂದದ್ದು (೧೨೮).
ಪುಟ ೨೦೬-೨೨೨

## ೭. ಆತ್ಮೇತ್ಯೇವೋಪಾಸೀತ ಎಂಬುದು ವಿಧಿಯೆ?

ಇದು ಅಪೂರ್ವವಿಧಿಯಲ್ಲ (೧೩೪)- ಇದು ಅಪೂರ್ವವಿಧಿ ಎಂಬ ಪೂರ್ವಪಕ್ಷ (೧೩೫)- ಜ್ಞಾನವಿಧಿವಾದದಲ್ಲಿ ಪಕ್ಷಾಂತರ (೧೩೬)- ಸಿದ್ಧಾಂತ : ವಾಕ್ಯಜನ್ಯಜ್ಞಾನವಾದ ಬಳಿಕ ಕರ್ತವ್ಯವಿಲ್ಲ(೧೩೭)- ಜ್ಞಾನಸ್ಮೃತಿಸಂತಾನವನ್ನು ವಿಧಿಸಿವೆ ಎಂಬುದೂ ಸರಿಯಲ್ಲ (೧೩೮)- ಜ್ಞಾನವಾಕ್ಯದಲ್ಲಿ ಆಕಾಂಕ್ಷೆಯಿರುವದಿಲ್ಲ (೧೪೦)- ಆತ್ಮಸ್ವರೂಪವನ್ನು ತಿಳಿಸುವ ವಿಧಿಗೆ ಅಭಿಪ್ರಾಯ (೧೪೧)- ವಿಜ್ಞಾಯ ಪ್ರಜ್ಞಾಂ ಕುರ್ವೀತ ಮುಂತಾದವು ನಿಯಮವಿಧಿಗಳು (೧೪೨)- ಆತ್ಮೇತಿ ಎಂಬಲ್ಲಿ ಇತಿಶಬ್ದದ ಅರ್ಥ (೧೪೩).
ಪುಟ ೨೩೦-೨೫೩

## ೮. ಬ್ರಹ್ಮವಿದ್ಯೆಯ ವಿಷಯದಲ್ಲಿ ಚರ್ಚೆ

ಭರ್ತೃಪ್ರಪಂಚರ ಅಭಿಪ್ರಾಯ (೧೫೦)- ಭರ್ತೃಪ್ರಪಂಚಮತದ ಖಂಡನೆ (೧೫೧)- ಬ್ರಹ್ಮವೇ ಅವಿದ್ಯೆಗೆ ವಿಷಯವು (೧೫೨)- ಬ್ರಹ್ಮವೇ ಅವಿದ್ಯೆಗೆ ಆಶ್ರಯ (೧೫೩)- ಅದ್ವೈತದಲ್ಲಿ ಶಾಸ್ತ್ರೋಪದೇಶವು ವ್ಯರ್ಥವಲ್ಲ (೧೫೪)- ಬ್ರಹ್ಮವೆಂದರೆ ಬ್ರಹ್ಮನಾಗಲಿರುವವನು ಎಂಬ ಪೂರ್ವಪಕ್ಷಕ್ಕೆ ಯುಕ್ತಿಗಳು (೧೫೫)- ಈ ಪೂರ್ವಪಕ್ಷದಲ್ಲಿ ಬ್ರಹ್ಮೋಪದೇಶಾನರ್ಥಕ್ಯ (೧೫೬)- ಪೂರ್ವಪಕ್ಷದಲ್ಲಿ ಸಿದ್ಧಾಂತಹಾನಿ (೧೫೭)- ಪೂರ್ವಪಕ್ಷದಲ್ಲಿ ಬ್ರಹ್ಮವಿದ್ಯೆ ಎಂಬ ಹೆಸರೂ ಸಲ್ಲದು (೧೫೮)- ಬ್ರಹ್ಮವು ಸಾಧಕ ಎಂದರೂ ದೋಷವಿಲ್ಲ (೧೫೯)- ತನ್ನನ್ನೇ ಅರಿತುಕೊಂಡಿತು ಎಂಬುದರ ಅರ್ಥ (೧೬೦).
ಪುಟ ೨೬೬-೨೮೪

## ೯. ಆತ್ಮನ ಸ್ವರೂಪ

ಪ್ರಾಣನಾದಿಗಳನ್ನು ಮಾಡುವವನೂ, ದ್ರಷ್ಟ್ರಾದಿಸ್ವರೂಪನೂ, ದೃಷ್ಟಿಗೆ ದ್ರಷ್ಟೃ ಮುಂತಾಗಿರುವವನೂ ಆತ್ಮನೆಂಬ ಉತ್ತರಗಳಲ್ಲಿ ಕೊನೆಯವೇ ಸಿದ್ಧಾಂತ(೧೬೧).
ಪುಟ ೨೮೪-೨೮೮

## ೧೦. ಅವಿದ್ಯಾನಿವೃತ್ತಿವಿಚಾರ

ವಿದ್ಯಾಪ್ರತ್ಯಯಸಂತಾನವೇನೂ ಬೇಕಿಲ್ಲ (೧೭೧)- ಬ್ರಹ್ಮವಿದ್ಯೆಯು ಅವಿದ್ಯೆಯನ್ನು ನಿಜವಾಗಿ ತೊಲಗಿಸುವದು (೧೭೨)- ಜ್ಞಾನಿಗೆ ಅವಿದ್ಯಾತತ್ಕಾರ್ಯಗಳು ಇರುವದಿಲ್ಲ (೧೭೩)- ಪ್ರಾರಬ್ಧೇತರಕರ್ಮಗಳೆಲ್ಲವೂ ಜ್ಞಾನದಿಂದ ನಾಶ (೧೭೪)- ಜ್ಞಾನಿಗೆ ಋಣತ್ರಯದ ಅಡ್ಡಿಯಿಲ್ಲ (೧೭೫).
ಪುಟ ೩೦೨-೩೧೧

## ೧೧. ಶ್ರುತಿಯಲ್ಲಿರುವ ಸ್ವಲೋಕವು ಯಾವದು ?

ಆತ್ಮಜ್ಞಾನಿಗೂ ಕರ್ಮವಿದೆ ಎಂಬ ಭರ್ತೃಪ್ರಪಂಚರ ಮತ (೧೯೦)- ಆ ಮತದ ಖಂಡನೆ (೧೯೧). ಪುಟ ೩೩೭–೩೪೦

## ೧೨. ಗಾರ್ಗ್ಯಾಭಿಮತಪ್ರಾಣನು ಬ್ರಹ್ಮವಲ್ಲವೇಕೆ ?

ಆತ್ಮನು ದ್ರಷ್ಟೃವೇ, ದೃಶ್ಯವಲ್ಲ (೨೭೯)– ತನ್ನ ನಾಮಗಳನ್ನು ಅರಿತುಕೊಳ್ಳಲಾರದ ಪ್ರಾಣನು ಭೋಕ್ತೃವಲ್ಲ (೨೮೦)– ಸುಪ್ತನಾದ ಆತ್ಮನನ್ನು ಕರೆದರೆ ಅರಿಯುವದಿಲ್ಲವೇಕೆ ? (೨೮೧)– ಅಪ್ರಸಿದ್ಧನಾಮಗಳಿಂದ ಕರೆದದ್ದು ಸರಿಯೆ ? (೨೮೨)– ಕರಣಾಂತರಗಳೂ ದೇವತಾಂತರಗಳೂ ಭೋಕ್ತೃವಲ್ಲ (೨೮೩)- ಕಾರ್ಯಕರಣಸಂಘಾತವು ಭೋಕ್ತೃವಲ್ಲ (೨೮೪)- ಸಂಹತವಾಗಿರುವದರಿಂದ ಪ್ರಾಣವು ಭೋಕ್ತೃವಲ್ಲ (೨೮೫)– ಇಲ್ಲಿ ನಿರುಪಾಧಿಕಾತ್ಮಸ್ವರೂಪವನ್ನು ತಿಳಿಸುವದೇ ಉದ್ದೇಶ (೨೮೬). ಪುಟ ೪೮೦–೪೯೪

## ೧೩. ತಸ್ಯೋಪನಿಷತ್ (ಅವನ ಉಪನಿಷತ್ತು) ಎಂದರೆ ಯಾರದು ?

ಸಂಶಯಪ್ರಯೋಜನಗಳು (೩೦೫)– ಪೂರ್ವಪಕ್ಷ: ವಿಜ್ಞಾನಮಯನ ಉಪನಿಷತ್ತು ಇದು (೩೦೬)– ಪೂರ್ವಪಕ್ಷ: ಜೀವವ್ಯತಿರಿಕ್ತೇಶ್ವರನ ಉಪನಿಷತ್ತಿದು (೩೦೯)– ಪೂರ್ವಪಕ್ಷ: ಪರಮಾತ್ಮನ ಆರಾಧನೆಯಿಂದ ಮೋಕ್ಷ (೩೧೦)– ಸಿದ್ಧಾಂತ: ಎಲ್ಲರ ಆತ್ಮನಾದ ಬ್ರಹ್ಮದ ಉಪನಿಷತ್ತಿದು (೩೧೧)– ಪರಮಾತ್ಮನು ಎಲ್ಲರ ಆತ್ಮನೆಂಬುದಕ್ಕೆ ಆಕ್ಷೇಪ (೩೧೨)– ಆಕ್ಷೇಪಕ್ಕೆ ಭೇದಾಭೇದವಾದಿಗಳ ಪರಿಹಾರ (೩೧೩)– ವಿಜ್ಞಾನಾತ್ಮನು ಪರಮಾತ್ಮನ ವಿಕಾರವೆಂಬ ಮತದ ಖಂಡನೆ (೩೧೪)– ಬೆಂಕಿಗೆ ಕಿಡಿಯಂತೆ ವಿಜ್ಞಾನಾತ್ಮನು ಪರಮಾತ್ಮನ ಅಂಶವೆಂಬ ಮತದ ಖಂಡನೆ (೩೧೫)– ಅಂಶವಾಕ್ಯಕ್ಕೆ ಗತಿ (೩೧೬)– ಆತ್ಮನಲ್ಲಿ ಭಾಗವನ್ನು ಕಲ್ಪಿಸುವದು ಯುಕ್ತವಲ್ಲ (೩೧೭)- ಆತ್ಮನು ಬ್ರಹ್ಮವಿಲಕ್ಷಣನೆಂದು ಕಲ್ಪಿಸುವದೂ ಸರಿಯಲ್ಲ (೩೧೮)– ವಿಜ್ಞಾನಾತ್ಮಭೇದವನ್ನು ಹೇಳಿರುವದಕ್ಕೆ ಗತಿ, ಶಾಸ್ತ್ರಪ್ರಾಮಾಣ್ಯಕ್ಕಾಗಿ ಎಂಬ ಪೂರ್ವಪಕ್ಷ (೩೧೯)– ಪೂರ್ವಪಕ್ಷ: ಆತ್ಮೈಕತ್ವವಾದದಲ್ಲಿ ಪ್ರತ್ಯಕ್ಷಾದಿ ವಿರೋಧ (೩೨೦)– ಸಿದ್ಧಾಂತ: ಉಪನಿಷತ್ತುಗಳ ಪ್ರಾಮಾಣ್ಯವು ಪ್ರತ್ಯಕ್ಷವಾಗಿದೆ (೩೨೧)– ಉಪನಿಷತ್ತುಗಳು ಸ್ವಾರ್ಥವಿಘಾತಕವೆಂಬುದು ತಪ್ಪು (೩೨೨)– ಉಪನಿಷತ್ತು ಕರ್ಮಕಾಂಡದ ಪ್ರಾಮಾಣ್ಯಕ್ಕೆ ಬಾಧಕವಲ್ಲ (೩೨೩)– ಕರ್ಮವಾಕ್ಯಕ್ಕೆ ಪುರುಷಾರ್ಥೋಪಾಯವನ್ನು ತಿಳಿಸುವಪರಲ್ಲಿಯೇ ತಾತ್ಪರ್ಯ (೩೨೪)– ಪ್ರಮಾಣಗಳಿಗೆ ಪರಸ್ಪರವಿರೋಧವೆಂಬುದೇ ಇಲ್ಲ (೩೨೫)– ಬ್ರಹ್ಮೈಕತ್ವವಾದದಲ್ಲಿ ಉಪದೇಶಾನರ್ಥಕ್ಯವಿಲ್ಲ (೩೨೬)– ಅದ್ವೈತವಾದವು ನಿರ್ದುಷ್ಟ, ತಸ್ಯೋಪನಿಷತ್ತು ಎಂಬುದು ಬ್ರಹ್ಮದ ಉಪನಿಷತ್ತೇ (೩೨೭). ಪುಟ ೫೨೨–೫೭೧

---

# ತಿದ್ದುಪಡಿಯೂ ಸೇರಿಸಿಕೊಳ್ಳಬೇಕಾದದ್ದೂ

**ಸೂಚನೆ:** ಇಲ್ಲಿ ಮುಖ್ಯವಾಗಿ ಶತಪಥಬ್ರಾಹ್ಮಣದ ಸಂಖ್ಯೆಗಳ ವಿಚಾರವಿದೆ. ಸಂಖ್ಯೆಗಳು ಮಾಧ್ಯಂದಿನಪಾಠದ ಶತಪಥಬ್ರಾಹ್ಮಣವು. ಸಾಲುಗಳನ್ನು ಕೆಳಗಿನಿಂದ ಎಣಿಸುವಾಗ ಟಿಪ್ಪಣಿಗಳನ್ನು ಕೈಬಿಟ್ಟಿದೆ.

| ಪುಟ | ಸಾಲು | ಇರಬೇಕಾದದ್ದು |
|---|---|---|
| ೭ | ಕೆಳಗಿನಿಂದ ೪ | (ಶತ. ಬ್ರಾ. ೧೧–೨–೬–೧೩ರ ಅರ್ಥ) |
| ೧೩೬ | ೬ | ವಾಗ್ವಾ ಅನುಷ್ಟುಪ್ (ಶತ. ಬ್ರಾ. ೭–೧–೨–೧೮) |
| ೩೨೦ | ಕೆಳಗಿನಿಂದ ೪ | ತ್ವಂ ರಾಜನ್ ಬ್ರಹ್ಮಾಸಿ (ಶತ. ಬ್ರಾ. ೫–೪–೪–೯ರಿಂದ ೧೩ರವರೆಗಿನ ಪರಾಮರ್ಶ) |
| ೩೪೫ | ಕೆಳಗಿನಿಂದ ೩ | (ಶತ. ಬ್ರಾ. ೧೧–೫–೬–೧ರಿಂದ ೯) |
| ,, | ,, ೨ | (ಶತ. ಬ್ರಾ. ೧–೭–೨–೧ರಿಂದ ೬) |
| ,, | ಟಿಪ್ಪಣಿ 1 | ಸೇರಿಸಿಕೊಳ್ಳಬೇಕಾದದ್ದು: 'ಈ ಪ್ರಕರಣದಲ್ಲಿ ಈ ಐದು ಯಜ್ಞಗಳನ್ನು ವಿಧಿಸಿ ಹೊಗಳಿದೆ.' |
| ೩೭೭ | ೧೦ | "ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ। ತದೈಕ್ಷತ ನ ವೈ ತಪಸ್ಯಾನನ್ತ್ಯಮಸ್ತಿ ಹನ್ತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನಿ ಚಾತ್ಮನೀತಿ ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವಾ ಭೂತಾನಿ ಚಾತ್ಮನಿ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೈತ್" (ಶತ. ಬ್ರಾ. ೧೩–೭–೧–೧) ಇತಿ ॥ |
| ೪೬೧ | ೧ | ಅಬಾಧನಾರ್ಥಂ |
| ೪೬೧ | ಟಿಪ್ಪಣಿ 1 | 'ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ' ಎಂಬುದನ್ನು ಹೊಡೆದುಹಾಕಿರಿ. |
| ೪೬೨ | ೨ | ಅಬಾಧನಕ್ಕಾಗಿ |
| ೪೬೨ | ಟಿಪ್ಪಣಿ 2 | ಈ ಟಿಪ್ಪಣಿಯನ್ನು ತೆಗೆದುಹಾಕಿ ಇದನ್ನು ಸೇರಿಸಿಕೊಳ್ಳಿ. "ಆಬಾಧೇ ಚ ಎಂಬ ಪಾ. ಸೂ. ೮–೧–೧೦ರಂತೆ ದ್ವಿರುಕ್ತಿ ಬಂದಿದೆ. ಅಜಾತಶತ್ರುವು ತನಗೆ ತಿಳಿದದ್ದನ್ನೇ ಗಾರ್ಗ್ಯನು ಹೇಳಿದ್ದನ್ನು ಕೇಳಿ ಪೀಡಿತನಾಗಿ ಹೀಗೆ 'ಬೇಡ,, ಬೇಡ' ಎಂದಿರುತ್ತಾನೆ –ಎಂದರ್ಥ." |
| ೫೮೦ | ಟಿಪ್ಪಣಿ 2 | ಸೇರಿಸಿಕೊಳ್ಳಬೇಕಾದದ್ದು: "ಶತ. ಬ್ರಾ. ೧೦–೧–೧–೧೧ರಲ್ಲಿ ಇದರ ಛಾಯೆಯಿದೆ, ಕಾಣ್ವ ಶತ.ಬ್ರಾ.ದಲ್ಲಿ ಈ ವಿವರವೇ ಇದೆಯೇನೋ ತಿಳಿಯದು." |

---

|| ಓವ್ || 

**ಶಾಂಕರಭಾಷ್ಯಸಮೇತವಾದ**

# ಬೃಹದಾರಣ್ಯಕೋಪನಿಷತ್ತು



## ಭಾಷ್ಯಕಾರರ ಅವತರಣಿಕೆ

### ಗ್ರಂಥಾರಂಭಪ್ರತಿಜ್ಞೆ

**(ಭಾಷ್ಯ)**

೧. ಓಂ ನಮೋ ಬ್ರಹ್ಮಾದಿಭ್ಯೋ ಬ್ರಹ್ಮವಿದ್ಯಾಸಂಪ್ರದಾಯಕರ್ತೃಭ್ಯೋ ವಂಶಋಷಿಭ್ಯೋ ನಮೋ ಗುರುಭ್ಯಃ। "ಉಷಾ ವಾ ಅಶ್ವಸ್ಯ" (೧-೧-೧) ಇತ್ಯೇವಮಾದ್ಯಾ ವಾಜಸನೇಯಿಬ್ರಾಹ್ಮಣೋಪನಿಷತ್ । ತಸ್ಯಾ ಇಯಮ್ ಅಲ್ಪಗ್ರನ್ಥಾ ವೃತ್ತಿಃ ಆರಭ್ಯತೇ ಸಂಸಾರವ್ಯಾಪಿವೃತ್ಸುಭ್ಯಃ ಸಂಸಾರಹೇತುನಿವೃತ್ತಿಸಾಧನಬ್ರಹ್ಮಾತ್ಮೈಕತ್ವವಿದ್ಯಾಪ್ರತಿಪತ್ತಯೇ ||

**(ಭಾಷ್ಯಾರ್ಥ)**

ಓವ್ ! ಬ್ರಹ್ಮನೇ ಮೊದಲಾದ[1] ಬ್ರಹ್ಮವಿದ್ಯಾಸಂಪ್ರದಾಯಕರ್ತೃಗಳಾದ[2] ವಂಶಋಷಿಗಳಿಗೆ[3] ನಮಸ್ಕಾರ ! ಗುರುಗಳಿಗೆ ನಮಸ್ಕಾರ[4]! "ಉಷಾ ವಾ ಅಶ್ವಸ್ಯ" (೧-೧-೧) ಎಂದಿಂತು ಮೊದಲಾಗಿರುವದು ವಾಜಸನೇಯಿಬ್ರಾಹ್ಮಣದ ಉಪ

---

1. ಹಿರಣ್ಯಗರ್ಭನೇ ಮೊದಲಾದ ಎಂದರ್ಥ.

2. ಬ್ರಹ್ಮವಿದ್ಯೆಯನ್ನು ಗುರುಶಿಷ್ಯಪರಂಪರೆಯಿಂದ ಒಬ್ಬರಿಗೊಬ್ಬರು ಉಪದೇಶ ಮಾಡಿರುವ ಕ್ರಮವು ಬ್ರಹ್ಮವಿದ್ಯಾಸಂಪ್ರದಾಯವು. ಈ ಕ್ರಮಕ್ಕೆ ಬ್ರಹ್ಮನು ಮೊದಲು.

3. ಬಿದಿರಿನ ಗಳು ಗೆಣ್ಣುಗೆಣ್ಣಾಗಿ ಸೇರಿಕೊಂಡಿರುವಂತೆ ಸಂಪ್ರದಾಯಕರ್ತೃಗಳಾದ ಗುರುಪರಂಪರೆಯೂ ಇರುತ್ತದೆ. ೨-೬ರ ಭಾಷ್ಯವನ್ನು ನೋಡಿ.

4. ಗುರುಗಳೂ ಬ್ರಹ್ಮಾದಿಗಳಲ್ಲಿ ಸೇರಿರುತ್ತಾರಾದರೂ ವಿಶೇಷಾದರವನ್ನು ತೋರಿಸುವದಕ್ಕಾಗಿ ಅವರನ್ನು ಬೇರೆಯಾಗಿ ನಮಸ್ಕರಿಸಿರುತ್ತದೆ.

ನಿಷತ್ತು.[1] ಸಂಸಾರವನ್ನು ತಪ್ಪಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳವರಿಗೆ ಸಂಸಾರಕ್ಕೆ ಹೇತು (ವಾದ ಅವಿದ್ಯೆ)ಯನ್ನು ತೊಲಗಿಸುವದಕ್ಕೆ ಸಾಧನವಾಗಿರುವ ಬ್ರಹ್ಮಾತ್ಮೈಕತ್ವವಿದ್ಯಾಪ್ರಾಪ್ತಿಯಾಗಲೆಂದು[2] ಆ (ಉಪನಿಷತ್ತಿಗೆ) ಅಲ್ಪಗ್ರಂಥದ ಈ ವೃತ್ತಿಯನ್ನು ಆರಂಭಿಸಿರುತ್ತದೆ.[3]

## ಬೃಹದಾರಣ್ಯಕೋಪನಿಷತ್ತೆಂಬ ನಾಮದ ನಿರ್ವಚನ

(ಭಾಷ್ಯ)

೨. ಸೇಯಂ ಬ್ರಹ್ಮವಿದ್ಯಾ ಉಪನಿಷಚ್ಛಬ್ದವಾಚ್ಯಾ ತತ್ಪರಾಣಾಂ ಸಹೇತೋಃ ಸಂಸಾರಸ್ಯ ಅತ್ಯನ್ತಾವಸಾದನಾತ್ | ಉಪನಿಪೂರ್ವಸ್ಯ ಸದೇಃ ತದರ್ಥತ್ವಾತ್ | ತಾದರ್ಥ್ಯಾತ್ ಗ್ರನ್ಥೋಽಪಿ ಉಪನಿಷತ್ ಉಚ್ಯತೇ | ಸೇಯಂ ಷಡಧ್ಯಾಯೀ ಅರಣ್ಯೇ ಅನೂಚ್ಯಮಾನತ್ವಾತ್ ಆರಣ್ಯಕಮ್ | ಬೃಹತ್ತ್ವಾತ್ ಪರಿಮಾಣತಃ ಬೃಹದಾರಣ್ಯಕಮ್ ||

(ಭಾಷ್ಯಾರ್ಥ)

ಆ ಈ ಬ್ರಹ್ಮವಿದ್ಯೆಯು '**ಉಪನಿಷತ್**' ಎಂಬ ಶಬ್ದದಿಂದ ಕರೆಯಲ್ಪಡುತ್ತದೆ. ಏಕೆಂದರೆ (ಇದು) ಇದರಲ್ಲಿಯೇ ತತ್ಪರರಾಗಿರುವವರ ಸಂಸಾರವನ್ನು ಸಹೇತುವಾಗಿ ಅತ್ಯಂತವಾಗಿ ನಾಶಮಾಡುತ್ತದೆ. ಉಪ, ನಿ (ಎಂಬ ಉಪಸರ್ಗಗಳು) ಮೊದಲಿರುವ ಸದ್‌ಧಾತುವಿಗೆ ಇದೇ ಅರ್ಥವು.[4] ಈ (ವಿದ್ಯೆಯನ್ನು ತಿಳಿಸಿ)ಕೊಡುವದಕ್ಕಾಗಿ (ಬಂದಿರುವ)ದರಿಂದ ಗ್ರಂಥವನ್ನೂ ಉಪನಿಷತ್ತೆಂದು ಕರೆಯುತ್ತಾರೆ.[5] ಆ ಈ

---

1. ವಾಜಸನೇಯಿಶಾಖೆಯವರ ಶತಪಥಬ್ರಾಹ್ಮಣದಲ್ಲಿರುವ ಉಪನಿಷತ್ತು. ಈ ಬ್ರಾಹ್ಮಣದ ವಿಷಯಕ್ಕೆ ಪೀಠಿಕೆಯನ್ನು ನೋಡಿ

2. ಹಿಂದಿನ ಭಾಗವು ಕರ್ಮಫಲವನ್ನು ಬಯಸುವವರಿಗೆ ಸಾಧನವಾದ ಕರ್ಮವನ್ನು ತಿಳಿಸುತ್ತದೆ. ಈ ಉಪನಿಷದ್ಭಾಷ್ಯವು ಕ್ರಿಯಾಕಾರಕಫಲರೂಪವಾದ ಸಂಸಾರದಿಂದ ಬಿಡುಗಡೆಯಾಗಲೆಳಸುವವರಿಗೆ ಬ್ರಹ್ಮಾತ್ಮೈಕತ್ವವಿದ್ಯೆಯನ್ನು ತಿಳಿಸುತ್ತದೆ ಎಂದರ್ಥ. ಈ ವಾಕ್ಯದಲ್ಲಿ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ– ಈ ನಾಲ್ಕನ್ನೂ ತಿಳಿಸಿದೆ.

3. ಭರ್ತೃಪ್ರಪಂಚವೃತ್ತಿಗೂ ಆಚಾರ್ಯರ ಭಾಷ್ಯಕ್ಕೂ ಇರುವ ತಾರತಮ್ಯವನ್ನು ಇಲ್ಲಿ ಹೇಳಿದೆ.

4. ಷದ್ಲ್ ವಿಶರಣಗತ್ಯವಸಾದನೇಷು ಎಂಬ ಧಾತುವಿಗೆ ಈ ಅರ್ಥವಿದೆ. ಬ್ರಹ್ಮವಿದ್ಯೆಯನ್ನು ಉಪನಿಷತ್ತು ಎಂದು ಕರೆಯುವದೇಕೆಂಬುದನ್ನು ಉಪನಿಷಚ್ಛಬ್ದನಿರ್ವಚನದ ಮೂಲಕವಾಗಿ ಕ.ಭಾ., ಮುಂ.ಭಾ., ತೈ.ಭಾ.–ಇವುಗಳ ಅವತರಣಿಕೆಯಲ್ಲಿಯೂ ಹೀಗೆಯೇ ತಿಳಿಸಿದೆ.

5. ಕಠೋಪನಿಷತ್ತಿನ ಭಾಷ್ಯಾವತರಣಿಕತೆಯನ್ನು (ಭಾ.ಭಾ. ೫) ನೋಡಿ.

ಆರಧ್ಯಾಯದ (ಉಪನಿಷತ್ತನ್ನು) ಅರಣ್ಯದಲ್ಲಿ ಅಧ್ಯಯನಮಾಡತಕ್ಕದ್ದಾದ್ದರಿಂದ (ಇದು) 'ಆರಣ್ಯಕವು'; ಪರಿಮಾಣದಿಂದ ದೊಡ್ಡದಾಗಿರುವದರಿಂದ 'ಬೃಹದಾರಣ್ಯಕವು'.

## ಕರ್ಮಕಾಂಡಕ್ಕೂ ಉಪನಿಷತ್ತಿಗೂ ಸಂಬಂಧ

### (ಅ) ಕರ್ಮಕಾಂಡದ ವಿಷಯ

(ಭಾಷ್ಯ)

೩. ತಸ್ಯಾಸ್ಯ ಕರ್ಮಕಾಣ್ಡೇನ ಸಂಬನ್ಧೋಽಭಿಧೀಯತೇ। ಸರ್ವೋಽಪ್ಯಯಂ ವೇದಃ ಪ್ರತ್ಯಕ್ಷಾನುಮಾನಾಭ್ಯಾಮ್ ಅನವಗತೇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯಪ್ರಕಾಶನಪರಃ। ಸರ್ವಪುರುಷಾಣಾಂ ನಿಸರ್ಗತ ಏವ ತತ್ಪ್ರಾಪ್ತಿಪರಿಹಾರಯೋಃ ಇಷ್ಟತ್ವಾತ್। ದೃಷ್ಟವಿಷಯೇ ಚ ಇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯಜ್ಞಾನಸ್ಯ ಪ್ರತ್ಯಕ್ಷಾನುಮಾನಾಭ್ಯಾಮೇವ ಸಿದ್ಧತ್ವಾತ್ ನ ಆಗಮಾನ್ವೇಷಣಾ। ನ ಚ ಅಸತಿ ಜನ್ಮಾನ್ತರಸಂಬನ್ಧ್ಯಾತ್ಮಾಸ್ತಿತ್ವವಿಜ್ಞಾನೇ ಜನ್ಮಾನ್ತರೇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛಾ ಸ್ಯಾತ್। ಸ್ವಭಾವವಾದಿದರ್ಶನಾತ್। ತಸ್ಮಾತ್ ಜನ್ಮಾನ್ತರಸಂಬನ್ಧ್ಯಾತ್ಮಾಸ್ತಿತ್ವೇ ಜನ್ಮಾನ್ತರೇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯವಿಶೇಷೇ ಚ ಶಾಸ್ತ್ರಂ ಪ್ರವರ್ತತೇ। "ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ" (ಕ. ೧-೧-೨೦) ಇತ್ಯುಪಕ್ರಮ್ಯ "ಅಸ್ತೀತ್ಯೇವೋಪಲಬ್ಧವ್ಯಃ" (ಕ. ೨-೩-೧೩) ಇತ್ಯೇವಮಾದಿನಿರ್ಣಯದರ್ಶನಾತ್। "ಯಥಾ ಚ ಮರಣಂ ಪ್ರಾಪ್ಯ" (ಕ. ೨-೨-೬) ಇತ್ಯುಪಕ್ರಮ್ಯ "ಯೋನಿಮನ್ಯೇ ಪ್ರಪದ್ಯನ್ತೇ ಶರೀರತ್ವಾಯ ದೇಹಿನಃ। ಸ್ಥಾಣುಮನ್ಯೇಽನುಸಂಯನ್ತಿ ಯಥಾ ಕರ್ಮ ಯಥಾಶ್ರುತಮ್" (ಕ. ೨-೨-೭) ಇತಿ ಚ। "ಸ್ವಯಂಜ್ಯೋತಿಃ" (೪-೩-೯) ಇತ್ಯುಪಕ್ರಮ್ಯ "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" (೪-೪-೨), ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ" (೩-೨-೧೩) ಇತಿ ಚ। "ಜ್ಞಪಯಿಷ್ಯಾಮಿ" (೨-೧-೧೫) ಇತ್ಯುಪಕ್ರಮ್ಯ "ವಿಜ್ಞಾನಮಯಃ" (೨-೧-೧೬) ಇತಿ ಚ ವ್ಯತಿರಿಕ್ತಾತ್ಮಾಸ್ತಿತ್ವಮ್ ॥

(ಭಾಷ್ಯಾರ್ಥ)

ಆ ಈ (ಉಪನಿಷತ್ತಿಗೂ) ಕರ್ಮಕಾಂಡಕ್ಕೂ ಸಂಬಂಧವನ್ನು ಹೇಳುತ್ತೇವೆ. **ಈ ವೇದವೆಲ್ಲ ಪ್ರತ್ಯಕ್ಷಾನುಮಾನಗಳಿಂದ ಗೊತ್ತಾಗದೆ ಇರುವ ಇಷ್ಟಾನಿಷ್ಟ ಪ್ರಾಪ್ತಿಪರಿಹಾರಗಳಿಗೆ ಉಪಾಯವನ್ನು ತಿಳಿಸುವದರಲ್ಲಿ ತಾತ್ಪರ್ಯ**

**ವುಳ್ಳದ್ದು.**[1] ಏಕೆಂದರೆ ಎಲ್ಲಾ ಜನರಿಗೂ ಅವುಗಳ ಪ್ರಾಪ್ತಿಪರಿಹಾರಗಳು ಸ್ವಭಾವದಿಂದಲೇ ಬೇಕಾಗಿರುತ್ತವೆ.[2] ಕಂಡಿರುವ (ಈ ಲೋಕದ) ವಿಷಯದಲ್ಲಿ ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳ ಉಪಾಯದ ಜ್ಞಾನವು ಪ್ರತ್ಯಕ್ಷಾನುಮಾನಗಳಿಂದಲೇ ಆಗುವದರಿಂದ (ಆ ವಿಷಯಕ್ಕೆ) ಆಗಮವನ್ನು ಹುಡುಕಬೇಕಾಗಿಲ್ಲ.[3] ಆದರೆ ಜನ್ಮಾಂತರಕ್ಕೆ ಸಂಬಂಧಪಟ್ಟ ಆತ್ಮನು ಇರುವನೆಂಬ ಅರಿವು ಇಲ್ಲದಿದ್ದರೆ ಜನ್ಮಾಂತರದಲ್ಲಿ ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳು (ಆಗಬೇಕೆಂಬ) ಇಚ್ಛೆಯು ಉಂಟಾಗಲಾರದು. ಏಕೆಂದರೆ ಸ್ವಭಾವವಾದಿಗಳೂ ಕಂಡುಬರುತ್ತಾರೆ.[5] **ಆದ್ದರಿಂದ ಜನ್ಮಾಂತರಕ್ಕೆ ಸಂಬಂಧಪಟ್ಟ ಆತ್ಮನು ಇರುವ(ನೆಂಬ ವಿಷಯ)ದಲ್ಲಿಯೂ ಜನ್ಮಾಂತರದಲ್ಲಿ ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಗಳಿಗೆ ಇಂಥಿಂಥದ್ದು ಉಪಾಯ(ವೆಂಬ ವಿಷಯ)ದಲ್ಲಿಯೂ ಶಾಸ್ತ್ರವು ಪ್ರವರ್ತಿಸುತ್ತದೆ.** ಏಕೆಂದರೆ "ಸತ್ತ ಮನುಷ್ಯನ ವಿಷಯದಲ್ಲಿ 'ಇದಾನೆಂದು ಕೆಲವರು, ಇವನು ಇಲ್ಲವೆಂದು ಕೆಲವರು' (ಹೀಗೆ) ಈ ಸಂಶಯವಿದೆಯಷ್ಟೆ" (ಕ. ೧-೧-೨೦), ಎಂದು ಉಪಕ್ರಮಿಸಿ "ಇದಾನೆಂದೇ ಅರಿಯಬೇಕು" (ಕ- ೨-೩-೧೩) ಎಂದುಮುಂತಾಗಿ ನಿರ್ಣಯ ಮಾಡಿರುವದು ಕಂಡುಬರುತ್ತದೆ. "ಮರಣವನ್ನು ಹೊಂದಿ (ಆತ್ಮನು) ಹೇಗೆ (ಆಗುತ್ತಾನೆಂಬುದನ್ನು ಹೇಳುವೆನು)" (ಕಂ. ೨-೨-೬) ಎಂದು ಉಪಕ್ರಮಿಸಿ "ಕೆಲವರು ದೇಹಿಗಳು ಶರೀರವನ್ನು ಪಡೆಯುವದಕ್ಕೆ (ಮನುಷ್ಯ)ಯೋನಿಯನ್ನು ಪಡೆಯುವರು; ಮತ್ತೆ ಕೆಲವರು ಸ್ಥಾಣುವನ್ನು ಸೇರುವರು. (ಅವರವರ) ಕರ್ಮಕ್ಕನುಗುಣವಾಗಿಯೂ ಜ್ಞಾನಕ್ಕೆ ಅನುಗುಣವಾಗಿಯೂ[5] (ಹೀಗೆ ಜನ್ಮಾಂ

---

1. ಕರ್ಮಕಾಂಡವು ಅಭ್ಯುದಯಕ್ಕೆ ಕಾರಣವಾಗಿರುವ ಕರ್ಮವನ್ನೂ ಉಪನಿಷತ್ತು ಮೋಕ್ಷಕ್ಕೆ ಕಾರಣವಾಗಿರುವ ಬ್ರಹ್ಮಾತ್ಮೈಕತ್ವವನ್ನೂ ತಿಳಿಸುತ್ತವೆ- ಎಂದೂ ಈ ವಾಕ್ಯಕ್ಕೆ ಅರ್ಥವನ್ನು ಕಲ್ಪಿಸಬಹುದು. ತೈ.ಭಾ. (ಭಾ.ಭಾ. ೭೮, ೭೯)ವನ್ನು ನೋಡಿ. ಆದರೆ ಪ್ರಕೃತದಲ್ಲಿ ಕರ್ಮಕಾಂಡವನ್ನು ಮಾತ್ರ ವೇದ ಎಂಬರ್ಥದಲ್ಲಿ ಉಪಯೋಗಿಸಿರುವಂತೆ ಕಾಣುತ್ತದೆ. ಮುಂದೆ (ಭಾ.ಭಾ. ೫ರಲ್ಲಿ) ಇದು ಸ್ಪಷ್ಟವಾಗುವದು.

2. ಶಾಸ್ತ್ರದಿಂದ ಈ ಇಚ್ಛೆಯುಂಟಾಗುವದಿಲ್ಲ; ಶಾಸ್ತ್ರವು ಉಪಾಯವನ್ನು ಮಾತ್ರ ತಿಳಿಸುತ್ತದೆ.

3. ಉದಾಹರಣೆಗೆ ಹಸಿದವನು ಊಟಮಾಡಬೇಕು ಎಂಬುದನ್ನು ಶಾಸ್ತ್ರದಿಂದ ಕಂಡುಕೊಳ್ಳಬೇಕಾಗಿರುವದಿಲ್ಲ; ಏಕೆಂದರೆ ಪ್ರತ್ಯಕ್ಷಾನುಮಾನಗಳಿಂದಲೇ ಅದು ಗೊತ್ತಾಗುತ್ತದೆ.

4. ದೇಹವೇ ಆತ್ಮನೆಂದು ನಂಬಿರುವ ವಾದಿಗಳು ಜನ್ಮಾಂತರಸಂಬಂಧಿಯಾದ ಆತ್ಮನಿಗೆ ಆಗುವ ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಕ್ಕೆ ಉಪಾಯವಾದ ಕರ್ಮಗಳನ್ನು ಮಾಡುವದಿಲ್ಲ.

5. ವಿಹಿತಪ್ರತಿಷಿದ್ಧವಾದ ಜ್ಞಾನವು ಮತ್ತು ಹಿಂದಿನ ಅನುಭವದಿಂದ ಆಗಿರುವ ವಾಸನೆಯು- ಇವಕ್ಕೆ ಅನುಗುಣವಾಗಿಯೂ ಎಂದರ್ಥ.

ತರವನ್ನು ಪಡೆಯುವರು)" (ಕ. ೨-೨-೭) ಎಂದೂ (ನಿರ್ಣಯಿಸಿರುವದು ಕಂಡು ಬರುತ್ತದೆ. "ಸ್ವಯಂಜ್ಯೋತಿಯಾಗಿರುತ್ತಾನೆ" (೪-೩-೯) ಎಂದು ಉಪಕ್ರಮಿಸಿ ಅವನನ್ನು ಜ್ಞಾನಕರ್ಮಗಳು ಅನ್ವಾರಂಭಮಾಡುತ್ತವೆ"[1] (೪-೪-೨) ಎಂದೂ "ಪುಣ್ಯಕರ್ಮದಿಂದ ಪುಣ್ಯ(ಫಲವೇ) ಆಗುತ್ತದೆ, ಪಾಪದಿಂದ ಪಾಪ(ಫಲವೇ ಆಗುತ್ತದೆ ಬೃ. ೩-೨-೧೩)"[2] ಎಂದೂ (ನಿರ್ಣಯಿಸಿರುವದು ಕಂಡುಬರುತ್ತದೆ). "ತಿಳಿಸಿಕೊಡುವೆನು" (೨-೧-೧೫) ಎಂದು ಉಪಕ್ರಮಿಸಿ "ವಿಜ್ಞಾನಮಯನು"[3] (೨-೧-೧೬)[3] ಎಂದೂ (ದೇಹಕ್ಕಿಂತ) ಬೇರೆಯಾಗಿ ಆತ್ಮನು ಇರುವನೆಂದೂ (ನಿರ್ಣಯಿಸಿರುವದು ಕಂಡುಬರುತ್ತದೆ).

## (ಆ) ಆತ್ಮನು ಪ್ರತ್ಯಕ್ಷಾನುಮಾನಗೋಚರನಲ್ಲ

(ಭಾಷ್ಯ)

೪. ತತ್ ಪ್ರತ್ಯಕ್ಷವಿಷಯಮೇವ ಇತಿ ಚೇತ್ । ನ । ವಾದಿವಿಪ್ರತಿಪತ್ತಿ ದರ್ಶನಾತ್ । ನ ಹಿ ದೇಹಾಂತರಸಂಬನ್ಧಿನಃ ಆತ್ಮನಃ ಪ್ರತ್ಯಕ್ಷೇಣ ಅಸ್ತಿತ್ವ ವಿಜ್ಞಾನೇ ಲೋಕಾಯತಿಕಾಃ ಬೌದ್ಧಾಶ್ಚ ನಃ ಪ್ರತಿಕೂಲಾಃ ಸ್ಯುಃ ನಾಸ್ತಿ ಆತ್ಮಾ ಇತಿ ವದನ್ತಃ । ನ ಹಿ ಘಟಾದೌ ಪ್ರತ್ಯಕ್ಷವಿಷಯೇ ಕಶ್ಚಿದ್ ವಿಪ್ರತಿಪದ್ಯತೇ ನಾಸ್ತಿ ಘಟಃ ಇತಿ । ಸ್ಥಾಣ್ವಾದೌ ಪುರುಷಾದಿದರ್ಶನಾತ್ ನೇತಿ ಚೇತ್ । ನ । ನಿರೂಪಿತೇ ಅಭಾವಾತ್ । ನ ಹಿ ಪ್ರತ್ಯಕ್ಷೇಣ ನಿರೂಪಿತೇ ಸ್ಥಾಣ್ವಾದೌ ವಿಪ್ರತಿಪತ್ತಿ ರ್ಭವತಿ । ವೈನಾಶಿಕಾಸ್ತು ಅಹಮಿತಿಪ್ರತ್ಯಯೇ ಜಾಯಮಾನೇಽಪಿ ದೇಹ ವ್ಯತಿರಿಕ್ತಸ್ಯ[4] ನಾಸ್ತಿತ್ವಮೇವ ಪ್ರತಿಜಾನತೇ । ತಸ್ಮಾತ್ ಪ್ರತ್ಯಕ್ಷವಿಷಯವೈಲಕ್ಷ ಣ್ಯಾತ್ ಪ್ರತ್ಯಕ್ಷಾತ್ ನಾತ್ಮಾಸ್ತಿತ್ವಸಿದ್ಧಿಃ । ತಥಾ ಅನುಮಾನಾದಪಿ । ಶ್ರುತ್ಯಾ ಆತ್ಮಾ ಸ್ತಿತ್ವೇ ಲಿಙ್ಗಸ್ಯ ದರ್ಶಿತತ್ವಾತ್ ಲಿಙ್ಗಸ್ಯ ಚ ಪ್ರತ್ಯಕ್ಷವಿಷಯತ್ವಾತ್ ನೇತಿ ಚೇತ್ । ನ । ಜನ್ಮಾನ್ತರಸಂಬನ್ಧಸ್ಯ ಅಗ್ರಹಣಾತ್ । ಆಗಮೇನ ತು ಆತ್ಮಾಸ್ತಿತ್ವೇ ಅವಗತೇ ವೇದಪ್ರದರ್ಶಿತಲೌಕಿಕಲಿಙ್ಗವಿಶೇಷೈಶ್ಚ ತದನುಸಾರಿಣೋ ಮೀಮಾಂಸಕಾಃ

---

1. ಹೊಸ ಕರ್ಮಗಳನ್ನು ಮಾಡಿಸುತ್ತವೆ, ಅವರ ಫಲವನ್ನು ಅನುಭವಿಸುವಂತೆಯೂ ಮಾಡುತ್ತವೆ ಎಂದರ್ಥ.

2. ಈ ಶ್ರುತಿಯನ್ನು ಭಾಷ್ಯಕಾರರು ಇಲ್ಲಿ ಉದಾಹರಿಸಿದ್ದರೆ ? ಎಂಬುದು ವಿಚಾರಣೀಯ ವಾಗಿದೆ. ಏಕೆಂದರೆ ಈ ನಿರ್ಣಯವಾಕ್ಯವು ಹಿಂದಿನ ಬ್ರಾಹ್ಮಣದಲ್ಲಿದೆ.

3. ಈ ಶ್ರುತಿಯಲ್ಲಿ ವಿಜ್ಞಾನಮಯನಾದ ಆತ್ಮನು ಪ್ರಾಣಕ್ಕಿಂತ ವ್ಯತಿರಿಕ್ತನಾಗಿರು ತ್ತಾನೆಂದು ನಿರ್ಣಯಿಸಿದೆ. ಮುಂದಿನ ಕಂಡಿಕೆಯಲ್ಲಿ ಅವನು ಪರಮಾತ್ಮನಲ್ಲಿಯೇ ಐಕ್ಯವಾಗಿರು ತ್ತಾನೆಂದು ಹೇಳಿದೆ.

4. 'ದೇಹಾನ್ತರವ್ಯತಿರಿಕ್ತಸ್ಯ' ಎಂಬ ಪಾಠಕ್ಕಿಂತ ಇದು ಉತ್ತಮ.

ತಾರ್ಕಿಕಾಶ್ಚ ಅಹಂ ಪ್ರತ್ಯಯಂ[1] ಲಿಙ್ಗಾನಿ ಚ ವೈದಿಕಾನ್ಯೇವ ಸ್ವಮತಿಪ್ರಭವಾನಿ ಇತಿ ಕಲ್ಪಯನ್ತಃ ವದನ್ತಿ ಪ್ರತ್ಯಕ್ಷಶ್ಚ ಅನುಮೇಯಶ್ಚ ಆತ್ಮಾ ಇತಿ ||

(ಭಾಷ್ಯಾರ್ಥ)

ಅದು[2] ಪ್ರತ್ಯಕ್ಷವಿಷಯವೇ[3] ಎಂದರೆ ಹಾಗಲ್ಲ; ಏಕೆಂದರೆ ವಾದಿಗಳಿಗೆ ವಿಪ್ರತಿಪತ್ತಿಯು[4] ಕಾಣಬರುತ್ತದೆ. ದೇಹಾಂತರಸಂಬಂಧಿಯಾದ ಆತ್ಮನು ಇರುವನೆಂಬ ತಿಳಿವು ಪ್ರತ್ಯಕ್ಷದಿಂದ ಆಗುವಂತಿದ್ದರೆ **ಲೋಕಾಯತಿಕರೂ ಬೌದ್ಧರೂ** 'ಆತ್ಮನು ಇಲ್ಲ' ಎಂದು ಹೇಳುತ್ತಾ ನಮಗೆ ಪ್ರತಿಕೂಲರಾಗಿರಲಾರರಷ್ಟೆ. ಗಡಿಗೆಯೇ ಮುಂತಾದ ಪ್ರತ್ಯಕ್ಷವಿಷಯದಲ್ಲಿ 'ಗಡಿಗೆಯು ಇಲ್ಲ' ಎಂದು ಯಾವನೂ ವಿರುದ್ಧವಾಗಿ ತಿಳಿಯಲಾರನಷ್ಟೆ?

(ಆಕ್ಷೇಪ):—ಮೋಟುಮರವೇ ಮುಂತಾದದ್ದರಲ್ಲಿ ಮನುಷ್ಯನೇ ಮುಂತಾದದ್ದನ್ನು ಕಾಣುವದರಿಂದ (ಇದು ಸರಿ)ಯಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ ಪರೀಕ್ಷಿಸಿ ಗೊತ್ತುಪಡಿಸಿದ್ದರಲ್ಲಿ (ವಿಪ್ರತಿಪತ್ತಿ)ಯಿರುವದಿಲ್ಲ. ಪ್ರತ್ಯಕ್ಷದಿಂದ ಪರೀಕ್ಷಿಸಿ ಗೊತ್ತುಪಡಿಸಿದ ಮೋಟುಮರವೇ ಮುಂತಾದದ್ದರಲ್ಲಿ ವಿಪ್ರತಿಪತ್ತಿಯು ಆಗುವದೇ ಇಲ್ಲ. ಆದರೆ ವೈನಾಶಿಕರಾದರೋ[5] ನಾನೆಂಬ ಪ್ರತ್ಯಯವು ಉಂಟಾಗುತ್ತಿದ್ದರೂ ದೇಹಕ್ಕಿಂತ ಬೇರೆಯಾದ (ಆತ್ಮನು) ಇಲ್ಲವೆಂದೇ ತಿಳಿಯುತ್ತಾರೆ.

ಆದ್ದರಿಂದ ಪ್ರತ್ಯಕ್ಷಕ್ಕೆ ವಿಷಯವಾದ (ವಸ್ತುವಿಗಿಂತ) ವಿಲಕ್ಷಣವಾಗಿರುವದರಿಂದ ಆತ್ಮನು ಇದಾನೆಂಬುದು ಪ್ರತ್ಯಕ್ಷದಿಂದ ಸಿದ್ಧವಾಗುವದಿಲ್ಲ. ಹೀಗೆಯೇ ಅನುಮಾನದಿಂದಲೂ (ಸಿದ್ಧವಾಗುವದಿಲ್ಲ).

(ಆಕ್ಷೇಪ):—ಆತ್ಮನು ಇದಾನೆಂಬುದಕ್ಕೆ ಲಿಂಗವನ್ನು ಶ್ರುತಿಯು ತಿಳಿಸಿರುವದರಿಂದಲೂ (ಆ) ಲಿಂಗವು ಪ್ರತ್ಯಕ್ಷಕ್ಕೆ ವಿಷಯವಾಗಿರುವದರಿಂದಲೂ[6] (ಇದು) ಸರಿಯಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ ಜನ್ಮಾಂತರಸಂಬಂಧವನ್ನು (ಪ್ರತ್ಯಕ್ಷ

---

1. 'ಅಹಂಪ್ರತ್ಯಯಲಿಙ್ಗಾನಿ' ಎಂಬ ಪಾಠಕ್ಕಿಂತ ಇದು ಉತ್ತಮ.

2. ಆತ್ಮತತ್ತ್ವವು.

3. ನಾನು ಎಂಬ ಪ್ರತ್ಯಯಕ್ಕೆ ಆತ್ಮನು ಗೋಚರನಾಗಿರುವದರಿಂದ ಮಾನಸಪ್ರತ್ಯಕ್ಷವಿಷಯನು ಎಂದು ಮೀಮಾಂಸಕರೂ ತಾರ್ಕಿಕರೂ ಹೇಳುತ್ತಾರೆ.

4. ವಿರುದ್ಧವಾದ ಅಭಿಪ್ರಾಯವು.

5. ಬೌದ್ಧರಾದರೋ ಎಂದರ್ಥ.

6. ಉಸಿರಾಡುವದೇ ಮುಂತಾದದ್ದು ಆತ್ಮನ ಲಿಂಗವೆಂದು ಶ್ರುತಿಯಲ್ಲಿ ಹೇಳಿದೆ; ಆದ್ದರಿಂದ ಲಿಂಗಗಳು ಪ್ರತ್ಯಕ್ಷಗೋಚರವಾಗಿವೆ ಎಂದರ್ಥ.

ದಿಂದ) ಗ್ರಹಣಮಾಡಲಾಗುವದಿಲ್ಲ. ಆಗಮದಿಂದಲೂ ವೇದದಲ್ಲಿ ತಿಳಿಸಿರುವ ಆಯಾ ಲೌಕಿಕಲಿಂಗಗಳಿಂದಲೂ ಆತ್ಮನು ಇದಾನೆಂದು ನಿಶ್ಚಯಿಸಿದ ಬಳಿಕ, ಅದನ್ನನುಸರಿಸುವ **ಮೀಮಾಂಸಕರೂ ತಾರ್ಕಿಕರೂ** ಅಹಂಪ್ರತ್ಯಯವನ್ನೂ ಲಿಂಗಗಳನ್ನೂ–ಅವು ವೇದೋಕ್ತವೇ ಆಗಿದ್ದರೂ ತಮ್ಮ ಬುದ್ಧಿಯಿಂದ ಉಂಟಾದವುಗಳೆಂದು ಕಲ್ಪಿಸಿಕೊಂಡು ಆತ್ಮನು ಪ್ರತ್ಯಕ್ಷನೂ ಅನುಮೇಯನೂ (ಆಗಿರುತ್ತಾನೆಂದು) ಹೇಳುತ್ತಿರುವರು.[1]

## (ಇ) ಜ್ಞಾನಕಾಂಡದ ವಿಷಯ

(ಭಾಷ್ಯ)

೫. ಸರ್ವಥಾಪಿ ಅಸ್ತಿ ಆತ್ಮಾ ದೇಹಾನ್ತರಸಂಬನ್ಧೀ ಇತ್ಯೇವಂ ಪ್ರತಿಪತ್ತುಃ ದೇಹಾನ್ತರಗತೇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯವಿಶೇಷಾರ್ಥಿನಃ ತದ್ವಿಶೇಷ ಜ್ಞಾಪನಾಯ ಕರ್ಮಕಾಣ್ಡಮ್ ಆರಬ್ಧಮ್। ನ ತು ಆತ್ಮನಃ ಇಷ್ಟಾನಿಷ್ಟ ಪ್ರಾಪ್ತಿಪರಿಹಾರೇಚ್ಛಾಕಾರಣ ಮ್ ಆತ್ಮವಿಷಯಮ್ ಅಜ್ಞಾನಂ ಕರ್ತೃಭೋಕ್ತೃಸ್ವರೂಪಾಭಿಮಾನಲಕ್ಷಣಂ ತದ್ವಿಪರೀತಬ್ರಹ್ಮಾತ್ಮಸ್ವರೂಪವಿಜ್ಞಾನೇನ ಅಪನೀತಮ್। ಯಾವದ್ ಹಿ ತನ್ನಾಪನೀಯತೇ ತಾವತ್ ಅಯಂ ಕರ್ಮಫಲರಾಗ ದ್ವೇಷಾದಿಸ್ವಾಭಾವಿಕದೋಷಪ್ರಯುಕ್ತಃ ಶಾಸ್ತ್ರವಿಹಿತಪ್ರತಿಷಿದ್ಧಾತಿಕ್ರಮೇಣಾಪಿ ಪ್ರವರ್ತಮಾನಃ ಮನೋವಾಕ್ಕಾಯೈಃ ದೃಷ್ಟಾದೃಷ್ಟಾನಿಷ್ಟಸಾಧನಾನಿ ಅಧರ್ಮ ಸಂಜ್ಞಕಾನಿ ಕರ್ಮಾಣಿ ಉಪಚಿನೋತಿ ಬಾಹುಲ್ಯೇನ ಸ್ವಾಭಾವಿಕದೋಷಬಲೀಯಸ್ತ್ವಾತ್। ತತಃ ಸ್ಥಾವರಾನ್ತಾ ಅಧೋಗತಿಃ। ಕದಾಚಿತ್ ಶಾಸ್ತ್ರಕೃತಸಂಸ್ಕಾರ ಬಲೀಯಸ್ತ್ವಮ್। ತತೋ ಮನಆದಿಭಿಃ ಇಷ್ಟಸಾಧನಂ ಬಾಹುಲ್ಯೇನ ಉಪ ಚಿನೋತಿ ಧರ್ಮಾಖ್ಯಮ್। ತತ್ ದ್ವಿವಿಧಮ್ ಜ್ಞಾನಪೂರ್ವಕಂ ಕೇವಲಂ ಚ। ತತ್ರ ಕೇವಲಂ ಪಿತೃಲೋಕಾದಿಪ್ರಾಪ್ತಿಫಲಮ್। ಜ್ಞಾನಪೂರ್ವಕಂ ದೇವಲೋಕಾದಿ ಬ್ರಹ್ಮಲೋಕಾನ್ತಪ್ರಾಪ್ತಿಫಲಮ್। ತಥಾ ಚ ಶಾಸ್ತ್ರಮ್ "ಆತ್ಮಯಾಜೀ ಶ್ರೇಯಾನ್ ದೇವಯಾಜಿನಃ" (ಶತ. ಬ್ರಾ. ೧೦-೨-೬-೧೩) ಇತ್ಯಾದಿ। ಸ್ಮೃತಿಶ್ಚ "ದ್ವಿವಿಧಂ ಕರ್ಮ ವೈದಿಕಮ್" (ಮನು. ೧೨-೮೮) ಇತ್ಯಾದ್ಯಾ। ಸಾಮ್ಯೇ ಚ ಧರ್ಮಾಧರ್ಮಯೋಃ ಮನುಷ್ಯತ್ವಪ್ರಾಪ್ತಿಃ। ಏವಂ ಬ್ರಹ್ಮಾದ್ಯಾ ಸ್ಥಾವರಾನ್ತಾ ಸ್ವಾಭಾವಿಕಾವಿದ್ಯಾದಿದೋಷವತೋ[2] ಧರ್ಮಾಧರ್ಮಸಾಧನಕೃತಾ ಸಂಸಾರಗತಿಃ

---

1. ಆತ್ಮನು ಶಾಸ್ತ್ರೈಕಗಮ್ಯನಾಗಿರುತ್ತಾನಾದರೂ ಶ್ರುತಿಯು ತನಗೆ ಉಪೋದ್ಬಲಕವಾಗಿ ಉದಾಹರಿಸಿರುವ ಸಂಭಾವನಾಯುಕ್ತಿಯನ್ನೇ ಸ್ವತಂತ್ರಪ್ರಮಾಣವೆಂದು ಹೇಳುತ್ತಿರುವರು ಎಂದರ್ಥ. ಆತ್ಮನು ಪ್ರತ್ಯಕ್ಷಾನುಮಾನಗಳಿಗೆ ವಿಷಯನಲ್ಲವೆಂಬುದಕ್ಕೆ ಐ. ಭಾ. (ಭಾ. ಭಾ. ೬೩ ೬೪ನ್ನು) ನೋಡಿರಿ.

2. 'ಅವಿದ್ಯಾದಿದೋಷವತಿ' ಎಂಬ ಅ॥ ಪಾಠಕ್ಕಿಂತ ಇದೇ ಮೇಲು.

ನಾಮರೂಪಕರ್ಮಾಶ್ರಯಾ। ತದೇವೇದಂ ವ್ಯಾಕೃತಂ ಸಾಧ್ಯಸಾಧನರೂಪಂ ಜಗತ್ ಪ್ರಾಗುತ್ಪತ್ತೇಃ ಅವ್ಯಾಕೃತಮ್ ಆಸೀತ್। ಸ ಏಷ ಬೀಜಾಙ್ಕುರವತ್[1] ಅವಿದ್ಯಾಕೃತಃ ಸಂಸಾರಃ ಆತ್ಮನಿ ಕ್ರಿಯಾಕಾರಕಫಲಾಧ್ಯಾರೋಪಲಕ್ಷಣಃ ಅನಾದಿರನನ್ತೋಽನರ್ಥಃ ಇತ್ಯೇತಸ್ಮಾದ್ ವಿರಕ್ತಸ್ಯ ಅವಿದ್ಯಾನಿವೃತ್ತಯೇ ತದ್ವಿಪರೀತಬ್ರಹ್ಮವಿದ್ಯಾಪ್ರತಿಪತ್ತ್ಯರ್ಥಾ ಉಪನಿಷತ್ ಆರಭ್ಯತೇ ॥

(ಭಾಷ್ಯಾರ್ಥ)

ಹೇಗೇ ಆಗಲಿ, ದೇಹಾಂತರಸಂಬಂಧಿಯಾದ ಆತ್ಮನಿರುವನು ಎಂಬಿಂತು ತಿಳಿದುಕೊಂಡಿರುವವನಿಗೆ ದೇಹಾಂತರಕ್ಕೆ ಸೇರಿದ ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಗಳಿಗೆ (ಯಾವದು) ಉಪಾಯ(ವೆಂಬುದನ್ನು) ತಿಳಿಯಬೇಕೆನ್ನುವವರಿಗೆ ಆ ಉಪಾಯವಿಶೇಷಗಳನ್ನು ತಿಳಿಸಿಕೊಡುವದಕ್ಕೆ **ಕರ್ಮಕಾಂಡವು** ಪ್ರಾರಂಭವಾಗಿರುತ್ತದೆ. ಆದರೆ ತನಗೆ ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಗಳಲ್ಲಿ (ಆಗುತ್ತಿರುವ) ಇಚ್ಛೆಗೆ ಕಾರಣವಾಗಿರುವ ಕರ್ತೃಭೋಕ್ತೃಸ್ವರೂಪನು (ತಾನೆಂಬ) ಅಭಿಮಾನರೂಪವಾದ ಆತ್ಮವಿಷಯದ ಅಜ್ಞಾನವನ್ನು ಅದಕ್ಕೆ ವಿಪರೀತವಾಗಿರುವ ಬ್ರಹ್ಮಾತ್ಮಸ್ವರೂಪವಿಜ್ಞಾನದಿಂದ (ಆ ಕರ್ಮಕಾಂಡದಲ್ಲಿ) ಕಳೆದುಹಾಕಿರುವದಿಲ್ಲ.[2]

ಎಲ್ಲಿಯವರೆಗೆ ಆ (ಅಜ್ಞಾನವನ್ನು) ಕಳೆದುಹಾಕಿರುವದಿಲ್ಲವೋ ಅಲ್ಲಿಯವರೆಗೂ ಈ (ಜೀವನು) ಕರ್ಮಫಲದಲ್ಲಿ ರಾಗ, ದ್ವೇಷ–ಮುಂತಾದ ಸ್ವಾಭಾವಿಕವಾದ ದೋಷಗಳಿಂದ ಪ್ರೇರಿತನಾಗಿ ಶಾಸ್ತ್ರದಲ್ಲಿ ವಿಹಿತವಾಗಿರುವದನ್ನೂ ಮತ್ತು ಪ್ರತಿಷಿದ್ಧವಾಗಿರುವದನ್ನೂ ಮೀರಿಯಾದರೂ ಮುಂದುವರಿಯುತ್ತಾ ಮನೋವಾಕ್ಕಾಯಗಳಿಂದ ದೃಷ್ಟವಾದ ಅಥವಾ ಅದೃಷ್ಟವಾದ ಅನಿಷ್ಟಗಳನ್ನುಂಟುಮಾಡುವ **ಅಧರ್ಮ**ಗಳೆಂಬ ಕರ್ಮಗಳನ್ನು ಬಹಳವಾಗಿ ಕೂಡಿಹಾಕಿಕೊಳ್ಳುತ್ತಿರುತ್ತಾನೆ ; ಏಕೆಂದರೆ (ಅವನಲ್ಲಿ ಆಗ) ಸ್ವಾಭಾವಿಕದೋಷಗಳು ಪ್ರಬಲವಾಗಿರುತ್ತವೆ. ಅದರಿಂದ ಸ್ಥಾವರಾಂತನಾದ ಅಧೋಗತಿ(ಯಾಗುವದು). ಒಂದೊಂದು ವೇಳೆ ಶಾಸ್ತ್ರದಿಂದಾದ ಸಂಸ್ಕಾರವು ಪ್ರಬಲವಾಗಿರುತ್ತದೆ. ಅದರಿಂದ ಮನಸ್ಸೇ ಮುಂತಾದ (ಕರಣ)ಗಳಿಂದ **ಧರ್ಮ**ವೆಂಬ ಇಷ್ಟಸಾಧನವಾದ (ಕರ್ಮವನ್ನು) ಬಹಳವಾಗಿ

---

1. 'ಬೀಜಾಙ್ಕುರಾದಿವತ್' ಎಂಬುದನ್ನು ಹೀಗೆ ತಿದ್ದಿಕೊಂಡಿದೆ. 'ಬೀಜಾಙ್ಕುರಾವಿವ' ಎಂಬ ಪಾಠವೂ ಉಂಟು. ನಾವು ಕೊಟ್ಟಿರುವದು ತೈ॥ ಪಾಠ.

2. ಹಾಗೆ ಕಳೆದುಹಾಕುವದಕ್ಕಾಗಿಯೇ ಉಪನಿಷತ್ತು ಬಂದಿರುತ್ತದೆ. ಇದೇ ಕರ್ಮಕಾಂಡಕ್ಕೂ ಉಪನಿಷತ್ತಿಗೂ ಇರುವ ಸಂಬಂಧವು. ಇದನ್ನು ಮುಂದೆ ವಿವರಿಸಲಾಗುವದು. ತೈ. ಭಾ. ಭಾ. ಭಾ. ೯೦ನ್ನು ನೋಡಿರಿ.

ಕೂಡಿಹಾಕಿಕೊಳ್ಳುತ್ತಾನೆ. ಆ (ಧರ್ಮವು) ಜ್ಞಾನಪೂರ್ವಕವಾದದ್ದು,[1] ಕೇವಲವಾದದ್ದು-ಎಂದು ಎರಡು ಬಗೆಯಾಗಿರುತ್ತದೆ. ಅವುಗಳೊಳಗೆ ಕೇವಲವಾದದ್ದಕ್ಕೆ ಪಿತೃಲೋಕವೇ ಮುಂತಾದದ್ದರ ಪ್ರಾಪ್ತಿಯು ಫಲವು; ಜ್ಞಾನಪೂರ್ವಕವಾದದ್ದಕ್ಕೆ ದೇವಲೋಕಾದಿಯಾಗಿ ಬ್ರಹ್ಮಲೋಕಾಂತವಾದದ್ದರ ಪ್ರಾಪ್ತಿ ಎಂಬ ಫಲ (ವಾಗುತ್ತದೆ). ಆದ್ದರಿಂದಲೇ ಶಾಸ್ತ್ರವು "ದೇವಯಾಜಿಗಿಂತ ಆತ್ಮಯಾಜಿಯು ಹೆಚ್ಚಿನವನು" (ಶತ. ಬ್ರಾ. ೧೦-೨-೬-೧೩) ಎಂದುಮುಂತಾಗಿ ಹೇಳುತ್ತಿದೆ.[2] ಸ್ಮೃತಿಯೂ "(ಪ್ರವೃತ್ತವೆಂದೂ ನಿವೃತ್ತವೆಂದೂ) ವೈದಿಕಕರ್ಮವು ಎರಡು ವಿಧವಾಗಿರುತ್ತದೆ" (ಮನು. ೧೨-೮೮) ಎಂದು ಮುಂತಾಗಿ ಹೇಳುತ್ತಿದೆ. ಮತ್ತು (ಈ) ಧರ್ಮಾಧರ್ಮಗಳು ಸಮಾನವಾಗಿದ್ದರೆ ಮನುಷ್ಯತ್ವವು ಪ್ರಾಪ್ತವಾಗುತ್ತದೆ.[3] ಈ ರೀತಿಯಲ್ಲಿ ಸ್ವಾಭಾವಿಕವಾದ[4] ಅವಿದ್ಯೆಯೇ ಮುಂತಾದ ದೋಷಗಳುಳ್ಳವನಿಗೆ[5] ಧರ್ಮಾಧರ್ಮಗಳೆಂಬ ಸಾಧನಗಳಿಂದ ನಾಮರೂಪಕರ್ಮಾಶ್ರಯವಾಗಿರುವ ಬ್ರಹ್ಮಾದಿಸ್ಥಾವರಾಂತವಾದ ಸಂಸಾರಗತಿಯು ಉಂಟಾಗುತ್ತಿರುವದು.

ಅದೇ ಈ ವ್ಯಾಕೃತವಾದ ಸಾಧ್ಯಸಾಧನರೂಪವಾದ ಜಗತ್ತು ಹುಟ್ಟುವದಕ್ಕಿಂತ ಮುಂಚೆ ಅವ್ಯಾಕೃತವಾಗಿತ್ತು. ಬೀಜಾಂಕುರಗಳಂತೆ (ಕಾರ್ಯಕಾರಣ ಪ್ರವಾಹವಾಗಿರುವ)[6], ಆತ್ಮನಲ್ಲಿ ಕ್ರಿಯಾಕಾರಕಫಲಗಳನ್ನು ಅಧ್ಯಾರೋಪಣ ಮಾಡುವದೆಂಬ, ಆ ಈ ಅವಿದ್ಯಾಕೃತವಾದ[7] ಸಂಸಾರವು ಅನಾದಿಯೂ ಅನಂತವೂ[8]

---

1. ಉಪಾಸನೆಯೊಡನೆ ಸೇರಿಕೊಂಡಿರತಕ್ಕದ್ದು ಎಂದರ್ಥ.

2. ಆತ್ಮಸಂಸ್ಕಾರಕ್ಕಾಗಿ ಉಪಾಸನಾಸಹಿತವಾದ ಕರ್ಮವನ್ನು ಮಾಡುವವನು ಆತ್ಮಯಾಜಿ. ಇದನ್ನು ೩-೩ರಲ್ಲಿರುವ ಭುಜ್ಯುಪ್ರಶ್ನವಿವರಣದ ಅವತರಣಿಕೆಯಲ್ಲಿ ಸ್ಪಷ್ಟಪಡಿಸಿದೆ.

3. ಧರ್ಮವು ಹೆಚ್ಚಿದರೆ ಹಿರಣ್ಯಗರ್ಭಪರ್ಯಂತವಾದ ಫಲದ ಪ್ರಾಪ್ತಿ; ಅಧರ್ಮವು ಹೆಚ್ಚಿದರೆ ಸ್ಥಾವರಾಂತವಾದ ಫಲದ ಪ್ರಾಪ್ತಿ; ಧರ್ಮಾಧರ್ಮಗಳು ಸಮವಾದರೆ ಮನುಷ್ಯತ್ವಪ್ರಾಪ್ತಿ. ಸೂ.ಭಾ. ೧-೧-೪ರಲ್ಲಿಯೂ ಇದನ್ನು ಹೇಳಿದೆ.

4. ಸ್ವಭಾವದಿಂದಲೇ ಇದ್ದುಕೊಂಡಿರುವ, ಅವಿಚಾರಸಿದ್ಧವಾದ-ಎಂದರ್ಥ.

5. ಅವಿದ್ಯಾರಾಗಾದಿದೋಷಗಳುಳ್ಳವನಿಗೆ ಎಂದರ್ಥ. ಸಕಲಕರ್ಮಗಳೂ ದೋಷಪ್ರಯುಕ್ತವಾಗಿರುವವೆಂದು ಈ ಉಪನಿಷತ್ತಿನ ಭಾಷ್ಯದಲ್ಲಿ ಅಲ್ಲಲ್ಲಿ ತಿಳಿಸಿರುತ್ತದೆ. ನ್ಯಾ. ಸೂ. ೧-೧-೧೮ನ್ನು ನೋಡಿ.

6. ವ್ಯಾಕೃತಾವ್ಯಾಕೃತಗಳೆರಡೂ ಸಂಸಾರವೇ ಎಂದರ್ಥ.

7. ವ್ಯಾಕೃತಾವ್ಯಾಕೃತಗಳೆರಡೂ ಅವಿದ್ಯಾಕಲ್ಪಿತವೇ; ಅವಿದ್ಯೆಯೆಂದರೆ ಕ್ರಿಯಾಕಾರಕಫಲಗಳ ಅಧ್ಯಾರೋಪಣೆಯೇ. ಮಾಂ.ಭಾ. (ಭಾ.ಭಾ. ೩೭) ನೋಡಿ.

8. ಅವಿದ್ಯೆಯೂ ಅದರ ಕಾರ್ಯವಾದ ಸಂಸಾರವೂ ಅನಾದಿಯೂ ಅನಂತವೂ ಆಗಿದ್ದರೂ ಅಸತ್ಯವಾಗಿರುವದರಿಂದ ವಿದ್ಯೆಯಿಂದ ನಾಶವಾಗಬಹುದಾಗಿದೆ.

ಆಗಿರುವ ಅನರ್ಥವು. ಆದ್ದರಿಂದ ಇದರಿಂದ ವಿರಕ್ತನಾಗಿರುವವನಿಗೆ ಬ್ರಹ್ಮವಿದ್ಯಾ ಪ್ರಾಪ್ತಿಗಾಗಿ (ಈ) ಉಪನಿಷತ್ತು ಪ್ರಾರಂಭವಾಗಿರುತ್ತದೆ.[1]

## ಅಶ್ವಮೇಧೋಪಾಸನಾಗ್ರಂಥದ ಸಂಬಂಧ

(ಭಾಷ್ಯ)

೬. ಅಸ್ಯ ತು ಅಶ್ವಮೇಧಕರ್ಮಸಂಬನ್ಧಿನೋ ವಿಜ್ಞಾನಸ್ಯ ಪ್ರಯೋಜನಂ ಯೇಷಾಮ್ ಅಶ್ವಮೇಧೇ ನಾಧಿಕಾರಃ ತೇಷಾಮ್ ಅಸ್ಮಾದೇವ ವಿಜ್ಞಾನಾತ್ ತತ್ಫಲಪ್ರಾಪ್ತಿಃ। "ವಿದ್ಯಯಾ ವಾ ಕರ್ಮಣಾ ವಾ" (ಶತ. ಬ್ರಾ. ೧೦-೪-೩-೯) "ತದ್ಧೈತಲ್ಲೋಕಜಿದೇವ" (೧-೩-೨೮) ಇತ್ಯೇವಮಾದಿಶ್ರುತಿಭ್ಯಃ। ಕರ್ಮ ವಿಷಯತ್ವಮೇವ ವಿಜ್ಞಾನಸ್ಯ ಇತಿ ಚೇತ್। ನ। "ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ" (ತೈ. ಸಂ. ೫-೩-೧೨) ಇತಿ ವಿಕಲ್ಪಶ್ರುತೇಃ। ವಿದ್ಯಾಪ್ರಕರಣೇ ಚ ಆಮ್ನಾನಾತ್। ಕರ್ಮಾನ್ತರೇ ಚ ಸಂಪಾದನದರ್ಶನಾತ್ ವಿಜ್ಞಾನಾತ್ ತತ್ಫಲಪ್ರಾಪ್ತಿರಸ್ತಿ ಇತ್ಯವಗಮ್ಯತೇ। ಸರ್ವೇಷಾಂ ಚ ಕರ್ಮಣಾಂ ಪರಂ ಕರ್ಮ ಅಶ್ವಮೇಧಃ। ಸಮಷ್ಟಿವ್ಯಷ್ಟಿಪ್ರಾಪ್ತಿಫಲತ್ವಾತ್। ತಸ್ಯ ಚ ಇಹ ಬ್ರಹ್ಮವಿದ್ಯಾಪ್ರಾರಮ್ಭೇ ಆಮ್ನಾನಂ ಸರ್ವಕರ್ಮಣಾಂ ಸಂಸಾರವಿಷಯತ್ವ ಪ್ರದರ್ಶನಾರ್ಥಮ್। ತಥಾ ಚ ದರ್ಶಯಿಷ್ಯತಿ ಫಲಮ್ ಅಶನಾಯಾಮೃತ್ಯು ಭಾವಮ್। ನ ನಿತ್ಯಾನಾಂ ಸಂಸಾರವಿಷಯಫಲತ್ವಮ್ ಇತಿ ಚೇತ್। ನ। ಸರ್ವ ಕರ್ಮಫಲೋಪಸಂಹಾರಶ್ರುತೇಃ। ಸರ್ವಂ ಹಿ ಪತ್ನೀಸಂಬದ್ಧಂ ಕರ್ಮ। "ಜಾಯಾ ಮೇ ಸ್ಯಾತ್" (೧-೫-೧೭), "ಏತಾವಾನ್ ವೈ ಕಾಮಃ" (೧-೪-೧೭) ಇತಿ ನಿಸರ್ಗತ ಏವ ಸರ್ವಕರ್ಮಣಾಂ ಕಾಮ್ಯತ್ವಂ ದರ್ಶಯಿತ್ವಾ ಪುತ್ರಕರ್ಮಾಪರವಿದ್ಯಾನಾಂ ಚ "ಅಯಂ ಲೋಕಃ ಪಿತೃಲೋಕೋ ದೇವಲೋಕಃ" ಇತಿ ಫಲಂ ದರ್ಶಯಿತ್ವಾ ತ್ರ್ಯನ್ನಾತ್ಮಕತಾಂ ಚ ಅನ್ತೇ ಉಪಸಂಹರಿಷ್ಯತಿ "ತ್ರಯಂ ವಾ ಇದಂ ನಾಮ ರೂಪಂ ಕರ್ಮ" (೧-೬-೧) ಇತಿ ಸರ್ವಕರ್ಮಣಾಂ ಫಲಂ ವ್ಯಾಕೃತಂ ಸಂಸಾರ ಏವ ಇತಿ ||

(ಭಾಷ್ಯಾರ್ಥ)

ಈ ಅಶ್ವಮೇಧಕರ್ಮಸಂಬಂಧಿಯಾದ ವಿಜ್ಞಾನಕ್ಕಾದರೋ[2] ಪ್ರಯೋಜನ

---

1. ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳಿಂದ ಆತ್ಮಸಂಸ್ಕಾರವನ್ನು ಹೊಂದಿದವನಿಗೆ ವಿದ್ಯೆಯಲ್ಲಿ ಅಧಿಕಾರವು. ಆ ವಿದ್ಯೆಯನ್ನು ಉಪನಿಷತ್ತಿನಲ್ಲಿ ಹೇಳಿದೆ. ಇದೇ ಕರ್ಮಕಾಂಡಕ್ಕೂ ಉಪನಿಷತ್ತಿಗೂ ಇರುವ ಸಂಬಂಧವು.

2. ಉಪಾಸನೆಗಾದರೋ ಎಂದರ್ಥ. ಅಜ್ಞಾನವನ್ನು ಕಳೆಯುವ, ಕರ್ಮಾಸಂಬಂಧಿ ಯಾದ, ಬ್ರಹ್ಮಾತ್ಮೈಕತ್ವಜ್ಞಾನವೇ ಉಪನಿಷತ್ತಿಗೆ ವಿಷಯವಾದರೆ ಕರ್ಮಸಂಬಂಧಿಯಾದ ಉಪಾಸನೆಯಿಂದ ಉಪನಿಷತ್ತು ಪ್ರಾರಂಭವಾಗುವದೇಕೆ ? ಎಂಬ ಶಂಕೆಗೆ ಪರಿಹಾರವಿದು.

(ವೇನೆಂದರೆ) ಯಾರಿಗೆ ಅಶ್ವಮೇಧದಲ್ಲಿ ಅಧಿಕಾರವಿಲ್ಲವೋ ಅವರಿಗೆ ಈ ವಿಜ್ಞಾನ ದಿಂದಲೇ ಫಲವು ದೊರಕುವದು. "ವಿದ್ಯೆಯಿಂದಲಾಗಲಿ ಕರ್ಮದಿಂದಲಾಗಲಿ"[1] (ಶತ. ಬ್ರಾ. ೧೦-೪-೩-೯), "ಆ ಈ (ಪ್ರಾಣೋಪಾಸನೆಯು) ಲೋಕವನ್ನು ಜಯಿಸಿಯೇತೀರುವದೆಂಬುದು ಪ್ರಸಿದ್ಧವು" (೧-೩-೨೮) ಎಂಬಿವೇ ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ).

(ಆಕ್ಷೇಪ):—(ಈ) ವಿಜ್ಞಾನವು ಕರ್ಮವಿಷಯವಾದದ್ದೇ.[2]

(ಪರಿಹಾರ):—ಹಾಗಲ್ಲ. ಏಕೆಂದರೆ "ಯಾವನು ಅಶ್ವಮೇಧದಿಂದ ಯಾಗ ಮಾಡುತ್ತಾನೋ ಮತ್ತು ಯಾವನು ಹೀಗೆಂದು ತಿಳಿಯುತ್ತಾನೋ (ಅವನು ಪಾಪವನ್ನು ದಾಟುತ್ತಾನೆ, ಬ್ರಹ್ಮಹತ್ಯೆಯನ್ನು ದಾಟುತ್ತಾನೆ)" (ತೈ. ಸಂ. ೫-೩-೧೨) ಎಂದು ವಿಕಲ್ಪಶ್ರುತಿಯಿರುತ್ತದೆ. ವಿದ್ಯಾಪ್ರಕರಣದಲ್ಲಿ (ಈ ಉಪಾಸನೆಯನ್ನು) ಹೇಳಿರುವದರಿಂದಲೂ (ಇದಕ್ಕೆ ಸ್ವತಂತ್ರವಾಗಿಯೇ ಫಲವೆಂದು ತಿಳಿಯಬೇಕು). ಬೇರೆಯ ಕರ್ಮದಲ್ಲಿಯೂ ಸಂಪಾದನೆಮಾಡಿರುವದು ಕಂಡು ಬರುವದರಿಂದಲೂ[3] ವಿಜ್ಞಾನದಿಂದ ಆ ಫಲಪ್ರಾಪ್ತಿಯಾಗುವದುಂಟು ಎಂದು ನಿಶ್ಚಯವಾಗುತ್ತದೆ. ಇದಲ್ಲದೆ ಅಶ್ವಮೇಧವು ಕರ್ಮಗಳಲ್ಲೆಲ್ಲ ಹೆಚ್ಚಿನ ಕರ್ಮವು; ಏಕೆಂದರೆ (ಅದು) ಸಮಷ್ಟಿವ್ಯಷ್ಟಿ ಎಂಬ ಫಲವನ್ನು ಕೊಡುತ್ತದೆ.[4] ಆ (ಅಶ್ವಮೇಧವನ್ನು) ಇಲ್ಲಿ ಬ್ರಹ್ಮವಿದ್ಯೆಯ (ಗ್ರಂಥದ) ಪ್ರಾರಂಭದಲ್ಲಿ ಹೇಳಿರುವದು ಸರ್ವ ಕರ್ಮಗಳೂ ಸಂಸಾರವಿಷಯವೇ ಎಂಬುದನ್ನು ತಿಳಿಸಿಕೊಡುವದಕ್ಕಾಗಿ. ಆದ್ದ

---

1. ಇದು ಯಾವ ಶ್ರುತಿಯೆಂಬುದು ತಿಳಿಯಲಿಲ್ಲ. ಇದು ಶ್ರುತಿಯ ಅರ್ಥವೆಂದೂ ಮುಂದೆ ಕೊಟ್ಟಿರುವ "ಯೋऽಶ್ವಮೇಧೇನ ಯಜತೇ" ಎಂಬ ಶ್ರುತಿಯೇ ಇದೆಂದೂ ವ್ಯಾಖ್ಯಾನ ದಲ್ಲಿ ಬರೆದಿದೆ. ನಾವು ಕೊಟ್ಟಿರುವ ಶತ.ಬ್ರಾ. ಸಂಖ್ಯೆಯು ಇಂಗ್ಲಿಷ್‌ಪರಿವರ್ತನದ ಆಧಾರದಿಂದ.

2. ಬರಿಯ ಉಪಾಸನೆಯಿಂದಲೇ ಫಲವು ಸಿಕ್ಕುವದಾದರೆ ಆಯಾಸಯುಕ್ತವಾದ ಕರ್ಮವನ್ನು ಯಾರೂ ಮಾಡುವದಕ್ಕೆ ತೊಡಗುವದಿಲ್ಲ. ಆದ್ದರಿಂದ ಇದು ಕರ್ಮಕ್ಕೇ ಸೇರಿದ್ದು ಎಂದು ಭಾವ.

3. ಅಶ್ವಮೇಧವಲ್ಲದೆ ಬೇರೆಯ ಕರ್ಮದಲ್ಲಿಯೂ ಚಿತ್ಯಾಗ್ನ್ಯಾದಿಗಳಲ್ಲಿ ಈ ಲೋಕವೇ ಮುಂತಾದವುಗಳ ದೃಷ್ಟಿಯನ್ನು ಸಂಪಾದನೆಮಾಡಿರುತ್ತದೆ. ಅದು ಕೇವಲೋಪಾಸನಾವಿಧಿಯೇ ಎಂಬುದು ಸ್ಪಷ್ಟ. ಅದರಂತೆಯೂ ಇದೂ ಕೇವಲೋಪಾಸನೆಯೆಂದು ತಿಳಿಯಬೇಕೇ ಹೊರತು ಕರ್ಮಾಂಗೋಪಾಸನೆಯು ವಿವಕ್ಷಿತವಲ್ಲ. ಸೂ. ೩-೩-೫೨ನ್ನು ನೋಡಿ.

4. ದೇವತೆಗಳು ವ್ಯಷ್ಟಿ, ಹಿರಣ್ಯಗರ್ಭನು ಸಮಷ್ಟಿ, ೩-೩-೧, ೩-೩-೨೮ ಭಾಷ್ಯವನ್ನು ನೋಡಿ.

ರಿಂದಲೇ ಹಸಿವಿನ (ರೂಪವಾದ) ಮೃತ್ಯುಭಾವವೇ (ಈ ವಿಜ್ಞಾನಕ್ಕೆ) ಫಲವೆಂದು ಮುಂದೆ ತಿಳಿಸಿರುತ್ತದೆ.[1]

(ಆಕ್ಷೇಪ):—ನಿತ್ಯ(ಕರ್ಮಗಳಿಗೆ) ಸಂಸಾರವಿಷಯವಾದ ಫಲವಿಲ್ಲ.[2]

(ಪರಿಹಾರ):—ಹಾಗಲ್ಲ. ಏಕೆಂದರೆ ಸರ್ವಕರ್ಮಗಳಿಗೂ (ಸಂಸಾರ)ಫಲವನ್ನು ಉಪಸಂಹಾರಮಾಡುವ ಶ್ರುತಿಯು (ಇಲ್ಲಿರುತ್ತದೆ). ಯಾವ ಕರ್ಮವಾದರೂ ಪತ್ನೀಸಂಬದ್ಧ(ವಾಗಿಯೇ ಇರುತ್ತದೆ). "ನನಗೆ ಹೆಂಡತಿಯಾಗಬೇಕು" (೧-೫-೧೭), "ಇದಿಷ್ಟೋ ಕಾಮವೇ" (೧-೪-೧೭) ಎಂದು ಸ್ವಭಾವದಿಂದಲೇ ಎಲ್ಲಾ ಕರ್ಮವೂ ಕಾಮ್ಯವೇ ಎಂಬುದನ್ನು ತಿಳಿಸಿ ಪುತ್ರ, ಕರ್ಮ, ಅಪರವಿದ್ಯೆ– (ಇವು) ಗಳಿಗೆ (ಅನುಕ್ರಮವಾಗಿ) ಈ ಲೋಕ, ಪಿತೃಲೋಕ, ದೇವಲೋಕ–ಎಂಬ ಫಲವನ್ನು ತಿಳಿಸಿ[3] (ಇದೆಲ್ಲವೂ) ಅನ್ನತ್ರಯಾತ್ಮಕವಾಗಿಯೇ ಇರುವದೆಂಬುದನ್ನು "ಇದು (ಎಲ್ಲವೂ) ನಾಮ, ರೂಪ, ಕರ್ಮ ಎಂಬ ಮೂರೇ" (೧-೬-೧) ಎಂದು ಸರ್ವಕರ್ಮಗಳಿಗೂ ಫಲವು ವ್ಯಾಕೃತವಾದ ಸಂಸಾರವೇ ಎಂಬುದನ್ನು ಕೊನೆಯಲ್ಲಿ (ಮುಂದೆ) ಉಪಸಂಹಾರಮಾಡಿರುತ್ತದೆ.

## ಉಪನಿಷತ್ಸಂಬಂಧಭಾಷ್ಯದ ಉಪಸಂಹಾರ

(ಭಾಷ್ಯ)

೭. ಇದಮೇವ ತ್ರಯಂ ಪ್ರಾಕ್ ಉತ್ಪತ್ತೇಃ ತರ್ಹಿ ಅವ್ಯಾಕೃತಮಾಸೀತ್। ತದೇವ ಪುನಃ ಸರ್ವಪ್ರಾಣಿಕರ್ಮವಶಾತ್ ವ್ಯಾಕ್ರಿಯತೇ ಬೀಜಾದಿವ ವೃಕ್ಷಃ। ಸೋಽಯಂ ವ್ಯಾಕೃತಾವ್ಯಾಕೃತರೂಪಃ ಸಂಸಾರಃ ಅವಿದ್ಯಾವಿಷಯಃ ಕ್ರಿಯಾಕಾರಕಫಲಾತ್ಮಕತಯಾ ಆತ್ಮರೂಪತ್ವೇನ ಅಧ್ಯಾರೋಪಿತಃ ಅವಿದ್ಯಯೈವ ಮೂರ್ತಾಮೂರ್ತತದ್ವಾಸನಾತ್ಮಕಃ। ಅತೋ ವಿಲಕ್ಷಣಃ ಅನಾಮರೂಪಕರ್ಮಾತ್ಮಕಃ ಅದ್ವಯಃ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಽಪಿ ಕ್ರಿಯಾಕಾರಕಫಲಭೇದಾದಿವಿಪರ್ಯಯೇಣ ಅವಭಾಸತೇ। ಅತಃ ಅಸ್ಮಾತ್ ಕ್ರಿಯಾಕಾರಕಫಲಭೇದಸ್ವರೂಪಾತ್ ಏತಾವದಿದಮಿತಿ ಸಾಧ್ಯಸಾಧನರೂಪಾದ್ ವಿರಕ್ತಸ್ಯ ಕಾಮಾದಿದೋಷಕರ್ಮಬೀಜಭೂತಾವಿದ್ಯಾನಿವೃತ್ತಯೇ ರಜ್ಜ್ವಾಮಿವ ಸರ್ಪವಿಜ್ಞಾನಾಪನಯಾಯ ಬ್ರಹ್ಮವಿದ್ಯಾ ಆರಭ್ಯತೇ ॥

---

1. ೧-೨-೭ರಲ್ಲಿ.

2. ಕರ್ಮಗಳಿಂದಲೇ ಮೋಕ್ಷವೆಂಬುದು ಪೂರ್ವಪಕ್ಷಿಯ ಭಾವ. ನಿತ್ಯಕರ್ಮಗಳಿಗೆ ಫಲವನ್ನು ಹೇಳದೆ ಇರುವದರಿಂದ ಅದಕ್ಕೆ ಮೋಕ್ಷವೇ ಫಲವೆಂದು ಕಲ್ಪಿಸಬೇಕು ಎಂದು ಅವನ ಆಶಯ.

3. ಬೃ. ೧-೫-೧೬ರಲ್ಲಿ

(ಭಾಷ್ಯಾರ್ಥ)

ಇದೇ ಮೂರು ಉತ್ಪತ್ತಿಗಿಂತ ಮುಂಚೆ ಆಗ ಅವ್ಯಾಕೃತವಾಗಿತ್ತು. ಅದೇ ಎಲ್ಲಾ ಪ್ರಾಣಿಗಳ ಕರ್ಮವಶದಿಂದ ಬೀಜದಿಂದ ಮರವಾಗುವಂತೆ[1] ವ್ಯಾಕೃತವಾಗುತ್ತದೆ. ಆ ಈ ವ್ಯಾಕೃತಾವ್ಯಾಕೃತರೂಪವಾದ ಅವಿದ್ಯಾವಿಷಯವಾದ[2] ಸಂಸಾರವು ಮೂರ್ತಾಮೂರ್ತಗಳು ಮತ್ತು ಅವುಗಳ ವಾಸನೆಯ ರೂಪವಾಗಿ[3] ಕ್ರಿಯಾಕಾರಕಫಲರೂಪವಾಗಿದ್ದು ಆತ್ಮರೂಪವೆಂದು ಅವಿದ್ಯೆಯಿಂದಲೇ ಅಧ್ಯಾರೋಪಿತವಾಗಿರುತ್ತದೆ.[4] ಇದಕ್ಕಿಂತ ವಿಲಕ್ಷಣವಾಗಿ ನಾಮರೂಪಕರ್ಮಾತ್ಮಕವಲ್ಲದೆ ಅದ್ವಯನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವರೂಪನಾದರೂ (ಆತ್ಮನು) ಕ್ರಿಯಾಕಾರಕಫಲಭೇದವೇ ಮುಂತಾದ ವಿಪರೀತರೂಪದಿಂದ ತೋರುತ್ತಿರುತ್ತಾನೆ. ಆದ್ದರಿಂದ ಈ ಕ್ರಿಯಾಕಾರಕಫಲಭೇದಸ್ವರೂಪವಾಗಿರುವ ಸಾಧ್ಯಸಾಧನರೂಪವಾದ (ಸಂಸಾರದಿಂದ) ಇದು ಇಷ್ಟೇ ಎಂದು ವಿರಕ್ತನಾದವನಿಗೆ ಕಾಮವೇ ಮುಂತಾದ ದೋಷಗಳಿಗೂ ಕರ್ಮಕ್ಕೂ ಬೀಜವಾಗಿರುವ[5] ಅವಿದ್ಯೆಯ ನಿವೃತ್ತಿಯಾಗಲೆಂದು–ಹಗ್ಗದಲ್ಲಿ ಹಾವಿನ ಬುದ್ಧಿಯನ್ನು ತೊಲಗಿಸುವದಕ್ಕೆ (ಹಗ್ಗದ ತಿಳಿವಳಿಕೆಯನ್ನುಂಟುಮಾಡುವದಕ್ಕಾರಂಭಿಸು)ವಂತೆ[6]—ಬ್ರಹ್ಮವಿದ್ಯೆಯನ್ನು ಪ್ರಾರಂಭಿಸಿರುತ್ತದೆ.[7]

---

1. ಬೀಜವು ಏಕರೂಪವಾಗಿರುತ್ತದೆ; ಅದೇ ಕೊಂಬೆ, ಬುಡ, ಎಲೆ–ಎಂದು ಮುಂತಾಗಿ ಮುಂದೆ ಬಿಡಿಬಿಡಿಯಾಗಿ ಮರವಾಗುತ್ತದೆ. ನಾಮರೂಪಕರ್ಮಬೀಜವೂ ಹೀಗೆಯೇ. ಇದನ್ನು ೧–೪–೭ರಲ್ಲಿ ವಿವರಿಸಲಾಗುವದು.

2. ಅವಿದ್ಯಾವಂತರಿಗೇ ಸಂಸಾರವು.

3. ಮೂರ್ತಾಮೂರ್ತತದ್ವಾಸನೆಗಳು ಅವಿದ್ಯೆಯಿಂದ ಆತ್ಮನಲ್ಲಿ ಅಧ್ಯಾರೋಪಿತವಾಗಿರುವವೆಂಬುದನ್ನು ೨–೩ರಲ್ಲಿ ವಿವರಿಸಲಾಗುವದು.

4. ಅವಿದ್ಯೆಯಿಂದಲೇ ಅಧ್ಯಾರೋಪಿತವಾಗಿರುತ್ತದೆ ಎಂದದ್ದರಿಂದ ಮೂಲಾವಿದ್ಯೆಯೆಂಬುದೊಂದು ಶಕ್ತಿಯು ಅಧ್ಯಾರೋಪಕ್ಕೆ ಕಾರಣವು ಎಂದು ಭಾಷ್ಯಕ್ಕೆ ಕೆಲವರು ಅರ್ಥವನ್ನು ಮಾಡಿಕೊಂಡಿರುತ್ತಾರೆ. ಇದು ಸರಿಯಲ್ಲ. ಏಕೆಂದರೆ ಛಾಂ. ಭಾ. ೮–೧೨–೧ರಲ್ಲಿ "ಅವಿದ್ಯಾಧ್ಯಸ್ತ" ಎಂಬ ಮಾತನ್ನು "ಮಿಥ್ಯಾಜ್ಞಾನಾಧ್ಯಸ್ತ" ಎಂದೇ ವಿವರಿಸಿದೆ.

5. ನಿಮಿತ್ತವಾಗಿರುವ ಎಂದರ್ಥ; ಮರಕ್ಕೆ ಬೀಜದಂತೆ ಉಪಾದಾನವಾಗಿರುವ ಎಂಬ ಅಭಿಪ್ರಾಯವೇನೂ ಇಲ್ಲಿಲ್ಲ.

6. ತಪ್ಪುತಿಳಿವಳಿಕೆಯೇ ಅವಿದ್ಯೆಯೆಂದೂ ಸರಿಯಾದ ತಿಳಿವಳಿಕೆಯೇ ಅದನ್ನು ತೊಲಗಿಸುವದೆಂದೂ ಈ ದೃಷ್ಟಾಂತದಿಂದ ಸ್ಪಷ್ಟಗೊಳಿಸಿದಂತಾಯಿತು.

7. ಬ್ರಹ್ಮವಿದ್ಯೆಯನ್ನು ತಿಳಿಸಿಕೊಡುವ ಉಪನಿಷತ್ತನ್ನು ಪ್ರಾರಂಭಿಸಿದೆ ಎಂದರ್ಥ.

# ಉಪನಿಷತ್ತು – ಮಧುಕಾಂಡ

# ಒಂದನೆಯ ಅಧ್ಯಾಯ–ಒಂದನೆಯ ಬ್ರಾಹ್ಮಣ

(ಅಶ್ವದ ಸಂಬಂಧವಾದ ಉಪಾಸನೆ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೮. ತತ್ರ ತಾವತ್ ಅಶ್ವಮೇಧವಿಜ್ಞಾನಾಯ "ಉಷಾ ವಾ ಅಶ್ವಸ್ಯ" ಇತ್ಯಾದಿ। ತತ್ರ ಅಶ್ವವಿಷಯಮೇವ ದರ್ಶನಮ್ ಉಚ್ಯತೇ ಪ್ರಾಧಾನ್ಯಾತ್ ಅಶ್ವಸ್ಯ। ಪ್ರಾಧಾನ್ಯಂ ಚ ತನ್ನಾಮಾಙ್ಕಿತತ್ವಾತ್ ಕ್ರತೋಃ, ಪ್ರಾಜಾಪತ್ಯತ್ವಾಚ್ಚ॥

(ಭಾಷ್ಯಾರ್ಥ)

ಅದರಲ್ಲಿ ಮೊದಲನೆಯದಾಗಿ ಅಶ್ವಮೇಧವಿಜ್ಞಾನಕ್ಕಾಗಿ "ಉಷಾ ವಾ ಅಶ್ವಸ್ಯ" ಮುಂತಾದ (ಬ್ರಾಹ್ಮಣವನ್ನು ಆರಂಭಿಸುತ್ತದೆ). ಅದರಲ್ಲಿಯೂ (ಮೊದಲು) ಅಶ್ವವಿಷಯವಾದ ದರ್ಶನವನ್ನೇ[1] ಹೇಳಲಾಗುತ್ತದೆ ; ಏಕೆಂದರೆ ಅಶ್ವವೇ (ಇಲ್ಲಿ) ಮುಖ್ಯವಾಗಿರುತ್ತದೆ. ಅಶ್ವವು ಮುಖ್ಯವೆಂಬುದು ಕ್ರತುವಿಗೆ ಅದರ ಹೆಸರನ್ನು ಇಟ್ಟಿರುವದರಿಂದಲೂ ಅಶ್ವವು ಪ್ರಜಾಪತಿದೇವತಾಕವಾಗಿರುವದರಿಂದಲೂ (ಆಗಿರುತ್ತದೆ).

## ಅಶ್ವದ ಅವಯವಗಳಲ್ಲಿ ಕಾಲಾದಿದೃಷ್ಟಿ

(ಉಪನಿಷತ್ತು)

**ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ। ಸೂರ್ಯಶ್ಚಕ್ಷುರ್ವಾತಃ ಪ್ರಾಣೋವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಽಶ್ವಸ್ಯ ಮೇಧ್ಯಸ್ಯ। ದ್ಯೌಃ ಪೃಷ್ಠಮನ್ತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇ ಅವಾನ್ತರದಿಶಃ ಪರ್ಶವ ಋತವೋಽಙ್ಗಾನಿ ಮಾಸಾಶ್ಚಾರ್ಧ**

---

1. ಅಶ್ವಮೇಧದ ಕುದುರೆಯ ವಿಷಯವಾದ ಉಪಾಸನೆಯನ್ನೇ ಎಂದರ್ಥ.

**ಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಗ್ಂಸಾನಿ। ಊವಧ್ಯಗ್ಂ ಸಿಕತಾಃ ಸಿನ್ಧವೋ ಗುದಾ ಯಕೃಚ್ಚ ಕ್ಲೋಮಾನಶ್ಚ ಪರ್ವತಾ ಓಷಧಯಶ್ಚ ವನಸ್ಪತಯಶ್ಚ ಲೋಮಾನ್ಯುದ್ಯನ್ ಪೂರ್ವಾರ್ಧೋ ನಿಮ್ಲೋಚಞ್ಜಘನಾರ್ಧೋ ಯದ್ ವಿಜೃಮ್ಭತೇ ತದ್ವಿದ್ಯೋತತೇ ಯದ್ ವಿಧೂನತೇ ತತ್ ಸ್ತನಯತಿ ಯನ್ಮೇಹತಿ ತದ್ವರ್ಷತಿ ವಾಗೇವಾಸ್ಯ ವಾಕ್ ॥೧॥**

೧. ಮೇಧ್ಯವಾದ ಅಶ್ವಕ್ಕೆ ಉಷಾ (ಮುಹೂರ್ತವೇ) ತಲೆ, ಸೂರ್ಯನು ಕಣ್ಣು, ವಾಯು ಉಸಿರು, ವ್ಯಾತ್ತವು ಅಗ್ನಿವೈಶ್ವಾನರನು, ಮೇಧ್ಯವಾದ ಅಶ್ವಕ್ಕೆ ಸಂವತ್ಸರವು ಆತ್ಮವು, ದ್ಯುಲೋಕವು ಬೆನ್ನು, ಅಂತರಿಕ್ಷವು ಉದರವು, ಪೃಥಿವಿಯು ಪಾಜಸ್ಯವು, ದಿಕ್ಕುಗಳು ಪಕ್ಕೆಗಳು, ಅವಾಂತರದಿಕ್ಕುಗಳು ಪರ್ಶುಗಳು, ಋತುಗಳು ಅಂಗಗಳು, ಮಾಸಗಳೂ ಅರ್ಧಮಾಸಗಳೂ ಪರ್ವಗಳು, ಅಹೋರಾತ್ರಿಗಳು ಪ್ರತಿಷ್ಠೆಗಳು, ನಕ್ಷತ್ರಗಳು ಎಲುಬುಗಳು, ನಭವು ಮಾಂಸಗಳು, ಊವಧ್ಯವು ಮರಳುಗಳು, ಸಿಂಧುಗಳು ಗುದಗಳು, ಯಕೃತ್ತೂ ಕ್ಲೋಮವೂ ಪರ್ವತಗಳು, ಓಷಧಿಗಳೂ ವನಸ್ಪತಿಗಳೂ ಲೋಮಗಳು, ಉದಯಿಸುವ (ಸೂರ್ಯನು) ಮೊದಲನೆಯ ಅರ್ಧವು, ಅಸ್ತವಾಗುವ (ಸೂರ್ಯನು) ಕೆಳಗಿನ ಅರ್ಧವು, ಬಾಯಿಬಿಡುತ್ತದೆಯಲ್ಲ (ಅದು) ಮಿಂಚುತ್ತದೆ, ಕೊಡವುತ್ತದೆಯಲ್ಲ ಅದು ಗುಡುಗುತ್ತದೆ, ಮೇಹನವನ್ನು ಮಾಡುತ್ತದೆಯಲ್ಲ ಅದು ಮಳೆಗರೆಯುತ್ತದೆ, ಇದರ ವಾಕ್ಕೇ ವಾಕ್ಕು.

(ಭಾಷ್ಯ)

೯. ಉಷಾ ಇತಿ। ಬ್ರಾಹ್ಮೋ ಮುಹೂರ್ತಃ ಉಷಾಃ। ವೈಶಬ್ದಃ ಸ್ಮಾರಣಾರ್ಥಃ ಪ್ರಸಿದ್ಧಂ ಕಾಲಂ ಸ್ಮಾರಯತಿ। ಶಿರಃ। ಪ್ರಾಧಾನ್ಯಾತ್। ಶಿರಶ್ಚ ಪ್ರಧಾನಂ ಶರೀರಾವಯವಾನಾಮ್। ಅಶ್ವಸ್ಯ ಮೇಧ್ಯಸ್ಯ ಮೇಧಾರ್ಹಸ್ಯ ಯಜ್ಞಿಯಸ್ಯ। ಉಷಾಃ ಶಿರಃ ಇತಿ ಸಂಬನ್ಧಃ। ಕರ್ಮಾಙ್ಗಸ್ಯ ಪಶೋಃ ಸಂಸ್ಕರ್ತವ್ಯತ್ವಾತ್ ಕಾಲಾದಿದೃಷ್ಟಯಃ ಶಿರಆದಿಷು ಕ್ಷಿಪ್ಯನ್ತೇ। ಪ್ರಾಜಾಪತ್ಯತ್ವಂ ಚ। ಪ್ರಜಾಪತಿದೃಷ್ಟ್ಯಧ್ಯಾರೋಪಣಾತ್। ಕಾಲಲೋಕದೇವತಾತ್ವಾಧ್ಯಾರೋಪಣಂ ಚ ಪ್ರಜಾಪತಿತ್ವಕರಣಂ ಪಶೋಃ। ಏವಂರೂಪೋ ಹಿ ಪ್ರಜಾಪತಿಃ। ವಿಷ್ಣುತ್ವಾದಿಕರಣಮಿವ ಪ್ರತಿಮಾದೌ ॥

(ಭಾಷ್ಯಾರ್ಥ)

ಉಷಾ ಇತ್ಯಾದಿ (ಕಂಡಿಕೆಯ ಅರ್ಥವೇನೆಂದರೆ) : ಉಷಾ ಎಂದರೆ ಬ್ರಾಹ್ಮ ಮುಹೂರ್ತವು. ವೈ ಎಂಬ ಮಾತು ನೆನಪಿಗೆ ತರುವದಕ್ಕೆ. (ಅದು) ಪ್ರಸಿದ್ಧವಾದ (ಮುಂಜಾವವೆಂಬ) ಕಾಲವನ್ನು ನೆನಪಿಗೆ ತಂದುಕೊಡುತ್ತದೆ. (ಉಷಃಕಾಲವು) ತಲೆ ; ಏಕೆಂದರೆ (ಅದು) ಪ್ರಧಾನವಾಗಿರುತ್ತದೆ.[1] ಶರೀರದ ಅವಯವಗಳಲ್ಲಿ ತಲೆಯೇ ಪ್ರಧಾನವಾದದ್ದು. ಮೇಧ್ಯವಾದ ಎಂದರೆ ಮೇಧಾರ್ಹವಾದ, ಯಜ್ಞಕ್ಕೆ ತಕ್ಕ (ಕುದುರೆಗೆ) ಉಷಃಕಾಲವೇ ತಲೆ ಎಂದು (ಪದಗಳ) ಸಂಬಂಧವು. ಕರ್ಮಾಂಗವಾದ ಪಶುವಿಗೆ ಸಂಸ್ಕಾರವನ್ನು ಮಾಡಬೇಕಾಗಿರುವದರಿಂದ ತಲೆಯೇ ಮುಂತಾದ ಅವಯವಗಳಲ್ಲಿ ಕಾಲವೇ ಮುಂತಾದ ದೃಷ್ಟಿಗಳನ್ನು ಇಡಬೇಕು.[2] (ಅಶ್ವವು) ಪ್ರಾಜಾಪತ್ಯವೆಂಬುದು (ಅದರಲ್ಲಿ) ಪ್ರಜಾಪತಿಯ ದೃಷ್ಟಿಯನ್ನು ಅಧ್ಯಾರೋಪಿಸುವದರಿಂದ[3] (ಆಗುತ್ತದೆ). ಪಶುವನ್ನು ಪ್ರಜಾಪತಿಯಾಗಿ ಮಾಡುವದು– ಎಂದರೆ ಕಾಲ, ಲೋಕ, ದೇವತೆ– ಎಂದು ಅಧ್ಯಾರೋಪಿಸುವದೇ ; ಏಕೆಂದರೆ ಪ್ರಜಾಪತಿಯು ಈ ರೂಪದವನಾಗಿರುತ್ತಾನೆ. ಪ್ರತಿಮೆಯೇ ಮುಂತಾದವುಗಳಲ್ಲಿ ವಿಷ್ಣುತ್ವವೇ ಮುಂತಾದವುಗಳನ್ನು ಹೇಗೆ ಮಾಡಿಕೊಳ್ಳುತ್ತಾರೋ (ಹಾಗೆಯೇ ಇದು).

(ಭಾಷ್ಯ)

೧೦. ಸೂರ್ಯಶ್ಚಕ್ಷುಃ। ಶಿರಸೋಽನನ್ತರತ್ವಾತ್, ಸೂರ್ಯಾದಿದೈವತತ್ವಾಚ್ಚ। ವಾತಃ ಪ್ರಾಣಃ ವಾಯುಸ್ವಾಭಾವ್ಯಾತ್। ವ್ಯಾತ್ತಂ ವಿವೃತಂ ಮುಖಂ ಅಗ್ನಿರ್ವೈಶ್ವಾನರಃ। ವೈಶ್ವಾನರಃ ಇತಿ ಅಗ್ನೇರ್ವಿಶೇಷಣಮ್। ವೈಶ್ವಾನರೋ ನಾಮ ಅಗ್ನಿಃ ವಿವೃತಂ ಮುಖಮ್ ಇತ್ಯರ್ಥಃ। ಮುಖಸ್ಯ ಅಗ್ನಿದೈವತತ್ವಾತ್। ಸಂವತ್ಸರಃ ಆತ್ಮಾ। ಸಂವತ್ಸರೋ ದ್ವಾದಶಮಾಸಃ, ತ್ರಯೋದಶಮಾಸೋ ವಾ। ಆತ್ಮಾ ಶರೀರಮ್। ಕಾಲಾವಯವಾನಾಂ ಚ ಸಂವತ್ಸರಃ ಶರೀರಂ। ಶರೀರಂ ಚ ಆತ್ಮಾ।

---

1. ಉಷಃಕಾಲವೇ ಮುಂತಾದ ಇಂಥಿಂಥ ದೃಷ್ಟಿಯನ್ನು ಮಾಡಿಕೊಂಡು ಉಪಾಸನೆ ಮಾಡಬೇಕು ಎಂದು ಶ್ರುತಿಯಲ್ಲಿ ಹೇಳಿದೆ. ಇಂಥಿಂಥ ದೃಷ್ಟಿಯನ್ನು ಮಾಡುವದಕ್ಕೆ ಇಂಥಿಂಥ ಹೋಲಿಕೆಯೇ ಕಾರಣವೆಂಬುದನ್ನು ಭಾಷ್ಯಕಾರರು ತಿಳಿಸುತ್ತಾರೆ.

2. ತಲೆಯಲ್ಲಿ ಉಷಃಕಾಲವೆಂಬ ದೃಷ್ಟಿಯನ್ನಿಡಬೇಕು ; ಕಾಲದಲ್ಲಿ ತಲೆ ಎಂಬ ದೃಷ್ಟಿಯನ್ನಿಡಬಾರದು. 'ಕಾಲವೇ ಮುಂತಾದ' ಎಂದರೆ ಕಾಲ, ಲೋಕ, ದೇವತೆಗಳ.

3. ಶಾಸ್ತ್ರದಲ್ಲಿ ಹೇಳಿರುವಂತೆ ಆ ದೃಷ್ಟಿಯಿಂದ ಉಪಾಸನೆಮಾಡುವದರಿಂದ ಎಂದರ್ಥ; ಭ್ರಾಂತಿಯಿಂದ ತಿಳಿಯುವದರಿಂದ ಎಂದರ್ಥವಲ್ಲ.

"ಮಧ್ಯಂ ಹ್ಯೇಷಾಮಙ್ಗಾನಾಮಾತ್ಮಾ" (ಐ. ಆ. ೨-೩-೫) ಇತಿ ಶ್ರುತೇಃ। 'ಅಶ್ವಸ್ಯ ಮೇಧ್ಯಸ್ಯ' ಇತಿ ಸರ್ವತ್ರ ಅನುಷಙ್ಗಾರ್ಥಂ ಪುನರ್ವಚನಮ್। ದ್ಯೌಃ ಪೃಷ್ಠಮ್। ಊರ್ಧ್ವತ್ವಸಾಮಾನ್ಯಾತ್। ಅನ್ತರಿಕ್ಷಮ್ ಉದರಮ್। ಸುಷಿರತ್ವ ಸಾಮಾನ್ಯಾತ್। ಪೃಥಿವೀ ಪಾಜಸ್ಯಮ್। ಪಾದಸ್ಯಮ್। ಪಾಜಸ್ಯಮ್ ಇತಿ ವರ್ಣ ವ್ಯತ್ಯಯೇನ। ಪಾದಾಸನಸ್ಥಾನಮ್ ಇತ್ಯರ್ಥಃ। ದಿಶಃ ಚತಸ್ರೋಽಪಿ ಪಾರ್ಶ್ವೇ। ಪಾರ್ಶ್ವೇನ ದಿಶಾಂ ಸಂಬನ್ಧಾತ್। ಪಾರ್ಶ್ವಯೋರ್ದಿಶಾಂ ಚ ಸಂಖ್ಯಾವೈಷಮ್ಯಾತ್ ಅಯುಕ್ತಮ್ ಇತಿ ಚೇತ್। ನ। ಸರ್ವಮುಖತ್ವೋಪಪತ್ತೇರಶ್ವಸ್ಯ ಪಾರ್ಶ್ವಾಭ್ಯಾ ಮೇವ ಸರ್ವದಿಶಾಂ ಸಂಬನ್ಧಾತ್ ಅದೋಷಃ। ಅವಾನ್ತರದಿಶಃ ಆಗ್ನೇ ಯ್ಯಾದ್ಯಾಃ ಪರ್ಶವಃ ಪಾರ್ಶ್ವಾಸ್ಥೀನಿ। ಋತವಃ ಅಙ್ಗಾನಿ। ಸಂವತ್ಸರಾವ ಯವತ್ವಾತ್ ಅಙ್ಗಸಾಧರ್ಮ್ಯಾತ್। ಮಾಸಾಶ್ಚ ಅರ್ಧಮಾಸಾಶ್ಚ ಪರ್ವಾಣಿ ಸನ್ಧಯಃ। ಸನ್ಧಿಸಾಮಾನ್ಯಾತ್। ಅಹೋರಾತ್ರಾಣಿ ಪ್ರತಿಷ್ಠಾಃ। ಬಹು ವಚನಾತ್ ಪ್ರಾಜಾಪತ್ಯದೈವಪಿತ್ರ್ಯಮಾನುಷಾಣಿ ಪ್ರತಿಷ್ಠಾಃ ಪಾದಾಃ। ಪ್ರತಿತಿಷ್ಠತಿ ಏತೈಃ ಇತಿ। ಅಹೋರಾತ್ರೈರ್ಹಿ ಕಾಲಾತ್ಮಾ ಪ್ರತಿತಿಷ್ಠತಿ ಅಶ್ವಶ್ಚ ಪಾದೈಃ। ನಕ್ಷತ್ರಾಣಿ ಅಸ್ಥೀನಿ। ಶುಕ್ಲತ್ವಸಾಮಾನ್ಯಾತ್। ನಭಃ ನಭಃಸ್ಥಾಃ ಮೇಘಾಃ। ಅನ್ತರಿಕ್ಷಸ್ಯ ಉದರತ್ವೋಕ್ತೇಃ। ಮಾಂಸಾನಿ। ಉದಕರುಧಿರಸೇಚನ ಸಾಮಾನ್ಯಾತ್। ಊವಧ್ಯಮ್ ಉದರಸ್ಥಮ್ ಅರ್ಧಜೀರ್ಣಮ್ ಅಶನಂ ಸಿಕತಾಃ। ವಿಶ್ಲಿಷ್ಟಾವಯವತ್ವಸಾಮಾನ್ಯಾತ್। ಸಿನ್ಧವಃ ಸ್ಯನ್ದನಸಾಮಾನ್ಯಾತ್ ನದ್ಯಃ। ಗುದಾಃ ನಾಡ್ಯಃ। ಬಹುವಚನಾಚ್ಚ। ಯಕೃಚ್ಚ ಕ್ಲೋಮಾನಶ್ಚ ಹೃದ ಯಸ್ಯ ಅಧಸ್ತಾತ್ ದಕ್ಷಿಣೋತ್ತರೌ ಮಾಂಸಖಣ್ಡೌ। 'ಕ್ಲೋಮಾನಃ' ಇತಿ ನಿತ್ಯಂ ಬಹುವಚನಮ್ ಏಕಸ್ಮಿನ್ನೇವ। ಪರ್ವತಾಃ। ಕಾಠಿನ್ಯಾತ್, ಉಚ್ಛ್ರಿತತ್ವಾಚ್ಚ। ಓಷಧಯಶ್ಚ ಕ್ಷುದ್ರಾಃ ಸ್ಥಾವರಾಃ, ವನಸ್ಪತಯಃ ಮಹಾನ್ತಃ ಲೋಮಾನಿ ಕೇಶಾಶ್ಚ ಯಥಾಸಂಭವಮ್। ಉದ್ಯನ್ ಉದ್ಗಚ್ಛನ್ ಭವತಿ ಸವಿತಾ ಆ ಮಧ್ಯಾ ಹ್ನಾತ್ ಅಶ್ವಸ್ಯ ಪೂರ್ವಾರ್ಧಃ। ನಾಭೇರೂರ್ಧ್ವಮ್ ಇತ್ಯರ್ಥಃ। ನಿಮ್ಲೋಚನ್ ಅಸ್ತಂ ಯನ್ ಆ ಮಧ್ಯಾಹ್ನಾತ್ ಜಘನಾರ್ಧಃ ಅಪರಾರ್ಧಃ। ಪೂರ್ವಾಪರತ್ವ ಸಾಧರ್ಮ್ಯಾತ್। ಯದ್ ವಿಜೃಮ್ಭತೇ ಗಾತ್ರಾಣಿ ವಿನಾಮಯತಿ ವಿಕ್ಷಿಪತಿ ತದ್ ವಿದ್ಯೋತತೇ, ವಿದ್ಯೋತನಮ್। ಮುಖಘನವಿದಾರಣಸಾಮಾನ್ಯಾತ್। ಯದ್ ವಿಧೂನುತೇ ಗಾತ್ರಾಣಿ ಕಮ್ಪಯತಿ ತತ್ ಸ್ತನಯತಿ ಗರ್ಜನಮ್। ಶಬ್ದ ಸಾಮಾನ್ಯಾತ್[1]। ಯನ್ಮೇಹತಿ ಮೂತ್ರಂ ಕರೋತಿ ಅಶ್ವಃ ತದ್ ವರ್ಷತಿ ವರ್ಷಣಂ

---

1. ಗರ್ಜನಶಬ್ದಸಾಮಾನ್ಯಾತ್ ಎಂಬ ಅಚ್ಚಿನ ಪಾಠವನ್ನು ಹಿಂದುಮುಂದಿನ ಭಾಷ್ಯದ ಶೈಲಿಗೆ ಅನುಗುಣವಾಗಿ ಹೀಗೆ ತಿದ್ದಿಕೊಂಡಿದೆ.

ತತ್ । ಸೇಚನಸಾಮಾನ್ಯಾತ್ । ವಾಗೇವ ಶಬ್ದ ಏವ ಅಶ್ವಸ್ಯ ವಾಕ್ ಇತಿ । ನಾತ್ರ ಕಲ್ಪನಾ ಇತ್ಯರ್ಥಃ ||

(ಭಾಷ್ಯಾರ್ಥ)

ಸೂರ್ಯನು ಕಣ್ಣು. ಏಕೆಂದರೆ (ಕಣ್ಣು) ತಲೆಯಾದ ಬಳಿಕ (ಇರುತ್ತದೆ)[1]; ಅದಕ್ಕೆ ಸೂರ್ಯನು ಅಧಿದೈವತವೂ (ಆಗಿರುತ್ತಾನೆ). ವಾಯುವು ಉಸಿರು ; ಏಕೆಂದರೆ ಚಲನವು (ಅದರ) ಸ್ವಭಾವವಾಗಿರುತ್ತದೆ. ವ್ಯಾತ್ತವು, ಎಂದರೆ ತೆರೆದ ಮುಖವು ವೈಶ್ವಾನರನೆಂಬ ಅಗ್ನಿ. (ಅಗ್ನಿರ್ವೈಶ್ವಾನರಃ) ಎಂಬಲ್ಲಿ 'ವೈಶ್ವಾನರ' ಎಂಬುದು ಅಗ್ನಿಯ ವಿಶೇಷಣವು. ವೈಶ್ವಾನರನೆಂಬ ಅಗ್ನಿಯು ತೆರೆದ ಬಾಯಿ ಎಂದು ಅರ್ಥ; ಏಕೆಂದರೆ ಮುಖಕ್ಕೆ ಅಗ್ನಿಯೇ ದೇವತೆ.[2] ಸಂವತ್ಸರವೇ ಆತ್ಮವು. ಸಂವತ್ಸರವೆಂದರೆ ಹನ್ನೆರಡು ತಿಂಗಳುಗಳ ಅಥವಾ ಹದಿಮೂರು ತಿಂಗಳುಗಳ[3] (ವರ್ಷವು). ಆತ್ಮವೆಂದರೆ ಶರೀರವು. ಕಾಲದ ಅವಯುವಗಳಿಗೆ ಸಂವತ್ಸರವು ಶರೀರವು. ಶರೀರವೇ ಆತ್ಮವು ; ಏಕೆಂದರೆ "ಈ ಅಂಗಗಳ ನಡುವೆಯಿರುವದೇ ಆತ್ಮವು" (ಐ.ಆ- ೨-೩-೫) ಎಂದು ಶ್ರುತಿಯಿರುತ್ತದೆ. ('ಅಶ್ವಸ್ಯ ಮೇಧ್ಯಸ್ಯ') 'ಮೇಧ್ಯವಾದ ಅಶ್ವದ' ಎಂದು ಮತ್ತೆ ಹೇಳಿರುವದು (ಇದನ್ನು) ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳ(ಬೇಕೆಂದು ತಿಳಿಸು)ವದಕ್ಕೆ.

ದ್ಯುಲೋಕವು ಬೆನ್ನು ; ಏಕೆಂದರೆ ಮೇಲುಗಡೆ ಇರುವದು (ಎರಡಕ್ಕೂ) ಸಮಾನವಾಗಿರುತ್ತದೆ. ಅಂತರಿಕ್ಷವು ಹೊಟ್ಟೆಯು ; ಏಕೆಂದರೆ ಟೊಳ್ಳಾಗಿರುವದು (ಎರಡಕ್ಕೂ) ಸಮಾನವಾಗಿರುತ್ತದೆ. ಪೃಥಿವಿಯು ಪಾಜಸ್ಯವು, (ಪಾಜಸ್ಯವೆಂಬ ಮಾತನ್ನು) ವರ್ಣವನ್ನು ಬದಲಾಯಿಸಿ[4] ಪಾದಸ್ಯಂ (ಎಂದು ಮಾಡಿಕೊಂಡರೆ) ಪಾದವನ್ನು ಇಡುವ ಸ್ಥಾನವು (ಹೆಜ್ಜೆಯು) ಎಂದು ಅರ್ಥವಾಗುತ್ತದೆ. ನಾಲ್ಕು ದಿಕ್ಕುಗಳೂ ಪಕ್ಕೆಗಳು ; ಏಕೆಂದರೆ ದಿಕ್ಕುಗಳಿಗೆ ಪಕ್ಕೆಯ ಸಂಬಂಧವಿರುತ್ತದೆ.

---

1. ಉಷಃಕಾಲವಾದ ಮೇಲೆ ಸೂರ್ಯೋದಯವಾಗುವಂತೆ ತಲೆಯಾದ ಬಳಿಕ ಕಣ್ಣು ಗೋಚರವಾಗುತ್ತದೆ.

2. ಆದ್ದರಿಂದ ಮುಖವನ್ನು ಅಗ್ನಿಯೆಂದು ಉಪಾಸನೆಮಾಡಬೇಕು.

3. ಅಧಿಕಮಾಸವೂ ಸೇರಿದರೆ ಹದಿಮೂರು ತಿಂಗಳಾಗುವವು.

4. ವರ್ಣಾಗಮದಿಂದ 'ಹಂಸ'ಶಬ್ದವೂ ವರ್ಣವೈಪರೀತ್ಯದಿಂದ ಸಿಂಹಶಬ್ದವೂ ವರ್ಣವಿಕಾರದಿಂದ ಗೂಢೋತ್ಮಾ ಎಂಬ ಮಾತೂ ವರ್ಣನಾಶದಿಂದ ಪೃಷೋದರಶಬ್ದವೂ ಆಗಿರುವವೆಂದು ಒಂದು ಸಂಗ್ರಾಹಕಶ್ಲೋಕವಿದೆ. ಇಲ್ಲಿ ವರ್ಣದ ಬದಲಾವಣೆಯಿಂದ 'ಪಾಜಸ್ಯ' ಎಂದಾಗಿದೆ ಎಂದರ್ಥ.

ಪಕ್ಕೆಗಳಿಗೂ ದಿಕ್ಕುಗಳಿಗೂ ಸಂಖ್ಯಾವೈಷಮ್ಯವಿರುವದರಿಂದ[1] (ಇದು) ಸರಿಯಲ್ಲ ವಲ್ಲ!–ಎಂದರೆ ಹಾಗಲ್ಲ. ಅಶ್ವವು ಎಲ್ಲಾ (ದಿಕ್ಕುಗಳಿಗೂ) ಮುಖವನ್ನು (ಮಾಡಿಕೊಳ್ಳ)ಬಹುದಾದ್ದರಿಂದ (ಎರಡು) ಪಕ್ಕೆಗಳಿಗೇ ಎಲ್ಲಾ ದಿಕ್ಕುಗಳ ಸಂಬಂಧವೂ ಆಗುವದರಿಂದ ಇದೇನೂ ದೋಷವಲ್ಲ. ಅವಾಂತರದಿಕ್ಕುಗಳು ಎಂದರೆ ಆಗ್ನೇಯವೇ ಮುಂತಾದವು ಪರ್ಶುಗಳು, ಪಕ್ಕೆಲುಬುಗಳು. ಋತುಗಳು ಅಂಗಗಳು; ಏಕೆಂದರೆ (ಋತುಗಳು) ಸಂವತ್ಸರಕ್ಕೆ ಅವಯವವಾಗಿರುವದರಿಂದ ಅಂಗಗಳಿಗೂ (ಅವಕ್ಕೂ) ಹೋಲಿಕೆಯಿದೆ. ಮಾಸಗಳೂ ಅಧಿಕಮಾಸಗಳೂ ಪರ್ವಗಳು, ಎಂದರೆ ಸಂಧಿಗಳು; ಏಕೆಂದರೆ (ಅವಕ್ಕೂ) ಸಂಧಿಗಳಿಗೂ ಸಮಾನತೆಯಿರುತ್ತದೆ. ಅಹೋರಾತ್ರಗಳು ಪ್ರತಿಷ್ಠೆಗಳು.[2] (ಅಹೋರಾತ್ರಾಣಿ ಎಂದು) ಬಹುವಚನವಿರುವುದರಿಂದ ಪ್ರಾಜಾಪತ್ಯ, ದೈವ, ಪಿತ್ರ್ಯ, ಮಾನುಷ[3] (ಈ ನಾಲ್ಕು ಅಹೋರಾತ್ರಗಳು) ಪ್ರತಿಷ್ಠೆಗಳು, ಪಾದಗಳು; ಇವುಗಳಿಂದ ಎದ್ದು ನಿಲ್ಲುತ್ತದೆಯಾದ್ದರಿಂದ (ಇವು ಪ್ರತಿಷ್ಠೆಗಳು). ಅಹೋರಾತ್ರಗಳಿಂದಲೇ ಅಲ್ಲವೆ, ಕಾಲಾತ್ಮ(ನಾದ ಪ್ರಜಾಪತಿಯು) ನಿಂತುಕೊಂಡಿರುತ್ತಾನೆ ? ಅಶ್ವವೂ ಪಾದಗಳಿಂದ ನಿಂತುಕೊಂಡಿರುತ್ತದೆ. ನಕ್ಷತ್ರಗಳು ಎಲುಬುಗಳು ; ಏಕೆಂದರೆ ಬೆಳ್ಳಗಿರುವದು (ಎರಡಕ್ಕೂ) ಸಮಾನವಾಗಿದೆ. ನಭವು ಎಂದರೆ ಆಕಾಶದಲ್ಲಿರುವ ಮೋಡಗಳು ; ಏಕೆಂದರೆ ಅಂತರಿಕ್ಷವು ಹೊಟ್ಟೆ ಎಂದು ಹೇಳಿದ್ದಾಗಿದೆ. (ಇದು) ಮಾಂಸಗಳು. ಏಕೆಂದರೆ ನೀರನ್ನೂ ರಕ್ತವನ್ನೂ ಸುರಿಸುವದು (ಮಾಂಸಗಳಿಗೂ ಮೋಡಗಳಿಗೂ ಸಮಾನವಾಗಿರುತ್ತದೆ.

ಊವಧ್ಯವು, ಎಂದರೆ ಹೊಟ್ಟೆಯಲ್ಲಿ ಅರ್ಧವಾಗಿ ಅರಗಿಸಿಕೊಂಡಿರುವ ಆಹಾರವು ಮರಳು. ಏಕೆಂದರೆ ಅವಯುವಗಳು ಬಿಡಿಬಿಡಿಯಾಗಿರುವದು (ಎರಡಕ್ಕೂ) ಸಮಾನವಾಗಿರುತ್ತದೆ. ಸಿಂಧುಗಳು ಎಂದರೆ ಹರಿಯುವ ಸಾಮಾನ್ಯವಾದ ನದಿಗಳು, ಗುದಗಳು ನಾಡಿಗಳು (ಗುದಾಃ ಎಂದು) ಬಹುವಚನವಿರುವದರಿಂದಲೂ (ಗುದಾಃ ಎಂದರೆ ಇಲ್ಲಿ ನಾಡಿಗಳೇ). ಯಕೃತ್ತೂ ಕ್ಲೋಮವೂ ಹೃದಯದ ಕೆಳಗೆ ಬಲಕ್ಕೂ ಎಡಕ್ಕೂ ಇರುವ ಮಾಂಸಖಂಡಗಳು. 'ಕ್ಲೋಮಾನಃ' ಎಂಬುದು ಒಂದೇ (ವಸ್ತುವನ್ನು ತಿಳಿಸುವ) ನಿತ್ಯಬಹುವಚನವು. (ಇವೆರಡೂ) ಪರ್ವತಗಳು

1. ಪಕ್ಕೆಗಳು ಎರಡು, ದಿಕ್ಕುಗಳು ನಾಲ್ಕು.

2. ಹೆಜ್ಜೆಗಳು.

3. "ಪ್ರಾಜಾಪತ್ಯ ಅಹೋರಾತ್ರವು ಸಾವಿರ ಯುಗಗಳ ಪರಿಮಾಣದ್ದು; ದೈವ ಅಹೋರಾತ್ರವು ಎರಡು ಅಯನಗಳ ಪರಿಮಾಣದ್ದು ; ಪಿತ್ರ್ಯ ಅಹೋರಾತ್ರವು ಎರಡು ಪಕ್ಷಗಳದ್ದು ; ಮಾನುಷ ಅಹೋರಾತ್ರವು ಅರವತ್ತು ಘಳಿಗೆಗಳ ಪರಿಮಾಣದ್ದು. ಆ॥ ವ್ಯಾ.

ಏಕೆಂದರೆ (ಇವು) ಗಟ್ಟಿಯಾಗಿರುತ್ತವೆ, ಎದ್ದುಕೊಂಡಿವೆ. ಓಷಧಿಗಳು ಎಂದರೆ ಸಣ್ಣ (ಗಿಡಗಳು), ವನಸ್ಪತಿಗಳು ಎಂದರೆ ದೊಡ್ಡ (ಮರಗಳು) ಲೋಮಗಳೂ ಕೇಶಗಳೂ (ಆಗಿವೆ ಎಂದು) ಯಥಾಸಂಭವವಾಗಿ (ಕಲ್ಪಿಸಬೇಕು). ಉದಯಿಸುತ್ತಿರುವ ನಡುಹಗಲಿನವರೆಗೆ ಮೇಲಕ್ಕೇಳುತ್ತಿರುವನಲ್ಲ, (ಆ) ಸೂರ್ಯನು ಅಶ್ವದ ಮೊದಲನೆಯ ಅರ್ಧವು, ಹೊಕ್ಕುಳಿನ ಮೇಲುಭಾಗವು ಎಂದರ್ಥ. ಮುಳುಗುತ್ತಿರುವ ನಡುಹಗಲಿನಿಂದ (ಮುಂದಕ್ಕೆ) ಅಸ್ತವಾಗುತ್ತಿರುವ (ಸೂರ್ಯನು) ಕೆಳಗಿನ ಅರ್ಧವು, ಮತ್ತೊಂದು ಅರ್ಧವು. ಏಕೆಂದರೆ ಮೊದಲು ಆಮೇಲೆ ಎಂಬುದು (ಎರಡಕ್ಕೂ) ಸಮವಾಗಿರುತ್ತದೆ. (ಆಕಳಿಸಿ) ಬಾಯಿ ತೆರೆಯುತ್ತದೆಯಲ್ಲ (ಮುಖದ) ಅವಯವಗಳನ್ನು ಬಿಚ್ಚುತ್ತದೆಯಲ್ಲ, ಸೀಳುತ್ತದೆಯಲ್ಲ[1], ಅದು ಮಿಂಚುತ್ತದೆ, ಎಂದರೆ ಮಿಂಚು. ಏಕೆಂದರೆ ಮುಖವನ್ನೂ ಮೋಡವನ್ನೂ ಸೀಳಿಕೊಂಡು (ಬರುವದು ಎರಡಕ್ಕೂ) ಸಮಾನವಾಗಿರುತ್ತದೆ. ಅವಯವಗಳನ್ನು ಕೊಡಹುತ್ತದೆಯಲ್ಲ, ಅಲುಗಾಡಿಸುತ್ತದೆಯಲ್ಲ, ಅದು ಗುಡುಗುತ್ತದೆ, ಗುಡುಗು. ಏಕೆಂದರೆ ಶಬ್ದವು (ಎರಡಕ್ಕೂ) ಸಮಾನವಾಗಿರುತ್ತದೆ. ಮೇಹನಮಾಡುತ್ತದೆಯಲ್ಲ, ಕುದುರೆಯು ಉಚ್ಚೆಹುಯ್ಯುತ್ತದೆಯಲ್ಲ, ಅದು ಮಳೆಗರೆಯುತ್ತದೆ. ಏಕೆಂದರೆ (ನೀರು) ಸುರಿಸುವದು (ಎರಡಕ್ಕೂ) ಸಮಾನವಾಗಿರುತ್ತದೆ. ವಾಕ್ಕೇ ಎಂದರೆ ಶಬ್ದವೇ ಈ ಕುದುರೆಯ ವಾಕ್ಕು; ಇಲ್ಲಿ ಕಲ್ಪನೆ(ಯೇನೂ) ಇರುವದಿಲ್ಲ ಎಂದರ್ಥ.

## ಅಶ್ವಮೇಧಸಂಬಂಧಿಯಾದ ಮಹಿಮೆಗಳ ಉಪಾಸನೆ

(ಉಪನಿಷತ್ತು)

**ಅಹರ್ವಾ ಅಶ್ವಂ ಪುರಸ್ತಾನ್ಮಹಿಮಾನ್ವಜಾಯತ ತಸ್ಯ ಪೂರ್ವೇ ಸಮುದ್ರೇ ಯೋನೀ ರಾತ್ರಿರೇನಂ ಪಶ್ಚಾನ್ಮಹಿಮಾನ್ವಜಾಯತ ತಸ್ಯಾಪರೇ ಸಮುದ್ರೇ ಯೋನಿರೇತೌ ವಾ ಅಶ್ವಂ ಮಹಿಮಾನಾವಭಿತಃ ಸಂಬಭೂವತುಃ। ಹಯೋ ಭೂತ್ವಾ ದೇವಾನವಹದ್ ವಾಜೀ ಗನ್ಧರ್ವಾನರ್ವಾಸುರಾನಶ್ವೋ ಮನುಷ್ಯಾನ್ ಸಮುದ್ರ ಏವಾಸ್ಯ ಬನ್ಧುಃ ಸಮುದ್ರೋ ಯೋನಿಃ ॥ ೨ ॥**

೨ ಹಗಲೇ ಕುದುರೆಯ ಮುಂಗಡೆಯಲ್ಲಿ ಮಹಿಮೆಯಾಗಿ ಅನುಸರಿಸಿ ಉಂಟಾಗಿರುತ್ತದೆ; ಅದಕ್ಕೆ ಪೂರ್ವಸಮುದ್ರದಲ್ಲಿ ಯೋನಿಯು.

---

1. ಈ ವಾಕ್ಯದ ಭಾಷ್ಯಮೂಲವು ಏನೋ ಸ್ವಲ್ಪ ಹೆಚ್ಚುಕಡಿಮೆಯಾಗಿರಬೇಕೆಂದು ಕಾಣುತ್ತದೆ; ಸಂದರ್ಭಕ್ಕೆ ಹೊಂದುವಂತೆ ಅರ್ಥವನ್ನು ಬರೆದಿದೆ.

ರಾತ್ರಿಯು ಈ (ಕುದುರೆಯ) ಹಿಂಗಡೆಯಲ್ಲಿ ಅನುಸರಿಸಿ ಉಂಟಾಗಿರುತ್ತದೆ; ಅದಕ್ಕೆ ಪಶ್ಚಿಮಸಮುದ್ರದಲ್ಲಿ ಯೋನಿಯು. ಇವೆರಡೂ ಮಹಿಮೆಗಳು ಕುದುರೆಯ ಎರಡು ಕಡೆಗಳಲ್ಲಿಯೂ ಉಂಟಾಗಿರುತ್ತವೆ. (ಇದು) ಹಯವಾಗಿ ದೇವತೆಗಳನ್ನೂ ವಾಜಿಯಾಗಿ ಗಂಧರ್ವರನ್ನೂ ಅರ್ವವಾಗಿ ಅಸುರರನ್ನೂ ಅಶ್ವವಾಗಿ ಮನುಷ್ಯರನ್ನೂ ಹೊತ್ತುಕೊಂಡಿರುತ್ತದೆ. ಇದಕ್ಕೆ ಸಮುದ್ರವೇ ಬಂಧು, ಸಮುದ್ರವೇ ಯೋನಿ.

(ಭಾಷ್ಯ)

೧೧. ಅಹರ್ವಾ ಇತಿ। ಸೌವರ್ಣರಾಜತೌ ಮಹಿಮಾಖ್ಯೌ ಗ್ರಹೌ ಅಶ್ವಸ್ಯ ಅಗ್ರತಃ ಪೃಷ್ಠತಶ್ಚ ಸ್ಥಾಪ್ಯೇತೇ। ತದ್ವಿಷಯಮಿದಂ ದರ್ಶನಮ್। ಅಹಃ ಸೌವರ್ಣೋ ಗ್ರಹಃ। ದೀಪ್ತಿಸಾಮಾನ್ಯಾತ್। ವೈ। ಅಹಃ ಅಶ್ವಂ ಪುರಸ್ತಾತ್ ಮಹಿಮಾ ಅನ್ವಜಾಯತ ಇತಿ ಕಥಮ್? ಅಶ್ವಸ್ಯ ಪ್ರಜಾಪತಿತ್ವಾತ್। ಪ್ರಜಾಪತಿರ್ಹಿ ಆದಿತ್ಯಾದಿಲಕ್ಷಣಃ ಅಹ್ನಾ ಲಕ್ಷ್ಯತೇ। ಅಶ್ವಂ ಲಕ್ಷಯಿತ್ವಾ ಅಜಾಯತ ಸೌವರ್ಣೋ ಮಹಿಮಾ ಗ್ರಹಃ। 'ವೃಕ್ಷಮನು ವಿದ್ಯೋತತೇ ವಿದ್ಯುತ್' ಇತಿ ಯದ್ವತ್। ತಸ್ಯ ಗ್ರಹಸ್ಯ ಪೂರ್ವೇ ಪೂರ್ವಃ ಸಮುದ್ರೇ ಸಮುದ್ರಃ ಯೋನಿಃ। ವಿಭಕ್ತಿವ್ಯತ್ಯಯೇನ। ಯೋನಿಃ ಇತಿ ಆಸಾದನಸ್ಥಾನಮ್। ತಥಾ ರಾತ್ರಿಃ ರಾಜತೋ ಗ್ರಹಃ ವರ್ಣಸಾಮಾನ್ಯಾತ್ ಜಘನ್ಯತ್ವಸಾಮಾನ್ಯಾದ್ ವಾ। ಏನಮ್ ಅಶ್ವಂ ಪಶ್ಚಾತ್ ಪೃಷ್ಠತಃ ಮಹಿಮಾ ಅನ್ವಜಾಯತ। ತಸ್ಯ ಅಪರೇ ಸಮುದ್ರೇ ಯೋನಿಃ॥

(ಭಾಷ್ಯಾರ್ಥ)

ಅಹರ್ವಾ ಇತ್ಯಾದಿ (ಕಂಡಿಕೆಯ ವ್ಯಾಖ್ಯಾನವೇನೆಂದರೆ), ಚಿನ್ನದಿಂದ ಮಾಡಿದ ಮತ್ತು ಬೆಳ್ಳಿಯಿಂದ ಮಾಡಿದ 'ಮಹಿಮೆ' ಎಂಬ ಹೆಸರಿನ ಎರಡು ಗ್ರಹಗಳನ್ನು[1] ಕುದುರೆಯ ಮುಂಗಡೆಯಲ್ಲಿಯೂ ಹಿಂಗಡೆಯಲ್ಲಿಯೂ ಇಡುತ್ತಾರೆ. ಈ ದರ್ಶನವು ಅವುಗಳ ವಿಷಯವಾದದ್ದು.

ಹಗಲೇ ಚಿನ್ನದ ಗ್ರಹವು; ಏಕೆಂದರೆ ಥಳಗುಟ್ಟುವದು (ಎರಡಕ್ಕೂ) ಸಮಾನವಾಗಿರುತ್ತದೆ.

(ಪ್ರಶ್ನೆ):–ಹಗಲೇ ಕುದುರೆಯ ಮುಂಗಡೆಯಲ್ಲಿ ಮಹಿಮೆಯಾಗಿ ಅನುಸರಿಸಿ ಉಂಟಾಗಿದೆ ಎಂದು (ಹೇಳಿದ್ದು) ಹೇಗೆ (ಸರಿ)?

---

1. ಯಜ್ಞಪಾತ್ರವಿಶೇಷಗಳಿಗೆ "ಗ್ರಹ"ವೆಂದು ಹೆಸರು; "ಬಟ್ಟಲುಗಳು" ಎಂದು ಕನ್ನಡಿಸಬಹುದು.

(ಉತ್ತರ) :–ಏಕೆಂದರೆ ಅಶ್ವವು ಪ್ರಜಾಪತಿಯಾಗಿರುತ್ತದೆ.[1] ಆದಿತ್ಯಾದಿ ಸ್ವರೂಪನಾದ[2] ಪ್ರಜಾಪತಿಯು ಹಗಲಿನಿಂದ ಗುರುತಿಸಲ್ಪಡುತ್ತಾನಲ್ಲವೆ? (ಇದರಂತೆ) ಕುದುರೆಯನ್ನು ಗುರುತಾಗಿಟ್ಟುಕೊಂಡು ಚಿನ್ನದ ಗ್ರಹವಾದ ಮಹಿಮೆಯು ಉಂಟಾಗಿರುತ್ತದೆ (ಎಂದರ್ಥ). 'ವೃಕ್ಷಮನು ವಿದ್ಯೋತತೇ ವಿದ್ಯುತ್' (ಮರದ ಹಿಂಗಡೆಯಲ್ಲಿಯೇ ಮಿಂಚು ಥಳಾರೆನ್ನುತ್ತಿದೆ) ಎಂಬ ಪ್ರಯೋಗದಂತೆಯೇ (ಇದು)[3]. ಆ ಗ್ರಹಕ್ಕೆ ಪೂರ್ವಸಮುದ್ರದಲ್ಲಿ–ಎಂದರೆ ವಿಭಕ್ತಿವಿಪರಿಣಾಮದಿಂದ 'ಪೂರ್ವಸಮುದ್ರವು' ಎಂದು ಅರ್ಥ. (ಪೂರ್ವಸಮುದ್ರವು, ಯೋನಿಯು, ಎಂದರೆ ಇಡುವ ಸ್ಥಳವು.[4] ಇದರಂತೆ ರಾತ್ರಿಯು ಬೆಳ್ಳಿಯ ಗ್ರಹವು; ಏಕೆಂದರೆ (ಎರಡಕ್ಕೂ ಬಿಳಿಯ) ಬಣ್ಣವು ಸಮಾನವು; ಅಥವಾ ಕೀಳೆಂಬುದು (ಎರಡಕ್ಕೂ) ಸಮಾನವು[5]. ಇದರ ಹಿಂಗಡೆ ಎಂದರೆ (ಈ) ಕುದುರೆಯ ಹಿಂಭಾಗದಲ್ಲಿ ಮಹಿಮೆಯು ಅನುಸರಿಸಿ ಉಂಟಾಗಿದೆ. ಅದಕ್ಕೆ ಪಶ್ಚಿಮಸಮುದ್ರದಲ್ಲಿ (ಅಂದರೆ ಪಶ್ಚಿಮಸಮುದ್ರವು) ಯೋನಿಯು.

(ಭಾಷ್ಯ)

೧೨. ಮಹಿಮಾ ಮಹತ್ತ್ವಾತ್ । ಅಶ್ವಸ್ಯ ಹಿ ವಿಭೂತಿರೇಷಾ ಯತ್ ಸೌವರ್ಣಃ ರಾಜತಶ್ಚ ಗ್ರಹೌ ಉಭಯತಃ ಸ್ಥಾಪ್ಯೇತೇ । ತಾವೇತೌ ವೈ ಮಹಿಮಾನೌ ಮಹಿಮಾಖ್ಯೌ ಗ್ರಹೌ ಅಶ್ವಮ್ ಅಭಿತಃ ಸಂಬಭೂವತುಃ ಉಕ್ತಲಕ್ಷಣಾವೇವ ಸಂಭೂತೌ । ಇತ್ಥಮ್ ಅಸೌ ಅಶ್ವಃ ಮಹತ್ತ್ವಯುಕ್ತಃ ಇತಿ ಪುನರ್ವಚನಂ ಸ್ತುತ್ಯರ್ಥಮ್ ತಥಾ ಚ 'ಹಯೋ ಭೂತ್ವಾ' ಇತ್ಯಾದಿ ಸ್ತುತ್ಯರ್ಥಮೇವ । ಹಯೋ ಹಿನೋತೇಃ ಗತಿಕರ್ಮಣಃ । ವಿಶಿಷ್ಟಗತಿಃ ಇತ್ಯರ್ಥಃ । ಜಾತಿವಿಶೇಷೋ ವಾ । ದೇವಾನ್ ಅವಹತ್ । ದೇವತ್ವಮ್ ಅಗಮಯತ್ । ಪ್ರಜಾಪತಿ

---

1. ಅಶ್ವದಲ್ಲಿ ಪ್ರಜಾಪತಿದೃಷ್ಟಿಯನ್ನು ವಿಧಿಸಿರುತ್ತದೆ.

2. ಆದಿತ್ಯಾದಿದೇವತೆಗಳು, ಉಷಃಕಾಲವೇ ಮುಂತಾದ ಕಾಲ, ದ್ಯುಲೋಕವೇ ಮುಂತಾದ ಲೋಕ–ಇವುಗಳ ಸ್ವರೂಪನಾದ.

3. ಮೇಲಿನಿಂದ ಮಿಂಚಿದರೂ ಮರದ ಹಿಂಗಡೆಯಲ್ಲಿಯೇ ಮಿಂಚಿತು–ಎಂಬಂತೆ ಕುದುರೆಯ ಹಿಂಗಡೆಯಲ್ಲಿಯೇ ಹಗಲು ಚಿನ್ನದ ಮಹಿಮೆಯಾಗಿ ತೋರುತ್ತದೆ ಎಂದು ಪ್ರಯೋಗಿಸಿರುತ್ತದೆ ಎಂದು ಅರ್ಥ.

4. ಗ್ರಹವನ್ನು ಇಡುವ ಸ್ಥಲವನ್ನು ಪೂರ್ವಸಮುದ್ರವೆಂದು ಉಪಾಸನೆಮಾಡಬೇಕು ಎಂದರ್ಥ.

5. ಬೆಳದಿಂಗಳ ರಾತ್ರಿಗೆ ಬೆಳ್ಳಿಯ ಬಣ್ಣವಿದೆ; ಅಥವಾ ಹಗಲಿಗಿಂತ ರಾತ್ರಿ ಕೀಳಾಗಿರುವಂತೆ ಚಿನ್ನಕ್ಕಿಂತ ಬೆಳ್ಳಿ ಕೀಳಾಗಿರುತ್ತದೆ.

ತ್ವಾತ್ | ದೇವಾನಾಂ ವಾ ವೋಢಾ ಅಭವತ್ | ನನು ನಿಸ್ದ್ಯೈವ ವಾಹನತ್ವಮ್ | ನೈಷ ದೋಷಃ | ವಾಹನತ್ವಂ ಸ್ವಾಭಾವಿಕಮ್ ಅಶ್ವಸ್ಯ | ಸ್ವಾಭಾವಿಕತ್ವಾತ್ ಉಚ್ಛ್ರಾಯಪ್ರಾಪ್ತಿಃ ದೇವಾದಿಸಂಬನ್ಧೋಽಶ್ವಸ್ಯ ಇತಿ ಸ್ತುತಿರೇವ ಏಷಾ | ತಥಾ ವಾಜ್ಯಾದಯೋ ಜಾತಿವಿಶೇಷಾಃ | ವಾಜೀಭೂತ್ವಾ ಗನ್ಧರ್ವಾನ್ 'ಅವಹತ್' ಇತಿ ಅನುಷಙ್ಗಃ | ತಥಾ ಅರ್ವಾ ಭೂತ್ವಾ ಅಸುರಾನ್ | ಅಶ್ವೋ ಭೂತ್ವಾ ಮನುಷ್ಯಾನ್ | ಸಮುದ್ರ ಏವೇತಿ ಪರಮಾತ್ಮಾ ಬನ್ಧುಃ ಬನ್ಧನಮ್ | ಬಧ್ಯತೇ ಅಸ್ಮಿನ್ ಇತಿ | ಸಮುದ್ರೋ ಯೋನಿಃ ಕಾರಣಮ್ ಉತ್ಪತ್ತಿಂ ಪ್ರತಿ | ಏವಮ್ ಅಸೌ ಶುದ್ಧಯೋನಿಃ ಶುದ್ಧಸ್ಥಿತಿಃ ಇತಿ ಸ್ತೂಯತೇ | "ಅಪ್ಸು ಯೋನಿರ್ವಾ ಅಶ್ವಃ" (ತೈ. ಸಂ. ೨-೩-೧೨) ಇತಿ ಶ್ರುತೇಃ | ಪ್ರಸಿದ್ಧ ಏವ ವಾ ಸಮುದ್ರೋ ಯೋನಿಃ ||

(ಭಾಷ್ಯಾರ್ಥ)

'ಮಹಿಮೆ' ಎಂದು ಕರೆದಿರುವದು ಮಹತ್ತ್ವವಿರುವದರಿಂದ. ಚಿನ್ನದ ಮತ್ತು ಬೆಳ್ಳಿಯ ಗ್ರಹಗಳನ್ನು ಎರಡು ಕಡೆಗಳಲ್ಲಿಯೂ ಇಡುತ್ತಾರಲ್ಲ, ಇದು ಅಶ್ವದ ಹೆಚ್ಚುಗಾರಿಕೆಯಲ್ಲವೆ? (ಆದ್ದರಿಂದ ಅವನ್ನು 'ಮಹಿಮೆಗಳು' ಎಂದಿದೆ). ಆ ಈ (ಎರಡು) ಮಹಿಮೆಗಳು, ಮಹಿಮೆ ಎಂಬ ಹೆಸರಿನ ಗ್ರಹಗಳು, ಕುದುರೆಯ ಎರಡು ಕಡೆಗಳಲ್ಲಿಯೂ ಉಂಟಾಗಿರುತ್ತವೆ, ಮೇಲೆ ಹೇಳಿದ ಸ್ವರೂಪದವುಗಳಾಗಿಯೇ ಪ್ರಕಟವಾಗಿರುತ್ತವೆ. ಈ ಕುದುರೆಯು ಇಂಥ ಮಹತ್ತ್ವದಿಂದ ಕೂಡಿದ್ದು ಎಂದು ಹೊಗಳುವದಕ್ಕಾಗಿ (ಮಹಿಮೆಗಳ ವಿಷಯವನ್ನು) ಮತ್ತೆ ಹೇಳಿರುತ್ತದೆ.

ಇದರಂತೆ 'ಹಯವಾಗಿ' ಎಂದು ಮುಂತಾಗಿರುವ (ಗ್ರಂಥಭಾಗವು) ಹೊಗಳುವದಕ್ಕೇ (ಬಂದಿರುತ್ತದೆ).[1] ಹಯ ಎಂಬುದು ಗತಿ ಎಂಬ ಕ್ರಿಯೆಯನ್ನು ಹೇಳುವ 'ಹಿ' ಧಾತುವಿನಿಂದ (ಬಂದಿರುತ್ತದೆ). ಹಯ ಎಂದರೆ ಅಸಾಧಾರಣವಾದ (ಹೆಚ್ಚಿನ ವೇಗದ) ಗತಿಯುಳ್ಳದ್ದು ಎಂದರ್ಥ. ಅಥವಾ (ಹಯ ಎಂಬುದು ಕುದುರೆಯಲ್ಲಿ) ಒಂದಾನೊಂದು ಜಾತಿ. (ಹಯವಾಗಿ) ದೇವತೆಗಳನ್ನು ಹೊತ್ತಿತು, ಎಂದರೆ (ಅವರಿಗೆ) ದೇವತ್ವವನ್ನು ಕೊಟ್ಟಿತು; ಏಕೆಂದರೆ (ಇದು) ಪ್ರಜಾಪತಿಯಾಗಿರುತ್ತದೆ[2]. ಅಥವಾ ದೇವತೆಗಳನ್ನು ಹೊತ್ತುಕೊಂಡಿತು ಎಂದರ್ಥ.

---

1. ಅಶ್ವವು ಉಪಾಸ್ಯವಾಗಿರುವದರಿಂದ ಅದನ್ನು ಹೊಗಳಿದೆ ಎಂದು ಭಾವ. ಯಾವದನ್ನು ಅನುಷ್ಠಾನಮಾಡಬೇಕೆಂದು ಅಭಿಪ್ರಾಯವಿರುತ್ತದೆಯೋ ಅಥವಾ ಯಾವದನ್ನು ಉಪಾಸನೆ ಮಾಡಬೇಕೆಂದು ಅಭಿಪ್ರಾಯವಿರುತ್ತದೆಯೋ ಅವನ್ನು ವೇದವಲ್ಲಿ ಹೊಗಳಿರುತ್ತದೆ.

2. ಪ್ರಜಾಪತಿಯು ಸರ್ವದೇವತಾಸ್ವರೂಪನು. ಅಧ್ಯಾತ್ಮರೂಪವಾಗಿರುವ ವಾಗಾದಿಗಳನ್ನು ಪ್ರಜಾಪತಿಯು ಅಗ್ನ್ಯಾದಿರೂಪವಾಗಿ ಮಾಡಿದನು ಎಂದು ಮುಂದೆ ತಿಳಿಸಿರುವದರ ಸೂಚನೆಯಿದೆಂದು ಭಾವಿಸಬಹುದು.

(ಆಕ್ಷೇಪ):-(ಇದು) ವಾಹನವೆಂದರೆ ನಿಂದೆಯೇ (ಆಗುವದಿಲ್ಲವೆ) ?

(ಪರಿಹಾರ) :-ಇದೇನೂ ದೋಷವಲ್ಲ, ಕುದುರೆಗೆ ವಾಹನತ್ವವು ಸ್ವಾಭಾವಿಕವಾಗಿರುತ್ತದೆ. (ಹೀಗೆ) ಸ್ವಾಭಾವಿಕವಾಗಿರುವದರಿಂದ ಕುದುರೆಗೆ ದೇವಾದಿಗಳ ಸಂಬಂಧವಾಗುವದೆಂಬುದು ಔನ್ನತ್ಯಪ್ರಾಪ್ತಿಯೇ[1] ಆಗಿರುವದರಿಂದ 'ಇದು ಸ್ತುತಿಯೇ.

ಇದರಂತೆ ವಾಜಿ ಮುಂತಾದವುಗಳೂ ಕುದುರೆಯ ಜಾತಿವಿಶೇಷಗಳೇ. ವಾಜಿಯಾಗಿ ಗಂಧರ್ವರನ್ನು 'ಹೊತ್ತಿತು' ಎಂದು ಅನುಷಂಗವನ್ನು (ಮಾಡಿಕೊಳ್ಳಬೇಕು). ಇದರಂತೆ 'ಅರ್ವ'ನಾಗಿ ಅಸುರರನ್ನು (ಹೊತ್ತಿರುತ್ತದೆ), ಅಶ್ವವಾಗಿ ಮನುಷ್ಯರನ್ನು (ಹೊತ್ತಿರುತ್ತದೆ).

ಸಮುದ್ರವೇ ಎಂದರೆ ಪರಮಾತ್ಮನೇ ಬಂಧು ; (ಆತ್ಮನಲ್ಲಿ) ಕಟ್ಟಲ್ಪಡುತ್ತದೆ (ಅವನನ್ನು ಆಶ್ರಯಿಸಿಕೊಂಡು ನಿಂತಿರುತ್ತದೆ)ಯಾದ್ದರಿಂದ (ಅವನು ಬಂಧು). ಸಮುದ್ರವೇ ಯೋನಿಯು, ಉತ್ಪತ್ತಿಗೆ ಕಾರಣವು. ಹೀಗೆ ಶುದ್ಧವಾದ (ಪರಮಾತ್ಮನೆಂಬ) ಕಾರಣವುಳ್ಳದ್ದು, (ಶುದ್ಧನಾದ ಪರಮಾತ್ಮನಲ್ಲಿ) ಸ್ಥಿತಿಯುಳ್ಳದ್ದು ಎಂದು ಕುದುರೆಯನ್ನು ಹೊಗಳಿರುತ್ತದೆ. ಅಥವಾ "ಕುದುರೆಯು ನೀರಿನಲ್ಲಲ್ಲವೆ, ಹುಟ್ಟಿರುತ್ತದೆ ?" (ತೈ. ಸಂ. ೨-೩-೧೨) ಎಂದು ಶ್ರುತಿಯಿರುವದರಿಂದ ಪ್ರಸಿದ್ಧವಾದ ಸಮುದ್ರವೇ (ಅದಕ್ಕೆ) ಯೋನಿಯು (ಎಂದಾದರೂ ಅರ್ಥವನ್ನು ಮಾಡಬಹುದು).

---

1. ಹೊರುವದು ಸ್ವಾಭಾವಿಕ, ದೇವತೆಗಳನ್ನು ಹೊರುವದೆಂಬುದು ಹೆಚ್ಚಿನ ಗಾರವವನ್ನು ಕೊಡುವ ವಿಶೇಷಣವು ಎಂದು ಅರ್ಥ.

# ಒಂದನೆಯ ಅಧ್ಯಾಯ—ಎರಡನೆಯ ಬ್ರಾಹ್ಮಣ

## (ಅಶ್ವಮೇಧಾಗ್ನಿಯ ಉತ್ಪತ್ತಿ)

## ಈ ಬ್ರಾಹ್ಮಣದ ಸಂಬಂಧ

(ಭಾಷ್ಯ)

೧೩. ಅಥ ಅಗ್ನೇಃ ಅಶ್ವಮೇಧೋಪಯೋಗಿಕಸ್ಯ ಉತ್ಪತ್ತಿರುಚ್ಯತೇ। ತದ್ವಿಷಯದರ್ಶನವಿವಕ್ಷಯೈವ ಉತ್ಪತ್ತಿಃ ಸ್ತುತ್ಯರ್ಥಾ ||

(ಭಾಷ್ಯಾರ್ಥ)

ಇನ್ನು ಅಶ್ವಮೇಧಕ್ಕೆ ಉಪಯೋಗಿಸುವ ಅಗ್ನಿಯ ಉತ್ಪತ್ತಿಯನ್ನು ಹೇಳಲಾಗುತ್ತದೆ. ಅದರ ವಿಷಯವಾದ ದರ್ಶನವನ್ನು[1] ಹೇಳಬೇಕೆಂಬ ಇಚ್ಛೆಯಿಂದಲೇ (ಅಗ್ನಿಯನ್ನು) ಹೊಗಳುವದಕ್ಕಾಗಿ (ಅದರ) ಉತ್ಪತ್ತಿಯನ್ನು ಇಲ್ಲಿ ಹೇಳಿರುತ್ತದೆ.

(ಉಪನಿಷತ್ತು)

**ನೈವೇಹ ಕಿಂಚನಾಗ್ರ ಆಸೀನ್ಮೃತ್ಯುನೈವೇದಮಾವೃತಮಾಸೀತ್। ಅಶನಾಯಯಾಽಶನಾಯಾ ಹಿ ಮೃತ್ಯುಸ್ತನ್ಮನೋಽಕುರುತಾತ್ಮನ್ವೀ ಸ್ಯಾಮಿತಿ। ಸೋಽರ್ಚನ್ನಚರತ್ ತಸ್ಯಾರ್ಚತ ಆಪೋಽಜಾಯನ್ತಾ ರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ ಕಗ್ಂ ಹ ವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ ॥ ೧ ॥**

೧. ಇಲ್ಲಿ ಮೊದಲು ಯಾವದೊಂದೂ ಇರಲೇ ಇಲ್ಲ. ಇದು ಅಶನಾಯವೆಂಬ ಮೃತ್ಯುವಿನಿಂದಲೇ ಆವೃತವಾಗಿತ್ತು. ಅಶನಾಯವೇ ಅಲ್ಲವೆ, ಮೃತ್ಯು? (ಅವನು) ನಾನು ಆತ್ಮವಂತನಾಗಬೇಕು ಎಂದು ಮನಸ್ಸನ್ನು ಮಾಡಿದನು. ಅವನು ಅರ್ಚನಮಾಡುತ್ತಾ ಚರಿಸಿದನು. ಅರ್ಚಿಸುತ್ತಿರುವ ಆತನಿಂದ ಅಪ್ಪು ಹುಟ್ಟಿತು. ಅರ್ಚಿಸುತ್ತಿರುವ ನನಗೆ ಕವು ಉಂಟಾಯಿತಲ್ಲವೆ? ಅದೇ ಅರ್ಕನ ಅರ್ಕತ್ವವು. ಯಾವನು ಈ ಅರ್ಕನ ಅರ್ಕತ್ವವನ್ನು ಅರಿಯುವನೊ, ಅವನಿಗೆ ಕವೇ ಆಗುವದು.

---

1. ಉಪಾಸನೆಯನ್ನು

## ಕಾರ್ಯಜಗತ್ತು ಮೃತ್ಯುರೂಪಕಾರಣದಿಂದ ಆವೃತವಾಗಿತ್ತು

(ಭಾಷ್ಯ)

೧೪. 'ನೈವ ಇಹ ಕಿಂಚನಾಗ್ರೇ ಆಸೀತ್' । ಇಹ ಸಂಸಾರಮಣ್ಡಲೇ ಕಿಂಚನ ಕಿಂಚಿದಪಿ ನಾಮರೂಪಪ್ರವಿಭಕ್ತವಿಶೇಷಂ ನೈವ ಆಸೀತ್ ನ ಬಭೂವ। ಅಗ್ರೇ ಪ್ರಾಗುತ್ಪತ್ತೇಃ ಮನಆದೇಃ ॥

(ಭಾಷ್ಯಾರ್ಥ)

'ನೈವೇಹ ಕಿಂಚನಾಗ್ರೇ ಆಸೀತ್' (ಎಂಬ ಕಂಡಿಕೆಯ ಅರ್ಥವು ಹೇಗೆಂದರೆ): ಇಲ್ಲಿ, (ಈ) ಸಂಸಾರಮಂಡಲದಲ್ಲಿ ಯಾವದು ನಾಮರೂಪಗಳಿಂದ ವಿಂಗಡವಾಧ ಯಾವದೊಂದು (ಪದಾರ್ಥ)ವಿಶೇಷವೂ ಇರಲೇ ಇಲ್ಲ, ಇದ್ದದ್ದೇ ಇಲ್ಲ. ಮೊದಲು ಎಂದರೆ ಮನಸ್ಸು ಮುಂತಾದದ್ದು[1] ಹುಟ್ಟುವ ಮುಂಚೆ (ಎಂದರ್ಥ).

## ಸತ್ಕಾರ್ಯವಾದಭಾಷ್ಯ

### ಶೂನ್ಯವಾದಿಯ ಪಕ್ಷ

(ಭಾಷ್ಯ)

೧೫. ಕಿಂ ಶೂನ್ಯಮೇವ ಬಭೂವ? ಶೂನ್ಯಮೇವ ಸ್ಯಾತ್[2] "ನೈವೇಹ ಕಿಂಚನ" ಇತಿ ಶ್ರುತೇಃ। ನ ಕಾರ್ಯಂ ಕಾರಣಂ ವಾ ಆಸೀತ್। ಉತ್ಪತ್ತೇಶ್ಚ। ಉತ್ಪದ್ಯತೇ ಹಿ ಘಟಃ। ಅತಃ ಪ್ರಾಕ್ ಉತ್ಪತ್ತೇಃ ಘಟಸ್ಯ ನಾಸ್ತಿತ್ವಮ್। ನನು ಕಾರಣಸ್ಯ ನ ನಾಸ್ತಿತ್ವಂ ಮೃತ್ಪಿಣ್ಡಾದಿದರ್ಶನಾತ್। ಯನ್ನೋಪಲಭ್ಯತೇ ತಸ್ಯೈವ ನಾಸ್ತಿತಾ ಅಸ್ತುಕಾರ್ಯಸ್ಯ ನ ತು ಕಾರಣಸ್ಯ। ಉಪಲಭ್ಯಮಾನತ್ವಾತ್। ನ। ಪ್ರಾಗುತ್ಪತ್ತೇಃ ಸರ್ವಾನುಪಲಮ್ಭಾತ್। ಅನುಪಲಬ್ಧಿಶ್ಚೇತ್ ಅಭಾವಹೇತುಃ ಸರ್ವಸ್ಯ, ಜಗತಃ ಪ್ರಾಗುತ್ಪತ್ತೇಃ ನ ಕಾರಣಂ ಕಾರ್ಯಂ ವಾ ಉಪಲಭ್ಯತೇ। ತಸ್ಮಾತ್ ಸರ್ವಸ್ಯೈವ ಅಭಾವೋಽಸ್ತು ॥

(ಭಾಷ್ಯಾರ್ಥ)

(ಪ್ರಶ್ನೆ):-ಶೂನ್ಯವಾಗಿಯೇ ಇತ್ತೇನು?

---

1. ಮನಸ್ಸು ಮುಂತಾಗಿ ಹಿರಣ್ಯಗರ್ಭನು ಸೃಷ್ಟಿಮಾಡಿದನೆಂದು ಮುಂದೆ ಹೇಳಿದೆ.
2. "ಕಿಂ ಶೂನ್ಯಮೇವ ಸ್ಯಾತ್" ಎಂಬ ಆ॥ ಪಾಠವು ನ್ಯೂನವಾಗಿದೆ.

(ಶೂನ್ಯವಾದಿ) :–ಶೂನ್ಯವಾಗಿಯೇ ಇದ್ದಿರಬೇಕು. ಏಕೆಂದರೆ "ಇಲ್ಲಿ ಯಾವದೂ ಇರಲೇ ಇಲ್ಲ" ಎಂದು ಶ್ರುತಿ (ಹೇಳುತ್ತದೆ)[1]. ಕಾರ್ಯವಾಗಲಿ ಕಾರಣ ವಾಗಲಿ ಇರಲೇ ಇಲ್ಲ. ಉತ್ಪತ್ತಿಯಾಗಿರುವದರಿಂದಲೂ[2] (ಹೀಗೆಂದು ತಿಳಿಯ ಬೇಕು). ಗಡಿಗೆಯು ಹುಟ್ಟುತ್ತದೆಯಲ್ಲವೆ? ಆದ್ದರಿಂದ ಹುಟ್ಟುವದಕ್ಕಿಂತ ಮುಂಚೆ ಗಡಿಗೆಯು ಇರಲಿಲ್ಲ(ವೆನ್ನಬೇಕು.)

(ಆಕ್ಷೇಪ) :–ಕಾರಣವು ಇಲ್ಲವೆನ್ನಕೂಡದು ; ಏಕೆಂದರೆ ಮಣ್ಣು ಮುದ್ದೆಯೇ ಮುಂತಾದದ್ದು[3] ಕಾಣಬರುತ್ತದೆ. ಯಾವದು ಕಾಣಬರುವದಿಲ್ಲವೋ ಆ ಕಾರ್ಯವೊಂದೇ ಇಲ್ಲವೆಂದಾಗಲಿ, ಆದರೆ ಕಾರಣವು ಇಲ್ಲವೆನ್ನಕೂಡದು ; ಏಕೆಂದರೆ (ಅದು) ಕಾಣಬರುತ್ತದೆ.[4]

(ಶೂನ್ಯವಾದಿಯ ಪರಿಹಾರ) :–ಹಾಗಲ್ಲ. ಏಕೆಂದರೆ ಹುಟ್ಟುವ ಮುಂಚೆ ಯಾವದೂ ಕಾಣಬರುವದೇ ಇಲ್ಲ. ಯಾವದಕ್ಕಾದರೂ ಕಾಣದಿರುವದೇ (ಅದರ) ಅಭಾವಕ್ಕೆ ಹೇತು ಎನ್ನುವದಾದರೆ, ಜಗತ್ತು ಹುಟ್ಟುವ ಮುಂಚೆ ಕಾರಣವಾಗಲಿ ಕಾರ್ಯವಾಗಲಿ ಯಾವದೂ ಕಾಣಬರುವದಿಲ್ಲ.[5] ಆದ್ದರಿಂದ ಯಾವದೂ ಇಲ್ಲವೆಂದೇ ಆಗಲಿ!

## ಸಿದ್ಧಾಂತ : ಕಾರ್ಯಕಾರಣಗಳೆರಡೂ ಸತ್ತೇ

೧೬. ನ| "ಮೃತ್ಯುನೈವೇದಮಾವೃತಮಾಸೀತ್" ಇತಿ ಶ್ರುತೇಃ| ಯದಿ ಹಿ ಕಿಂಚಿದಪಿ ನಾಸೀತ್ ಯೇನ ಆವ್ರಿಯತೇ ಯಚ್ಚ ಆವ್ರಿಯತೇ, ತದಾ ನಾವಕ್ಷ್ಯತ್ 'ಮೃತ್ಯುನೈವ ಇದಮ್ ಆವೃತಮ್' ಇತಿ | ನ ಹಿ ಭವತಿ 'ಗಗನಕುಸುಮಚ್ಛನ್ನೋ ವನ್ಧ್ಯಾಪುತ್ರಃ' ಇತಿ| ಬ್ರವೀತಿ ಚ "ಮೃತ್ಯುನೈವೇದಮಾವೃತಮಾಸೀತ್"

---

1. ಶೂನ್ಯವಾದಿಗೆ ಶ್ರುತಿಯು ಪ್ರಮಾಣವಲ್ಲವಾದರೂ ಈ ಶ್ರುತಿಗೆ ಹೀಗೆಯೇ ಅರ್ಥ ವನ್ನು ಮಾಡಬೇಕೆಂದು ಸಿದ್ಧಾಂತಿಗೆ ಅನಿಷ್ಟವನ್ನು ತೋರಿಸುತ್ತಿದಾನೆ.

2. ಈ ಯುಕ್ತಿಯು ಶೂನ್ಯವಾದಿಗೆ ಮುಖ್ಯವಾದ ಆಧಾರ. ಮೊದಲೇ ಇದ್ದಿದ್ದರೆ ಹುಟ್ಟುತ್ತದೆ ಎಂಬ ಮಾತಿಗೆ ಅರ್ಥವಿಲ್ಲದೆ ಹೋಗುವದು ಎಂದು ಭಾವ.

3. ಮಣ್ಣುಮುದ್ದೆ ಘಟಕ್ಕೆ ಕಾರಣವೆಂದೂ ಮಣ್ಣು ಮಣ್ಣುಮುದ್ದೆಗೆ ಕಾರಣವೆಂದೂ ಒಪ್ಪಿ ಈ ವಾದವನ್ನು ತೆಗೆದಿದೆ.

4. ಗಡಿಗೆಯೇ ಮುಂತಾದದ್ದರಂತೆ ಮೊದಲು ಕಾಣದೆ ಇದ್ದು ಆಮೇಲೆ ಹುಟ್ಟುವದಿಲ್ಲ. ವೈಶೇಷಿಕಾದಿಗಳು ಕಾರ್ಯವು ಅಸತ್ತಾಗಿದ್ದು ಹುಟ್ಟುತ್ತದೆ ಎಂದು ಒಪ್ಪುತ್ತಾರೆ; ಆದರೆ ಕಾರಣವೂ ಅಸತ್ತೆಂಬ ಶೂನ್ಯವಾದಿಯ ಪಕ್ಷವನ್ನು ಒಪ್ಪುವದಿಲ್ಲ.

5. ಪ್ರಲಯದಲ್ಲಿ ಯಾವದೂ ಇಲ್ಲವೆಂದೇ ಒಪ್ಪಬೇಕು.

ಇತಿ। ತಸ್ಮಾತ್ ಯೇನ ಆವೃತಂ ಕಾರಣೇನ ಯಚ್ಚ ಆವೃತಂ ಕಾರ್ಯಂ ಪ್ರಾಗುತ್ಪತ್ತೇಃ ತದುಭಯಮ್ ಆಸೀತ್। ಶ್ರುತೇಃ ಪ್ರಾಮಾಣ್ಯಾತ್। ಅನುಮೇಯತ್ವಾಚ್ಚ। ಅನುಮೀಯತೇ ಚ ಪ್ರಾಗುತ್ಪತ್ತೇಃ ಕಾರ್ಯಕಾರಣಯೋಃ ಅಸ್ತಿತ್ವಮ್। ಕಾರ್ಯಸ್ಯ ಹಿ ಸತಃ ಜಾಯಮಾನಸ್ಯ ಕಾರಣೇ ಸತಿ ಉತ್ಪತ್ತಿದರ್ಶನಾತ್, ಅಸತಿ ಚ ಅದರ್ಶನಾತ್ ಜಗತೋऽಪಿ ಪ್ರಾಗುತ್ಪತ್ತೇಃ ಕಾರಣಾಸ್ತಿತ್ವಮ್ ಅನುಮೀಯತೇ। ಘಟಾದಿಕಾರಣಾಸ್ತಿತ್ವವತ್ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ 'ಮೃತ್ಯುವಿನಿಂದಲೇ ಇದು ಆವೃತವಾಗಿತ್ತು' ಎಂದು ಶ್ರುತಿ (ಹೇಳುತ್ತಿದೆ). ಯಾವದರಿಂದ ಆವೃತವಾಗಿರುತ್ತದೆಯೋ ಮತ್ತು ಯಾವದು ಆವೃತವಾಗಿರುತ್ತದೆಯೋ (ಅದು) ಯಾವದೂ ಇಲ್ಲವಾಗಿದ್ದರೆ 'ಮೃತ್ಯುವಿನಿಂದಲೇ ಇದು ಆವೃತವಾಗಿತ್ತು' ಎಂದು (ಶ್ರುತಿ) ಹೇಳುತ್ತಿರಲಿಲ್ಲ. 'ಬಂಜೆಯ ಮಗನು ಆಕಾಶದ ಹೂವಿನಿಂದ ಆವೃತವಾಗಿರುತ್ತಾನೆ' ಎಂದು (ಪ್ರಯೋಗ)ವಾಗುವದಿಲ್ಲವಲ್ಲವೆ ?[1] ಆದರೆ 'ಮೃತ್ಯುವಿನಿಂದಲೇ ಇದು ಆವೃತವಾಗಿತ್ತು' ಎಂದು (ಶ್ರುತಿ) ಹೇಳುತ್ತಿದೆ. ಆದ್ದರಿಂದ ಯಾವ ಕಾರಣದಿಂದ ಆವೃತವಾಗಿತ್ತೋ ಮತ್ತು ಯಾವ ಕಾರ್ಯವು ಆವೃತವಾಗಿತ್ತೋ ಅವೆರಡೂ ಇತ್ತು (ಎನ್ನಬೇಕು) ; ಏಕೆಂದರೆ ಶ್ರುತಿಯು ಪ್ರಮಾಣವಾಗಿರುತ್ತದೆ.[2]

ಅನುಮೇಯವಾಗಿರುವದರಿಂದಲೂ (ಹೀಗೆ) ಹುಟ್ಟುವ ಮುಂಚೆ ಕಾರ್ಯಕಾರಣಗಳು (ಎರಡೂ) ಇರುತ್ತವೆಯೆಂದು ಅನುಮಾನದಿಂದ (ಸಾಧಿಸ)ಬಹುದಾಗಿದೆ. (ಮೊದಲನೆಯದಾಗಿ) ಕಾರ್ಯವಾಗಿದ್ದುಕೊಂಡು ಹುಟ್ಟುವದಲ್ಲ, (ಅದಕ್ಕೆ) ಕಾರಣವು (ಮೊದಲು) ಇದ್ದರೇ (ಅದು) ಹುಟ್ಟುವದು ಕಂಡುಬರುವದರಿಂದಲೂ (ಅದು) ಇಲ್ಲದಿದ್ದರೆ (ಹುಟ್ಟುವದು) ಕಾಣಬರುವದಿಲ್ಲವಾದ್ದರಿಂದಲೂ ಜಗತ್ತು ಹುಟ್ಟುವ ಮುಂಚೆಯೂ—ಗಡಿಗೆ ಮುಂತಾದದ್ದರ ಕಾರಣವು (ಮೊದಲು ಇದ್ದೇ ಇರುವಂತೆ—ಅದರ ಕಾರಣವು ಇದ್ದಿರಬೇಕು–ಎಂದು ಅನುಮಾನಿಸಬಹುದಾಗಿದೆ.

---

1. ಕಾರ್ಯಕಾರಣಗಳೆರಡೂ ಅಸತ್ತಾದರೆ ಆವರಣವೆಂಬುದೇ ಹೊಂದುವದಿಲ್ಲ ಎಂಬುದಕ್ಕೆ ದೃಷ್ಟಾಂತವಿದು.

2. ಶ್ರುತಿಯನ್ನು ಪ್ರಮಾಣವೆಂದು ಹಿಡಿದಿರುವ ನಾವು ಎರಡೂ ಸತ್ತೆಂದೇ ಒಪ್ಪುತ್ತೇವೆ ಎಂದು ಅಭಿಪ್ರಾಯ.

## ಕಾರಣಸತ್ತ್ವಸ್ಥಾಪನ

(ಭಾಷ್ಯ)

೧೭. ಘಟಾದಿಕಾರಣಸ್ಯಾಪಿ ಅಸತ್ತ್ವಮೇವ ಅನುಪಮೃದ್ಯ ಮೃತ್ಪಿಣ್ಡಾದಿಕಂ ಘಟಾದ್ಯನುತ್ಪತ್ತೇಃ ಇತಿ ಚೇತ್ । ನ । ಮೃದಾದೇಃ ಕಾರಣತ್ವಾತ್ । ಮೃತ್ಸುವರ್ಣಾದಿ ಹಿ ತತ್ರ ಕಾರಣಂ ಘಟರುಚಕಾದೇಃ ನ ಪಿಣ್ಡಾದ್ಯಾಕಾರವಿಶೇಷಃ । ತದಭಾವೇ ಭಾವಾತ್ । ಅಸತ್ಯಪಿ ಪಿಣ್ಡಾದ್ಯಾಕಾರವಿಶೇಷೇ ಮೃತ್ಸುವರ್ಣಾದಿ ಕಾರಣದ್ರವ್ಯಮಾತ್ರಾದೇವ ಘಟರುಚಕಾದಿಕಾರ್ಯೋತ್ಪತ್ತಿಃ ದೃಶ್ಯತೇ । ತಸ್ಮಾತ್ ನ ಪಿಣ್ಡಾದ್ಯಾಕಾರವಿಶೇಷೋ ಘಟರುಚಕಾದಿಕಾರಣಮ್ । ಅಸತಿ ತು ಮೃತ್ಸುವರ್ಣಾದಿದ್ರವ್ಯೇ ಘಟರುಚಕಾದಿರ್ನಜಾಯತೇ ಇತಿ ಮೃತ್ಸುವರ್ಣಾದಿದ್ರವ್ಯಮೇವ ಕಾರಣಂ ನ ತು ಪಿಣ್ಡಾದ್ಯಾಕಾರವಿಶೇಷಃ । ಸರ್ವಂ ಹಿ ಕಾರಣಂ ಕಾರ್ಯಮ್ ಉತ್ಪಾದಯತ್ ಪೂರ್ವೋತ್ಪನ್ನಸ್ಯ ಆತ್ಮಕಾರ್ಯಸ್ಯ ತಿರೋಧಾನಂ ಕುರ್ವತ್ ಕಾರ್ಯಾನ್ತರಮ್ ಉತ್ಪಾದಯತಿ । ಏಕಸ್ಮಿನ್ ಕಾರಣೇ ಯುಗಪತ್ ಅನೇಕಕಾರ್ಯವಿರೋಧಾತ್ । ನ ಚ ಪೂರ್ವಕಾರ್ಯೋಪಮರ್ದೇ ಕಾರಣಸ್ಯ ಸ್ವಾತ್ಮೋಪಮರ್ದೋ ಭವತಿ । ತಸ್ಮಾತ್ ಪಿಣ್ಡಾದ್ಯುಪಮರ್ದೇ ಕಾರ್ಯೋತ್ಪತ್ತಿದರ್ಶನಮ್ ಅಹೇತುಃ ಪ್ರಾಗುತ್ಪತ್ತೇಃ ಕಾರಣಾಸತ್ತ್ವೇ । ಪಿಣ್ಡಾದಿವ್ಯತಿರೇಕೇಣ ಮೃದಾದೇರಸತ್ತ್ವಾತ್ ಅಯುಕ್ತಮ್ ಇತಿ ಚೇತ್ । ಪಿಣ್ಡಾದಿಪೂರ್ವಕಾರ್ಯೋಪಮರ್ದೇ ಮೃದಾದಿಕಾರಣಂ ನೋಪಮೃದ್ಯತೇ ಘಟಾದಿಕಾರ್ಯಾನ್ತರೇಽಪಿ ಅನುವರ್ತತೇ ಇತ್ಯೇತತ್ ಅಯುಕ್ತಮ್ । ಪಿಣ್ಡಘಟಾದಿವ್ಯತಿರೇಕೇಣ ಮೃದಾದಿಕಾರಣಸ್ಯ ಅನುಪಲಮ್ಭಾತ್ ಇತಿ ಚೇತ್ । ನ । ಮೃದಾದಿಕಾರಣಾನಾಂ ಘಟಾದ್ಯುತ್ಪತ್ತೌ ಪಿಣ್ಡಾದಿನಿವೃತ್ತೌ ಅನುವೃತ್ತಿದರ್ಶನಾತ್ ॥

(ಭಾಷ್ಯಾರ್ಥ)

(ಬೌದ್ಧ) :–(ದೃಷ್ಟಾಂತವಾದ) ಗಡಿಗೆಯೇ ಮುಂತಾದದ್ದರ ಕಾರಣವೂ ಅಸತ್ತೇ. ಏಕೆಂದರೆ ಮಣ್ಣಿನ ಮುದ್ದೆಯೇ ಮುಂತಾದವುಗಳನ್ನು ನಾಶಪಡಿಸದೆ ಗಡಿಗೆಯೇ ಮುಂತಾದದ್ದು ಹುಟ್ಟುವದಿಲ್ಲ.[1]

(ಸಿದ್ಧಾಂತಿ):–ಹಾಗಲ್ಲ. ಏಕೆಂದರೆ ಮಣ್ಣು ಮುಂತಾದದ್ದೇ ಕಾರಣವು. ಆ (ದೃಷ್ಟಾಂತ)ದಲ್ಲಿ ಗಡಿಗೆ, ಅಸಲಿ ಮುಂತಾದದ್ದಕ್ಕೆ ಮಣ್ಣು, ಚಿನ್ನ ಮುಂತಾದದ್ದೇ

---

1. ಕಾರಣವು ನಾಶವಾದ ಬಳಿಕವೇ ಕಾರ್ಯವು ಹುಟ್ಟುತ್ತದೆ ಎಂಬುದು ಬೌದ್ಧರಪಕ್ಷ. ಸೂ. ಭಾ. ೨-೨-೨೬ನ್ನು ನೋಡಿ.

ಕಾರಣವೇ ಹೊರತು ಮುದ್ದೆಯೇ ಮುಂತಾದ[1] ಆಕಾರವಿಶೇಷವು (ಕಾರಣವಲ್ಲ). ಏಕೆಂದರೆ ಅದಿಲ್ಲದಾಗಲೂ (ಕಾರ್ಯವು) ಇರುತ್ತದೆ. ಮುದ್ದೆಯೇ ಮುಂತಾದ ಆಕಾರವಿಶೇಷವು ಅಲ್ಲದಿದ್ದರೂ ಮಣ್ಣು, ಚಿನ್ನ-ಮುಂತಾದ ಕಾರಣದ್ರವ್ಯಮಾತ್ರ ದಿಂದಲೇ ಗಡಿಗೆ ಅಸಲಿ ಮುಂತಾದ ಕಾರ್ಯವು ಹುಟ್ಟುವದು ಕಂಡಬರುತ್ತದೆ. ಆದ್ದರಿಂದ ಮುದ್ದೆಯೇ ಮುಂತಾದ ದ್ರವ್ಯವು ಇಲ್ಲದಿದ್ದರೆ ಗಡಿಗೆ, ಅಸಲಿ ಮುಂತಾ ವದ್ದು ಹುಟ್ಟುವದಿಲ್ಲವಾದ್ದರಿಂದ ಮಣ್ಣು, ಚಿನ್ನ-ಮುಂತಾದ ದ್ರವ್ಯವೇ ಕಾರಣವೇ ಹೊರತು (ಅವುಗಳ) ಮುದ್ದೆಯೇ ಮುಂತಾದ ಆಕಾರವಿಶೇಷವು (ಕಾರಣವಲ್ಲ, ಪ್ರತಿಯೊಂದು ಕಾರಣವೂ ಕಾರ್ಯವನ್ನು ಹುಟ್ಟಿಸುವಾಗ ಮೊದಲು ಹುಟ್ಟಿದ್ದ ತನ್ನ ಕಾರ್ಯವನ್ನು ಮರೆಮಾಡಿಯೇ ಮತ್ತೊಂದು ಕಾರ್ಯವನ್ನು ಹುಟ್ಟಿಸುತ್ತದೆ. ಏಕೆಂದರೆ ಒಂದೇ ಕಾರಣದಲ್ಲಿ ಒಂದೇ ಕಾಲಕ್ಕೆ ಅನೇಕ ಕಾರ್ಯಗಳು ಇರುವದು ವಿರುದ್ಧವಾಗಿರುತ್ತದೆ. ಆದರೆ ಹಿಂದಿನ ಕಾರ್ಯ ವನ್ನು ನಾಶಮಾಡಿದ(ಮಾತ್ರ)ದಿಂದ ಕಾರಣಕ್ಕೆ ತನ್ನ ರೂಪವು ನಾಶವಾಗುವದಿಲ್ಲ. ಆದ್ದರಿಂದ ಮುದ್ದೆಯೇ ಮುಂತಾದದ್ದು ನಾಶವಾದ ಬಳಿಕವೇ ಕಾರ್ಯವು ಉಂಟಾಗುವದು ಕಂಡುಬರುತ್ತದೆ ಎಂಬುದು ಉತ್ಪತ್ತಿಗಿಂತ ಪೂರ್ವದಲ್ಲಿ ಕಾರಣ ವಿರುವದಿಲ್ಲ ಎಂಬುದಕ್ಕೆ ಹೇತುವಾಗಲಾರದು.[2]

(ಬೌದ್ಧ):-ಮುದ್ದೆಯೇ ಮುಂತಾದವುಗಳನ್ನು ಬಿಟ್ಟು ಮಣ್ಣು ಮುಂತಾ ವದ್ದು ಇರುವದಿಲ್ಲವಾದ್ದರಿಂದ (ಇದು ಸರಿ)ಯಲ್ಲ. (ಇದರ ವಿವರ): ಮುದ್ದೆಯೇ ಮುಂತಾದ ಮೊದಲಿನ ಕಾರ್ಯವು ನಾಶವಾದರೆ ಮಣ್ಣು ಮುಂತಾದ ಕಾರಣವು ನಾಶವಾಗುವದಿಲ್ಲ ; ಏಕೆಂದರೆ (ಅದು) ಗಡಿಗೆಯೇ ಮುಂತಾದ ಕಾರ್ಯಾಂತರ ದಲ್ಲಿಯೂ ಅನುಸರಿಸಿಕೊಂಡೇ ಇರುತ್ತದೆ ಎಂದು (ಹೇಳಿದಿರಲ್ಲ), ಇದು ಅಯುಕ್ತ. ಏಕೆಂದರೆ ಮುದ್ದೆ, ಗಡಿಗೆ ಮುಂತಾದ (ಕಾರ್ಯ)ಕ್ಕಿಂತ ಬೇರೆ ಯಾಗಿ ಮಣ್ಣು ಮುಂತಾದ ಕಾರಣವು ಕಾಣಬರುವದಿಲ್ಲ.[3]

---

1. 'ಪಿಣ್ಡಾದ್ಯಾಕಾರವಿಶೇಷಃ' ಎಂಬ ಪಾಠದ ಅನುವಾದವಿದು. ಈ ಪಾಠವನ್ನೇ ಮುಂದೆಯೂ ಇಟ್ಟುಕೊಂಡಿದ್ದೇವೆ. ಗಡಿಗೆಗೆ ಮಣ್ಣಿನ ಮುದ್ದೆಯೂ ಅಸಲಿಗೆ ಚಿನ್ನದ ಗಟ್ಟಿಯೂ ಕಾರಣವೆಂಬ ಬೌದ್ಧನ ಮತವನ್ನು ನಿರಾಕರಿಸಿ ಆಕಾರಶೂನ್ಯವಾದ ಕಾರಣವೇ ನಿಜವಾದ ಕಾರಣ ವೆಂದು ತಿಳಿಸಿದೆ.

2. ಏಕೆಂದರೆ ಮುದ್ದೆ ಮುಂತಾದದ್ದು ಕಾರ್ಯ, ಕಾರಣವಲ್ಲ.

3. ಕಾರ್ಯವೆಂದು ನೀವು ಕರೆಯುತ್ತಿರುವ ವಸ್ತುಗಳಲ್ಲಿಯೇ ಪರಸ್ಪರವಾಗಿ ಕಾರ್ಯ ಕಾರಣಭಾವವಿದೆ. ಈ ಕಾರ್ಯಗಳಿಗಿಂತ ಬೇರೆಯಾದ ಪರಮಕಾರಣವೊಂದು ಇರುವದೇ ಇಲ್ಲ ಎಂದರ್ಥ. ಸಿದ್ಧಾಂತದಲ್ಲಿ ಅವಾಂತರಕಾರ್ಯಕಾರಣಭಾವವನ್ನು ಒಪ್ಪಿದರೂ ಬ್ರಹ್ಮವೇ ಎಲ್ಲಕ್ಕೂ ಪರಮಕಾರಣವೆಂದು ಅಂಗೀಕರಿಸಿರುವದಕ್ಕೆ ಈ ಅಭಿಪ್ರಾಯವು ವಿರುದ್ಧವಾಗಿರುತ್ತದೆ.

(ಸಿದ್ಧಾಂತಿ):–ಹಾಗಲ್ಲ. ಗಡಿಗೆಯೇ ಮುಂತಾದ (ಕಾರ್ಯಗಳು) ಹುಟ್ಟಲು ಮುದ್ದೆಯೇ ಮುಂತಾದ (ಕಾರ್ಯಗಳು) ತೊಲಗಿದರೂ ಮಣ್ಣು ಮುಂತಾದ ಕಾರಣಗಳು ಅನುಸರಿಸಿಕೊಂಡೇ ಬಂದಿರುತ್ತವೆ.

## ಕಾರಣಾನ್ವಯಬುದ್ಧಿಯು ಸಾದೃಶ್ಯದಿಂದಲ್ಲ

(ಭಾಷ್ಯ)

೧೮. ಸಾದೃಶ್ಯಾತ್ ಅನ್ವಯದರ್ಶನಂ ನ ಕಾರಣಾನುವೃತ್ತೇಃ ಇತಿ ಚೇತ್ । ನ । ಪಿಣ್ಡಾದಿಗತಾನಾಂ ಮೃದಾದ್ಯವಯವಾನಾಮೇವ ಘಟಾದೌ ಪ್ರತ್ಯಕ್ಷತ್ವೇ ಅನುಮಾನಾಭಾಸಾತ್ ಸಾದೃಶ್ಯಾದಿಕಲ್ಪನಾನುಪಪತ್ತಿಃ । ನ ಚ ಪ್ರತ್ಯಕ್ಷಾನುಮಾನಯೋಃ ವಿರುದ್ಧಾ ವ್ಯಭಿಚಾರಿತಾ । ಪ್ರತ್ಯಕ್ಷಪೂರ್ವಕತ್ವಾತ್ ಅನುಮಾನಸ್ಯ । ಸರ್ವತ್ರೈವ ಅನಾಶ್ವಾಸಪ್ರಸಙ್ಗಾತ್ । ಯದಿ ಚ ಕ್ಷಣಿಕಂ ಸರ್ವಂ ತದೇವೇದಮ್ ಇತಿ ಗಮ್ಯಮಾನಂ ತದ್ಬುದ್ಧೇರಪಿ ಅನ್ಯತದ್ಬುದ್ಧ್ಯಪೇಕ್ಷತ್ವೇ ತಸ್ಯಾ ಅಪಿ ಅನ್ಯತದ್ಬುದ್ಧ್ಯಪೇಕ್ಷತ್ವಮ್ ಇತಿ ಅನವಸ್ಥಾಯಾಮ್ 'ತತ್ಸದೃಶಮ್ ಇದಮ್' ಇತ್ಯಸ್ಯಾ ಅಪಿ ಬುದ್ಧೇಃ ಮೃಷಾತ್ವಾತ್ ಸರ್ವತ್ರ ಅನಾಶ್ವಾಸತೈವ । ತದಿದಂಬುದ್ಧ್ಯೋರಪಿ ಕರ್ತ್ರಭಾವೇ ಸಂಬನ್ಧಾನುಪಪತ್ತಿಃ । ಸಾದೃಶ್ಯಾತ್ ತತ್ಸಂಬನ್ಧಃ ಇತಿ ಚೇತ್ । ನ । ತದಿದಂಬುದ್ಧ್ಯೋಃ ಇತರೇತರವಿಷಯತ್ವಾನುಪಪತ್ತೇಃ । ಅಸತಿ ಚ ಇತರೇತರವಿಷಯತ್ವೇ ಸಾದೃಶ್ಯಗ್ರಹಣಾನುಪಪತ್ತಿಃ । ಅಸತ್ಯೇವ ಸಾದೃಶ್ಯೇ ತದ್ಬುದ್ಧಿಃ ಇತಿ ಚೇತ್ । ನ । ತದಿದಂಬುದ್ಧ್ಯೋರಪಿ ಸಾದೃಶ್ಯಬುದ್ಧಿವತ್ ಅಸದ್ವಿಷಯತ್ವಪ್ರಸಙ್ಗಾತ್ । ಅಸದ್ವಿಷಯತ್ವಮೇವ ಸರ್ವಬುದ್ಧೀನಾಮ್ ಅಸ್ತು ಇತಿ ಚೇತ್ । ನ । ಬುದ್ಧಿಬುದ್ಧೇರಪಿ ಅಸದ್ವಿಷಯತ್ವಪ್ರಸಙ್ಗಾತ್ । ತದಪ್ಯಸ್ತು ಇತಿ ಚೇತ್ । ನ । ಸರ್ವಬುದ್ಧೀನಾಂ ಮೃಷಾತ್ವೇ ಅಸತ್ಯಬುದ್ಧ್ಯನುಪಪತ್ತೇಃ । ತಸ್ಮಾತ್ ಅಸದೇತತ್ ಸಾದೃಶ್ಯಾತ್ ತದ್ಬುದ್ಧಿಃ ಇತಿ । ಅತಃ ಸಿದ್ಧಃ ಪ್ರಾಕ್ ಕಾರ್ಯೋತ್ಪತ್ತೇಃ ಕಾರಣಸದ್ಭಾವಃ ॥

(ಭಾಷ್ಯಾರ್ಥ)

(ಬೌದ್ಧ):–ಸಾದೃಶ್ಯದಿಂದ (ಹೀಗೆ) ಹೊಂದಿಕೊಂಡುಬರುವದು ಕಾಣುತ್ತದೆಯೇ ಹೊರತು ಕಾರಣವಾದ (ಮಣ್ಣು ನಿಜವಾಗಿ) ಅನುಸರಿಸಿಕೊಂಡು ಬಂದಿರುವದರಿಂದಲ್ಲ.

---

3. ಆದ್ದರಿಂದ ಕಾರ್ಯಗಳಲ್ಲೆಲ್ಲ ಅನುಗತವಾಗಿರುವದೇ ನಿಜವಾದ ಕಾರಣವು. ಮುದ್ದೆ ಮುಂತಾದವುಗಳಿಂದ ಘಟಾದಿಗಳು ಉಂಟಾಗುವವೆಂದು ಭಾವಿಸುವದು ಈ ದೃಷ್ಟಿಯಿಂದ ಅಯುಕ್ತವೇ ಎಂದು ಭಾವ.

(ಸಿದ್ಧಾಂತಿ) :–ಹಾಗಲ್ಲ. ಏಕೆಂದರೆ ಮುದ್ದೆಯೇ ಮುಂತಾದವುಗಳಲ್ಲಿದ್ದ ಮಣ್ಣು ಮುಂತಾವದ್ದರ ಅವಯವಗಳೇ ಗಡಿಗೆ ಮುಂತಾದವುಗಳಲ್ಲಿ (ಅನುಸರಿಸಿ ಕೊಂಡಿರುವದು) ಪ್ರತ್ಯಕ್ಷವಾಗಿರುವಲ್ಲಿ ಅನುಮಾನಾಭಾಸದಿಂದ ಸಾದೃಶ್ಯವನ್ನು ಕಲ್ಪಿಸುವದು ಸರಿಯಲ್ಲ. ಪ್ರತ್ಯಕ್ಷಾನುಮಾನಗಳಿಗೆ ವ್ಯಭಿಚಾರಿತ್ವವೆಂಬುದು (ಇದಕ್ಕೆ) ವಿರುದ್ಧವಲ್ಲ.[1] ಏಕೆಂದರೆ ಅನುಮಾನವು ಪ್ರತ್ಯಕ್ಷಪೂರ್ವಕವಾಗಿರುತ್ತದೆ ಯಾಗಿ ಎಲ್ಲೆಲ್ಲಿಯೂ ವಿಶ್ವಾಸವಿಲ್ಲದೆ ಹೋಗಬೇಕಾಗುವದು.[2] (ಇದರ ವಿವರ): ಅದೇ ಇದು ಎಂದು ತಿಳಿಯಬರುವವೆಲ್ಲವೂ ಕ್ಷಣಿಕವೇ ಆದರೆ (ಆ) ಅದು ಎಂಬ ಬುದ್ಧಿಗೂ ಮತ್ತೊಂದು 'ಅದು' ಎಂಬ ಬುದ್ಧಿಯು ಬೇಕಾಗುವದರಿಂದ ಅದಕ್ಕೂ ಮತ್ತೊಂದು 'ಅದು' ಎಂಬ ಬುದ್ಧಿಯು ಬೇಕಾಗುವದೆಂದಾಗಿ ಅನವಸ್ಥೆಯು ಬಂದೊದಗುವದರಿಂದ 'ಅದಕ್ಕೆ ಇದು ಸದೃಶವು' ಎಂಬೀ ಬುದ್ಧಿಯೂ ತಪ್ಪೇ ಆಗುವದರಿಂದ ಎಲ್ಲಿಯೂ ವಿಶ್ವಾಸವುಂಟಾಗುವದಕ್ಕೆ (ಕಾರಣ)ವಿಲ್ಲದೆ ಹೋಗುವದು.[3] (ಇದಲ್ಲದೆ) ಅದು, ಇದು–ಎಂಬ ಎರಡು ಬುದ್ಧಿಗಳಿಗೂ (ಒಬ್ಬ) ಕರ್ತೃವಿಲ್ಲದಿದ್ದರೆ (ಅವುಗಳಿಗೆ) ಸಂಬಂಧವೇ ಇಲ್ಲವಾಗುವದು.[4] ಸಾದೃಶ್ಯದಿಂದ (ಅವುಗಳಿಗೆ) ಸಂಬಂಧವಾಗಬಹುದಲ್ಲ!–ಎಂದರೆ ಹಾಗಲ್ಲ; ಏಕೆಂದರೆ 'ಅದು' 'ಇದು'

---

1. ಇಲ್ಲಿ 'ನ ಚ ಪ್ರತ್ಯಕ್ಷಾನುಮಾನಯೋರ್ವಿರುದ್ಧಾವ್ಯಭಿಚಾರಿತಾ' ಎಂದು ಸಮಾಸ ಪಾಠವನ್ನು ಹಿಡಿದು 'ವಿರುದ್ಧತ್ವಸ್ಯ ಅವ್ಯಭಿಚಾರಿತ್ವಾತ್' ಎಂದು ಆ॥ ಟೀಕೆಯಲ್ಲಿ ವಿವರಿಸಿದೆ. ಬೃ. ವಾರ್ತಿಕದಲ್ಲಿಯೂ ಟೀಕಾಕಾರರು ಹೀಗೆಯೇ ಬರೆದಿರುತ್ತಾರೆ. ಇದು ಸರಿಯೆಂದು ನಮಗೆ ತೋರುವದಿಲ್ಲ.

2. ಪ್ರತ್ಯಕ್ಷಕ್ಕೆ ವಿರುದ್ಧವಾದ ಅನುಮಾನಕ್ಕೆ ಆಭಾಸತ್ವವನ್ನು ಹೇಳುವದೇಕೆ? ಅನುಮಾನವಿರುದ್ಧವಾದ ಪ್ರತ್ಯಕ್ಷವನ್ನೇ ಪ್ರತ್ಯಕ್ಷಾಭಾಸವೆಂದೇಕೆ ಎಣಿಸಬಾರದು?–ಎಂಬ ಆಕ್ಷೇಪಕ್ಕೆ ಇದು ಪರಿಹಾರವು. ಅನುಮಾನವು ಪ್ರತ್ಯಕ್ಷವನ್ನು ಆಶ್ರಯಿಸಿಕೊಂಡೇ ಹುಟ್ಟುವದರಿಂದ ಪ್ರತ್ಯಕ್ಷವನ್ನು ಆಭಾಸವೆಂದರೆ ಅನುಮಾನವೂ ಆಭಾಸವೇ ಆಗುವದು; ಆಗ ಎರಡೂ ಅಪ್ರಮಾಣವೇ ಆಗುವದು. ಆದ್ದರಿಂದ ಪ್ರತ್ಯಕ್ಷವೇ ಪ್ರಬಲವೆಂದು ಒಪ್ಪಬೇಕು.

3. ಆ ಮಣ್ಣಿನ ಅವಯವಗಳೇ ಇವು ಎಂಬ ಪ್ರತ್ಯಭಿಜ್ಞಾಪ್ರತ್ಯಕ್ಷವಾಗುತ್ತಿರುವಲ್ಲಿ ಅದನ್ನು ತಳ್ಳಿಹಾಕಿ ಅನುಮಾನದಿಂದ ಅದರಂತಿರುವದರಿಂದ ಅದೆಂಬ ಬುದ್ಧಿಯಾಗಿದೆ ಎಂದು ಕಲ್ಪಿಸಿದರೆ 'ಅದರಂತೆ ಇದು ಇದೆ' ಎಂಬ ಹೇತುವೂ ಪ್ರತ್ಯಕ್ಷವನ್ನು ಆಶ್ರಯಿಸಿದುವದರಿಂದ ಅದನ್ನು ತಳ್ಳಿಹಾಕಬೇಕಾಗುವದು. ಆಗ ನಾವು ಪ್ರತ್ಯಕ್ಷವನ್ನಾಗಲಿ ಅನುಮಾನವನ್ನಾಗಲಿ ಯಾವದನ್ನೂ ನಂಬುವದಕ್ಕಿಲ್ಲದೆ ಯಾವ ಸಿದ್ಧಾಂತವೂ ನಿಲ್ಲದೆ ಹೋಗುವದು ಎಂದು ಅಭಿಪ್ರಾಯ.

4. ಅದನ್ನು ಗ್ರಹಿಸಿ ಇದನ್ನು ಗ್ರಹಿಸುವ ಒಬ್ಬ ಕರ್ತೃವಿಲ್ಲದ ಬಳಿಕ ಅದು (ಆ ಕಾಲದಲ್ಲಿದ್ದದ್ದು), ಇದು (ಈ ಕಾಲದಲ್ಲಿರುವದು)–ಇವೆರಡಕ್ಕೂ ಏನು ಸಂಬಂಧ? ಸಂಬಂಧವಿಲ್ಲದಿದ್ದರೆ ಅದೇ ಇದು ಎಂಬ ಪ್ರತ್ಯಭಿಜ್ಞಾನವು ಹೇಗೆ ಆಗಬೇಕು?–ಎಂದರ್ಥ.

ಎಂಬ ಬುದ್ಧಿಗಳು ಒಂದಕ್ಕೊಂದು ವಿಷಯವಾಗಲಾರವು. ಒಂದಕ್ಕೊಂದು ವಿಷಯವಲ್ಲದ್ದರಿಂದ ಸಾದೃಶ್ಯವನ್ನು ಗ್ರಹಿಸುವದೂ ಆಗಲಾರದು.[1]

(ಬೌದ್ಧ):—ಸಾದೃಶ್ಯವಿಲ್ಲದಿದ್ದರೂ ಆ (ಸಾದೃಶ್ಯ)ಬುದ್ಧಿಯಾಗುತ್ತದೆ.

(ಸಿದ್ಧಾಂತಿ):—(ಹಾಗಾದರೆ) ಅದು, ಇದು–ಎಂಬ ಬುದ್ಧಿಗಳೂ ಸಾದೃಶ್ಯ ಬುದ್ಧಿಯಂತೆ ಅಸದ್ವಿಷಯಕವೇ ಎಂದಾಗುವದು.[2]

(ಬೌದ್ಧ):—ಎಲ್ಲಾ ಬುದ್ಧಿಗಳೂ ಅಸದ್ವಿಷಯಕವೆಂದೇ ಆಗಲಿ ![3]

(ಸಿದ್ಧಾಂತಿ):–ಹಾಗಲ್ಲ. ಏಕೆಂದರೆ (ಆಗ) ಬುದ್ಧಿ(ವಿಷಯಕ)ಬುದ್ಧಿಯೂ ಅಸದ್ವಿಷಯಕವೆಂದಾಗುವದು.

(ಬೌದ್ಧ):—ಅದೂ ಆಗಲಿ ![4]

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಎಲ್ಲಾ ಬುದ್ಧಿಗಳೂ ಅಸತ್ಯವೆಂದಾದರೆ ಅಸತ್ಯಬುದ್ಧಿಯೆಂಬುದೇ ಹೊಂದುವದಿಲ್ಲ.[5] ಆದ್ದರಿಂದ ಸಾದೃಶ್ಯದಿಂದ ಅದೇ (ಇದೆಂಬ) ಬುದ್ಧಿ(ಯುಂಟಾಗುವದೆಂಬುದು) ಸರಿಯಲ್ಲ. ಆದ್ದರಿಂದ ಕಾರ್ಯವು ಹುಟ್ಟುವ ಮೊದಲು ಕಾರಣವು ಇರುತ್ತದೆ ಎಂದು ಸಿದ್ಧವಾಯಿತು.

---

1. 'ಅದೇ ಇದು' ಎಂಬ ಬುದ್ಧಿಯು ಸಾದೃಶ್ಯದಿಂದ ಆದದ್ದು ; ಅದರಂತೆ ಇದು ಎಂಬುದೇ ತತ್ತ್ವ ಎಂದು ಬೌದ್ಧನು ಶಂಕಿಸಿದ್ದಕ್ಕೆ ಇದು ಉತ್ತರ. ವಿಜ್ಞಾನವು ತನ್ನನ್ನು ತಾನೇ ಗ್ರಹಿಸುವದು, ಕ್ಷಣಿಕವಾಗಿಯೂ ಇರುವದು. ಮುಂದಿನ ಕ್ಷಣದಲ್ಲಿರುವ ವಿಜ್ಞಾನವನ್ನು ಅದು ಗ್ರಹಿಸಲಾರದು. ಹೀಗೆಯೇ ಮುಂದಿನ ಕ್ಷಣದಲ್ಲಿ ತನ್ನನ್ನು ತಾನೇ ಗ್ರಹಿಸುವ ಬುದ್ಧಿ ಹಿಂದಿನ ಕ್ಷಣದಲ್ಲಿರುವದಿಲ್ಲ. ಹೀಗಿರುವಲ್ಲಿ 'ಅದರಂತೆ ಇದು' ಎಂಬ ಸಾದೃಶ್ಯಬುದ್ಧಿಯು ಯಾವ ಕ್ಷಣಕ್ಕೆ ಸೇರೀತು ? ಯಾವದಕ್ಕೂ ಸೇರದೆ ಇದ್ದರೆ ಸಾದೃಶ್ಯಬುದ್ಧಿ ಎಲ್ಲಿಂದ ಬಂತು ? ಎಂದು ಅಭಿಪ್ರಾಯ.

2. ಸಾದೃಶ್ಯಬುದ್ಧಿಯ ದೃಷ್ಟಾಂತದಿಂದ ಹೀಗೆಯೇ ಅನುಮಾನಿಸಬೇಕಾಗುವದು ಎಂದರ್ಥ.

3. ಕಾರ್ಯವೂ ಇಲ್ಲ ಕಾರಣವೂ ಇಲ್ಲ ಎಂಬ ನಮ್ಮ ವಾದದಲ್ಲಿ ಬುದ್ಧಿಗಳಿಗೆ ವಿಷಯವೇ ಇರಬೇಕಾದದ್ದಿಲ್ಲ– ಎಂದರ್ಥ.

4. ಸರ್ವವೂ ಶೂನ್ಯವೆಂದೇ ಆಗಲಿ ಎಂದು ಪೂರ್ವಪಕ್ಷಿಯ ಭಾವ.

5. ಶೂನ್ಯಬುದ್ಧಿಗೂ ವಿಷಯವಿಲ್ಲವೆಂದು ಒಪ್ಪಿದರೆ ಶೂನ್ಯವಿಲ್ಲವೆಂದೇ ಆಗುವದು ಎಂದು ಭಾವ. ಸರ್ವವೂ ಶೂನ್ಯವೆಂಬ ಮತದಲ್ಲಿ ಸದ್ಬುದ್ಧಿಯೂ ಇಲ್ಲ, ಅಸದ್ಬುದ್ಧಿಯೂ ಇಲ್ಲ. ಆದ್ದರಿಂದ ಎಲ್ಲಾ ಬುದ್ಧಿಗಳೂ ಅಸದ್ವಿಷಯಕವೇ ಎನ್ನುವದು ಸಿದ್ಧವಾಗಲಾರದು ಎಂದು ಭಾವ.

## ಕಾರ್ಯಸತ್ತ್ವಸಾಧನ

(ಭಾಷ್ಯ)

೧೯. ಕಾರ್ಯಸ್ಯ ಚ ಅಭಿವ್ಯಕ್ತಿಲಿಙ್ಗತ್ವಾತ್ । ಕಾರ್ಯಸ್ಯ ಚ ಸದ್ಭಾವಃ ಪ್ರಾಗುತ್ಪತ್ತೇಃ ಸಿದ್ಧಃ । ಕಥಮ್ ? ಅಭಿವ್ಯಕ್ತಿಲಿಙ್ಗತ್ವಾತ್ । ಅಭಿವ್ಯಕ್ತಿಃ ಲಿಙ್ಗಮ್ ಅಸ್ಯ ಇತಿ । ಅಭಿವ್ಯಕ್ತಿಃ ಸಾಕ್ಷಾದ್ ವಿಜ್ಞಾನಾಲಮ್ಬನತ್ವಪ್ರಾಪ್ತಿಃ । ಯದ್ ಹಿ ಲೋಕೇ ಪ್ರಾವೃತಂ ತಮಆದಿನಾ ಘಟಾದಿವಸ್ತು ತತ್ ಆಲೋಕಾದಿನಾ ಪ್ರಾವರಣತಿರಸ್ಕಾರೇಣ ವಿಜ್ಞಾನವಿಷಯತ್ವಂ ಪ್ರಾಪ್ನುವತ್ ಪ್ರಾಕ್ಸದ್ಭಾವಂ ನ ವ್ಯಭಿಚರತಿ । ತಥಾ ಇದಮಪಿ ಜಗತ್ ಪ್ರಾಗುತ್ಪತ್ತೇಃ ಇತಿ ಅವಗಚ್ಛಾಮಃ । ನ ಹಿ ಅವಿದ್ಯಮಾನೋ ಘಟಃ ಉದಿತೇಽಪಿ ಆದಿತ್ಯೇ ಉಪಲಭ್ಯತೇ । ನ ತೇ ಅವಿದ್ಯಮಾನತ್ವಾಭಾವಾತ್ ಉಪಲಭ್ಯೇತೈವ ಇತಿ ಚೇತ್ । ನ ಹಿ ತವ ಘಟಾದಿ ಕಾರ್ಯಂ ಕದಾಚಿದಪಿ ಅವಿದ್ಯಮಾನಮ್ ಇತಿ ಉದಿತೇ ಆದಿತ್ಯೇ ಉಪಲಭ್ಯೇತೈವ । ಮೃತ್ಪಿಣ್ಡೇ ಸಂನಿಹಿತೇ[1] ತಮಆದ್ಯಾವರಣೇ ಚ ಅಸತಿ ವಿದ್ಯಮಾನತ್ವಾತ್ ಇತಿ ಚೇತ್ । ನ । ದ್ವಿವಿಧತ್ವಾತ್ ಆವರಣಸ್ಯ । ಘಟಾದಿಕಾರ್ಯಸ್ಯ ದ್ವಿವಿಧಂ ಹಿ ಆವರಣಮ್ । ಮೃದಾದೇರಭಿವ್ಯಕ್ತಸ್ಯ ತಮಃಕುಡ್ಯಾದಿ, ಪ್ರಾಙ್ಮೃದೋಽಭಿವ್ಯಕ್ತೇಃ ಮೃದಾದ್ಯವಯವಾನಾಂ ಪಿಣ್ಡಾದಿಕಾರ್ಯಾನ್ತರರೂಪೇಣ ಸಂಸ್ಥಾನಮ್ । ತಸ್ಮಾತ್ ಪ್ರಾಗುತ್ಪತ್ತೇಃ ವಿದ್ಯಮಾನಸ್ಯೈವ ಘಟಾದಿಕಾರ್ಯಸ್ಯ ಆವೃತತ್ವಾತ್ ಅನುಪಲಬ್ಧಿಃ । ನಷ್ಟೋತ್ಪನ್ನಭಾವಾಭಾವಶಬ್ದಪ್ರತ್ಯಯಭೇದಸ್ತು ಅಭಿವ್ಯಕ್ತಿತಿರೋಭಾವಯೋರ್ದ್ವಿವಿಧತ್ವಾಪೇಕ್ಷಃ ॥

(ಭಾಷ್ಯಾರ್ಥ)

ಅಭಿವ್ಯಕ್ತಿಲಿಂಗದಿಂದ ಕಾರ್ಯವೂ (ಇರುತ್ತದೆ ಎಂದು ಸಿದ್ಧವಾಗುತ್ತದೆ). (ಇದರ ವಿವರ): ಕಾರ್ಯವೂ ಉತ್ಪತ್ತಿಗಿಂತ ಮುಂಚೆ ಇರುತ್ತದೆ ಎಂದು ಸಿದ್ಧವಾಗುತ್ತದೆ. ಹೇಗೆ ? ಎಂದರೆ ಅಭಿವ್ಯಕ್ತಿಲಿಂಗವಾಗಿರುವದರಿಂದ. ಅಭಿವ್ಯಕ್ತಿಯು ಅದಕ್ಕೆ ಲಿಂಗವಾಗಿರುತ್ತದೆ ಎಂದು (ಅಭಿಪ್ರಾಯ). ಅಭಿವ್ಯಕ್ತಿ ಎಂದರೆ ನೇರಾಗಿ ಅರಿವಿಗೆ ವಿಷಯತ್ವವನ್ನು ಪಡೆದುಕೊಳ್ಳುವದು. ಹೇಗೆಂದರೆ ಲೋಕದಲ್ಲಿ ಗಡಿಗೆಯೇ ಮುಂತಾಗಿ ಯಾವ ವಸ್ತುವು ಕತ್ತಲೆ ಮುಂತಾದದ್ದರಿಂದ ಆವೃತವಾಗಿರುತ್ತದೆಯೋ ಅದು ಬೆಳಕು ಮುಂತಾದದ್ದರಿಂದ ಆವರಣವನ್ನು ಕಳೆದು ಹಾಕಿದರೆ ವಿಜ್ಞಾನಕ್ಕೆ ವಿಷಯತ್ವವನ್ನು ಪಡೆದುಕೊಳ್ಳುವದಾಗಿ (ಅದಕ್ಕಿಂತ)

---

1. ಅನುವಾದದ ಟಿಪ್ಪಣಿಯನ್ನು ನೋಡಿ.

ಮೊದಲು ಇರುವಿಕೆಯನ್ನು ಬಿಟ್ಟುಹೋಗುವದಿಲ್ಲ.[1] ಅದರಂತೆ ಈ ಜಗತ್ತು ಹುಟ್ಟುವದಕ್ಕೆ ಮುಂಚೆ (ಇದ್ದಿರಬೇಕು) ಎಂದು ನಾವು ನಿಶ್ಚಯಿಸಬೇಕು. ಏಕೆಂದರೆ ಇಲ್ಲದಿದ್ದ ಗಡಿಗೆಯು ಸೂರ್ಯನು ಹುಟ್ಟಿದರೂ ಕಾಣಬರಲಾರದು.[2]

(ಬೌದ್ಧ):—ಹಾಗಲ್ಲ. ನಿನ್ನ (ಪಕ್ಷದಲ್ಲಿ) ಇಲ್ಲವೆಂಬುದೇ ಇಲ್ಲವಾದ್ದರಿಂದ (ಅದು) ಕಂಡೇತೀರಬೇಕಾಗುವದಲ್ಲ![3] (ಇದರ ವಿವರ): ನಿನ್ನ (ಪಕ್ಷದಲ್ಲಿ) ಗಡಿಗೆಯೇ ಮುಂತಾದ ಕಾರ್ಯವು ಎಂದಿಗೂ ಇಲ್ಲದಿರುವದಿಲ್ಲವಾದ್ದರಿಂದ ಸೂರ್ಯನು ಹುಟ್ಟಿದರೆ ಕಂಡೇತೀರಬೇಕು. ಮಣ್ಣಿನಮುದ್ದೆಯು ಇದ್ದರೂ[4] ಕತ್ತಲೆಯೇ ಮುಂತಾದ ಆವರಣವು ಇಲ್ಲದಿದ್ದರೆ (ಅದು) ಇದ್ದೇ ಇರುವದಲ್ಲವೆ ?

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಆವರಣವು ಎರಡು ಬಗೆ. (ಇದರ ವಿವರ): ಗಡಿಗೆಯೇ ಮುಂತಾದ ಕಾರ್ಯಕ್ಕೆ (ಅದು) ಮಣ್ಣು ಮುಂತಾದದ್ದರಿಂದ ಹೊರತೋರಿಕೊಂಡಿರುವದಾದರೆ ಕತ್ತಲೆ, ಗೋಡೆ-ಮುಂತಾದದ್ದು (ಒಂದು ಆವರಣವು), ಮಣ್ಣಿನಿಂದ ಹೊರತೋರಿಕೊಳ್ಳುವ ಮುಂಚೆ ಮಣ್ಣು ಮುಂತಾದ ಅವಯವಗಳು ಮುದ್ದೆಯೇ ಮುಂತಾದ ಬೇರೊಂದು ಕಾರ್ಯದ ರೂಪವಾಗಿ ಇರುವದು (ಇನ್ನೊಂದು ಆವರಣವು- ಹೀಗೆ) ಆವರಣವು ಎರಡು ಬಗೆ(ಯಾಗಿರುತ್ತದೆ). ಆದ್ದರಿಂದ ಹುಟ್ಟುವದಕ್ಕಿಂತ ಮುಂಚೆ ಘಟಾದಿಕಾರ್ಯವು ಇದ್ದರೂ ಆವೃತವಾಗಿರುವದರಿಂದ[5] (ಅದು) ಕಾಣದೆ ಇರುತ್ತದೆ. 'ಹಾಳಾಯಿತು, ಹುಟ್ಟಿತು', 'ಇದೆ,

---

1. ಇದ್ದೇ ಇರುತ್ತದೆ. ಬೆಳಕು ಬಂದಾಗ ಕಾಣಿಸಿಕೊಳ್ಳುವ ವಸ್ತು ಆಗಲೆ ಬಂತೆಂದು ನಾವು ಕಲ್ಪಿಸುವದಿಲ್ಲ; ಕತ್ತಲೆಯಲ್ಲಿಯೂ ಅದು ಇತ್ತೆಂದೇ ನಿಶ್ಚಯಿಸುತ್ತೇವೆ.

2. ಕಾರ್ಯವಾದ ಜಗತ್ತು ಸೃಷ್ಟಿಕಾಲದಲ್ಲಿ ತೋರಿಬರುವದರಿಂದ ಕತ್ತಲೆಯಲ್ಲಿದ್ದ ಗಡಿಗೆಯಂತೆ ಪ್ರಲಯದಲ್ಲಿಯೂ ಇದ್ದೇತೀರಬೇಕು. ಏಕೆಂದರೆ ಇಲ್ಲದಿದ್ದದ್ದು ಹೇಗೂ ತೋರಿಕೊಳ್ಳಲಾರದು.

3. 'ಇಲ್ಲದಿದ್ದ ಗಡಿಗೆ'ಯ ದೃಷ್ಟಾಂತವು ನಿಮ್ಮ ಪಕ್ಷಕ್ಕೆ ಹೊಂದುವದಿಲ್ಲ. ಏಕೆಂದರೆ ನಿಮ್ಮ ಪಕ್ಷದಲ್ಲಿ ಕಾರ್ಯವಾದ ಗಡಿಗೆಯು ಹುಟ್ಟುವದಕ್ಕೆ ಮುಂಚೆಯೂ ಇದ್ದೇ ಇರುತ್ತದೆ. ಆದ್ದರಿಂದ ನಾವು ಇಲ್ಲವೆಂಬ ಗಡಿಗೆಯೂ ನಿಮ್ಮ ಪಕ್ಷದಲ್ಲಿ ಸೂರ್ಯನ ಬೆಳಕಿಗೆ ತೋರಿಕೊಳಬೇಕಾಗುವದು; ಏಕೆಂದರೆ ಆಗಲೂ ಅದು ಇದೆಯೆಂದೇ ನೀವು ಹೇಳುತ್ತೀರಿ-ಎಂದು ಆಕ್ಷೇಪ.

4. ಅಸಂನಿಹಿತೇ ಎಂದು ಆ॥ ಟೀಕೆಯಲ್ಲಿ ಪದಚ್ಛೇದಮಾಡಿರುವದು ಸರಿಯಲ್ಲ. ಏಕೆಂದರೆ ಪಿಂಡಾದಿಕಾರ್ಯಾಂತರವಾಗಲಿ ಕತ್ತಲೆಯೇ ಮುಂತಾದ ಆವರಣವಾಗಲಿ ಇಲ್ಲದಿದ್ದರೆ ಗಡಿಗೆಯು ತೋರುತ್ತದೆ ಎಂಬುದು ಸಿದ್ಧಾಂತಿಗೆ ಇಷ್ಟವಾಗಿರುತ್ತದೆಯಾದ್ದರಿಂದ ಇದು ಬೌದ್ಧನ ಆಕ್ಷೇಪವಾಗಲಾರದು.

5. ಮಣ್ಣಿನ ಮುದ್ದೆಯೇ ಮುಂತಾದ ಕಾರ್ಯಾಂತರರೂಪವಾದ ಆವರಣವು ಅದಕ್ಕೆ ಮುಸುಕಿರುವದರಿಂದ ಎಂದರ್ಥ.

ಇಲ್ಲ'-ಎಂಬ ಪ್ರತ್ಯಯಭೇದವೋ ಎಂದರೆ ತೋರುವದು, ಮರೆಯಾಗುವದು-ಇವು ಎರಡು ಬಗೆಯಾಗಿರುವದನ್ನಪೇಕ್ಷಿಸಿ (ಉಂಟಾಗುತ್ತದೆ).[1]

(ಭಾಷ್ಯ)

೨೦. ಪಿಣ್ಡಕಪಾಲಾದೇಃ ಆವರಣವೈಲಕ್ಷಣ್ಯಾತ್ ಅಯುಕ್ತಮ್ ಇತಿ ಚೇತ್ | ತಮಃಕುಡ್ಯಾದಿ ಹಿ ಘಟಾದ್ಯಾವರಣಂ ಘಟಾದಿಭಿನ್ನದೇಶಂ ದೃಷ್ಟಮ್ | ನ ತಥಾ ಘಟಾದಿಭಿನ್ನದೇಶೇ ದೃಷ್ಟೇ ಪಿಣ್ಡಕಪಾಲೇ | ತಸ್ಮಾತ್ ಪಿಣ್ಡಕಪಾಲ ಸಂಸ್ಥಾನಯೋಃ ವಿದ್ಯಮಾನಸ್ಯೈವ ಘಟಸ್ಯ ಆವೃತತ್ವಾತ್ ಅನುಪಲಬ್ಧಿಃ ಇತಿ ಅಯುಕ್ತಮ್ | ಆವರಣಧರ್ಮವೈಲಕ್ಷಣ್ಯಾತ್[2] ಇತಿ ಚೇತ್ | ನ | ಕ್ಷೀರೋದಕಾದೇಃ ಕ್ಷೀರಾದ್ಯಾವರಣೇನ ಏಕದೇಶತ್ವದರ್ಶನಾತ್ | ಘಟಾದಿಕಾರ್ಯೇ ಕಪಾಲ ಚೂರ್ಣಾದ್ಯವಯವಾನಾಮ್ ಅನ್ತರ್ಭಾವಾತ್ ಅನಾವರಣತ್ವಮ್ ಇತಿ ಚೇತ್ | ನ | ವಿಭಕ್ತಾನಾಂ ಕಾರ್ಯಾನ್ತರತ್ವಾತ್ ಆವರಣತ್ವೋಪಪತ್ತೇಃ ||

(ಭಾಷ್ಯಾರ್ಥ)

(ಬೌದ್ಧ):—ಮಣ್ಣುಮುದ್ದೆ, ಕಪಾಲ- ಮುಂತಾದವು ಆವರಣಕ್ಕಿಂತ ವಿಲಕ್ಷಣವಾಗಿರುವದರಿಂದ (ಇದು) ಸರಿಯಲ್ಲ. (ಇದರ ವಿವರ): ಕತ್ತಲೆ, ಗೋಡೆ-ಮುಂತಾದ ಘಟಾದ್ಯಾವರಣವು ಗಡಿಗೆ ಮುಂತಾದದ್ದಕ್ಕಿಂತ ಬೇರೆಯ ಕಡೆಯಲ್ಲಿರುವದು ಕಂಡುಬರುತ್ತದೆ. ಆದರೆ ಮಣ್ಣುಮುದ್ದೆಯಾಗಲಿ, ಗಡಿಗೆಯ ಹೋಳುಗಳಾಗಲಿ, ಗಡಿಗೆಗಿಂತ ಬೇರೆಯ ಕಡೆಯಲ್ಲಿರುವದು ಕಾಣುವದಿಲ್ಲ. ಆದ್ದರಿಂದ ಮಣ್ಣುಮುದ್ದೆ, ಗಡಿಗೆಯ ಹೋಳುಗಳು ಎಂಬ ಆಕಾರಗಳಲ್ಲಿ ಗಡಿಗೆಯು ಇದ್ದುಕೊಂಡೇ ಇದ್ದರೂ ಆವೃತವಾಗಿರುವದರಿಂದ ಕಾಣುವದಿಲ್ಲ ಎಂಬುದು ಸರಿಯಲ್ಲ.[3] ಏಕೆಂದರೆ (ಮಣ್ಣುಮುದ್ದೆ, ಗಡಿಗೆಯ ಹೋಳುಗಳು) ಆವರಣಕ್ಕಿಂತ ವಿಲಕ್ಷಣವಾದ ಸ್ವಭಾವದವಾಗಿರುತ್ತವೆ.

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಹಾಲಿನ ನೀರೇ ಮುಂತಾದದ್ದು ಹಾಲೇ ಮುಂತಾದ ಆವರಣವಿರುವ ಕಡೆಯಲ್ಲಿಯೇ (ಇರುವದು) ಕಂಡುಬರುತ್ತದೆ.

---

1. ಮಣ್ಣಿನಮುದ್ದೆಯೇ ಮುಂತಾದ ಆವರಣವೆಲ್ಲವೂ ಹೋದರೆ 'ಹುಟ್ಟಿತು' ಎನ್ನುವೆವು; ಗಡಿಗೆಯ ಚೂರುಗಳೇ ಮುಂತಾದ ಕಾರ್ಯಾಂತರವು ತೋರಿಕೊಂಡರೆ ಗಡಿಗೆಯು 'ನಷ್ಟವಾಯಿತು' ಎನ್ನುವೆವು. ಪ್ರಕಾರಾದಿಗಳಿಂದ ತೋರಿದರೆ 'ಇದೆ' ಎನ್ನುವೆವು, ಕತ್ತಲೆ ಮುಂತಾದ ಆವರಣಗಳಿಂದ ತೋರದೆ ಇದ್ದರೆ 'ಇಲ್ಲ' ಎನ್ನುವೆವು.

2. ಇದನ್ನು 'ಆವರಣವೈಲಕ್ಷಣ್ಯಧರ್ಮತ್ವಾತ್' ಎಂದಿದ್ದರೆ ಹೇಗೋ ಹಾಗೆ ಕನ್ನಡಿಸಿದೆ.

3. ಮಣ್ಣುಮುದ್ದೆ ಮುಂತಾದವು ಆವರಣವೆಂದು ಒಪ್ಪಿದಮೇಲಲ್ಲವೆ, ಅಭಿವ್ಯಕ್ತಿಲಿಂಗದಿಂದ ಕಾರ್ಯಸತ್ತ್ವವನ್ನು ಅನುಮಾನಿಸುವದು ? ಅದೇ ಸರಿಯಲ್ಲ-ಎಂದು ಆಕ್ಷೇಪ.

(ಬೌದ್ಧ):—ಗಡಿಗೆಯೇ ಮುಂತಾದ ಕಾರ್ಯದಲ್ಲಿ ಗಡಿಗೆಯ ಹೋಳುಗಳು, ಮಣ್ಣಿನ ಹುಡಿ-ಮುಂತಾದವುಗಳ ಅವಯವಗಳೂ ಸೇರಿಕೊಂಡೇ ಇರುವದರಿಂದ (ಅವು) ಆವರಣವಲ್ಲ.[1]

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ವಿಂಗಡವಾದ ಬಳಿಕ (ಅವು) ಕಾರ್ಯಾಂತರವಾಗುವದರಿಂದ (ಅವೂ) ಆವರಣವಾಗಬಹುದಾಗಿದೆ.[2]

(ಭಾಷ್ಯ)

೨೧. ಆವರಣಾಭಾವೇ ಏವ ಯತ್ನಃ ಕರ್ತವ್ಯಃ ಇತಿ ಚೇತ್ | ಪಿಣ್ಡಕಪಾಲಾವಸ್ಥಯೋಃ ವಿದ್ಯಮಾನಮೇವ ಘಟಾದಿಕಾರ್ಯಮ್ ಆವೃತತ್ವಾತ್ ನೋಪಲಭ್ಯತೇ ಇತಿ ಚೇತ್ ಘಟಾದಿಕಾರ್ಯಾರ್ಥಿನಾ ತದಾವರಣವಿನಾಶೇ ಏವ ಯತ್ನಃ ಕರ್ತವ್ಯಃ, ನ ಘಟಾದ್ಯುತ್ಪತ್ತೌ | ನ ಚೈತದಸ್ತಿ | ತಸ್ಮಾತ್ ಅಯುಕ್ತಂ ವಿದ್ಯಮಾನಸ್ಯೈವ ಆವೃತತ್ವಾತ್ ಅನುಪಲಬ್ಧಿರಿತಿ (ಇತಿ)[3] ಚೇತ್ | ನ | ಅನಿಯಮಾತ್ | ನ ಹಿ ವಿನಾಶಮಾತ್ರಪ್ರಯತ್ನಾದೇವ ಘಟಾದ್ಯಭಿವ್ಯಕ್ತಿ ರ್ನಿಯತಾ | ತಮಆದ್ಯಾವೃತೇ ಘಟಾದೌ ಪ್ರದೀಪಾದ್ಯುತ್ಪತ್ತೌ ಪ್ರಯತ್ನದರ್ಶನಾತ್ | ಸೋಽಪಿ ತಮೋನಾಶಾಯೈವ ಇತಿ ಚೇತ್ | ದೀಪಾದ್ಯುತ್ಪತ್ತಾವಪಿ ಯಃ ಪ್ರಯತ್ನಃ ಸೋಽಪಿ ತಮಸ್ತಿರಸ್ಕರಣಾಯ | ತಸ್ಮಿನ್ ನಷ್ಟೇ ಘಟಃ ಸ್ವಯಮೇವ ಉಪಲಭ್ಯತೇ | ನ ಹಿ ಘಟೇ ಕಿಂಚಿತ್ ಆಧೀಯತೇ ಇತಿ ಚೇತ್ | ನ | ಪ್ರಕಾಶವತೋ ಘಟಸ್ಯ ಉಪಲಭ್ಯಮಾನತ್ವಾತ್ | ಯಥಾ ಪ್ರಕಾಶವಿಶಿಷ್ಟೋ ಘಟಃ ಉಪಲಭ್ಯತೇ ಪ್ರದೀಪಕರಣೇ ನ ತಥಾ ಪ್ರಾಕ್ ಪ್ರದೀಪಕರಣಾತ್ | ತಸ್ಮಾತ್ ನ ತಮಸ್ತಿರಸ್ಕಾರಾಯೈವ ಪ್ರದೀಪಕರಣಮ್, ಕಿಂ ತರ್ಹಿ ಪ್ರಕಾಶವತ್ತ್ವಾಯ | ಪ್ರಕಾಶವತ್ತ್ವೇನೈವ ಉಪಲಭ್ಯಮಾನತ್ವಾತ್ | ಕ್ವಚಿತ್ ಆವರಣವಿನಾಶೇಽಪಿ ಯತ್ನಃ ಸ್ಯಾತ್ | ಯಥಾ ಕುಡ್ಯಾದಿವಿನಾಶೇ | ತಸ್ಮಾತ್ ನ ನಿಯಮೋಽಸ್ತಿ ಅಭಿವ್ಯಕ್ತ್ಯರ್ಥಿನಾ ಆವರಣವಿನಾಶೇ ಏವ ಯತ್ನಃ ಕಾರ್ಯಃ ಇತಿ | ನಿಯಮಾರ್ಥವತ್ತ್ವಾಚ್ಚ | ಕಾರಣೇ ವರ್ತಮಾನಂ ಕಾರ್ಯಂ ಕಾರ್ಯಾನ್ತರಾಣಾಮ್ ಆವರಣಮ್ ಇತಿ ಅವೋಚಾಮ | ತತ್ರ ಯದಿ ಪೂರ್ವಾಭಿವ್ಯಕ್ತಸ್ಯ ಕಾರ್ಯಸ್ಯ ಪಿಣ್ಡಸ್ಯ ವ್ಯವಹಿತಸ್ಯ ವಾ ಕಪಾಲಸ್ಯ ವಿನಾಶೇ ಏವ ಯತ್ನಃ ಕ್ರಿಯೇತ ತದಾ ವಿದಲಚೂರ್ಣಾದ್ಯಪಿ

---

1. ಆವರಣವಿರುವಾಗಲೇ ಕಾರ್ಯವು ಕಾಣಿಸಲಾರದಷ್ಟೆ ?-ಎಂದು ಅಭಿಪ್ರಾಯ.

2. ಘಟಾವಸ್ಥೆಯಲ್ಲಿರುವ ಮಣ್ಣಿನಲ್ಲಿರುವ ಕಪಾಲಾದಿಗಳು ಆವರಣವಲ್ಲವೆಂಬುದನ್ನು ಒಪ್ಪಿಯೇ ಇದ್ದೇವೆ. ಘಟವು ಅವ್ಯಕ್ತವಾಗಿರುವಾಗಿನ ಮಣ್ಣಿನಲ್ಲಿ ತೋರುವ ಕಪಾಲಾದಿಗಳು ಆವರಣವಾಗಿಯೇ ಇರುತ್ತವೆ.

3. ಇಲ್ಲೊಂದು 'ಇತಿ' ಬೇಕು.

ಕಾರ್ಯಂ ಜಾಯೇತ। ತೇನಾಪಿ ಆವೃತೋ ಘಟೋ ನೋಪಲಭ್ಯತೇ ಇತಿ ಪುನಃ ಪ್ರಯತ್ನಾನ್ತರಾಪೇಕ್ಷೈವ। ತಸ್ಮಾತ್ ಘಟಾದ್ಯಭಿವ್ಯಕ್ತ್ಯರ್ಥಿನಃ ನಿಯತ ಏವ ಕಾರಕವ್ಯಾಪಾರೋಽರ್ಥವಾನ್। ತಸ್ಮಾತ್ ಪ್ರಾಗುತ್ಪತ್ತೇರಪಿ ಸದೇವ ಕಾರ್ಯಮ್ ||

(ಭಾಷ್ಯಾರ್ಥ)

(ಬೌದ್ಧ):—ಆವರಣವನ್ನು ಇಲ್ಲವಾಗಿಸುವದಕ್ಕೇ ಪ್ರಯತ್ನವನ್ನು ಮಾಡಬೇಕಾಯಿತಲ್ಲ! (ಇದರ ವಿವರ): ಮಣ್ಣುಮುದ್ದೆ, ಗಡಿಗೆಯ ಹೋಳುಗಳು—ಮುಂತಾದ ಅವಸ್ಥೆಗಳಲ್ಲಿ ಇದ್ದುಕೊಂಡೇ ಇದ್ದು ಗಡಿಗೆಯೇ ಮುಂತಾದ ಕಾರ್ಯವು ಆವೃತವಾಗಿರುವದರಿಂದ ಕಾಣಬರುವದಿಲ್ಲವೆಂದಾದರೆ ಗಡಿಗೆಯೇ ಮುಂತಾದ ಕಾರ್ಯವನ್ನು ಬಯಸುವಾತನು ಅದರ ಆವರಣವನ್ನು ನಾಶಪಡಿಸುವದಕ್ಕೇ ಪ್ರಯತ್ನವನ್ನು ಮಾಡಬೇಕೇ ಹೊರತು ಗಡಿಗೆಯೇ ಮುಂತಾದವುಗಳನ್ನು ಉಂಟುಮಾಡುವದಕ್ಕೆ (ಪ್ರಯತ್ನಿಸ)ಬಾರದು. ಆದರೆ ಹಾಗಿಲ್ಲ.[1] ಆದ್ದರಿಂದ ಇದ್ದುಕೊಂಡಿರುವ (ಗಡಿಗೆಯೇ ಮುಂತಾದದ್ದೇ) ಆವೃತವಾಗಿರುವದರಿಂದ ಕಂಡುಬರುವದಿಲ್ಲ ಎಂಬುದು ಸರಿಯಲ್ಲ.

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ (ಹಾಗೇನೂ) ನಿಯಮವಿಲ್ಲ. (ಇದರ ವಿವರ): ಆವರಣದ ವಿನಾಶಮಾತ್ರಕ್ಕಾಗಿ (ಮಾಡುವ) ಪ್ರಯತ್ನದಿಂದಲೇ ಗಡಿಗೆಯೇ ಮುಂತಾದದ್ದು ತೋರಿಕೊಳ್ಳುವದೆಂಬ ನಿಯಮವೇನೂ ಇರುವದಿಲ್ಲ. ಏಕೆಂದರೆ, ಗಡಿಗೆಯೇ ಮುಂತಾದದ್ದು ಕತ್ತಲೆಯೇ ಮುಂತಾದದ್ದರಿಂದ ಆವೃತವಾಗಿದ್ದರೆ ದೀಪವೇ ಮುಂತಾದವುಗಳನ್ನು ಉಂಟುಮಾಡುವದಕ್ಕೆ ಪ್ರಯತ್ನ ಮಾಡುವದೂ ಕಂಡುಬರುತ್ತದೆ.

(ಬೌದ್ಧ):—ಅದೂ ಕತ್ತಲೆಯನ್ನು ನಾಶಪಡಿಸುವದಕ್ಕೇ. (ಇದರ ವಿವರ). ದೀಪಾದಿಗಳನ್ನುಂಟುಮಾಡುವದಕ್ಕೆ ಯಾವ ಪ್ರಯತ್ನವನ್ನು ಮಾಡುವರೋ ಅದೂ ಕತ್ತಲೆ (ಎಂಬ ಆವರಣವನ್ನು) ಹೋಗಲಾಡಿಸುವದಕ್ಕೇ. ಅದು ನಷ್ಟವಾದರೆ ಗಡಿಗೆಯು ತಾನೇ ಕಾಣಿಸಿಕೊಳ್ಳುತ್ತದೆ. (ಇಷ್ಟೇ ಹೊರತು) ಗಡಿಗೆಯಲ್ಲಿ (ಹೊಸದಾಗಿ) ಯಾವ (ಧರ್ಮವನ್ನೂ) ಉಂಟುಮಾಡುವದಿಲ್ಲ.

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಬೆಳಕಿನಿಂದ ಕೂಡಿದ ಗಡಿಗೆಯು ಕಾಣಿಸುತ್ತದೆ. (ಇದರ ವಿವರ): ದೀಪವನ್ನುಂಟುಮಾಡಲಾಗಿ ಬೆಳಕಿನಿಂದೊಡಗೂಡಿದ ಗಡಿಗೆಯು ಹೇಗೆ ಕಾಣಿಸಿಕೊಳ್ಳುವದೋ ದೀಪವನ್ನುಂಟುಮಾಡುವ

---

1. ಮೊದಲಿಲ್ಲದಿದ್ದ ಗಡಿಗೆಯು ಹೊಸದಾಗಿ ಹುಟ್ಟುವದು ಎಂಬುದಕ್ಕೆ ಇಲ್ಲಿ ದೃಷ್ಟಾರ್ಥಾಪತ್ತಿಯನ್ನು ಉದಾಹರಿಸಿದೆ.

ಮುಂಚೆ ಹಾಗಲ್ಲ. ಆದ್ದರಿಂದ ಬರಿಯ ಕತ್ತಲೆಯನ್ನು ಕಳೆಯುವದಕ್ಕೇ ಅಲ್ಲ, ದೀಪವನ್ನುಂಟುಮಾಡುವದು; ಮತ್ತೇನೆಂದರೆ ಬೆಳಕಿನಿಂದ (ಅದು) ಕೂಡಲೆಂದು[1]. ಏಕೆಂದರೆ ಅದು ಬೆಳಕಿನಿಂದ ಕೂಡಿದ್ದೆಂದೇ (ನಮಗೆ) ತಿಳಿಯಬರುತ್ತದೆ. ಕೆಲವು ಕಡೆಗಳಲ್ಲಿ ಆವರಣನಾಶಕ್ಕೂ ಯತ್ನವನ್ನು (ಮಾಡ)ಬೇಕಾಗುವದು. ಉದಾಹರಣೆಗೆ ಗೋಡೆ ಮುಂತಾದ ಮರೆಯನ್ನು ನಾಶಪಡಿಸುವದಕ್ಕೂ ಪ್ರಯತ್ನಮಾಡಬಹುದು. ಆದ್ದರಿಂದ (ಕಾರ್ಯದ) ಅಭಿವ್ಯಕ್ತಿಯನ್ನು ಬಯಸುವವನು ಆವರಣವನ್ನು ವಿನಾಶಗೊಳಿಸುವದಕ್ಕೇ ಪ್ರಯತ್ನವನ್ನು ಮಾಡಬೇಕು ಎಂಬ ನಿಯಮವೇನೂ ಇಲ್ಲ.

ನಿಯಮಾರ್ಥವತ್ತ್ವಕ್ಕಾಗಿಯೂ (ಕಾರ್ಯದ ಉತ್ಪತ್ತಿಗಾಗಿ ಪ್ರಯತ್ನವನ್ನು ಮಾಡತಕ್ಕದ್ದು ಅವಶ್ಯವು. ಹೇಗೆಂದರೆ): ಕಾರಣದಲ್ಲಿರುವ ಕಾರ್ಯವು ಉಳಿದ ಕಾರ್ಯಗಳಿಗೆ ಆವರಣವು ಎಂದು (ಆಗಲೆ) ಹೇಳಿರುತ್ತೇವೆ. ಅಲ್ಲಿ ಮೊದಲು ತೋರಿಕೊಂಡಿರುವ ಮಣ್ಣುಮುದ್ದೆಯನ್ನಾಗಲಿ, ಅಥವಾ ದೂರವಾಗಿರುವ ಗಡಿಗೆಹೋಳುಗಳನ್ನಾಗಲಿ ನಾಶಪಡಿಸುವದಕ್ಕೇ ಯತ್ನವನ್ನುಮಾಡುವದಾದರೆ, ಆಗ ಹಂಚಿಯಪಿಲಿಕೆಗಳಾಗಲಿ (ಮಣ್ಣಿನ) ಹುಡಿಯೇ ಮುಂತಾದದ್ದಾಗಲಿ ಉಂಟಾಗಬಹುದು. ಅದರಿಂದಲೂ ಆವೃತವಾಗಿರುವದರಿಂದ ಗಡಿಗೆಯು ಕಾಣಬರುವದಿಲ್ಲವಾಗಿ ಮತ್ತು ಇನ್ನೊಂದು ಪ್ರಯತ್ನದ ಅಪೇಕ್ಷೆಯೇ (ಆದೀತು)[2]. ಆದ್ದರಿಂದ ಗಡಿಗೆಯೇ ಮುಂತಾದದ್ದು ತೋರಿಕೊಳ್ಳಬೇಕೆಂದು ಬಯಸುವವನು ಗೊತ್ತಾಗಿರುವ (ಅಭಿವ್ಯಕ್ತಿಗಾಗಿಯೇ) ಕಾರಕವ್ಯಾಪಾರವನ್ನು ಮಾಡುವದೇ ಸಾರ್ಥಕವಾಗಿರುತ್ತದೆ. ಆದ್ದರಿಂದ ಹುಟ್ಟುವ ಮುಂಚೆಯೂ ಕಾರ್ಯವು ಇದ್ದೇ ಇರುವದು (ಎಂದು ಸಿದ್ಧವಾಯಿತು).

(ಭಾಷ್ಯ)

೨೨. ಅತೀತಾನಾಗತಪ್ರತ್ಯಯಭೇದಾಚ್ಚ । ಅತೀತೋ ಘಟಃ, ಅನಾಗತೋ ಘಟಃ ಇತ್ಯೇತಯೋಶ್ಚ ಪ್ರತ್ಯಯಯೋಃ ವರ್ತಮಾನಘಟಪ್ರತ್ಯಯವತ್ ನ ನಿರ್ವಿಷಯತ್ವಂ ಯುಕ್ತಮ್ । ಅನಾಗತಾರ್ಥಿಪ್ರವೃತ್ತೇಶ್ಚ । ನ ಹಿ ಅಸತಿ

---

1. ಬೆಳಕಿಲ್ಲದ ಗಡಿಗೆಯು ಕಾಣಬರುವದಿಲ್ಲವಾದ್ದರಿಂದ ಬೆಳಕೂ ಪ್ರತ್ಯಕ್ಷಕ್ಕೆ ಅವಶ್ಯ. ಘಟಜ್ಞಾನವು ಘಟದಲ್ಲಿ ಜ್ಞಾತತ್ವವೆಂಬ ಧರ್ಮವನ್ನು ಉಂಟುಮಾಡುವದಿಲ್ಲ ಎಂಬ ಮಾಂ.ಭಾ. (ಭಾ.ಭಾ. ೩೯)ಕ್ಕೆ ಇದು ವಿರುದ್ಧವಲ್ಲವೆಂಬುದನ್ನು ಲಕ್ಷಿಸಬೇಕು.

2. ಏಕೆಂದರೆ ಆವರಣವಿದ್ದರೆ ಕಾರ್ಯವು ಕಾಣುವದಿಲ್ಲ; ಒಂದು ಕಾರ್ಯಕ್ಕೆ ಮತ್ತೊಂದು ಕಾರ್ಯವು ಆವರಣವಾಗಬಹುದು. ಆದ್ದರಿಂದ ಬರಿಯ ಕಾರ್ಯನಾಶಕ್ಕೆ ಪ್ರಯತ್ನಿಸಿದರೆ ಅನಿಷ್ಟವಾದ ಕಾರ್ಯಾಂತರವು ತೋರಿಕೊಳ್ಳಬಹುದು, ಇಷ್ಟವಾದದ್ದು ತೋರಿಕೊಳ್ಳದೆ ಹೋಗಬಹುದು.

ಅರ್ಥಿತಯಾ ಪ್ರವೃತ್ತಿಃ ಲೋಕೇ ದೃಷ್ಟಾ। ಯೋಗಿನಾಂ ಚ ಅತೀತಾನಾಗತ ಜ್ಞಾನಸ್ಯ ಸತ್ಯತ್ವಾತ್। ಅಸಂಶ್ಚೇತ್ ಭವಿಷ್ಯದ್ಘಟಃ ಐಶ್ವರಂ ಭವಿಷ್ಯದ್ಘಟ ವಿಷಯಂ ಪ್ರತ್ಯಕ್ಷಜ್ಞಾನಂ ಮಿಥ್ಯಾ ಸ್ಯಾತ್। ನ ಚ ಪ್ರತ್ಯಕ್ಷಮ್ ಉಪಚರ್ಯತೇ। ಘಟಸದ್ಭಾವೇ ಹಿ ಅನುಮಾನಮ್ ಅವೋಚಾಮ। ವಿಪ್ರತಿಷೇಧಾಚ್ಚ। ಯದಿ ಘಟೋ ಭವಿಷ್ಯತಿ ಇತಿ ಕುಲಾಲಾದಿಷು ವ್ಯಾಪ್ರಿಯಮಾಣೇಷು ಘಟಾರ್ಥಂ ಪ್ರಮಾಣೇನ ನಿಶ್ಚಿತಮ್, ಯೇನ ಚ ಕಾಲೇನ ಘಟಸ್ಯ ಸಂಬನ್ಧೋ ಭವಿಷ್ಯತಿ ಇತ್ಯುಚ್ಯತೇ ತಸ್ಮಿನ್ನೇವ ಕಾಲೇ ಘಟಃ ಅಸನ್ ಇತಿ ವಿಪ್ರತಿಷಿದ್ಧಮ್ ಅಭಿಧೀಯತೇ ಭವಿಷ್ಯನ್ ಘಟಃ ಅಸನ್ ಇತಿ ನ ಭವಿಷ್ಯತಿ ಇತ್ಯರ್ಥಃ। ಅಯಂ ಘಟಃ ನ ವರ್ತತೇ ಇತಿ ಯದ್ವತ್। ಅಥ ಪ್ರಾಗುತ್ಪತ್ತೇಃ ಘಟೋಽಸನ್ ಇತಿ ಉಚ್ಯತೇ, ಘಟಾರ್ಥಂ ಪ್ರವೃತ್ತೇಷು ಕುಲಾಲಾದಿಷು ತತ್ರ ಯಥಾ ವ್ಯಾಪಾರ ರೂಪೇಣ ವರ್ತಮಾನಾಃ ತಾವತ್ ಕುಲಾಲಾದಯಃ ತಥಾ ಘಟೋ ನ ವರ್ತತೇ ಇತಿ ಅಸಚ್ಛಬ್ದಸ್ಯ ಅರ್ಥಶ್ಚೇತ್ ನ ವಿರುಧ್ಯತೇ। ಕಸ್ಮಾತ್? ಸ್ವೇನ ಹಿ ಭವಿಷ್ಯದ್ರೂಪೇಣ ಘಟೋ ವರ್ತತೇ। ನ ಹಿ ಪಿಣ್ಡಸ್ಯ ವರ್ತಮಾನತಾ ಕಪಾಲಸ್ಯ ವಾ ಘಟಸ್ಯ ಭವತಿ। ನ ಚ ತಯೋರ್ಭವಿಷ್ಯತ್ತಾ ಘಟಸ್ಯ। ತಸ್ಮಾತ್ ಕುಲಾಲಾದಿವ್ಯಾಪಾರ ವರ್ತಮಾನತಾಯಾಂ ಪ್ರಾಗುತ್ಪತ್ತೇಃ ಘಟೋಽಸನ್ ಇತಿ ನ ವಿರುಧ್ಯತೇ। ಯದಿ ಘಟಸ್ಯ ಯತ್ ಸ್ವಂ ಭವಿಷ್ಯತ್ಕಾರ್ಯರೂಪಂ[1] ತತ್ ಪ್ರತಿಷಿಧ್ಯೇತ ತತ್ಪ್ರತಿಷೇಧೇ ವಿರೋಧಃ ಸ್ಯಾತ್। ನ ತು ತದ್ ಭವಾನ್ ಪ್ರತಿಷೇಧತಿ। ನ ಚ ಸರ್ವೇಷಾಂ ಕ್ರಿಯಾವತಾಮ್ ಏಕೈವ ವರ್ತಮಾನತಾ ಭವಿಷ್ಯತ್ತ್ವಂ ವಾ ||

(ಭಾಷ್ಯಾರ್ಥ)

ಅತೀತ, ಅನಾಗತ–ಎಂಬ ಪ್ರತ್ಯಯಗಳು ಬೇರೆಬೇರೆಯಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು). ಇದ್ದ ಗಡಿಗೆ, ಆಗಲಿರುವ (ಮುಂದೆ ಆಗುವ) ಗಡಿಗೆ ಎಂಬ ಪ್ರತ್ಯಯಗಳಿಗೆ (ಈಗ) ಇರುವ ಗಡಿಗೆ ಎಂಬ ಪ್ರತ್ಯಯಕ್ಕೆ ಇರುವಂತೆ (ವಿಷಯವಿರಬೇಕೇ ಹೊರತು) ವಿಷಯವಿಲ್ಲ ಎಂಬುದು ಯುಕ್ತವಲ್ಲ. (ಇನ್ನೂ) ಆಗಲಿರುವ (ವಸ್ತುವಿನಲ್ಲಿ) ಅಪೇಕ್ಷೆಯುಳ್ಳವರು (ಅದರ ಪ್ರಾಪ್ತಿ)ಗಾಗಿ ತೊಡಗುವದರಿಂದಲೂ (ಹೀಗೆಂದು ತಿಳಿಯಬೇಕು); ಏಕೆಂದರೆ ಅಸತ್ಪದಾರ್ಥವನ್ನು ಬಯಸಿ (ಅದರ ಪ್ರಾಪ್ತಿಗಾಗಿ) ತೊಡಗುವದು ಲೋಕದಲ್ಲಿ ಕಂಡುಬಂದಿರುವದಿಲ್ಲ. **ಯೋಗಿಗಳಿಗೆ ಭೂತಭವಿಷ್ಯ(ದ್ವಸ್ತುಗಳ) ಜ್ಞಾನವು ಸತ್ಯವಾಗಿರುವದರಿಂದಲೂ (ಹೀಗೆ)[2]. ಭವಿಷ್ಯದ್ಘಟವು ಅಸತ್ತಾಗಿದ್ದರೆ ಭವಿಷ್ಯದ್ಘಟ ವಿಷಯವಾದ ಈಶ್ವರನ ಪ್ರತ್ಯಕ್ಷಜ್ಞಾನವು ಮಿಥ್ಯಾ(ಜ್ಞಾನ)ವಾಗಬೇಕಾಗು**

1. 'ಭವಿಷ್ಯತ್ತಾಕಾರ್ಯರೂಪಂ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.
2. ಯೋಗಿಪ್ರತ್ಯಕ್ಷವು ತ್ರೈಕಾಲಿಕವಸ್ತುಗಳ ವಿಷಯವಾದದ್ದು ಎಂದು ನಂಬಿಕೆ.

**ವದು.**[1] (ಇವೆರಡೂ) ಪ್ರತ್ಯಕ್ಷವೆಂಬುದು ಔಪಚಾರಿಕವೂ ಅಲ್ಲ.[2] ಏಕೆಂದರೆ ಘಟವು ಇರುತ್ತದೆ ಎಂಬುದಕ್ಕೆ ಅನುಮಾನವನ್ನು ಹೇಳಿರುತ್ತೇವೆ[3].

(ಘಟವು ಇಲ್ಲವೆಂಬುದು) ವಿರುದ್ಧವೂ ಆಗಿರುತ್ತದೆ. ಗಡಿಗೆಗಾಗಿ ಕುಂಬಾರನೇ ಮುಂತಾದವರು (ಕಾರ್ಯದಲ್ಲಿ) ತೊಡಗಿರುವಾಗ (ಮುಂದೆ) ಗಡಿಗೆಯಾಗುವದೆಂದು ಪ್ರಮಾಣದಿಂದ ನಿಶ್ಚಿತವಾದರೆ, ಯಾವ ಕಾಲಕ್ಕೆ ಗಡಿಗೆಯ ಸಂಬಂಧವು ಆಗುವದೆಂದು ಹೇಳುವೆವೋ, ಅದೇ ಕಾಲದಲ್ಲಿ ಇಲ್ಲವೆಂದು ಹೇಳುವದು ವಿರುದ್ಧವಾಗುತ್ತದೆ[4]. ಆಗುವ ಗಡಿಗೆಯು ಅಸತ್ತು ಎಂದರೆ ಆಗುವದಿಲ್ಲ ಎಂದರ್ಥ. ಈ ಗಡಿಗೆಯು ಇರುವದಿಲ್ಲ ಎಂಬುದು ಹೇಗೆ (ವಿರುದ್ಧವೋ ಹಾಗೆಯೇ ಇದು). ಇನ್ನು ಹುಟ್ಟುವದಕ್ಕೆ ಮುಂಚೆ ಗಡಿಗೆಯು ಇರುವದಿಲ್ಲವಲ್ಲ ಎನ್ನುವದಾದರೆ– ಕುಂಬಾರನೇ ಮೊದಲಾದವರು ಗಡಿಗೆಗಾಗಿ (ಕಾರ್ಯದಲ್ಲಿ) ತೊಡಗಿರುವಲ್ಲಿ ಆಗ ಹೇಗೆ ಕುಂಬಾರನೇ ಮೊದಲಾದವರು[5] ವ್ಯಾಪಾರರೂಪದಿಂದ ಅಲ್ಲಿಯುವರೆಗೂ ಇರುವರೋ ಹಾಗೆ ಗಡಿಗೆಯು ಇರುವದಿಲ್ಲ ಎಂಬುದು ಅಸತ್‌ಶಬ್ದದ ಅರ್ಥ ಎನ್ನುವದಾದರೆ– (ಆಗ) ವಿರೋಧವಾಗುವದಿಲ್ಲ. ಏಕೆ? ಎಂದರೆ (ಆಗ) ಗಡಿಗೆಯು ತನ್ನ ಭವಿಷ್ಯದ್ರೂಪದಿಂದ ಇರುತ್ತದೆ. ಮಣ್ಣುಮುದ್ದೆಯ ವರ್ತಮಾನತ್ವವು ಅಥವಾ ಗಡಿಗೆಯ ಹೋಳಿನ (ವರ್ತಮಾನತ್ವವು) ಗಡಿಗೆಗೆ ಸೇರಿದ್ದಲ್ಲ; (ಹಾಗೆಯೇ) ಗಡಿಗೆಯ ಭವಿಷ್ಯತ್ತ್ವವು ಅವುಗಳಿಗೂ ಸೇರಿದ್ದಲ್ಲ[6]. ಆದ್ದರಿಂದ ಕುಂಬಾರನೇ ಮೊದಲಾದವರ ವ್ಯಾಪಾರವು ಇರುವಾಗ ಹುಟ್ಟುವದಕ್ಕೆ

---

1. ಈಶ್ವರನಿಗೆ ಸತ್ಯವಸ್ತುವಿಷಯಕವಾದ ಪ್ರತ್ಯಕ್ಷಜ್ಞಾನವು ನಿತ್ಯವಾಗಿರುತ್ತದೆ ಎಂದು ಎಲ್ಲಾ ಈಶ್ವರವಾದಿಗಳೂ ಒಪ್ಪಿರುತ್ತಾರೆ.

2. ಮಿಥ್ಯಾಜ್ಞಾನವೂ ಅಲ್ಲ, ಔಪಚಾರಿಕವೂ ಅಲ್ಲ; ಸತ್ಯಜ್ಞಾನವೇ.

3. ಅಭಿವ್ಯಕ್ತಿಲಿಂಗಾನುಮಾನವನ್ನೂ ಅನಾಗತಘಟಾದಿಪ್ರಾಪ್ತಿಗಾಗಿ ತೊಡಗುವದೆಂಬ ಅನುಮಾನವನ್ನೂ ಹೇಳಿರುತ್ತೇವೆ. ಆದ್ದರಿಂದ ಅವರ ವಿಷಯದ ಯೋಗಿಪ್ರತ್ಯಕ್ಷವಾಗಲಿ ಈಶ್ವರಪ್ರತ್ಯಕ್ಷವಾಗಲಿ ಔಪಚಾರಿಕವಾಗಲಾರದು.

4. ನಾಲ್ಕು ಘಂಟೆಯ ಹೊತ್ತಿಗೆ ಗಡಿಗೆಯು ಸಿದ್ಧವಾಗುವದು ಎಂದು ಕುಲಾಲಾದಿಗಳು ವ್ಯಾಪೃತರಾಗಿದ್ದು ಅದನ್ನು ಪಡೆಯುತ್ತಾರೆ; ಹೀಗಿರುವಲ್ಲಿ ನಾಲ್ಕು ಗಂಟೆಯ ಹೊತ್ತಿಗೆ ಗಡಿಗೆಯಾಗುವದಿಲ್ಲ ಎಂಬುದು ಸರಿಯಲ್ಲ, ಆದ್ದರಿಂದ ಅನಾಗತಘಟವು ಇದೆ.

5. ಕುಂಬಾರ, ಕೋಲು, ತಿಗುರಿ–ಮುಂತಾದವು ಗಡಿಗೆಯು ತೋರಿಕೊಳ್ಳುವವರೆಗೂ ವ್ಯಾಪಾರದಲ್ಲಿ ತೊಡಗಿರುತ್ತವೆಂಬುದು ಕಾಣಬರುತ್ತದೆ; ಹಾಗೆ ಗಡಿಗೆಯು ಕಾಣುವದಿಲ್ಲ.

6. ಗಡಿಗೆಯು ಭವಿಷ್ಯದ್ರೂಪದಿಂದಲೇ ಇರುತ್ತದೆ; ಅದು ಅಭಿವ್ಯಕ್ತವಾಗುವವರೆಗೆ ಮಣ್ಣುಮುದ್ದೆ, ಅಥವಾ ಹೋಳು ವರ್ತಮಾನರೂಪದಿಂದಲೇ ಇರುತ್ತದೆ.

ಮುಂಚೆ ಗಡಿಗೆಯು ಇರುವದಿಲ್ಲ ಎಂಬುದು ವಿರುದ್ಧವಲ್ಲ. ಘಟಕ್ಕೆ ಸೇರಿರುವ ಭವಿಷ್ಯತ್ಕಾರ್ಯರೂಪವಿದೆಯಲ್ಲ, ಅದನ್ನು ಇಲ್ಲವೆಂದರೊ ?'[1]-ಎಂದರೆ, ಅದನ್ನು ಇಲ್ಲವೆಂದರೆ ವಿರೋಧವಾದೀತು. ಆದರೆ ಅದನ್ನು ನೀನು ಇಲ್ಲವೆನ್ನುವದಿಲ್ಲ. ಕ್ರಿಯೆಯಿಂದಾಗುವ ಎಲ್ಲಾ ಪದಾರ್ಥಗಳಿಗೂ ಒಂದೇ ವರ್ತಮಾನತ್ವವಾಗಲಿ ಭವಿಷ್ಯತ್ತ್ವವಾಗಲಿ ಇರುವದೂ ಇಲ್ಲ[2].

(ಭಾಷ್ಯ)

೨೩. ಅಪಿ ಚ ಚತುರ್ವಿಧಾನಾಮ್ ಅಭಾವಾನಾಂ ಘಟಸ್ಯ ಇತರೇತರಾಭಾವೋ ಘಟಾತ್ ಅನ್ಯೋ ದೃಷ್ಟಃ| ಯಥಾ ಘಟಾಭಾವಃ ಪಟಾದಿರೇವ ನ ಘಟಸ್ವರೂಪಮೇವ| ನ ಚ ಘಟಾಭಾವಃ ಸನ್ ಪಟಃ ಅಭಾವಾತ್ಮಕಃ ಕಿಂ ತರ್ಹಿ ಭಾವರೂಪಮೇವ| ಏವಂ ಘಟಸ್ಯ ಪ್ರಾಕ್ಪ್ರಧ್ವಂಸಾತ್ಯನ್ತಾಭಾವಾನಾಮಪಿ ಘಟಾತ್ ಅನ್ಯತ್ವಂ ಸ್ಯಾತ್| ಘಟೇನ ವ್ಯಪದಿಶ್ಯಮಾನತ್ವಾತ್, ಘಟಸ್ಯ ಇತರೇತರಾಭಾವವತ್| ತಥೈವ ಭಾವಾತ್ಮಕತಾ ಅಭಾವಾನಾಮ್| ಏವಂ ಚ ಸತಿ ಘಟಸ್ಯ ಪ್ರಾಗಭಾವಃ ಇತಿ ನ ಘಟಸ್ವರೂಪಮೇವ ಪ್ರಾಗುತ್ಪತ್ತೇಃ ನಾಸ್ತಿ |ಅಥ 'ಘಟಸ್ಯ ಪ್ರಾಗಭಾವಃ' ಇತಿ ಘಟಸ್ಯ ಯತ್ ಸ್ವರೂಪಂ ತದೇವ ಉಚ್ಯೇತ, 'ಘಟಸ್ಯ' ಇತಿ ವ್ಯಪದೇಶಾನುಪಪತ್ತಿಃ| ಅಥ ಕಲ್ಪಯಿತ್ವಾ ವ್ಯಪದಿಶ್ಯೇತ 'ಶಿಲಾಪುತ್ರಕಸ್ಯ ಶರೀರಮ್' ಇತಿ ಯದ್ವತ್| ತಥಾಪಿ ಘಟಸ್ಯ ಪ್ರಾಗಭಾವಃ ಇತಿ ಕಲ್ಪಿತಸ್ಯೈವ ಅಭಾವಸ್ಯ ಘಟೇನ ವ್ಯಪದೇಶಃ, ನ ಘಟಸ್ವರೂಪಸ್ಯೈವ| ಅಥ ಅರ್ಥಾನ್ತರಂ ಘಟಾದ್ ಘಟಸ್ಯ ಅಭಾವಃ ಇತಿ ಉಕ್ತೋತ್ತರಮೇತತ್ ||

(ಭಾಷ್ಯಾರ್ಥ)

ಇದೂ ಅಲ್ಲದೆ ನಾಲ್ಕು ಬಗೆಯ ಅಭಾವಗಳೊಳಗೆ ಗಡಿಗೆಯ ಅನ್ಯೋನ್ಯಾಭಾವವು ಗಡಿಗೆಗಿಂತ ಬೇರೆಯಾಗಿಯೇ (ಇರುವದು) ಕಂಡುಬರುತ್ತದೆ. ಉದಾಹರಣೆಗೆ ಗಡಿಗೆಯ ಅಭಾವವೆಂಬುದು ಬಟ್ಟೆಯೇ ಮುಂತಾದದ್ದೇ ಹೊರತು (ಬರಿಯ) ಗಡಿಗೆಯ ಸ್ವರೂಪವೇ (ಆಗಿರುವದಿಲ್ಲ). ಆದರೆ ಗಡಿಗೆಯ ಅಭಾವವಾಗಿರುವ ಬಟ್ಟೆಯು ಅಭಾವರೂಪವಾಗಿರುವದಿಲ್ಲ, ಮತ್ತೇನೆಂದರೆ ಭಾವರೂಪವೇ

1. ಈ ಭಾಷ್ಯಮೂಲವನ್ನು ಇದ್ದಂತೆ ಕನ್ನಡಿಸಿದೆ. ಈ ವಾಕ್ಯವನ್ನು ಲೇಖಕರು ಸ್ವಲ್ಪಮಟ್ಟಿಗೆ ಮಾರ್ಪಡಿಸಿದ್ದರೂ ಇರಬಹುದೆಂದು ಊಹಿಸುವದಕ್ಕೆ ಅವಕಾಶವಿದೆ.

2. ಮಣ್ಣಿನ ವರ್ತಮಾನತ್ವವೂ ಕುಂಬಾರ, ಕೋಲು, ಚಕ್ರ-ಮುಂತಾದವುಗಳ ಭವಿಷ್ಯತ್ತ್ವವೂ ಬೇರೆ. ಕುಂಬಾರನೇ ಮುಂತಾದವರ ವ್ಯಾಪಾರದ ವರ್ತಮಾನತ್ವವೂ ಘಟದ ಭವಿಷ್ಯತ್ತ್ವವೂ ಬೇರೆ. ಭವಿಷ್ಯತ್ತ್ವದಂತೆಯೇ ಅತೀತತ್ವವನ್ನೂ ತಿಳಿಯಬೇಕು. ಉದಾಹರಣೆಗೆ ಘಟವು ಅಭಿವ್ಯಕ್ತವಾದಾಗ ಅದು ವರ್ತಮಾನವಾಗಿರುತ್ತದೆ, ಕುಂಬಾರನೇ ಮೊದಲಾದವರ ವ್ಯಾಪಾರವು ಅತೀತವಾಗಿರುತ್ತದೆ.

ಆಗಿರುತ್ತದೆ.[1] ಇದರಂತೆ ಗಡಿಗೆಯ ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ-(ಇವು)ಗಳೂ ಗಡಿಗೆಗಿಂತ ಬೇರೆಯಾಗಿಯೇ ಆಗಿರಬೇಕು. ಏಕೆಂದರೆ (ಆ ಅಭಾವಗಳನ್ನು) ಗಡಿಗೆಯ ಅಭಾವಗಳೆಂದು ಗಡಿಗೆಯ ಅನ್ಯೋನ್ಯಾಭಾವದಂತೆ ಗಡಿಗೆ ಎಂಬ ಮಾತಿನಿಂದಲೇ (ವಿಶೇಷಿಸಿ) ಕರೆಯುತ್ತೇವೆ. ಆ ಅನ್ಯೋನ್ಯಾಭಾವದಂತೆಯೇ ಅಭಾವಗಳೂ ಭಾವರೂಪವಾಗಿಯೇ ಇರುತ್ತವೆ. ಹೀಗೆ (ಸಿದ್ಧ)ವಾಗಿರುವಲ್ಲಿ ಗಡಿಗೆಯ ಪ್ರಾಗಭಾವ ಎಂದರೆ ಗಡಿಗೆಯ ಸ್ವರೂಪವೇ (ಗಡಿಗೆ) ಹುಟ್ಟುವ ಮುಂಚೆ ಇರುವದಿಲ್ಲ(ವೆಂದರ್ಥ)ವಾಗುವದಿಲ್ಲ[2]. ಹೀಗಲ್ಲದೆ ಗಡಿಗೆಯ ಪ್ರಾಗಭಾವ ಎಂದು ಗಡಿಗೆಯ ಸ್ವರೂಪವಿದೆಯಲ್ಲ ಅದನ್ನೇ ಹೇಳುವದಾದರೆ, 'ಗಡಿಗೆಯ' (ಅಭಾವ) ಎಂದು ಹೇಳುವದು ಸರಿಯಾಗುವದಿಲ್ಲ.[3] ಇನ್ನು 'ಕಲ್ಲುಗೊಂಬೆಯ ಶರೀರ' ಎಂಬಂತೆ (ಭೇದವನ್ನು) ಕಲ್ಪಿಸಿ ಹೇಳಬಹುದಲ್ಲ!-ಎಂದರೆ, ಹಾಗೂ 'ಗಡಿಗೆಯ ಪ್ರಾಗಭಾವ' ಎಂದರೆ ಕಲ್ಪಿತವಾದ ಅಭಾವವನ್ನೇ ಗಡಿಗೆಯಿಂದ (ವಿಶೇಷಿಸಿ) ಹೇಳಿದಂತೆ (ಆಗುವದೇ ಹೊರತು) ಗಡಿಗೆಯ ಸ್ವರೂಪವನ್ನೇ (ಹೇಳಿದಂತೆ) ಆಗುವದಿಲ್ಲ.[4] ಹೀಗಲ್ಲದೆ ಗಡಿಗೆಗಿಂತ ಗಡಿಗೆಯ

---

1. ಪ್ರತಿಯೊಂದು ವಸ್ತುವೂ ತನ್ನ ರೂಪದಿಂದ ಭಾವವು, ಮತ್ತೊಂದರ ಅಪೇಕ್ಷೆಯಿಂದ ಅಭಾವವು-ಎಂಬ ಮೀಮಾಂಸಕರ ಪಕ್ಷವನ್ನವಲಂಬಿಸಿ ವ್ಯಾವಹಾರಿಕವಾದ ಘಟಪಟಾದಿಗಳ ಭೇದವನ್ನೂ ಭಾವಾಭಾವಾದಿಗಳ ಭೇದವನ್ನೂ ಪ್ರತಿಪಾದಿಸಿದೆ. ಅಭಾವಗಳಲ್ಲಿ ಭೇದವನ್ನು ಕಲ್ಪಿಸುವದೇ ಸರಿಯಲ್ಲವೆಂದು ತೈ.ಭಾ. (ಭಾ.ಭಾ. ೯)ದಲ್ಲಿಯೂ ಸೂ.ಭಾ. ೨ ೧-೮(ಭಾ.ಭಾ. ೪೪೯), ಗೀ.ಭಾ. ೧೮-೪೮ (ಭಾ ಭಾ. ೫೪೬)-ಇವುಗಳಲ್ಲಿಯೂ ಪರಮಾರ್ಥದೃಷ್ಟಿಯಿಂದ ತಿಳಿಸಿದೆ. ಆದ್ದರಿಂದ ಇಲ್ಲಿ ಪರಸ್ಪರವಿರೋಧವೇನೂ ಇಲ್ಲ.

2. ಅಭಾವ ಎಂಬುದು ಪ್ರತಿಯೋಗಿಗಿಂತ ಬೇರೆಯಾದ ಭಾವಪದಾರ್ಥವೇ ಆದರೆ ಘಟಕ್ಕಿಂತ ಬೇರೆಯಾದ ಭಾವವಸ್ತುವೆಂದು ಅರ್ಥವಾಗುತ್ತದೆ. ಘಟವು ತನ್ನ ಅನ್ಯೋನ್ಯಾಭಾವವಾದ ಪಟಕ್ಕಿಂತ ಬೇರೆಯಾಗಿರುವದಕ್ಕಡ್ಡಿಯೇನೂ ಇಲ್ಲದಂತೆ, ತನ್ನ ಪ್ರಾಗಭಾವವಿದ್ದರೂ ಇರಬಾರದೇಕೆ? ಎಂದು ಭಾವ. ಇಲ್ಲಿ 'ಘಟಕ್ಕೆ ಅನಾದಿತ್ವ, ಅನಂತವತ್ತ್ವ, ಅದ್ವಯತ್ವ ಮತ್ತು ಸರ್ವಾತ್ಮತ್ವಗಳು ಪ್ರಾಪ್ತವಾಗುವವು' ಎಂದು ಟೀಕೆಯಲ್ಲಿ ಬರೆದಿರುವದು ಭಾಷ್ಯದಲ್ಲಿ ಕಾಣುವದಿಲ್ಲ

3. ಗಡಿಗೆಯನ್ನೇ ಅಭಾವ ಎಂದು ಕರೆಯುವದಕ್ಕೆ ಬರುವದಿಲ್ಲ; ಏಕೆಂದರೆ ಗಡಿಗೆಯ ಅಭಾವ' ಎಂಬಲ್ಲಿ ಷಷ್ಠಿಯು ಎರಡು ಸಂಬಂಧಿಗಳನ್ನು ಬಯಸುತ್ತದೆ. ಆದ್ದರಿಂದ ಗಡಿಗೆ, ಅದರ ಅಭಾವ-ಎರಡು ಸಂಬಂಧಿಗಳೂ ಬೇಕು ಎಂದು ಅಭಿಪ್ರಾಯ. ಗಡಿಗೆಯು ಹುಟ್ಟುವದಕ್ಕೆ ಮುಂಚೆಯೂ ಇರಬೇಕೆಂಬುದಕ್ಕೆ ಇದು ಹೇತು.

4. 'ಗಡಿಗೆಯ ಅಭಾವ' ಎಂಬಲ್ಲಿ ಭೇದವನ್ನು ಕಲ್ಪಿಸಿದೆ ಎಂದರೆ ಅಭಾವವನ್ನು ಕಲ್ಪಿಸಿದೆ ಎಂದಾಗುವದು; ಆಗಲಂತೂ ಗಡಿಗೆಯು ಇರುವದಿಲ್ಲ ಎನ್ನುವದು ಸರಿಯೇ ಆಗುವದಿಲ್ಲ.

ಅಭಾವವು ಬೇರೆ ಎನ್ನುವದಾದ(ರಂತೂ) ಅದಕ್ಕೆ ಉತ್ತರವನ್ನು ಹೇಳಿದ್ದಾಗಿದೆ[1].

(ಭಾಷ್ಯ)

೨೪. ಕಿಂಚ ಅನ್ಯತ್ ಪ್ರಾಗುತ್ಪತ್ತೇಃ ಶಶವಿಷಾಣವತ್ ಅಭಾವಭೂತಸ್ಯ ಘಟಸ್ಯ ಸ್ವಕಾರಣಸತ್ತಾಸಂಬನ್ಧಾನುಪಪತ್ತಿಃ। ದ್ವಿನಿಷ್ಠತ್ವಾತ್ ಸಂಬನ್ಧಸ್ಯ ಅಯುತಸಿದ್ಧಾನಾಮ್ ಅದೋಷಃ ಇತಿ ಚೇತ್। ನ। ಭಾವಾಭಾವಯೋಃ ಅಯುತಸಿದ್ಧತ್ವಾನುಪಪತ್ತೇಃ। ಭಾವಭೂತಯೋರ್ಹಿ ಯುತಸಿದ್ಧತಾ ಅಯುತ ಸಿದ್ಧತಾ ವಾ ಸ್ಯಾತ್ ನ ತು ಭಾವಾಭಾವಯೋಃ ಅಭಾವಯೋರ್ವಾ। ತಸ್ಮಾತ್ ಸದೇವ ಕಾರ್ಯಂ ಪ್ರಾಗುತ್ಪತ್ತೇಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಇನ್ನೊಂದು (ವಿಷಯ): ಹುಟ್ಟುವ ಮುಂಚೆ ಮೊಲದ ಕೊಂಬಿನಂತೆ[2] ಅಭಾವ ವಾಗಿರುವ ಗಡಿಗೆಗೆ ತನ್ನ ಕಾರಣದೊಡನೆಯೂ (ಅದರ ಮೂಲಕ) ಸತ್ತೆಯೊಡ ನೆಯೂ ಸಂಬಂಧವಾಗುವದೆಂಬುದು ಹೊಂದುವದಿಲ್ಲ.[3] ಏಕೆಂದರೆ ಸಂಬಂಧವು ಎರಡು (ಪದಾರ್ಥಗಳನ್ನು) ಆಶ್ರಯಿಸಿರತಕ್ಕದ್ದು. ಅಯುತಸಿದ್ಧ(ಪದಾರ್ಥ) ಗಳಿಗೆ ಸಂಬಂಧವಿರುವದು ದೋಷವಲ್ಲ ಎನ್ನುವದಾದರೆ (ಅದು) ಸರಿಯಲ್ಲ. ಏಕೆಂದರೆ ಭಾವಾಭಾವಗಳು ಅಯುತಸಿದ್ಧವೆಂಬುದು ಹೊಂದುವದಿಲ್ಲ. ಭಾವ ವಾಗಿರುವ (ಎರಡು ಪದಾರ್ಥ)ಗಳಿಗೇ ಯುತಸಿದ್ಧತ್ವವೋ ಅಯುತಸಿದ್ಧತ್ವವೋ ಇದ್ದೀತೇ ಹೊರತು ಭಾವಾಭಾವಗಳಿಗಾಗಲಿ (ಎರಡು) ಅಭಾವಗಳಿಗಾಗಲಿ (ಸಂಬಂಧವಿರಲಾರದು).[4]

---

1. ಅಭಾವವು ಭಾವಾತ್ಮಕವೇ ಆಗಿರುವದರಿಂದ ಘಟದ ಸ್ವರೂಪವೇ ಇಲ್ಲವೆನ್ನುವದ ಕ್ಕಾಗುವದಿಲ್ಲವೆಂದು ಹೇಳಿದೆ-ಎಂದರ್ಥ. ಘಟದ ಸ್ವರೂಪವೇ ಹುಟ್ಟುವ ಮುಂಚೆ ಇರಲಿಲ್ಲ ಎಂದರೆ ಮುಂದೆ ದೋಷವನ್ನು ಹೇಳುವದಕ್ಕಾಗಿ ಹೀಗೆ 'ಅನುವಾದಮಾಡಿಕೊಂಡಿದೆ ಎಂದು ತಿಳಿಯಬೇಕು.

2. ಅಭಾವವು ಮೊಲದ ಕೊಂಬಿನಂತೆ ತುಚ್ಛವೆಂಬುದನ್ನು ತಾರ್ಕಿಕರು ಒಪ್ಪುವದಿಲ್ಲ ವಾದರೂ ಅಭಾವಶಶಶೃಂಗಗಳಿಗೆ ಯಾವ ಹೆಚ್ಚುಕಡಿಮೆಯನ್ನೂ ತೋರಿಸುವದಕ್ಕೆ ಆಗುವಂತಿಲ್ಲ ವೆಂದು ಆಚಾರ್ಯರು ಸೂ. ಭಾ. ೨-೧-೮ ಗೀ. ಭಾ. ೧೮-೪ರಲ್ಲಿ ತೋರಿಸಿರುತ್ತಾರೆ.

3. ದ್ವ್ಯಣುಕಾದಿಕಾರ್ಯವು ಹುಟ್ಟಿದ ಬಳಿಕ ತನ್ನ ಕಾರಣಗಳೊಡನೆಯೂ ಸತ್ತೆ ಯೊಡನೆಯೂ ಸಮವಾಯಸಂಬಂಧವನ್ನು ಪಡೆಯುತ್ತದೆ ಎಂಬುದು ವೈಶೇಷಿಕರ ಮತವು. ಇದರ ಖಂಡನೆಯು ಸೂ. ಭಾ. ೨-೧-೧೮ರಲ್ಲಿಯೂ ಗೀ. ಭಾ. ೧೮-೪ರಲ್ಲಿಯೂ ಇರುತ್ತದೆ.

4. ಇಲ್ಲಿ ಅಯುತಸಿದ್ಧಗಳಿಗೆ ಸಮವಾಯಸಂಬಂಧವನ್ನು ತಿರಸ್ಕರಿಸಿದೆ ಭಾವಾ ಭಾವಗಳಿಗೆ ಅದು ಇರಲಾರದು ಎಂದಿಷ್ಟೇ ಹೇಳಿದೆ. ಅಯುತಸಿದ್ಧತ್ವವನ್ನೂ ಸಮವಾಯವನ್ನೂ ಮಾಂ. ಕಾ. ಭಾ. ೪-೫೨ ಸೂ. ಭಾ. ೨-೨-೧೩, ೨-೨-೧೭ ಇವುಗಳಲ್ಲಿಯೂ ಖಂಡಿಸಿದೆ.

ಆದ್ದರಿಂದ ಕಾರ್ಯವು ಹುಟ್ಟುವದಕ್ಕಿಂತ ಮುಂಚೆ ಇದ್ದೇ ಇರುತ್ತದೆ ಎಂದು ಸಿದ್ಧವಾಯಿತು.

## ಮೃತ್ಯುವೆಂದರೆ ಹಿರಣ್ಯಗರ್ಭ

(ಭಾಷ್ಯ)

೨೫. ಕಿಂಲಕ್ಷಣೇನ ಮೃತ್ಯುನಾ ಆವೃತಮಿತಿ? ಅತ ಆಹ। ಅಶನಾಯಯಾ। ಅಶಿತುಮ್ ಇಚ್ಛಾ ಅಶನಾಯಾ। ಸೈವ ಮೃತ್ಯೋರ್ಲಕ್ಷಣಮ್। ತಯಾ ಲಕ್ಷಿತೇನ ಮೃತ್ಯುನಾ ಅಶನಾಯಯಾ। ಕಥಮ್ ಅಶನಾಯಾ ಮೃತ್ಯುರಿತಿ? ಉಚ್ಯತೇ। ಅಶನಾಯಾ ಹಿ ಮೃತ್ಯುಃ। ಹಿಶಬ್ದೇನ ಪ್ರಸಿದ್ಧಂ ಹೇತುಮ್ ಅವದ್ಯೋತಯತಿ। ಯೋ ಹಿ ಅಶಿತುಮ್ ಇಚ್ಛತಿ, ಸಃ ಅಶನಾಯಾನನ್ತರಮೇವ ಹನ್ತಿ ಜನ್ತೂನ್। ತೇನ ಅಸೌ ಅಶನಾಯಯಾ ಲಕ್ಷ್ಯತೇ ಮೃತ್ಯುಃ ಇತಿ 'ಅಶನಾಯಾ ಹಿ' ಇತ್ಯಾಹ। ಬುದ್ಧ್ಯಾತ್ಮನಃ ಅಶನಾಯಾ ಧರ್ಮಃ ಇತಿ ಸ ಏಷ ಬುದ್ಧ್ಯವಸ್ಥೋ ಹಿರಣ್ಯಗರ್ಭೋ ಮೃತ್ಯುಃ ಇತ್ಯುಚ್ಯತೇ। ತೇನ ಮೃತ್ಯುನಾ ಇದಂ ಕಾರ್ಯಮ್ ಆವೃತಮ್ ಆಸೀತ್। ಯಥಾ ಪಿಣ್ಡಾವಸ್ಥಯಾ ಮೃದಾ ಘಟಾದಯಃ ಆವೃತಾಃ ಸ್ಯುಃ[1] ತದ್ವತ್॥

(ಭಾಷ್ಯಾರ್ಥ)

ಯಾವ ರೂಪದ ಮೃತ್ಯುವಿನಿಂದ (ಇದು) ಆವೃತ(ವಾಗಿತ್ತು)? ಎಂದರೆ ಅದಕ್ಕೆ (ಶ್ರುತಿ) ಹೇಳುತ್ತದೆ. ಅಶನಾಯವೆಂಬ (ಮೃತ್ಯುವಿನಿಂದ). ಅಶನಾಯಾ (ಹಸಿವು) ಎಂದರೆ ತಿನ್ನಬೇಕೆಂಬ ಇಚ್ಛೆ; ಅದೇ ಮೃತ್ಯುವಿನ ಲಕ್ಷಣವು. ಆ (ಲಕ್ಷಣ)ದಿಂದ ಲಕ್ಷಿತವಾದ ಮೃತ್ಯುವಿನಿಂದ (ಆವೃತವಾಗಿತ್ತು). ಅಶನಾಯಾ ಎಂಬುದು ಮೃತ್ಯು ಹೇಗೆ? (ಎಂದರೆ ಶ್ರುತಿ) ಹೇಳುತ್ತದೆ. ಅಶನಾಯವೇ ಮೃತ್ಯುವಷ್ಟೆ. ಹಿ (ಅಷ್ಟೆ) ಎಂಬ ಮಾತಿನಿಂದ ಪ್ರಸಿದ್ಧವಾಗಿರುವ ಹೇತುವನ್ನು ತಿಳಿಸಿರುತ್ತದೆ. ಯಾವನು ತಿನ್ನಬೇಕೆಂದು ಬಯಸುತ್ತಾನೋ ಅವನು ಹಸಿವಾದ ಕೂಡಲೆ ಪ್ರಾಣಿಗಳನ್ನು ಕೊಲ್ಲುತ್ತಾನೆ; ಅದರಿಂದ ಅಶನಾಯ(ವೆಂಬ ಲಕ್ಷಣದಿಂದ) ಮೃತ್ಯುವು ಲಕ್ಷಿತವಾಗಿರುತ್ತಾನೆ. ಆದ್ದರಿಂದ ಅಶನಾಯವೇ ಮೃತ್ಯುವಷ್ಟೆ? ಎಂದು (ಶ್ರುತಿ) ಹೇಳುತ್ತಿದೆ. ಬುದ್ಧ್ಯಾತ್ಮನಾದವನಿಗೆ ಹಸಿವು ಧರ್ಮವು; ಆದ್ದರಿಂದ ಆ ಈ ಬುದ್ಧ್ಯವಸ್ಥನಾದ **ಹಿರಣ್ಯಗರ್ಭನನ್ನು** ಮೃತ್ಯು ಎಂದಿದೆ[2].

---

1. ಇವರ ಮುಂದೆ ಅಚ್ಚಿನ ಪುಸ್ತಕಗಳಲ್ಲಿರುವ ಇತಿ ಬೇಕಿಲ್ಲ.

2. ಮೃತ್ಯುವೆಂದರೆ ಪರಮಾತ್ಮನು ಎಂದೂ ವಾರ್ತಿಕಕಾರರು ಅರ್ಥಮಾಡಿರುತ್ತಾರೆ. ಪರಮಾತ್ಮನೇ ಹಿರಣ್ಯಗರ್ಭನ ರೂಪವನ್ನು ಧರಿಸಿ ವಿರಾಟ್ಪುರುಷನನ್ನು ಸೃಜಿಸುತ್ತಾನೆ ಎಂದು ಆ ವ್ಯಾಖ್ಯಾನಕ್ಕೆ ತಾತ್ಪರ್ಯ.

ಮುದ್ದೆಯ ಅವಸ್ಥೆಯಲ್ಲಿರುವ ಮಣ್ಣಿನಿಂದ ಹೇಗೆ ಘಟಾದಿಗಳು ಆವೃತವಾಗಿರುವವೋ ಹಾಗೆ ಆ ಮೃತ್ಯುವಿನಿಂದ ಈ ಕಾರ್ಯವು ಆವೃತವಾಗಿತ್ತು.[1]

## ಮನಸ್ಸಿನ ಸೃಷ್ಟಿ

(ಭಾಷ್ಯ)

೨೬. ತನ್ಮನೋಽಕುರುತ। ತತ್ ಇತಿ ಮನಸೋ ನಿರ್ದೇಶಃ। ಸ ಪ್ರಕೃತೋ ಮೃತ್ಯುಃ ವಕ್ಷ್ಯಮಾಣಕಾರ್ಯಸಿಸೃಕ್ಷಯಾ ತತ್ ಕಾರ್ಯಾಲೋಚನಕ್ಷಮಂ ಮನಃಶಬ್ದವಾಚ್ಯಂ ಸಂಕಲ್ಪಾದಿಲಕ್ಷಣಮ್ ಅನ್ತಃಕರಣಮ್ ಅಕುರುತ ಕೃತವಾನ್। ಕೇನ ಅಭಿಪ್ರಾಯೇಣ ಮನಃ ಅಕರೋತ್ ಇತಿ। ಉಚ್ಯತೇ ಆತ್ಮನ್ವೀ ಆತ್ಮವಾನ್ ಸ್ಯಾಂ ಭವೇಯಮ್। ಅಹಮ್ ಅನೇನ ಆತ್ಮನಾ ಮನಸಾ ಮನಸ್ವೀ ಸ್ಯಾಮ್[2] ಇತ್ಯಭಿಪ್ರಾಯಃ ||

(ಭಾಷ್ಯಾರ್ಥ)

'ತನ್ಮನೋಽಕುರುತ' (ಎಂಬಲ್ಲಿ) 'ತತ್' ಎಂಬುದು ಮನಸ್ಸನ್ನು ತಿಳಿಸುತ್ತದೆ. ಆ ಪ್ರಕೃತನಾದ ಮೃತ್ಯುವು ಮುಂದೆ ಹೇಳುವ ಕಾರ್ಯವನ್ನು[3] ಸೃಷ್ಟಿಮಾಡುವ ಇಚ್ಛೆಯಿಂದ ಆ ಕಾರ್ಯಾಲೋಚನಸಮರ್ಥವಾದ (ಮನಸ್ಸನ್ನು ಎಂದರೆ) ಮನಃಶಬ್ದವಾಚ್ಯವಾದ ಸಂಕಲ್ಪಾದಿಲಕ್ಷಣವಾದ[4] ಅಂತಃಕರಣವನ್ನು ಮಾಡಿದನು, ಮಾಡಿದವನಾದನು. ಯಾವ ಅಭಿಪ್ರಾಯದಿಂದ ಮನಸ್ಸನ್ನು ಮಾಡಿದನು? ಎಂದರೆ (ಶ್ರುತಿ) ಹೇಳುತ್ತದೆ. ಆತ್ಮನ್ವಿಯು ಆತ್ಮವಂತನು, ಆಗುವೆನು, ಆಗಬೇಕು. ನಾನು ಈ ಆತ್ಮದಿಂದ ಎಂದರೆ ಮನಸ್ಸಿನಿಂದ ಮನಸ್ಸುಳ್ಳವನಾಗಬೇಕು ಎಂದು (ಮಾಡಿದನು ಎಂದು) ಅಭಿಪ್ರಾಯ.

## ಅಪ್ಪಿನ ಉತ್ಪತ್ತಿ

(ಭಾಷ್ಯ)

೨೭. ಸ ಪ್ರಜಾಪತಿಃ ಅಭಿವ್ಯಕ್ತೇನ ಮನಸಾ ಸಮನಸ್ಕಃ ಸನ್ ಅರ್ಚನ್ ಅರ್ಚಯನ್ ಪೂಜಯನ್ ಆತ್ಮಾನಮೇವ ಕೃತಾರ್ಥೋಽಸ್ಮಿ ಇತಿ ಅಚರತ್ ಚರಣಮ್ ಅಕರೋತ್। ತಸ್ಯ ಪ್ರಜಾಪತೇಃ ಅರ್ಚತಃ ಪೂಜಯತಃ

---

1. ಮೃತ್ಯುವು ಮೂಲಕಾರಣವಲ್ಲದಿದ್ದರೂ ಪಿಂಡಾದಿರೂಪವಾದ ಕಾರ್ಯದಿಂದಲೂ ಘಟಾದಿಕಾರ್ಯವು ಆವೃತವಾಗಿರುವಂತೆ ಆ ಹಿರಣ್ಯಗರ್ಭನೆಂಬ ಕಾರ್ಯದಿಂದಲೇ ಆವೃತವಾಗಿತ್ತು.

2. ಇಲ್ಲೊಂದು 'ಇತಿ' ಇದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

3. ವಿರಾಟ್ಪುರುಷನನ್ನು ಎಂದರ್ಥ.

4. ಸಂಕಲ್ಪ, ವಿಕಲ್ಪ, ನಿಶ್ಚಯ-ಮುಂತಾದ ವೃತ್ತಿಗಳುಳ್ಳ.

ಆಪಃ ರಸಾತ್ಮಿಕಾಃ ಪೂಜಾಙ್ಗಭೂತಾಃ ಅಜಾಯನ್ತ ಉತ್ಪನ್ನಾಃ। ಅತ್ರ ಆಕಾಶ ಪ್ರಭೃತೀನಾಂ ತ್ರಯಾಣಾಮ್ ಉತ್ಪತ್ತ್ಯನನ್ತರಮ್ ಇತಿ ವಕ್ತವ್ಯಮ್। ಶ್ರುತ್ಯನ್ತರ ಸಾಮರ್ಥ್ಯಾತ್, ವಿಕಲ್ಪಾಸಂಭವಾಚ್ಚ ಸೃಷ್ಟಿಕ್ರಮಸ್ಯ। ಅರ್ಚತೇ ಪೂಜಾಂ ಕುರ್ವತೇ ವೈ ಮೇ ಮಹ್ಯಂ ಕಮ್ ಉದಕಮ್ ಅಭೂತ್ ಇತಿ ಏವಮ್ ಅಮನ್ಯತ ಯಸ್ಮಾತ್ ಮೃತ್ಯುಃ ತದೇವ ತಸ್ಮಾದೇವ ಹೇತೋಃ ಅರ್ಕಸ್ಯ ಅಗ್ನೇಃ ಅಶ್ವಮೇಧಕ್ರತ್ವಾಪಯೋಗಿಕಸ್ಯ ಅರ್ಕತ್ವಮ್ ಅರ್ಕತ್ವೇ ಹೇತುಃ ಇತ್ಯರ್ಥಃ। ಅಗ್ನೇಃ ಅರ್ಕನಾಮನಿರ್ವಚನಮ್ ಏತತ್। ಅರ್ಚನಾತ್ ಸುಖ ಹೇತುಪೂಜಾಕರಣಾತ್ ಅಪ್ಸಂಬನ್ಧಾಚ್ಚ ಅಗ್ನೇಃ ಏತದ್ ಗೌಣಂ ನಾಮ ಅರ್ಕಃ ಇತಿ। ಯ ಏವಂ ಯಥೋಕ್ತಮ್ ಅರ್ಕಸ್ಯ ಅರ್ಕತ್ವಂ ವೇದ ಜಾನಾತಿ ಕಮ್ ಉದಕಂ ಸುಖಂ ವಾ ನಾಮಸಾಮಾನ್ಯಾತ್। ಹ ವಾ ಇತಿ ಅವಧಾರಣಾರ್ಥೌ ಭವತ್ಯೇವ ಇತಿ। ಅಸ್ಮೈ ಏವಂವಿದೇ ಏವಂವಿದರ್ಥಂ ಭವತಿ ॥

(ಭಾಷ್ಯಾರ್ಥ)

ಆ ಪ್ರಜಾಪತಿಯು[1] ಅಭಿವ್ಯಕ್ತವಾದ[2] ಮನಸ್ಸಿನಿಂದ ಸಮನಸ್ಕನಾಗಿ (ಅರ್ಚನ್=ಅರ್ಚಯನ್) ತನ್ನನ್ನು(ತಾನೇ) ಪೂಜಿಸಿಕೊಂಡು ಕೃತಾರ್ಥನಾದೆನು ಎಂದು ಚರಿಸಿದನು,-ಆಚರಣವನ್ನು ಮಾಡಿದನು.[3] ಆ ಪ್ರಜಾಪತಿಯು ಅರ್ಚಿಸು ತ್ತಿರುವಲ್ಲಿ (ತನ್ನನ್ನು ತಾನು) ಪೂಜಿಸುತ್ತಿರುವಲ್ಲಿ ಅಪ್ಪು ರಸಾತ್ಮಕವಾದ ಪೂಜಾಂಗವಾದ (ನೀರು) ಹುಟ್ಟಿತು ಉಂಟಾಯಿತು. ಇಲ್ಲಿ **ಆಕಾಶವೇ ಮುಂತಾದ ಮೂರು ಭೂತಗಳು ಹುಟ್ಟಿದ ಬಳಿಕ ಎಂದು ಹೇಳಬೇಕು; ಬೇರೊಂದು ಶ್ರುತಿಯ ಸಾಮರ್ಥ್ಯದಿಂದಲೂ ಸೃಷ್ಟಿಕ್ರಮದಲ್ಲಿ ವಿಕಲ್ಪವಿರ ಲಾರದಾದ್ದರಿಂದಲೂ ಹೀಗೆಂದು (ಹೇಳಬೇಕು).**[4]

ಅರ್ಚಿಸುತ್ತಿರುವಾಗ, ನಾನು ಪೂಜೆಯನ್ನು ಮಾಡುತ್ತಿರುವಾಗ, ಅಲ್ಲವೆ, ನನಗೆ ಕವು ಎಂದರೆ ನೀರು ಉಂಟಾಯಿತು ?–ಎಂದು ಹೀಗೆ ಮೃತ್ಯುವು ಎಣಿಸಿದ್ದ ರಿಂದ ಅದರಿಂದಲೇ ಆದಕಾರಣದಿಂದಲೇ ಅರ್ಕನಿಗೆ ಅಶ್ವಮೇಧಕ್ರತುವಿಗೆ ಉಪ ಯೋಗವಾಗುವ ಅಗ್ನಿಗೆ, ಅರ್ಕತ್ವವು, ಅರ್ಕತ್ವಕ್ಕೆ ಹೇತು ಎಂದರ್ಥ. ಅಗ್ನಿಗೆ

---

1. ಹಿರಣ್ಯಗರ್ಭನು.

2. ಮನಸ್ಸನ್ನು ಮಾಡಿದನು ಎಂದರೆ ಅಭಿವ್ಯಕ್ತಿಗೊಳಿಸಿದನು ಎಂದರ್ಥ ಎಂದು ಸೂಚಿಸಿದಂತಾಯಿತು.

3. ಅರ್ಚನವೆಂದರೆ ತೃಪ್ತನಾಗುವಿಕೆ, ಕೃತಕೃತ್ಯತಾಭಾವನೆ ಎಂದು ಅಭಿಪ್ರಾಯ.

4. ಇಲ್ಲಿ ಮೂಲಕಾರಣವಾದ ಬ್ರಹ್ಮದಿಂದ ಪಂಚಭೂತೋತ್ಪತ್ತಿಯನ್ನು ಹೇಳದೆ ಹಿರಣ್ಯಗರ್ಭನಿಂದ ಹೇಳಿರುವನೇಕೆಂಬ ಬಗ್ಗೆ **ಪೀಠಿಕೆ**ಯನ್ನು ನೋಡಿ.

(ಬಂದಿರುವ) ಅರ್ಕ ಎಂಬ ಹೆಸರಿನ ನಿರ್ವಚನವಿದು. ಅರ್ಚನದಿಂದ ಎಂದರೆ ಸುಖಹೇತುವಾದ ಪೂಜೆಯನ್ನು ಮಾಡಿದ್ದರಿಂದಲೂ ನೀರಿನ ಸಂಬಂಧದಿಂದಲೂ ಅಗ್ನಿಗೆ ಈ ಅರ್ಕ ಎಂಬ ಗೌಣನಾಮ(ವು ಬಂದಿರುತ್ತದೆ). ಯಾವನು ಮೇಲೆ ಹೇಳಿದ ಅರ್ಕನ ಅರ್ಕತ್ವವನ್ನು ಅರಿತುಕೊಳ್ಳುವನೋ ತಿಳಿದುಕೊಳ್ಳುವನೋ ಕವು ಎಂದರೆ ನೀರು ಅಥವಾ ಸುಖವು—ಎರಡಕ್ಕೂ ಕ ಎಂಬ ಹೆಸರು ಸಮಾನ ವಾಗಿರುವದರಿಂದ (ಹೀಗೆ ಅರ್ಥವನ್ನು ಮಾಡಬಹುದು)—'ಹ', 'ವಾ' ಎಂಬಿವು ಅವಧಾರಣಾರ್ಥದ (ನಿಪಾತಗಳು) ; (ನೀರು ಅಥವಾ ಸುಖವು) ಆಗಿಯೇ ತೀರು ತ್ತದೆ ಎಂದು (ಅರ್ಥ). ಇವನಿಗೆ ಹೀಗೆಂದು ಅರಿತವನಿಗೆ ಹೀಗೆಂದು ಉಪಾಸನೆ ಮಾಡಿದವನಿಗೆ ಆಗುತ್ತದೆ.

## ವಿರಾಡ್ರೂಪನಾದ ಅಗ್ನಿಯ ಉತ್ಪತ್ತಿ

(ಉಪನಿಷತ್ತು)

**ಆಪೋ ವಾ ಅರ್ಕಸ್ತದ್ಯದಪಾಂ ಶರ ಆಸೀತ್ ತತ್ ಸಮಹನ್ಯತ। ಸಾ ಪೃಥಿವ್ಯಭವತ್ ತಸ್ಯಾಮಶ್ರಾಮ್ಯತ್ ತಸ್ಯ ಶ್ರಾನ್ತಸ್ಯ ತಪ್ತಸ್ಯ ತೇಜೋರಸೋ ನಿರವರ್ತತಾಗ್ನಿಃ ॥ ೨ ॥**

೨. ಅಪ್ಪೇ ಅರ್ಕನು. ಅಲ್ಲಿ ಅಪ್ಪಿನ ಶರವಿತ್ತಲ್ಲ, ಅದು ಕೂಡಿ ಕೊಂಡಿತು; ಅದು ಪೃಥಿವಿಯಾಯಿತು. ಅದು (ಉಂಟಾಗಲು ಅವನು) ಆಯಾಸಪಟ್ಟನು. ಹಾಗೆ ಆಯಾಸಪಟ್ಟು ತಪ್ತನಾದ (ಪ್ರಜಾಪತಿಯ ಶರೀರದಿಂದ) ತೇಜೋರಸವಾದ ಅಗ್ನಿಯು ಹೊರಟುಬಂದನು.

(ಭಾಷ್ಯ)

೨೮. ಆಪೋ ವಾ ಅರ್ಕಃ। ಕಃ ಪುನರಸಾವರ್ಕ ಇತಿ? ಉಚ್ಯತೇ। ಆಪೋ ವೈ। ಯಾ ಅರ್ಚನಾಙ್ಗಭೂತಾಃ ತಾ ಏವ ಅರ್ಕಃ। ಅಗ್ನೇಃ ಅರ್ಕಸ್ಯ ಹೇತುತ್ವಾತ್ ಅಪ್ಸು ಚ ಅಗ್ನಿಃ ಪ್ರತಿಷ್ಠಿತಃ ಇತಿ। ನ ಪುನಃ ಸಾಕ್ಷಾದೇವ ಅರ್ಕಸ್ತಾಃ। ತಾಸಾಮ್ ಅಪ್ರಕರಣಾತ್। ಅಗ್ನೇಶ್ಚ ಪ್ರಕರಣಮ್। ವಕ್ಷ್ಯತಿ ಚ 'ಅಯಮಗ್ನಿರರ್ಕಃ' ಇತಿ। ತತ್ ತತ್ರ ಯತ್ ಅಪಾಂ ಶರ ಇವ ಶರಃ ದಧ್ನ ಇವ ಮಣ್ಡಭೂತಮ್ ಆಸೀತ್ ತತ್ ಸಮಹನ್ಯತ। ಸಂಘಾತಮ್ ಆಪದ್ಯತ। ತೇಜಸಾ ಬಾಹ್ಯಾನ್ತಃ ಪಚ್ಯಮಾನಮ್। ಲಿಙ್ಗವ್ಯತ್ಯಯೇನ ವಾ ಯೋಽಪಾಂ ಶರಃ ಸ ಸಮಹನ್ಯತ ಇತಿ। ಸಾ ಪೃಥಿವೀ ಅಭವತ್। ಸ ಸಂಘಾತಃ ಯೇಽಯಂ ಪೃಥಿವೀ ಸಾ ಅಭವತ್। ತಾಭ್ಯೋಽದ್ಭ್ಯಃ ಅಣ್ಡಮ್ ಅಭಿನಿರ್ವೃತ್ತಮ್ ಇತ್ಯರ್ಥಃ॥

(ಭಾಷ್ಯಾರ್ಥ)

'ಅಪ್ಪೇ ಅರ್ಕನು' (ಎಂಬ ಕಂಡಿಕೆಯ ಅರ್ಥವೇನೆಂದರೆ) :-ಈ ಅರ್ಕನು ಯಾರು ? ಎಂದರೆ (ಶ್ರುತಿ) ಹೇಳುತ್ತದೆ. ಅಪ್ಪೇ (ಅರ್ಕನು). ಅರ್ಚನೆಗೆ ಅಂಗವಾಗಿ (ಉಂಟಾಗಿತ್ತಲ್ಲ), ಆ (ನೀರೇ) ಅರ್ಕನು. ಏಕೆಂದರೆ ಅರ್ಕನಾದ ಅಗ್ನಿಗೆ (ಅದು) ಹೇತು(ವಾಗಿರುತ್ತದೆ). ಅಪ್ಪಿನಲ್ಲಿ ಅಗ್ನಿಯು ಇದ್ದುಕೊಂಡಿರುತ್ತಾನೆ[1]; ಆದ್ದರಿಂದ (ಅಪ್ಪು ಅರ್ಕನು). ಇಷ್ಟೇ ಹೊರತು ಆ (ಅಪ್ಪೇ) ನೇರಾಗಿ ಅರ್ಕನಲ್ಲ. ಏಕೆಂದರೆ (ಇದು) ಆ (ಅಪ್ಪಿನ) ಪ್ರಕರಣವಲ್ಲ; ಮತ್ತೇನೆಂದರೆ ಅಗ್ನಿಯ ಪ್ರಕರಣ(ವಿದು). 'ಈ ಅಗ್ನಿಯು ಅರ್ಕನು' ಎಂದು (ಮುಂದೆ ಶ್ರುತಿಯಲ್ಲಿ) ಹೇಳಿಯೂ ಇದೆ. (ತತ್=ತತ್ರ) ಅಲ್ಲಿ ಮೊಸರಿನಲ್ಲಿ ಗರಣೆಯಿದ್ದಂತೆ ಅಪ್ಪಿನ ಶರವಿದ್ದಂತೆ (ಇದ್ದ) ಶರವು ಇತ್ತಲ್ಲ,[2] ಅದು ಕೂಡಿಕೊಂಡಿತು, ತೇಜಸ್ಸಿನಿಂದ ಹೊರಗೂ ಒಳಗೂ ಪಕ್ವವಾಗಿ ಗಟ್ಟಿಯಾಯಿತು, ಅಥವಾ ಲಿಂಗವಿಪರಿಣಾಮವನ್ನು ಮಾಡಿ 'ಯೋಽಪಾಂ ಶರಃ ಆಸೀತ್ ಸ ಸಮಹನ್ಯತ' ಎಂದಾದರೂ ಅನ್ವಯಿಸಬಹುದು.[3] ಅದು ಪೃಥಿವಿಯಾಯಿತು ; ಆ ಗಟ್ಟಿಯು ಈ ಪೃಥಿವಿಯಿದೆಯಲ್ಲ, ಇದಾಯಿತು ; ಎಂದರೆ ಆ ಅಪ್ಪಿನಿಂದ **ಅಂಡ**ವುಂಟಾಯಿತು[4] ಎಂದರ್ಥ.

(ಭಾಷ್ಯ)

೨೯. ತಸ್ಯಾಂ ಪೃಥಿವ್ಯಾಮ್ ಉತ್ಪಾದಿತಾಯಾಂ ಸ ಮೃತ್ಯುಃ ಪ್ರಜಾಪತಿಃ ಅಶ್ರಾಮ್ಯತ್ ಶ್ರಮಯುಕ್ತೋ ಬಭೂವ। ಸರ್ವೋ ಹಿ ಲೋಕಃ ಕಾರ್ಯಂ ಕೃತ್ವಾ ಶ್ರಾಮ್ಯತಿ। ಪ್ರಜಾಪತೇಶ್ಚ ತನ್ಮಹತ್ ಕಾರ್ಯಂ ಯತ್ ಪೃಥಿವೀಸರ್ಗಃ। ಕಿಂ ತಸ್ಯ ಶ್ರಾನ್ತಸ್ಯ ಇತಿ ? ಉಚ್ಯತೇ। ತಸ್ಯ ಶ್ರಾನ್ತಸ್ಯ ತಪ್ತಸ್ಯ ಖಿನ್ನಸ್ಯ ತೇಜೋ

---

1. ಮುಂದಿನ ಕಂಡಿಕೆಯಲ್ಲಿ ಹೀಗೆಂದು ಹೇಳಿದೆ.

2. 'ಯದಪಾಂ ಶರ ಆಸೀತ್ ತತ್ ಸಮಹನ್ಯತ' ಗಟ್ಟಿಭಾಗವಾದ ಯಾವ ವಸ್ತುವಿತ್ತೋ ಅದು ಉಂಡೆಯಾಯಿತು-ಎಂದು ನಪುಂಸಕಲಿಂಗದ ಯತ್ ತತ್ ಶಬ್ದಗಳಿಗೆ ನಪುಂಸಕ ಲಿಂಗದ ವಿಶೇಷ್ಯಗಳನ್ನು ಅಧ್ಯಾಹಾರಮಾಡಿಕೊಂಡು ಅರ್ಥಮಾಡಬೇಕು ಎಂದು ಭಾವ. ಶರವೆಂದರೆ ಕಾರಣವಾದ ಅಪ್ಪು ಹೆಪ್ಪುಗಟ್ಟಿದ್ದು.

3. ವಿಶೇಷ್ಯಗಳನ್ನು ಅಧ್ಯಾಹಾರಮಾಡಿಕೊಳ್ಳದೆ ಯತ್ ಎಂಬುದನ್ನು ಯಃ ಎಂದೂ ತತ್ ಎಂಬುದನ್ನು ಸಃ ಎಂದೂ ಮಾರ್ಪಡಿಸಿಕೊಳ್ಳಬೇಕು. ಆಗ ಅನ್ವಯವು ಸರಿಹೋಗುತ್ತದೆ ಎಂದು ಅಭಿಪ್ರಾಯ.

4. ಬರಿಯ ಪೃಥಿವಿಯನ್ನು ಹೇಳುವದರಲ್ಲಿ ತಾತ್ಪರ್ಯವಿಲ್ಲ; ಪಾಂಚಭೌತಿಕವಾದ ಬ್ರಹ್ಮಾಂಡದ ಉತ್ಪತ್ತಿಯನ್ನೇ ಇಲ್ಲಿ ಹೇಳಿದೆ ಎಂದು ಭಾವ.

ರಸಃ ತೇಜ ಏವ ರಸಃ ತೇಜೋರಸಃ। ರಸಃ ಸಾರಃ ನಿರವರ್ತತ ಪ್ರಜಾಪತಿ ಶರೀರಾತ್ ನಿಷ್ಕ್ರಾನ್ತಃ ಇತ್ಯರ್ಥಃ। ಕೋಽಸೌ ನಿಷ್ಕ್ರಾನ್ತಃ? ಅಗ್ನಿಃ। ಸಃ ಅಣ್ಡಸ್ಯಾನ್ತರ್ವಿರಾಟ್ ಪ್ರಜಾಪತಿಃ ಪ್ರಥಮಜಃ ಕಾರ್ಯಕರಣಸಙ್ಘಾತವಾನ್ ಜಾತಃ। "ಸ ವೈ ಶರೀರೀ ಪ್ರಥಮಃ........"(?) ಇತಿ ಸ್ಮರಣಾತ್ ॥

(ಭಾಷ್ಯಾರ್ಥ)

ಆ ಪೃಥಿವಿಯನ್ನು ಉಂಟುಮಾಡಿದ ಬಳಿಕ ಆ ಮೃತ್ಯುವು ಪ್ರಜಾಪತಿಯು ಆಯಾಸಪಟ್ಟನು, ಆಯಾಸವನ್ನು ಹೊಂದಿದವನಾದನು. ಪ್ರತಿಯೊಬ್ಬ ಮನುಷ್ಯನಿಗೂ ಕಾರ್ಯವನ್ನು ಮಾಡಿದರೆ ಆಯಾಸವಾಗುತ್ತದೆ; ಪ್ರಜಾಪತಿಯು ಆ ಪೃಥಿವೀಸೃಷ್ಟಿಯನ್ನು (ಮಾಡಿದ್ದೆಂಬುದು) ದೊಡ್ಡ ಕಾರ್ಯವು. ಆಯಾಸಪಟ್ಟ ಅವನಿಗೆ ಏನು (ಆಯಿತು)? ಎಂದರೆ (ಶ್ರುತಿ) ಹೇಳುತ್ತದೆ. ಆಯಾಸಪಟ್ಟು ತಪ್ತನಾದ ಬೆವರಿದ ಅವನಿಗೆ ತೇಜೋರಸವು-ತೇಜಸ್ಸೆಂಬ ರಸವು ತೇಜೋರಸವು; ರಸವೆಂದರೆ ಸಾರವು. (ಅದು)-ಹೊರಟುಬಂದಿತು. ಪ್ರಜಾಪತಿಶರೀರದಿಂದ ಈಚೆಗೆ ಬಂದಿತು ಎಂದರ್ಥ. ಹೀಗೆ ಈಚೆಗೆ ಬಂದದ್ದು ಯಾವದು? ಎಂದರೆ ಅದೇ **ಅಗ್ನಿಯು, ಅಂಡದೊಳಗಿನ ವಿರಾಜನು, ಪ್ರಜಾಪತಿಯು, ಕಾರ್ಯಕರಣ ಸಂಘಾತವಂತನಾಗಿ ಹುಟ್ಟಿದ ಪ್ರಥಮಜನು.** "ಸ ವೈ ಶರೀರೀ ಪ್ರಥಮಃ[1]" (?) 'ಅವನೇ ಮೊದಲನೆಯ ಶರೀರಿಯು' ಎಂಬ ಸ್ಮೃತಿಯ ಪ್ರಮಾಣದಿಂದ (ಇದು ಗೊತ್ತಾಗುತ್ತದೆ).

## ಅಗ್ನಿಯ ಅವಯವಗಳಲ್ಲಿ ಪ್ರಾಗಾದಿದೃಷ್ಟಿ

(ಉಪನಿಷತ್ತು)

**ಸ ತ್ರೇಧಾತ್ಮಾನಂ ವ್ಯಕುರುತಾಽಽದಿತ್ಯಂ ತೃತೀಯಂ ವಾಯುಂ ತೃತೀಯಗ್ಂ ಸ ಏಷ ಪ್ರಾಣಸ್ತ್ರೇಧಾ ವಿಹಿತಃ। ತಸ್ಯ ಪ್ರಾಚೀ ದಿಕ್ ಶಿರೋಽಸೌ ಚಾಸೌ ಚೇರ್ಮೌ। ಅಥಾಸ್ಯ ಪ್ರತೀಚೀ ದಿಕ್ ಪುಚ್ಛಮಸೌ ಚಾಸೌ ಚ ಸಕ್ಥ್ಯೌ ದಕ್ಷಿಣಾ ಚೋದೀಚೀ ಚ ಪಾರ್ಶ್ವೇ ದ್ಯೌಃ ಪೃಷ್ಠಮನ್ತರಿಕ್ಷಮುದರಮಿಯಮುರಃ ಸ ಏಷೋಽಪ್ಸು ಪ್ರತಿಷ್ಠಿತೋ ಯತ್ರ ಕ್ವಚೈತಿ ತದೇವ ಪ್ರತಿತಿಷ್ಠತ್ಯೇವಂ ವಿದ್ವಾನ್ ॥ ೩ ॥**

---

1. ಈ ಸ್ಮೃತಿವಾಕ್ಯವು ಎಲ್ಲಿಯದೆಂಬುದು ತಿಳಿಯದು. ಇದು ಶಿವಪುರಾಣ (೫-೧-೮-೨೨)ದಲ್ಲಿಯೂ ಇದೆ; ಆದರೆ ಆಚಾರ್ಯರು ಆ ಪುರಾಣದಿಂದ ಮತ್ತೆಲ್ಲಿಯೂ ವಾಕ್ಯಗಳನ್ನು ಉದಾಹರಿಸಿಲ್ಲ. ಇದು ಮಹಾಭಾರತದಲ್ಲಿಯೇ ಇದ್ದರೂ ಇರಬಹುದು.

೩. ಅವನು ತನ್ನನ್ನು ಮೂರು ಬಗೆಯಾಗಿ ಮಾಡಿಕೊಂಡನು. ಆದಿತ್ಯನನ್ನು ಮೂರನೆಯ (ಭಾಗವಾಗಿ), ವಾಯುವನ್ನು ಮೂರನೆಯ (ಭಾಗವಾಗಿ). ಆ ಈ ಪ್ರಾಣನು ಮೂರು ಬಗೆಯಾಗಿ ಆಗಿರುತ್ತಾನೆ. ಅವನಿಗೆ ಪೂರ್ವದಿಕ್ಕು ತಲೆ. ಇದೂ ಇದೂ ಈರ್ಮಗಳು. ಇನ್ನು ಇವನಿಗೆ ಪಶ್ಚಿಮದಿಕ್ಕು ಪುಚ್ಛವು, ಇದೂ ಇದೂ ಸಕ್ಥಿಗಳು. ದಕ್ಷಿಣವೂ ಉತ್ತರವೂ ಪಕ್ಷಗಳು, ದ್ಯುಲೋಕವು ಬೆನ್ನು, ಅಂತರಿಕ್ಷವು ಉದರವು, ಈ (ಪೃಥ್ವಿಯು) ಎದೆ. ಆ ಈತನು ಅಪ್ಪಿನಲ್ಲಿ ನಿಂತಿರುತ್ತಾನೆ. ಹೀಗೆಂದು ಅರಿತವನು ಎಲ್ಲಿಗೆ ಹೋದರೂ (ಅಲ್ಲಿಯೇ) ಪ್ರತಿಷ್ಠೆಯನ್ನು ಹೊಂದುತ್ತಾನೆ.

(ಭಾಷ್ಯ)

೩೦. ಸ ಚ ಜಾತಃ ಪ್ರಜಾಪತಿಃ ತ್ರೇಧಾ ತ್ರಿಪ್ರಕಾರಮ್ ಆತ್ಮಾನಂ ಸ್ವಯಮೇವ ಕಾರ್ಯಕರಣಸಂಘಾತಂ ವ್ಯಕುರುತ ವ್ಯಭಜತ್ ಇತ್ಯೇತತ್। ಕಥಂ ತ್ರೇಧಾ ಇತಿ? ಆಹ। ಆದಿತ್ಯಂ ತೃತೀಯಮ್ ಅಗ್ನಿವಾಯ್ವಪೇಕ್ಷಯಾ ತ್ರಯಾಣಾಂ ಪೂರಣಮ್ ಅಕುರುತ ಇತಿ ಅನುವರ್ತತೇ। ತಥಾ ಅಗ್ನ್ಯಾದಿತ್ಯಾಪೇಕ್ಷಯಾ ವಾಯುಂ ತೃತೀಯಮ್। ತಥಾ ವಾಯ್ವಾದಿತ್ಯಾಪೇಕ್ಷಯಾ ಅಗ್ನಿಂ ತೃತೀಯಮ್ ಇತಿ ದ್ರಷ್ಟವ್ಯಮ್। ಸಾಮರ್ಥ್ಯಸ್ಯ ತುಲ್ಯತ್ವಾತ್ ತ್ರಯಾಣಾಂ ಸಙ್ಖ್ಯಾಪೂರಣತ್ವೇ। ಸ ಏಷ ಪ್ರಾಣಃ ಸರ್ವಭೂತಾನಾಮ್ ಆತ್ಮಾಪಿ ಅಗ್ನಿವಾಯ್ವಾದಿತ್ಯರೂಪೇಣ ವಿಶೇಷತಃ ಸ್ವೇನೈವ ಮೃತ್ಯ್ವಾತ್ಮನಾ ತ್ರೇಧಾ ವಿಹಿತಃ ವಿಭಕ್ತಃ ನ ವಿರಾಟ್ಸ್ವರೂಪೋಪಮರ್ದನೇನ ||

(ಭಾಷ್ಯಾರ್ಥ)

ಆ ಹುಟ್ಟಿದ ಪ್ರಜಾಪತಿಯು[1] ಮೂರು ಬಗೆಯಾಗಿ ಮೂರು ಪ್ರಕಾರವಾಗಿ ತನ್ನನ್ನು ತಾನೇ ಕಾರ್ಯಕರಣಸಂಘಾತವನ್ನು ಮಾಡಿಕೊಂಡನು, ವಿಂಗಡಿಸಿಕೊಂಡನು ಎಂದರ್ಥ. ಮೂರು ಬಗೆ ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ; ಆದಿತ್ಯನನ್ನು ಅಗ್ನಿವಾಯುಗಳ ಅಪೇಕ್ಷೆಯಿಂದ ಮೂರನೆಯವನನ್ನಾಗಿ ಮೂವರ ಪೂರಣನನ್ನಾಗಿ ಮಾಡಿಕೊಂಡನು ಎಂದು ಸೇರಿಕೊಂಡು ಬಂದಿರುತ್ತದೆ. ಹಾಗೆಯೇ ಅಗ್ನಿ, ಆದಿತ್ಯ–ಇವರ ಅಪೇಕ್ಷೆಯಿಂದ ವಾಯುವನ್ನು ಮೂರನೆಯವನನ್ನಾಗಿ (ಮಾಡಿಕೊಂಡನು); ಇದರಂತೆ ವಾಯ್ವಾದಿತ್ಯರ ಅಪೇಕ್ಷೆಯಿಂದ ಅಗ್ನಿಯನ್ನು ಮೂರನೆಯವನನ್ನಾಗಿ (ಮಾಡಿಕೊಂಡನು) ಎಂದು ಅಧ್ಯಾಹಾರಮಾಡಿ

1. ವಿರಾಟ್ಪುರುಷನು.

ಕೊಳ್ಳಬೇಕು. ಏಕೆಂದರೆ (ಮೂರೆಂಬ) ಸಂಖ್ಯೆಯನ್ನು ಪೂರಣಮಾಡುವದರಲ್ಲಿ ಮೂವರಿಗೂ ಸಮಾನವಾದ ಸಾಮರ್ಥ್ಯವಿರುತ್ತದೆ.

ಆ ಈ ಪ್ರಾಣನು ಎಲ್ಲಾ ಭೂತಗಳಿಗೂ ಆತ್ಮನಾದರೂ ವಿಶೇಷವಾಗಿ ಅಗ್ನಿ ವಾಯ್ವಾದಿತ್ಯರ ರೂಪದಿಂದ ತನ್ನದೇ ಆದ ಮೃತ್ಯುರೂಪದಿಂದ ವಿಭಕ್ತನಾಗಿರುತ್ತಾನೆ, ವಿರಾಟ್ಸ್ವರೂಪವನ್ನು ನಾಶಗೊಳಿಸಿಕೊಂಡು (ಹಾಗೆ ವಿಂಗಡ)ವಾಗಿಲ್ಲ[1].

(ಭಾಷ್ಯ)

೩೧. ತಸ್ಯಾಸ್ಯ ಪ್ರಥಮಜಸ್ಯ ಅಗ್ನೇಃ ಅಶ್ವಮೇಧೌಪಯೋಗಿಕಸ್ಯ ಅರ್ಕಸ್ಯ ವಿರಾಜಃ ಚಿತ್ಯಾತ್ಮಕಸ್ಯ ಅಶ್ವಸ್ಯೇವ ದರ್ಶನಮ್ ಉಚ್ಯತೇ । ಸರ್ವಾ ಹಿ ಪೂರ್ವೋಕ್ತಾ ಉತ್ಪತ್ತಿಃ ಅಸ್ಯ ಸ್ತುತ್ಯರ್ಥಾ ಇತಿ ಅವೋಚಾಮ । 'ಇತ್ಥಮ್ ಅಸೌ ಶುದ್ಧಜನ್ಮಾ' ಇತಿ । ತಸ್ಯ ಪ್ರಾಚೀ ದಿಕ್ ಶಿರಃ । ವಿಶಿಷ್ಟತ್ವಸಾಮಾನ್ಯಾತ್ । ಅಸೌ ಚ ಅಸೌ ಚ ಐಶಾನ್ಯಾಗ್ನೇಯ್ಯೌ ಈರ್ಮೌ ಬಾಹೂ । ಈರಯತೇರ್ಗತಿಕರ್ಮಣಃ । ಅಥಾಸ್ಯ ಅಗ್ನೇಃ ಪ್ರತೀಚೀ ದಿಕ್ ಪುಚ್ಛಂ ಜಘನ್ಯೋ ಭಾಗಃ । ಪ್ರಾಙ್ಮುಖಸ್ಯ ಪ್ರತ್ಯಗ್ದಿಕ್ಸಂಬನ್ಧಾತ್ । ಅಸೌ ಚ ಅಸೌ ಚ ವಾಯವ್ಯನೈರ್ಋತ್ಯೌ ಸಕ್ಥ್ಯೌ ಸಕ್ಥಿನೀ । ಪೃಷ್ಠಕೋಣತ್ವಸಾಮಾನ್ಯಾತ್ । ದಕ್ಷಿಣಾ ಚ ಉದೀಚೀ ಚ ಪಾರ್ಶ್ವೇ । ಉಭಯದಿಕ್ಸಂಬನ್ಧಸಾಮಾನ್ಯಾತ್ । ದ್ಯೌಃ ಪೃಷ್ಠಮ್ ಅನ್ತರಿಕ್ಷಮ್ ಉದರಮ್ ಇತಿ ಪೂರ್ವವತ್ । ಇಯಮ್ ಉರಃ । ಅಧೋಭಾಗಸಾಮಾನ್ಯಾತ್ । ಸ ಏಷೋಽಗ್ನಿಃ ಪ್ರಜಾಪತಿರೂಪಃ ಲೋಕಾದ್ಯಾತ್ಮಕಃ ಅಗ್ನಿಃ ಅಪ್ಸು ಪ್ರತಿಷ್ಠಿತಃ । "ಏವಮಿಮೇ ಲೋಕಾ ಅಪ್ಸ್ವನ್ತಃ"(?) ಇತಿ ಶ್ರುತೇಃ । ಯತ್ರ ಕ್ವಚ ಯಸ್ಮಿನ್ ಕಸ್ಮಿಂಶ್ಚಿತ್ ಏತಿ ಗಚ್ಛತಿ ತದೇವ ತತ್ರೈವ ಪ್ರತಿತಿಷ್ಠತಿ ಸ್ಥಿತಿಂ ಲಭತೇ । ಕೋಽಸೌ ? ಏವಂ ಯಥೋಕ್ತಮ್ ಅಪ್ಸು ಪ್ರತಿಷ್ಠಿತತ್ವಮ್ ಅಗ್ನೇಃ ವಿದ್ವಾನ್ ವಿಜಾನನ್ । ಗುಣಫಲಮೇತತ್ ॥

(ಭಾಷ್ಯಾರ್ಥ)

ಆ ಈ ಮೊದಲು ಹುಟ್ಟಿದ ಅಶ್ವಮೇಧಕ್ಕೆ ಉಪಯೋಗವಾಗುವ ಅಗ್ನಿಯು, ಅರ್ಕನ, ವಿರಾಜನ, ಚಿತ್ಯಾತ್ಮಕನಾದ (ಅಗ್ನಿಯು)[2] ಉಪಾಸನೆಯನ್ನು, ಕುದುರೆಯು

---

1. ಮಣ್ಣು, ಮಡಿಕೆಕುಡಿಕೆಗಡಿಗೆಗಳಾದರೂ ಮಣ್ಣಿನ ಸ್ವರೂಪವನ್ನು ಬಿಡದೆ ಇರುವಂತೆ ಅಗ್ನಿವಾಯ್ವಾದಿತ್ಯರಾದಾಗಲೂ ವಿರಾಡ್ರೂಪವನ್ನು ಇಟ್ಟುಕೊಂಡೇ ಇದ್ದನು ಎಂದರ್ಥ.

2. ಅಶ್ವಮೇಧದಲ್ಲಿ ಉಪಯೋಗಿಸುವ ಅಗ್ನಿಯನ್ನೇ ಹಿಂದೆ ಅರ್ಕ, ವಿರಾಟ್–ಎಂಬು ನಾವು ಹೇಳಿರುವಮ ಎಂದರ್ಥ. ಚಿತ್ಯಾಗ್ನಿ ಅಲ್ಲಿ ಹೊತ್ತಿಸಿ ಉಪಯೋಗಿಸುವ ಅಗ್ನಿ.

(ಉಪಾಸನೆಯನ್ನು ಹೇಳಿ)ದಂತೆಯೇ ಹೇಳಲಾಗುವದು. ಹಿಂದೆ ಹೇಳಿರುವ (ಅಗ್ನಿಯ) ಉತ್ಪತ್ತಿಯೆಲ್ಲವೂ ಈ (ಅಗ್ನಿಯು) ಅಂಥ ಶುದ್ಧಜನ್ಮವುಳ್ಳಾತನು ಎಂದು (ಅಗ್ನಿಯನ್ನು) ಹೊಗಳುವದಕ್ಕೆ (ಬಂದಿದೆ) ಎಂದು (ಹಿಂದೆ)[1] ಹೇಳಿರುತ್ತೇವೆ. ಆ (ಅಗ್ನಿಗೆ) ಪೂರ್ವದಿಕ್ಕು ತಲೆ; ಏಕೆಂದರೆ ಪ್ರಧಾನವಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿದೆ. ಇದೂ ಇದೂ ಎಂದರೆ ಈಶಾನ್ಯ, ಆಗ್ನೇಯ (ದಿಕ್ಕುಗಳು) ಈರ್ಮಗಳು, ಬಾಹುಗಳು. ಗತಿ ಎಂಬ ಕ್ರಿಯೆಯನ್ನು ಹೇಳುವ ಈರ್ ಧಾತುವಿನಿಂದ (ಈರ್ಮಶಬ್ದವು ಹುಟ್ಟಿರುತ್ತದೆ). ಇನ್ನೂ ಈ ಅಗ್ನಿಯ ಪಶ್ಚಿಮದಿಕ್ಕು ಪುಚ್ಛವು, ಕೆಳಭಾಗವು; ಏಕೆಂದರೆ ಪೂರ್ವಾಭಿಮುಖನಾಗಿರುವವನ (ಹಿಂಭಾಗಕ್ಕೆ) ಪಶ್ಚಿಮದಿಕ್ಕಿನ ಸಂಬಂಧವಿರುತ್ತದೆ. ಇದೂ ಇದೂ ಎಂದರೆ ವಾಯುವ್ಯನೈರುತ್ಯ(ದಿಕ್ಕುಗಳು) ಸಕ್ಥಿಗಳು, (ಸಕ್ಥ್ಯೌ=ಸಕ್ಥಿನೀ). ಏಕೆಂದರೆ ಹಿಂದಿನ ಮೂಲೆಯಾಗಿರುವದು (ಎರಡಕ್ಕೂ) ಸಮಾನವಾಗಿರುತ್ತದೆ. ದಕ್ಷಿಣವೂ ಉತ್ತರವೂ ಪಕ್ಕಗಳು; ಏಕೆಂದರೆ ಎರಡು ದಿಕ್ಕುಗಳೂ ಸಂಬಂಧಿಸಿರುವದು (ಎರಡಕ್ಕೂ) ಸಮಾನವಾಗಿರುತ್ತದೆ. ದ್ಯುಲೋಕವು ಬೆನ್ನು, ಅಂತರಿಕ್ಷವು ಹೊಟ್ಟೆ- ಎಂಬುದನ್ನು ಹಿಂದಿನಂತೆ[2] (ವ್ಯಾಖ್ಯಾನಮಾಡಿಕೊಳ್ಳಬೇಕು). ಈ (ಪೃಥ್ವಿಯು) ಎದೆ; ಏಕೆಂದರೆ ಕೆಳಭಾಗವಾಗಿರುವದು (ಎರಡಕ್ಕೂ) ಸಮಾನವಾಗಿರುತ್ತದೆ.

ಪ್ರಜಾಪತಿರೂಪನಾದ ಲೋಕವೇ ಮುಂತಾದ ಸ್ವರೂಪದಲ್ಲಿರುವ ಆ ಈ ಅಗ್ನಿಯು ಅಪ್ಪಿನಲ್ಲಿ ನಿಂತಿರುತ್ತಾನೆ. "ಹೀಗೆ ಈ ಲೋಕಗಳು ನೀರಿನೊಳಗೆ ಇರುತ್ತವೆ"(?) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು). ಎಲ್ಲೆಲ್ಲಿ ಹೋದರೂ ಯಾವ ಯಾವ (ದೇಶಕ್ಕೆ) ಹೋದರೂ ಅಲ್ಲಿಯೇ (ತದೇವ=ತತ್ರೈವ) ಪ್ರತಿಷ್ಠಿತನಾಗುತ್ತಾನೆ, (ಹೀಗೆ ಪ್ರತಿಷ್ಠಿತನಾಗುವ)ವನು ಯಾರು? ಎಂದರೆ ಮೇಲೆ ಹೇಳಿದಂತೆ ಅಗ್ನಿಯು ನೀರಿನಲ್ಲಿ ನೆಲೆನಿಂತಿರುತ್ತಾನೆಂಬುದನ್ನು ಅರಿತವನು, ತಿಳಿದುಕೊಂಡು (ಉಪಾಸನೆ)ಮಾಡಿದವನು (ಹೀಗೆ ಪ್ರತಿಷ್ಠಿತನಾಗುತ್ತಾನೆ). ಇದು ಗುಣಫಲವು.[3]

---

1. ಭಾ. ಭಾ. ೧೩ರಲ್ಲಿ.

2. ಅಶ್ವದ ಉಪಾಸನೆಯಲ್ಲಿ ಹೇಳಿರುವಂತೆ.

3. ಪ್ರಧಾನಫಲವನ್ನು ಮುಂದೆ 'ಪುನರ್ಮೃತ್ಯುವನ್ನು ಜಯಿಸುತ್ತಾನೆ' ಎಂದು ಏಳನೆಯ ಮಂತ್ರದಲ್ಲಿ ಹೇಳಲಾಗುತ್ತದೆ. ಇಲ್ಲಿ ಹೇಳಿರುವದು ಅಪ್ಪಿನಲ್ಲಿ ಅಗ್ನಿಯು ನೆಲೆನಿಂತಿರುತ್ತಾನೆಂದು ಉಪಾಸನೆಮಾಡಿದವನಿಗೆ ಆಗುವ ಅಂಗಫಲ.

## ಸಂವತ್ಸರವಾಕ್ಕುಗಳ ಉತ್ಪತ್ತಿ

(ಉಪನಿಷತ್ತು)

**ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮನಸಾ ವಾಚಂ ಮಿಥುನಗ್ಂ ಸಮಭವದಶನಾಯಾಮೃತ್ಯುಸ್ತದ್ಯದ್ರೇತ ಆಸೀತ್ ಸ ಸಂವತ್ಸರೋಽಭವತ್। ನ ಹ ಪುರಾ ತತಃ ಸಂವತ್ಸರ ಆಸ ತಮೇತಾವನ್ತಂ ಕಾಲಮಬಿಭಃ। ಯಾವಾನ್ ಸಂವತ್ಸರಸ್ತಮೇ ತಾವತಃ ಕಾಲಸ್ಯ ಪರಸ್ತಾದಸೃಜತ। ತಂ ಜಾತಮಭಿವ್ಯಾದದಾತ್ ಸ ಭಾಣಕರೋತ್ ಸೈವ ವಾಗಭವತ್ ॥ ೪ ॥**

೪. ಅವನು 'ನನಗೆ ಎರಡನೆಯ ಆತ್ಮವು ಹುಟ್ಟಲಿ!' ಎಂದು ಕಾಮಿಸಿದನು. ಆ ಅಶನಾಯಾಮೃತ್ಯುವು ಮನಸ್ಸಿನಿಂದ ವಾಕ್ಕನ್ನು ಮಿಥುನವನ್ನು ಹೊಂದಿದನು. ಆದರಿಂದ ಯಾವ ರೇತಸ್ಸಾಯಿತೋ ಅದು ಸಂವತ್ಸರವಾಯಿತು. ಅವನಿಗಿಂತ ಪೂರ್ವದಲ್ಲಿ ಸಂವತ್ಸರವಿರಲಿಲ್ಲ. ಅವನನ್ನು ಸಂವತ್ಸರವು ಎಷ್ಟಾಗುತ್ತದೆಯೋ ಅಷ್ಟು ಕಾಲ ಧರಿಸಿದ್ದನು. ಅಷ್ಟು ಕಾಲವಾದ ಬಳಿಕ ಸೃಜಿಸಿದನು. ಆ ಹುಟ್ಟಿದ (ಕುಮಾರನನ್ನು ನೋಡಿ) ಬಾಯಿತೆರೆದನು. ಅವನು ಭಾಣ್ (ಎಂಬ ಶಬ್ದವನ್ನು) ಮಾಡಿದನು; ಅದೇ ವಾಕ್ಕಾಯಿತು.

(ಭಾಷ್ಯ)

೩೨. 'ಸೋಽಕಾಮಯತ'। ಯೋಽಸೌ ಮೃತ್ಯುಃ ಸಃ ಅಬಾದಿಕ್ರಮೇಣ ಆತ್ಮನಾ ಆತ್ಮಾನಮ್ ಅಣ್ಡಸ್ಯಾನ್ತಃ ಕಾರ್ಯಕರಣಸಂಘಾತವನ್ತಂ ವಿರಾಜಮ್ ಅಗ್ನಿಮ್ ಅಸೃಜತ ತ್ರೇಧಾ ಚ ಆತ್ಮಾನಮ್ ಅಕುರುತ ಇತ್ಯುಕ್ತಮ್। ಸ ಕಿಂ ವ್ಯಾಪಾರಃ ಸನ್ ಅಸೃಜತ ಇತಿ? ಉಚ್ಯತೇ। ಸ ಮೃತ್ಯುಃ ಅಕಾಮಯತ ಕಾಮಿತವಾನ್। ಕಿಮ್? ದ್ವಿತೀಯೋ ಮೇ ಮಮ ಆತ್ಮಾ ಶರೀರಂ ಯೇನ ಅಹಂ ಶರೀರೀ ಸ್ಯಾಂ ಸ ಜಾಯೇತ ಉತ್ಪದ್ಯೇತ ಇತಿ ಏವಮ್ ಏತತ್ ಅಕಾಮಯತ। ಸ ಏವಂ ಕಾಮಯಿತ್ವಾ ಮನಸಾ ಪೂರ್ವೋತ್ಪನ್ನೇನ ವಾಚಂ ತ್ರಯೀಲಕ್ಷಣಾಂ ಮಿಥುನಂ ದ್ವಂದ್ವಭಾವಂ ಸಮಭವತ್ ಸಂಭವನಂ ಕೃತವಾನ್ ಮನಸಾ ತ್ರಯೀಮ್ ಆಲೋಚಿತವಾನ್। ತ್ರಯೀವಿಹಿತಂ ಸೃಷ್ಟಿಕ್ರಮಂ ಮನಸಾ ಅನ್ವಾಲೋಚಯತ್ ಇತ್ಯರ್ಥಃ। ಕೋಽಸೌ? ಅಶನಾಯಯಾ ಲಕ್ಷಿತೋ ಮೃತ್ಯುಃ। ಅಶನಾಯಾ ಮೃತ್ಯುಃ ಇತ್ಯುಕ್ತಮ್। ತಮೇವ ಪರಾಮೃಶತಿ ಅನ್ಯತ್ರ

ಪ್ರಸಜ್ಯೋ ಮಾ ಭೂತ್ ಇತಿ | 'ತದ್ ಯದ್ ರೇತ ಆಸೀತ್' | ತತ್ ತತ್ರ ಮಿಥುನೇ ಯದ್ ರೇತಃ ಆಸೀತ್ ಪ್ರಥಮಶರೀರಿಣಃ ಪ್ರಜಾಪತೇಃ ಉತ್ಪತ್ತೌ ಕಾರಣಂ ರೇತಃ ಬೀಜಂ ಜ್ಞಾನಕರ್ಮರೂಪಮ್, ತ್ರಯ್ಯಾಲೋಚನಾಯಾಂ ಯದ್ ದೃಷ್ಟವಾನ್ ಆಸೀತ್ ಜನ್ಮಾನ್ತರಕೃತಂ ತದ್ಭಾವಭಾವಿತಃ ಅಪಃ ಸೃಷ್ಟ್ವಾ ತೇನ ರೇತಸಾ ಬೀಜೇನ ಅಪ್ಸು ಅನುಪ್ರವಿಶ್ಯ ಅಣ್ಡರೂಪೇಣ ಗರ್ಭೀಭೂತಃ, ಸ ಸಂವತ್ಸರೋऽಭವತ್ ಸಂವತ್ಸರಕಾಲನಿರ್ಮಾತಾ ಸಂವತ್ಸರಃ ಪ್ರಜಾಪತಿಃ ಅಭವತ್ | ನ ಹ ಪುರಾ ಪೂರ್ವಂ ತತಃ ತಸ್ಮಾತ್ ಸಂವತ್ಸರಕಾಲನಿರ್ಮಾತುಃ ಪ್ರಜಾಪತೇಃ ಸಂವತ್ಸರಃ ಕಾಲೋ ನಾಮ ನ ಆಸ ನ ಬಭೂವ ಹ| ತಂ ಸಂವತ್ಸರ ಕಾಲನಿರ್ಮಾತಾರಮ್ ಅನ್ತರ್ಗರ್ಭಂ ಪ್ರಜಾಪತಿಂ ಯಾವಾನ್ ಇಹ ಪ್ರಸಿದ್ಧಃ ಕಾಲಃ ಏತಾವನ್ತಮ್ ಏತಾವತ್ಸಂವತ್ಸರಪರಿಮಾಣಂ ಕಾಲಮ್ ಅಬಿಭಃ ಭೃತವಾನ್ ಮೃತ್ಯುಃ | ಯಾವಾನ್ ಸಂವತ್ಸರಃ ಇಹ ಪ್ರಸಿದ್ಧಃ| ತತಃ ಪರಸ್ತಾತ್ ಕಿಂ ಕೃತವಾನ್ ? ತಮ್ ಏತಾವತಃ ಕಾಲಸ್ಯ ಸಂವತ್ಸರಮಾತ್ರಸ್ಯ ಪರಸ್ತಾತ್ ಊರ್ಧ್ವಮ್ ಅಸೃಜತ ಸೃಷ್ಟವಾನ್ ಅಣ್ಡಮ್ ಅಭಿನತ್ ಇತ್ಯರ್ಥಃ ||

(ಭಾಷ್ಯಾರ್ಥ)

ಸೋऽಕಾಮಯತ (ಇತ್ಯಾದಿಕಂಡಿಕೆಯ ಅರ್ಥವಿದು) : ಯಾವ ಈ ಮೃತ್ಯುವಿದ್ದನಲ್ಲ, ಅವನು ಅಪ್ಪು ಮುಂತಾದ ಕ್ರಮದಿಂದ ತಾನೇ ತನ್ನನ್ನು ಅಂಡದೊಳಗೆ ಕಾರ್ಯಕರಣಸಂಘಾತವುಳ್ಳವನನ್ನಾಗಿ ವಿರಾಡ್ರೂಪದ ಅಗ್ನಿಯನ್ನಾಗಿ ಸೃಜಿಸಿಕೊಂಡನು ; ಅವನು ತನ್ನನ್ನು ಮೂರು ಬಗೆಯಾಗಿ ಮಾಡಿಕೊಂಡನು[1] ಎಂದು ಹೇಳಿದ್ದಾಯಿತಷ್ಟೆ. ಅವನು ಯಾವ ವ್ಯಾಪಾರದಿಂದ (ಅಗ್ನಿಯನ್ನು) ಸೃಜಿಸಿದನು ? ಎಂದರೆ (ಶ್ರುತಿ) ಹೇಳುತ್ತಿದೆ.

ಆ ಮೃತ್ಯುವು ಕಾಮಿಸಿದನು, ಬಯಸಿದನು. ಏನೆಂದು ? ನನಗೆ ಎರಡನೆಯದಾದ ಆತ್ಮವು ಶರೀರವು, ಯಾವದಿದ್ದರೆ ನಾನು ಶರೀರಿ ಎಂದೆನಿಸುವೆನೋ, ಅದು ಹುಟ್ಟಲಿ, ಉಂಟಾಗಲಿ ಎಂದೀಪರಿಯಲ್ಲಿ ಇದನ್ನು ಕಾಮಿಸಿದನು. ಅವನು ಹೀಗೆಂದು ಕಾಮಿಸಿ ಮೊದಲು ಹುಟ್ಟಿದ ಮನಸ್ಸಿನಿಂದ[2] ತ್ರಯೀರೂಪವಾದ

---

1. ಮೃತ್ಯುವು ಎಂದರೆ ಹಿರಣ್ಯಗರ್ಭನು ಸೂಕ್ಷ್ಮಸಮಷ್ಟಿರೂಪನಾಗಿದ್ದು ಸ್ಥೂಲರೂಪನಾದ ವಿರಾಟ್ಪುರುಷನಾದನು, ಆ ವಿರಾಡ್ರೂಪನನ್ನು ನಾಶಗೊಳಿಸದೆ ಆದಿತ್ಯ, ವಾಯು, ಅಗ್ನಿ-ಎಂದು ಮೂರು ದೇವತೆಗಳೂ ಆದನು ಎಂದು ಅಗ್ನಿಯ ಉತ್ಪತ್ತಿಯನ್ನು ಹಿಂದೆ ಹೇಳಿದೆ.

2. ಆ ಮನಸ್ಸನ್ನು ಅಭಿವ್ಯಕ್ತಿಗೊಳಿಸಿಕೊಂಡು ಮನಸ್ಸುಳ್ಳವನಾದನು ಎಂದು (೧-೨-೧) ಹಿಂದೆ ಹೇಳಿದೆ.

ವಾಕ್ಕನ್ನು ಮಿಥುನವನ್ನು ಎಂದರೆ ದ್ವಂದ್ವಭಾವವನ್ನು ಹೊಂದಿದನು, ಸೇರಿದನು ; ಮನಸ್ಸಿನಿಂದ ತ್ರಯಿಯನ್ನು ಆಲೋಚಿಸಿದನು, ತ್ರಯೀವಿಹಿತವಾಗಿರುವ ಸೃಷ್ಟಿ ಕ್ರಮವನ್ನು ಮನಸ್ಸಿನಿಂದ ಅನ್ವಾಲೋಚನೆಮಾಡಿದನು ಎಂದರ್ಥ[1]. (ಹೀಗೆ ಮಾಡಿದನಲ್ಲ), ಅವನು ಯಾರು ? ಎಂದರೆ ಅಶನಾಯದಿಂದ ಲಕ್ಷಿತನಾದ ಮೃತ್ಯುವು. ಅಶನಾಯವೇ ಮೃತ್ಯು ಎಂದು (೧-೨-೧) ಹೇಳಿತ್ತು ; ಮತ್ತೊಬ್ಬನಲ್ಲಿ ಪ್ರಸಕ್ತಿಯಾಗಬಾರದೆಂದು[2] ಅವನನ್ನೇ (ಶ್ರುತಿಯು) ಪರಾಮರ್ಶಿಸಿರುತ್ತದೆ. 'ತದ್ಯತ್ರ ರೇತ ಆಸೀತ್' (ಎಂಬುದರ ಅರ್ಥವೇನೆಂದರೆ) ತತ್ ಆ ಮಿಥುನದಲ್ಲಿ ಯಾವ ರೇತಸ್ಸು ಉಂಟಾಯಿತೋ, ಪ್ರಥಮಶರೀರಿಯಾದ ಪ್ರಜಾಪತಿಯ ಉತ್ಪತ್ತಿಗೆ ಕಾರಣವಾದ ರೇತಸ್ಸನ್ನು ಜನ್ಮಾಂತರಕೃತವಾದ ಯಾವ ಜ್ಞಾನಕರ್ಮ ರೂಪವಾದ ಬೀಜವನ್ನು ತ್ರಯಿಯ ಆಲೋಚನೆಯಲ್ಲಿ ತದ್ಭಾವಭಾವಿತನಾಗಿ ಕಂಡುಕೊಂಡನೋ, ಅಪ್ಪನ್ನು ಸೃಜಿಸಿ ಆ ರೇತಸ್ಸಿನಿಂದ ಬೀಜದಿಂದ ಅಪ್ಪಿನೊಳಗೆ ಒಳಹೊಕ್ಕು ಅಂಡರೂಪದಿಂದ ಗರ್ಭವಾಗಿ ಅವನು ಸಂವತ್ಸರನಾದನು, ಎಂದರೆ ಸಂವತ್ಸರಕಾಲವನ್ನು ನಿರ್ಮಿಸುವ ಸಂವತ್ಸರನೆಂಬ ಪ್ರಜಾಪತಿಯಾದನು. ಅವನಿಗಿಂತ ಎಂದರೆ ಸಂವತ್ಸರಕಾಲನಿರ್ಮಾತೃವಾದ ಪ್ರಜಾಪತಿಗಿಂತ ಮುಂಚೆ ಸಂವತ್ಸರವು ಕಾಲವೆಂಬುದು ಇರಲಿಲ್ಲ, ಇದ್ದದ್ದಿಲ್ಲ. ಆ ಸಂವತ್ಸರಕಾಲ ನಿರ್ಮಾತೃವಾದ ಪ್ರಜಾಪತಿಯನ್ನು ಗರ್ಭದೊಳಗೆ ಇಲ್ಲಿ (ಸಂವತ್ಸರ)ಕಾಲವು ಎಷ್ಟೆಂದು ಪ್ರಸಿದ್ಧವಾಗಿರುವದೋ ಅಷ್ಟು ಸಂವತ್ಸರಪರಿಮಾಣದ ಕಾಲದವರೆಗೂ ಧರಿಸಿದ್ದನು, ಮೃತ್ಯುವು (ಗರ್ಭದಲ್ಲಿ) ಇಟ್ಟುಕೊಂಡಿದ್ದನು. ಅವನನ್ನು ಇಷ್ಟು ಕಾಲದ ಎಂದರೆ ಸಂವತ್ಸರಪರಿಮಾಣದ (ಕಾಲದ) ಬಳಿಕ ಆಮೇಲೆ ಸೃಜಿಸಿದನು, ಸೃಷ್ಟಿಮಾಡಿದನು ; ಅಂಡವನ್ನು ಒಡೆದನು ಎಂದರ್ಥ.[3]

(ಭಾಷ್ಯ)

೩೩. ತಮ್ ಏವಂ ಕುಮಾರಂ ಜಾತಮ್ ಅಗ್ನಿಮ್ ಪ್ರಥಮಶರೀರಿಣಮ್ ಅಶನಾಯಾವತ್ತ್ವಾತ್ ಮೃತ್ಯುಃ ಅಭಿವ್ಯಾದದಾತ್ ಮುಖವಿದಾರಣಂ ಕೃತ ವಾನ್ ಅತ್ತುಮ್। ಸ ಚ ಕುಮಾರಃ ಭೀತಃ ಸ್ವಾಭಾವಿಕ್ಯಾ ಅವಿದ್ಯಯಾ ಯುಕ್ತಃ

---

1. ಶ್ರುತಿಸಿದ್ಧವಾದ ಸೃಷ್ಟಿಕ್ರಮವನ್ನನುಸರಿಸಿ ಆಲೋಚನೆಮಾಡಿದ್ದೇ ಮಿಥುನ ಕರ್ಮವು ; ಲೋಕಪ್ರಸಿದ್ಧವಾದ ಮಿಥುನವೇನೂ ಇಲ್ಲಿಲ್ಲ ಎಂದು ಭಾವ.

2. ವಿರಾಟ್ಪುರುಷನಲ್ಲ ಎಂದು ತಿಳಿಸುವದಕ್ಕಾಗಿ ಮೊದಲು ಹೇಳಿದ್ದ ಅಶನಾಯ (ಹಸಿವು) ಎಂಬ ಲಕ್ಷಣವುಳ್ಳ ಮೃತ್ಯು ಎಂದು ಹಿರಣ್ಯಗರ್ಭನನ್ನು ಪರಾಮರ್ಶಿಸಿದೆ ಎಂದರ್ಥ.

3. ಒಂದು ಸಂವತ್ಸರದಷ್ಟುಕಾಲ ಗರ್ಭದಲ್ಲಿಟ್ಟುಕೊಂಡದ್ದರಿಂದ ವಿರಾಡ್ರೂಪಪ್ರಜಾ ಪತಿಗೆ ಸಂವತ್ಸರನೆಂದೇ ಹೆಸರಾಯಿತು ಎಂದು ಅಭಿಪ್ರಾಯ.

ಭಾಣ್ ಇತ್ಯೇವಂ ಶಬ್ದಮ್ ಅಕರೋತ್ ಸೈವ ವಾಕ್ ಅಭವತ್ | ವಾಕ್ ಶಬ್ದೋಽಭವತ್ ||

(ಭಾಷ್ಯಾರ್ಥ)

ಹೀಗೆ ಹುಟ್ಟಿದ ಆ ಕುಮಾರನನ್ನು ಅಗ್ನಿಯನ್ನು, (ಆ) ಪ್ರಥಮಶರೀರಿಯನ್ನು (ನೋಡಿ) ಮೃತ್ಯುವು ಹಸಿವುಳ್ಳವನಾದ್ದರಿಂದ ಬಾಯಿತೆರೆದನು, ತಿನ್ನುವದಕ್ಕೆ ಬಾಯಿಯನ್ನು ಅಗಲಿಸಿದನು. ಆ ಕುಮಾರನು ಸ್ವಾಭಾವಿಕವಾದ ಅವಿದ್ಯೆಯಿಂದ ಕೂಡಿದವನಾದ್ದರಿಂದ ಹೆದರಿಕೊಂಡು[1] ಭಾಣ್ ! ಎಂದಿಂತು ಶಬ್ದವನ್ನು ಮಾಡಿದನು. ಅದೇ ವಾಕ್ಕಾಯಿತು, ವಾಕ್ಕು ಎಂದರೆ ಶಬ್ದವು[2] ಆಯಿತು.

## ಋಗಾದಿಗಳ ಉತ್ಪತ್ತಿ, ಮೃತ್ಯುವಿನ ಅದಿತಿತ್ವ

(ಉಪನಿಷತ್ತು)

**ಸ ಐಕ್ಷತ ಯದಿ ವಾ ಇಮಮಭಿಮಗ್ಂಸ್ಯೇ ಕನೀಯೋಽನ್ನಂ ಕರಿಷ್ಯ ಇತಿ ಸ ತಯಾ ವಾಚಾ ತೇನಾಽಽತ್ಮನೇದಗ್ಂ ಸರ್ವಮಸೃಜತ ಯದಿದಂ ಕಿಂಚರ್ಚೋ ಯಜೂಗ್ಂಷಿ ಸಾಮಾನಿ ಛನ್ದಾಗ್ಂಸಿ ಯಜ್ಞಾನ್ ಪ್ರಜಾಃ ಪಶೂನ್ | ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಗ್ಂ ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ || ೫ ||**

೫. ಅವನು "ಇವನನ್ನು (ನಾನು) ಕೊಂದರೆ (ಬಹು) ಸ್ವಲ್ಪ ಅನ್ನವನ್ನು ಮಾಡಿದವನಾಗುವೆನು'' ಎಂದು (ಆಲೋಚಿಸಿ) ನೋಡಿದನು. ಅವನು ಆ ವಾಕ್ಕಿನಿಂದ ಆ ಆತ್ಮದಿಂದ ಇದೆಲ್ಲವನ್ನೂ ಸೃಜಿಸಿದನು. ಋಕ್ಕುಗಳು, ಯಜುಸ್ಸುಗಳು, ಸಾಮಗಳು, ಛಂದಸ್ಸುಗಳು, ಯಜ್ಞಗಳು, ಪ್ರಜೆಗಳು, ಪಶುಗಳು-(ಹೀಗೆ) ಏನೇನಿದೆಯೋ ಇದೆಲ್ಲವನ್ನೂ ಸೃಜಿಸಿದನು. ಅವನು ಯಾವಯಾವದನ್ನು ಸೃಜಿಸಿದನೋ ಅದದನ್ನೇ ತಿನ್ನುವದಕ್ಕೆ (ಮನಸ್ಸನ್ನು) ಧರಿಸಿದನು. ಎಲ್ಲವನ್ನೂ ತಿನ್ನುತ್ತದೆಯಲ್ಲ, ಅದೇ ಅದಿತಿಯ ಅದಿತಿತ್ವವು. ಯಾವನು ಈ ಅದಿತಿಯ ಅದಿತಿತ್ವವನ್ನು ಹೀಗೆಂದು

---

1. ಅವಿದ್ಯೆಯೇ ಅಂಜಿಕೆಗೆ ಕಾರಣವಾಯಿತು.

2. ಶಬ್ದಸಾಮಾನ್ಯವನ್ನೇ ಇಲ್ಲಿ ವಾಕ್ಕು ಎಂದು ಕರೆದಿದೆ, ವಾಗಿಂದ್ರಿಯವನ್ನಲ್ಲ.

ಅರಿತಿರುವನೋ ಅವನು ಇದೆಲ್ಲದರ ಅತ್ತೃವಾಗುವನು, ಎಲ್ಲವೂ ಇವನ ಅನ್ನವಾಗುವದು.

(ಭಾಷ್ಯ)

೩೮. 'ಸ ಐಕ್ಷತ' | ಸ ಏವಂ ಭೀತಂ ಕೃತರವಂ ಕುಮಾರಂ ದೃಷ್ಟ್ವಾ ಮೃತ್ಯುಃ ಐಕ್ಷತ ಈಕ್ಷಿತವಾನ್ ಅಶನಾಯಾವಾನಪಿ | ಯದಿ ಕದಾಚಿತ್ ವೈ ಇಮಂ ಕುಮಾರಮ್ ಅಭಿಮಂಸ್ಯೇ | ಅಭಿಪೂರ್ವೋ ಮನ್ಯತಿರ್ಹಿಂಸಾರ್ಥಃ | ಹಿಂಸಿಷ್ಯೇ ಇತ್ಯರ್ಥಃ | ಕನೀಯೋಽನ್ನಂ ಕರಿಷ್ಯೇ ಕನೀಯೋ ಅಲ್ಪಮ್ ಅನ್ನಂ ಕರಿಷ್ಯೇ ಇತಿ | ಏವಮ್ ಈಕ್ಷಿತ್ವಾ ತದ್ಭಕ್ಷಣಾತ್ ಉಪರರಾಮ | ಬಹು ಹಿ ಅನ್ನಂ ಕರ್ತವ್ಯಂ ದೀರ್ಘಕಾಲಭಕ್ಷಣಾಯ, ನ ಕನೀಯಃ | ತದ್ಭಕ್ಷಣೇ ಹಿ ಕನೀಯೋಽನ್ನಂ ಸ್ಯಾತ್, ಬೀಜಭಕ್ಷಣೇ ಇವ ಸಸ್ಯಾಭಾವಃ | ಸ ಏವಂ ಪ್ರಯೋಜನಮ್ ಅನ್ನಬಾಹುಲ್ಯಮ್ ಆಲೋಚ್ಯ ತಯೈವ ತ್ರಯ್ಯಾ ವಾಚಾ ಪೂರ್ವೋಕ್ತಯಾ ತೇನೈವ ಚ ಆತ್ಮನಾ ಮನಸಾ ಮಿಥುನೀಭಾವಮ್ ಆಲೋಚನಮ್ ಉಪಗಮ್ಯೋಪಗಮ್ಯ ಇದಂ ಸರ್ವಂ ಸ್ಥಾವರಂ ಜಙ್ಗಮಂ ಚ ಅಸೃಜತ ಯದಿದಂ ಕಿಂಚ ಯತ್ಕಿಂಚೇದಮ್ | ಕಿಂ ತತ್ ? ಋಚಃ ಯಜೂಂಷಿ ಸಾಮಾನಿ ಛನ್ದಾಂಸಿ ಚ ಸಪ್ತ ಗಾಯತ್ರ್ಯಾದೀನಿ ಸ್ತೋತ್ರಶಸ್ತ್ರಾದಿಕರ್ಮಾಙ್ಗಭೂತಾನ್ ತ್ರಿವಿಧಾನ್ ಮನ್ತ್ರಾನ್ ಗಾಯತ್ರ್ಯಾದಿಚ್ಛನ್ದೋವಿಶಿಷ್ಟಾನ್, ಯಜ್ಞಾಂಶ್ಚ ತತ್ಸಾಧ್ಯಾನ್, ಪ್ರಜಾಃ ತತ್ಕರ್ತ್ರೀಃ, ಪಶೂಂಶ್ಚ ಗ್ರಾಮ್ಯಾನ್ ಆರಣ್ಯಾನ್ ಕರ್ಮಸಾಧನಭೂತಾನ್ | ನನು ತ್ರಯ್ಯಾ ಮಿಥುನೀಭೂತಯಾ ಅಸೃಜತ ಇತಿ ಉಕ್ತಮ್ | ಋಗಾದೀನಿ ಇಹ ಕಥಮ್ ಅಸೃಜತ ಇತಿ ? ನೈಷ ದೋಷಃ | ಮನಸಸ್ತು ಅವ್ಯಕ್ತೋಽಯಂ ಮಿಥುನೀಭಾವಃ ತ್ರಯ್ಯಾ | ಬಾಹ್ಯಸ್ತು ಋಗಾದೀನಾಂ ವಿದ್ಯಮಾನಾನಾಮೇವ ಕರ್ಮಸು ವಿನಿಯೋಗಭಾವೇನ ವ್ಯಕ್ತೀಭಾವಃ ಸರ್ಗಃ ಇತಿ |

(ಭಾಷ್ಯಾರ್ಥ)

'ಸ ಐಕ್ಷತ' (ಎಂದು ಮುಂತಾಗಿರುವ ಕಂಡಿಕೆಯ ಅರ್ಥವೇನೆಂದರೆ) ಅವನು ಹೀಗೆ ಹೆದರಿ ಕೂಗಿಕೊಂಡ ಕುಮಾರನನ್ನು ಕಂಡು ಮೃತ್ಯುವು ಹಸಿವುಳ್ಳವನಾದರೂ (ಹೀಗೆಂದು ಆಲೋಚಿಸಿ) ನೋಡಿದನು, ನೋಡಿದವನಾದನು. 'ಒಂದು ವೇಳೆ ನಾನು ಈ ಕುಮಾರನನ್ನು ಕೊಂದರೆ–ಅಭಿ ಎಂಬ (ಉಪಸರ್ಗವು) ಮೊದಲಿರುವ ಮನ್‌ಧಾತುವಿಗೆ ಕೊಲ್ಲುವದು ಎಂದರ್ಥ. (ಅಭಿಮಂಸ್ಯೇ ಎಂದರೆ) ಕೊಲ್ಲುವೆನಾದರೆ ಎಂದರ್ಥ. ಕನೀಯವಾದ ಸ್ವಲ್ಪವಾದ ಅನ್ನವನ್ನು ಮಾಡಿಕೊಂಡವನಾಗುವೆನು.' ಹೀಗೆಂದು (ಯೋಚಿಸಿ) ನೋಡಿ ಅವನನ್ನು ತಿನ್ನದೆ ಬಿಟ್ಟುಬಿಟ್ಟನು. ಬಹುಕಾಲ ತಿನ್ನುವದಕ್ಕೆ ಬಹಳ ಅನ್ನವನ್ನು ಮಾಡಬೇಕೇ

ಹೊರತು ಸ್ವಲ್ಪ ಮಾಡಿಕೊಳ್ಳಬಾರದು. ಇವನನ್ನು ತಿಂದರೆ ಸ್ವಲ್ಪ ಅನ್ನವಾದೀತು, ಬೀಜನನ್ನು ತಿಂದರೆ ಪೈರು ಇಲ್ಲವಾಗುವಂತೆ (ಆದೀತು).

ಅವನು ಹೀಗೆ ಅನ್ನವು ಬಹಳವಾಗಬೇಕೆಂಬ ಪ್ರಯೋಜನವನ್ನು ಆಲೋಚಿಸಿಕೊಂಡು ಹಿಂದೆ ಹೇಳಿದ ಅದೇ ತ್ರಯಿ ಎಂಬ ವಾಕ್ಕಿನಿಂದ ಮತ್ತು ಅದೇ ಆತ್ಮದಿಂದ ಎಂದರೆ ಮನಸ್ಸಿನಿಂದ ಆಲೋಚನರೂಪವಾದ ಮಿಥುನೀಭಾವವನ್ನು ಹೊಂದಿ, ಹೊಂದಿ ಈ ಸ್ಥಾವರ, ಜಂಗಮ ಎಲ್ಲವನ್ನೂ ಸೃಜಿಸಿದನು, ಈ ಏನೇನಿದೆಯೋ ಈ ಯಾವಯಾವದಿದೆಯೋ (ಇದೆಲ್ಲವನ್ನೂ ಸೃಜಿಸಿದನು). ಅದು ಯಾವ (ಯಾವದು)? ಎಂದರೆ, ಋಕ್ಕುಗಳು, ಯಜುಸ್ಸುಗಳು, ಸಾಮಗಳು, ಗಾಯತ್ರಿಯೇ ಮುಂತಾದ[1] ಏಳು ಛಂದಸ್ಸುಗಳು, ಎಂದರೆ ಗಾಯತ್ರಿಯೇ ಮುಂತಾದ ಛಂದಸ್ಸಿನಿಂದ ಕೂಡಿದ[2] ಸ್ತೋತ್ರ, ಶಸ್ತ್ರ ಮುಂತಾದ[3] ಕರ್ಮಾಂಗಭೂತವಾದ ಮೂರುಬಗೆಯ ಮಂತ್ರಗಳನ್ನೂ, ಅವುಗಳಿಂದ ಮಾಡುವ ಯಜ್ಞಗಳನ್ನೂ ಅವುಗಳನ್ನು ಮಾಡುವವರಾದ ಪ್ರಜೆಗಳನ್ನೂ, ಕರ್ಮಕ್ಕೆ ಸಾಧನವಾಗಿರುವ ಗ್ರಾಮ್ಯ ಮತ್ತು ಆರಣ್ಯ ಪಶುಗಳನ್ನೂ (ಸೃಜಿಸಿದನು).

(ಆಕ್ಷೇಪ):–ಮಿಥುನೀಭೂತವಾದ ತ್ರಯಿಯಿಂದಲೇ ಸೃಜಿಸಿದನು ಎಂದೇ (ಮೊದಲು) ಹೇಳಿತ್ತು. ಇಲ್ಲಿ ಋಗಾದಿಗಳನ್ನು ಸೃಷ್ಟಿಸಿದನು ಎಂದದ್ದು ಹೇಗೆ ಸರಿ?[4]

(ಪರಿಹಾರ):—ಇದು ತಪ್ಪಲ್ಲ. ಮನಸ್ಸಿಗೆ ತ್ರಯಿಯೊಡನೆ ಆದ ಮಿಥುನೀಭಾವವು ಅವ್ಯಕ್ತವಾದದ್ದು (ಹೊರಗೆ) ಸೃಷ್ಟಿಯಾದದ್ದೋ ಎಂದರೆ ಇದ್ದುಕೊಂಡಿರುವ ಋಗಾದಿಗಳೇ ಕರ್ಮಗಳಲ್ಲಿ ವಿನಿಯೋಗವಾಗುವಂತೆ ವ್ಯಕ್ತವಾಗುವಿಕೆ.[5]

---

1. ಮುಂತಾದ ಎಂಬ ಮಾತಿನಿಂದ ಉಷ್ಣಿಕ್, ಅನುಷ್ಟುಪ್, ಬೃಹತೀ, ಪಙ್ಕ್ತಿ, ತ್ರಿಷ್ಟುಪ್, ಜಗತೀ– ಎಂಬ ಆರನ್ನು ಗ್ರಹಿಸಬೇಕು.

2. ಬರಿಯ ಛಂದಸ್ಸುಗಳ ಸೃಷ್ಟಿ ಎಂದರೆ ಹೊಂದುವದಿಲ್ಲ; ಆದ್ದರಿಂದ ಆ ಛಂದಸ್ಸುಗಳಲ್ಲಿರುವ ಋಗ್ಯಜುಸ್ಸಾಮರೂಪವಾದ ಮಂತ್ರಗಳೆಂದು ಅರ್ಥಮಾಡಿಕೊಳ್ಳಬೇಕು ಎಂದು ಭಾವ.

3. ಉದ್ಗಾತೃಗಳು ಗಾನಮಾಡುವ ಋಕ್ಕು ಸ್ತೋತ್ರವು, ಹೋತೃಗಳು ಪಠಿಸಿದರೆ ಅದೇ ಶಸ್ತ್ರವೆನಿಸುವದು. ಗಾನಮಾಡದೆ ಶಂಸನಮಾಡದೆ ಅಧ್ವರ್ಯುಗಳು ಹೇಳುವದನ್ನು ಆದಿ ಪದದಿಂದ ಗ್ರಹಿಸಬೇಕು.

4. ತ್ರಯೀ ಎಂದರೆ ಋಗಾದಿಗಳು; ಅವೇ ಸೃಷ್ಟಿಗೆ ಸಾಧನ. ಇಲ್ಲಿ ಅವೇ ಸೃಷ್ಟವಾದವೆಂದು ಹೇಳಿದ್ದು ಹೇಗೆ?–ಎಂದು ಆಕ್ಷೇಪ.

5. ಇದ್ದ ಮನಸ್ಸನ್ನೇ ಅಭಿವ್ಯಕ್ತಿಮಾಡಿದ್ದು ಹೇಗೆ ಸೃಷ್ಟಿಯೋ, ಹಾಗೆಯೇ ಇದ್ದ ಋಗಾದಿಗಳನ್ನೇ ಅಭಿವ್ಯಕ್ತಿಗೊಳಿಸಿದ್ದೇ ಅವುಗಳ ಸೃಷ್ಟಿ ಎಂದು ಅಭಿಪ್ರಾಯ.

(ಭಾಷ್ಯ)

೩೫. ಸ ಪ್ರಜಾಪತಿಃ ಏವಮ್ ಅನ್ನವೃದ್ಧಿಂ ಬುದ್ಧ್ವಾ ಯದ್ಯದೇವ ಕ್ರಿಯಾಂ ಕ್ರಿಯಾಸಾಧನಂ ಫಲಂ ವಾ ಕಿಂಚಿತ್ ಅಸೃಜತ ತತ್ತತ್ ಅತ್ತುಂ ಭಕ್ಷಯಿತುಮ್ ಅಧ್ರಿಯತ ಧೃತವಾನ್ ಮನಃ। ಸರ್ವಂ ಕೃತ್ಸ್ನಂ ವೈ ಯಸ್ಮಾತ್ ಅತ್ತೀತಿ ತತ್ ತಸ್ಮಾತ್ ಅದಿತೇಃ ಅದಿತಿನಾಮ್ನಃ ಮೃತ್ಯೋಃ ಅದಿತಿತ್ವಂ ಪ್ರಸಿದ್ಧಮ್। ತಥಾ ಚ ಮನ್ತ್ರಃ "ಅದಿತಿ ರ್ದ್ಯೌರದಿತಿರನ್ತರಿಕ್ಷಮದಿತಿರ್ಮಾತಾ ಸ ಪಿತಾ" (ಋ. ೧-೫೯-೧೦) ಇತ್ಯಾದಿಃ। ಸರ್ವಸ್ಯ ಏತಸ್ಯ ಜಗತಃ ಅನ್ನಭೂತಸ್ಯ ಅತ್ತಾ ಸರ್ವಾತ್ಮನೈವ ಭವತಿ। ಅನ್ಯಥಾ ವಿರೋಧಾತ್। ನ ಹಿ ಕಶ್ಚಿತ್ ಸರ್ವಸ್ಯ ಏಕೋಽತ್ತಾ ದೃಶ್ಯತೇ। ತಸ್ಮಾತ್ ಸರ್ವಾತ್ಮಾ ಭವತಿ ಇತ್ಯರ್ಥಃ। ಸರ್ವಮ್ ಅಸ್ಯ ಅನ್ನಂ ಭವತಿ। ಅತ ಏವ ಸರ್ವಾತ್ಮನೋ ಹಿ ಅತ್ತುಃ ಸರ್ವಮ್ ಅನ್ನಂ ಭವತಿ ಇತಿ ಉಪಪದ್ಯತೇ। ಯ ಏವಮ್ ಏತತ್ ಯಥೋಕ್ತಮ್ ಅದಿತೇಃ ಮೃತ್ಯೋಃ ಪ್ರಜಾಪತೇಃ ಸರ್ವಸ್ಯ ಅದನಾತ್ ಅದಿತಿತ್ವಂ ವೇದ, ತಸ್ಯ ಏತತ್ ಫಲಮ್ ॥

(ಭಾಷ್ಯಾರ್ಥ)

ಆ ಪ್ರಜಾಪತಿಯು ಹೀಗೆ ಅನ್ನವು ಹೆಚ್ಚಾಗುವದೆಂದು ತಿಳಿದುಕೊಂಡು ಯಾವಯಾವದನ್ನು– ಯಾವಯಾವ ಕ್ರಿಯೆಯನ್ನು, ಕ್ರಿಯಾಸಾಧನವನ್ನು, ಅಥವಾ ಫಲವನ್ನು– ಸೃಜಿಸಿದನೋ, ಅದದನ್ನು ತಿನ್ನುವದಕ್ಕೆ ಭಕ್ಷಿಸುವದಕ್ಕೆ ಧರಿಸಿದನು, ಮನಸ್ಸನ್ನು ಮಾಡಿಕೊಳ್ಳುತ್ತಿದ್ದನು. ಸರ್ವವನ್ನೂ ಎಲ್ಲವನ್ನೂ ತಿನ್ನುತ್ತಾನಲ್ಲ, ಅದೇ (ಆದ್ದರಿಂದಲೇ) ಅದಿತಿಗೆ, ಅದಿತಿ ಎಂಬ ಹೆಸರಿನ ದೇವತೆಗೆ, ಅದಿತಿತ್ವವು ಪ್ರಸಿದ್ಧವಾಗಿರುತ್ತದೆ. ಆದ್ದರಿಂದಲೇ "ಅದಿತಿಯು ದ್ಯುಲೋಕವು, ಅದಿತಿಯು ಅಂತರಿಕ್ಷವು, ಅದಿತಿಯೇ ತಾಯಿ, ಅದಿತಿಯೇ ತಂದೆ, (ಋ. ೧-೫-೧೦) ಎಂದು ಮುಂತಾಗಿ ಮಂತ್ರವು (ಹೇಳುತ್ತದೆ).[1]

ಈ ಅನ್ನಭೂತವಾದ ಜಗತ್ತಿಗೆಲ್ಲ ಅತ್ತೃವಾಗುತ್ತಾನೆ; ಸರ್ವಾತ್ಮರೂಪದಿಂದಲೇ (ಎಂದರ್ಥ); ಏಕೆಂದರೆ ಹೀಗಲ್ಲದಿದ್ದರೆ ವಿರೋಧವಾಗುತ್ತದೆ. ಯಾವನೊಬ್ಬನೂ (ಜಗತ್ತಿ)ಗೆಲ್ಲಕ್ಕೂ ಅತ್ತೃವಾಗಿರುವದು ಕಾಣುವದಿಲ್ಲವಷ್ಟೆ; ಆದ್ದರಿಂದ ಸರ್ವಾತ್ಮನಾಗುತ್ತಾನೆ ಎಂದೇ ಅರ್ಥ.[2] ಆದ್ದರಿಂದಲೇ ಎಲ್ಲವೂ ಇವನಿಗೆ ಅನ್ನವಾಗುತ್ತದೆ ಎಂಬುದು ಯುಕ್ತವಾಗಿರುತ್ತದೆ. ಯಾವನು ಈ ಮೇಲೆ ಹೇಳಿದ

---

1. ಮೃತ್ಯುವೇ, ಹಿರಣ್ಯಗರ್ಭನೇ, ಸರ್ವಾತ್ಮಕನು ಎಂಬುದಕ್ಕೆ ಇದು ಪ್ರಮಾಣ. ಕ. ಭಾ. ೨-೧-೭.

2. ಪ್ರಾಣೋಪಾಸಕನು ಏನುಬೇಕಾದರೂ ತಿನ್ನಬಹುದು ಎಂಬ ಕೆಲವರ ಅಭಿಪ್ರಾಯವನ್ನು ಇಲ್ಲಿ ಖಂಡಿಸಿದೆ. ಸೂ.ಭಾ. ೩-೪-೨೮ ನೋಡಿ.

ಅದಿತಿಯು, ಮೃತ್ಯುವು, ಪ್ರಜಾಪತಿಯು, ಎಲ್ಲವನ್ನೂ ತಿನ್ನುವನಾದ್ದರಿಂದ ಅದಿತಿಯಾಗಿರುತ್ತಾನೆಂಬುದನ್ನು ಅರಿತುಕೊಳ್ಳುತ್ತಾನೋ[1] ಅವನಿಗೆ ಈ ಫಲ ವಾಗುತ್ತದೆ.

## ಪ್ರಜಾಪತಿಯ ಶರೀರವು ಅಶ್ವವಾದದ್ದು

(ಉಪನಿಷತ್ತು)

**ಸೋಽಕಾಮಯತ ಭೂಯಸಾ ಯಜ್ಞೇನ ಭೂಯೋ ಯಜೇಯೇತಿ। ಸೋಽಶ್ರಾಮ್ಯತ್ ಸ ತಪೋಽತಪ್ಯತ ತಸ್ಯ ಶ್ರಾನ್ತಸ್ಯ ತಪ್ತಸ್ಯ ಯಶೋ ವೀರ್ಯಮುದಕ್ರಾಮತ್। ಪ್ರಾಣಾ ವೈ ಯಶೋವೀರ್ಯಂ ತತ್ ಪ್ರಾಣೇಷೂತ್ಕ್ರಾನ್ತೇಷು ಶರೀರಗ್ಂ ಶ್ವಯಿತುಮಧ್ರಿಯತ ತಸ್ಯ ಶರೀರ ಏವ ಮನ ಆಸೀತ್ ॥ ೬ ॥**

೬. ಅವನು ದೊಡ್ಡ ಯಜ್ಞದಿಂದ ಮತ್ತು ಯಜನಮಾಡುವೆನು ಎಂದು ಕಾಮಿಸಿದನು. ಅವನು ಶ್ರಾಂತನಾದನು. ಅವನು ತಪಸ್ಸನ್ನೂ ಮಾಡಿದನು. ಶ್ರಾಂತನೂ ತಪ್ತನೂ ಆದ ಅವನಿಂದ ಯಶಸ್ಸೂ ವೀರ್ಯವೂ ಹೊರಕ್ಕೆ ಬಂತು. ಪ್ರಾಣಗಳೇ ಅಲ್ಲವೆ, ಯಶಸ್ಸು ವೀರ್ಯವು? ಪ್ರಾಣ ಗಳು ಹೊರಕ್ಕೆ ಬರಲು ಆ ಶರೀರವು ಊದಿಕೊಳ್ಳುವದಕ್ಕೆ ಮೊದಲಾ ಯಿತು. ಅವನಿಗೆ ಶರೀರದಲ್ಲಿಯೇ ಮನಸ್ಸು ಇದ್ದಿತು.

(ಭಾಷ್ಯ)

೩೭. ಸೋಽಕಾಮಯತ ಇತಿ ಅಶ್ವಾಶ್ವಮೇಧಯೋರ್ನಿರ್ವಚನಾರ್ಥಮ್ ಇದಮ್ ಆಹ। ಭೂಯಸಾ ಮಹತಾ ಯಜ್ಞೇನ ಭೂಯಃ ಪುನರಪಿ ಯಜೇಯ ಇತಿ। ಜನ್ಮಾನ್ತರಕರಣಾಪೇಕ್ಷಯಾ ಭೂಯಃಶಬ್ದಃ। ಸ ಪ್ರಜಾಪತಿಃ ಜನ್ಮಾ ನ್ತರೇ ಅಶ್ವಮೇಧೇನ ಅಯಜತ। ಸ ತದ್ಭಾವಭಾವಿತ ಏವ ಕಲ್ಪಾದೌ ವ್ಯವರ್ತತ। ಸಃ ಅಶ್ವಮೇಧಕ್ರಿಯಾಕಾರಕಫಲಾತ್ಮತ್ವೇನ ನಿರ್ವೃತ್ತಃ ಸನ್ ಅಕಾಮಯತ ಭೂಯಸಾ ಯಜ್ಞೇನ ಭೂಯಃ ಯಜೇಯ ಇತಿ ಏವಂ ಮಹತ್ ಕಾರ್ಯಂ ಕಾಮಯಿತ್ವಾ ಲೋಕವತ್ ಅಶ್ರಾಮ್ಯತ್। ಸ ತಪೋಽತಪ್ಯತ। ತಸ್ಯ ಶ್ರಾನ್ತಸ್ಯ ತಪ್ತಸ್ಯ ಇತಿಪೂರ್ವವತ್। ಯಶೋ ವೀರ್ಯಮ್ ಉದಕ್ರಾಮತ್ ಇತಿ ಸ್ವಯ

---

1. ಉಪಾಸನೆಮಾಡುತ್ತಾನೋ ಎಂದರ್ಥ.

ಮೇವ ಪದಾರ್ಥಮ್ ಆಹ | ಪ್ರಾಣಾಃ ಚಕ್ಷುರಾದಯಃ ವೈ ಯಶಃ ಯಶೋಹೇತು ತ್ವಾತ್ ತೇಷು ಹಿ ಸತ್ಸು ಖ್ಯಾತಿರ್ಭವತಿ | ತಥಾ ವೀರ್ಯಂ ಬಲಮ್ ಅಸ್ಮಿನ್ ಶರೀರೇ | ನ ಹಿ ಉತ್ಕ್ರಾನ್ತಪ್ರಾಣಃ ಯಶಸ್ವೀ ಬಲವಾನ್ ವಾ ಭವತಿ | ತಸ್ಮಾತ್ ಪ್ರಾಣಾ ಏವ ಯಶಃ ವೀರ್ಯಂ ಚ ಅಸ್ಮಿನ್ ಶರೀರೇ | ತದೇವಂ ಪ್ರಾಣಲಕ್ಷಣಂ ಯಶಃ ವೀರ್ಯಮ್ ಉದಕ್ರಾಮತ್ ಉತ್ಕ್ರಾನ್ತವತ್ | ತದೇವಂ ಯಶೋ ವೀರ್ಯಭೂತೇಷು ಪ್ರಾಣೇಷು ಉತ್ಕ್ರಾನ್ತೇಷು ಶರೀರಾತ್ ನಿಷ್ಕ್ರಾನ್ತೇಷು ತತ್ ಶರೀರಂ ಪ್ರಜಾಪತೇಃ ಶ್ವಯಿತುಮ್ ಉಚ್ಛೂನಭಾವಂ ಗನ್ತುಮ್ ಅಧ್ರಿಯತ ಅಮೇಧ್ಯಂ ಚ ಅಭವತ್| ತಸ್ಯ ಪ್ರಜಾಪತೇಃ ಶರೀರಾತ್ ನಿರ್ಗತಸ್ಯಾಪಿ ತಸ್ಮಿನ್ನೇವ ಶರೀರೇ ಮನ ಆಸೀತ್ | ಯಥಾ ಕಸ್ಯಚಿತ್ ಪ್ರಿಯೇ ವಿಷಯೇ ದೂರಂ ಗತಸ್ಯಾಪಿ ಮನೋ ಭವತಿ ತದ್ವತ್ ||

(ಭಾಷ್ಯಾರ್ಥ)

'ಸೋಽಕಾಮಯತ' (ಅವನು ಕಾಮಿಸಿದನು) ಎಂದು ಅಶ್ವ, ಅಶ್ವಮೇಧ ಇವುಗಳ ನಿರ್ವಚನಾರ್ಥವಾಗಿ ಇದನ್ನು ಹೇಳಿರುತ್ತದೆ. ಭೂಯಸಾ ಎಂದರೆ ದೊಡ್ಡದಾದ ಯಜ್ಞದಿಂದ ಮತ್ತೂ ಇನ್ನೊಮ್ಮೆಯೂ ಯಜನಮಾಡುವೆನು (ಎಂದು ಕಾಮಿಸಿದನು). ಜನ್ಮಾಂತರದಲ್ಲಿ ಮಾಡಿದ್ದರ ಅಪೇಕ್ಷೆಯಿಂದ 'ಮತ್ತೂ' ಎಂಬ ಶಬ್ದವನ್ನು (ಉಪಯೋಗಿಸಿದೆ). ಆ ಪ್ರಜಾಪತಿಯು ಜನ್ಮಾಂತರದಲ್ಲಿ ಅಶ್ವಮೇಧ ದಿಂದ ಯಜನಮಾಡಿದ್ದನು. ಅವನು ಆ ಭಾವನೆಯಿಂದ ಭಾವಿತನಾಗಿಯೇ[1] ಕಲ್ಪಾದಿಯಲ್ಲಿ ಪ್ರಕಟನಾದನು. ಆತನು ಅಶ್ವಮೇಧವೆಂಬ ಕ್ರಿಯೆ, ಕಾರಕ, ಫಲ– ಇವುಗಳ ರೂಪವುಳ್ಳವನಾಗಿ ಹುಟ್ಟಿ 'ದೊಡ್ಡ ಯಜ್ಞದಿಂದ ಮತ್ತೂ ಯಜನ ಮಾಡುವೆನು' ಎಂದು ಬಯಸಿದನು.

ಹೀಗೆ ಮಹಾಕಾರ್ಯವನ್ನು ಬಯಸಿ (ಅವನು) ಲೋಕ(ದ ಜನ)ರಂತೆ ಶ್ರಾಂತನಾದನು.[2] ಅವನು ತಪಸ್ಸನ್ನು ಮಾಡಿದನು. ಹಾಗೆ ಶ್ರಾಂತನಾಗಿ ತಪ್ತನಾದ (ಪ್ರಜಾಪತಿಗೆ) ಎಂಬ ಗ್ರಂಥವನ್ನು ಹಿಂದಿನಂತೆ[3] (ವಿವರಿಸಬೇಕು. ಆ ಪ್ರಜಾಪತಿಯು ಶರೀರದಿಂದ) 'ಯಶೋವೀರ್ಯವು ಹೊರಕ್ಕೆ ಬಂತು' ಎಂಬ

---

1. ಗೀ. ಅ-೬ರ ಸೂಚನೆ. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮೋಪಾಸನೆಗಳ ಭಾವನೆ ಯಿಂದ ಹಿರಣ್ಯಗರ್ಭನಾಗಿ ಹುಟ್ಟಿದ್ದರಿಂದ ಅದೇ ಆಲೋಚನೆಯು ಈಗಲೂ ಬಂತು ಎಂದರ್ಥ.

2. ದೊಡ್ಡ ಕಾರ್ಯವನ್ನು ಆಲೋಚಿಸಿಕೊಳ್ಳುವದರಿಂದಲೇ ಜನರಿಗೆ ಆಯಾಸವಾಗು ತ್ತದೆ; ಅದರಂತೆ ಹಿರಣ್ಯಗರ್ಭನಿಗೂ ಆಯಿತು ಎಂದದ್ದರಿಂದ ಸಂಸಾರಿತ್ವದ ಸೂಚನೆಯಾಯಿತು.

3. 'ಆಯಾಸದಿಂದ ಬೆವರಿದ' ಎಂದು ಎರಡನೆಯ ಕಂಡಿಕೆಯಲ್ಲಿ ಮಾಡಿದಂತೆ ಇಲ್ಲಿಯೂ ವ್ಯಾಖ್ಯಾನಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

ವಾಕ್ಯದ) ಪದಗಳ ಅರ್ಥವನ್ನು (ಶ್ರುತಿಯು) ತಾನೇ ಹೇಳುತ್ತದೆ. ಪ್ರಾಣಗಳು ಎಂದರೆ ಚಕ್ಷುರಾದಿಗಳು[1] ಯಶಸ್ಸಲ್ಲವೆ? ಏಕೆಂದರೆ ಅವು ಯಶಸ್ಸಿಗೆ ಕಾರಣವಾಗಿರುತ್ತವೆ. ಅವುಗಳಿದ್ದರೇ ಅಲ್ಲವೆ, ಖ್ಯಾತಿಯುಂಟಾಗುತ್ತದೆ? ಮತ್ತು ವೀರ್ಯವು ಎಂದರೆ ಬಲವು (ಅವುಗಳಿದ್ದರೆ ಆಗುತ್ತದೆ). ಏಕೆಂದರೆ ಪ್ರಾಣಗಳು ಉತ್ಕ್ರಾಂತವಾದರೆ ಯಶಸ್ವಿಯಾಗುವದಿಲ್ಲ, ಬಲವಂತನೂ ಆಗುವದಿಲ್ಲ. ಆದ್ದರಿಂದ ಈ ಶರೀರದಲ್ಲಿ ಪ್ರಾಣಗಳೇ ಯಶಸ್ಸು, ಮತ್ತು ವೀರ್ಯವು. ಅಂತೂ ಹೀಗೆ ಪ್ರಾಣರೂಪವಾದ ಯಶಸ್ಸೂ ವೀರ್ಯವೂ ಹೊರಕ್ಕೆ ಬಂತು, ಈಚೆಗೆ ಹೊರಟಿತು. ಅಂತೂ ಹೀಗೆ ಯಶೋವೀರ್ಯವಾಗಿರುವ ಪ್ರಾಣಗಳು ಹೊರಟುಬರಲಾಗಿ ಶರೀರದಿಂದ ಈಚೆಗೆ ಹೊರಡಲಾಗಿ, ಆ ಪ್ರಜಾಪತಿಯ ಶರೀರವು ಉಬ್ಬುವದಕ್ಕೆ ದಪ್ಪನಾಗುವದಕ್ಕೆ ಮೊದಲಾಯಿತು, ಅಮೇಧ್ಯವೂ ಆಯಿತು.[2] ಶರೀರದಿಂದ ಹೊರಕ್ಕೆ ಬಂದರೂ[3] ಆ ಪ್ರಜಾಪತಿಗೆ ಅದೇ ಶರೀರದಲ್ಲಿ ಮನಸ್ಸು ಇದ್ದು ಕೊಂಡಿತ್ತು; ಹೇಗೆ ಯಾವನಿಗಾದರೂ ದೂರಕ್ಕೆ ಹೋಗಿದ್ದರೂ ತನಗೆ ಪ್ರಿಯವಾದ ವಿಷಯದಲ್ಲಿ ಮನಸ್ಸು ಇದ್ದುಕೊಂಡಿರುವದೋ ಹಾಗೆ (ಪ್ರಜಾಪತಿಗೂ ಶರೀರದಲ್ಲಿಯೇ ಮನಸ್ಸಿತ್ತು).[4]

## ಅಶ್ವಮೇಧೋಪಾಸನೆಯ ಫಲ

(ಉಪನಿಷತ್ತು)

**ಸೋಽಕಾಮಯತ ಮೇಧ್ಯಂ ಮ ಇದಗ್ಂ ಸ್ಯಾದಾತ್ಮನ್ವ್ಯನೇನ ಸ್ಯಾಮಿತಿ। ತತೋಽಶ್ವಃ ಸಮಭವದ್ ಯದಶ್ವತ್ ತನ್ಮೇಧ್ಯಮಭೂದಿತಿ ತದೇವಾಶ್ವಮೇಧಸ್ಯಾಶ್ವಮೇಧತ್ವಮ್। ಏಷ ಹ ವಾ ಅಶ್ವಮೇಧಂ ವೇದ ಯ ಏನಮೇವಂ ವೇದ। ತಮನವರುಧ್ಯೈವಾಮನ್ಯತ। ತಗ್ಂ ಸಂವತ್ಸರಸ್ಯ ಪರಸ್ತಾದಾತ್ಮನ ಆಲಭತ। ಪಶೂನ್ ದೇವತಾಭ್ಯಃ ಪ್ರತ್ಯೌಹತ್। ತಸ್ಮಾತ್ ಸರ್ವದೇವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮಾಲಭನ್ತ ಏಷ ಹ ವಾ ಅಶ್ವಮೇಧೋ ಯ ಏಷ**

---

1. ಇಂದ್ರಿಯಗಳಿಂದಲೇ ಮನುಷ್ಯನಿಗೆ ಖ್ಯಾತಿ.

2. ಮೇಧಕ್ಕೆ ಅರ್ಹವಾಗಿದ್ದದ್ದು ಪ್ರಜಾಪತಿಯ ಸಂಬಂಧದಿಂದಲೇ.

3. ಆತ್ಮಜ್ಞಾನವಿಲ್ಲದಿದ್ದರೆ ದೇಹಸಂಗತ್ಯಾಗವಾಗಲಾರದು ಎಂದು ಭಾವ.

4. ಆದ್ದರಿಂದ ಪ್ರಜಾಪತಿತ್ವವೂ ಸಂಸಾರದೊಳಗೇ ಸೇರಿದ್ದೆಂದು ಹೇಳಬೇಕಾಯಿತು. ಇದನ್ನು ಮೀರಿದ ತತ್ತ್ವವನ್ನು ಪಡೆಯುವದಕ್ಕೆ ಈ ಉಪನಿಷತ್ತಿನಲ್ಲಿ ಜ್ಞಾನವನ್ನು ಹೇಳಿದೆ ಎಂಬದು ಈ ಕಾರಣದಿಂದಲೇ.

**ತಪತಿ ತಸ್ಯ ಸಂವತ್ಸರ ಆತ್ಮಾಽಯಮಗ್ನಿರರ್ಕಸ್ತಸ್ಯೇಮೇ ಲೋಕಾ ಆತ್ಮಾನಸ್ತಾವೇತಾವರ್ಕಾಶ್ವಮೇಧೌ। ಸೋ ಪುನರೇಕೈವ ದೇವತಾ ಭವತಿ ಮೃತ್ಯುರೇವಾಪ ಪುನರ್ಮೃತ್ಯುಂ ಜಯತಿ ನೈನಂ ಮೃತ್ಯು ರಾಪ್ನೋತಿ ಮೃತ್ಯುರಸ್ಯಾತ್ಮಾ ಭವತ್ಯೇತಾಸಾಂ ದೇವತಾನಾಮೇಕೋ ಭವತಿ ॥ ೭ ॥**

೭. ಅವನು "ಈ ನನ್ನದು ಮೇಧ್ಯವಾಗಲಿ! ಇದರಿಂದ ನಾನು ಆತ್ಮವಂತನಾಗುವೆನು'' ಎಂದು ಕಾಮಿಸಿದನು. ಅದು ಊದಿಕೊಂಡಿ ತಷ್ಟೆ (ಅಶ್ವತ್) ಅದರಿಂದ ಅಶ್ವವಾಯಿತು; ಅದು ಮೇಧ್ಯವಾಯಿತು. ಆದ್ದರಿಂದ ಅದೇ ಅಶ್ವಮೇಧದ ಅಶ್ವಮೇಧತ್ವವು. ಯಾವನು ಇದನ್ನು ಹೀಗೆಂದು ಅರಿತುಕೊಳ್ಳುವನೋ ಅವನೇ ಅಶ್ವಮೇಧವನ್ನು ಬಲ್ಲವನು. ಅದನ್ನು ಕಟ್ಟಿಹಾಕದೆಯೇ ಧ್ಯಾನಿಸಿದನು. ಅದನ್ನು ಸಂವತ್ಸರವಾದ ಬಳಿಕ ತನಗಾಗಿ ಆಲಂಭಮಾಡಿದನು; ಪಶುಗಳನ್ನು ದೇವತೆಗಳಿಗಾಗಿ ಕಳುಹಿಸಿದನು. ಆದ್ದರಿಂದ ಸರ್ವದೇವತ್ಯವಾಗಿ ಪ್ರೋಕ್ಷಿತವಾದ (ಪಶುವನ್ನು) ಪ್ರಾಜಾಪತ್ಯವಾಗಿ ಆಲಂಭಮಾಡುತ್ತಾರೆ. ಈ ತಪಿಸುತ್ತಿರುವನಲ್ಲ, ಈತನೇ ಅಶ್ವಮೇಧವು. ಅವನಿಗೆ ಸಂವತ್ಸರವು ಆತ್ಮವು, ಈ ಅಗ್ನಿಯು ಅರ್ಕವು. ಅವನಿಗೆ ಈ ಲೋಕಗಳು ಆತ್ಮಗಳು. ಆ ಇವರು ಅರ್ಕಾಶ್ವಮೇಧಗಳು. ಮತ್ತು ಅದು ಒಂದೇ ದೇವತೆಯು, ಮೃತ್ಯುವೇ (ಅದು). (ಯಾವನು ಹೀಗೆಂದು ಅರಿತುಕೊಳ್ಳುವನೋ) ಅವನು ಪುನರ್ಮೃತ್ಯುವನ್ನು ಜಯಿಸಿಕೊಳ್ಳುವನು, ಇವನನ್ನು ಮೃತ್ಯುವು ಹಿಡಿಯುವದಿಲ್ಲ; ಮೃತ್ಯುವು ಇವನಿಗೆ ಆತ್ಮನಾಗುವನು; ಈ ದೇವತೆಗಳಲ್ಲಿ ಒಂದಾಗಿಬಿಡುವನು.

(ಭಾಷ್ಯ)

೩೭. ಸ ತಸ್ಮಿನ್ನೇವ ಶರೀರೇ ಗತಮನಾಃ ಸನ್ ಕಿಮ್ ಅಕರೋತ್ ಇತಿ? ಉಚ್ಯತೇ। ಸೋಽಕಾಮಯತ। ಕಥಮ್? ಮೇಧ್ಯಂ ಮೇಧಾರ್ಹಂ ಯಜ್ಞಿಯಂ ಮೇ ಮಮ ಇದಂ ಶರೀರಂ ಸ್ಯಾತ್। ಕಿಂ ಚ ಆತ್ಮನ್ವೀ ಆತ್ಮವಾಂಶ್ಚ ಅನೇನ ಶರೀರೇಣ ಶರೀರವಾನ್ ಇತಿ ಪ್ರವಿವೇಶ। ಯಸ್ಮಾತ್ ತತ್ ಶರೀರಂ ಮದ್ವಿಯೋಗಾತ್ ಗತಯಶೋವೀರ್ಯಂ ಸತ್ ಅಶ್ವತ್ ಅಶ್ವಯತ್ ತತಃ ತಸ್ಮಾತ್ ಅಶ್ವಃ ಸಮಭವತ್। ತತಃ ಅಶ್ವನಾಮಾ ಪ್ರಜಾಪತಿರೇವ ಸಾಕ್ಷಾತ್ ಇತಿ

ಸ್ತೂಯತೇ। ಯಸ್ಮಾಚ್ಚ ಪುನಃ ತತ್ಪ್ರವೇಶಾತ್ ಗತಯಶೋವೀರ್ಯತ್ವಾತ್ ಅಮೇಧ್ಯಂ ಸತ್ ಮೇಧ್ಯಮ್ ಅಭೂತ್ ತದೇವ ತಸ್ಮಾದೇವ ಅಶ್ವಮೇಧಸ್ಯ ಅಶ್ವಮೇಧನಾಮ್ನಃ ಕ್ರತೋಃ ಅಶ್ವಮೇಧತ್ವಮ್ ಅಶ್ವಮೇಧನಾಮಲಾಭಃ। ಕ್ರಿಯಾಕಾರಕಫಲಾತ್ಮಕೋ ಹಿ ಕ್ರತುಃ। ಸ ಚ ಪ್ರಜಾಪತಿರೇವ ಇತಿ ಸ್ತೂಯತೇ॥

(ಭಾಷ್ಯಾರ್ಥ)

ಅವನು ಅದೇ ಶರೀರದಲ್ಲಿಯೇ ಮನಸ್ಸಿಟ್ಟವನಾಗಿ ಏನು ಮಾಡಿದನು? ಎಂದರೆ (ಶ್ರುತಿ) ಹೇಳುತ್ತದೆ. ಆ (ಪ್ರಜಾಪತಿಯು) ಕಾಮಿಸಿದನು. ಏನೆಂದು (ಕಾಮಿಸಿದನು)? ಎಂದರೆ 'ಮೇಧ್ಯವು, ಮೇಧಾರ್ಹವಾದದ್ದು, ಯಜ್ಞಕ್ಕೆ ಯೋಗ್ಯವಾದದ್ದು (ಮೇ=ಮಮ) ನನ್ನ ಈ ಶರೀರವು ಆಗಲಿ! ಮತ್ತು ಈ ಶರೀರದಿಂದ ಆತ್ಮವಂತನು, ಶರೀರವುಳ್ಳವನು, ಆಗುವೆನು' ಎಂದು (ಬಯಸಿ ಶರೀರವನ್ನು) ಹೊಕ್ಕನು. ಆ ಶರೀರವು ನನ್ನ ಅಗಲುವಿಕೆಯಿಂದ ಯಶೋವೀರ್ಯವಿಲ್ಲದ್ದಾಗಿ (ಅಶ್ವತ್=ಅಶ್ವಯತ್) ಊದಿಕೊಂಡಿತಷ್ಟೆ, ಆದ್ದರಿಂದ ಆ ಕಾರಣದಿಂದ ಅಶ್ವವಾಯಿತು. ಆದ್ದರಿಂದ ಅಶ್ವವೆಂಬುದು ನೇರಾಗಿ ಪ್ರಜಾಪತಿಯೇ ಎಂದು (ಅದನ್ನು) ಹೊಗಳಲಾಗಿದೆ.

ಮತ್ತು ಮತ್ತೆ ಅದನ್ನು ಹೊಕ್ಕದ್ದರಿಂದ (ಮೊದಲು) ಯಶೋವೀರ್ಯವನ್ನು ಕಳೆದುಕೊಂಡು ಅಮೇಧ್ಯವಾಗಿದ್ದದ್ದು ಮೇಧ್ಯವಾಯಿತಷ್ಟೆ, ಅದೇ ಎಂದರೆ ಅದರಿಂದಲೇ ಅಶ್ವಮೇಧದ ಅಶ್ವಮೇಧವೆಂಬ ಹೆಸರಿನ ಕ್ರತುವಿಗೆ ಅಶ್ವಮೇಧತ್ವವು, ಎಂದರೆ ಅಶ್ವಮೇಧವೆಂಬ ಹೆಸರು ಬಂದಿರುತ್ತದೆ. ಕ್ರತುವೆಂಬುದು ಕ್ರಿಯಾಕಾರಕಫಲಾತ್ಮಕವಷ್ಟೆ; ಆ (ಕ್ರತುವು) ಪ್ರಜಾಪತಿಯೇ ಎಂದು (ಅದನ್ನು) ಹೊಗಳಲಾಗಿದೆ.

## ಅಶ್ವಮೇಧೋಪಾಸನಾವಿಧಿ

(ಭಾಷ್ಯ)

೩೮. ಕ್ರತುನಿರ್ವರ್ತಕಸ್ಯ ಅಶ್ವಸ್ಯ ಪ್ರಜಾಪತಿತ್ವಮ್ ಉಕ್ತಮ್ 'ಉಷಾ ವಾ ಅಶ್ವಸ್ಯ ಮೇಧ್ಯಸ್ಯ' (೧-೧-೧) ಇತ್ಯಾದಿನಾ। ತಸ್ಯೈವ ಅಶ್ವಸ್ಯ ಮೇಧ್ಯಸ್ಯ ಪ್ರಜಾಪತಿಸ್ವರೂಪಸ್ಯ ಅಗ್ನೇಶ್ಚ ಯಥೋಕ್ತಸ್ಯ ಕ್ರತುಫಲಾತ್ಮರೂಪತಯಾ ಸಮಸ್ಯೋಪಾಸನಂ ವಿಧಾತವ್ಯಮ್ ಇತ್ಯಾರಭ್ಯತೇ। ಪೂರ್ವತ್ರ ಕ್ರಿಯಾಪದಸ್ಯ ವಿಧಾಯಕಸ್ಯ ಅಶ್ರುತತ್ವಾತ್ ಕ್ರಿಯಾಪದಾಪೇಕ್ಷತ್ವಾಚ್ಚ ಪ್ರಕರಣಸ್ಯ ಅಯಮರ್ಥೋಽವಗಮ್ಯತೇ। ಏಷ ಹ ವಾ ಅಶ್ವಮೇಧಂ ಕ್ರತುಂ ವೇದ ಯ ಏನಮೇವಂ ವೇದ। ಯಃ ಕಶ್ಚಿತ್ ಏನಮ್ ಅಶ್ವಮ್ ಅಗ್ನಿರೂಪಮ್ ಅರ್ಕಂ ಚ ಯಥೋಕ್ತಮ್

ಏವಂ ವಕ್ಷ್ಯಮಾಣೇನ ಸಮಾಸೇನ ಪ್ರದರ್ಶ್ಯಮಾನೇನ ವಿಶೇಷಣೇನ ವಿಶಿಷ್ಟಂ ವೇದ ಸ ಏಷಃ ಅಶ್ವಮೇಧಂ ವೇದ ನಾನ್ಯಃ। ತಸ್ಮಾತ್ ಏವಂ ವೇದಿತವ್ಯಃ ಇತ್ಯರ್ಥಃ ||

(ಭಾಷ್ಯಾರ್ಥ)

ಕ್ರತುವನ್ನು ಸಾಧಿಸುವ ಅಶ್ವವು ಪ್ರಜಾಪತಿ ಎಂದು "ಉಷಾ ವಾ ಅಶ್ವಸ್ಯ ಮೇಧ್ಯಸ್ಯ" (೧-೧-೧) ಎಂದು ಮುಂತಾಗಿರುವ (ಕಂಡಿಕೆ)ಯಿಂದ ಹೇಳಲಾಯಿತು. ಅದೇ ಪ್ರಜಾಪತಿರೂಪವಾದ ಮೇಧ್ಯ ಅಶ್ವವನ್ನೂ ಹಿಂದೆ ಹೇಳಿದ ಅಗ್ನಿಯನ್ನೂ ಕ್ರತುಫಲರೂಪವೆಂದು ಒಟ್ಟುಗೂಡಿಸಿ ಉಪಾಸನೆಯನ್ನು ವಿಧಿಸಬೇಕು ಎಂದು (ಈ ಗ್ರಂಥಭಾಗವನ್ನು ಆರಂಭಿಸಿರುತ್ತದೆ). ಹಿಂದೆ ವಿಧಿಸುವ ಕ್ರಿಯಾಪದವು ಕೇಳಬಂದಿಲ್ಲವಾದ್ದರಿಂದಲೂ ಪ್ರಕರಣಕ್ಕೆ ಕ್ರಿಯಾಪದದ ಅಪೇಕ್ಷೆಯಿರುವದರಿಂದಲೂ[1] ಇದೇ ಅರ್ಥವೆಂದು ನಿಶ್ಚಯವಾಗುತ್ತದೆ.

ಇವನೇ ಅಶ್ವಮೇಧವೆಂಬ ಕ್ರತುವನ್ನು ಬಲ್ಲವನು. ಯಾವನು ಈ ಅಶ್ವವನ್ನು ಹಿಂದೆ ಹೇಳಿದ ಅಗ್ನಿರೂಪನಾದ ಅರ್ಕನನ್ನು ಹೀಗೆ ಎಂದರೆ ಮುಂದೆ ಹೇಳುವ ಒಟ್ಟುಗೂಡಿಸಿ ತೋರಿಸಿರುವ ವಿಶೇಷಣದಿಂದ ಕೂಡಿರುವದನ್ನು ಬಲ್ಲನೋ ಅವನೇ ಅಶ್ವಮೇಧವನ್ನು ಬಲ್ಲವನು, ಮಿಕ್ಕವನಲ್ಲ. ಆದ್ದರಿಂದ ಹೀಗೆ ಅರಿತುಕೊಳ್ಳಬೇಕು.

## ಅಶ್ವದ ಉಪಾಸನೆ

(ಭಾಷ್ಯ)

೩೯. ಕಥಮ್ ? ತತ್ರ ಪಶುವಿಷಯಮೇವ ತಾವದ್ ದರ್ಶನಮ್ ಆಹ ತತ್ರ ಪ್ರಜಾಪತಿಃ ಭೂಯಸಾ ಯಜ್ಞೇನ ಭೂಯೋ ಯಜೇಯ ಇತಿ ಕಾಮಯಿತ್ವಾ ಆತ್ಮಾನಮೇವ ಪಶುಂ ಮೇಧ್ಯಂ ಕಲ್ಪಯಿತ್ವಾ ತಂ ಪಶುಮ್ ಅನವರುಧ್ಯೈವ ಉತ್ಸೃಷ್ಟಂ ಪಶುಮ್ ಅವರೋಧಮ್ ಅಕೃತ್ವೈವ ಮುಕ್ತಪ್ರಗ್ರಹಮ್ ಅಮನ್ಯತ ಅಚಿನ್ತಯತ್। ತಂ ಸಂವತ್ಸರಸ್ಯ ಪೂರ್ಣಸ್ಯ ಪರಸ್ತಾತ್ ಊರ್ಧ್ವಮ್, ಆತ್ಮನೇ ಆತ್ಮಾರ್ಥಮ್ ಆಲಭತ ಪ್ರಜಾಪತಿದೇವತಾಕತ್ವೇನ

---

1. ೫ನೆಯ ಕಂಡಿಕೆಯಲ್ಲಿ (ಭಾ.ಭಾ. ೩೫ರಲ್ಲಿ) ಪ್ರಜಾಪತಿಯನ್ನು 'ಅದಿತಿ' ಎಂದು ಉಪಾಸನೆಮಾಡಿದವನಿಗೆ ಹೇಳಿರುವದು ಅಂಗೋಪಾಸನೆಯ ಫಲವು. ಇದರಂತೆ ೩ನೆಯ ಕಂಡಿಕೆಯಲ್ಲಿ (ಭಾ.ಭಾ. ೩೧ರಲ್ಲಿ) ಅಗ್ನಿಯು ಅಪ್ಪಿನಲ್ಲಿ ನಿಂತಿರುವನೆಂದು ಉಪಾಸನೆಮಾಡಿರುವವನಿಗೆ ಹೇಳಿರುವದೂ ಅಂಗಫಲವೇ. ಪ್ರಧಾನೋಪಾಸನೆಯು ಇಲ್ಲಿ ಅಶ್ವಮೇಧೋಪಾಸನೆ; ಏಕೆಂದರೆ ಇದು ಅಶ್ವಮೇಧದ ಪ್ರಕರಣ.

ಇತ್ಯೇತತ್ । ಆಲಭತ ಆಲಮ್ಭಂ ಕೃತವಾನ್ । ಪಶೂನ್ ಅನ್ಯಾನ್ ಗ್ರಾಮ್ಯಾನ್ ಆರಣ್ಯಾಂಶ್ಚ ದೇವತಾಭ್ಯಃ ಯಥಾದೈವತಂ ಪ್ರತ್ಯೌಹತ್ ಪ್ರತಿಗಮಿತವಾನ್ । ಯಸ್ಮಾಚ್ಚ ಏವಂ ಪ್ರಜಾಪತಿಃ ಅಮನ್ಯತ ತಸ್ಮಾತ್ ಏವಮ್ ಅನ್ಯೋಽಪಿ ಉಕ್ತೇನ ವಿಧಿನಾ ಆತ್ಮಾನಂ ಪಶುಮ್ ಅಶ್ವಂ ಮೇಧ್ಯಂ ಕಲ್ಪಯಿತ್ವಾ ಸರ್ವದೇವತ್ಯೋಽಹಂ ಪ್ರೋಕ್ಷ್ಯಮಾಣಃ ಆಲಭ್ಯಮಾನಸ್ತು ಅಹಂ ಮದ್ದೇವತ್ಯ ಏವ ಸ್ಯಾಮ್ । ಅನ್ಯೇ ಇತರೇ ಪಶವಃ ಗ್ರಾಮ್ಯಾರಣ್ಯಾಃ ಯಥಾದೈವತಮ್ ಅನ್ಯಾಭ್ಯೋ ದೇವತಾಭ್ಯಃ ಆಲಭ್ಯನ್ತೇ ಮದವಯವಭೂತಾಭ್ಯ ಏವ ಇತಿ ವಿದ್ಯಾತ್ । ಅತ ಏವ ಇದಾನೀಂ ಸರ್ವದೇವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮ್ ಆಲಭನ್ತೇ ಯಾಜ್ಞಿಕಾಃ ॥

(ಭಾಷ್ಯಾರ್ಥ)

ಹೇಗೆ ? ಎಂದರೆ (ಶ್ರುತಿಯು) ಅದರಲ್ಲಿ ಪಶುವಿಷಯವಾದ ದರ್ಶನವನ್ನೇ ಮೊದಲು ಹೇಳುತ್ತದೆ. ಅಲ್ಲಿ ಪ್ರಜಾಪತಿಯು ದೊಡ್ಡದಾದ ಯಜ್ಞದಿಂದ ಮತ್ತೂ ಯಜನಮಾಡಬೇಕೆಂದು ಕಾಮಿಸಿ ತನ್ನನ್ನೇ ಮೇಧ್ಯಪಶುವೆಂದು ಕಲ್ಪಿಸಿಕೊಂಡು ಆ ಪಶುವನ್ನು ಕಟ್ಟದೆಯೇ (ಹಗ್ಗವನ್ನು ಬಿಚ್ಚಿ) ಬಿಟ್ಟ ಪಶುವನ್ನು ಕಟ್ಟಿಹಾಕದೆ ಯೇ ಹಗ್ಗವನ್ನು ಬಿಚ್ಚಿಬಿಟ್ಟಂತೆಯೇ ಧ್ಯಾನಿಸಿದನು, ಚಿಂತಿಸಿದನು. ಆ (ಪಶು ವನ್ನು) ಸಂವತ್ಸರವು ಮುಗಿದ ಬಳಿಕ ಆಮೇಲೆ ತನಗೆ ತನಗೋಸ್ಕರ ಆಲಂಭ ಮಾಡಿದನು) ಪ್ರಜಾಪತಿದೇವತಾಕವಾಗಿ (ಆಲಂಭಮಾಡಿದನು) ಎಂದು ಅಭಿ ಪ್ರಾಯ. ಆಲಭತ ಎಂದರೆ ಆಲಂಭವನ್ನು ಮಾಡಿದನು.[1] ಮಿಕ್ಕ ಗ್ರಾಮ್ಯ ಮತ್ತು ಆರಣ್ಯಪಶುಗಳನ್ನು ದೇವತೆಗಳಿಗಾಗಿ (ಆಯಾ ಪಶುವಿಗೆ) ಯಾವ ಯಾವ ದೇವತೆಯೋ ಅವರಂತೆ[2] ಕಳುಹಿಸಿದನು, (ಆಯಾ ದೇವತೆಗೆ) ತಲುಪಿಸಿದನು. ಹೀಗೆ ಪ್ರಜಾಪತಿಯು ಧ್ಯಾನಿಸಿದನಾದ್ದರಿಂದ ಹೀಗೆಯೇ ಮತ್ತೊಬ್ಬನೂ (ಈ) ಹೇಳಿದ ವಿಧಿಯಿಂದ ತನ್ನನ್ನು ಮೇಧ್ಯವಾದ ಅಶ್ವ ವೆಂಬ ಪಶುವನ್ನಾಗಿ ಕಲ್ಪಿಸಿಕೊಂಡು[3] "ಪ್ರೋಕ್ಷಿಸಿದಾಗ ನಾನು ಸರ್ವ

---

1. ಬಲಿಯಾಗಿ ಅರ್ಪಿಸಿದನು ಎಂದರ್ಥ. ಆಲಭ್ ಎಂಬ ಕ್ರಿಯಾಪದವನ್ನು ಈ ಅರ್ಥದಲ್ಲಿ ವೇದದಲ್ಲಿ ಪ್ರಯೋಗಿಸಿರುತ್ತದೆ.

2. ಉದಾಹರಣೆಗೆ ಪಶುಗಳ ವಿನಿಯೋಗಕ್ಕೆ ತೈ. ಸಂ. ೫-೫-೧೧ರಿಂದ ೨೪ನ್ನು ನೋಡಿ.

3. ಈ ಕಂಡಿಕೆಯ ಆಧಾರದಿಂದಲೇ ವಾರ್ತಿಕಕಾರರು ಅಶ್ವಾದಿಗಳು ಇರುವಾಗ ಅವುಗಳ ಅಂಗಗಳಲ್ಲಿ ಕಾಲಾದಿದೃಷ್ಟಿಯನ್ನು ಮಾಡಬೇಕು ; ಇಲ್ಲದಿರುವಾಗ ತನ್ನನ್ನೇ ಅಶ್ವವೆಂದು ಕಲ್ಪಿಸಿಕೊಂಡು ಈ ದೃಷ್ಟಿಯನ್ನು ಮಾಡಬೇಕು ಎಂದು (ವಾ. ೧-೧-೪) ಬರೆದಿರುತ್ತಾರೆ. ಕರ್ಮಕ್ಕೆ ಅಧಿಕಾರವಿಲ್ಲದವರಿಗೂ ಉಪಾಸನೆಯಲ್ಲಿ ಅಧಿಕಾರವುಂಟೆಂದು ಭಾಷ್ಯದಲ್ಲಿ ಬರೆದಿರುವ ವದಕ್ಕೂ ಇದೊಂದು ಆಧಾರ.

ದೇವತ್ಯನು, ಆದರೆ ಆಲಂಭನಮಾಡಿದಾಗ ನಾನೇ ದೇವತೆಯಾಗುಳ್ಳವನಾಗುವೆನು[1] ಉಳಿದ ಬೇರೆಯ ಗ್ರಾಮ್ಯಾರಣ್ಯಪಶುಗಳು ಆಯಾ ದೇವತೆಗೆ ತಕ್ಕಂತೆ ನನ್ನ ಅವಯವಗಳೇ ಆಗಿರುವ ಬೇರೆಯ (ದೇವತೆಗಳಿಗಾಗಿ ಆಲಂಭವಾಗುತ್ತವೆ" ಎಂದು ಭಾವಿಸಬೇಕು. ಆದ್ದರಿಂದಲೇ ಈಗ ಸರ್ವದೇವತ್ಯವಾಗಿ ಪ್ರೋಕ್ಷಿತವಾದ (ಪಶುವನ್ನು) ಯಾಜ್ಞಿಕರು ಪ್ರಾಜಾಪತ್ಯವಾಗಿ ಆಲಂಭನಮಾಡುತ್ತಾರೆ.[2]

## ಉಪಾಸನೆಯ ಫಲ

(ಭಾಷ್ಯ)

೪೦. ಏವಮ್ 'ಏಷ ಹ ವಾ ಅಶ್ವಮೇಧೋ ಯ ಏಷ ತಪತಿ' । ಯಸ್ತು ಏವಂಪಶುಸಾಧನಕಃ ಕ್ರತುಃ ಸ ಏಷ ಸಾಕ್ಷಾತ್ ಫಲಭೂತೋ ನಿರ್ದಿಶ್ಯತೇ 'ಏಷ ಹ ವಾ ಅಶ್ವಮೇಧಃ' । ಕೋಽಸೌ ? ಯ ಏಷ ಸವಿತಾ ತಪತಿ ಜಗತ್ ಅವಭಾಸಯತಿ ತೇಜಸಾ, ತಸ್ಯಾಸ್ಯ ಕ್ರತುಫಲಾತ್ಮನಃ ಸಂವತ್ಸರಃ ಕಾಲವಿಶೇಷ ಆತ್ಮಾ ಶರೀರಮ್ । ತನ್ನಿರ್ವರ್ತ್ಯತ್ವಾತ್ ಸಂವತ್ಸರಸ್ಯ । ತಸ್ಯೈವ ಕ್ರತ್ವಾತ್ಮನೋಽಗ್ನಿಸಾಧ್ಯತ್ವಾಚ್ಚ ಫಲಸ್ಯ ಕ್ರತುರೂಪೇಣೈವ[3] ನಿರ್ದೇಶಃ । ಅಯಂ ಪಾರ್ಥಿವೋಽಗ್ನಿಃ ಅರ್ಕಃ ಸಾಧನಭೂತಃ । ತಸ್ಯ ಚ ಅರ್ಕಸ್ಯ ಕ್ರತೌ ಚಿತ್ಯಸ್ಯ ಇಮೇ ಲೋಕಾಃ ತ್ರಯೋಽಪಿ ಆತ್ಮಾನಃ ಶರೀರಾವಯವಾಃ । ತಥಾ ಚ ವ್ಯಾಖ್ಯಾತಮ್ ತಸ್ಯ" ಪ್ರಾಚೀ ದಿಕ್" ಇತ್ಯಾದಿನಾ । ತೌ ಅಗ್ನ್ಯಾದಿತ್ಯೌ ಏತೌ ಯಥಾವಿಶೇಷಿತೌ ಅರ್ಕಾಶ್ವಮೇಧೌ ಕ್ರತುಫಲೇ ಅರ್ಕೋ ಯಃ ಪಾರ್ಥಿವೋಽಗ್ನಿಃ ಸ ಸಾಕ್ಷಾತ್ ಕ್ರಿಯಾತ್ಮಕಃ । ಕ್ರತೋಃ ಅಗ್ನಿಸಾಧ್ಯತ್ವಾತ್ ತದ್ರೂಪೇಣೈವ ನಿರ್ದೇಶಃ । ಕ್ರತುರೂಪಃ ಕ್ರತುಸಾಧ್ಯತ್ವಾಚ್ಚ ಫಲಸ್ಯ ಕ್ರತುರೂಪೇಣೈವ ನಿರ್ದೇಶಃ "ಆದಿತ್ಯೋಽಶ್ವಮೇಧಃ" ಇತಿ । ತೌ ಸಾಧ್ಯಸಾಧನೌ ಕ್ರತುಫಲಭೂತೌ ಅಗ್ನ್ಯಾದಿತ್ಯೌ ॥

(ಭಾಷ್ಯಾರ್ಥ)

ಹೀಗೆಯೇ[4] "ಏಷ ಹ ವಾ ಅಶ್ವಮೇಧೋ ಯಸ್ತಪತಿ" (ಇತ್ಯಾದಿವಾಕ್ಯದ

---

1. ಪ್ರಾಜಾಪತಿದೇವತಾಕನಾಗುವೆನು.

2. ಮಂತ್ರಸಂಸ್ಕೃತನಾದ ಪಶುವನ್ನು ಪ್ರಜಾಪತಿಗೇ ಕೊಡುತ್ತಾರೆಂಬುದು ಪ್ರಜಾಪತಿಯು ಹೀಗೆ ಮಾಡಿದನೆಂಬುದಕ್ಕೆ ಒಂದು ಗುರುತು ಎಂದಭಿಪ್ರಾಯ.

3. 'ಕ್ರತುತ್ವ' ಎಂಬ ಆ॥ ಪಾಠಕ್ಕಿಂತ ಈ ಪಾ॥ ಪಾಠವು ಮೇಲು.

4. ಏವಂಶಬ್ದಕ್ಕೆ ನಿಜವಾದ ಅರ್ಥವೇನೆಂಬುದನ್ನು ತಿಳಿಯುವದು ಕಷ್ಟ. ಫಲಾವಸ್ಥನಾದ ಪ್ರಜಾಪತಿಯಂತೆ ಎಂದು ಆ॥ ಟೀಕೆಯಲ್ಲಿದೆ. ಇದಕ್ಕೆ ಹೊಂದಿಕೆಯಾಗಲೆಂದೋ ಏನೋ ವಾ॥ ಪಾಠದಲ್ಲಿ ಈ ಮಾತನ್ನು ಹಿಂದಿನ ಭಾ.ಭಾ.ದ ಕೊನೆಗೆ ಸೇರಿಸಿದೆ. ಯಾಜ್ಞಿಕರು ಪ್ರಜಾಪತಿಯಂತೆ ಮಾಡುತ್ತಾರೆ ಎಂದು ಆಗ ಅರ್ಥಮಾಡಬೇಕಾಗುವದು. ಈ ಭಾ.ಭಾ.ಕ್ಕೆ ಸೇರಿದರೆ ಪಶುವಾಕ್ಯದಂತೆ ಕ್ರತುವಾಕ್ಯವನ್ನು ಅರ್ಥಮಾಡಿಕೊಳ್ಳಬೇಕು ಎಂಬರ್ಥವು ಹೊರಡುತ್ತದೆ.

ವಿಷಯದಲ್ಲಿಯೂ ತಿಳಿಯಬೇಕು). ಹೀಗಿರುವ ಪಶುವೆಂಬ ಸಾಧನದಿಂದ (ಮಾಡುವ) ಕ್ರತುವಿದೆಯಲ್ಲ, ಆ ಇದನ್ನು (ಶ್ರುತಿಯು) ಸಾಕ್ಷಾತ್ತಾಗಿ ಫಲರೂಪ ದಿಂದ ತಿಳಿಸುತ್ತದೆ. ಇದೇ ಅಶ್ವಮೇಧವು.[1] ಅದು ಯಾವದು ? ಯಾವ ಈ ಸೂರ್ಯನು ತಪಿಸುತ್ತಿರುವನಲ್ಲ, ತನ್ನ ತೇಜಸ್ಸಿನಿಂದ ಜಗತ್ತನ್ನು ಬೆಳಗುತ್ತಿರುವ ನಲ್ಲ, (ಅವನೇ). ಆ ಈ ಕ್ರತುಫಲಾತ್ಮನಾದ (ಆದಿತ್ಯನಿಗೆ) ಸಂವತ್ಸರವೆಂಬ ಕಾಲ ವಿಶೇಷವು ಆತ್ಮವು, ಶರೀರವು ; ಏಕೆಂದರೆ ಸಂವತ್ಸರವು ಅವನಿಂದ ಆಗತಕ್ಕದ್ದಾ ಗಿದೆ. ಮತ್ತು ಅದೇ (ಆದಿತ್ಯನು). ಅಗ್ನಿಸಾಧ್ಯನಾಗಿರುವದರಿಂದ ಕ್ರತುರೂಪ ವಾಗಿರುವ (ಆ) ಫಲವನ್ನು ಕ್ರತುರೂಪದಿಂದಲೇ ತಿಳಿಸಿರುತ್ತದೆ.[2] ಈ ಪಾರ್ಥಿವ ವಾದ ಅಗ್ನಿಯು ಸಾಧನಭೂತನಾದ ಅರ್ಕನು.[3] ಕ್ರತುವಿನಲ್ಲಿ ಚಯನಮಾಡುವ ಆ ಅರ್ಕನಿಗೆ ಈ ಮೂರು ಲೋಕಗಳೂ ಆತ್ಮಗಳು, ಶರೀರಾವಯವಗಳು. ಆದ್ದ ರಿಂದಲೇ (ಹಿಂದೆ ೩ನೆಯ ಕಂಡಿಕೆಯಲ್ಲಿ) 'ಅವನಿಗೆ ಪೂರ್ವದಿಕ್ಕು ಶಿರಸ್ಸು' ಎಂಬಿವೇ ಮುಂತಾದ (ವಾಕ್ಯಗಳಿಂದ) ವಿವರಣೆಮಾಡಿರುತ್ತದೆ.[4] (ಹಿಂದೆ) ಹೇಳಿದ ವಿಶೇಷಣಗಳುಳ್ಳ ಅರ್ಕ, ಅಶ್ವಮೇಧ- ಇವರು[5] ಕ್ರತುಫಲಗಳಾಗಿರುತ್ತಾರೆ.[6] ಪಾರ್ಥಿವಾಗ್ನಿ ಎಂಬ ಅರ್ಕನಿದಾನಲ್ಲ, ಅವನು ನೇರಾಗಿ ಕ್ರತುರೂಪನೇ, ಕ್ರಿಯಾ ರೂಪವಾದ ಕ್ರತುವು ಅಗ್ನಿಸಾಧ್ಯವಾಗಿರುತ್ತದೆಯಾದ್ದರಿಂದ ಆ (ಕ್ರತುರೂಪ) ದಿಂದಲೇ ಅವನ್ನು ನಿರ್ದೇಶನಮಾಡಿದೆ ; ಫಲವಾದ (ಆದಿತ್ಯನು) ಕ್ರತುಸಾಧ್ಯ ನಾಗಿರುವದರಿಂದ 'ಆದಿತ್ಯನು ಅಶ್ವಮೇಧವು' ಎಂದು ಕ್ರತುರೂಪದಿಂದಲೇ ಅವ ನನ್ನು ತಿಳಿಸಿದೆ. ಆ ಈ ಸಾಧ್ಯಸಾಧನವಾಗಿರುವ ಅರ್ಕಾಶ್ವಮೇಧಗಳು, ಅಗ್ನ್ಯಾ ದಿತ್ಯರು, ಕ್ರತುಫಲವಾಗಿರುವರು.

## ಆದಿತ್ಯ, ಅಗ್ನಿ- ಎರಡೂ ಒಂದೇ ದೇವತೆ

(ಭಾಷ್ಯ)

೪೧. ಸಾ ಉ ಪುನಃ ಭೂಯಃ ಏಕೈವ ದೇವತಾ ಭವತಿ। ಕಾ ಸಾ ?

---

1. ಅಶ್ವಮೇಧದ ಫಲವು ಎಂದರ್ಥ.

2. ಆದಿತ್ಯನು ಫಲವಾಗಿರುವದರಿಂದ ಕ್ರತುರೂಪನು ; ಅಗ್ನಿಯು ಸಾಧನರೂಪನಾದ್ದ ರಿಂದ ಕ್ರತುರೂಪನು. ಅಂತೂ ಇಬ್ಬರೂ ಕ್ರತುರೂಪರೇ.

3. ಪ್ರಜಾಪತಿಯ ದೇಹದಿಂದ ಹೊರಕ್ಕೆ ಬಂದಿತೆಂದು ಹೇಳಿದ ತೇಜವು ಇವನೇ.

4. ಅಗ್ನಿಯೂ ಆದಿತ್ಯನೂ ಒಂದೇ ಎಂಬ ಅಭಿಪ್ರಾಯದಿಂದ ಅಗ್ನಿಗೆ ಈ ವರ್ಣನೆ ಯನ್ನು ಮಾಡಿತ್ತು ಎಂದು ಭಾವ.

5. ಅಗ್ನಿ, ಆದಿತ್ಯ—ಇವರು ಎಂದರ್ಥ.

6. ಅರ್ಕನು ಕ್ರತು, ಅಶ್ವಮೇಧರೂಪನಾದ ಆದಿತ್ಯನು ಫಲ. ಇದನ್ನು ಭಾಷ್ಯಕಾರರೇ ಮುಂದಿನ ವಾಕ್ಯದಲ್ಲಿ ಹೇಳಿರುತ್ತಾರೆ.

ಮೃತ್ಯುರೇವ। ಪೂರ್ವಮ್ ಅಪಿ ಏಕೈವ ಆಸೀತ್ ಕ್ರಿಯಾಸಾಧನಫಲಭೇದಾಯ ವಿಭಕ್ತಾ। ತಥಾ ಚೋಕ್ತಮ್ "ಸ ತ್ರೇಧಾತ್ಮಾನಂ ವ್ಯಕುರುತ" ಇತಿ। ಸಾ ಪುನರಪಿ ಕ್ರಿಯಾನಿರ್ವೃತ್ತ್ಯುತ್ತರಕಾಲಮ್ ಏಕೈವ ದೇವತಾ ಭವತಿ ಮೃತ್ಯುರೇವ ಫಲ ರೂಪಃ ||

(ಭಾಷ್ಯಾರ್ಥ)

ಅದು ಮತ್ತೂ ಇನ್ನೊಮ್ಮೆಯೂ ಒಂದೇ ದೇವತೆಯಾಗುತ್ತದೆ.[1] ಆ (ದೇವತೆ) ಯಾವದು? ಎಂದರೆ ಮೃತ್ಯುವೇ, ಮೊದಲೂ (ಅದು) ಒಂದೇ ಆಗಿತ್ತು; ಕ್ರಿಯೆ, ಸಾಧನ, ಫಲ–ಎಂಬ ಭೇದಕ್ಕಾಗಿ ವಿಂಗಡವಾಯಿತು. ಆದ್ದರಿಂದಲೇ "ಅವನು ತನ್ನನ್ನು ಮೂರು ಪ್ರಕಾರವಾಗಿ ಮಾಡಿಕೊಂಡನು" (೧-೨-೩) ಎಂದು ಹೇಳಿತ್ತು.[2] ಆ (ದೇವತೆಯು) ಮತ್ತೂ ಕ್ರಿಯೆಯು ಆದಮೇಲಿನ ಕಾಲದಲ್ಲಿ ಒಂದೇ ದೇವತೆಯಾಗುತ್ತದೆ, ಎಂದರೆ ಫಲರೂಪನಾದ ಮೃತ್ಯುವೇ ಆಗುತ್ತದೆ.[3]

## ಮೃತ್ಯೂಪಾಸನೆಯ ಫಲ

(ಭಾಷ್ಯ)

೪೨. ಯಃ ಪುನಃ ಏವಮ್ ಏನಮ್ ಅಶ್ವಮೇಧಂ ಮೃತ್ಯುಮೇಕಾಂ ದೇವತಾಂ ವೇದ ಅಹಮೇವ ಮೃತ್ಯುರಸ್ಮಿ ಅಶ್ವಮೇಧಃ ಏಕಾ ದೇವತಾ ಮದ್ರೂಪಾ ಅಶ್ವಾಗ್ನಿಸಾಧನಸಾಧ್ಯಾ ಇತಿ। ಸಃ ಅಪಜಯತಿ ಪುನರ್ಮೃತ್ಯುಂ ಪುನರ್ಮರಣಮ್। ಸಕೃತ್ ಮೃತ್ವಾ ಪುನರ್ಮರಣಾಯ ನ ಜಾಯತೇ ಇತ್ಯರ್ಥಃ। ಅಪಜಿತೋಽಪಿ ಮೃತ್ಯುಃ ಏನಂ ಪುನರಾಪ್ನುಯಾತ್ ಇತ್ಯಾಶಙ್ಕ್ಯ ಆಹ–ನೈನಂ ಮೃತ್ಯುರಾಪ್ನೋತಿ। ಕಸ್ಮಾತ್? ಮೃತ್ಯುರಸ್ಯ ಏವಂವಿದಃ ಆತ್ಮಾ ಭವತಿ। ಕಿಂ ಚ ಮೃತ್ಯುರೇವ ಫಲ ರೂಪಃ ಸನ್ ಏತಾಸಾಂ ದೇವತಾನಾಮ್ ಏಕೋ ಭವತಿ। ತಸ್ಯ ಏತತ್ ಫಲಮ್ ||

---

1. ಈಗ ಅಗ್ನಿ, ಆದಿತ್ಯ–ಎಂದು ಎರಡು ದೇವತೆಗಳಾಗಿದ್ದರೂ ಅದು ಒಂದೇ ದೇವತೆ ಎಂದರ್ಥ.

2. ಸಾಧನರೂಪನಾಗಿ ಅಗ್ನಿ, ಕ್ರಿಯಾರೂಪನಾಗಿ ವಾಯು, ಫಲರೂಪನಾಗಿ ಆದಿತ್ಯ– ಎಂದು ಮೂರಾಗಿ ವಿಂಗಡವಾಗಿತ್ತು ಎಂದು ಅಲ್ಲಿ ಹೇಳಿದೆ ಎಂದರ್ಥ.

3. ಮೃತ್ಯುವೆಂದರೆ ಪ್ರಾಣನೇ. ಅವನೇ ಮನಆದಿಸೃಷ್ಟಿಯ ಮೂಲಕ ವಿರಾಟ್ಪುರುಷನನ್ನು ಸೃಜಿಸಿ ಮೂರು ದೇವತೆಯಾಗಿದ್ದವನು.

(ಭಾಷ್ಯಾರ್ಥ)

ಯಾವನಾದರೆ ಹೀಗೆ ಈ ಅಶ್ವಮೇಧವನ್ನು ಮೃತ್ಯುವೆಂಬ ಒಂದೇ ದೇವತೆಯೆಂದು ಅರಿತುಕೊಳ್ಳುವನೋ-(ಹೇಗೆಂದರೆ) ನಾನೇ ಅಶ್ವಮೇಧವೆಂಬ ಒಂದೇ ದೇವತೆಯಾಗಿರುವ ಮೃತ್ಯು; (ಈ ದೇವತೆಯು) ನನ್ನ ರೂಪವಾಗಿರುವ ಅಶ್ವ, ಅಗ್ನಿ-ಇವುಗಳಿಂದ ಪಡೆಯತಕ್ಕದ್ದು ಎಂದು (ಯಾವನು ಉಪಾಸನೆಮಾಡುವನೋ)-ಅವನು ಪುನರ್ಮೃತ್ಯುವನ್ನು ಎಂದರೆ ಮತ್ತೆ ಸಾಯುವದನ್ನು ಅಪಜಯಿಸುತ್ತಾನೆ; ಒಂದು ಸಲ ಸತ್ತ ಬಳಿಕ ಮತ್ತೆ ಸಾಯುವದಕ್ಕೆ ಹುಟ್ಟುವದಿಲ್ಲ ಎಂದರ್ಥ. ಮೃತ್ಯುವು ಅಪಜಿತವಾದರೂ ಮತ್ತೆ ಇವನನ್ನು ಆಕ್ರಮಿಸಬಹುದಲ್ಲ! ಎಂದು ಆಶಂಕಿಸಿದರೆ (ಅದಕ್ಕೆ ಶ್ರುತಿ) ಹೇಳುತ್ತದೆ. ಇವನನ್ನು ಮೃತ್ಯು ಆಕ್ರಮಿಸುವದಿಲ್ಲ, ಏಕೆ? ಎಂದರೆ ಇವನಿಗೆ ಹೀಗೆಂದು ಉಪಾಸನೆಮಾಡಿದವನಿಗೆ ಮೃತ್ಯುವು ಆತ್ಮನಾಗುತ್ತಾನೆ. ಮತ್ತು (ಅವನು) ಫಲರೂಪನಾದ ಮೃತ್ಯುವೇ ಆಗಿ ಈ ದೇವತೆಗಳಲ್ಲಿ ಒಂದಾಗಿಬಿಡುತ್ತಾನೆ. (ಹೀಗೆ ಉಪಾಸನೆಮಾಡಿದ) ಅವನಿಗೆ ಇದು ಫಲವು.



# ಒಂದನೆಯ ಎರಡನೆಯ ಬ್ರಾಹ್ಮಣಗಳ ಸಾರ

ವಿ. ಸೂ :—ಇಲ್ಲಿರುವ ಸಂಖ್ಯೆಗಳು ಆಯಾ ಬ್ರಾಹ್ಮಣದ ಕಂಡಿಕೆಗಳನ್ನು ಸೂಚಿಸುವವು.

## ಒಂದನೆಯ ಬ್ರಾಹ್ಮಣ

೧-೨. ಅಶ್ವಮೇಧದಲ್ಲಿ ಉಪಯೋಗಿಸುವ ಅಶ್ವದ ಅವಯವಗಳಲ್ಲಿ ಉಷಃಕಾಲವೇ ಮುಂತಾದ ದೃಷ್ಟಿಗಳನ್ನು ಇಟ್ಟು ಉಪಾಸನೆಮಾಡಬೇಕು. ಆ ಕುದುರೆಯ ಮುಂಗಡೆಯಲ್ಲಿಯೂ ಹಿಂಗಡೆಯಲ್ಲಿಯೂ ಇಟ್ಟಿರುವ ಚಿನ್ನದ ಮತ್ತು ಬೆಳ್ಳಿಯ ಬಟ್ಟಲುಗಳಲ್ಲಿ ಅಹಸ್ಸು ಮತ್ತು ರಾತ್ರಿ ಎಂಬ ದೃಷ್ಟಿಯನ್ನಿಡಬೇಕು. ಅವುಗಳಿಗೆ ಪೂರ್ವಪಶ್ಚಿಮಸಮುದ್ರಗಳೇ ಕಾರಣವೆಂದು ಕಲ್ಪಿಸಬೇಕು. ಅಶ್ವವು ಬೇರೆಬೇರೆಯ ಜಾತಿಯ ಕುದುರೆಯಾಗಿ ದೇವತೆಗಳನ್ನೂ ಗಂಧರ್ವರನ್ನೂ ಮನುಷ್ಯರನ್ನೂ ಹೊರುವ ಪ್ರಶಸ್ತಪ್ರಾಣಿ ಎಂದು ಭಾವಿಸಬೇಕು. ಹೀಗೆ ಕಲ್ಪಿಸಿಕೊಂಡು ಮಾಡುವ ಉಪಾಸನೆಯಿಂದ ಅಶ್ವಮೇಧದ ಅಶ್ವವು ಪ್ರಜಾಪತಿಯೇ ಎಂಬ ಭಾವನೆಯು ನಿಂತುಕೊಳ್ಳುವದು.

## ಎರಡನೆಯ ಬ್ರಾಹ್ಮಣ

೧-೨. ಈ ಸ್ಥೂಲಜಗತ್ತು ಹೊರತೋರಿಕೊಂಡು ಉಂಟಾಗುವ ಮೊದಲು ಇದನ್ನು ಹಸಿವಿನ ಲಕ್ಷಣವುಳ್ಳ ಮೃತ್ಯುವೆಂಬ ಹಿರಣ್ಯಗರ್ಭನೇ ಆವರಿಸಿಕೊಂಡಿದ್ದನು. ಹಸಿವೇ ಮತ್ತೊಬ್ಬರ ಮರಣಕ್ಕೆ ಕಾರಣವಾಗುವದರಿಂದ ಹಸಿವು ಮೃತ್ಯುವೇ. ವಿಜ್ಞಾನಾತ್ಮನಿಗೆ ಹಸಿವು ಧರ್ಮವು, ಆದ್ದರಿಂದ ವಿಜ್ಞಾನಾವಸ್ಥೆಯಲ್ಲಿರುವ ಹಿರಣ್ಯಗರ್ಭನು ಮೃತ್ಯುವೇ. ಆ ಮೃತ್ಯುವು ತನಗೆ ಮನಸ್ಸಾಗಬೇಕೆಂಬ ಇಚ್ಛೆಯಿಂದ ಮನಸ್ಸನ್ನು ಹೊರಗೆಡವಿದನು. ಆ ಮನಸ್ಸಿನಿಂದೊಡಗೂಡಿ ತನ್ನನ್ನು ತಾನೇ ಅರ್ಚಿಸಿದನು, ಕೃತಾರ್ಥನಾದೆನು ಎಂದುಕೊಂಡನು; ಆ ಸಂದರ್ಭದಲ್ಲಿ ನೀರು ಉತ್ಪನ್ನವಾಯಿತು. ಅರ್ಚನೆಯಿಂದಾದ ಅಪ್ಪಿಗೆ ಸಂಬಂಧಪಟ್ಟಿರುವದರಿಂದ ಅಶ್ವಮೇಧದಲ್ಲಿ ಉಪಯೋಗಿಸುವ ಅಗ್ನಿಗೆ ಅರ್ಕನೆಂದು ಹೆಸರು; ಅರ್ಕನಿಗೆ ಕಾರಣವಾಗಿರುವದರಿಂದ ಅಪ್ಪೂ ಅರ್ಕನೆನಿಸುತ್ತದೆ. ಅಪ್ಪಿನ ಗಟ್ಟಿಭಾಗವು ಹೆಪ್ಪಾಗಿ ಪೃಥ್ವಿಯಾಯಿತು. ಪೃಥ್ವಿಯನ್ನುಂಟುಮಾಡಿದ್ದರಿಂದ ಹಿರಣ್ಯಗರ್ಭನು ಶ್ರಾಂತನಾದನು. ಶ್ರಾಂತನಾಗಿ ತಪ್ತನಾದ ಹಿರಣ್ಯಗರ್ಭನಿಂದ ಹುಟ್ಟಿದ್ದ ತೇಜೋರಸವೇ ಮೇಲೆ ಹೇಳಿದ ಅರ್ಕನೆಂಬ ಅಗ್ನಿ. ಅವನೇ ವಿರಾಡ್ರೂಪಪ್ರಜಾಪತಿಯು.

೩. ಆ ವಿರಾಡ್ರೂಪನಾದ ಅಗ್ನಿಯು ತಾನು ಇದ್ದಂತೆಯೇ ಇದ್ದು ತನ್ನನ್ನು ಆದಿತ್ಯ, ವಾಯು, ಅಗ್ನಿ–ಎಂಬ ಮೂರು ಪ್ರಕಾರವಾಗಿ ವಿಂಗಡಿಸಿಕೊಂಡನು. ಈ ಅಗ್ನಿಯೇ ಅಶ್ವಮೇಧದಲ್ಲಿ ಉಪಯೋಗಿಸಲ್ಪಡುವ ಚಿತ್ಯಾಗ್ನಿಯು. ಈ ಅಗ್ನಿಯ ಅವಯವಗಳಲ್ಲಿ ಪ್ರಾಗ್ದಿಕ್ಕೇ ಮುಂತಾದ ದೃಷ್ಟಿಯನ್ನಿಟ್ಟುಕೊಂಡು ಭಾವನೆಮಾಡಬೇಕು.

೪-೫. ಮೃತ್ಯುವು ವಿರಾಡ್ರೂಪನಾಗಿ ಆದಿತ್ಯಾದಿರೂಪದಿಂದ ಮೂರು ಪ್ರಕಾರವಾಗಿ ವಿಂಗಡವಾದದ್ದು ಹೇಗೆಂದರೆ, ಅವನು ನನಗೆ ಶರೀರನಾಗಬೇಕು ಎಂದು ಬಯಸಿ ಅವ್ಯಕ್ತವಾಗಿದ್ದ ತ್ರಯೀಲಕ್ಷಣವಾದ ವಾಕ್ಕನ್ನು ಈ ಮೊದಲೇ ಹೊರತೋರಿಕೊಂಡಿದ್ದ ಮನಸ್ಸಿನಿಂದ ಅನ್ವಾಲೋಚನೆಮಾಡಿದನು; ಎಂದರೆ ವೇದದಲ್ಲಿ ಹೇಳಿರುವ ಸೃಷ್ಟಿಕ್ರಮವನ್ನು ಆಲೋಚಿಸಿಕೊಂಡನು. ಬಳಿಕ ಅಪ್ಪನ್ನು ಸೃಷ್ಟಿಮಾಡಿ ಹಿಂದಿನ ಜನ್ಮದ ಜ್ಞಾನಕರ್ಮವೆಂಬ ಬೀಜರೂಪದಿಂದ ಅದರೊಳಗೆ ಪ್ರವೇಶಿಸಿ ಒಂದು ಸಂವತ್ಸರದಷ್ಟು ಕಾಲ ಗರ್ಭದಲ್ಲಿಟ್ಟುಕೊಂಡಿದ್ದು ಬಳಿಕ ಅಂಡವನ್ನು ಒಡೆದನು. ಅದರಿಂದ ಮೇಲೆ ಹೇಳಿದ ವಿರಾಡ್ರೂಪನಾದ ಪ್ರಜಾಪತಿಯು ಉದ್ಭವಿಸಿದನು.

ಆಗ ಹಸಿವಿನಿಂದ ಕೂಡಿದ್ದ ಆ ಮೃತ್ಯುವು ಹುಟ್ಟಿದ ವಿರಾಡ್ರೂಪಕುಮಾರನನ್ನು ತಿನ್ನುವದಕ್ಕೆ ಹೋದನು. ಆ ಮಗನು ಹೆದರಿಕೆಯಿಂದ ಭಾಣ್! ಎಂದು ಕೂಗಿಕೊಂಡನು. ಇದೇ ಶಬ್ದದ ಉತ್ಪತ್ತಿಯು. ಮೃತ್ಯುವು "ಇವನನ್ನು ಈಗಲೇ ತಿನ್ನಬಾರದು; ನನಗೆ ಅನ್ನವು ಬಹಳವಾಗಬೇಕು" ಎಂದುಕೊಂಡು ವಾಙ್ಮನಸ್ಸುಗಳಿಂದ ಋಕ್ಕುಗಳು, ಯಜುಸ್ಸುಗಳು, ಸಾಮಗಳು, ಛಂದಸ್ಸುಗಳು, ಯಜ್ಞಗಳು, ಯಜ್ಞವನ್ನು ಮಾಡುವ ಪ್ರಜೆಗಳು, ಪಶುಗಳು–ಎಲ್ಲವನ್ನೂ ಸೃಜಿಸಿದನು. ಹೀಗೆ ತಾನು ಏನೇನು ಸೃಜಿಸಿದನೋ ಅದನ್ನೆಲ್ಲ ತಿನ್ನುವದಕ್ಕೆ ಹೋದದ್ದರಿಂದ ಅವನಿಗೆ ಅದಿತಿ ಎಂದು ಹೆಸರು ಬಂದಿದೆ.

೬-೭. ಆ ಪ್ರಜಾಪತಿಯು "ಮತ್ತೊಮ್ಮೆ ದೊಡ್ಡ ಯಜ್ಞವನ್ನು ಮಾಡುವೆನು" ಎಂದುಕೊಂಡನು. ಆ ಮಹಾಸಂಕಲ್ಪದಿಂದ ಅವನು ಶ್ರಾಂತನಾಗಿ ತಪ್ತನಾದನು. ಅದರಿಂದ ಅವನ ಶರೀರದಿಂದ ಪ್ರಾಣಗಳೆಂಬ ಯಶಸ್ಸೂ ವೀರ್ಯವೂ ಹೊರಕ್ಕೆ ಬಂದವು. ಹೀಗೆ ಪ್ರಾಣಗಳು ಹೊರಕ್ಕೆ ಬರುತ್ತಲೂ ಶರೀರವು ಊದಿಕೊಳ್ಳುವದಕ್ಕೆ ಮೊದಲಾಯಿತು, ಮೇಧ್ಯವಲ್ಲದೆಯೂ ಹೋಯಿತು. ಅವನಿಗೆ ಆ ಶರೀರದಲ್ಲಿಯೇ ಮನಸ್ಸಿತ್ತು. ಆಗ ಅವನು "ಈ ಶರೀರವು ಮೇಧ್ಯವಾಗಲಿ, ನಾನು ಇದರಿಂದ ಶರೀರಿಯಾಗುವೆನು" ಎಂದು ಬಯಸಿದನು. (ಅಶ್ವತ್) ಊದಿಕೊಂಡಿತು, ಆದ್ದರಿಂದ ಅಶ್ವವಾಯಿತು; ಮತ್ತೆ ಪ್ರಾಣಪ್ರವೇಶದಿಂದ ಮೇಧ್ಯವಾಯಿತಾದ್ದರಿಂದ ಅಶ್ವಮೇಧ ಎನ್ನಿಸಿಕೊಂಡಿತು. ಹೀಗೆಂದು ತಿಳಿದವನೇ ಅಶ್ವಮೇಧವನ್ನು ಸರಿಯಾಗಿ ಉಪಾಸನೆಮಾಡಿದವನು.

ಆ ಪ್ರಜಾಪತಿಯು ತನ್ನ ಶರೀರವನ್ನು ಅಶ್ವವೆಂದು ಕಲ್ಪಿಸಿಕೊಂಡು ಅದನ್ನು ಕಟ್ಟಹಾಕದೆ ಒಂದು ವರ್ಷದವರೆಗೂ ಬಿಟ್ಟುಬಿಟ್ಟಂತೆ ಭಾವಿಸಿ ಆಮೇಲೆ ತನಗಾಗಿ ಯಜ್ಞದಲ್ಲಿ ಅರ್ಪಿಸಿಕೊಂಡನು. ಪಶುಗಳನ್ನು ಮಿಕ್ಕ ದೇವತೆಗಳಿಗೆ ಕೊಟ್ಟನು. ಅದರಿಂದಲೇ ಈಗಲೂ ಯಾಜ್ಞಿಕರು ಸರ್ವದೇವತ್ಯನೆಂದು ಪ್ರೋಕ್ಷಿಸಿದ ಪಶುವನ್ನು ಪ್ರಜಾಪತಿಗೂ ಮಿಕ್ಕ ಪಶುಗಳನ್ನು ಆಯಾ ದೇವತೆಗಳಿಗೂ ಅರ್ಪಿಸುತ್ತಾರೆ. ಅಶ್ವಮೇಧದಲ್ಲಿ ಅಧಿಕಾರವಿಲ್ಲದವರೂ ಹೀಗೆಯೇ ತಮ್ಮ ಶರೀರವನ್ನೇ ಅಶ್ವವೆಂದು ಉಪಾಸನೆಮಾಡಿ ಪ್ರಜಾಪತಿಗೆ ಅರ್ಪಣೆಮಾಡಬೇಕು.

ಹೊರಗೆ ತಪಿಸುತ್ತಿರುವ ಆದಿತ್ಯನಿದಾನಲ್ಲ, ಇವನೇ ಅಶ್ವಮೇಧದ ಫಲವಾಗಿರುವದರಿಂದ 'ಅಶ್ವಮೇಧ'ವೆನಿಸುವನು. ಅವನಿಗೆ ಸಂವತ್ಸರವು ಶರೀರವು. ಇನ್ನು ಅಶ್ವಮೇಧಕ್ರತುವಿಗೆ

ಸಾಧನವಾಗಿರುವ ಅಗ್ನಿಯಿದಾನಲ್ಲ, ಅದೇ ಅರ್ಕನು; ಅವನಿಗೆ ಈ ಲೋಕಗಳೆಲ್ಲವೂ ಶರೀರವು. ಹೀಗೆ ಅಗ್ನಿಯು ಅರ್ಕನಾಗಿಯೂ ಆದಿತ್ಯನು ಅಶ್ವಮೇಧವಾಗಿಯೂ ಕ್ರತುರೂಪರೂ ಪ್ರಜಾಪತಿ ರೂಪರೂ ಆಗಿರುತ್ತಾರೆ.

ಸರಿಯಾಗಿ ನೋಡಿದರೆ ಇವೆರಡೂ ಮೃತ್ಯುವೆಂಬ ಒಂದೇ ದೇವತೆಯಾಗುತ್ತದೆ. ಯಾವನು ಹೀಗೆಂದು–ಮೃತ್ಯುವೇ ತಾನೆಂದು– ಉಪಾಸನೆಮಾಡುತ್ತಾನೋ ಅವನು ಪುನರ್ಮೃತ್ಯುವನ್ನು ಜಯಿಸುತ್ತಾನೆ. ಅವನನ್ನು ಮೃತ್ಯು ಆಕ್ರಮಿಸುವದಿಲ್ಲ; ಏಕೆಂದರೆ ಮೃತ್ಯು ಅವನಿಗೆ ಆತ್ಮನೇ ಆಗಿಬಿಟ್ಟಿರುತ್ತಾನೆ. ಅವನು ಮೃತ್ಯುವೇ ಆಗಿ ಈ ದೇವತೆಗಳಲ್ಲಿ ಒಂದಾಗಿಬಿಡುತ್ತಾನೆ.



# ಒಂದನೆಯ ಅಧ್ಯಾಯ—ಮೂರನೆಯ ಬ್ರಾಹ್ಮಣ

## (ಪ್ರಾಣೋಪಾಸನೆ)

## ಈ ಬ್ರಾಹ್ಮಣದ ಸಂಬಂಧ

(ಭಾಷ್ಯ)

೪೩. ದ್ವಯಾ ಹ ಇತ್ಯಾದ್ಯಸ್ಯ ಕಃ ಸಂಬನ್ಧಃ? ಕರ್ಮಣಾಂ ಜ್ಞಾನ ಸಹಿತಾನಾಂ ಪರಾ ಗತಿಃ ಉಕ್ತಾ ಮೃತ್ಯ್ವಾತ್ಮಭಾವಃ ಅಶ್ವಮೇಧಗತ್ಯುಕ್ತ್ಯಾ। ಅಥ ಇದಾನೀಂ ಮೃತ್ಯ್ವಾತ್ಮಭಾವಸಾಧನಭೂತಯೋಃ ಕರ್ಮಜ್ಞಾನಯೋಃ ಯತಃ ಉದ್ಭವಃ ತತ್ಪ್ರಕಾಶನಾರ್ಥಮ್ ಉದ್ಗೀಥಬ್ರಾಹ್ಮಣಮ್ ಆರಭ್ಯತೇ। ನನು ಮೃತ್ಯ್ವಾತ್ಮಭಾವಃ ಪೂರ್ವತ್ರ ಜ್ಞಾನಕರ್ಮಣೋಃ ಫಲಮ್ ಉಕ್ತಮ್। ಉದ್ಗೀಥಜ್ಞಾನಕರ್ಮಣೋಸ್ತು ಮೃತ್ಯ್ವಾತ್ಮಭಾವಾತಿಕ್ರಮಣಂ ಫಲಂ ವಕ್ಷ್ಯತಿ। ಅತಃ ಭಿನ್ನವಿಷಯತ್ವಾತ್ ಫಲಸ್ಯ ನ ಪೂರ್ವಕರ್ಮಜ್ಞಾನೋದ್ಭವಪ್ರಕಾಶ ನಾರ್ಥಮ್ ಇತಿ ಚೇತ್। ನಾಯಂ ದೋಷಃ। ಅಗ್ನ್ಯಾದಿತ್ಯಾತ್ಮಭಾವತ್ವಾತ್ ಉದ್ಗೀಥಫಲಸ್ಯ। ಪೂರ್ವತ್ರಾಪಿ ಏತದೇವ ಫಲಮುಕ್ತಮ್ "ಏತಾಸಾಂ ದೇವತಾ ನಾಮ್ ಏಕೋ ಭವತಿ" ಇತಿ। ನನು ಮೃತ್ಯುಮತಿಕ್ರಾನ್ತಃ ಇತ್ಯಾದಿ ವಿರುದ್ಧಮ್। ನ। ಸ್ವಾಭಾವಿಕಪಾಪ್ಮಾಸಙ್ಗವಿಷಯತ್ವಾತ್ ಅತಿಕ್ರಮಣಸ್ಯ ॥

(ಭಾಷ್ಯಾರ್ಥ)

'ದ್ವಯಾ ಹ' ಮುಂತಾದ (ಬ್ರಾಹ್ಮಣದ) ಸಂಬಂಧವೇನು? ಎಂದರೆ ಜ್ಞಾನ ಸಹಿತವಾದ[1] ಕರ್ಮಗಳಿಗೆ (ಆಗುವ) ಮೃತ್ಯ್ವಾತ್ಮಭಾವವೆಂಬ (ಕೊನೆಯ) ಹೆಚ್ಚಿನ ಗತಿಯನ್ನು ಅಶ್ವಮೇಧದ ಗತಿಯನ್ನು ಹೇಳುವದರಿಂದ ತಿಳಿಸಿದ್ದಾಯಿತು. ಇನ್ನು ಈಗ ಮೃತ್ಯ್ವಾತ್ಮಭಾವವನ್ನು ಪಡೆಯುವದಕ್ಕೆ ಸಾಧನವಾಗಿರುವ ಕರ್ಮ ಜ್ಞಾನಗಳು ಏತರಿಂದ ಉಂಟಾಗುತ್ತವೆಯೋ ಅದನ್ನು ಹೊರಪಡಿಸುವದಕ್ಕೆ (ಈ) ಉದ್ಗೀಥಬ್ರಾಹ್ಮಣವನ್ನು ಆರಂಭಿಸಿರುತ್ತದೆ.[3]

---

1. ಉಪಾಸನಾಸಹಿತವಾದ.

2. ಅಶ್ವಮೇಧಕರ್ಮವನ್ನೂ ಉಪಾಸನೆಯನ್ನೂ ಹೇಳಿರುವದು ಉಪಲಕ್ಷಣಕ್ಕಾಗಿ.

3. ಇದನ್ನು ಉದ್ಗೀಥಬ್ರಾಹ್ಮಣವೆಂದು ಕರೆದಿದ್ದರೂ ಇಲ್ಲಿ ಹೇಳಿರುವ ವಿದ್ಯೆಗೂ ಛಾಂದೋಗ್ಯದ ೧-೩-೧ರಲ್ಲಿ ಹೇಳಿರುವ ಉದ್ಗೀಥವಿದ್ಯೆಗೂ ತಾರತಮ್ಯವಿದೆ. ಸೂ. ಭಾ. ೩-೩-೬ ನೋಡಿ.

(ಆಕ್ಷೇಪ):–ಮೃತ್ಯ್ವಾತ್ಮಭಾವವೇ[1] ಜ್ಞಾನಕರ್ಮಗಳ ಫಲವೆಂದು ಹಿಂದೆ ಹೇಳಲಾಗಿದೆ. ಉದ್ಗೀಥಜ್ಞಾನ, ಮತ್ತು ಕರ್ಮಗಳಿಗೋ ಎಂದರೆ ಮೃತ್ಯ್ವಾತ್ಮಭಾವವನ್ನು ಅತಿಕ್ರಮಿಸುವದೇ ಫಲವು ಎಂದು ಮುಂದೆ ಹೇಳಲಾಗುವದು. ಆದ್ದರಿಂದ ಫಲವು ಬೇರೆಬೇರೆಯ ವಿಷಯದ್ದಾದ್ದರಿಂದ ಹಿಂದಿನ ಕರ್ಮಜ್ಞಾನಗಳು ಉಂಟಾಗುವ (ಕಾರಣವನ್ನು) ತಿಳಿಸುವದಕ್ಕಾಗಿ (ಬ್ರಾಹ್ಮಣವು ಬಂದಿದೆ ಎನ್ನುವದು) ಸರಿಯಲ್ಲ.

(ಪರಿಹಾರ):–ಇದು ದೋಷವಲ್ಲ. ಏಕೆಂದರೆ ಉದ್ಗೀಥದ ಫಲವೆಂದರೆ ಆಗ್ನ್ಯಾದಿತ್ಯಭಾವವೇ. ಹಿಂದೆಯೂ "ಈ ದೇವತೆಗಳಲ್ಲಿ ಒಂದಾಗುತ್ತಾನೆ" ಎಂದು ಇದೇ ಫಲವನ್ನೇ ಹೇಳಿದೆ,

(ಆಕ್ಷೇಪ) :–"ಮೃತ್ಯುವನ್ನು ಅತಿಕ್ರಮಿಸಿ (ಹೊಳೆಯುತ್ತಿರುವನು)." (೧-೩-೧೨; ೧೩,೧೪) ಎಂದು ಮುಂತಾಗಿ ಹೇಳಿರುವದು (ಇದಕ್ಕೆ) ವಿರುದ್ಧವಲ್ಲವೆ ?

(ಪರಿಹಾರ):–ಹಾಗಲ್ಲ. (ಇಲ್ಲಿ) ಅತಿಕ್ರಮಿಸುವದು ಎಂಬುದು ಸ್ವಾಭಾವಿಕ ಪಾಪದಲ್ಲಿ[2] ಆಸಕ್ತಿಯಿರುವವರ ವಿಷಯವಾದದ್ದು.

## ಆಖ್ಯಾಯಿಕಾಸಂಬಂಧ

(ಭಾಷ್ಯ)

೪೪. ಕೋಽಸೌ ಸ್ವಾಭಾವಿಕಃ ಪಾಪ್ಮಾಸಙ್ಗೋ ಮೃತ್ಯುಃ? ಕುತೋ ವಾ ತಸ್ಯೋದ್ಭವಃ ಕೇನ ವಾ ತಸ್ಯ ಅತಿಕ್ರಮಣಮ್ ? ಕಥಂ ವಾ ? ಇತ್ಯೇತಸ್ಯ ಅರ್ಥಸ್ಯ ಪ್ರಕಾಶನಾಯ ಆಖ್ಯಾಯಿಕಾ ಆರಭ್ಯತೇ | ಕಥಮ್ ?–

(ಭಾಷ್ಯಾರ್ಥ)

ಈ ಸ್ವಾಭಾವಿಕವಾದ ಪಾಪಾಸಕ್ತಿ ಎಂಬ ಮೃತ್ಯು ಯಾವದು ? ಅದು ಏತರಿಂದ ಉಂಟಾಗುತ್ತದೆ? ಅದನ್ನು ದಾಟುವದಾದರೂ ಏತರಿಂದ ? ಮತ್ತು ಹೇಗೆ?– ಎಂಬೀ ಅರ್ಥವನ್ನು ಬೆಳಕಿಗೆ ಹಿಡಿಯುವದಕ್ಕಾಗಿ ಆಖ್ಯಾಯಿಕೆಯನ್ನು ಆರಂಭಿಸಿರುತ್ತದೆ. ಹೇಗೆಂದರೆ :—

---

1. ಮೃತ್ಯುವೇ ತಾನಾಗುವದು.
2. ಅವಿದ್ಯೆಯಿಂದ ಸ್ವಾಭಾವಿಕವಾಗಿ ಕಾಣುವ ಪಾಪದಲ್ಲಿ.

## ದೇವತೆಗಳು ಉದ್ಗೀಥದಿಂದ ಅಸುರರನ್ನು ಮೀರಲೆಳಸಿದ್ದು

(ಉಪನಿಷತ್ತು)

**ದ್ವಯಾ ಹ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ । ತತಃ ಕಾನೀಯಸಾ ಏವ ದೇವಾಃ ಜ್ಯಾಯಸಾ ಅಸುರಾಸ್ತ ಏಷು ಲೋಕೇಷ್ವಸ್ಪರ್ಧನ್ತ ತೇಹ ದೇವಾ ಊಚುರ್ಹನ್ತಾಸುರಾನ್ ಯಜ್ಞ ಉದ್ಗೀಥೇನಾತ್ಯಯಾಮೇತಿ ॥ ೧ ॥**

೧. ಪ್ರಾಜಾಪತ್ಯರು ದೇವತೆಗಳು, ಅಸುರರು—ಎಂದು ಎರಡು ಬಗೆಯಾಗಿದ್ದರಂತೆ. ಆದ್ದರಿಂದ ದೇವತೆಗಳು ಕಡಿಮೆಯೇ, ಅಸುರರು ಬಹಳ. ಅವರು ಈ ಲೋಕಗಳನ್ನು ಕುರಿತು ಸ್ಪರ್ಧೆಯನ್ನು ಮಾಡಿದರಂತೆ. ಆ ದೇವತೆಗಳು "ಒಳ್ಳೆಯದು, ಅಸುರರನ್ನು ಯಜ್ಞದಲ್ಲಿ ಉದ್ಗೀಥದಿಂದ ಮೀರೋಣವೆ ?" ಎಂದರಂತೆ.

## ಪ್ರಾಣಗಳು ದೇವಾಸುರರೆಂಬುದು ಹೇಗೆ ?

(ಭಾಷ್ಯ)

೪೫. ದ್ವಯಾಃ ದ್ವಿಪ್ರಕಾರಾಃ । 'ಹ' ಇತಿ ಪೂರ್ವವೃತ್ತಾವದ್ಯೋತಕೋ ನಿಪಾತಃ । ವರ್ತಮಾನಪ್ರಜಾಪತೇಃ ಪೂರ್ವಜನ್ಮನಿ ಯದ್ ವೃತ್ತಮ್ ತತ್ ಅವದ್ಯೋತಯತಿ ಹಶಬ್ದೇನ । ಪ್ರಾಜಾಪತ್ಯಾಃ ಪ್ರಜಾಪತೇಃ ವೃತ್ತಜನ್ಮಾವಸ್ಥಸ್ಯ ಅಪತ್ಯಾನಿ ಪ್ರಾಜಾಪತ್ಯಾಃ । ಕೇ ತೇ ? ದೇವಾಶ್ಚ ಅಸುರಾಶ್ಚ । ತಸ್ಯೈವ ಪ್ರಜಾಪತೇಃ ಪ್ರಾಣಾ ವಾಗಾದಯಃ । ಕಥಂ ಪುನಸ್ತೇಷಾಂ ದೇವಾಸುರತ್ವಮ್ ? ಉಚ್ಯತೇ—ಶಾಸ್ತ್ರಜನಿತಜ್ಞಾನಕರ್ಮಭಾವಿತಾಃ ದ್ಯೋತನಾತ್ ದೇವಾ ಭವನ್ತಿ । ತ ಏವ ಸ್ವಾಭಾವಿಕಪ್ರತ್ಯಕ್ಷಾನುಮಾನಜನಿತದೃಷ್ಟಪ್ರಯೋಜನಕರ್ಮಜ್ಞಾನಭಾವಿತಾ ಅಸುರಾಃ । ಸ್ವೇಷ್ವೇವ ಅಸುಷು ರಮಣಾತ್ ಸುರೇಭ್ಯೋ ವಾ ದೇವೇಭ್ಯೋಽನ್ಯತ್ವಾತ್ । ಯಸ್ಮಾಚ್ಚ ದೃಷ್ಟಪ್ರಯೋಜನಜ್ಞಾನಕರ್ಮಭಾವಿತಾ ಅಸುರಾಃ, ತತಃ ತಸ್ಮಾತ್ ಕಾನೀಯಸಾಃ ಕನೀಯಾಂಸ ಏವ ಕಾನೀಯಸಾಃ । ಸ್ವಾರ್ಥೇ ಅಣಿ ವೃದ್ಧಿಃ । ಕನೀಯಾಂಸಃ ಅಲ್ಪ ಏವ ದೇವಾಃ । ಜ್ಯಾಯಸಾಃ ಅಸುರಾಃ, ಜ್ಯಾಯಾಂಸೋಽಸುರಾಃ । ಸ್ವಾಭಾವಿಕೀ ಹಿ ಕರ್ಮಜ್ಞಾನಪ್ರವೃತ್ತಿಃ ಮಹತ್ತರಾ ಪ್ರಾಣಾನಾಂ ಶಾಸ್ತ್ರಜನಿತಾಯಾಃ ಕರ್ಮಜ್ಞಾನಪ್ರವೃತ್ತೇಃ । ದೃಷ್ಟಪ್ರಯೋಜನತ್ವಾತ್ । ಅತ ಏವ ಕನೀಯಸ್ತ್ವಂ ದೇವಾನಾಮ್ । ಶಾಸ್ತ್ರಜನಿತಪ್ರವೃತ್ತೇರಲ್ಪತ್ವಾತ್ । ಅತ್ಯನ್ತಯತ್ನಸಾಧ್ಯಾ ಹಿ ಸಾ ॥

(ಭಾಷ್ಯಾರ್ಥ)

ದ್ವಯರು ಎಂದರೆ ಎರಡು ಬಗೆ. 'ಹ' (ಅಂತೆ) ಎಂಬ ನಿಪಾತವು ಹಿಂದೆ ನಡೆದದ್ದನ್ನು ತಿಳಿಸುವದು; ಈಗಿನ ಪ್ರಜಾಪತಿಯು ಹಿಂದಿನ ಜನ್ಮದಲ್ಲಿ ನಡೆಯಿತಲ್ಲ ಅದನ್ನು ಹ ಎಂಬ ಶಬ್ದದಿಂದ ತಿಳಿಸಿರುತ್ತದೆ. ಪ್ರಾಜಾಪತ್ಯರು : ಪ್ರಜಾಪತಿಯ ಹಿಂದಿನ ಜನ್ಮದ ಅವಸ್ಥೆಯಲ್ಲಿ ಮಕ್ಕಳಾಗಿದ್ದವರು ಪ್ರಾಜಾಪತ್ಯರು. ಅವರು ಯಾರು ? ಎಂದರೆ ದೇವತೆಗಳೂ ಅಸುರರೂ ಎಂವರೆ ಅದೇ ಪ್ರಜಾಪತಿಯ ವಾಗಾದಿಪ್ರಾಣಗಳು (ಎಂದರ್ಥ).

ಆ (ವಾಗಾದಿಗಳು) ದೇವಾಸುರರೆಂಬುದು ಹೇಗೆ ? ಎಂದರೆ ಹೇಳುತ್ತೇವೆ. **ಶಾಸ್ತ್ರದಿಂದುಂಟಾದ ಜ್ಞಾನಕರ್ಮಗಳಿಂದ[1] ಭಾವಿತವಾದ (ವಾಗಾದಿಗಳು ತತ್ತ್ವವನ್ನು) ಬೆಳಗುವದರಿಂದ ದೇವತೆಗಳಾಗಿರುತ್ತಾರೆ. ಅವರೇ ಸ್ವಾಭಾವಿಕವಾದ ಪ್ರತ್ಯಕ್ಷಾನುಮಾನಗಳಿಂದುಂಟಾದ ದೃಷ್ಟಪ್ರಯೋಜನವುಳ್ಳ ಕರ್ಮಜ್ಞಾನಗಳಿಂದ ಭಾವಿತರಾದರೆ ಅಸುರ(ರಾಗಿರುತ್ತಾರೆ); ಏಕೆಂದರೆ ಅವರು ತಮ್ಮ ಪ್ರಾಣಿಗಳಲ್ಲಿಯೇ ರತರಾಗಿರುತ್ತಾರೆ, ಅಥವಾ ಸುರರುಗಳಿಗಿಂತ, ದೇವತೆಗಳಿಗಿಂತ, ಬೇರೆಯಾಗಿರುತ್ತಾರೆ.**

(ಹೀಗೆ) ಅಸುರರು ದೃಷ್ಟಪ್ರಯೋಜನವುಳ್ಳ ಜ್ಞಾನಕರ್ಮಭಾವಿತರಾಗಿರುವರಲ್ಲ, ಆದರಿಂದ ಆ ಕಾರಣದಿಂದ ದೇವತೆಗಳು ಕಾನೀಯಸರು, ಕಡಿಮೆ. ಕನೀಯಸರು ಎಂಬುದಕ್ಕೆ ಕಾನೀಯಸರು ಎಂದು ಸ್ವಾರ್ಥವನ್ನು ತಿಳಿಸುವ ಅಣ್‌ಪ್ರತ್ಯಯವು ಬಂದು ವೃದ್ಧಿಯಾಗಿರುತ್ತದೆ. ದೇವತೆಗಳು ಕನೀಯಸರು, ಎಂದರೆ ಅಲ್ಪರೇ. ಅಸುರರು ಬಹಳ, ಅಸುರರು ಹೆಚ್ಚು. ಪ್ರಾಣಿಗಳಿಗೆ ಸ್ವಾಭಾವಿಕವಾದ ಕರ್ಮಜ್ಞಾನಗಳಲ್ಲಿ (ಆಗುವ) ಪ್ರವೃತ್ತಿಯು ಶಾಸ್ತ್ರದಿಂದುಂಟಾಗುವ ಕರ್ಮಜ್ಞಾನಗಳಲ್ಲಿ (ಆಗುವ) ಪ್ರವೃತ್ತಿಗಿಂತ ಹೆಚ್ಚಲ್ಲವೆ? ಏಕೆಂದರೆ (ಅದಕ್ಕೆ) ಪ್ರಯೋಜನವು (ಇಲ್ಲಿಯೇ) ಕಂಡುಬರುತ್ತದೆ. ಆದ್ದರಿಂದಲೇ ದೇವತೆಗಳು ಕಡಿಮೆ; ಏಕೆಂದರೆ ಶಾಸ್ತ್ರದಿಂದಾಗುವ ಪ್ರವೃತ್ತಿಯು ಅಲ್ಪವಾಗಿರುತ್ತದೆ. ಅದು ಅತ್ಯಂತಪ್ರಯತ್ನದಿಂದ ಆಗತಕ್ಕದ್ದಷ್ಟೆ.

## ದೇವಾಸುರರ ಸ್ಪರ್ಧೆ

(ಭಾಷ್ಯ)

೪೬. ತೇ ದೇವಾಶ್ಚ ಅಸುರಾಶ್ಚ ಪ್ರಜಾಪತಿಶರೀರಸ್ಥಾಃ ಏಷು ಲೋಕೇಷು ನಿಮಿತ್ತಭೂತೇಷು ಸ್ವಾಭಾವಿಕೇತರಕರ್ಮಜ್ಞಾನಸಾಧ್ಯೇಷು ಅಸ್ಪರ್ಧನ್ತ ಸ್ಪರ್ಧಾಂ

---

1. ಉಪಾಸನೆ, ಕರ್ಮ–ಇವುಗಳಿಂದ.

ಕೃತವನ್ತಃ। ದೇವಾನಾಂ ಚ ಅಸುರಾಣಾಂ ಚ ವೃತ್ತ್ಯುದ್ಭವಾಭಿಭವೌ ಸ್ಪರ್ಧಾ। ಕದಾಚಿತ್ ಶಾಸ್ತ್ರಜನಿತಕರ್ಮಜ್ಞಾನಭಾವನಾರೂಪಾ ವೃತ್ತಿಃ ಪ್ರಾಣಾನಾಮ್ ಉದ್ಭವತಿ। ಯದಾ ಚ ಉದ್ಭವತಿ ತದಾ ದೃಷ್ಟಪ್ರಯೋಜನಾ ಪ್ರತ್ಯಕ್ಷಾನುಮಾನ ಭಾವನಾರೂಪಾ ತೇಷಾಮೇವ ಪ್ರಾಣಾನಾಂ ವೃತ್ತಿಃ ಆಸುರೀ ಅಭಿಭೂಯತೇ। ಸ ದೇವಾನಾಂ ಜಯಃ, ಅಸುರಾಣಾಂ ಪರಾಜಯಃ। ಕದಾಚಿತ್ ತದ್ವಿಪರ್ಯಯೇಣ ದೇವಾನಾಂ ವೃತ್ತಿಃ ಅಭಿಭೂಯತೇ ಆಸುರ್ಯಾ ಉದ್ಭವಃ। ಸೋಽಸುರಾಣಾಂ ಜಯಃ, ದೇವಾನಾಂ ಪರಾಜಯಃ। ಏವಂ ದೇವಾನಾಂ ಜಯೇ ಧರ್ಮಭೂಯಸ್ತ್ವಾತ್ ಉತ್ಕರ್ಷಃ ಆ ಪ್ರಜಾಪತಿತ್ವಪ್ರಾಪ್ತೇಃ। ಅಸುರಜಯೇ ಅಧರ್ಮಭೂಯಸ್ತ್ವಾತ್ ಅಪಕರ್ಷಃ ಆ ಸ್ಥಾವರತ್ವಪ್ರಾಪ್ತೇಃ। ಉಭಯಸಾಮ್ಯೇ ಮನುಷ್ಯತ್ವಪ್ರಾಪ್ತಿಃ ||

(ಭಾಷ್ಯಾರ್ಥ)

ಪ್ರಜಾಪತಿಯ ಶರೀರದಲ್ಲಿದ್ದ ಆ ದೇವತೆಗಳೂ ಅಸುರರೂ ಸ್ವಾಭಾವಿಕವಾದ ಮತ್ತು ಅದಕ್ಕಿಂತ ಬೇರೆಯಾದ ಕರ್ಮಜ್ಞಾನಸಾಧ್ಯವಾದ ಈ ಲೋಕಗಳನ್ನು ನಿಮಿತ್ತಮಾಡಿಕೊಂಡು ಸ್ಪರ್ಧಿಸಿದರು, ಮೇಲಾಟವನ್ನು ಮಾಡಿದರು. ದೇವತೆಗಳಿಗೂ ಅಸುರರಿಗೂ ಸ್ಪರ್ಧೆ ಎಂದರೆ (ಆಯಾ) ವೃತ್ತಿಗಳು ಉಂಟಾಗುವದು, ಮರೆಯಾಗುವದು. ಒಂದೊಂದು ವೇಳೆ ಪ್ರಾಣಗಳಿಗೆ ಶಾಸ್ತ್ರದಿಂದಾದ ಕರ್ಮಜ್ಞಾನಗಳ ಭಾವನಾರೂಪವಾದ ವೃತ್ತಿಯು ಉಂಟಾಗುತ್ತದೆ. ಅದು ಯಾವಾಗ ಉಂಟಾಗುತ್ತದೆಯೋ ಆಗ ಅದೇ ಪ್ರಾಣಗಳಿಗೆ ದೃಷ್ಟಪ್ರಯೋಜನವುಳ್ಳ ಪ್ರತ್ಯಕ್ಷಾನುಮಾನಗಳಿಂದುಂಟಾದ ಕರ್ಮಜ್ಞಾನಗಳ ಭಾವನಾರೂಪವಾದ ಅಸುರ ವೃತ್ತಿಯು ಮರೆಯಾಗುತ್ತದೆ. ಅದೇ ದೇವತೆಗಳ ಜಯವು, ಅಸುರರ ಪರಾಜಯವು. ಮತ್ತೊಂದು ವೇಳೆ ಇದಕ್ಕೆ ವಿಪರೀತವಾಗಿ ದೇವತೆಗಳ ವೃತ್ತಿಯು ಮರೆಯಾಗುತ್ತದೆ, ಅಸುರವೃತ್ತಿಯು ಎದ್ದುಕೊಳ್ಳುತ್ತದೆ. ಅದೇ ಅಸುರರ ಜಯವು, ದೇವತೆಗಳ ಪರಾಜಯವು. ಹೀಗೆ ದೇವತೆಗಳಿಗೆ ಜಯವಾದಾಗ ಧರ್ಮವು ಹೆಚ್ಚುವದರಿಂದ ಪ್ರಜಾಪತಿತ್ವವನ್ನು ಪಡೆಯುವವರೆಗೂ ಮೇಲು ಮೇಲಿನ (ಗತಿಯಾಗುವದು). ಅಸುರರ ಜಯವಾದಾಗ ಅಧರ್ಮವು ಹೆಚ್ಚಿಕೊಳ್ಳುವದರಿಂದ ಸ್ಥಾವರತ್ವವನ್ನು ಪಡೆಯುವವರೆಗೂ ಕೆಳಕೆಳಗಿನ (ಗತಿಯಾಗುವದು). (ಧರ್ಮಾಧರ್ಮ)ಗಳೆರಡೂ ಸಮವಾಗಿರುವಾಗ ಮನುಷ್ಯತ್ವವು ಪ್ರಾಪ್ತವಾಗುವದು.

## ದೇವತೆಗಳ ಆಲೋಚನೆ

(ಭಾಷ್ಯ)

೪೭. ತೇ ಏವಂ ಕನೀಯಸ್ತ್ವಾತ್ ಅಭಿಭೂಯಮಾನಾಃ ಅಸುರೈಃ ದೇವಾಃ ಬಾಹುಲ್ಯಾತ್ ಅಸುರಾಣಾಂ ಕಿಂ ಕೃತವನ್ತಃ ಇತಿ ? ಉಚ್ಯತೇ ।ತೇ

ದೇವಾಃ ಅಸುರೈಃ ಅಭಿಭೂಯಮಾನಾಃ ಹ ಕಿಲ ಊಚುಃ ಉಕ್ತವನ್ತಃ। ಕಥಮ್? ಹನ್ತ ಇದಾನೀಮ್ ಅಸ್ಮಿನ್ ಯಜ್ಞೇ ಜ್ಯೋತಿಷ್ಟೋಮೇ ಉದ್ಗೀಥೇನ ಉದ್ಗೀಥಕರ್ಮಪದಾರ್ಥಕರ್ತೃಸ್ವರೂಪಾಶ್ರಯಣೇನ ಅತ್ಯಯಾಮ ಅತಿಗಚ್ಛಾಮಃ। ಅಸುರಾನ್ ಅಭಿಭೂಯ ಸ್ವಂ ದೇವಭಾವಂ ಶಾಸ್ತ್ರಪ್ರಕಾಶಿತಂ ಪ್ರತಿಪದ್ಯಾಮಹೇ ಇತ್ಯುಕ್ತವನ್ತಃ ಅನ್ಯೋನ್ಯಮ್ ||

(ಭಾಷ್ಯಾರ್ಥ)

ಆ ದೇವತೆಗಳು ಹೀಗೆ ಕಡಿಮೆಯ (ಸಂಖ್ಯೆಯ)ವರಾದ್ದರಿಂದ ಅಸುರರು ಹೆಚ್ಚು ಜನರಾದ್ದರಿಂದ ಅಸುರರಿಂದ ತಿರಸ್ಕೃತರಾಗುತ್ತಿದ್ದು ಏನು ಮಾಡಿದರು? ಎಂದರೆ (ಶ್ರುತಿ) ಹೇಳುತ್ತದೆ. ಅಸುರರಿಂದ ತಿರಸ್ಕೃತರಾದ ಆ ದೇವತೆಗಳು ಹೀಗೆಂದು ಹೇಳಿದರಂತೆ. ಹೇಗೆ? ಎಂದರೆ ಈಗ ಈ ಜ್ಯೋತಿಷ್ಟೋಮಯಜ್ಞದಲ್ಲಿ ಉದ್ಗೀಥದಿಂದ ಉದ್ಗೀಥಕರ್ಮವೆಂಬ ಪದಾರ್ಥಕ್ಕೆ ಕರ್ತೃವಾಗಿರುವ ಸ್ವರೂಪವನ್ನು ಆಶ್ರಯಿಸಿಕೊಂಡು ಮೀರೋಣ, ಮೀರಿ ನಡೆಯೋಣ, ಅಸುರರನ್ನು ಮರೆಮಾಡಿ ಶಾಸ್ತ್ರಪ್ರಕಾಶಿತವಾದ ನಮ್ಮ ದೇವತಾರೂಪವನ್ನು ಪಡೆದುಕೊಳ್ಳೋಣ ಎಂದು ಒಬ್ಬರೊಡನೊಬ್ಬರು ಹೇಳಿಕೊಂಡರು.

## ಪ್ರಾಣವಿಷಯದ ಉಪಾಸನೆಯಿದು

(ಭಾಷ್ಯ)

೪೮. ಉದ್ಗೀಥಕರ್ಮಪದಾರ್ಥಕರ್ತೃಸ್ವರೂಪಾಶ್ರಯಣಂ ಚ ಜ್ಞಾನಕರ್ಮಭ್ಯಾಮ್। ಕರ್ಮ ವಕ್ಷ್ಯಮಾಣಂ ಮನ್ತ್ರಜಪಲಕ್ಷಣಂ ವಿಧಿತ್ಸ್ಯಮಾನಂ "ತದೇತಾನಿ ಜಪೇತ್" (೧-೩-೨೮) ಇತಿ। ಜ್ಞಾನಂ ತು ಇದಮೇವ ನಿರೂಪ್ಯಮಾಣಮ್। ನನು ಇದಮ್ ಅಭ್ಯಾರೋಹಜಪವಿಧಿಶೇಷೋಽರ್ಥವಾದಃ ನ ಜ್ಞಾನನಿರೂಪಣಪರಮ್। ನ। "ಯ ಏವಂ ವೇದ" (೧-೩-೭) ಇತಿ ವಚನಾತ್। ಉದ್ಗೀಥಪ್ರಸ್ತಾವೇ ಪುರಾಕಲ್ಪಶ್ರವಣಾತ್ ಉದ್ಗೀಥವಿಧಿಪರಮ್ ಇತಿ ಚೇತ್। ನ। ಅಪ್ರಕರಣಾತ್। ಉದ್ಗೀಥಸ್ಯ ಚ ಅನ್ಯತ್ರ ವಿಹಿತತ್ವಾತ್। ವಿದ್ಯಾಪ್ರಕರಣತ್ವಾಚ್ಚ ಅಸ್ಯ। ಅಭ್ಯಾರೋಹಜಪಸ್ಯ ಚ ಅನಿತ್ಯತ್ವಾತ್। ಏವಂವಿತ್ಪ್ರಯೋಜ್ಯತ್ವಾತ್। ವಿಜ್ಞಾನಸ್ಯ ಚ ನಿತ್ಯವತ್ ಶ್ರವಣಾತ್। "ತದ್ಧೈತಲ್ಲೋಕಜಿದೇವ" (೧-೪-೨೮) ಇತಿ ಚ ಶ್ರುತೇಃ। ಪ್ರಾಣಸ್ಯ ವಾಗಾದೀನಾಂ ಶುದ್ಧ್ಯಶುದ್ಧಿವಚನಾತ್। ನ ಹಿ ಅನುಪಾಸ್ಯತ್ವೇ ಪ್ರಾಣಸ್ಯ ಶುದ್ಧಿವಚನಂ ವಾಗಾದೀನಾಂ ಚ ಸಹೋಪನ್ಯಸ್ತಾನಾಮ್ ಅಶುದ್ಧಿವಚನಂ ವಾಗಾದಿನಿನ್ದಯಾ ಮುಖ್ಯಪ್ರಾಣಸ್ತುತಿಶ್ಚ ಅಭಿಪ್ರೇತಾ ಉಪಪದ್ಯತೇ। "ಮೃತ್ಯುಮತಿಕ್ರಾನ್ತೋ ದೀಪ್ಯತೇ" (೧-೩-೧೭) ಇತ್ಯಾದಿಫಲವಚನಂ ಚ। ಪ್ರಾಣಸ್ವರೂಪಾಪತ್ತೇರ್ಹಿ ಫಲಂ ತತ್ ಯದ್ ವಾಗಾದೀನಾಮ್ ಅಗ್ನ್ಯಾದಿಭಾವಃ ||

(ಭಾಷ್ಯಾರ್ಥ)

ಉದ್ಗೀಥಕರ್ಮವೆಂಬ ಪದಾರ್ಥಕ್ಕೆ ಕರ್ತೃವಾಗಿರುವ ಸ್ವರೂಪವನ್ನು ಆಶ್ರಯಿಸುವದು ಜ್ಞಾನಕರ್ಮಗಳಿಂದ. (ಇಲ್ಲಿ) ಕರ್ಮವೆಂದರೆ "ಆಗ ಇದನ್ನು ಜಪಿಸಬೇಕು" (೧-೩-೨೭) ಎಂದು ಮುಂದೆ ವಿಧಿಸಲಿರುವ ಮಂತ್ರಜಪಸ್ವರೂಪ ವಾದದ್ದು. ಜ್ಞಾನವೆಂದರೆ ಈಗ ತಿಳಿಸುತ್ತಿರುವ ಇದೇ.

(ಆಕ್ಷೇಪ) :—ಇದು ಅಭ್ಯಾರೋಹಜಪವಿಧಿಗೆ ಶೇಷವಾಗಿರುವ ಅರ್ಥ ವಾದವೇ ಹೊರತು ಜ್ಞಾನವನ್ನು ತಿಳಿಸುವದರಲ್ಲಿ ತಾತ್ಪರ್ಯವಿರುವ (ಗ್ರಂಥ) ವಲ್ಲವಲ್ಲ![1]

(ಪರಿಹಾರ):—ಹಾಗಲ್ಲ. ಏಕೆಂದರೆ "ಯಾವನು ಹೀಗೆಂದು ಅರಿಯು ವನೋ" (೧-೩-೭) ಎಂಬ ವಚನವಿದೆ.[2]

(ಆಕ್ಷೇಪ):—ಉದ್ಗೀಥಪ್ರಸ್ತಾವದಲ್ಲಿ ಪುರಾಕಲ್ಪವನ್ನು ಶ್ರುತಿಯು ಹೇಳಿರು ವದರಿಂದ ಇದು ಉದ್ಗೀಥವಿಧಿಪರವೇ.[3]

(ಪರಿಹಾರ):-ಹಾಗಲ್ಲ. ಏಕೆಂದರೆ (ಇದು ಉದ್ಗೀಥದ) ಪ್ರಕರಣವಲ್ಲ. ಉದ್ಗೀಥವನ್ನು ಬೇರೆಯ ಕಡೆಯಲ್ಲಿ ವಿಧಿಸಿಯೂ ಇದೆ.[4] ಇದು ವಿದ್ಯಾಪ್ರಕರಣವೂ ಆಗಿರುತ್ತದೆಯಾದ್ದರಿಂದಲೂ (ಹೀಗೆ). ಅಭ್ಯಾರೋಹಜಪವು ಅನಿತ್ಯವಾಗಿರು ವದರಿಂದಲೂ (ಹೀಗೆಂದು) ತಿಳಿಯಬೇಕು. ಏಕೆಂದರೆ (ಅದು) ಹೀಗೆಂದು ತಿಳಿದವನು ಪ್ರಯೋಗಿಸತಕ್ಕದ್ದಾಗಿದೆ.[5] ವಿಜ್ಞಾನವನ್ನು ನಿತ್ಯವೆಂಬಂತೆ ಶ್ರುತಿ ಯಲ್ಲಿ ಹೇಳಿರುತ್ತದೆ. "ಆ ಈ (ಉಪಾಸನೆಯು) ಲೋಕವನ್ನು ಜಯಿಸುವದೇ" (೧-೪-೨೮) ಎಂದೂ ಶ್ರುತಿಯಲ್ಲಿದೆ. ಪ್ರಾಣನು ಶುದ್ಧನೆಂದೂ ವಾಗಾದಿಗಳು ಅಶುದ್ಧರೆಂದೂ ಹೇಳಿರುವದರಿಂದಲೂ (ಇದು ಪ್ರಾಣೋಪಾಸನೆ). ಪ್ರಾಣವನ್ನು ಉಪಾಸನೆಮಾಡಬೇಕೆಂಬ (ಅಭಿಪ್ರಾಯ)ವಿಲ್ಲದಿದ್ದರೆ ಪ್ರಾಣನು ಶುದ್ಧನೆಂದು

---

1. 'ಅಸತೋ ಮಾ ಸದ್ಗಮಯ' ಮುಂತಾದ ಜಪವನ್ನು ವಿಧಿಸಿದೆ. ಅದಕ್ಕೆ ಶೇಷ ವಾಗಿ ದೇವತೆಯನ್ನು ಹೊಗಳುವ ಅರ್ಥವಾದವಿದು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

2. ಆದ್ದರಿಂದ ಇಲ್ಲಿ ಉಪಾಸನೆಯನ್ನು ವಿಧಿಸಿದೆ.

3. ಉಪಾಸನೆಯನ್ನು ವಿಧಿಸಿರುವದು ನಿಜ; ಪ್ರಾಣೋಪಾಸನೆಯನ್ನು ವಿಧಿಸಿಲ್ಲ.

4. ಉದ್ಗೀಥವನ್ನು ವಿಧಿಸುವ ಪ್ರಕರಣವಲ್ಲ; ಅದನ್ನು ಕರ್ಮಕಾಂಡದಲ್ಲಿ ವಿಧಿಸಿಯೂ ಇದೆ.

5. ಪ್ರಾಣವಿದ್ಯೆಯನ್ನು ಬಲ್ಲವನು ಈ ಜಪವನ್ನು ಮಾಡಬೇಕು. ಈ ಜಪವನ್ನು ಮಾಡುವವನು ಪ್ರಾಣೋಪಾಸನೆಯನ್ನು ಮಾಡತಕ್ಕದ್ದೆಂದು ಇಲ್ಲಿ ಹೇಳಿಲ್ಲ. ಆದ್ದರಿಂದಲೂ ಜಪವು ಸ್ವಪ್ರಧಾನವಲ್ಲ.

ಹೇಳುವದೂ (ಪ್ರಾಣನ) ಜೊತೆಯಲ್ಲಿಯೇ ಹೇಳಿರುವ ವಾಗಾದಿಗಳು ಅಶುದ್ಧ ವೆಂದು ಹೇಳುವದೂ ವಾಗಾದಿಗಳನ್ನು ನಿಂದಿಸಿ ಮುಖ್ಯಪ್ರಾಣವನ್ನು ಸ್ತುತಿಸಿರು ವದೂ ಹೊಂದಲೇ ಆರದು ; "ಮೃತ್ಯುವನ್ನು ದಾಟಿ ಹೊಳೆಯುತ್ತಿರುತ್ತಾನೆ"[1] (೧-೩-೧೨) ಮುಂತಾದ ಫಲವಚನವೂ (ಹೊಂದಲಾರದು).; ಪ್ರಾಣಸ್ವರೂಪವನ್ನು ಪಡೆದದ್ದರ ಫಲವಲ್ಲವೆ, ಆ ವಾಗಾದಿಗಳು ಅಗ್ನ್ಯಾದಿಸ್ವರೂಪವನ್ನು ಪಡೆಯುವ ದೆಂಬುದು ?[2]

## ಚರ್ಚೆ: ಪ್ರಾಣನಲ್ಲಿ ವಿಶುದ್ಧ್ಯಾದಿಗುಣಗಳು ನಿಜವಾಗಿಯೂ ಇವೆ

(ಭಾಷ್ಯ)

೪೯. ಭವತು ನಾಮ ಪ್ರಾಣಸ್ಯ ಉಪಾಸನಮ್, ನ ತು ವಿಶುದ್ಧ್ಯಾದಿ ಗುಣವತ್ತಾ ಇತಿ। ನನು ಸ್ಯಾತ್, ಶ್ರುತತ್ವಾತ್। ನ ಸ್ಯಾತ್ ಉಪಾಸ್ಯತ್ವೇ ಸ್ತುತ್ಯರ್ಥತ್ವೋಪಪತ್ತೇಃ। ನ। ಅವಿಪರೀತಾರ್ಥಪ್ರತಿಪತ್ತೇಃ ಶ್ರೇಯಃಪ್ರಾಪ್ತ್ಯುಪ ಪತ್ತೇಃ ಲೋಕವತ್। ಯೋ ಹಿ ಅವಿಪರೀತಮ್ ಅರ್ಥಂ ಪ್ರತಿಪದ್ಯತೇ ಲೋಕೇ, ಸ ಇಷ್ಟಂ ಪ್ರಾಪ್ನೋತಿ ಅನಿಷ್ಟಾದ್ವಾ ನಿವರ್ತತೇ, ನ ವಿಪರೀತಾರ್ಥಪ್ರತಿಪತ್ತ್ಯಾ। ತಥಾ ಇಹಾಪಿ ಶ್ರೌತಶಬ್ದಜನಿತಾರ್ಥಪ್ರತಿಪತ್ತೌ ಶ್ರೇಯಃಪ್ರಾಪ್ತಿಃ ಉಪಪನ್ನಾ, ನ ವಿಪರ್ಯಯೇ। ನ ಚ ಉಪಾಸನಾರ್ಥಶ್ರುತಶಬ್ದೋತ್ಥವಿಜ್ಞಾನವಿಷಯಸ್ಯ ಅಯಥಾರ್ಥತ್ವೇ ಪ್ರಮಾಣಮ್ ಅಸ್ತಿ। ನ ಚ ತದ್ವಿಜ್ಞಾನಸ್ಯ ಅಪವಾದಃ ಶ್ರೂಯತೇ ತತಃ ಶ್ರೇಯಃಪ್ರಾಪ್ತಿದರ್ಶನಾತ್ ಯಥಾರ್ಥತಾಂ ಪ್ರತಿಪದ್ಯಾಮಹೇ। ವಿಪರ್ಯಯೇ ಚ ಅನರ್ಥಪ್ರಾಪ್ತಿದರ್ಶನಾತ್। ಯೋ ಹಿ ವಿಪರ್ಯಯೇಣ ಅರ್ಥಂ ಪ್ರತಿಪದ್ಯತೇ ಲೋಕೇ ಪುರುಷಂ ಸ್ಥಾಣುರಿತಿ, ಅಮಿತ್ರಂ ಮಿತ್ರಮಿತಿ ವಾ, ಸೋಽನರ್ಥಂ ಪ್ರಾಪ್ನುವನ್ ದೃಶ್ಯತೇ। ಆತ್ಮೇಶ್ವರದೇವತಾದೀನಾಮಪಿ ಅಯಥಾ ರ್ಥಾನಾಮೇವ ಚೇದ್ ಗ್ರಹಣಂ ಶ್ರುತಿತಃ, ಅನರ್ಥಪ್ರಾಪ್ತ್ಯರ್ಥಂ ಶಾಸ್ತ್ರಮ್ ಇತಿ ಧ್ರುವಂ ಪ್ರಾಪ್ನುಯಾತ್ ಲೋಕವದೇವ। ನ ಚ ಏತದಿಷ್ಟಮ್। ತಸ್ಮಾತ್

---

1. ವಾಕ್ಕು ಅಗ್ನಿಭಾವವನ್ನು ಹೊಂದಿ ಮೃತ್ಯುವನ್ನು ದಾಟಿರುವದರಿಂದ ಹೊಳೆಯು ತ್ತಿದೆ- ಎಂದರ್ಥ.

2. ಪ್ರಾಣವ್ಯತಿರಿಕ್ತವಾಗಿರುವಾಗ ವಾಗಾದಿಪರಿಚ್ಛಿನ್ನರೂಪವಿರುತ್ತದೆ ; ಪ್ರಾಣಸಾಯುಜ್ಯ ವನ್ನು ಪಡೆದಾಗ ಅಗ್ನ್ಯಾದಿರೂಪವು ಪ್ರಾಪ್ತವಾಗುತ್ತದೆ. ಹೀಗೆ ಪರಿಚ್ಛಿನ್ನವಾದ ವಾಗಾದಿರೂಪ ಅಧ್ಯಾತ್ಮಭಾವವು ಹೋಗಿ ಅಧಿದೈವಿಕವಾದ ಅಗ್ನ್ಯಾದಿಭಾವವು ಬರುವದು ಪ್ರಾಣೋಪಾಸನೆಯಿಂದ ಪ್ರಾಣಸ್ವರೂಪವನ್ನು ಪಡೆದದ್ದರಿಂದಲೇ. ಆದ್ದರಿಂದ ಪ್ರಾಣೋಪಾಸನೆಯು ಇಲ್ಲಿ ವಿಹಿತವಾಗಿದೆ.

ಯಥಾಭೂತಾನೇವ ಆತ್ಮೇಶ್ವರದೇವತಾದೀನ್ ಗ್ರಾಹಯತಿ ಉಪಾಸನಾರ್ಥಂ ಶಾಸ್ತ್ರಮ್ ||

(ಭಾಷ್ಯಾರ್ಥ)

(ಪೂರ್ವಪಕ್ಷಿ):—(ಇದು) ಪ್ರಾಣನ ಉಪಾಸನೆಯೇ ಎಂದು ಆದರೂ ಆಗಲಿ, ಆದರೆ (ಪ್ರಾಣನಿಗೆ ನಿಜವಾಗಿ) ವಿಶುದ್ಧಿಯೇ ಮುಂತಾದ[1] ಗುಣಗಳಿವೆ ಎಂದು (ಇರ)ಬೇಕಾದದ್ದಿಲ್ಲ.

(ಸಿದ್ಧಾಂತಿ):—ಶ್ರುತಿಯಲ್ಲಿರುವದರಿಂದ (ವಿಶುದ್ಧ್ಯಾದಿಗುಣಗಳೂ ಇವೆ) ಎಂದಾಗಬಹುದಲ್ಲ !

(ಪೂರ್ವಪಕ್ಷಿ):—ಆಗಲಾರದು. ಏಕೆಂದರೆ (ಪ್ರಾಣನು) ಉಪಾಸ್ಯನಾಗಿರುವದರಿಂದ (ಅವನನ್ನು) ಹೊಗಳುವದಕ್ಕಾಗಿ (ವಿಶುದ್ಧ್ಯಾದಿಗುಣಗಳನ್ನು ಹೇಳಿದೆ) ಎಂದೂ ಆಗಬಹುದು.[2]

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ ಅವಿಪರೀತಾರ್ಥವನ್ನು ಉಪಾಸನೆ ಮಾಡಿದರೆ ಲೋಕದಂತೆ ಶ್ರೇಯಃಪ್ರಾಪ್ತಿಯಾಗುವದೆಂಬುದು ಯುಕ್ತವಾಗಿರುತ್ತದೆ. (ಇದರ ವಿವರ): ಲೋಕದಲ್ಲಿ ಯಾವನು ಅವಿಪರೀತವಾದ[3] ಅರ್ಥವನ್ನು ತಿಳಿಯುವನೋ ಅವನಿಗೆ ಇಷ್ಟವು ದೊರಕುತ್ತದೆ; ಅಥವಾ ಅನಿಷ್ಟವಾದದ್ದು ತಪ್ಪುತ್ತದೆ; (ಇಷ್ಟೇ ಹೊರತು) ವಿಪರೀತವಾಗಿ ಅರ್ಥವನ್ನು ತಿಳಿದುಕೊಂಡರೆ (ಈ ಫಲ)ವಾಗುವದಿಲ್ಲ. ಅದರಂತೆ ಇಲ್ಲಿಯೂ ಶ್ರೌತಶಬ್ದದಿಂದ ಉಂಟಾದ ಅರ್ಥಜ್ಞಾನದಿಂದ ಶ್ರೇಯಃಪ್ರಾಪ್ತಿಯಾಗುವದು ಯುಕ್ತವೇ ಹೊರತು (ಅದಕ್ಕೆ) ವಿಪರೀತವಾದರೆ (ಫಲವಾಗುವದು) ಯುಕ್ತವಲ್ಲ.[4] ಉಪಾಸನಾರ್ಥವಾಗಿ ಶ್ರುತಿಯಲ್ಲಿ ಬಂದಿರುವ ಶಬ್ದದಿಂದ ಉಂಟಾದ ವಿಜ್ಞಾನಕ್ಕೆ ವಿಷಯವಾದದ್ದು ಹಾಗಿಲ್ಲವೆನ್ನುವ

---

1. ಮುಂತಾದ ಎಂದರೆ ಮುಂದೆ ಹೇಳುವ ಆಂಗಿರಸತ್ವ, ದೂರ್ನಾಮತ್ವ, ಕಾರ್ಯಕರಣಸಂಘಾತವಿಧಾರಕತ್ವ, ಭರ್ತೃತ್ವಾದಿ, ಬೃಹಸ್ಪತಿತ್ವ, ಬ್ರಹ್ಮಣಸ್ಪತಿತ್ವ, ಸಾಮತ್ವ, ಉದ್ಗೀಥತ್ವ, ಸ್ವರಸುವರ್ಣವತ್ತ್ವ, ಪ್ರತಿಷ್ಠಾ-ಇವೆಲ್ಲ.

2. ವಾಕ್ಕನ್ನು ಧೇನುವೆಂದು ಉಪಾಸನೆಮಾಡಬೇಕೆಂದು ಶಾಸ್ತ್ರವಲ್ಲಿದೆ. ಅಲ್ಲಿ ವಾಕ್ಕು ನಿಜವಾಗಿ ಧೇನುವಲ್ಲ. ಅದರಂತೆ ಇಲ್ಲಿಯೂ ವಿಶುದ್ಧ್ಯಾದಿಗಳು ಇರಬೇಕಾದದ್ದಿಲ್ಲ ಎಂದು ಭಾವ.

3. ಯಥಾರ್ಥವಾದ.

4. ಶ್ರುತಿಯು ಸುಳ್ಳಾಗಿರುವ ವಸ್ತುವನ್ನೇ ಬೋಧಿಸಿದರೆ ಅದರಿಂದ ಶ್ರೇಯಃಪ್ರಾಪ್ತಿಯಾಗಲಾರದು.

ದಕ್ಕೆ ಪ್ರಮಾಣವಿಲ್ಲ.[1] ಆ ವಿಜ್ಞಾನಕ್ಕೆ ಅಪವಾದವೂ ಶ್ರುತಿಯಲ್ಲಿಲ್ಲ.[2] ಅದರಿಂದ ಶ್ರೇಯಃಪ್ರಾಪ್ತಿ(ಯಾಗುವದೆಂದು) ಶ್ರುತಿಯಲ್ಲಿರುವದರಿಂದ ಅದು ಯಥಾರ್ಥವೆಂದೇ ತಿಳಿಯುತ್ತೇವೆ. ವಿಪರೀತವಾದರೆ ಅನರ್ಥಪ್ರಾಪ್ತಿಯಾಗುವದು ಕಂಡುಬರುವದರಿಂದಲೂ (ಇದೇ ಸರಿ). ಲೋಕದಲ್ಲಿ ಯಾವನು ವಿಪರೀತವಾಗಿ ಅರ್ಥವನ್ನು ತಿಳಿಯುತ್ತಾನೋ (ಉದಾಹರಣೆಗೆ) ಮನುಷ್ಯನನ್ನು ಮೋಟುಮರವೆಂದೂ ಅಮಿತ್ರನನ್ನು ಮಿತ್ರನೆಂದೂ (ಯಾವನು ತಿಳಿಯುತ್ತಾನೋ) ಅವನು ಅನರ್ಥವನ್ನು ಪಡೆಯುತ್ತಾನೆಂದು ಕಂಡುಬಂದಿದೆ. ಶ್ರುತಿಯಿಂದ ಗ್ರಹಿಸುವ ಆತ್ಮ, ಈಶ್ವರ, ದೇವತೆ- ಮುಂತಾದವು ಅಯಥಾರ್ಥವೇ ಆದರೆ ಶಾಸ್ತ್ರವು ಲೋಕದಂತೆಯೇ ಅನರ್ಥಪ್ರಾಪ್ತಿ ಎಂಬ ಫಲವುಳ್ಳದ್ದು ಎಂದು ನಿಶ್ಚಯವಾಗಿ ಬಂದೊದಗುವದು. ಆದರೆ (ಇದು ಯಾರಿಗೂ) ಇಷ್ಟವಿಲ್ಲ.[3] ಆದ್ದರಿಂದ ಶಾಸ್ತ್ರವು ಯಥಾಭೂತವಾಗಿರುವ ಆತ್ಮ, ಈಶ್ವರ, ದೇವತೆ- ಮುಂತಾದವುಗಳನ್ನೇ ಉಪಾಸನೆಗಾಗಿ ತಿಳಿಸುತ್ತದೆ (ಎಂದು ಸಿದ್ಧವಾಯಿತು).

## ನಾಮಾದಿಗಳಲ್ಲಿ ಬ್ರಹ್ಮದೃಷ್ಟಿಯು ಮಿಥ್ಯಾಬುದ್ಧಿಯಲ್ಲ

(ಭಾಷ್ಯ)

೫೦. ನಾಮಾದೌ ಬ್ರಹ್ಮದೃಷ್ಟಿದರ್ಶನಾತ್ ಅಯುಕ್ತಮ್ ಇತಿ ಚೇತ್ । ಸ್ಫುಟಂ ನಾಮಾದೇರಬ್ರಹ್ಮತ್ವಮ್ । ತತ್ರ ಬ್ರಹ್ಮದೃಷ್ಟಿಂ ಸ್ಥಾಣ್ವಾದಾವಿವ ಪುರುಷದೃಷ್ಟಿಂ ವಿಪರೀತಾಂ ಗ್ರಾಹಯತ್ ಶಾಸ್ತ್ರಮ್ ದೃಶ್ಯತೇ । ತಸ್ಮಾತ್ ಯಥಾರ್ಥಮೇವ ಶಾಸ್ತ್ರತಃ ಪ್ರತಿಪತ್ತೇಃ ಶ್ರೇಯಃ ಇತ್ಯಯುಕ್ತಮ್ ಇತಿ ಚೇತ್ । ನ । ಪ್ರತಿಮಾವತ್ ಭೇದಪ್ರತಿಪತ್ತೇಃ । ನಾಮಾದೌ ಅಬ್ರಹ್ಮಣಿ ಬ್ರಹ್ಮದೃಷ್ಟಿಂ ವಿಪರೀತಾಂ ಗ್ರಾಹಯತಿ ಶಾಸ್ತ್ರಂ ಸ್ಥಾಣ್ವಾದಾವಿವ ಪುರುಷದೃಷ್ಟಿಮ್ ಇತಿ ನೈತತ್ ಸಾಧ್ವವೋಚಃ । ಕಸ್ಮಾತ್ ? ಭೇದೇನ ಹಿ ಬ್ರಹ್ಮಣಃ ನಾಮಾದಿವಸ್ತು ಪ್ರತಿಪನ್ನಸ್ಯ ನಾಮಾದೌ ವಿಧೀಯತೇ ಬ್ರಹ್ಮದೃಷ್ಟಿಃ ಪ್ರತಿಮಾದಾವಿವ ವಿಷ್ಣುದೃಷ್ಟಿಃ । ಆಲಮ್ಬನತ್ವೇನ ಹಿ ನಾಮಾದಿಪ್ರತಿಪತ್ತಿಃ ಪ್ರತಿಮಾದಿವದೇವ, ನ ತು ನಾಮಾದ್ಯೇವ ಬ್ರಹ್ಮ ಇತಿ । ಯಥಾ ಸ್ಥಾಣೌ ಅನಿಜ್ಞಾತೇ[4] ಸ್ಥಾಣುರಿತಿ ಪುರುಷ

---

1. ಏಕೆಂದರೆ ಅದು ಪ್ರಮಾಣಾಂತರಕ್ಕೆ ಗೋಚರವಲ್ಲ.

2. ಶ್ರುತಿಯು ತಾನೇ ಅದನ್ನು ಅಲ್ಲಗಳೆದಿದ್ದರೆ ಅದು ಅಯಥಾರ್ಥವೆಂದು ಹೇಳಬಹುದಾಗಿತ್ತು.

3. ದೃಷ್ಟವಿರೋಧವಾಗಿ ಶಾಸ್ತ್ರವು ಬೋಧಿಸಲಾರದು ಎಂದು ಭಾವ.

4. ಈ ಮಾತಿನ ಮುಂದೆ 'ನ' ಎಂದು ಅಚ್ಚಿನ ಪುಸ್ತಕಗಳಲ್ಲಿರುವದು ಬೇಕಿಲ್ಲವೆಂದು ಬಿಟ್ಟಿದೆ.

ಏವಾಯಮ್ ಇತಿ ಪ್ರತಿಪದ್ಯತೇ ವಿಪರೀತಮ್ ನ ತು ತಥಾ ನಾಮಾದೌ ಬ್ರಹ್ಮ ದೃಷ್ಟಿರ್ವಿಪರೀತಾ ||

(ಭಾಷ್ಯಾರ್ಥ)

(ಆಕ್ಷೇಪ):–ನಾಮಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನು (ವಿಧಿಸಿರುವದು) ಕಂಡು ಬರುವದರಿಂದ (ಇದು ಸರಿ)ಯಲ್ಲ. (ಇದರ ವಿವರ): ನಾಮಾದಿಗಳು ಅಬ್ರಹ್ಮ ವೆಂಬುದು ಸ್ಪಷ್ಟವಾಗಿದೆ. ಆ (ನಾಮಾದಿ)ಗಳಲ್ಲಿ–ಮೋಟುಮರವೇ ಮುಂತಾದವು ಗಳಲ್ಲಿ ಮನುಷ್ಯನೇ (ಮುಂತಾದ) ದೃಷ್ಟಿಯನ್ನು (ತಿಳಿಸುವಂತೆ)[1] ವಿಪರೀತ ವಾಗಿಯೇ ಶಾಸ್ತ್ರವು ತಿಳಿಸಿರುವದು ಕಂಡುಬಂದಿದೆ. ಆದ್ದರಿಂದ ಯಥಾರ್ಥ ವಾಗಿಯೇ ಶಾಸ್ತ್ರದಿಂದ ಜ್ಞಾನವುಂಟಾಗುವದರಿಂದ ಶ್ರೇಯಸ್ಸು ಪ್ರಾಪ್ತವಾಗುವ ದೆಂದು (ಹೇಳಿದ್ದು) ಸರಿಯಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ (ಅಲ್ಲಿ) ಪ್ರತಿಮೆಯಂತೆ ಭೇದದ ಜ್ಞಾನವಾಗುತ್ತದೆ. (ಇದರ ವಿವರ): ನಾಮವೇ ಮುಂತಾದ ಅಬ್ರಹ್ಮದಲ್ಲಿ ಬ್ರಹ್ಮ ದೃಷ್ಟಿಯನ್ನು ವಿಪರೀತವಾಗಿಯೇ– ಮೋಟುಮರವೇ ಮುಂತಾದದ್ದರಲ್ಲಿ ಮನು ಷ್ಯ(ನೇ ಮುಂತಾದ) ದೃಷ್ಟಿಯನ್ನು (ವಿಧಿಸುವಂತೆ) ವಿಪರೀತವಾಗಿಯೇ ಶಾಸ್ತ್ರವು ತಿಳಿಸುತ್ತದೆ ಎಂದು (ನೀನು) ಹೇಳಿದ್ದು ಸರಿಯಲ್ಲ. ಏಕೆ? ಎಂದರೆ ಬ್ರಹ್ಮ ಕ್ಕಿಂತ ಬೇರೆ ಎಂದು ನಾಮಾದಿವಸ್ತುವನ್ನು ತಿಳಿದುಕೊಂಡವನಿಗೇ ಅಲ್ಲವೆ, **ಪ್ರತಿಮಾದಿಗಳಲ್ಲಿ ವಿಷ್ಣುದೃಷ್ಟಿಯಂತೆ,** ನಾಮಾದಿ(ವಸ್ತು)ವಿನಲ್ಲಿ ಬ್ರಹ್ಮದೃಷ್ಟಿ ಯನ್ನು ವಿಧಿಸಿರುತ್ತದೆ? ನಾಮಾದಿಗಳ ಜ್ಞಾನವೂ ಪ್ರತಿಮಾದಿಗಳ ಜ್ಞಾನದಂತೆಯೇ ಆಲಂಬನವಾಗಿ ಆಗುತ್ತದೆಯೇ ಹೊರತು ನಾಮಾದಿಗಳೇ ಬ್ರಹ್ಮ ಎಂದೇನೂ ಆಗುವದಿಲ್ಲ.[2] ಹೇಗೆ ಮೋಟುಮರವನ್ನು ಮೋಟುಮರವು ಎಂದು ತಿಳಿಯದೆ ಇರುವಾಗ ಇದು ಮನುಷ್ಯನೇ ಎಂದು ವಿಪರೀತವಾಗಿ ತಿಳಿದುಕೊಳ್ಳುತ್ತಾನೋ ಹಾಗೇನೂ ನಾಮಾದಿಗಳಲ್ಲಿ ವಿಪರೀತವಾಗಿ ಬ್ರಹ್ಮದೃಷ್ಟಿಯಾಗಿರುವದಿಲ್ಲ.[3]

---

1. ಅದಲ್ಲದ್ದರಲ್ಲಿ ಅದೆಂಬ ಬುದ್ಧಿಯು ಭ್ರಾಂತಿಯು ಎಂದು ತಿಳಿಸುವದಕ್ಕೆ ಈ ಉದಾಹರಣೆ.

2. ನಾಮವೇ ಮುಂತಾದವು ಪ್ರತೀಕವು. ಪ್ರತಿಮೆಯೇ ವಿಷ್ಣುವೆಂದು ಹೇಗೆ ಯಾರೂ ತಿಳಿದುಕೊಳ್ಳುವದಿಲ್ಲವೋ ಅದರಂತೆ ನಾಮವೇ ಬ್ರಹ್ಮವೆಂದು ತಿಳಿಯುವದಿಲ್ಲ; ನಾಮವೆಂಬ ಪ್ರತೀಕದಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕೆಂದು ವಿಧಿಸಿದೆ. ಅಷ್ಟೆ.

3. ಇದು ಮನುಷ್ಯ ಎಂಬ ಅರಿವು ಇದ್ದಾಗ ಇದು ಮರವೆಂಬ ಅರಿವು ಇರುವದಿಲ್ಲ; ಆದರೆ ನಾಮವು ಬ್ರಹ್ಮ ಎಂಬ ದೃಷ್ಟಿಯುಂಟಾದಾಗಲೂ ನಾಮಬುದ್ಧಿಯು ಇದ್ದೇ ಇರುತ್ತದೆ. ಆದ್ದರಿಂದ ಅದು ಭ್ರಾಂತಿಯಲ್ಲ.

## ಬ್ರಹ್ಮದೃಷ್ಟಿವಿಧಿಯು ಯಥಾರ್ಥಬ್ರಹ್ಮವನ್ನು ತಿಳಿಸುತ್ತದೆ

(ಭಾಷ್ಯ)

೫೧. ಬ್ರಹ್ಮದೃಷ್ಟಿರೇವ ಕೇವಲಾ ನಾಸ್ತಿ ಬ್ರಹ್ಮ ಇತಿ ಚೇತ್। ಏತೇನ ಪ್ರತಿಮಾಬ್ರಾಹ್ಮಣಾದಿಷು ವಿಷ್ಣ್ವಾದಿದೇವಪಿತ್ರಾದಿದೃಷ್ಟೀನಾಂ ತುಲ್ಯತಾ। ನ। ಋಗಾದಿಷು ಪೃಥಿವ್ಯಾದಿದೃಷ್ಟಿದರ್ಶನಾತ್। ವಿದ್ಯಮಾನಪೃಥಿವ್ಯಾದಿವಸ್ತುದೃಷ್ಟೀನಾಮೇವ ಋಗಾದಿವಿಷಯೇ ಕ್ಷೇಪದರ್ಶನಾತ್। ತಸ್ಮಾತ್ ತತ್ಸಾಮಾನ್ಯಾತ್ ನಾಮಾದಿಷು ಬ್ರಹ್ಮಾದಿದೃಷ್ಟೀನಾಂ ವಿದ್ಯಮಾನಬ್ರಹ್ಮಾದಿವಿಷಯತ್ವಸಿದ್ಧಿಃ। ಏತೇನ ಪ್ರತಿಮಾಬ್ರಾಹ್ಮಣಾದಿಷು ವಿಷ್ಣ್ವಾದಿದೇವಪಿತ್ರಾದಿಬುದ್ಧೀನಾಂ ಚ ಸತ್ಯವಸ್ತುವಿಷಯತ್ವಸಿದ್ಧಿಃ। ಮುಖ್ಯಾಪೇಕ್ಷತ್ವಾಚ್ಚ ಗೌಣತ್ವಸ್ಯ। ಪಞ್ಚಾಗ್ನ್ಯಾದಿಷು ಚ ಅಗ್ನಿತ್ವಾದೇರ್ಗೌಣತ್ವಾತ್ ಮುಖ್ಯಾಗ್ನ್ಯಾದಿಸದ್ಭಾವವತ್ ನಾಮಾದಿಷು ಬ್ರಹ್ಮತ್ವಸ್ಯ ಗೌಣತ್ವಾತ್ ಮುಖ್ಯಬ್ರಹ್ಮಸದ್ಭಾವೋಪಪತ್ತಿಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—(ನಾಮಾದಿಗಳಲ್ಲಿ) ಬರಿಯ ಬ್ರಹ್ಮದೃಷ್ಟಿಯನ್ನು (ಹೇಳಿದೆ), ಬ್ರಹ್ಮವು (ನಿಜವಾಗಿ) ಇರುವದಿಲ್ಲ. ಇದರಿಂದ ಪ್ರತಿಮೆ, ಬ್ರಾಹ್ಮಣ– ಮುಂತಾದವರಲ್ಲಿ ವಿಷ್ಣ್ವಾದಿದೇವತೆಗಳ (ದೃಷ್ಟಿ), ಪಿತ್ರಾದಿಗಳ ದೃಷ್ಟಿ– ಇವುಗಳೂ (ಇದಕ್ಕೆ) ಸಮಾನವೇ (ಎಂದಂತೆ ಆಯಿತು)[1].

(ಸಿದ್ಧಾಂತಿ) :— ಹಾಗಲ್ಲ. ಏಕೆಂದರೆ ಋಗಾದಿಗಳಲ್ಲಿ ಪೃಥಿವ್ಯಾದಿದೃಷ್ಟಿಯನ್ನು (ವಿಧಾನಮಾಡಿರುವದು) ಕಂಡಿರುತ್ತದೆ; ಎಂದರೆ (ನಿಜವಾಗಿ) ಇದ್ದುಕೊಂಡಿರುವ ಪೃಥಿವ್ಯಾದಿವಸ್ತುಗಳ ದೃಷ್ಟಿಯನ್ನೇ ಋಗಾದಿವಿಷಯದಲ್ಲಿ ಹಾಕಬೇಕೆಂದು (ವಿಧಿಸಿರುವದು) ಕಂಡಿರುತ್ತದೆ. ಆದ್ದರಿಂದ ಅದರ ಹೋಲಿಕೆಯಿರುವದರಿಂದ ನಾಮಾದಿಗಳಲ್ಲಿ ಬ್ರಹ್ಮವೇ ಮುಂತಾದ ದೃಷ್ಟಿಗಳೂ (ನಿಜವಾಗಿ) ಇದ್ದುಕೊಂಡಿರುವ ಬ್ರಹ್ಮಾದಿವಿಷಯಗಳೇ ಎಂದು ಸಿದ್ಧವಾಗುತ್ತದೆ. ಇದರಿಂದ ಪ್ರತಿಮೆ, ಬ್ರಾಹ್ಮಣ– ಮುಂತಾದವರಲ್ಲಿ ವಿಷ್ಣ್ವಾದಿದೇವತೆಗಳೂ ಮತ್ತು ಪಿತ್ರಾದಿಬುದ್ಧಿಗಳೂ ಸತ್ಯವಸ್ತುವಿಷಯಕವಾದವುಗಳೇ ಎಂದು ಸಿದ್ಧವಾಗುತ್ತದೆ.

ಗೌಣತ್ವವು ಮುಖ್ಯವನ್ನು ಅಪೇಕ್ಷಿಸುವದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ): ಪಂಚಾಗ್ನಿಗಳೇ ಮುಂತಾದವುಗಳು ಅಗ್ನಿ ಎಂಬುದೇ

---

1. ವಿಧಿಯಲ್ಲಿ ಬ್ರಹ್ಮದೃಷ್ಟಿಯನ್ನು ವಿಧಿಸಿರುವದರಿಂದ ಶ್ರುತಿಯು ನಾಮವನ್ನು ಬ್ರಹ್ಮವೆಂದು ತಿಳಿಯಬೇಕೆಂಬುದಕ್ಕೆ ಪ್ರಮಾಣವೇ ಹೊರತು ಬ್ರಹ್ಮವು ನಿಜವಾಗಿ ಇದೆ ಎಂಬುದಕ್ಕೆ ಪ್ರಮಾಣವಲ್ಲ ಎಂದು ಭಾವ. ಕರ್ಮಮೀಮಾಂಸಕರು ದೇವತೆಗಳನ್ನು ಅಲ್ಲಗಳೆದಿರುವದು ಇದೇ ನ್ಯಾಯದಿಂದ.

ಮುಂತಾದದ್ದು ಗೌಣವಾಗಿರುವದರಿಂದ ಮುಖ್ಯವಾದ ಅಗ್ನಿಯು ಇರಬೇಕೆಂಬುದು ಹೇಗೋ ಹಾಗೆ ನಾಮಾದಿಗಳು ಬ್ರಹ್ಮವೆಂಬುದು ಗೌಣವಾಗಿರುವದರಿಂದ ಮುಖ್ಯ ಬ್ರಹ್ಮವು (ನಿಜವಾಗಿ) ಇರಬೇಕೆಂಬುದು ಯುಕ್ತವಾಗಿರುತ್ತದೆ.

## ಕ್ರಿಯಾಬೋಧಕವಾಕ್ಯಗಳಂತೆ ವಸ್ತುಬೋಧಕವಾಕ್ಯಗಳೂ ಪ್ರಮಾಣ

(ಭಾಷ್ಯ)

೫೨. ಕ್ರಿಯಾರ್ಥೈಶ್ಚ ಅವಿಶೇಷಾತ್ ವಿದ್ಯಾರ್ಥಾನಾಮ್ । ಯಥಾ ಚ ದರ್ಶಪೌರ್ಣಮಾಸಾದಿಕ್ರಿಯಾ ಇದಂಫಲಾ ವಿಶಿಷ್ಟೇತಿಕರ್ತವ್ಯತಾಕಾ ಏವಂ ಕ್ರಮಪ್ರಯುಕ್ತಾಙ್ಗಾ ಚ ಇತ್ಯೇತತ್ ಅಲೌಕಿಕಂ ವಸ್ತು ಪ್ರತ್ಯಕ್ಷಾದ್ಯವಿಷಯಂ ತಥಾಭೂತಂ ಚ ವೇದವಾಕ್ಯೈರೇವ ಜ್ಞಾಪ್ಯತೇ, ತಥಾ ಪರಮಾತ್ಮೇಶ್ವರದೇವತಾದಿ ವಸ್ತ್ವಸ್ಥೂಲಾದಿಧರ್ಮಕಮ್ ಅಶನಾಯಾದ್ಯತೀತಂ ಚ ಇತ್ಯೇವಮಾದಿ ವಿಶಿಷ್ಟಮ್ ಇತಿ ವೇದವಾಕ್ಯೈರೇವ ಜ್ಞಾಪ್ಯತೇ ಇತಿ ಅಲೌಕಿಕತ್ವಾತ್ ತಥಾಭೂತಮೇವ ಭವಿತುಮರ್ಹತಿ[1] । ನ ಚ ಕ್ರಿಯಾರ್ಥೈರ್ವಾಕ್ಯೈಃ ಜ್ಞಾನವಾಕ್ಯಾನಾಂ ಬುದ್ಧ್ಯುತ್ಪಾದಕತ್ವೇ ವಿಶೇಷೋಽಸ್ತಿ। ನ ಚ ಅನಿಶ್ಚಿತಾ ವಿಪರ್ಯಸ್ತಾ ವಾ ಪರಮಾತ್ಮಾದಿವಸ್ತುವಿಷಯಾ ಬುದ್ಧಿಃ ಉತ್ಪದ್ಯತೇ ||

(ಭಾಷ್ಯಾರ್ಥ)

ಕ್ರಿಯಾಪರವಾದ ವಾಕ್ಯಗಳಿಗೂ ವಿದ್ಯಾಪರವಾದ ವಾಕ್ಯಗಳಿಗೂ (ಯಾವ) ವಿಶೇಷವೂ ಇಲ್ಲದ್ದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ): ಹೇಗೆ ದರ್ಶಪೌರ್ಣಮಾಸಾದಿಕ್ರಿಯೆಗೆ ಇದು ಫಲವು, ವಿಶಿಷ್ಟವಾದ (ಇಂಥ) ಇತಿಕರ್ತವ್ಯತೆಯುಳ್ಳದ್ದು[2], ಈ ಕ್ರಮದಲ್ಲಿ (ಇದರ) ಅಂಗಗಳನ್ನು ಪ್ರಯೋಗ ಮಾಡತಕ್ಕದ್ದು– ಎಂಬ ಅಲೌಕಿಕವಸ್ತುವನ್ನು ಎಂದರೆ ಪ್ರತ್ಯಕ್ಷವೇ ಮುಂತಾದವುಗಳಿಗೆ ವಿಷಯವಲ್ಲದ (ವಸ್ತು)ವು ನಿಜವಾಗಿಯೂ ಇರುವದನ್ನು ವೇದವಾಕ್ಯಗಳೇ ತಿಳಿಯಪಡಿಸುತ್ತವೆಯೋ ಹಾಗೆಯೇ ಪರಮಾತ್ಮ, ಈಶ್ವರ, ದೇವತೆ– ಮುಂತಾದ ವಸ್ತುವನ್ನೂ ಅಸ್ಥೂಲವೇ ಮುಂತಾದ ಧರ್ಮಗಳುಳ್ಳದ್ದು, ಹಸಿವು ಮುಂತಾದವುಗಳನ್ನು ಮೀರಿರುವದು– ಮುಂತಾದ (ಧರ್ಮ)ಗಳಿಂದ ಕೂಡಿರುವದು ಎಂಬುದು ಅಲೌಕಿಕವಾಗಿರುವದರಿಂದ[3] (ಅದೂ) ನಿಜವಾಗಿಯೇ ಇರಬೇಕು.[4] ಕ್ರಿಯಾ

---

1. ಇದರ ಮುಂದಿರುವ 'ಇತಿ'ಯು ಬೇಕಿಲ್ಲವೆಂದು ಬಿಟ್ಟಿದೆ.

2. ಹೀಗೆಹೀಗೆ ಮಾಡಬೇಕಾದದ್ದು.

3. ಇಂದ್ರಿಯಾದಿಗಳಿಗೆ ಗೋಚರವಲ್ಲದ್ದರಿಂದ.

4. ಇದುವರೆಗೆ ಉಪಾಸನಾವಾಕ್ಯದಲ್ಲಿ ಹೇಳಿರುವ ಆತ್ಮ, ಈಶ್ವರ, ದೇವತೆಗಳು– ಮುಂತಾದವು ಸತ್ಯವಾಗಿರಬೇಕು ಎಂದು ಮಾತ್ರ ಹೇಳಿತ್ತು. ಈಗ ಅಸ್ಥೂಲಾದಿವಾಕ್ಯಗಳಲ್ಲಿ ವಿಧಿಯಿಲ್ಲದಿದ್ದರೂ ಅವೂ ಯಥಾರ್ಥವಾಗಿರಬೇಕು ಎಂದು ಹೇಳಿದೆ.

ಪರವಾದ ವಾಕ್ಯಗಳಿಗೂ ಜ್ಞಾನವಾಕ್ಯಗಳಿಗೂ ಜ್ಞಾನವನ್ನುಂಟುಮಾಡುವದರಲ್ಲಿ ಯಾವ ವಿಶೇಷವೂ ಇರುವದಿಲ್ಲ.[1] ಪರಮಾತ್ಮಾದಿವಸ್ತುವಿಷಯಕವಾದ ಬುದ್ಧಿಯು ಅನಿಶ್ಚಿತವಾಗಿ ಅಥವಾ ವಿಪರೀತವಾಗಿ ಉಂಟಾಗುವದೂ ಇಲ್ಲ.[2]

## ಜ್ಞಾನವಾಕ್ಯದಲ್ಲಿ ಅನುಷ್ಠೇಯವಿಲ್ಲದಿದ್ದರೂ ಅಪ್ರಾಮಾಣ್ಯವಿಲ್ಲ

(ಭಾಷ್ಯ)

೫೩. ಅನುಷ್ಠೇಯಾಭಾವಾತ್ ಅಯುಕ್ತಮ್ ಇತಿ ಚೇತ್ । ಕ್ರಿಯಾರ್ಥೈರ್ವಾಕ್ಯೈಃ ತ್ರ್ಯಂಶಾ ಭಾವನಾ ಅನುಷ್ಠೇಯಾ ಜ್ಞಾಪ್ಯತೇ ಅಲೌಕಿಕ್ಯಪಿ। ನ ತಥಾ ಪರಮಾತ್ಮೇಶ್ವರಾದಿವಿಜ್ಞಾನೇ ಅನುಷ್ಠೇಯಂ ಕಿಂಚಿದಸ್ತಿ । ಅತಃ ಕ್ರಿಯಾರ್ಥೈಃ ಸಾಧರ್ಮ್ಯಮ್ ಇತ್ಯಯುಕ್ತಮ್ ಇತಿ ಚೇತ್ । ನ । ಜ್ಞಾನಸ್ಯ ತಥಾಭೂತಾರ್ಥವಿಷಯತ್ವಾತ್ । ನ ಹಿ ಅನುಷ್ಠೇಯಸ್ಯ ತ್ರ್ಯಂಶಸ್ಯ ಭಾವನಾಖ್ಯಸ್ಯ ಅನುಷ್ಠೇಯತ್ವಾತ್ ತಥಾತ್ವಮ್, ಕಿಂ ತರ್ಹಿ ಪ್ರಮಾಣಸಮಧಿಗತತ್ವಾತ್ । ನ ಚ ತದ್ವಿಷಯಾಯಾ ಬುದ್ಧೇಃ ಅನುಷ್ಠೇಯವಿಷಯತ್ವಾತ್ ತಥಾರ್ಥತ್ವಮ್ ಕಿಂ ತರ್ಹಿ ವೇದವಾಕ್ಯಜನಿತತ್ವಾದೇವ । ವೇದವಾಕ್ಯಾಧಿಗತಸ್ಯ ವಸ್ತುನಃ ತಥಾತ್ವೇ ಸತಿ ಅನುಷ್ಠೇಯತ್ವವಿಶಿಷ್ಟಂ ಚೇತ್ ಅನುತಿಷ್ಠತಿ, ನೋ ಚೇದನುಷ್ಠೇಯವಿಶಿಷ್ಟಂ ನಾನುತಿಷ್ಠತಿ । ಅನುಷ್ಠೇಯತ್ವೇ ವಾಕ್ಯಪ್ರಮಾಣತ್ವಾನುಪಪತ್ತಿಃ ಇತಿ ಚೇತ್ । ನ ಹಿ ಅನುಷ್ಠೇಯೇ ಅಸತಿ ಪದಾನಾಂ ಸಂಹತಿರುಪಪದ್ಯತೇ । ಅನುಷ್ಠೇಯತ್ವೇ ತು ಸತಿ ತಾದರ್ಥ್ಯೇನ ಪದಾನಿ ಸಂಹನ್ಯನ್ತೇ । ತತ್ರ ಅನುಷ್ಠೇಯನಿಷ್ಠಂ ವಾಕ್ಯೇ ಪ್ರಮಾಣಂ ಭವತಿ ಇದಮ್ ಅನೇನ ಏವಂ ಕರ್ತವ್ಯಮ್ ಇತಿ । ನ ತು 'ಇದಮ್ ಅನೇನ ಏವಮ್' ಇತ್ಯೇವಂಪ್ರಕಾರಾಣಾಂ ಪದಶತಾನಾಮಪಿ ವಾಕ್ಯತ್ವಮಸ್ತಿ 'ಕುರ್ಯಾತ್ ಕ್ರಿಯೇತ ಕರ್ತವ್ಯಂ ಭವೇತ್ ಸ್ಯಾತ್'[3](?) ಇತ್ಯೇವಮಾದೀನಾಮ್ ಅನ್ಯತಮೇ ಅಸತಿ । ಅತಃ ಆತ್ಮೇಶ್ವರಾದೀನಾಮ್[4] ಅವಾಕ್ಯಪ್ರಮಾಣತ್ವಮ್ । ಪದಾರ್ಥತ್ವೇ ಚ ಪ್ರಮಾಣಾನ್ತರವಿಷಯತ್ವಮ್ । ಅತಃ ಅಸದೇತತ್

---

1. ಒಂದು ವಾಕ್ಯವು ಜ್ಞಾನವನ್ನು ಉಂಟುಮಾಡುತ್ತದೆ, ಮತ್ತೊಂದು ಮಾಡುವದಿಲ್ಲ ಎಂಬ ವಿಶೇಷವಿಲ್ಲ. ಗೀ.ಭಾ. ೨-೨೧ (ಭಾ.ಭಾ. ೪೦).

2. ಹಾಗೆ ಉಂಟಾಗಿದ್ದರೆ ಪ್ರಾಮಾಣ್ಯವಿಲ್ಲವೆಂದರೂ ಎನ್ನಬಹುದಾಗಿತ್ತು.

3. ಇಲ್ಲಿರುವ 'ಇತಿ ಪಞ್ಚಮಮ್' ಎಂಬುದು ಮೀಮಾಂಸಾಭಾಷ್ಯದಲ್ಲಿ ಉದಾಹೃತವಾಗಿರುವ ಶ್ಲೋಕದಲ್ಲಿದೆ ಎಂಬುದರ ಮೇಲೆ ಲೇಖಕರು ಬರೆದುಕೊಂಡಿರುವಹಾಗೆ ಕಾಣುತ್ತದೆ. ಅದನ್ನು ಬಿಟ್ಟರೇ ಸರಳವಾಗಿ ಅನ್ವಯವಾಗುತ್ತದೆ.

4. 'ಪರಮಾತ್ಮೇಶ್ವರಾದಿ' ಎಂಬ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಇತಿ ಚೇತ್ । ನ । ಅಸ್ತಿ ಮೇರುರ್ವರ್ಣಚತುಷ್ಟಯೋಪೇತಃ ಇತ್ಯೇವಮಾದ್ಯ ನನುಷ್ಠೇಯೇಽಪಿ ವಾಕ್ಯದರ್ಶನಾತ್ । ನ ಚ ಮೇರುರ್ವರ್ಣಚತುಷ್ಟಯೋಪೇತಃ ಇತ್ಯೇವಮಾದಿವಾಕ್ಯಶ್ರವಣೇ ಮೇರ್ವಾದೌ ಅನುಷ್ಠೇಯತ್ವಬುದ್ಧಿರುತ್ಪದ್ಯತೇ । ತಥಾ ಅಸ್ತಿಪದಸಹಿತಾನಾಂ ಪರಮಾತ್ಮೇಶ್ವರಾದಿಪ್ರತಿಪಾದಕವಾಕ್ಯಪದಾನಾಂ ವಿಶೇಷಣವಿಶೇಷ್ಯಭಾವೇನ ಸಂಹತಿಃ ಕೇನ ವಾರ್ಯತೇ ? ಮೇರ್ವಾದಿಜ್ಞಾನವತ್ ಪರಮಾತ್ಮಜ್ಞಾನೇ ಪ್ರಯೋಜನಾಭಾವಾತ್ ಅಯುಕ್ತಮ್ ಇತಿ ಚೇತ್ । ನ । "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧), "ಭಿದ್ಯತೇ ಹೃದಯಗ್ರನ್ಥಿಃ" (ಮುಂ. ೨-೨-೮) ಇತಿ ಫಲಶ್ರವಣಾತ್ । ಸಂಸಾರಬೀಜಾವಿದ್ಯಾದಿದೋಷನಿವೃತ್ತಿ ದರ್ಶನಾಚ್ಚ । ಅನನ್ಯಶೇಷತ್ವಾಚ್ಚ ತಜ್ಜ್ಞಾನಸ್ಯ ಜುಹ್ವಾಮಿವ ಫಲಶ್ರುತೇರರ್ಥ ವಾದತ್ವಾನುಪಪತ್ತಿಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ):—ಅನುಷ್ಠೇಯವಿಲ್ಲದ್ದರಿಂದ ಇದು ಸರಿಯಲ್ಲ. (ಇದರ ವಿವರ) : ಕ್ರಿಯಾರ್ಥವಾಕ್ಯಗಳು (ತಿಳಿಸುವದು) ಅಲೌಕಿಕವೇ ಆದರೂ ಅನುಷ್ಠೇಯವಾಗಿರುವ ಮೂರು ಅಂಶಗಳ ಭಾವನೆಯನ್ನು ತಿಳಿಸುತ್ತವೆ. ಪರಮಾತ್ಮ, ಈಶ್ವರ– ಮುಂತಾದವುಗಳ ವಿಜ್ಞಾನಗಳಲ್ಲಿ ಹಾಗೆ ಅನುಷ್ಠೇಯವಾಗಿರುವದು ಯಾವದೂ ಇರುವದಿಲ್ಲ. ಆದ್ದರಿಂದ ಕ್ರಿಯಾರ್ಥಕ(ವಾಕ್ಯಗಳಿಗೂ ವಸ್ತು ಬೋಧಕವಾಕ್ಯಗಳಿಗೂ) ಸಾಮಾನ್ಯವಿರುವದರಿಂದ (ಎಂಬ ಹೇತು) ಯುಕ್ತವಲ್ಲ.

(ಸಿದ್ಧಾಂತಿ):–ಹಾಗಲ್ಲ. ಏಕೆಂದರೆ ಜ್ಞಾನವು ಇದ್ದವಿಷಯವನ್ನು ಇದ್ದಂತೆ ತಿಳಿಸುತ್ತದೆ. **ಮೂರು ಅಂಗಗಳ ಭಾವನೆ ಎಂಬ ಅನುಷ್ಠೇಯವು ಅನುಷ್ಠೇಯವಾಗಿರುವದರಿಂದ ಸತ್ಯವಾಗಿರುವದಿಲ್ಲ; ಮತ್ತೇನೆಂದರೆ ಪ್ರಮಾಣದಿಂದ ತಿಳಿದುಬರುವದರಿಂದ (ಸತ್ಯವಾಗಿರುತ್ತದೆ). ಅದರ ವಿಷಯದ ಬುದ್ಧಿಗೆ ಅನುಷ್ಠೇಯವಿಷಯಕವಾಗಿರುವದರಿಂದ ಸರಿಯಾದ ಬುದ್ಧಿಯೆನಿಸಿರುವದಿಲ್ಲ, ಮತ್ತೇನೆಂದರೆ ವೇದವಾಕ್ಯದಿಂದುಂಟಾಗುವದರಿಂದಲೇ (ಸರಿಯೆನಿಸಿರುತ್ತದೆ). ವೇದವಾಕ್ಯದಿಂದ ತಿಳಿದುಬರುವ ವಸ್ತು ಸತ್ಯವಾಗಿರುವದು (ಸಮಾನವಾಗಿರು)ವಲ್ಲಿ, ಅದು ಅನುಷ್ಠೇಯತ್ವ(ಧರ್ಮದಿಂದ) ಕೂಡಿದ್ದಾಗಿದ್ದರೆ ಅನುಷ್ಠಾನಮಾಡುತ್ತಾರೆ, ಅನುಷ್ಠೇಯತ್ವವಿಶಿಷ್ಟವಲ್ಲದಿದ್ದರೆ ಮಾಡುವದಿಲ್ಲ.**

(ಆಕ್ಷೇಪ):—ಅನುಷ್ಠೇಯವಲ್ಲವಾದರೆ ವಾಕ್ಯವು ಪ್ರಮಾಣವೆಂಬುದೇ ಹೊಂದುವದಿಲ್ಲ. (ಇದರ ವಿವರ): ಅನುಷ್ಠೇಯವು ಇಲ್ಲದಿದ್ದರೆ ಪದಗಳು ಸಂಹತ

ವಾಗುವದು[1] ಹೊಂದುವದೇ ಇಲ್ಲ ; ಅನುಷ್ಠೇಯ(ವಿದ್ವ)ರೋ ಎಂದರೆ ಅದಕ್ಕಾಗಿ ಪದಗಳು ಸಂಹತವಾಗುತ್ತವೆ.[2] ಅಲ್ಲಿ ವಾಕ್ಯವು 'ಇದು ಇದರಿಂದ ಹೀಗೆ ಮಾಡಲ್ಪಡತಕ್ಕದ್ದು' ಎಂದು ಅನುಷ್ಠೇಯದಲ್ಲಿ ನಿಲ್ಲುವ[3] ಪ್ರಮಾಣವಾಗುವದು. ಹಾಗಲ್ಲವೆ 'ಇದು, ಇದರಿಂದ, ಹೀಗೆ' ಎಂಬೀ ಪ್ರಕಾರದ ನೂರು ಪದಗಳಿದ್ದರೂ ಕುರ್ಯಾತ್ (ಮಾಡಬೇಕು), ಕ್ರಿಯೇತ (ಮಾಡಲ್ಪಡತಕ್ಕದ್ದು), ಕರ್ತವ್ಯಮ್ (ಮಾಡತಕ್ಕದ್ದು), ಭವೇತ್ (ಆಗಬೇಕು), ಸ್ಯಾತ್ (ಆಗಬೇಕು)[4] ಎಂಬಿವೇ ಮುಂತಾಗಿರುವ (ಪದಗಳಲ್ಲಿ)[5] ಒಂದೂ ಇಲ್ಲದೆ ವಾಕ್ಯವಾಗುವದಿಲ್ಲ.[6] ಆದ್ದರಿಂದ ಆತ್ಮ, ಈಶ್ವರ- ಮುಂತಾದವುಗಳು ವಾಕ್ಯಪ್ರಮಾಣರಹಿತವಾಗಿರುತ್ತವೆ ; ಅವು ಪದಾರ್ಥವೆಂದರೂ, ಪ್ರಮಾಣಾಂತರಕ್ಕೆ ವಿಷಯವೆಂದಾಗುತ್ತದೆ.[7] ಆದ್ದರಿಂದ ಈ (ನಿಮ್ಮ ಮತವು) ಸರಿಯಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ 'ಅಸ್ತಿ ಮೇರುರ್ವರ್ಣಚತುಷ್ಟಯೋಪೇತಃ' (ನಾಲ್ಕು ಬಣ್ಣಗಳಿಂದೊಡಗೂಡಿದ ಮೇರುಪರ್ವತವುಂಟು) ಎಂಬಿದೇ ಮುಂತಾದದ್ದರಲ್ಲಿ ಅನುಷ್ಠೇಯವಲ್ಲದಿದ್ದ ವಿಷಯದಲ್ಲಿಯೂ ವಾಕ್ಯವು ಕಂಡು ಬರುತ್ತದೆ.[8] 'ಮೇರು(ಪರ್ವತವು) ವರ್ಣಚತುಷ್ಟಯದಿಂದೊಡಗೂಡಿದ್ದು' ಎಂಬಿವೇ ಮುಂತಾದ ವಾಕ್ಯವನ್ನು ಕೇಳಿದರೆ ಮೇರುವೇ ಮುಂತಾದದ್ದರಲ್ಲಿ (ಇದು)

---

1. ಒಟ್ಟುಗೂಡಿ ಪದಾರ್ಥಗಳಿಂದ ವ್ಯತಿರಿಕ್ತವಾದ ವಾಕ್ಯಾರ್ಥವನ್ನು ಹೇಳುವದು.

2. ಸಂಹತವಾಗುವದೇ ಪರಾರ್ಥಕ್ಕಾಗಿ. ಅನುಷ್ಠೇಯವನ್ನು ಹೇಳುವ ಪದವಿದ್ದರೆ ಆ ಅನುಷ್ಠೇಯಕ್ಕೆ ಅಂಗವಾಗಿ ಮಿಕ್ಕ ಪದಗಳು ಒಟ್ಟುಗೂಡಿ ಅನ್ವಯವಾಗುತ್ತವೆ ಎಂದು ಭಾವ.

3. ಕೊನೆಗಾಣುವ, ಅದರಲ್ಲಿ ತಾತ್ಪರ್ಯವುಳ್ಳ.

4. ಇವೆಲ್ಲ ಅನುಷ್ಠೇಯವನ್ನು ಹೇಳುವ ಪದಗಳು.

5. ಅನುಷ್ಠೇಯವಾಚಕಪದಗಳೊಳಗೆ.

6. ಪದಾರ್ಥಕ್ಕಿಂತ ವ್ಯತಿರಿಕ್ತವಾದ ಹೊಸ ಅರ್ಥವನ್ನು ಹೇಳುವ ವಾಕ್ಯವಾಗುವದಿಲ್ಲ.

7. ಆತ್ಮ, ಈಶ್ವರ- ಮುಂತಾದವು ಆಯಾ ಪದಗಳಿಂದ ತಿಳಿಯಬರುವ ಪದಾರ್ಥಗಳು ಎಂದರೆ ಪದವನ್ನುಚ್ಚರಿಸಿದರೆ ಪದಾರ್ಥದ ನೆನಪು ಬರುತ್ತದೆ ಎಂದಾಗುವದರಿಂದ ಪದದಿಂದ ತಿಳಿದುಬರುವದಕ್ಕೆ ಮೊದಲೇ ಪ್ರತ್ಯಕ್ಷಾದಿಪ್ರಮಾಣದಿಂದ ಆತ್ಮಾದಿಗಳು ತಿಳಿದುಬರುತ್ತವೆ ಎಂದಂತಾಗಿ ಅದಕ್ಕೆ ವಾಕ್ಯಪ್ರಮಾಣವು ಇಲ್ಲ ಎಂದು ಒಪ್ಪಿಕೊಳ್ಳಬೇಕಾಗುವದು. ಅನುಷ್ಠೇಯ ವಾಚಕವಿದ್ದರೆ ಪದಾರ್ಥಗಳು ಆ ಕರ್ತವ್ಯಕ್ಕೆ ಸಂಬಂಧಪಟ್ಟು ಒಂದು ವಿಶಿಷ್ಟಕರ್ತವ್ಯವನ್ನು ತಿಳಿಸುತ್ತವೆ ಎಂದಾಗುವದರಿಂದ ವಾಕ್ಯಕ್ಕೆ ಒಂದು ಹೊಸ ಅರ್ಥವಿದೆಯೆಂದಾಗುವದು ಎಂದರ್ಥ. ಇದು ಮೀಮಾಂಸಕರ ಮತ.

8. ಈ ಉದಾಹೃತವಾಕ್ಯವು ಮೇರುವೆಂಬ ವಸ್ತುವಿನ ವಿಷಯವಾದದ್ದು, ಕರ್ಮ ವಿಷಯಕವಲ್ಲ.

ಅನುಷ್ಠೇಯವು ಎಂಬ ಬುದ್ಧಿಯು ಉಂಟಾಗುವದಿಲ್ಲ. ಹೀಗೆಯೇ ಅಸ್ತಿಪದದಿಂದೊಡಗೂಡಿದ[1] ಆತ್ಮ, ಈಶ್ವರ– ಮುಂತಾದವುಗಳನ್ನು ತಿಳಿಸುವ ವಾಕ್ಯಗಳಲ್ಲಿರುವ ಪದಗಳು ವಿಶೇಷಣವಿಶೇಷ್ಯಭಾವದಿಂದ ಸಂಹತಿ(ಯಾಗುವದನ್ನು) ಯಾರು ಇಲ್ಲವೆನ್ನಲಾದೀತು ?[2]

(ಆಕ್ಷೇಪ):—ಮೇರ್ವಾದಿಜ್ಞಾನದಂತೆಯೇ ಪರಮಾತ್ಮಜ್ಞಾನದಲ್ಲಿಯೂ[3] ಪ್ರಯೋಜನವಿಲ್ಲದ್ದರಿಂದ (ಇದು) ಸರಿಯಲ್ಲ.

(ಪರಿಹಾರ):–ಹಾಗಲ್ಲ. ಏಕೆಂದರೆ 'ಬ್ರಹ್ಮವಿದಾಪ್ನೋತಿ ಪರಮ್' (ಬ್ರಹ್ಮವನ್ನು ಬಲ್ಲವನು ಪರಮಪುರುಷಾರ್ಥವನ್ನು ಪಡೆಯುತ್ತಾನೆ. ತೈ. ೨-೧), 'ಭಿದ್ಯತೇ ಹೃದಯಗ್ರನ್ಥಿಃ' (ಹೃದಯಗ್ರಂಥಿಯು ನಾಶವಾಗುತ್ತದೆ ಮುಂ. ೨-೨-೮) ಎಂದು ಫಲವನ್ನು ಶ್ರುತಿಯಲ್ಲಿ ಹೇಳಿದೆ. ಸಂಸಾರಬೀಜವಾದ ಅವಿದ್ಯೆಯೇ ಮುಂತಾದ ದೋಷಗಳು ತೊಲಗುವದೂ ಕಂಡಿದೆ.[4] ಆ (ಪರಮಾತ್ಮ)ಜ್ಞಾನವು ಮತ್ತೊಂದಕ್ಕೆ ಶೇಷವಲ್ಲದ್ದರಿಂದಲೂ ಜುಹೂವಿಷಯದಲ್ಲಿ ಹೇಗೋ ಹಾಗೆ (ಇದು) ಅರ್ಥವಾದವೆಂಬುದೂ ಹೊಂದುವದಿಲ್ಲ.[5]

## ಪ್ರತಿಷೇಧವಾಕ್ಯಗಳಂತೆ ವಸ್ತುವಾಕ್ಯವೂ ಪ್ರಮಾಣವಾಗಬಹುದು

(ಭಾಷ್ಯ)

೫೪. ಪ್ರತಿಷಿದ್ಧಾನಿಷ್ಟಫಲಸಂಬನ್ಧಶ್ಚ ವೇದಾದೇವ ವಿಜ್ಞಾಯತೇ। ನ ಚಾನುಷ್ಠೇಯಃ ಸಃ। ನ ಚ ಪ್ರತಿಷಿದ್ಧವಿಷಯೇ ಪ್ರವೃತ್ತಕ್ರಿಯಸ್ಯ ಅಕರಣಾತ್

---

1. ಮಿಕ್ಕ ಕ್ರಿಯಾಪದಗಳು ಇಲ್ಲದಿದ್ದರೂ ಅಸ್ತಿ, ಅಸ್ಮಿ, ಅಸಿ–ಎಂಬ ಇರು ಎಂಬರ್ಥದ ಕ್ರಿಯಾಪದವು ಇದ್ದರೇ ಸಾಕು, ವಾಕ್ಯವಾಗುವದು ; ಕರ್ತವ್ಯವನ್ನು ಹೇಳುವ ಕ್ರಿಯಾಪದವಿರಬೇಕಾದದ್ದೇನೂ ಇಲ್ಲ.

2. ವಿಶೇಷಣವಿಶೇಷ್ಯಭಾವವೆಂಬುದೂ ವಿವಕ್ಷಿತವಲ್ಲ ; ತತ್ತ್ವಮಸಿವಾಕ್ಯದಲ್ಲಿ ವಿಶೇಷಣ ವಿಶೇಷ್ಯಭಾವದಿಂದ ತತ್ತ್ವಂಪದಗಳು ಸೇರಿದ ಬಳಿಕ ಅನ್ವಯಾರ್ಥವನ್ನು ಬಿಟ್ಟು ಚೈತನ್ಯಮಾತ್ರವನ್ನು ಲಕ್ಷಣೆಯಿಂದಲೇ ತಿಳಿಸುತ್ತದೆ.

3. ಪ್ರಕೃತವಾದದ್ದು ಪ್ರಾಣವಿಷಯವಾದರೂ ಪರಮಾತ್ಮವಸ್ತುವನ್ನು ತಿಳಿಸುವ ವಾಕ್ಯದ ಪದಗಳೂ ಸಂಹತವಾಗಬಹುದೆಂದು ತೋರಿಸುವದಕ್ಕೇ ಈ ಚರ್ಚೆಯನ್ನು ಉಪಯೋಗಿಸಿಕೊಂಡಿದೆ.

4. ಶ್ರುತಿಯಲ್ಲಿ ಫಲವನ್ನು ಹೇಳಿದೆ; ಅವಿದ್ಯಾದಿನಿವೃತ್ತಿಯು ಅನುಭವದಲ್ಲಿದೆ.

5. "ಪರ್ಣವೆಂಬ ಮರದಿಂದ ಮಾಡಿದ ಜುಹೂಉಳ್ಳವನಿಗೆ ಕೆಟ್ಟ ಹೆಸರು ಬರುವದಿಲ್ಲ" ಎಂಬ (ತೈ. ಸಂ. ೩-೫-೭) ವಾಕ್ಯದಲ್ಲಿರುವ ಜುಹೂಜ್ಞಾನವು ಕರ್ಮಕ್ಕೆ ಶೇಷವಾಗಿರುವದರಿಂದ ಆ ವಾಕ್ಯವು ಅರ್ಥವಾದವು. ಆದರೆ ಪರಮಾತ್ಮವಾಕ್ಯವು ಹಾಗಲ್ಲ.

ಅನ್ಯತ್ ಅನುಷ್ಠೇಯಮಸ್ತಿ। ಅಕರ್ತವ್ಯತಾಜ್ಞಾನನಿಷ್ಠತ್ವೈವ ಹಿ ಪರಮಾರ್ಥತಃ ಪ್ರತಿಷೇಧವಿಧೀನಾಂ ಸ್ಯಾತ್। ಕ್ಷುಧಾರ್ತಸ್ಯ ಪ್ರತಿಷೇಧಜ್ಞಾನಸಂಸ್ಕೃತಸ್ಯ ಅಭಕ್ಷ್ಯೇ ಅಭೋಜ್ಯೇ ವಾ ಪ್ರತ್ಯುಪಸ್ಥಿತೇ ಕಲಞ್ಜಾಭಿಶಸ್ತಾನ್ನಾದೌ 'ಇದಂ ಭಕ್ಷ್ಯಮ್', 'ಅದೋ ಭೋಜ್ಯಮ್' ಇತಿ ವಾ ಜ್ಞಾನಮುತ್ಪನ್ನಮ್ ತದ್ವಿಷಯಯಾ ಪ್ರತಿಷೇಧಜ್ಞಾನಸ್ಮೃತ್ಯಾ ಬಾಧ್ಯತೇ ಮೃಗತೃಷ್ಣಿಕಾಯಾಮಿವ ಪೇಯಜ್ಞಾನಂ ತದ್ವಿಷಯಯಾಥಾತ್ಮ್ಯವಿಜ್ಞಾನೇನ। ತಸ್ಮಿನ್ ಬಾಧಿತೇ ಸ್ವಾಭಾವಿಕವಿಪರೀತ ಜ್ಞಾನೇ ಅನರ್ಥಕರೀ ತದ್ಭಕ್ಷಣಭೋಜನಪ್ರವೃತ್ತಿರ್ನ ಭವತಿ। ವಿಪರೀತಜ್ಞಾನ ನಿಮಿತ್ತಾಯಾಃ ಪ್ರವೃತ್ತೇರ್ನಿವೃತ್ತಿರೇವ ನ ಪುನರ್ಯತ್ನಃ ಕಾರ್ಯಸ್ತದಭಾವೇ। ತಸ್ಮಾತ್ ಪ್ರತಿಷೇಧವಿಧೀನಾಂ ವಸ್ತುಯಾಥಾತ್ಮ್ಯಜ್ಞಾನನಿಷ್ಠತ್ವೈವ ನ ಪುರುಷ ವ್ಯಾಪಾರನಿಷ್ಠತಾಗನ್ಧೋಽಪ್ಯಸ್ತಿ, ತಥಾ ಇಹಾಪಿ ಪರಮಾತ್ಮಾದಿಯಾಥಾತ್ಮ್ಯಜ್ಞಾನ ವಿಧೀನಾಂ ತಾವನ್ಮಾತ್ರಪರ್ಯವಸಾನತ್ವೈವ ಸ್ಯಾತ್। ತಥಾ ತದ್ವಿಜ್ಞಾನಸಂಸ್ಕೃತಸ್ಯ ತದ್ವಿಪರೀತಾರ್ಥಜ್ಞಾನನಿಮಿತ್ತಾನಾಂ ಪ್ರವೃತ್ತೀನಾಮ್ ಅನರ್ಥಾರ್ಥತ್ವೇನ ಜ್ಞಾಯಮಾನತ್ವಾತ್ ಪರಮಾತ್ಮಾದಿಯಾಥಾತ್ಮ್ಯಜ್ಞಾನಸ್ಮೃತ್ಯಾ ಸ್ವಾಭಾವಿಕೇ ತನ್ನಿಮಿತ್ತವಿಜ್ಞಾನೇ ಬಾಧಿತೇ ಅಭಾವಃ ಸ್ಯಾತ್। ನನು ಕಲಞ್ಜಾದಿಭಕ್ಷಣಾದೇಃ ಅನರ್ಥಾರ್ಥತ್ವವಸ್ತುಯಾಥಾರ್ಥ್ಯಜ್ಞಾನಸ್ಮೃತ್ಯಾ ಸ್ವಾಭಾವಿಕೇ ತದ್ಭಕ್ಷ್ಯತ್ವಾದಿವಿಪ ರೀತಜ್ಞಾನೇ ನಿವರ್ತಿತೇ ತದ್ಭಕ್ಷಣಾದ್ಯನರ್ಥಪ್ರವೃತ್ತ್ಯಭಾವವತ್ ಅಪ್ರತಿಷೇಧ ವಿಷಯತ್ವಾತ್ ಶಾಸ್ತ್ರವಿಹಿತಪ್ರವೃತ್ತ್ಯಭಾವೋ ನ ಯುಕ್ತಃ ಇತಿ ಚೇತ್ । ನ। ವಿಪರೀತಜ್ಞಾನನಿಮಿತ್ತತ್ವಾನರ್ಥಾರ್ಥತ್ವಾಭ್ಯಾಂ ತುಲ್ಯತ್ವಾತ್। ಕಲಞ್ಜಭಕ್ಷ ಣಾದಿಪ್ರವೃತ್ತೇಃ. ಮಿಥ್ಯಾಜ್ಞಾನನಿಮಿತ್ತತ್ವಮ್ ಅನರ್ಥಾರ್ಥತ್ವಂ ಚ ಯಥಾ ತಥಾ ಶಾಸ್ತ್ರವಿಹಿತಪ್ರವೃತ್ತೀನಾಮಪಿ। ತಸ್ಮಾತ್ ಪರಮಾತ್ಮಯಾಥಾತ್ಮ್ಯ ವಿಜ್ಞಾನವತಃ ಶಾಸ್ತ್ರವಿಹಿತಪ್ರವೃತ್ತೀನಾಮಪಿ ಮಿಥ್ಯಾಜ್ಞಾನನಿಮಿತ್ತತ್ವೇನ ಅನ ರ್ಥಾರ್ಥತ್ವೇನ ಚ ತುಲ್ಯತ್ವಾತ್ ಪರಮಾತ್ಮಜ್ಞಾನೇನ ವಿಪರೀತಜ್ಞಾನೇ ನಿವರ್ತಿತೇ ಯುಕ್ತ ಏವಾಭಾವಃ ||

(ಭಾಷ್ಯಾರ್ಥ)

ಪ್ರತಿಷಿದ್ಧ(ಕರ್ಮಕ್ಕೂ) ಅನಿಷ್ಟಫಲಕ್ಕೂ (ಇರುವ) ಸಂಬಂಧವೂ ವೇದ ದಿಂದಲೇ ತಿಳಿದುಬರುತ್ತದೆ. ಆದರೆ ಆ (ಸಂಬಂಧವು) ಅನುಷ್ಠೇಯವೇನೂ ಅಲ್ಲ. ಪ್ರತಿಷಿದ್ಧವಾದ ವಿಷಯದ ಕ್ರಿಯೆಯಲ್ಲಿ ತೊಡಗಿರುವಾತನು (ಅದನ್ನು) ಮಾಡದೆ ಇರುವದಲ್ಲದೆ (ಅದಕ್ಕಿಂತ) ಬೇರೆ ಅನುಷ್ಠೇಯವಾದ (ಕರ್ಮವೇನೂ) ಇರು ವದಿಲ್ಲ. (ಇದು) ಕರ್ತವ್ಯವಲ್ಲವೆಂಬ ಜ್ಞಾನದಲ್ಲಿ ನೆಲೆನಿಲ್ಲುವದೇ ಅಲ್ಲವೆ, ಪ್ರತಿ ಷೇಧವಿಧಿಗಳಿಗೆ[1] ನಿಜವಾಗಿ (ಅಭಿಪ್ರೇತ)ವಾಗಿರುವದು? ಹಸಿವಿನಿಂದ ಸಂಕಟ

1. ಇದನ್ನು ಮಾಡತಕ್ಕದ್ದಲ್ಲ ಎಂದು ತಿಳಿಸುವ ವಾಕ್ಯಗಳಿಗೆ ಎಂದರ್ಥ. ಇಲ್ಲಿ 'ವಿಧಿ' ಎಂಬ ಮಾತನ್ನು ವೇದವಾಕ್ಯವೆಂಬರ್ಥದಲ್ಲಿ ಮಾತ್ರ ತೆಗೆದುಕೊಳ್ಳಬೇಕು.

ಪಡುತ್ತಿರುವವನು ಪ್ರತಿಷೇಧಜ್ಞಾನದ ಸಂಸ್ಕಾರವುಳ್ಳವನಾದರೆ ತಿನ್ನಬಾರದ ಅಥವಾ ಉಣ್ಣಬಾರದ ಎದುರಿಗೆ ಇರುವ ಕಲಂಜ[1], ಅಭಿಶಸ್ತಾನ್ನ[2]–ಮುಂತಾದದ್ದರಲ್ಲಿ 'ಇದನ್ನು ತಿನ್ನಬಹುದು', 'ಅದನ್ನು ಉಣ್ಣಬಹುದು' ಎಂದು ಜ್ಞಾನವುಂಟಾಗಿರುವದಲ್ಲ, (ಅದು) ಆ ವಿಷಯದ ಪ್ರತಿಷೇಧಜ್ಞಾನದ ಸ್ಮೃತಿಯಿಂದ[3] ಬಾಧಿತವಾಗುತ್ತದೆ. ಬಿಸಿಲುಕುದುರೆಯ (ನೀರಿನಲ್ಲಿ ಉಂಟಾಗಿದ್ದ ಇದನ್ನು) 'ಕುಡಿಯಬಹುದು' ಎಂಬ ಜ್ಞಾನವು ಅದರ ವಿಷಯದ ನಿಜದ ಅರಿವಿನಿಂದ (ಬಾಧಿತವಾಗು) ವಂತೆಯೇ (ಇದು). ಆ ಸ್ವಾಭಾವಿಕವಾದ ವಿಪರೀತಜ್ಞಾನವು ಬಾಧಿತವಾಗಲು ಅದನ್ನು 'ತಿನ್ನಬೇಕು', 'ಉಣ್ಣಬೇಕು' ಎಂಬ ಅನರ್ಥಕರವಾದ ಪ್ರವೃತ್ತಿಯುಂಟಾಗಿತ್ತಲ್ಲ, (ಅದು) ಆಗದೆಹೋಗುವದು. ವಿಪರೀತಜ್ಞಾನದ ನಿಮಿತ್ತದಿಂದಾಗಿದ್ದ ಪ್ರವೃತ್ತಿಯ ನಿವೃತ್ತಿಯು (ತಾನೇ) ಆಗುವದೇ ಹೊರತು ಮತ್ತೆ ಅದರ ಅಭಾವಕ್ಕಾಗಿ ಬೇರೆಯ ಯತ್ನವನ್ನು ಮಾಡಬೇಕಾಗಿರುವದಿಲ್ಲ.[4] ಆದ್ದರಿಂದ ಪ್ರತಿಷೇಧವಿಧಿಗಳು ವಸ್ತುವಿನ ನಿಜವಾದ ಸ್ವರೂಪವನ್ನು ತಿಳಿಸುವದರಲ್ಲಿಯೇ ಕೊನೆಗಾಣುವವೇ ಹೊರತು ಪುರುಷವ್ಯಾಪಾರದಲ್ಲಿ ಕೊನೆಗಾಣುವ ವಾಸನೆಯುಕೂಡ (ಅವುಗಳಲ್ಲಿ)ರುವದಿಲ್ಲ. ಹಾಗೆಯೇ ಇಲ್ಲಿಯೂ ಪರಮಾತ್ಮನೇ ಮುಂತಾದವುಗಳ ತತ್ತ್ವದ ಜ್ಞಾನವನ್ನು ತಿಳಿಸುವ ವಾಕ್ಯಗಳೂ ಅಷ್ಟರಲ್ಲಿಯೇ ಕೊನೆಗಾಣುವವಾಗಬೇಕು.[5] ಹಾಗೆಯೇ ಅವುಗಳ ವಿಜ್ಞಾನದಿಂದ ಸಂಸ್ಕೃತನಾದವನಿಗೆ ಅದಕ್ಕೆ ವಿಪರೀತವಾದ ವಸ್ತುಜ್ಞಾನದ ನಿಮಿತ್ತದಿಂದ (ಆಗಬೇಕಾಗಿದ್ದ) ಪ್ರವೃತ್ತಿಗಳು ಅನರ್ಥವನ್ನುಂಟುಮಾಡುವವೆಂದು ತಿಳಿಯಬರುವದರಿಂದ ಪರಮಾತ್ಮನೇ ಮುಂತಾದವುಗಳ ನಿಜದ

---

1. ಕಲಂಜಶಬ್ದದ ನಿಜವಾದ ಅರ್ಥವೇನೆಂಬುದು ತಿಳಿಯದು. 'ವಿಷವನ್ನು ಬಳಿದ ಬಾಣದಿಂದ ಹತವಾದ ಮೃಗದ ಮಾಂಸ' ಎಂದು ವ್ಯಾಖ್ಯಾನಕಾರರು ಹೇಳುತ್ತಾರೆ.

2. ಪಾತಕಿಗಳೆಂಬ ಆರೋಪವನ್ನು ಹೊತ್ತವರ ಅನ್ನ.

3. ಪ್ರತಿಷೇಧಜ್ಞಾನದ ಸಂಸ್ಕಾರವು ಯಾವದಾದರೊಂದು ನಿಮಿತ್ತದಿಂದ ಎದ್ದುಕೊಳ್ಳಲು ಇದು ತಿನ್ನತಕ್ಕದ್ದಲ್ಲ ಎಂದು ಮುಂತಾದ ಹಿಂದಿನ ಜ್ಞಾನದ ನೆನಪು ಉಂಟಾಗುವದು.

4. ಪ್ರತಿಷೇಧಜ್ಞಾನಮಾತ್ರದಿಂದ ಆ ಕೆಲಸದಲ್ಲಿ ತೊಡಗುವದು ನಿಂತುಹೋಗುವದು; ಇಷ್ಟೇ ಹೊರತು ಆ ಜ್ಞಾನವಾದಮೇಲೆ ಅನರ್ಥಕರವಾದ ಆ ಕೆಲಸವನ್ನು ಮಾಡದೆ ಇರುವದಕ್ಕಾಗಿ ಮತ್ತೆ ಪ್ರಯತ್ನವನ್ನು ಮಾಡಬೇಕಾದದ್ದಿರುವದಿಲ್ಲ ಎಂದರ್ಥ. ನಿಷೇಧಜ್ಞಾನವಾದಮೇಲೂ ಪ್ರವೃತ್ತಿಯನ್ನು ತಡೆಗಟ್ಟುವ ಬಲವಾದ ಪ್ರವೃತ್ತಿಯನ್ನು ಮಾಡಬೇಕು ಎಂಬ ಮೀಮಾಂಸಕರ ಅಭಿಪ್ರಾಯವನ್ನು ಇಲ್ಲಿ ತಳ್ಳಿಹಾಕಿದೆ. ಸೂ.ಭಾ. ೧-೧-೪, ಭಾ.ಭಾ. ೫೬ನ್ನು ನೋಡಿ.

5. ನಿಷೇಧವಾಕ್ಯಗಳು ನಿಷೇಧಜ್ಞಾನಮಾತ್ರದಲ್ಲಿ ಕೊನೆಗಾಣುವಂತೆ ವಸ್ತುಬೋಧಕವಾಕ್ಯಗಳು ವಸ್ತುಜ್ಞಾನಮಾತ್ರದಲ್ಲಿ ಕೊನೆಗಾಣಬೇಕು.

ಜ್ಞಾನದ ಸ್ಮೃತಿಯಿಂದ, ಸ್ವಾಭಾವಿಕವಾಗಿರುವ ಆ (ಪ್ರವೃತ್ತಿ)ಗಳಿಗೆ ನಿಮಿತ್ತವಾದ ವಿಜ್ಞಾನವು ಬಾಧಿತವಾಗಲು (ಆ ಪ್ರವೃತ್ತಿಗಳ) ಅಭಾವವಾಗುವದು.[1]

(ಆಕ್ಷೇಪ):—ಕಲಂಜಾದಿಭಕ್ಷಣವೇ ಮುಂತಾದದ್ದು ಅನರ್ಥವನ್ನುಂಟುಮಾಡತಕ್ಕದ್ದೆಂದು ವಸ್ತುವಿನ ನಿಜದ ಜ್ಞಾನದ ನೆನಪಿನಿಂದ 'ಅದು ತಿನ್ನತಕ್ಕದ್ದು' ಎಂದು ಮುಂತಾಗಿದ್ದ ಸ್ವಾಭಾವಿಕವಾದ ವಿಪರೀತಜ್ಞಾನವು ತೊಲಗಲಾಗಿ ಅದನ್ನು ತಿನ್ನುವದೇ ಮುಂತಾದ ಅನರ್ಥ(ಕರ)ಪ್ರವೃತ್ತಿಯುಂಟಾಗದಿರುವಂತೆ ಶಾಸ್ತ್ರವಿಹಿತವಾದ ಪ್ರವೃತ್ತಿಯ ಅಭಾವವಾಗುವದು ಯುಕ್ತವಲ್ಲ. ಏಕೆಂದರೆ ಇದು (ಶಾಸ್ತ್ರ) ಪ್ರತಿಷೇಧಕ್ಕೆ ವಿಷಯವಲ್ಲ. (ಅಲ್ಲವೆ)?

(ಸಮಾಧಾನ):—ಹಾಗಲ್ಲ. ಏಕೆಂದರೆ ವಿಪರೀತಜ್ಞಾನದ ನಿಮಿತ್ತದಿಂದ ಆಗಿರುವಿಕೆ, ಅನರ್ಥಫಲಕ್ಕೆ ತಕ್ಕ ಕಾರಣವಾಗಿರುವಿಕೆ– (ಇವೆರಡೂ ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ) ಸಮಾನವಾಗಿರುತ್ತವೆ. (ಇದರ ವಿವರ): ಕಲಂಜಭಕ್ಷಣವೇ ಮುಂತಾದದ್ದರಲ್ಲಿ ತೊಡಗುವದು ಮಿಥ್ಯಾಜ್ಞಾನವಾಗಿದೆ, ಅನರ್ಥಫಲವನ್ನುಂಟುಮಾಡುತ್ತದೆ–ಎಂಬುದು ಹೇಗೋ ಶಾಸ್ತ್ರವಿಹಿತವಾದ ಪ್ರವೃತ್ತಿಗಳೂ ಹಾಗೆಯೇ[2]. ಆದ್ದರಿಂದ ಪರಮಾತ್ಮನ ನಿಜವಾದ ಸ್ವರೂಪದ ವಿಜ್ಞಾನವುಳ್ಳಾತನಿಗೆ ಶಾಸ್ತ್ರವಿಹಿತವಾದ ಪ್ರವೃತ್ತಿಗಳುಕೂಡ ಮಿಥ್ಯಾಜ್ಞಾನನಿಮಿತ್ತವಾಗಿರುವದರಿಂದಲೂ (ಈ ವಿಷಯದಲ್ಲಿ ನಿಷಿದ್ಧಕರ್ಮಗಳಿಗೆ) ಸಮಾನವಾಗಿರುವದರಿಂದಲೂ ಪರಮಾತ್ಮಜ್ಞಾನದಿಂದ ವಿಪರೀತಜ್ಞಾನವು ನಿವೃತ್ತವಾಗಲು (ಅವೂ) ಇಲ್ಲವಾಗುವದು ಯುಕ್ತವೇ ಆಗಿರುತ್ತದೆ.

## ನಿತ್ಯಕರ್ಮಗಳನ್ನು ಅವಿದ್ಯಾದಿದೋಷವುಳ್ಳವರಿಗೆ ತಿಳಿಸಿದೆ

(ಭಾಷ್ಯ)

೫೫. ನನು ತತ್ರ ಯುಕ್ತಃ। ನಿತ್ಯಾನಾಂ ತು ಕೇವಲಶಾಸ್ತ್ರನಿಮಿತ್ತತ್ವಾತ್ ಅನರ್ಥಾರ್ಥತ್ವಾಭಾವಾಚ್ಚ ಅಭಾವೋ ನ ಯುಕ್ತಃ ಇತಿ ಚೇತ್। ನ। ಅವಿದ್ಯಾರಾಗದ್ವೇಷಾದಿದೋಷವತೋ ವಿಹಿತತ್ವಾತ್। ಯಥಾ ಸ್ವರ್ಗಕಾಮಾದಿದೋಷವತೋ ದರ್ಶಪೂರ್ಣಮಾಸಾದೀನಿ ಕಾಮ್ಯಾನಿ ಕರ್ಮಾಣಿ ವಿಹಿತಾನಿ ತಥಾ ಸರ್ವಾ

---

1. ನಿಷೇಧಜ್ಞಾನದಿಂದ ಪ್ರವೃತ್ತಿಯು ಅನರ್ಥಕರವೆಂದು ತಿಳಿದು ನಿಷಿದ್ಧಕರ್ಮವನ್ನು ಬಿಡುವಂತೆಯೇ ಪರಮಾತ್ಮಜ್ಞಾನದಿಂದ ಸ್ವರ್ಗಾದಿನಿಮಿತ್ತವಾಗಿ ಮಾಡುವ ಕರ್ಮಗಳೂ ಅನರ್ಥಕರವೆಂದು ತಿಳಿದು ತಾನೇ ಬಿಡುತ್ತಾನೆ; ಅವುಗಳನ್ನು ಬಿಡಿಸುವದಕ್ಕೇನೂ ಈ ಜ್ಞಾನವಾಕ್ಯಗಳು ವ್ಯಾಪಾರಮಾಡುವದಿಲ್ಲ ಎಂದು ಅಭಿಪ್ರಾಯ.

2. ಅವೂ ವಿಪರೀತಾರ್ಥಜ್ಞಾನದಿಂದಾಗಿರುತ್ತವೆ, ಅನರ್ಥಕ್ಕೆ ಕಾರಣವಾಗಿರುತ್ತವೆ. ಪರಮಾರ್ಥದೃಷ್ಟಿಯಿಂದ ಇವಕ್ಕೂ ಪ್ರತಿಷಿದ್ಧಪ್ರವೃತ್ತಿಗಳಿಗೂ ತಾರತಮ್ಯವಿಲ್ಲ ಎಂದರ್ಥ.

ನರ್ಥಬೀಜಾವಿದ್ಯಾದಿದೋಷವತಃ ತಜ್ಜನಿತೇಷ್ಟಾನಿಷ್ಟಪ್ರಾಪ್ತಿಪರಿಹಾರರಾಗದ್ವೇಷಾದಿದೋಷವತಶ್ಚ ತತ್ಪ್ರೇರಿತಾವಿಶೇಷಪ್ರವೃತ್ತೇಃ ಇಷ್ಟಾನಿಷ್ಟಪ್ರಾಪ್ತಿಪರಿಹಾರಾರ್ಥಿನೋ ನಿತ್ಯಾನಿ ಕರ್ಮಾಣಿ ವಿಧೀಯನ್ತೇ, ನ ಕೇವಲಂ ಶಾಸ್ತ್ರನಿಮಿತ್ತಾನ್ಯೇವ| ನ ಚ ಅಗ್ನಿಹೋತ್ರದರ್ಶಪೂರ್ಣಮಾಸಚಾತುರ್ಮಾಸ್ಯಪಶುಬನ್ಧಸೋಮಾನಾಂ ಕರ್ಮಣಾಂ ಸ್ವತಃ ಕಾಮ್ಯನಿತ್ಯತ್ವವಿವೇಕೋಽಸ್ತಿ | ಕರ್ತೃಗತೇನ ಹಿ ಸ್ವರ್ಗಾದಿಕಾಮದೋಷೇಣ ಕಾಮಾರ್ಥತಾ | ತಥಾ ಅವಿದ್ಯಾದಿದೋಷವತಃ ಸ್ವಭಾವಪ್ರಾಪ್ತೇಷ್ಟಾನಿಷ್ಟಪ್ರಾಪ್ತಿಪರಿಹಾರಾರ್ಥಿನಃ ತದರ್ಥಾನ್ಯೇವ ನಿತ್ಯಾನಿ ಇತಿ ಯುಕ್ತಮ್ | ತಂ ಪ್ರತಿ ವಿಹಿತತ್ವಾತ್ ||

(ಭಾಷ್ಯಾರ್ಥ)

(ಆಕ್ಷೇಪ):—ಅಲ್ಲಿ (ನೀವು ಹೇಳಿದ್ದು) ಸರಿಯಾಗುತ್ತದೆ. ಆದರೆ ನಿತ್ಯ (ಕರ್ಮ)ಗಳು ಕೇವಲಶಾಸ್ತ್ರನಿಮಿತ್ತವಾಗಿರುವದರಿಂದ[1] (ಅವಕ್ಕೆ) ಅನರ್ಥಫಲವಿಲ್ಲದ್ದರಿಂದ (ಇದು) ಸರಿಯಾಗುವದಿಲ್ಲವಲ್ಲ !

(ಪರಿಹಾರ):— ಹಾಗಲ್ಲ. ಏಕೆಂದರೆ (ಅವು) ಅವಿದ್ಯಾರಾಗದ್ವೇಷಾದಿದೋಷವುಳ್ಳವನಿಗೆ ವಿಹಿತವಾಗಿರುತ್ತವೆ. (ಇದರ ವಿವರ): **ಹೇಗೆ ಸ್ವರ್ಗಕಾಮವೇ ಮುಂತಾದ ದೋಷವುಳ್ಳವನಿಗೆ ದರ್ಶಪೌರ್ಣಮಾಸವೇ ಮುಂತಾದ ಕಾಮ್ಯಕರ್ಮಗಳನ್ನು ವಿಧಿಸಿದೆಯೋ ಅದರಂತೆ ಸರ್ವಾನರ್ಥಗಳಿಗೂ ಬೀಜವಾಗಿರುವ[2] ಅವಿದ್ಯೆಯೇ ಮುಂತಾದ ದೋಷವುಳ್ಳ ಮತ್ತು ಆ (ದೋಷ)ದಿಂದುಂಟಾದ ಇಷ್ಟಾನಿಷ್ಟಪ್ರಾಪ್ತಿಪರಿಹಾರ(ಸಂಬಂಧವಾದ) ರಾಗದ್ವೇಷಗಳೇ ಮುಂತಾದ ದೋಷವುಳ್ಳವನಾಗಿ ಆ (ದೋಷ)ಗಳಿಂದ ಪ್ರೇರಿತನಾಗಿ ಸಾಮಾನ್ಯವಾಗಿ ಪ್ರವರ್ತಿಸುತ್ತಾ[3] ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳನ್ನು ಬಯಸುತ್ತಿರುವವನಿಗೆ ನಿತ್ಯಕರ್ಮಗಳು ವಿಹಿತವಾಗಿರುತ್ತವೆ,**

---

1. 'ಕೇವಲಶಾಸ್ತ್ರ' ಎಂಬ ವಿಶೇಷಣದಿಂದ ಅವರಲ್ಲಿ ರಾಗಾದಿದೋಷಗಳಿಲ್ಲವೆಂದು ಸೂಚಿಸಿದೆ.

2. ನಿಮಿತ್ತವಾಗಿರುವದರಿಂದ ಎಂದರ್ಥ. ಪ್ರಕೃತವಾಗಿರುವ ವಿಪರೀತಜ್ಞಾನವನ್ನೇ 'ಅವಿದ್ಯೆ' ಎಂಬ ಶಬ್ದದಿಂದ ಹೇಳಿರುವದರಿಂದ ಉಪಾದಾನಕಾರಣವು ವಿವಕ್ಷಿತವಲ್ಲ.

3. ರಾಗ, ದ್ವೇಷ, ಭಯ, ಮೋಹ- ಮುಂತಾದ ದೋಷಗಳು ಜೀವರಿಗೆಲ್ಲ ಸಾಮಾನ್ಯವಾಗಿರುವದರಿಂದ ಅವರು ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳಿಗಾಗಿ ಪ್ರವರ್ತಿಸುತ್ತಿರುತ್ತಾರೆ. ಕಾಮ್ಯಕರ್ಮಗಳಲ್ಲಿ ಪ್ರವರ್ತಿಸುವವರಿಗೆ ಆಯಾ ವಿಶೇಷಕಾಮಗಳು ಪ್ರೇರಕ, ನಿತ್ಯಕರ್ಮದಲ್ಲಿ ತೊಡಗುವವರಿಗೆ ಹಾಗಿಲ್ಲ. ಅಪರೂ ದೋಷಯುಕ್ತರಿಗೇ ಕರ್ಮಗಳು ವಿಹಿತವೆಂಬುದು ಈ ಎರಡಕ್ಕೂ ಸಮಾನವಾಗಿವೆ.

**ಬರಿಯ ಶಾಸ್ತ್ರನಿಮಿತ್ತವಾಗಿಯೇ (ಅವು ವಿಹಿತವಾ)ಗಿಲ್ಲ.[1] ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯಪಶುಬಂಧ, ಸೋಮ(ಯಾಗ)–ಎಂಬ ಕರ್ಮಗಳಿಗೆ (ಅವುಗಳ) ಸ್ವರೂಪದಲ್ಲಿಯೇ (ಇದು) ಕಾಮ್ಯ, (ಇದು) ನಿತ್ಯ– ಎಂಬ ವಿಂಗಡವೇನೂ ಇರುವದಿಲ್ಲ.** ಕರ್ತೃವಿನಲ್ಲಿರುವ[2] ಸ್ವರ್ಗಾದಿಕಾಮವೆಂಬ ದೋಷದಿಂದಲೇ ಅಲ್ಲವೆ, (ಕರ್ಮಗಳು) ಕಾಮಾರ್ಥ(ವೆನಿಸುತ್ತವೆ)? ಹಾಗೆಯೇ ಅವಿದ್ಯಾದಿದೋಷಗಳುಳ್ಳವನಾಗಿ ಸ್ವಭಾವದಿಂದ ಬಂದೊದಗುವ ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳನ್ನು ಬಯಸುತ್ತಿರುವವನಿಗೆ ಆ (ಪ್ರಾಪ್ತಿಪರಿಹಾರಗಳಿಗಾಗಿಯೇ) ನಿತ್ಯ(ಕರ್ಮ)ಗಳನ್ನು (ವಿಧಿಸಿದೆ) ಎಂಬುದು ಯುಕ್ತವು; ಏಕೆಂದರೆ ಅವನಿಗಾಗಿಯೇ[3] (ಅವು) ವಿಹಿತವಾಗಿರುತ್ತವೆ.

## ಆತ್ಮಜ್ಞಾನಿಗೆ ನಿತ್ಯಕರ್ಮವೂ ವಿಹಿತವಲ್ಲ

(ಭಾಷ್ಯ)

೬೫. ನ ಪರಮಾತ್ಮಯಾಥಾತ್ಮ್ಯವಿಜ್ಞಾನವತಃ ಶಮೋಪಾಯವ್ಯತಿರೇಕೇಣ ಕಿಂಚಿತ್ ಕರ್ಮವಿಹಿತಮ್ ಉಪಲಭ್ಯತೇ। ಕರ್ಮನಿಮಿತ್ತದೇವತಾದಿಸರ್ವಸಾಧನವಿಜ್ಞಾನೋಪಮರ್ದೇನ ಹಿ ಆತ್ಮಜ್ಞಾನಂ ವಿಧೀಯತೇ। ನ ಚ ಉಪಮರ್ದಿತಕ್ರಿಯಾಕಾರಕಾದಿವಿಜ್ಞಾನಸ್ಯ ಕರ್ಮಪ್ರವೃತ್ತಿರುಪಪದ್ಯತೇ। ವಿಶಿಷ್ಟಕ್ರಿಯಾಸಾಧನಾದಿಜ್ಞಾನಪೂರ್ವಕತ್ವಾತ್ ಕ್ರಿಯಾಪ್ರವೃತ್ತೇಃ। ನ ಹಿ ದೇಶಕಾಲಾದ್ಯನವಚ್ಛಿನ್ನಾಸ್ಥೂಲಾದ್ವಯಾದಿಬ್ರಹ್ಮಪ್ರತ್ಯಯಧಾರಿಣಃ ಕರ್ಮಾವಸರೋಽಸ್ತಿ। ಭೋಜನಾದಿಪ್ರವೃತ್ತ್ಯವಸರವತ್ ಸ್ಯಾತ್ ಇತಿ ಚೇತ್। ನ। ಕೇವಲದೋಷನಿಮಿತ್ತತ್ವಾತ್[4] ಭೋಜನಾದಿಪ್ರವೃತ್ತೇರಾವಶ್ಯಕತ್ವಾನುಪಪತ್ತೇಃ। ನ ತು ತಥಾ ಅನಿಯತಂ ಕದಾಚಿತ್ ಕ್ರಿಯತೇ ಕದಾಚಿತ್ ನ ಕ್ರಿಯತೇ ಚ ಇತಿ ನಿತ್ಯಂ ಕರ್ಮ ಉಪಪದ್ಯತೇ। ಕೇವಲದೋಷನಿಮಿತ್ತತ್ವಾತ್ತು ಭೋಜನಾದಿಕರ್ಮಣಃ ಅನಿಯತತ್ವಂ ಸ್ಯಾತ್। ದೋಷೋದ್ಭವಾಭಿಭವಯೋಃ ಅನಿಯತತ್ವಾತ್ ಕಾಮಾನಾಮಿವ ಕಾಮ್ಯೇಷು। ಶಾಸ್ತ್ರನಿಮಿತ್ತಕಾಲಾದ್ಯಪೇಕ್ಷತ್ವಾಚ್ಚ ನಿತ್ಯಾನಾಮ್ ಅನಿಯತತ್ವಾನುಪಪತ್ತಿಃ। ದೋಷನಿಮಿತ್ತತ್ವೇ ಸತ್ಯಪಿ ಯಥಾ

---

1. ಆದ್ದರಿಂದ ಯಾವ ಕರ್ಮವೂ ಕೇವಲಶಾಸ್ತ್ರವಿಹಿತವಲ್ಲ.

2. ಕರ್ತೃವಿನಲ್ಲಿ ಕಾಮವಿರುವವೇ ಹೊರತು ಕರ್ಮದಲ್ಲಿ ಯಾವ ದೋಷವೂ ಇಲ್ಲ. ಕಾಮಾಗ್ನಿಹೋತ್ರವೇ ಕಾಮವಿಲ್ಲದಿದ್ದರೆ ಕಾಮ್ಯವಲ್ಲದೆಹೋಗಬಹುದು.

3. ಅವಿದ್ಯಾದಿದೋಷವುಳ್ಳವನಿಗಾಗಿಯೇ.

4. ಈ ವಾಕ್ಯದಲ್ಲಿ 'ಕೇವಲ' ಎಂಬ ಮಾತಿನ ಹಿಂದೆ 'ಅವಿದ್ಯಾದಿ' ಎಂದು ಅಚ್ಚಿನ ಪುಸ್ತಕದಲ್ಲಿರುವದು ಬೇಕಿಲ್ಲ.

ಕಾಮ್ಯಾಗ್ನಿಹೋತ್ರಸ್ಯ ಶಾಸ್ತ್ರವಿಹಿತತ್ವಾತ್ ಸಾಯಂಪ್ರಾತಃಕಾಲಾದ್ಯಪೇಕ್ಷತ್ವಮ್ ಏವಮ್। ತದ್ಭೋಜನಾದಿಪ್ರವೃತ್ತೌ ನಿಯಮವತ್ ಸ್ಯಾತ್ ಇತಿ ಚೇತ್। ನ। ನಿಯಮಸ್ಯ ಅಕ್ರಿಯಾತ್ವಾತ್ ಕ್ರಿಯಾಯಾಶ್ಚ ಅಪ್ರಯೋಜಕತ್ವಾತ್ ನಾಸೌ ಜ್ಞಾನಸ್ಯಾಪವಾದಕರಃ ||

(ಭಾಷ್ಯ)

ಪರಮಾತ್ಮನ ನಿಜ ಸ್ವರೂಪದ ವಿಜ್ಞಾನವುಳ್ಳವನಿಗೆ ಶಮೋಪಾಯವು ಹೊರತಾಗಿ[1] ಮತ್ತೆ(ಯಾವ) ಕರ್ಮವೂ ವಿಹಿತವಾಗಿರುವದು ಕಂಡುಬರುವದಿಲ್ಲ. 'ಕರ್ಮಕ್ಕೆ ನಿಮಿತ್ತವಾಗಿರುವ ದೇವತೆಯೇ ಮುಂತಾದ ಸರ್ವಸಾಧನಗಳ ವಿಜ್ಞಾನವನ್ನು ನಾಶಮಾಡಿಯಲ್ಲವೆ, ಆತ್ಮಜ್ಞಾನವನ್ನು ವಿಧಿಸಿರುತ್ತದೆ?[2] ಕ್ರಿಯೆ, ಕಾರಕಗಳು–ಮುಂತಾದವುಗಳ[3] ವಿಜ್ಞಾನವು ನಾಶವಾಗಿರುವವನಿಗೆ ಕರ್ಮಗಳಲ್ಲಿ ತೊಡಗುವದು ಆಗಲೂ ಆರದು; ಏಕೆಂದರೆ ಕ್ರಿಯೆಗಳಲ್ಲಿ ತೊಡಗುವದೆಂಬುದು ಆಯಾ ಕ್ರಿಯೆ,(ಅದರ) ಸಾಧನಗಳು-ಮುಂತಾದವುಗಳ ಜ್ಞಾನಪೂರ್ವಕವಾಗಿಯೇ (ಆಗತಕ್ಕದ್ದಾಗಿರುತ್ತದೆ). ದೇಶ, ಕಾಲ– ಮುಂತಾದವುಗಳ ಪರಿಚ್ಛೇದವಿಲ್ಲದ ಅಸ್ಥೂಲ, ಅದ್ವಯ- ಮುಂತಾದ ಬ್ರಹ್ಮಪ್ರತ್ಯಯವನ್ನು ಧರಿಸಿರುವವನಿಗೆ ಕರ್ಮಕ್ಕೆ ಅವಕಾಶವಿರುವದಿಲ್ಲವಷ್ಟೆ[4] ?

(ಆಕ್ಷೇಪ):– ಭೋಜನಾದಿಗಳಲ್ಲಿ ತೊಡಗುವದಕ್ಕೆ ಅವಕಾಶವಿರುವಂತೆ[5] (ಅದಕ್ಕೂ) ಅವಕಾಶವಿರಬಹುದಲ್ಲ !

(ಪರಿಹಾರ):– ಭೋಜನಾದಿಗಳಲ್ಲಿ ತೊಡಗುವದು ಕೇವಲದೋಷ ನಿಮಿತ್ತವಾಗಿರುವದರಿಂದ[6] (ಅದು) ಆವಶ್ಯಕವೆಂದಾಗಲಾರದು.[7] ನಿತ್ಯಕರ್ಮವು

---

1. ಗೀ. ೬-೩; ಬೃ. ೪-೪-೨೩.

2. ಉಪದಿಷ್ಟವಾಗಿರುತ್ತದೆ ಎಂದರ್ಥ; ಏಕೆಂದರೆ ವಸ್ತುತಂತ್ರವಾದ ಜ್ಞಾನವನ್ನು ಕರ್ಮದಂತೆ ವಿಧಿಸುವದಕ್ಕೆ ಬರುವದಿಲ್ಲ.

3. ಮುಂತಾದದ್ದು ಎಂದರೆ ಫಲವು.

4. ಬ್ರಹ್ಮಜ್ಞಾನವು ದೇಶಕಾಲಾದಿಪರಿಚ್ಛೇದವಿಲ್ಲದ್ದು ಎಂದರೆ ನಿರಂತರವಾಗಿ ಎಲ್ಲಾ ದೇಶ ಕಾಲಗಳಲ್ಲಿಯೂ ಇರುವದು. ಆದ್ದರಿಂದ ಕರ್ತೃತ್ವಜ್ಞಾನವು ಬರುವ ಕಾಲವೇ ಇಲ್ಲವಾಗಿ ಕರ್ಮಕ್ಕೆ ಅವಕಾಶವಿಲ್ಲ.

5. ಕರ್ತೃತ್ವಜ್ಞಾನವಿಲ್ಲದೆ ಭೋಜನಾದಿಗಳಲ್ಲಿ ತೊಡಗಲಾರನಷ್ಟೆ?–ಎಂದು ಭಾವ.

6. ಕೇವಲದೋಷ ಎಂದರೆ ಶಾಸ್ತ್ರವಿಧಿಯ ಸಂಪರ್ಕವಿಲ್ಲದ ದೋಷ; ನಿತ್ಯಕರ್ಮಕ್ಕೆ ಆ ಸಂಪರ್ಕವಿದೆ.

7. ನಿತ್ಯವಾಗಲಾರದು. ಕೇವಲದೋಷವಾದ ಹಸಿವು ಉಂಟಾದಾಗ ಮಾತ್ರ ಭೋಜನದಲ್ಲಿ ತೊಡಗಬಹುದು ಎಂದು ಭಾವ. ಆತ್ಮಜ್ಞಾನಿಯ ದೃಷ್ಟಿಯಿಂದ ಭೋಜನದಲ್ಲಿ ತೊಡಗುವದೆಂಬುದೂ ಇಲ್ಲ.

ಹಾಗೆ ಕೆಲವು ವೇಳೆ ಮಾಡಬಹುದು, ಕೆಲವು ವೇಳೆ ಮಾಡದೆ ಬಿಡಬಹುದು-ಎಂದು (ಹೇಳುವದಕ್ಕೆ) ಆಗುವದಿಲ್ಲ. ಭೋಜನವೇ ಮುಂತಾದ ಕೆಲಸವು ಮಾತ್ರ ಕೇವಲ ದೋಷದ ನಿಮಿತ್ತದಿಂದಾಗಿರುವದರಿಂದ ಅನಿಯತವಾಗಿ ಆಗಬಹುದು. ಏಕೆಂದರೆ ಕಾಮ್ಯ(ಕರ್ಮ)ಗಳಲ್ಲಿ ಕಾಮಗಳು (ಏಳುವದೂ ಮರೆಯಾಗುವದೂ ಅನಿಯತ ವಾಗಿರು)ವಂತೆ ದೋಷಗಳು ತೋರಿಕೊಳ್ಳುವದೂ ಮರೆಯಾಗುವದೂ ಅನಿಯತ ವಾಗಿರುತ್ತದೆ. ಶಾಸ್ತ್ರನಿಮಿತ್ತವಾದ ಕಾಲಾದಿಗಳನ್ನು ಬಯಸುವದರಿಂದಲೂ ನಿತ್ಯ (ಕರ್ಮ)ಗಳು ದೋಷನಿಮಿತ್ತವಾಗಿದ್ದರೂ[1] ಅನಿಯತವಾಗಿ ಆಗಲಾರವು ; ಹೇಗೆ ಕಾಮ್ಯಾಗ್ನಿಹೋತ್ರವು ಶಾಸ್ತ್ರವಿಹಿತವಾಗಿರುವದರಿಂದ ಸಾಯಂಕಾಲ, ಪ್ರಾತಃಕಾಲ –ಮುಂತಾದವನ್ನು ಬಯಸುವದೋ ಹಾಗೆ(ಯೇ ಇದು).[2]

(ಆಕ್ಷೇಪ):—ಆ (ಜ್ಞಾನಿಗೆ) ಭೋಜನಾದಿಪ್ರವೃತ್ತಿಯಲ್ಲಿ ನಿಯಮವಿರುವಂತೆ (ನಿತ್ಯಾಗ್ನಿಹೋತ್ರಾದಿಗಳ) ನಿಯಮಗಳೂ ಇರಬಹುದಲ್ಲ ![3]

(ಪರಿಹಾರ):– ಇರಲಾರದು. ಏಕೆಂದರೆ (ಆ) ನಿಯಮವು ಕ್ರಿಯೆಯಲ್ಲ[4]. ಕ್ರಿಯೆಯಂತೂ ಅಪ್ರಯೋಜಕವಾಗಿರುತ್ತದೆಯಾದ್ದರಿಂದ[5] ಅದು ಜ್ಞಾನಕ್ಕೆ ಅಪವಾದವನ್ನುಂಟುಮಾಡಲಾರದು.[6]

## ಉಪಸಂಹಾರ

(ಭಾಷ್ಯ)

೫೭. ತಸ್ಮಾತ್ ಪರಮಾತ್ಮಯಾಥಾತ್ಮ್ಯಜ್ಞಾನವಿಧೇರಪಿ ತದ್ವಿಪರೀತ ಸ್ಥೂಲದ್ವೈತಾದಿಜ್ಞಾನನಿವರ್ತಕತ್ವಾತ್ ಸಾಮರ್ಥ್ಯಾತ್ ಸರ್ವಕರ್ಮಪ್ರತಿಷೇಧ

---

1. ಅವಿದ್ಯಾರಾಗಾದಿದೋಷಗಳ ನಿಮಿತ್ತದಿಂದಾಗಿದ್ದರೂ ಎಂದರ್ಥ.

2. ಅಲ್ಲಿಯೂ ಕಾಮವೆಂಬ ದೋಷವಿದ್ದರೂ ಶಾಸ್ತ್ರವಿಹಿತವಾದ ಕಾಲಾದಿಗಳ ನಿಯಮವಿರುತ್ತದೆ.

3. 'ಚಾತುರ್ವರ್ಣ್ಯದಲ್ಲಿಯೂ ಭಿಕ್ಷವನ್ನು ಮಾಡಬೇಕು', 'ಶೌಚವು ಯತಿಗಳಿಗೆ ಮಿಕ್ಕವರ ನಾಲ್ಕರಷ್ಟು' ಎಂದು ಮುಂತಾದ ನಿಯಮಗಳು ಇರುವವಲ್ಲವೆ ?–ಎಂದು ಭಾವ.

4. ನೀವು ಹೇಳಿದ ನಿಯಮವು ಕ್ರಿಯೆಯಲ್ಲಿ ತೊಡಗಿಸುವದಿಲ್ಲ; ಮತ್ತೊಂದನ್ನು ಮಾಡಬಾರದು ಎಂದು ಬಿಡಿಸುತ್ತದೆ.

5. ಭೋಜನಾದಿಕ್ರಿಯೆಯು ನಿಯತವಾಗಿಲ್ಲದ್ದರಿಂದ ಆ ದೃಷ್ಟಾಂತದ ಬಲದಿಂದ ಅಗ್ನಿಹೋತ್ರಾದಿಗಳ ನಿಯತತ್ವವನ್ನು ಸಾಧಿಸುವದಕ್ಕೆ ಆಗಲಾರದಾದ್ದರಿಂದ ಎಂದರ್ಥ.

6. ಜ್ಞಾನವು ಇಲ್ಲದಿರುವ ಕಾಲವೂ ಉಂಟು, ಆದ್ದರಿಂದ ಆಗ ಕರ್ಮವನ್ನು ಮಾಡಬಹುದು ಎನ್ನುವದಕ್ಕೆ ಬರುವದಿಲ್ಲ.

ವಿಧ್ಯರ್ಥತ್ವಂ ಸಂಪದ್ಯತೇ। ಕರ್ಮಪ್ರವೃತ್ತ್ಯಭಾವಸ್ಯ ತುಲ್ಯತ್ವಾತ್ ಯಥಾ ಪ್ರತಿಷೇಧವಿಷಯೇ। ತಸ್ಮಾತ್ ಪ್ರತಿಷೇಧವಿಧಿವಚ್ಚ ವಸ್ತುಪ್ರತಿಪಾದನಂ ತತ್ಪರತ್ವಂ ಚ ಸಿದ್ಧಂ ಶಾಸ್ತ್ರಸ್ಯ ॥

(ಭಾಷ್ಯಾರ್ಥ)

ಆದ್ದರಿಂದ ಪರಮಾತ್ಮಯಾಥಾತ್ಮ್ಯಜ್ಞಾನವಿಧಿಯುಕೂಡ ಅದಕ್ಕೆ ವಿಪರೀತವಾದ ಸ್ಥೂಲ, ದ್ವೈತ– ಮುಂತಾದ (ಜ್ಞಾನವನ್ನು) ತೊಲಗಿಸುವದರಿಂದ ಅದು ಸಾಮರ್ಥ್ಯದಿಂದ ಸರ್ವಕರ್ಮಪ್ರತಿಷೇಧವಿಧಿಯ ಅರ್ಥವುಳ್ಳದ್ದೇ ಆಗುವದು.[1] ಏಕೆಂದರೆ ಪ್ರತಿಷೇಧವಿಷಯದಲ್ಲಿ ಹೇಗೋ ಹಾಗೆ ಕರ್ಮಪ್ರವೃತ್ತ್ಯಭಾವವು (ಅದಕ್ಕೂ) ಸಮಾನವಾಗಿರುತ್ತದೆ. ಆದ್ದರಿಂದ ಪ್ರತಿಷೇಧವಿಧಿಯಂತೆಯೇ (ಆತ್ಮಜ್ಞಾನ)ಶಾಸ್ತ್ರವು ವಸ್ತುಪ್ರತಿಪಾದನವನ್ನು ಮಾಡುವದೆಂದೂ ಆ (ವಸ್ತುವಿನಲ್ಲಿ) ತಾತ್ಪರ್ಯವುಳ್ಳದ್ದಾಗಿರುವದೆಂದೂ ಸಿದ್ಧವಾಯಿತು.

## ವಾಗ್ದೇವತೆಯು ಉದ್ಗಾನಮಾಡಿದ್ದು, ಪಾಪವಿದ್ಧವಾದದ್ದು

(ಉಪನಿಷತ್ತು)

**ತೇ ಹ ವಾಚಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯೋ ವಾಗುದಗಾಯತ್। ಯೋ ವಾಚಿ ಭೋಗಸ್ತಂ ದೇವೇಭ್ಯ ಆಗಾಯದ್ ಯತ್ಕಲ್ಯಾಣಂ ವದತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾಽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ ಸ ಯಃ ಸ ಪಾಪ್ಮಾ ಯದೇವೇದಮಪ್ರತಿರೂಪಂ ವದತಿ ಸ ಏವ ಸ ಪಾಪ್ಮಾ ॥ ೨ ॥**

೨. ಅವರು ವಾಕ್ಕನ್ನು "ನೀನು ನಮಗಾಗಿ ಉದ್ಗಾನಮಾಡು" ಎಂದರು. "ಹಾಗೇ (ಆಗಲಿ)!" ಎಂದು ಅವರಿಗಾಗಿ ವಾಕ್ಕು ಉದ್ಗಾನ ಮಾಡಿತು. ವಾಕ್ಕಿನಲ್ಲಿ ಭೋಗವಿದೆಯಲ್ಲ, ಅದನ್ನು ದೇವತೆಗಳಿಗೆ ಆಗಾನ ಮಾಡಿತು; ಕಲ್ಯಾಣವನ್ನು ಹೇಳುತ್ತದೆಯಲ್ಲ, ಅದನ್ನು ತನಗೆ (ಆಗಾನ ಮಾಡಿಕೊಂಡಿತು). ಅವರು 'ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು' ಎಂದು ತಿಳಿದುಕೊಂಡು ಅವನಕಡೆಗೆ ಓಡಿ ಆ ಯಾವ ಪಾಪ

1. ದ್ವೈತಜ್ಞಾನವೇ ಕರ್ಮಕ್ಕೆ ಕಾರಣವು; ಅದಿಲ್ಲದ್ದರಿಂದ ಜ್ಞಾನಿಗೆ ಯಾವ ಕರ್ಮವೂ ಇರುವದಿಲ್ಲವೆಂದು ತಾನೇ ಏರ್ಪಡುತ್ತದೆ ಎಂದರ್ಥ.

ವಿತ್ತಲ್ಲ, (ಆ) ಪಾಪದಿಂದ ಹೊಡೆದರು. (ಇಗೊ,) ಈ ಅಪ್ರತಿರೂಪವಾಗಿ ಮಾತಾಡುತ್ತಾನಲ್ಲ, ಅದೇ ಆ ಪಾಪವು.

## ವಾಕ್ಕನ್ನು ಪ್ರಾರ್ಥಿಸಿದ್ದು

(ಭಾಷ್ಯ)

೫೮. ತೇ ದೇವಾಃ ಹ ಏವಂ ವಿನಿಶ್ಚಿತ್ಯ ವಾಚಂ ವಾಗಭಿಮಾನಿನೀಂ ದೇವತಾಮ್ ಊಚುಃ ಉಕ್ತವನ್ತಃ। ತ್ವಂ ನಃ ಅಸ್ಮಭ್ಯಮ್ ಉದ್ಗಾಯ ಔದ್ಗಾತ್ರಂ ಕರ್ಮ ಕುರುಷ್ವ। ವಾಗ್ದೇವತಾನಿರ್ವರ್ತ್ಯಮ್ ಔದ್ಗಾತ್ರಂ ಕರ್ಮ ದೃಷ್ಟವನ್ತಃ। ತಾಮೇವ ಚ ದೇವತಾಂ ಜಪಮನ್ತ್ರಾಭಿಧೇಯಾಮ್ 'ಅಸತೋ ಮಾ ಸದ್ಗಮಯ' ಇತಿ। ಅತ್ರ ಚ ಉಪಾಸನಾಯಾಃ ಕರ್ಮಣಶ್ಚ ಕರ್ತೃತ್ವೇನ ವಾಗಾದಯ ಏವ ವಿವಕ್ಷ್ಯನ್ತೇ। ಕಸ್ಮಾತ್? ಯಸ್ಮಾತ್ ಪರಮಾರ್ಥತಃ ತತ್ಕರ್ತೃಕಸ್ತದ್ವಿಷಯ ಏವ ಚ ಸರ್ವೋ ಜ್ಞಾನಕರ್ಮಸಂವ್ಯವಹಾರಃ। ವಕ್ಷ್ಯತಿ ಹಿ "ಧ್ಯಾಯತೀವ ಲೇಲಾಯತೀವ" (೪-೩-೭) ಇತ್ಯಾತ್ಮಕರ್ತೃಕತ್ವಾಭಾವಂ ವಿಸ್ತರತಃ ಷಷ್ಠೇ। ಇಹಾಪಿ ಚ ಅಧ್ಯಾಯಾನ್ತೇ ಉಪಸಂಹರಿಷ್ಯತಿ ಅವ್ಯಾಕೃತಾವಿಕ್ರಿಯಾಕಾರಕಫಲಜಾತಮ್ "ತ್ರಯಂ ವಾ ಇದಂ ನಾಮ ರೂಪಂ ಕರ್ಮ" (೧-೬-೧) ಇತಿ ಅವಿದ್ಯಾವಿಷಯಮ್। ಅವ್ಯಾಕೃತಾತ್ತು ಯತ್ ಪರಂ ಪರಮಾತ್ಮಾಖ್ಯಂ ವಿದ್ಯಾವಿಷಯಮ್ ಅನಾಮರೂಪಕರ್ಮಾತ್ಮಕಂ "ನೇತಿ ನೇತಿ" (೨-೩-೬) ಇತಿ ಇತರಪ್ರತ್ಯಾಖ್ಯಾನೇನ ಉಪಸಂಹರಿಷ್ಯತಿ ಪೃಥಕ್। ಯಸ್ತು ವಾಗಾದಿಸಮಾಹಾರೋಪಾಧಿಪರಿಕಲ್ಪಿತಃ ಸಂಸಾರ್ಯಾತ್ಮಾ ತಂ ಚ ವಾಗಾದಿಸಮಾಹಾರಪಕ್ಷಪಾತಿನಮೇವ ದರ್ಶಯಿಷ್ಯತಿ "ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ" (೨-೪-೧೨) ಇತಿ। ತಸ್ಮಾತ್ ಯುಕ್ತಾ ವಾಗಾದೀನಾಮೇವ ಜ್ಞಾನಕರ್ಮಕರ್ತೃತ್ವಫಲಪ್ರಾಪ್ತಿವಿವಕ್ಷಾ ॥

(ಭಾಷ್ಯಾರ್ಥ)

ಆ ದೇವತೆಗಳು ಹೀಗೆಂದು[1] ನಿಶ್ಚಯಿಸಿ ವಾಕ್ಕನ್ನು ವಾಗಭಿಮಾನಿಯಾದ ದೇವತೆಯನ್ನು (ಕುರಿತು ಹೀಗೆಂದು) ಹೇಳಿದರು, ಇಂತೆಂದರು: "ನೀನು (ನಃ=ಅಸ್ಮಭ್ಯಮ್) ನಮಗಾಗಿ ಉದ್ಗಾನಮಾಡು, ಉದ್ಗಾತೃವಿನ ಕರ್ಮವನ್ನು ಮಾಡು." ಔದ್ಗಾತ್ರಕರ್ಮವು ವಾಗ್ದೇವತೆಯಿಂದ ಆಗತಕ್ಕದ್ದು ಎಂದೂ ಆ (ವಾಕ್ಕೇ) "ಅಸತೋ ಮಾ ಸದ್ಗಮಯ" ಎಂಬ ಜಪಮಂತ್ರಕ್ಕೆ ಅಭಿಧೇಯವಾದ ದೇವತೆ ಎಂದೂ ಅಭಿಪ್ರಾಯಪಟ್ಟರು (ಎಂದರ್ಥ).

---

1. ಅಸುರರನ್ನು ಉದ್ಗಾನಕರ್ಮದಿಂದ ಮೀರೋಣವೆಂದು.

ಇಲ್ಲಿ ಉಪಾಸನೆಗೂ ಕರ್ಮಕ್ಕೂ ಕರ್ತೃವಾಗಿ ವಾಗಾದಿಗಳೇ ವಿವಕ್ಷಿತವಾಗಿರುತ್ತವೆ. ಏಕೆ? ಎಂದರೆ ನಿಜವಾಗಿ ಜ್ಞಾನಕರ್ಮ(ರೂಪ)ವ್ಯವಹಾರವೆಲ್ಲಕ್ಕೂ ಆ.(ದೇವತೆಗಳೇ, ಕರ್ತೃಗಳೂ(ಅವರೇ)ವಿಷಯವೂ ಆದ್ದರಿಂದ.[1] ಏಕೆಂದರೆ (ಆ ವ್ಯವಹಾರಕ್ಕೆ) ಆತ್ಮನು ಕರ್ತೃವಲ್ಲವೆಂಬುದನ್ನು "ಧ್ಯಾಯತೀವ ಲೇಲಾಯತೀವ" (ಧ್ಯಾನಮಾಡುವಂತಿರುತ್ತಾನೆ, ಸಂಚರಿಸುವಂತಿರುತ್ತಾನೆ, ೪-೩-೭) ಎಂದು ಆರನೆಯ (ಅಧ್ಯಾಯದಲ್ಲಿ)[2] ವಿಸ್ತಾರವಾಗಿ ಹೇಳಲಾಗುವದು. ಇಲ್ಲಿಯೂ ಅಧ್ಯಾಯದ ಕೊನೆಯಲ್ಲಿ ಅವಿದ್ಯಾವಿಷಯವಾದ ಅವ್ಯಾಕೃತವೇ ಮುಂತಾದ ಕ್ರಿಯಾಕಾರಕಫಲಸಮೂಹವನ್ನು "ತ್ರಯಂ ವಾ ಇದಂ ನಾಮ ರೂಪಂ ಕರ್ಮ" (ಇದು ನಾಮ, ರೂಪ, ಕರ್ಮ–ಎಂದು ಮೂರೇ ೧-೬-೧)ಎಂದು ಉಪಸಂಹಾರಮಾಡಲಾಗುವದು. ಅವ್ಯಾಕೃತಕ್ಕಿಂತ ಆಚೆಯದಾದ ಪರಮಾತ್ಮನೆಂಬ ವಿದ್ಯಾವಿಷಯವಾದ ಅನಾಮರೂಪಕರ್ಮಾತ್ಮಕವಾದ (ತತ್ತ್ವ)ವಿದೆಯಲ್ಲ, ಅದನ್ನು "ಇದಲ್ಲ, ಇದಲ್ಲ" (೨-೩-೬) ಎಂದು ಮಿಕ್ಕದ್ದನ್ನು ಅಲ್ಲಗಳೆಯುವ ಮೂಲಕ ಬೇರೆಯಾಗಿ ಉಪಸಂಹಾರಮಾಡಲಾಗುತ್ತದೆ. ಇನ್ನು ವಾಗಾದಿಗಳ ಒಟ್ಟೆಂಬ ಉಪಾಧಿಯಿಂದ ಪರಿಕಲ್ಪಿತವಾದ ಸಂಸಾರ್ಯಾತ್ಮನಿರುವನಲ್ಲ, ಅವನು ವಾಗಾದಿಗಳ ಒಟ್ಟಿನ ಪಕ್ಷಕ್ಕೇ ಸೇರಿದವನು[3] ಎಂದು "ಈ ಭೂತಗಳಿಂದ ಸರಿಯಾಗಿ ಎದ್ದು ಅವುಗಳನ್ನೇ ಅನುಸರಿಸಿ ನಾಶವಾಗುತ್ತಾನೆ" (೨-೪-೧೨) ಎಂದು ತಿಳಿಸಲಾಗುವದು. ಆದ್ದರಿಂದ ವಾಗಾದಿಗಳಿಗೇ ಜ್ಞಾನಕರ್ಮಕರ್ತೃತ್ವವನ್ನೂ ಫಲಪ್ರಾಪ್ತಿಯನ್ನೂ ಹೇಳಬೇಕೆಂದು ಹೊರಟಿರುವದು ಯುಕ್ತವಾಗಿಯೇ ಇದೆ.

## ವಾಕ್ಕಿನ ಉದ್ಗಾನ

(ಭಾಷ್ಯ)

೫೯. ತಥೇತಿ ತಥಾ ಅಸ್ತು ಇತಿ ದೇವೈರುಕ್ತಾ ವಾಕ್ ತೇಭ್ಯೋಽರ್ಥಿಭ್ಯೋಽರ್ಥಾಯ ಉದಗಾಯತ್ ಉದ್ಗಾನಂ ಕೃತವತೀ। ಕಃ ಪುನರಸೌ ದೇವೇಭ್ಯೋಽರ್ಥಾಯ ಉದ್ಗಾನಕರ್ಮಣಾ ವಾಚಾ ನಿರ್ವರ್ತಿತಃ ಕಾರ್ಯವಿಶೇಷಃ ಇತಿ? ಉಚ್ಯತೇ। ಯೋ ವಾಚಿ ನಿಮಿತ್ತಭೂತಾಯಾಂ ವಾಗಾದಿಸಮುದಾಯಸ್ಯ ಉಪಕಾರಃ ನಿಷ್ಪದ್ಯತೇ ವದನಾದಿವ್ಯಾಪಾರೇಣ ಸ ಏವ। ಸರ್ವೇಷಾಂ ಹಿ ಅಸೌ ವಾಗ್ವದನಾಭಿನಿರ್ವೃತ್ತೋ ಭೋಗಃ ಫಲಮ್। ತಂ ಭೋಗಂ ಸಾ ತ್ರಿಷು

---

1. ಆತ್ಮನಲ್ಲ.

2. ಅರಣ್ಯಕದ ಕ್ರಮದಲ್ಲಿ ಆರನೆಯ ಅಧ್ಯಾಯವು, ಉಪನಿಷತ್ತಿಗೆ ನಾಲ್ಕನೆಯ ಅಧ್ಯಾಯವು. ಪೀಠಿಕೆಯನ್ನು ನೋಡಿ.

3. ನಿಜವಾದ ಆತ್ಮನಲ್ಲ.

ಪವಮಾನೇಷು ಕೃತ್ವಾ ಅವಶಿಷ್ಟೇಷು ನವಸು ಸ್ತೋತ್ರೇಷು ವಾಚನಿಕಮ್ ಆರ್ತ್ವಿಜ್ಯಂ ಫಲಮ್ ಯತ್ಕಲ್ಯಾಣಂ ಶೋಭನಂ ವದತಿ ವರ್ಣಾನ್ ಅಭಿನಿರ್ವರ್ತಯತಿ ತತ್ ಆತ್ಮನೇ ಮಹ್ಯಮೇವ। ತದ್ಧಿ ಅಸಾಧಾರಣಂ ವಾಗ್ದೇವತಾಯಾಃ ಕರ್ಮ ಯತ್ ಸಮ್ಯಗ್ವರ್ಣಾನಾಮ್ ಉಚ್ಚಾರಣಮ್ ಅತಸ್ತದೇವ ವಿಶೇಷ್ಯತೇ ಯತ್ ಕಲ್ಯಾಣಂ ವದತಿ ಇತಿ। ಯತ್ತು ವದನಕಾರ್ಯಂ ಸರ್ವಂ ಸಂಘಾತೋಪಕಾರಾತ್ಮಕಂ, ತದ್ ಯಾಜಮಾನಮೇವ ॥

(ಭಾಷ್ಯಾರ್ಥ)

ದೇವತೆಗಳು ಹೀಗೆನ್ನಲು ವಾಕ್ಕು 'ಹಾಗೇ ಆಗಲಿ' ಎಂದು ಅವರಿಗೆ ಆ ಪ್ರಾರ್ಥನೆಮಾಡಿದ ದೇವತೆಗಳಿಗೋಸ್ಕರ ಉದ್ಗಾನಮಾಡಿತು, ಉದ್ಗಾನವನ್ನು ಮಾಡಿದ್ದಾಯಿತು. ದೇವತೆಗಳ ಪ್ರಯೋಜನಕ್ಕೆಂದು ಉದ್ಗಾನಕರ್ಮದಿಂದ ವಾಕ್ಕು ಮಾಡಿದ ಆ ಕಾರ್ಯವಿಶೇಷವು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ವಾಕ್ಕು ನಿಮಿತ್ತವಾಗಿರುವಲ್ಲಿ[1] (ಭೋಗ)ವಾಗುವದಲ್ಲ, ವಾಗಾದಿಸಮುದಾಯಕ್ಕೆ ಮಾತಾಡುವದೇ ಮುಂತಾದ ವ್ಯಾಪಾರದಿಂದ ಉಪಕಾರವುಂಟಾಗುವದಲ್ಲ, ಅದೇ. ವಾಕ್ಕಿನ ಮಾತಾಡುವಿಕೆಯೇ ಮುಂತಾದ (ವ್ಯಾಪಾರಗಳಿಂದ) ಆದ ಈ ಫಲವು ಎಲ್ಲರಿಗೂ ಸೇರತಕ್ಕದ್ದಷ್ಟೆ. ಆ (ವಾಙ್ನಿಮಿತ್ತ)ಭೋಗವನ್ನು ಆ (ವಾಕ್ಕು) ಮೂರು ಪವಮಾನಗಳಲ್ಲಿ[2] ಮಾಡಿಕೊಟ್ಟು (ಇನ್ನು) ಉಳಿದ ಒಂಬತ್ತು ಸ್ತೋತ್ರಗಳಲ್ಲಿ ವಚನಬಲದಿಂದ[3] ಋತ್ವಿಜನಿಗೆ ಸೇರಬೇಕಾದ) ಫಲವನ್ನು–ಕಲ್ಯಾಣವನ್ನು ಒಳ್ಳೆಯದನ್ನು ಹೇಳುತ್ತದೆಯಲ್ಲ, ವರ್ಣಗಳನ್ನುಂಟುಮಾಡುತ್ತದೆಯಲ್ಲ, ಅದನ್ನು–ತನಗೇ ನನಗೇ (ಎಂದು)–ವರ್ಣಗಳನ್ನು ಚೆನ್ನಾಗಿ ಉಚ್ಚರಿಸುವದು ವಾಗ್ದೇವತೆಯ ಅಸಾಧಾರಣಕರ್ಮವಲ್ಲವೆ? ಆದ್ದರಿಂದ ಅದನ್ನೇ 'ಕಲ್ಯಾಣವನ್ನು ಹೇಳುತ್ತದೆಯಲ್ಲ' ಎಂದು ವಿಶೇಷಣವನ್ನು ಕೊಟ್ಟು ಹೇಳಿರುತ್ತದೆ. ಸಂಘಾತಕ್ಕೇ ಉಪಕಾರವನ್ನುಂಟುಮಾಡುವ ಮಾತನಾಡುವದೆಂಬುದರ ಕಾರ್ಯವಿದೆಯಲ್ಲ, ಅದು ಯಜಮಾನನಿಗೇ ಸೇರಿದ್ದು.

---

1. ವಾಚಿ ಭೋಗಃ ಎಂದರೆ ವಾಕ್ಕಿನಲ್ಲಿ ಆಗುವ ಭೋಗವೆಂದು ಅರ್ಥವಲ್ಲ; ವಾಕ್ಕಿರುವಲ್ಲಿ ಅದರ ಮಾತಾಡುವಿಕೆಯೇ ಮುಂತಾದ್ದರಿಂದ ಕಾರ್ಯಕರಣಸಂಘಾತಕ್ಕೆ ಆಗುವ ಸುಖವಿಶೇಷವು.

2. ಜ್ಯೋತಿಷ್ಟೋಮಯಾಗದಲ್ಲಿ ಹನ್ನೆರಡು ಸ್ತೋತ್ರಗಳನ್ನು ಗಾನಮಾಡುವರು; ಅವುಗಳಲ್ಲಿ ಮೂರಕ್ಕೆ **ಪವಮಾನ**ವೆಂದು ಹೆಸರು; ಅವನ್ನು ಯಜಮಾನನಿಗಾಗಿ ಹಾಡಿತು.

3. 'ತನಗಾಗಿ ಹಾಡಿಕೊಂಡಿತು' ಎಂಬ ವಚನವೇ ಅಥವಾ ಮುಂದೆ ೧-೩-೨೮ರಲ್ಲಿರುವ 'ಆತ್ಮನೇಽನ್ನಾದ್ಯಮಾಗಾಯೇತ್' ಎಂಬ ವಿಧಿಯೇ ಇದು ಉದ್ಗಾತೃವಿಗೆ ಸೇರತಕ್ಕದ್ದೆಂಬುದಕ್ಕೆ ಪ್ರಮಾಣವು ಎಂದು ಅರ್ಥ.

# ಅಸುರರು ವಾಗ್ದೇವತೆಯನ್ನು ಪಾಪದಿಂದ ಹೊಡೆದದ್ದು

(ಭಾಷ್ಯ)

೬೦. ತತ್ರ ಕಲ್ಯಾಣವದನಾತ್ಮಸಂಬನ್ಧಾಸಙ್ಗಾವಸರಂ ದೇವತಾಯಾಃ ರನ್ಧ್ರಂ ಪ್ರತಿಲಭ್ಯ ತೇ ವಿದುರಸುರಾಃ। ಕಥಮ್? ಅನೇನ ಉದ್ಗಾತ್ರಾ ನಃ ಅಸ್ಮಾನ್ ಸ್ವಾಭಾವಿಕಂ ಜ್ಞಾನಂ ಕರ್ಮ ಚ ಅಭಿಭೂಯ ಅತೀತ್ಯ ಶಾಸ್ತ್ರಜನಿತ ಕರ್ಮಜ್ಞಾನರೂಪೇಣ ಜ್ಯೋತಿಷಾ ಉದ್ಗಾತ್ರಾ ಉದ್ಗಾತ್ರಾತ್ಮನಾ ಅತ್ಯೇಷ್ಯನ್ತಿ ಅತಿಗಮಿಷ್ಯನ್ತಿ ಇತಿ। ಏವಂ ವಿಜ್ಞಾಯ ತಮ್ ಉದ್ಗಾತಾರಮ್ ಅಭಿದ್ರುತ್ಯ ಅಭಿಗಮ್ಯ ಸ್ವೇನ ಆಸಙ್ಗಲಕ್ಷಣೇನ ಪಾಪ್ಮನಾ ಅವಿಧ್ಯನ್ ತಾಡಿತವನ್ತಃ ಸಂಯೋಜಿತವನ್ತಃ ಇತ್ಯರ್ಥಃ। ಸ ಯಃ ಸ ಪಾಪ್ಮಾ ಪ್ರಜಾಪತೇಃ ಪೂರ್ವಜನ್ಮಾವಸ್ಥಸ್ಯ ವಾಚಿ ಕ್ಷಿಪ್ತಃ ಸ ಏಷ ಪ್ರತ್ಯಕ್ಷೀಕ್ರಿಯತೇ। ಕೋಽಸೌ? ಯದೇವೇದಮ್ ಅಪ್ರತಿರೂಪಮ್ ಅನನುರೂಪಮ್ ಶಾಸ್ತ್ರಪ್ರತಿಷಿದ್ಧಂ ವದತಿ, ಯೇನ ಪ್ರಯುಕ್ತೋಽಸೌ ಅಸಭ್ಯಬೀಭತ್ಸಾನೃತಾದ್ಯನಿಚ್ಛನ್ನಪಿ ವದತಿ। ಅನೇನ ಕಾರ್ಯೇಣ ಅಪ್ರತಿರೂಪವದನೇನ ಅನುಗಮ್ಯಮಾನಃ ಪ್ರಜಾಪತೇಃ ಕಾರ್ಯಭೂತಾಸು ಪ್ರಜಾಸು ವಾಚಿ ವರ್ತತೇ। ಸ ಏವ ಅಪ್ರತಿರೂಪವದನೇನ ಅನುಮಿತಃ ಸ ಪ್ರಜಾಪತೇರ್ವಾಚಿ ಗತಃ ಪಾಪ್ಮಾ। ಕಾರಣಾನುವಿಧಾಯಿ ಹಿ ಕಾರ್ಯಮ್ ಇತಿ ||

(ಭಾಷ್ಯಾರ್ಥ)

ಅಲ್ಲಿ ಕಲ್ಯಾಣವಾದದ್ದನ್ನು ಆಡುವದೆಂಬುದನ್ನು ತನಗೆ ಸಂಬಂಧಿಸಿಕೊಂಡ ಸಂದರ್ಭವೆಂಬ ದೇವತೆಯ ಮರ್ಮವು ದೊರೆಯಲು ಆ ಅಸುರರು (ಹೀಗೆಂದು) ತಿಳಿದುಕೊಂಡರು. ಏನೆಂದು? ಈ ಉದ್ಗಾತೃವಿನಿಂದ ನಮ್ಮನ್ನು, ಸ್ವಾಭಾವಿಕವಾದ ಜ್ಞಾನವನ್ನೂ ಕರ್ಮವನ್ನೂ, ಸೋಲಿಸಿ (ನಮ್ಮನ್ನು) ಶಾಸ್ತ್ರದಿಂದಾದ ಉದ್ಗಾತೃರೂಪದ ಜ್ಞಾನಕರ್ಮರೂಪವಾದ ಬೆಳಕಿನಿಂದ ಮೀರಿ[1] ಅತಿಕ್ರಮಿಸುತ್ತಾರೆ, ದಾಟಿಹೋಗುತ್ತಾರೆ ಎಂದು (ತಿಳಿದುಕೊಂಡರು); ಹೀಗೆಂದು ತಿಳಿದುಕೊಂಡು ಆ (ವಾಕ್ಕೆಂಬ) ಉದ್ಗಾತೃವಿನ ಕಡೆಗೆ ಓಡಿ ಹತ್ತಿರಕ್ಕೆ ಬಂದು ತಮ್ಮ ಆಸಂಗರೂಪವಾದ ಪಾಪದಿಂದ ಹೊಡೆದರು, ಏಟುಕೊಟ್ಟರು, (ಪಾಪವನ್ನು ಆ ಉದ್ಗಾತೃವಿಗೆ) ಜೋಡಿಸಿದರು ಎಂದರ್ಥ.

---

1. ಲೌಕಿಕಜ್ಞಾನಕರ್ಮಗಳನ್ನು ಆಸುರವೆಂದೂ ಶಾಸ್ತ್ರೀಯಜ್ಞಾನಕರ್ಮಗಳನ್ನು ದೈವವೆಂದೂ ಹಿಂದೆ ಈ ಬ್ರಾಹ್ಮಣದ ಅವತರಣಿಕೆಯಲ್ಲಿ ಹೇಳಿರುವದನ್ನು ಇಲ್ಲಿ ಮತ್ತೆ ನೆನಪಿಗೆ ತಂದಿದೆ.

ಹಿಂದಿನ ಜನ್ಮದ ಅವಸ್ಥೆಯಲ್ಲಿ ಪ್ರಜಾಪತಿಯ ವಾಕ್ಕಿನಲ್ಲಿ (ಅಸುರರು) ಯಾವ ಆ ಪಾಪವನ್ನು ಹಾಕಿದರೋ ಅದನ್ನು (ಶ್ರುತಿಯು) ಪ್ರತ್ಯಕ್ಷವಾಗಿ ಮಾಡಿ ತಿಳಿಸುತ್ತದೆ: ಆ (ಪಾಪವು) ಯಾವದು? ಎಂದರೆ (ಇಗೊ) ಈ ಅಪ್ರತಿರೂಪವಾಗಿ ಅನನುರೂಪವಾಗಿ ಶಾಸ್ತ್ರಪ್ರತಿಷಿದ್ಧವಾದದ್ದನ್ನು (ಮನುಷ್ಯನು) ಆಡುತ್ತಾನಲ್ಲ, ಇಚ್ಛೆಯಿಲ್ಲದಿದ್ದರೂ ಅದರಿಂದ ಪ್ರೇರಿತನಾಗಿ ಅಸಭ್ಯ, ಭೀಭತ್ಸ, ಅನೃತ-ಮುಂತಾದ[1] ಮಾತನ್ನು ಆಡುತ್ತಿರುತ್ತಾನಲ್ಲ, (ಅದೇ). ಈ ಅಪ್ರತಿರೂಪವಚನವೆಂಬ ಕಾರ್ಯದಿಂದ ಅನುಮೇಯಿಸಬೇಕಾದ (ಪಾಪವು) ಪ್ರಜಾಪತಿಯ ಕಾರ್ಯರಾಗಿರುವ ಪ್ರಜೆಗಳಲ್ಲಿ ಮಾತಿನಲ್ಲಿ ಇರುತ್ತದೆ. ಅಪ್ರತಿರೂಪವಾದ ಮಾತಿನಿಂದ ಅನುಮಾನಿಸಿ (ನಿಶ್ಚಯಿಸಬೇಕಾದ) ಇದೇ ಪ್ರಜಾಪತಿಯ ವಾಕ್ಕಿನಲ್ಲಿ ಸೇರಿಕೊಂಡ (ಆ) ಪಾಪವು. ಕಾರ್ಯವು ಕಾರಣಕ್ಕೆ ಅನುಗುಣವಾಗಿರುವದಲ್ಲವೆ?[2]

## ಘ್ರಾಣಾದಿಗಳು ಉದ್ಗಾನಮಾಡಿದ್ದೂ ಪಾಪವಿದ್ಧವಾದದ್ದೂ

(ಉಪನಿಷತ್ತು)

**ಅಥ ಹ ಪ್ರಾಣಮೂಚಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯಃ ಪ್ರಾಣ ಉದಗಾಯದ್ಯಃ ಪ್ರಾಣೇ ಭೋಗಸ್ತಂ ದೇವೇಭ್ಯ ಆಗಾಯದ್ಯತ್ ಕಲ್ಯಾಣಂ ಜಿಘ್ರತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾಽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾವಿಧ್ಯನ್ ಸ ಯಃ ಸ ಪಾಪ್ಮಾ ಯದೇವೇದಮಪ್ರತಿರೂಪಂ ಜಿಘ್ರತಿ ಸ ಏವ ಸ ಪಾಪ್ಮಾ ॥ ೩ ॥**

೩. ಈಗ (ಅವರು) ಪ್ರಾಣವನ್ನು[3] ಕುರಿತು "ನೀನು ನಮಗಾಗಿ ಉದ್ಗಾನಮಾಡು'' ಎಂದರು. "ಹಾಗೇ (ಆಗಲಿ)'' ಎಂದು ಅವರಿಗಾಗಿ ಪ್ರಾಣವು ಉದ್ಗಾನಮಾಡಿತು. ಪ್ರಾಣದಲ್ಲಿ ಭೋಗವಿದೆಯಲ್ಲ, ಅದನ್ನು

---

1. ಸಭೆಯಲ್ಲಿ ಆಡಬಾರದ ಭಂಡಮಾತು ಮುಂತಾದದ್ದು **ಅಸಭ್ಯ**; ಶವ, ರಕ್ತ, ಕೀವು ಇವುಗಳ ವರ್ಣನೆಯೇ ಮುಂತಾದದ್ದು **ಭೀಭತ್ಸ**; ಕಂಡದ್ದನ್ನೂ ಕೇಳಿದ್ದನ್ನೂ ಬೇರೊಂದು ಬಗೆಯಲ್ಲಿ ಹೇಳುವದು **ಅನೃತವು**. ಮುಂತಾದ ಎಂಬ ಮಾತಿನಿಂದ ಚಾಡಿ ಮುಂತಾದವುಗಳನ್ನು ಸೇರಿಸಿಕೊಳ್ಳಬೇಕು.

2. ಪ್ರಜಾಪತಿಯು ಕಾರಣನು; ಅವನ ಕಾರ್ಯವಾದ ಪ್ರಜೆಗಳಲ್ಲಿ ಈಗ ಇರುವ ಅಪ್ರತಿರೂಪವಾದ ಭಾಷೆಯಿಂದ ಅವನಲ್ಲಿಯೂ ಹೀಗೆಯೇ ಆಯಿತೆಂದು ಕಲ್ಪಿಸಬಹುದು.

3. ಘ್ರಾಣವನ್ನು.

ದೇವತೆಗಳಿಗೆ ಆಗಾನಮಾಡಿತು; ಕಲ್ಯಾಣವನ್ನು ಮಾಡಿಸುತ್ತದೆಯಲ್ಲ, ಅದನ್ನು ತನಗಾಗಿ (ಆಗಾನಮಾಡಿಕೊಂಡಿತು). ಅವರು "ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು" ಎಂದು ತಿಳಿದುಕೊಂಡರು. ಅವನ ಕಡೆಗೆ ಓಡಿ ಆ ಯಾವ ಪಾಪವಿತ್ತಲ್ಲ, ಆ (ಪಾಪದಿಂದ) ಹೊಡೆದರು. (ಇಗೊ) ಈ ಅಪ್ರತಿರೂಪವಾಗಿ ಮಾಸುತ್ತಾರಲ್ಲ, ಅದೇ ಆ ಪಾಪವು.

(ಉಪನಿಷತ್ತು)

**ಅಥ ಹ ಚಕ್ಷುರೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯಶ್ಚಕ್ಷುರುದಗಾಯತ್। ಯಶ್ಚಕ್ಷುಷಿ ಭೋಗಸ್ತಂ ದೇವೇಭ್ಯ ಆಗಾಯದ್ಯತ್ ಕಲ್ಯಾಣಂ ಪಶ್ಯತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾಽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾವಿಧ್ಯನ್ ಸ ಯಃ ಪಾಪ್ಮಾ ಯದೇವೇದಮಪ್ರತಿರೂಪಂ ಪಶ್ಯತಿ ಸ ಏವ ಸ ಪಾಪ್ಮಾ ॥ ೪ ॥**

೪. ಆಗ ಅವರು ಚಕ್ಷುಸ್ಸನ್ನು (ಕುರಿತು) "ನೀನು ನಮಗಾಗಿ ಉದ್ಗಾನಮಾಡು" ಎಂದರು. "ಹಾಗೇ ಆಗಲಿ!" ಎಂದು ಅವರಿಗಾಗಿ ಚಕ್ಷುಸ್ಸು ಉದ್ಗಾನಮಾಡಿತು. ಚಕ್ಷುಸ್ಸಿನಲ್ಲಿ ಭೋಗವಿದೆಯಲ್ಲ, ಅದನ್ನು ದೇವತೆಗಳಿಗಾಗಿ ಆಗಾನಮಾಡಿತು; ಕಲ್ಯಾಣವನ್ನು ನೋಡುತ್ತದೆಯಲ್ಲ, ಅದನ್ನು ತನಗಾಗಿ (ಆಗಾನಮಾಡಿಕೊಂಡಿತು). ಅವರು "ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು" ಎಂದು ತಿಳಿದುಕೊಂಡರು. ಅವನ ಕಡೆಗೆ ಓಡಿ, ಆ ಯಾವ ಪಾಪವಿತ್ತಲ್ಲ, ಆ ಪಾಪದಿಂದ ಹೊಡೆದರು. (ಇಗೊ), ಈ ಅಪ್ರತಿರೂಪವಾದದ್ದನ್ನು ಕಾಣುತ್ತಾರಲ್ಲ, ಅದೇ ಆ ಪಾಪವು.

(ಉಪನಿಷತ್ತು)

**ಅಥ ಹ ಶ್ರೋತ್ರಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯಃ ಶ್ರೋತ್ರಮುದಗಾಯದ್ಯಃ ಶ್ರೋತ್ರೇ ಭೋಗಸ್ತಂ ದೇವೇಭ್ಯ ಆಗಾಯದ್ ಯತ್ ಕಲ್ಯಾಣಗ್ಂ ಶೃಣೋತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾಽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ ಸ ಯಃ ಸ ಪಾಪ್ಮಾ ಯದೇವೇದಮಪ್ರತಿರೂಪಗ್ಂ ಶೃಣೋತಿ ಸ ಏವ ಸ ಪಾಪ್ಮಾ ॥ ೫ ॥**

೫. ಆಗ ಅವರು ಶ್ರೋತ್ರವನ್ನು (ಕುರಿತು) 'ನೀನು ನಮಗಾಗಿ ಉದ್ಗಾನಮಾಡು' ಎಂದರು. "ಹಾಗೇ ಆಗಲಿ!" ಎಂದು ಅವರಿಗಾಗಿ ಶ್ರೋತ್ರವು ಉದ್ಗಾನಮಾಡಿತು. ಶ್ರೋತ್ರದಲ್ಲಿ ಭೋಗವಿದೆಯಲ್ಲ, ಅದನ್ನು ದೇವತೆಗಳಿಗೆ ಆಗಾನಮಾಡಿತು; ಕಲ್ಯಾಣವನ್ನು ಕೇಳುತ್ತದೆಯಲ್ಲ, ಅದನ್ನು ತನಗಾಗಿ (ಆಗಾನಮಾಡಿಕೊಂಡಿತು). ಅವರು "ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು" ಎಂದು ತಿಳಿದುಕೊಂಡರು. ಅವನ ಕಡೆಗೆ ಓಡಿ ಆ ಯಾವ ಪಾಪವಿತ್ತಲ್ಲ, ಆ (ಪಾಪದಿಂದ) ಹೊಡೆದರು. (ಇಗೊ) ಈ ಅಪ್ರತಿರೂಪವಾಗಿ ಕೇಳುತ್ತಾರಲ್ಲ, ಅದೇ ಆ ಪಾಪವು.

(ಉಪನಿಷತ್ತು)

**ಅಥ ಹ ಮನ ಊಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯೋ ಮನ ಉದಗಾಯದ್ ಯೋ ಮನಸಿ ಭೋಗಸ್ತಂ ದೇವೇಭ್ಯ ಆಗಾಯದ್ ಯತ್ ಕಲ್ಯಾಣಗ್ಂ ಸಂಕಲ್ಪಯತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾಽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ ಸ ಯಃ ಸ ಪಾಪ್ಮಾ ಯದೇವೇದಮಪ್ರತಿರೂಪಗ್ಂ ಸಂಕಲ್ಪಯತಿ ಸ ಏವ ಸ ಪಾಪ್ಮೈವಮು ಖಲ್ವೇತಾ ದೇವತಾಃ ಪಾಪ್ಮಭಿರುಪಾಸೃಜನ್ನೇವಮೇನಾಃ ಪಾಪ್ಮನಾಽವಿಧ್ಯನ್ ॥ ೬ ॥**

೬. ಆಗ (ಅವರು) ಮನಸ್ಸನ್ನು ಕುರಿತು) "ನೀನು ನಮಗಾಗಿ ಉದ್ಗಾನಮಾಡು" ಎಂದರು. "ಹಾಗೇ (ಆಗಲಿ)" ಎಂದು ಅವರಿಗಾಗಿ ಮನಸ್ಸು ಉದ್ಗಾನಮಾಡಿತು. ಮನಸ್ಸಿನಲ್ಲಿ[1] ಭೋಗವಿದೆಯಲ್ಲ, ಅದನ್ನು ದೇವತೆಗಳಿಗೆ ಆಗಾನಮಾಡಿತು. ಕಲ್ಯಾಣವನ್ನು ಸಂಕಲ್ಪಿಸುತ್ತದೆಯಲ್ಲ, ಅದನ್ನು ತನಗಾಗಿ (ಆಗಾನಮಾಡಿಕೊಂಡಿತು). ಅವರು "ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು" ಎಂದು ತಿಳಿದುಕೊಂಡರು. ಅವನ ಕಡೆಗೆ ಓಡಿ ಆ ಯಾವ ಪಾಪವಿತ್ತಲ್ಲ, ಅದರಿಂದ ಹೊಡೆದರು. (ಇಗೊ) ಈ ಅಪ್ರತಿರೂಪವಾಗಿ ಸಂಕಲ್ಪಿಸುವನಲ್ಲ, ಅದೇ ಆ ಪಾಪವು.

---

1. ಮನಸ್ಸಿನಲ್ಲಿ ಭೋಗವೆಂದರೆ ಮನಸ್ಸಿನಲ್ಲಿ ನಿಮಿತ್ತದಿಂದ ಸಂಘಾತಕ್ಕೆ ಆಗುವ ಭೋಗವು. ಈ ಮೂರು ಕಂಡಿಕೆಗಳಿಗೆ ಭಾಷ್ಯಕಾರರು ಅಕ್ಷರಾರ್ಥವನ್ನು ಬರೆದಿಲ್ಲ. ವಾಕ್ಕಿನ ವಿಷಯದ ಕಂಡಿಕೆಯ ಭಾಷ್ಯದಂತೆಯೇ ಊಹಿಸಿಕೊಳ್ಳಬೇಕು.

ಹೀಗೆಯೇ ಈ ದೇವತೆಗಳನ್ನು ಪಾಪಗಳಿಂದ ಸೋಂಕಿಸಿದರು, ಹೀಗೆಯೇ ಇವರನ್ನು ಪಾಪಗಳಿಂದ ಹೊಡೆದರು.

## ದೇವತೆಗಳ ತೀರ್ಮಾನ

(ಭಾಷ್ಯ)

೬೧. ತಥೈವ ಘ್ರಾಣಾದಿದೇವತಾಃ ಉದ್ಗೀಥನಿರ್ವರ್ತಕತ್ವಾತ್ ಜಪಮನ್ತ್ರಪ್ರಕಾಶ್ಯಾ ಉಪಾಸ್ಯಾಶ್ಚ ಇತಿ ಕ್ರಮೇಣ ಪರೀಕ್ಷಿತವನ್ತಃ| ದೇವಾನಾಂ ಚೈತತ್ ನಿಶ್ಚಿತಮಾಸೀತ್ ವಾಗಾದಿದೇವತಾಃ ಕ್ರಮೇಣ ಪರೀಕ್ಷ್ಯಮಾಣಾಃ ಕಲ್ಯಾಣವಿಷಯವಿಶೇಷಾತ್ಮಸಂಬನ್ಧಾಸಙ್ಗಹೇತೋಃ ಆಸುರಪಾಪ್ಮಸಂಸರ್ಗಾತ್ ಉದ್ಗೀಥನಿರ್ವರ್ತನಾಸಮರ್ಥಾಃ| ಅತೋಽನಭಿಧೇಯಾಃ 'ಅಸತೋ ಮಾ ಸದ್ಗಮಯ' ಇತಿ| ಅನುಪಾಸ್ಯಾಶ್ಚ| ಅಶುದ್ಧತ್ವಾತ್ ಇತರಾವ್ಯಾಪಕತ್ವಾಚ್ಚೇತಿ| ಏವಮು ಖಲು ಅನುಕ್ತಾ ಅಪಿ ಏತಾಸ್ತ್ವಗಾದಿದೇವತಾಃ ಕಲ್ಯಾಣಾಕಲ್ಯಾಣಕಾರ್ಯದರ್ಶನಾದೇವಂ ವಾಗಾದಿವದೇವ ಏನಾಃ ಪಾಪ್ಮನಾ ಅವಿಧ್ಯನ್ ಪಾಪ್ಮನಾ ವಿದ್ಧವನ್ತಃ ಇತಿ ಯದುಕ್ತಂ ತತ್ ಪಾಪ್ಮಭಿಃ ಉಪಾಸೃಜನ್ ಪಾಪ್ಮಭಿಃ ಸಂಸರ್ಗಂ ಕೃತವನ್ತಃ ಇತ್ಯೇತತ್ ||

(ಭಾಷ್ಯಾರ್ಥ)

ಹೀಗೆಯೇ ಘ್ರಾಣವೇ ಮುಂತಾದ (ಪ್ರಾಣಗಳ ಅಭಿಮಾನಿ)ದೇವತೆಗಳನ್ನು (ಇವರು) ಉದ್ಗೀಥವನ್ನು ಮಾಡುವವರಾದ್ದರಿಂದ (ಇವರೇ) ಜಪಮಂತ್ರದಿಂದ ತಿಳಿದುಬರತಕ್ಕವರು, ಮತ್ತು ಉಪಾಸ್ಯವಾಗಿರುವವರು ಎಂದು (ದೇವತೆಗಳು) ಕ್ರಮವಾಗಿ (ಎಲ್ಲಾ ದೇವತೆಗಳನ್ನೂ) ಪರೀಕ್ಷಿಸಿದರು. (ಆ) ದೇವತೆಗಳ (ಕೊನೆಯ) ನಿಶ್ಚಯವು ಇದಾಯಿತು: ವಾಗಾದಿದೇವತೆಗಳನ್ನು ಒಬ್ಬೊಬ್ಬರನ್ನಾಗಿ ಪರೀಕ್ಷಿಸಲಾಗಿ ಕಲ್ಯಾಣವಾದ ಆಯಾ ವಿಷಯದಲ್ಲಿ(ಅದು)ತಮಗೆ ಸಂಬಂಧಪಟ್ಟದ್ದೆಂಬ ಆಸಂಗ(ವಿದೆ ಎಂಬ) ಹೇತುವಿನಿಂದ ಆಸುರಪಾಪಸಂಬಂಧವಿರುವದರಿಂದ (ಅವರು) ಉದ್ಗೀಥವನ್ನು (ಗಾನ)ಮಾಡಲು ಸಮರ್ಥರಲ್ಲ. ಆದ್ದರಿಂದ "ಅಸತೋ ಮಾ ಸದ್ಗಮಯ" ಎಂಬ ಮಂತ್ರಕ್ಕೆ ವಾಚ್ಯರಲ್ಲ; ಅಶುದ್ಧವಾಗಿರುವದರಿಂದಲೂ ಉಳಿದವರನ್ನೆಲ್ಲ ವ್ಯಾಪಿಸಿಕೊಂಡಿಲ್ಲವಾದ್ದರಿಂದಲೂ (ಅವರು) ಉಪಾಸ್ಯರೂ ಅಲ್ಲ.

ಹೀಗೆಯೇ (ಇಲ್ಲಿ) ಹೇಳದೆ ಇರುವ ತ್ವಗಾದಿದೇವತೆಗಳಲ್ಲಿಯೂ ಕಲ್ಯಾಣಾಕಲ್ಯಾಣಕಾರ್ಯವು ಕಂಡುಬರುವದರಿಂದ, ಹೀಗೆಯೇ ಎಂದರೆ ವಾಗಾದಿಗಳಂತೆಯೇ (ಅವರನ್ನು) 'ಪಾಪದಿಂದ, ಹೊಡೆದರು', ಪಾಪದಿಂದ ಹೊಡೆದವರಾದರು ಎಂದು (ಹಿಂದೆ) ಹೇಳಿತ್ತಲ್ಲ, ಅದಕ್ಕೆ ಪಾಪಗಳಿಂದ ಸೋಂಕಿಸಿದರು, ಪಾಪಗಳನ್ನು ಅಂಟಿಸಿದವರಾದರು ಎಂದು ಅಭಿಪ್ರಾಯ.

## ಪ್ರಾಣನ ಉದ್ಗಾನ, ಅಸುರರ ವಿನಾಶ

(ಉಪನಿಷತ್ತು)

**ಅಥ ಹೇಮಮಾಸನ್ಯಂ ಪ್ರಾಣಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯ ಏಷ ಪ್ರಾಣ ಉದಗಾಯತ್ ತೇ ವಿದುರನೇನ ವೈ ನ ಉದ್ಗಾತ್ರಾऽತ್ಯೇಷ್ಯನ್ತೀತಿ ತಮಭಿದ್ರುತ್ಯ ಪಾಪ್ಮನಾऽವಿವ್ಯತ್ಸನ್ ಸ ಯಥಾಶ್ಮಾನಮೃತ್ವಾ ಲೋಷ್ಟೋ ವಿಧ್ವಗ್ಂಸೇತೈವಗ್ಂ ಹೈವ ವಿಧ್ವಗ್ಂಸಮಾನಾ ವಿಷ್ವಞ್ಚೋ ವಿನೇಶುಸ್ತತೋ ದೇವಾ ಅಭವನ್ ಪರಾऽಸುರಾ ಭವತ್ಯಾತ್ಮನಾ ಪರಾऽಸ್ಯ ದ್ವಿಷನ್ ಭ್ರಾತೃವ್ಯೋ ಭವತಿ ಯ ಏವಂ ವೇದ ॥ ೭ ॥**

೭. ಈಗ ಈ ಆಸನ್ಯಪ್ರಾಣನನ್ನು (ಕುರಿತು) "ನೀನು ನಮಗಾಗಿ ಉದ್ಗಾನಮಾಡು'' ಎಂದರು. "ಹಾಗೇ (ಆಗಲಿ)'' ಎಂದು ಅವರಿಗೆ ಈ ಪ್ರಾಣನು ಉದ್ಗಾನಮಾಡಿದನು. ಅವರು "ಈ ಉದ್ಗಾತೃವಿನಿಂದಲೇ ನಮ್ಮನ್ನು ಅತಿಕ್ರಮಿಸುವರು'' ಎಂದು ತಿಳಿದುಕೊಂಡರು. ಅವನ ಬಳಿಗೆ ಓಡಿ ಪಾಪದಿಂದ ಹೊಡೆಯಲಿಚ್ಛಿಸಿದರು. ಹೇಗೆ ಕಲ್ಲನ್ನು ಸೇರಿದರೆ ಮಣ್ಣುಹೆಂಟೆಯು ಪುಡಿಯಾಗುವದೋ ಅದರಂತೆಯೇ ಪುಡಿಯಾಗುತ್ತಾ ಎಲ್ಲಾ ಕಡೆಗೂ ಹೋಗಿ ವಿನಾಶವಾದರು. ಅದರಿಂದ ದೇವತೆಗಳು (ತಮ್ಮ ರೂಪ)ವಾದರು ; ಅಸುರರು ಪರಾ(ಭೂತ)ರಾದರು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ತನ್ನ (ಸ್ವರೂಪ)ದಿಂದ ಕೂಡಿದವನಾಗುವನು ; ಅವನ ದ್ವೇಷಿಯಾದ ದಾಯಾದಿಯು ಪರಾಭೂತನಾಗುವನು.

## ಪ್ರಾಣನು ಉದ್ಗಾನಮಾಡಿದ್ದು, ಅದರ ಫಲ

(ಭಾಷ್ಯ)

೬೨. ವಾಗಾದಿದೇವತಾ ಉಪಾಸೀನಾ ಅಪಿ ಮೃತ್ಯ್ವತೀಗಮನಾಯ ಅಶರಣಾಃ ಸನ್ತೋ ದೇವಾಃ ಕ್ರಮೇಣ ಅಥ ಅನನ್ತರಂ ಹ ಇಮಮ್ ಇತ್ಯಭಿನಯಪ್ರದರ್ಶನಮ್[1]। ಆಸನ್ಯಮ್ ಆಸ್ಯೇ ಭವಮ್ ಆಸನ್ಯಂ ಮುಖಾನ್ತರ್ಬಿಲಸ್ಥಂ ಪ್ರಾಣಮ್ ಊಚುಃ ತ್ವಂ ನ ಉದ್ಗಾಯ ಇತಿ। ತಥೇತಿ ಏವಂ ಶರಣಮುಪಗತೇಭ್ಯಃ ಸ ಏಷ ಪ್ರಾಣೋ ಮುಖ್ಯಃ ಉದಗಾಯತ್ ಇತ್ಯಾದಿ ಪೂರ್ವವತ್।

---

1. 'ಅಭಿನೀಯ ಪ್ರದರ್ಶನಮ್' ಎಂದಿದ್ದರೆ ಚೆನ್ನಾಗಿತ್ತೆಂದು ಕಾಣುತ್ತದೆ.

ಪಾಪ್ಮನಾ ಅವಿವ್ಯತ್ಸನ್ ವೇಧನಂ ಕರ್ತುಮಿಷ್ಟವನ್ತಃ ತೇ ಚ ದೋಷಾಸಂಸರ್ಗಿಣಂ ಸನ್ತಂ ಮುಖ್ಯಂ ಪ್ರಾಣಮ್ ಸ್ವೇನ ಆಸಙ್ಗದೋಷೇಣ ವಾಗಾದಿಷು ಲಬ್ಧಪ್ರಸರಾಃ ತದಭ್ಯಾಸಾನುವೃತ್ತ್ಯಾ| ಸಂಶ್ಲಿಷ್ಯಮಾಣಾಃ[1] ವಿನೇಶುಃ ವಿನಷ್ಟಾಃ ವಿಧ್ವಸ್ತಾಃ| ಕಥಮಿವೇತಿ ದೃಷ್ಟಾನ್ತ ಉಚ್ಯತೇ|ಸ ಯಥಾ ಸ ದೃಷ್ಟಾನ್ತಃ ಯಥಾ ಲೋಕೇ ಅಶ್ಮಾನಂ ಪಾಷಾಣಮ್ ಖುತ್ವಾ ಗತ್ವಾ ಪ್ರಾಪ್ಯ ಲೋಷ್ಟಃ ಪಾಂಸುಪಿಣ್ಡಃ ಪಾಷಾಣಚೂರ್ಣನಾಯ ಅಶ್ಮನಿ ನಿಕ್ಷಿಪ್ತಃ ಸ್ವಯಂ ವಿಧ್ವಂಸೇತ ವಿಸ್ರಂಸೇತ ವಿಚೂರ್ಣೀಭವೇತ್, ಏವಂ ಹೈವ ಯಥಾ ಅಯಂ ದೃಷ್ಟಾನ್ತಃ ಏವಮೇವ ವಿಧ್ವಂಸಮಾನಾಃ ವಿಶೇಷೇಣ ಧ್ವಂಸಮಾನಾಃ ವಿಷ್ವಞ್ಚಃ ನಾನಾಗತಯಃ ವಿನೇಶುಃ ವಿನಷ್ಟಾಃ ಯತಃ ತತಃ ತಸ್ಮಾತ್ ಅಸುರವಿನಾಶಾತ್ ದೇವತ್ವಪ್ರತಿಬನ್ಧಭೂತೇಭ್ಯಃ ಸ್ವಾಭಾವಿಕಾಸಙ್ಗಜನಿತಪಾಪ್ಮಭ್ಯೋ ವಿಯೋಗಾತ್ ಅಸಂಸರ್ಗಧರ್ಮಿಮುಖ್ಯಪ್ರಾಣಾಶ್ರಯಬಲಾತ್ ದೇವಾಃ ವಾಗಾದಯಃ ಪ್ರಕೃತಾಃ ಅಭವನ್| ಕಿಮಭವನ್ ? ಸ್ವಂ ದೇವತಾರೂಪಮ್ ಅಗ್ನ್ಯಾದ್ಯಾತ್ಮಕಂ ವಕ್ಷ್ಯಮಾಣಮ್| ಪೂರ್ವಮಪಿ ಅಗ್ನ್ಯಾದ್ಯಾತ್ಮಾನ ಏವ ಸನ್ತಃ ಸ್ವಾಭಾವಿಕೇನ ಪಾಪ್ಮನಾ ತಿರಸ್ಕೃತವಿಜ್ಞಾನಾಃ ಪಿಣ್ಡಮಾತ್ರಾಭಿಮಾನಾ ಆಸನ್| ತೇ ತತ್ಪಾಪ್ಮವಿಯೋಗಾತ್ ಉಜ್ಝಿತ್ವಾ ಪಿಣ್ಡಮಾತ್ರಾಭಿಮಾನಂ ಶಾಸ್ತ್ರಸಮರ್ಪಿತವಾಗಾದ್ಯಗ್ನ್ಯಾದ್ಯಾತ್ಮಾಭಿಮಾನಾ ಬಭೂವುಃ ಇತ್ಯರ್ಥಃ| ಕಿಂ ಚ ತೇ ಪ್ರತಿಪಕ್ಷಭೂತಾಃ ಅಸುರಾಃ ಪರಾ 'ಅಭವನ್' ಇತ್ಯನುವರ್ತತೇ| ಪರಾಭೂತಾಃ ವಿನಷ್ಟಾಃ ಇತ್ಯರ್ಥಃ ||

(ಭಾಷ್ಯಾರ್ಥ)

ವಾಗಾದಿದೇವತೆಗಳನ್ನು ಉಪಾಸನೆಮಾಡಿದಮೇಲೂ ಮೃತ್ಯುವನ್ನು ಮೀರುವದಕ್ಕೆ ಯಾವ ಆಸರೆಯನ್ನೂ (ಕಾಣ)ದವರಾಗಿ ದೇವತೆಗಳು ಕ್ರಮದಿಂದ ಈಗ ಇದಾದ ಬಳಿಕ-'ಈ' ಎಂಬುದು ಅಭಿನಯದಿಂದ ತೋರಿಸುವ (ಮಾತು).[2] ಆಸನ್ಯನಾದ- ಆಸ್ಯದಲ್ಲಿರುವವನು ಆಸನ್ಯನು. (ಈ) ಮುಖಬಿಲದ ಒಳಗಿರುವ-ಪ್ರಾಣನನ್ನು (ಕುರಿತು) "ನೀನು ನಮಗಾಗಿ ಉದ್ಗಾನಮಾಡು" ಎಂದರು. "ಹಾಗೇ (ಆಗಲಿ)" ಎಂದಿಂತು ಶರಣುಬಂದ (ಆ ದೇವತೆಗಳಿಗೆ) ಆ ಮುಖ್ಯಪ್ರಾಣನೇ ಉದ್ಗಾನಮಾಡಿದನು- ಎಂದು ಮುಂತಾಗಿರುವ (ಗ್ರಂಥವನ್ನು) ಹಿಂದಿನಂತೆ (ವ್ಯಾಖ್ಯಾನಮಾಡಬೇಕು).

ಪಾಪದಿಂದ 'ಅವಿವ್ಯತ್ಸನ್' ಎಂದರೆ ದೋಷದ ಸಂಬಂಧವಿಲ್ಲದ ಮುಖ್ಯಪ್ರಾಣನನ್ನು (ಪಾಪದಿಂದ) ಹೊಡೆಯುವವಕ್ಕೆ ಇಚ್ಛಿಸಿದರು. ತಮ್ಮ ಆಸಂಗ

---

1. 'ಸಂಸ್ಪೃಕ್ಷ್ಯಮಾಣಾಃ' ಅ|| ವಾ||.

2. 'ಈ ಆಸ್ಯದಲ್ಲಿರುವ ಪ್ರಾಣನನ್ನು' ಎಂಬಲ್ಲಿ ಈ ಎಂಬುದು ಈ ಬಾಯಿಯಲ್ಲಿರುವ ಎಂದು ತೋರಿಸುವ ಮಾತು.

ದೋಷದಿಂದ ವಾಗಾದಿಗಳಲ್ಲಿ ಅವಕಾಶವು ಸಿಕ್ಕಿತ್ತಾದ್ದರಿಂದ ಅದೇ ಅಭ್ಯಾಸವು ಅನುಸರಿಸಿಕೊಂಡುಬಂದಿದ್ದುದ್ದರಿಂದ (ಹೊಡೆಯುವದಕ್ಕೆ ಇಚ್ಛಿಸಿದರು. ಅವನ) ಸಂಬಂಧವುಳ್ಳವರಾಗಿ (ವಿನೇಶುಃ=)ವಿನಾಶವನ್ನು ಹೊಂದಿದರು, ವಿಧ್ವಸ್ತರಾದರು. ಹೇಗೆ ? ಎಂದರೆ (ಅದಕ್ಕೆ) ದೃಷ್ಟಾಂತವನ್ನು (ಶ್ರುತಿ) ಹೇಳುತ್ತಿದೆ:

ಅದು ಹೇಗೆಂದರೆ, ಆ ದೃಷ್ಟಾಂತವು ಹೇಗೆಂದರೆ ಲೋಕದಲ್ಲಿ ಕಲ್ಲನ್ನು ಬಂಡೆಯನ್ನು ಸೇರಿ ಅದರ ಬಳಿಗೆ ಹೋಗಿ ಅದಕ್ಕೆ ಬಡಿದ ಹೆಂಟೆಯು ಮಣ್ಣುಹುಡಿಯ ಮುದ್ದೆಯು ಕಲ್ಲನ್ನು ಹುಡಿಮಾಡುವದಕ್ಕೆಂದು ಕಲ್ಲಮೇಲೆ ಎಸೆದಾಗ ಹೇಗೆ ತಾನೇ ವಿಧ್ವಂಸವಾಗುವದೋ ಸಡಿಲವಾಗುವದೋ ಹುಡಿಹುಡಿಯಾಗುವದೋ ಹಾಗೆಯೇ, ಈ ದೃಷ್ಟಾಂತವಿದೆಯಲ್ಲ, ಇದರಂತೆಯೇ ವಿಧ್ವಸ್ತರಾಗಿ ವಿಶೇಷವಾಗಿ ಹುಡಿಯಾಗಿ ಎಲ್ಲಾ ಕಡೆಗೂ ಹೋಗಿ (ದಿಕ್ಕಾಪಾಲಾಗಿ) ಬೇರೆಬೇರೆಯ ಕಡೆಗೆ ಹೋಗಿ ವಿನಷ್ಟರಾದರು.

ಹೀಗಾಯಿತಲ್ಲ, ಅದರಿಂದ ಆ ಅಸುರವಿನಾಶದಿಂದ ದೇವತ್ವಕ್ಕೆ ಅಡ್ಡಿಯಾಗಿದ್ದ ಸ್ವಾಭಾವಿಕವಾದ ಆಸಂಗದಿಂದುಂಟಾದ ಪಾಪಗಳಿಂದ ಬಿಡುಗಡೆಯಾಗಿ (ಪಾಪದ) ಸಂಬಂಧವೆಂಬ ಧರ್ಮವಿಲ್ಲದ ಮುಖ್ಯಪ್ರಾಣನ ಆಶ್ರಯದ ಬಲದಿಂದ ದೇವತೆಗಳು, ಪ್ರಕೃತವಾದ ವಾಗಾದಿಗಳು, ಆದರು ; ಏನಾದರು ? ಮುಂದೆ ಹೇಳುವ[1] ಅಗ್ನಿಯೇ ಮುಂತಾದ ತಮ್ಮ (ತಮ್ಮ) ರೂಪವಾದರು. **ಮೊದಲೂ ಅಗ್ನಿಯೇ ಮುಂತಾದ ರೂಪದವರೇ ಆಗಿದ್ದು ಸ್ವಾಭಾವಿಕವಾದ ಪಾಪದಿಂದ ವಿಜ್ಞಾನವು ಮರೆಯಾಗಿದ್ದದ್ದರಿಂದ ಶರೀರಮಾತ್ರದಲ್ಲಿ ಅಭಿಮಾನವುಳ್ಳವರಾಗಿದ್ದರು; ಅವರು ಆ ಪಾಪದಿಂದ ಬಿಡುಗಡೆಯಾದ್ದರಿಂದ ಶರೀರಮಾತ್ರದಲ್ಲಿ (ತಾನೆಂಬ) ಅಭಿಮಾನವನ್ನು ಬಿಟ್ಟು ಶಾಸ್ತ್ರದಲ್ಲಿ ತೋರಿಸಿಕೊಟ್ಟಿರುವ ವಾಗಾದಿಗಳ ಅಗ್ನ್ಯಾದಿಸ್ವರೂಪದಲ್ಲಿ (ಅದೇ ತಾನೆಂಬ) ಅಭಿಮಾನವುಳ್ಳವರಾದರು ಎಂದರ್ಥ.** ಮತ್ತು ಪ್ರತಿಪಕ್ಷದವರಾಗಿದ್ದ ಆ ಅಸುರರು ಪರಾ(ಪರಾ) 'ಭೂತರಾದರು' ಎಂದು ಸೇರಿಸಿಕೊಳ್ಳಬೇಕು. ಪರಾಭೂತರಾಗಿ ನಾಶವಾದರು ಎಂದರ್ಥ.

## ಪ್ರಾಣೋಪಾಸನೆಯ ಫಲ

(ಭಾಷ್ಯ)

೭೩. ಯಥಾ ಪುರಾಕಲ್ಪೇನ ವರ್ಣಿತಃ ಪೂರ್ವಯಜಮಾನಃ ಅತಿಕ್ರಾನ್ತಕಾಲಿಕಃ ಏತಾಮೇವ ಆಖ್ಯಾಯಿಕಾರೂಪಾಂ ಶ್ರುತಿಂ ದೃಷ್ಟ್ವಾ ತೇನೈವ ಕ್ರಮೇಣ ವಾಗಾದಿದೇವತಾಃ ಪರೀಕ್ಷ್ಯ ತಾಶ್ಚ ಅಪೋಹ್ಯ ಆಸಙ್ಗಪಾಪ್ಮಾಸ್ಪದದೋಷವತ್ತ್ವೇನ

1. ೧೨ನೆಯ ಕಂಡಿಕೆಯಿಂದ ಮುಂದಕ್ಕೆ ಎಂದರ್ಥ.

ಆದೋಷಾಸ್ಪದಂ ಮುಖ್ಯಂ ಪ್ರಾಣಮ್ ಆತ್ಮತ್ವೇನ ಉಪಗಮ್ಯ ವಾಗಾದ್ಯಾಧ್ಯಾತ್ಮಿಕಪಿಣ್ಡಮಾತ್ರಪರಿಚ್ಛಿನ್ನಾತ್ಮಾಭಿಮಾನಂ ಹಿತ್ವಾ ವೈರಾಜಪಿಣ್ಡಾಭಿಮಾನಂ ವಾಗಾದ್ಯಗ್ನ್ಯಾದ್ಯಾತ್ಮವಿಷಯಂ ವರ್ತಮಾನಪ್ರಜಾಪತಿತ್ವಂ ಶಾಸ್ತ್ರಪ್ರಕಾಶಿತಂ ಪ್ರತಿಪನ್ನಃ ತಥೈವ ಅಯಂ ಯಜಮಾನಃ ತೇನೈವ ವಿಧಿನಾ ಭವತಿ ಪ್ರಜಾಪತಿಸ್ವರೂಪೇಣ ಆತ್ಮನಾ ಪರಾ ಚಾಸ್ಯ ಪ್ರಜಾಪತಿತ್ವಪ್ರತಿಪಕ್ಷಭೂತಃ ಪಾಪ್ಮಾ ದ್ವಿಷನ್ ಭ್ರಾತೃವ್ಯೋಭವತಿ। ಯತಃ ಅದ್ವೇಷ್ಟಾಽಪಿ ಭವತಿ ಕಶ್ಚಿದ್ ಭ್ರಾತೃವ್ಯಃ ಭರತಾದಿತುಲ್ಯಃ। ಯಸ್ತು ಇನ್ದ್ರಿಯವಿಷಯಾಸಙ್ಗಜನಿತಃ ಪಾಪ್ಮಾ ಭ್ರಾತೃವ್ಯೋ ದ್ವೇಷ್ಟಾ ಚ, ಪಾರಮಾರ್ಥಿಕಾತ್ಮಸ್ವರೂಪತಿರಸ್ಕರಣಹೇತುತ್ವಾತ್। ಸ ಚ ಪರಾ ಭವತಿ ವಿಶೀರ್ಯತೇ ಲೋಷ್ಟವತ್ ಪ್ರಾಣಪರಿಷ್ವಙ್ಗಾತ್। ಕಸ್ಯೈತತ್ ಫಲಮಿತಿ? ಆಹ। ಯ ಏವಂ ವೇದ। ಯಥೋಕ್ತಂ ಪ್ರಾಣಮಾತ್ಮತ್ವೇನ ಪ್ರತಿಪದ್ಯತೇ ಪೂರ್ವಯಜಮಾನವತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಪುರಾಕಲ್ಪ(ರೂಪವಾದ ಅರ್ಥವಾದದಲ್ಲಿ) ವರ್ಣಿತವಾಗಿರುವ ಕಳೆದು ಹೋಗಿರುವ ಕಾಲಕ್ಕೆ ಸೇರಿದ ಹಿಂದಿನ ಯಜಮಾನನು ಇದೇ ಆಖ್ಯಾಯಿಕೆಯ ರೂಪವಾಗಿರುವ ಶ್ರುತಿಯನ್ನು ಕಂಡು ಅದೇ ಕ್ರಮದಿಂದಲೇ ವಾಗಾದಿದೇವತೆಗಳನ್ನು ಪರೀಕ್ಷಿಸಿ ಆಸಂಗ(ರೂಪ)ವಾದ ಪಾಪಕ್ಕೆ ಆಶ್ರಯರಾಗಿರುವದೆಂಬ ದೋಷವುಳ್ಳವರೆಂದು ಅವರನ್ನು ಬಿಟ್ಟು ಮುಖ್ಯಪ್ರಾಣನನ್ನೇ (ತನ್ನ) ಆತ್ಮನೆಂದು ಒಪ್ಪಿ ವಾಕ್ಕೇ ಮುಂತಾದ ರೂಪದಲ್ಲಿರುವ, ಶರೀರಮಾತ್ರದಲ್ಲಿ ಪರಿಚ್ಛಿನ್ನವಾಗಿರುವ (ಅದೇ) ತಾನೆಂಬ ಅಭಿಮಾನವನ್ನು ಬಿಟ್ಟು, ವಾಗಾದಿಗಳು ಅಗ್ನ್ಯಾದಿಸ್ವರೂಪ(ವನ್ನು ಪಡೆದುಕೊಂಡ) ವಿಷಯದ ವೈರಾಜಶರೀರದಲ್ಲಿಯೇ ಅಭಿಮಾನವನ್ನು–ಎಂದರೆ ಶಾಸ್ತ್ರಪ್ರಕಾಶಿತವಾದ ಈಗಿನ ಪ್ರಜಾಪತಿತ್ವವನ್ನು–ಪಡೆದುಕೊಂಡನೋ, ಹಾಗೆಯೇ ಈ (ಈಗಿನ) ಯಜಮಾನನು ಅದೇ ಪ್ರಕಾರದಿಂದ ಪ್ರಜಾಪತಿಸ್ವರೂಪವೆಂಬ ತನ್ನ ರೂಪವುಳ್ಳವನಾಗುತ್ತಾನೆ. ಇವನು ಪ್ರಜಾಪತಿತ್ವವನ್ನು ಪಡೆಯುವದಕ್ಕೆ ಪ್ರತಿಪಕ್ಷವಾಗಿರುವ ಪಾಪವೆಂಬ ದ್ವೇಷಿಸುವ ದಾಯಾದಿಯು ಪರಾಭೂತನಾಗುತ್ತದೆ. ಭರತನೇ ಮೊದಲಾದವರಿಗೆ ಸಮಾನನಾದ (ತನ್ನನ್ನು) ದ್ವೇಷಿಸದ ದಾಯಾದಿಯೂ ಉಂಟಲ್ಲವೆ ? ಆದರೆ ಇಂದ್ರಿಯವಿಷಯದ ಆಸಂಗದಿಂದ ಉಂಟಾದ ಪಾಪವಿದೆಯಲ್ಲ, (ಅದು) ದ್ವೇಷಿಸುವ ದಾಯಾದಿಯೂ ಆಗಿರುತ್ತದೆ ; ಏಕೆಂದರೆ (ಅದು) ಪಾರಮಾರ್ಥಿಕವಾದ ಆತ್ಮಸ್ವರೂಪವನ್ನು[1] ಮುಚ್ಚಿಹಾಕುವದಕ್ಕೆ ಕಾರಣವಾಗಿರುತ್ತದೆ. ಆ (ದಾಯಾದಿಯು) ಪ್ರಾಣಸಂಬಂಧದಿಂದ ಹೆಂಟೆಯಂತೆ ಪರಾಭೂತನಾಗುತ್ತಾನೆ.

---

1. ಪ್ರಾಣಾತ್ಮಸ್ವರೂಪವನ್ನು ಎಂದರ್ಥ.

ಈ ಫಲವು ಯಾರಿಗೆ? ಎಂದರೆ (ಶ್ರುತಿ) ಹೇಳುತ್ತದೆ. ಯಾವನು ಹೀಗೆಂದು ತಿಳಿಯುತ್ತಾನೋ, ಮೇಲೆ ಹೇಳಿದ ಪ್ರಾಣನು ತಾನೇ ಎಂದು ಹಿಂದಿನ ಯಜಮಾನನಂತೆ ಅರಿತುಕೊಳ್ಳುತ್ತಾನೋ (ಅವನಿಗೆ) ಎಂದರ್ಥ.

## ಮುಖ್ಯಪ್ರಾಣನು ಅಂಗಿರಸನು.

(ಭಾಷ್ಯ)

೬೪. ಫಲಮ್ ಉಪಸಂಹೃತ್ಯ ಅಧುನಾ ಆಖ್ಯಾಯಿಕಾರೂಪಮೇವ ಆಶ್ರಿತ್ಯ ಆಹ। ಕಸ್ಮಾಚ್ಚ ಹೇತೋರ್ವಾಗಾದೀನ್ ಮುಕ್ತ್ವಾ ಮುಖ್ಯ ಏವ ಪ್ರಾಣ ಆತ್ಮತ್ವೇನ ಆಶ್ರಯಿತವ್ಯಃ ಇತಿ ತದುಪಪತ್ತಿನಿರೂಪಣಾಯ ಯಸ್ಮಾತ್ ಅಯಂ ವಾಗಾದೀನಾಂ ಪಿಣ್ಡಾನಾಂ[1] ಚ ಸಾಧಾರಣ ಆತ್ಮಾ ಇತ್ಯೇತಮರ್ಥಮ್ ಆಖ್ಯಾಯಿಕಯಾ ದರ್ಶಯನ್ತೀ ಆಹ ಶ್ರುತಿಃ—

(ಭಾಷ್ಯ)

(ಪ್ರಾಣೋಪಾಸನೆಯ) ಫಲವನ್ನು ಉಪಸಂಹಾರಮಾಡಿ (ಶ್ರುತಿಯು) ಆಖ್ಯಾಯಿಕಾರೂಪವನ್ನೇ ಆಶ್ರಯಿಸಿಕೊಂಡು (ಮುಂದಕ್ಕೆ) ಹೇಳುತ್ತಿದೆ.[2] ವಾಗಾದಿಗಳನ್ನು ಬಿಟ್ಟು ಮುಖ್ಯಪ್ರಾಣನೇ ಆತ್ಮನೆಂದು ಆಶ್ರಯಿಸಬೇಕೆನ್ನುವದಕ್ಕೆ ಕಾರಣವಾದರೂ ಏನು ಎಂದರೆ ಅದಕ್ಕೆ ಯುಕ್ತಿಯನ್ನು ತಿಳಿಸುವದಕ್ಕಾಗಿ ಈ ಪ್ರಾಣನು ವಾಗಾದಿಗಳಿಗೂ ಶರೀರಗಳಿಗೂ[3] ಸಾಧಾರಣವಾಗಿರುವ ಆತ್ಮನಾಗಿರುತ್ತಾನೆ. ಆದ್ದರಿಂದ (ಅವನನ್ನೇ ಆತ್ಮನೆಂದು ಉಪಾಸನೆಮಾಡಬೇಕು) ಎಂಬೀ ವಿಷಯವನ್ನು ಆಖ್ಯಾಯಿಕೆಯಿಂದ ತಿಳಿಸುವದಕ್ಕಾಗಿ ಶ್ರುತಿಯು ಹೀಗೆನ್ನುತ್ತಿದೆ :—

(ಉಪನಿಷತ್ತು)

**ತೇ ಹೋಚುಃ ಕ್ವ ನು ಸೋಽಭೂದ್ ಯೋ ನ ಇತ್ಥಮಸಕ್ತೇತ್ಯಯಮಾಸ್ಯೇಽನ್ತರಿತಿ ಸೋಽಯಾಸ್ಯ ಆಙ್ಗಿರಸೋಽಙ್ಗಾನಾಂ ಹಿ ರಸಃ॥೮॥**

೮. ಅವರು "ನಮ್ಮನ್ನು ಹೀಗೆ ಸೇರಿಸಿದನಲ್ಲ, ಅವನು ಎಲ್ಲಿದ್ದನು?'' ಎಂದರು. ಇವನು ಆಸ್ಯದಲ್ಲಿ ಒಳಗೆ ಇವಾನೆ (ಎಂದು

---

1. 'ಪಿಣ್ಡಾದೀನಾಂ' ಎಂಬಲ್ಲಿ 'ಆದಿ' ಹೆಚ್ಚೆಂದು ಬಿಟ್ಟಿದೆ. •

2. ಇದು ಪ್ರಾಣನ ಗುಣಗಳನ್ನು ಉಪಾಸನೆಗೆ ತಿಳಿಸುವದಕ್ಕಾಗಿ.

3. 'ಪಿಣ್ಡಾದೀನಾಮ್' ಎಂಬ ಪಾಠವನ್ನು ಇಟ್ಟುಕೊಂಡು ಶರೀರಾವಯವಗಳಿಗೂ ಎಂಬರ್ಥವನ್ನು ವ್ಯಾಖ್ಯಾನದಲ್ಲಿ ತೆಗೆದಿದೆ.

ನಿಶ್ಚಯಿಸಿದರು). ಅವನು ಅಯಾಸ್ಯ ಆಂಗಿರಸನು, ಅವನು ಅಂಗಗಳಿಗೆ ರಸವಲ್ಲವೆ ?

(ಭಾಷ್ಯ)

೬೫. ತೇ ಪ್ರಜಾಪತಿಪ್ರಾಣಾಃ ಮುಖ್ಯೇನ ಪ್ರಾಣೇನ ಪರಿಪ್ರಾಪಿತದೇವ ಸ್ವರೂಪಾಃ ಹ ಊಚುಃ ಉಕ್ತವನ್ತಃ ಫಲಾವಸ್ಥಾಃ। ಕಿಮಿತಿ? ಆಹಃ। ಕ್ವ ನು ಇತಿ ವಿತರ್ಕೇ। ಕ್ವ ನು ಕಸ್ಮಿನ್ ನು ಸೋಽಭೂತ್। ಕಃ ? ಯೋ ನಃ ಅಸ್ಮಾನ್ ಇತ್ಥಮ್ ಏವಮ್ ಅಸಕ್ತ ಸಞ್ಜಿತವಾನ್ ದೇವಭಾವಮ್ ಆತ್ಮತ್ವೇನ ಉಪ ಗಮಿತವಾನ್। ಸ್ಮರನ್ತಿ ಹಿ ಲೋಕೇ ಕೇನಚಿತ್ ಉಪಕೃತಾಃ ಉಪಕಾರಿಣಮ್। ಲೋಕವದೇವ ಸ್ಮರನ್ತೋ ವಿಚಾರಯಮಾಣಾಃ ಕಾರ್ಯಕರಣಸಂಘಾತೇ ಆತ್ಮ ನ್ಯೇವ ಉಪಲಬ್ಧವನ್ತಃ। ಕಥಮ್? ಅಯಮ್ ಆಸ್ಯೇಽನ್ತರಿತಿ। ಆಸ್ಯೇ ಮುಖೇ ಯ ಆಕಾಶಃ ತಸ್ಮಿನ್ ಅನ್ತಃ ಅಯಂ ಪ್ರತ್ಯಕ್ಷೋ ವರ್ತತ ಇತಿ। ಸರ್ವೋ ಹಿ ಲೋಕಃ ವಿಚಾರ್ಯ ಅಧ್ಯವಸ್ಯತಿ। ತಥಾ ದೇವಾಃ। ಯಸ್ಮಾತ್ ಅಯಮ್ ಅನ್ತರಾಕಾಶೇ ವಾಗಾದ್ಯಾತ್ಮತ್ವೇನ ವಿಶೇಷಮ್ ಅನಾಶ್ರಿತ್ಯ ವರ್ತಮಾನಃ ಉಪ ಲಬ್ಧೋ ದೇವೈಃ ತಸ್ಮಾತ್ ಸ ಪ್ರಾಣಃ ಅಯಾಸ್ಯಃ ವಿಶೇಷಾನಾಶ್ರಯಾಚ್ಚ ಅಸಕ್ತ ಸಞ್ಜಿತವಾನ್ ವಾಗಾದೀನ್। ಅತ ಏವ ಆಙ್ಗಿರಸಃ ಆತ್ಮಾ ಕಾರ್ಯಕರಣಾ ನಾಮ್। ಕಥಮ್ ಆಙ್ಗಿರಸಃ? ಪ್ರಸಿದ್ಧಂ ಹ್ಯೇತತ್ ಅಙ್ಗಾನಾಂ ಕಾರ್ಯ ಕರಣಲಕ್ಷಣಾನಾಂ ರಸಃ ಸಾರಃ ಆತ್ಮೇತ್ಯರ್ಥಃ। ಕಥಂ ಪುನರಙ್ಗರಸತ್ವಮ್ ? ತದಪಾಯೇ ಶೋಷಪ್ರಾಪ್ತೇಃ ಇತಿ ವಕ್ಷ್ಯಾಮಃ। ಯಸ್ಮಾಚ್ಚ ಅಯಮ್ ಅಙ್ಗ ರಸತ್ವಾತ್ ವಿಶೇಷಾನಾಶ್ರಿತತ್ವಾಚ್ಚ ಕಾರ್ಯಕರಣಾನಾಂ ಸಾಧಾರಣ ಆತ್ಮಾ ವಿಶುದ್ಧಶ್ಚ। ತಸ್ಮಾತ್ ವಾಗಾದೀನ್ ಅಪಾಸ್ಯ ಪ್ರಾಣ ಏವ ಆತ್ಮತ್ವೇನ ಆಶ್ರಯಿತವ್ಯಃ ಇತಿ ವಾಕ್ಯಾರ್ಥಃ। ಆತ್ಮಾ ಹಿ ಆತ್ಮತ್ವೇನ ಉಪಗನ್ತವ್ಯಃ। ಅವಿಪರೀತಬೋಧಾತ್ ಶ್ರೇಯಃಪ್ರಾಪ್ತೇಃ ವಿಪರ್ಯಯೇ ಚ ಅನಿಷ್ಟಪ್ರಾಪ್ತಿದರ್ಶನಾತ್ ॥

(ಭಾಷ್ಯಾರ್ಥ)

ಆ ಪ್ರಜಾಪತಿಯ ಪ್ರಾಣಗಳು, ಮುಖ್ಯಪ್ರಾಣನಿಂದ ದೇವಸ್ವರೂಪವನ್ನು ಪಡೆದುಕೊಂಡವರಾಗಿ ಆ ಫಲಾವಸ್ಥೆಯಲ್ಲಿ[1] ಎಂದರು, ಹೀಗೆಂದರು. ಏನೆಂದು ? (ಎಂದರೆ ಶ್ರುತಿ) ಹೇಳುತ್ತದೆ. 'ಕ್ವ ನು' (ಎಂಬಲ್ಲಿ ನು) ಎಂಬುದು ವಿತರ್ಕಾರ್ಥ ದಲ್ಲಿ (ಪ್ರಯುಕ್ತವಾಗಿರುತ್ತದೆ). ಕ್ವ ನು ಎಂದರೆ ಅವನು ಎಲ್ಲಿ, ಏತರಲ್ಲಿ ಇದ್ದಿ ದ್ದಾನು ? (ಅವನು ಎಂದರೆ) ಯಾರು ? ಯಾವನು (ನಃ=ಅಸ್ಮಾನ್) ನಮ್ಮ

---

1. ದೇವತಾರೂಪವನ್ನು ಪಡೆದ ಅವಸ್ಥೆಯಲ್ಲಿ.

ಗಳನ್ನು ಹೀಗೆ ಈ ರೀತಿಯಲ್ಲಿ ಸೇರಿಸಿದನಲ್ಲ, ಹೊಂದಿಸಿದನಲ್ಲ, ದೇವತ್ವವನ್ನು ಸ್ವರೂಪವಾಗಿ ಪಡೆಯಿಸಿದನಲ್ಲ, (ಅವನು ಎಲ್ಲಿದ್ದಾನು) ?[1] ಲೋಕದಲ್ಲಿ ಯಾರಾದ ರೊಬ್ಬರಿಂದ ಉಪಕೃತರಾದವರು(ಆ)ಉಪಕಾರಿಯನ್ನು ಸ್ಮರಿಸಿಕೊಳ್ಳುತ್ತಾರಲ್ಲವೆ ? ಲೋಕದ (ಜನ)ರಂತೆಯೇ (ಆ ಪ್ರಾಣದೇವತೆಗಳು) ಸ್ಮರಿಸಿಕೊಳ್ಳುತ್ತಾ ವಿಚಾರ ಮಾಡಿ ಕಾರ್ಯಕರಣಸಂಘಾತವೆಂಬ ತಮ್ಮಲ್ಲಿಯೇ ಕಂಡುಕೊಂಡರು. ಹೇಗೆ (ಕಂಡುಕೊಂಡರು) ? ಎಂದರೆ ಇವನು ಆಸ್ಯದಲ್ಲಿ ಒಳಗೆ, ಆಸ್ಯದಲ್ಲಿ ಮುಖದಲ್ಲಿ ಆಕಾಶವಿದೆಯಲ್ಲ, ಅದರೊಳಗೆ ಇವನು ಪ್ರತ್ಯಕ್ಷವಾಗಿರುತ್ತಾನೆ ಎಂದು (ಕಂಡು ಕೊಂಡರು). ಪ್ರತಿಯೊಬ್ಬ ಮನುಷ್ಯನೂ ವಿಚಾರಣೆಮಾಡಿ ನಿಶ್ಚಯಿಸುತ್ತಾ ನಲ್ಲವೆ ? ದೇವತೆಗಳೂ ಹಾಗೆಯೇ (ವಿಚಾರಮಾಡಿ ನಿಶ್ಚಯಿಸಿದರು.)

(ಹೀಗೆ) ಇವನು ಒಳಗಿನ ಆಕಾಶದಲ್ಲಿ ವಾಗಾದಿರೂಪದಿಂದ ವಿಶೇಷವನ್ನು ಆಶ್ರಯಿಸದೆ ಇರುವನೆಂದು ದೇವತೆಗಳಿಗೆ ಕಂಡುಬಂದನಷ್ಟೆ, ಆದ್ದರಿಂದ ಆ ಪ್ರಾಣನು ಅಯಾಸ್ಯನು. (ಹೀಗೆ) ವಿಶೇಷವನ್ನು ಆಶ್ರಯಿಸದೆ ಇರುವದರಿಂದ ವಾಗಾದಿಗಳನ್ನು (ದೇವಾದಿಭಾವವನ್ನು ಅಸಕ್ತ=ಸಞ್ಜಿತವಾನ್) ಹೊಂದಿಸಿದನು (ಎಂದು ಹೇಳಲಾಯಿತು). ಆದ್ದರಿಂದಲೇ ಅವನು ಆಂಗಿರಸನು, ಕಾರ್ಯಕರಣ ಗಳ ಆತ್ಮನು ಆಂಗಿರಸನೆಂಬುದು ಹೇಗೆ ? ಎಂದರೆ ಇದು ಪ್ರಸಿದ್ಧವಾಗಿಯೇ ಇರು ತ್ತದೆ. ಕಾರ್ಯಕರಣರೂಪವಾದ ಅಂಗಗಳಿಗೆ (ಇವನು) ರಸವು, ಸಾರವು. ಆತ್ಮನು (ಎಂಬುದು ಹಿ) ಪ್ರಸಿದ್ಧವಾಗಿಯೇ ಇರುತ್ತದೆ. ಅಂಗಗಳ ರಸವೆಂಬುದು ದಾದರೂ ಹೇಗೆ ? ಎಂದರೆ ಅವನು ಹೋದರೆ (ಅವು) ಒಣಗುವದರಿಂದ ಎಂದು ಮುಂದೆ (೧೯ನೆಯ ಕಂಡಿಕೆಯಲ್ಲಿ) ಹೇಳುವೆವು.

ಹೀಗೆ ಇವನು ಅಂಗಗಳ ರಸವಾಗಿರುವದರಿಂದಲೂ (ವಾಗಾದಿಗಳಂತೆ) ವಿಶೇಷವನ್ನು ಆಶ್ರಯಿಸದೆ ಇರುವದರಿಂದಲೂ[2] ಕಾರ್ಯಕರಣಗಳಿಗೆ ಸಾಧಾರಣ ವಾಗಿರುವ ಆತ್ಮನೂ ವಿಶುದ್ಧನೂ ಆಗಿರುವನಷ್ಟೆ. ಆದ್ದರಿಂದ ವಾಗಾದಿಗಳನ್ನು ಬಿಟ್ಟು ಪ್ರಾಣನನ್ನೇ ಆತ್ಮನೆಂದು ಆಶ್ರಯಿಸಬೇಕು ಎಂಬುದು ವಾಕ್ಯದ (ಒಟ್ಟು) ರ್ಥವು. ಆತ್ಮನನ್ನಲ್ಲವೆ, ಆತ್ಮನೆಂದು ಸ್ವೀಕರಿಸಬೇಕು ? ಏಕೆಂದರೆ ಅವಿಪರೀತ ಜ್ಞಾನದಿಂದ ಶ್ರೇಯಸ್ಸು ಪ್ರಾಪ್ತವಾಗುತ್ತದೆ, ವಿಪರೀತ(ಜ್ಞಾನ)ವಾದರೆ ಅನಿಷ್ಟ

---

1. ವಾಗಾದಿಗಳಿಗೆ ಒಂದೊಂದು ವಿಶೇಷಸ್ಥಾನವುಂಟಷ್ಟೆ, ಪ್ರಾಣನಿಗೆ ಯಾವದು ಸ್ಥಾನವು ?

2. ಕಲ್ಯಾಣವದನಾದಿವಿಶೇಷಸಂಬಂಧವಿಲ್ಲದಿರುವದರಿಂದಲೂ ಎಂದರ್ಥ. ಮುಖ್ಯ ಪ್ರಾಣಕ್ಕೆ ವಿಷಯವಿಶೇಷವಿಲ್ಲದ್ದರಿಂದ ವಾಗಾದಿಗಳಂತೆ ವಿಶೇಷವಾದ ಆಶ್ರಯವಿಲ್ಲ. ವಿಶೇಷವಾದ ವ್ಯಾಪಾರವೇನೊ ಇವೆ.

ಪ್ರಾಪ್ತಿಯಾಗುವದು ಕಂಡುಬರುವದರಿಂದಲೂ (ಹೀಗೆಂದು) ನಿಶ್ಚಯಿಸಬೇಕು.[1]

## ಪ್ರಾಣನು ವಿಶುದ್ಧನು

(ಉಪನಿಷತ್ತು)

**ಸಾ ವಾ ಏಷಾ ದೂರ್ನಾಮ ದೂರಗ್ಂ ಹ್ಯಸ್ಯಾ ಮೃತ್ಯುರ್ದೂರಗ್ಂ ಹ ವಾ ಅಸ್ಮಾನ್ಮೃತ್ಯುರ್ಭವತಿ ಯ ಏವಂ ವೇದ ॥೯॥**

೯. ಆ ಈ ದೇವತೆಯು ದೂರ್ ಎಂಬ ಹೆಸರುಳ್ಳದ್ದು, ಏಕೆಂದರೆ ಇದಕ್ಕೆ ಮೃತ್ಯು ದೂರ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನಿಗೆ ಮೃತ್ಯುವು ದೂರವಾಗಿಯೇ ಇರುತ್ತದೆ.

## ಅವಿಶುದ್ಧಿಶಂಕಾಪರಿಹಾರ

(ಭಾಷ್ಯ)

೬೬. ಸ್ಯಾನ್ಮತಂ ಪ್ರಾಣಸ್ಯ ವಿಶುದ್ಧಿರಸಿದ್ಧಾ ಇತಿ। ನನು ಪರಿಹೃತಮೇತತ್ ವಾಗಾದೀನಾಂ ಕಲ್ಯಾಣವದನಾದ್ಯಾಸಙ್ಗವತ್ ಪ್ರಾಣಸ್ಯಾಸಙ್ಗಾಸ್ಪದತ್ವಾಭಾವೇನ। ಬಾಢಮ್। ಕಿಂ ತು ಆಙ್ಗಿರಸತ್ವೇನ ವಾಗಾದೀನಾಮ್ ಆತ್ಮತ್ವೋಕ್ತ್ಯಾ ವಾಗಾದಿದ್ವಾರೇಣ ಶವಸ್ಪೃಷ್ಟಿತತ್ಸ್ಪೃಷ್ಟೇರಿವ ಅಶುದ್ಧತಾ ಶಙ್ಕ್ಯತೇ ಇತಿ। ಆಹ। ಶುದ್ಧ ಏವ ಪ್ರಾಣಃ। ಕುತಃ? ಸಾ ವಾ ಏಷಾ ದೇವತಾ ದೂರ್ನಾಮ। ಯಂ ಪ್ರಾಣಂ ಪ್ರಾಪ್ಯ ಅಶ್ಮಾನಮಿವ ಲೋಷ್ಟವತ್ ವಿಧ್ವಸ್ತಾ ಅಸುರಾಃ। ತಂ ಪರಾಮೃಶತಿ ಸಾ ಇತಿ। ಸೈವ ಏಷಾ ಯೇಯಂ ವರ್ತಮಾನಯಜಮಾನಶರೀರಸ್ಥಾ ದೇವೈರ್ನಿರ್ಧಾರಿತಾ ಅಯಮಾಸ್ಯೇಽನ್ತಃ ಇತಿ। ದೇವತಾ ಚ ಸ್ಯಾತ್ ಉಪಾಸನಕ್ರಿಯಾಯಾಃ ಕರ್ಮಭಾವೇನ ಗುಣಭೂತತ್ವಾತ್। ಯಸ್ಮಾತ್ ಸಾ ದೂರ್ನಾಮ ದೂರಿತ್ಯೇವಂ ಖ್ಯಾತಾ। ನಾಮಶಬ್ದಃ ಖ್ಯಾಪನಪರ್ಯಾಯಃ।

---

1. ಪ್ರಾಣನೇ ನಿಜವಾಗಿ ಆತ್ಮನು; ಆದ್ದರಿಂದ ಅವನನ್ನೇ ಆತ್ಮನೆಂದು ಉಪಾಸನೆ ಮಾಡಿದರೆ ಶ್ರೇಯಃಪ್ರಾಪ್ತಿಯಾಗುತ್ತದೆ, ಅನರ್ಥಪರಿಹಾರವೂ ಆಗುತ್ತದೆ ಎಂದರ್ಥ. ಪ್ರಾಣನಲ್ಲಿ ವಿಶುದ್ಧ್ಯಾದಿಗಳು ನಿಜವಾಗಿಯೂ ಇರುವವೆಂದು ಸ್ಥಾಪಿಸುವದಕ್ಕಾಗಿ ಹಿಂದೆ (ಭಾ. ಭಾ. ೪೯ರಿಂದ ೫೬ರವರೆಗೆ ಚರ್ಚೆಮಾಡಿದ್ದು ಈ ಕಾರಣದಿಂದಲೇ ಎಂಬುದನ್ನು ಈ ಉಪಸಂಹಾರವಾಕ್ಯವು ಸೂಚಿಸುತ್ತದೆ. ಪರಮಾರ್ಥದೃಷ್ಟಿಯಿಂದ ನೋಡಿದಾಗ ನಿರ್ವಿಶೇಷಪರಮಾತ್ಮನೇ ನಿಜವಾಗಿ ಆತ್ಮನಾದರೂ ಪ್ರಕೃತದಲ್ಲಿ ವ್ಯಾವಹಾರಿಕದೃಷ್ಟಿಯಿಂದ ಪ್ರಾಣನೇ ಆತ್ಮನೆಂದು ಹೇಳಿರುವದು ಅದಕ್ಕೆ ವಿರುದ್ಧವಲ್ಲ.

ತಸ್ಮಾತ್ ಪ್ರಸಿದ್ಧಾ ಅಸ್ಯಾ ವಿಶುದ್ಧಿಃ। ದೂರ್ನಾಮತ್ವಾತ್। ಕುತಃ ಪುನಃ ದೂರ್ನಾಮತ್ವಮಿತಿ ? ಆಹ। ದೂರಂ ದೂರೇ ಹಿ ಯಸ್ಮಾತ್ ಅಸ್ಯಾಃ ಪ್ರಾಣದೇವತಾಯಾಃ ಮೃತ್ಯುಃ ಆಸಙ್ಗಲಕ್ಷಣಃ ಪಾಪ್ಮಾ ಅಸಂಶ್ಲೇಷಧರ್ಮಿತ್ವಾತ್ ಪ್ರಾಣಸ್ಯ ಸಮೀಪಸ್ಥಸ್ಯಾಪಿ ದೂರತಾ ಮೃತ್ಯೋಃ। ತಸ್ಮಾತ್ ದೂರಿತ್ಯೇವಂ ಖ್ಯಾತಿರೇವ ಪ್ರಾಣಸ್ಯ ವಿಶುದ್ಧಿಜ್ಞಾಪಿಕಾ ॥

(ಭಾಷ್ಯಾರ್ಥ)

(ಶಂಕೆ) :— ಪ್ರಾಣನು ವಿಶುದ್ಧನೆಂಬುದು ಸಿದ್ಧವಿಲ್ಲ ಎಂದು (ಯಾರಿಗಾದರೂ) ಅಭಿಪ್ರಾಯವುಂಟಾಗಬಹುದು.

(ಸಿದ್ಧಾಂತಿ) :— ವಾಗಾದಿಗಳಿಗೆ ಕಲ್ಯಾಣವನ್ನು ನುಡಿಯುವದೇ ಮುಂತಾದದ್ದರಲ್ಲಿ ಆಸಂಗವಿರುವಂತೆ ಪ್ರಾಣನು ಆಸಂಗಕ್ಕೆ ಆಸ್ಪದನಲ್ಲ ಎಂದು ಈ (ಶಂಕೆಯನ್ನು ಆಗಲೇ) ಪರಿಹರಿಸಿದ್ದೆವಲ್ಲ !

(ಶಂಕೆ) :— ನಿಜ. ಆದರೆ (ಪ್ರಾಣನು) ಆಂಗಿರಸನಾಗಿರುವದರಿಂದ ವಾಗಾದಿಗಳ ಆತ್ಮನೆಂದು ಹೇಳಿರುವದರಿಂದ ಶವವನ್ನು ಮುಟ್ಟುವದು, ಆ (ಮುಟ್ಟಿದವರನ್ನು) ಮುಟ್ಟುವದು, (ಇವುಗಳಿಂದಾಗುವ ಅಶುದ್ಧಿ)ಯಂತೆ[1] (ಪ್ರಾಣನೂ) ವಾಗಾದಿಗಳ ಮೂಲಕವಾಗಿ ಅಶುದ್ಧನೆಂದು ಶಂಕಿಸಬಹುದು.

(ಪರಿಹಾರ) :— ಇದಕ್ಕೆ(ಶ್ರುತಿ) ಹೇಳುವದೇನೆಂದರೆ ಪ್ರಾಣನು ಶುದ್ಧನೇ. ಏಕೆ ? ಎಂದರೆ ಆ ಈ ದೇವತೆಯು ದೂರ್ ಎಂಬ ಹೆಸರುಳ್ಳದ್ದು.[2] ಯಾವ ಪ್ರಾಣನನ್ನು ಸೇರಿ ಕಲ್ಲಮೇಲೆ ಬಿದ್ದ ಮಣ್ಣುಹೆಂಟೆಯಂತೆ ಅಸುರರು ವಿಧ್ವಸ್ತರಾದರೋ ಆ (ಪ್ರಾಣನನ್ನು) 'ಆ' ಎಂಬ (ಮಾತಿನಿಂದ) ಪರಾಮರ್ಶಿಸಿರುತ್ತದೆ. ಆ (ದೇವತೆಯು) ಈಗಿನ ಯಜಮಾನನ ಶರೀರದಲ್ಲಿದ್ದುಕೊಂಡು 'ಇವನು ಆಸ್ಯದ ಒಳಗೆ ಇರುತ್ತಾನೆ' ಎಂದು ದೇವತೆಗಳಿಂದ ನಿರ್ಧಾರವಾಯಿತಲ್ಲ, ಇದೇ. ಅದು ದೇವತೆಯೂ ಆಗಿರುವದು; ಏಕೆಂದರೆ ಉಪಾಸನಾಕ್ರಿಯೆಗೆ ಕರ್ಮವಾಗಿರು

---

1. ಗೌ. ಧ. ಸೂ. ೨-೫-೨೦ರ ಸೂಚನೆ. ಇಂಥಿಂಥವರ ಶವವನ್ನು ಮುಟ್ಟಿದರೆ ಆಗುವ ಅಶುದ್ಧಿಯು ಅದನ್ನು ಮುಟ್ಟಿದವರನ್ನು ಮುಟ್ಟಿದರೂ ಆಗುವದೆಂದು ಅವರ ಶುದ್ಧಿಗಾಗಿ ಸಚೈಲಸ್ನಾನವನ್ನು ಅಲ್ಲಿ ಹೇಳಿದೆ. ವಾಗಾದಿಗಳು ಅಶುದ್ಧರಾಗಿರುವದರಿಂದ ಅವರ ಸಂಬಂಧವುಳ್ಳ ಪ್ರಾಣನೂ ಅಶುದ್ಧನಾದನೆಂದು ಶಂಕಿಸಬಹುದಲ್ಲ ಎಂದು ಅಭಿಪ್ರಾಯ.

2. ವಾಗಾದಿಗಳನ್ನು ಬಿಟ್ಟು ಪ್ರಾಣನನ್ನೇ ಉಪಾಸನೆಮಾಡಬೇಕು ಎಂಬುದಕ್ಕೆ ಕಾರಣವನ್ನು ಹೇಳುವದಕ್ಕಾಗಿ ಇಲ್ಲಿ ಶಂಕೆಯನ್ನು ತೆಗೆದು ದೂರ್ನಾಮವುಳ್ಳವನೆಂಬ ಗುಣವನ್ನು ಹೇಳಿದೆ. ದೂರ್ಗುಣತ್ವವನ್ನು ಹೇಳುವ ಮುಂಚೆ ಉಪಾಸ್ಯತ್ವವು ಸಿದ್ಧವಾಗುವದಿಲ್ಲ. ಆದ್ದರಿಂದ ಇದು ಗುಣವಿಧಿಯಲ್ಲ. ವಿಶಿಷ್ಟಬುದ್ಧಿಯನ್ನೇ ಇಲ್ಲಿ ವಿಧಿಸಿದೆ. ಬೃ.ವಾ.

ವದರಿಂದ ಗುಣಭೂತವಾಗಿರುತ್ತದೆ[1]. ಆ (ದೇವತೆಯು) ದೂರ್ನಾಮ ಎಂದರೆ ದೂರ್ ಎಂದು ಪ್ರಖ್ಯಾತವಾಗಿರುವದಷ್ಟೆ-ಇಲ್ಲಿ (ಮೂಲದಲ್ಲಿರುವ) ನಾಮಶಬ್ದವು ಖ್ಯಾತಿಯನ್ನು ಹೇಳುವ ಪರ್ಯಾಯವಾಗಿರುತ್ತದೆ. -ಆದ್ದರಿಂದ ದೂರೆಂಬ ಹೆಸರುಳ್ಳದ್ದಾದ್ದರಿಂದ ಈ (ದೇವತೆಯು) ವಿಶುದ್ಧವಾಗಿರುವದೆಂದು ಪ್ರಸಿದ್ಧ ವಾಗಿರುತ್ತದೆ. ಇದಕ್ಕೆ ದೂರ್ ಎಂಬ ಹೆಸರು ಹೇಗೆ ? ಎಂದರೆ (ಶ್ರುತಿ) ಹೇಳು ತ್ತದೆ. ಹೇಗೆಂದರೆ ಈ ಪ್ರಾಣದೇವತೆಗೆ ಆಸಂಗರೂಪವಾದ ಪಾಪವೆಂಬ ಮೃತ್ಯುವು ದೂರ, ದೂರದಲ್ಲಿರುತ್ತದೆ. ಏಕೆಂದರೆ ಪ್ರಾಣನು ಅಂಟಿಕೊಳ್ಳುವ (ಸ್ವಭಾವದ) ವಸ್ತುವಲ್ಲವಾದ್ದರಿಂದ ಮೃತ್ಯು ಹತ್ತಿರವೇ ಇದ್ದರೂ ದೂರವಾಗಿರುತ್ತದೆ. ಆದ್ದ ರಿಂದ ದೂರ್ ಎಂಬ ಹೆಸರೇ ಪ್ರಾಣನು ವಿಶುದ್ಧನು ಎಂಬಿದನ್ನು ತಿಳಿಸಿಕೊಡು ತ್ತದೆ.

## ವಿಶುದ್ಧಿಗುಣವಿಶಿಷ್ಟೋಪಾಸನೆಯ ಫಲ

(ಭಾಷ್ಯ)

೬೭. ವಿದುಷಃ ಫಲಮುಚ್ಯತೇ ದೂರಂ ಹ ವಾ ಅಸ್ಮಾನ್ ಮೃತ್ಯುರ್ಭವತಿ। ಅಸ್ಮಾತ್ ಏವಂವಿದೋ ಯ ಏವಂ ವೇದ ತಸ್ಮಾತ್। ಏವಮ್ ಇತಿ ಪ್ರಕೃತಂ ವಿಶುದ್ಧಿಗುಣೋಪೇತಂ ಪ್ರಾಣಮ್ ಉಪಾಸ್ತೇ ಇತ್ಯರ್ಥಃ। ಉಪಾಸನಂ ನಾಮ ಉಪಾಸ್ಯಾರ್ಥವಾದೇ ಯಥಾ ದೇವತಾದಿಸ್ವರೂಪಂ ಶ್ರುತ್ಯಾ ಜ್ಞಾಪ್ಯತೇ ತಥಾ ಮನಸಾ ಉಪಗಮ್ಯ ಆಸನಂ ಚಿನ್ತನಂ ಲೌಕಿಕಪ್ರತ್ಯಯಾವ್ಯವಧಾನೇನ ಯಾವತ್ ತದ್ದೇವತಾದಿಸ್ವರೂಪಾತ್ಮಾಭಿಮಾನಾಭಿವ್ಯಕ್ತಿಃ (ಇತಿ)[2]। ಲೌಕಿಕಾತ್ಮಾಭಿಮಾನವತ್। "ದೇವೋ ಭೂತ್ವಾ ದೇವಾನಪ್ಯೇತಿ" (೪-೧-೨) "ಕಿಂ ದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸಿ" (೩-೯-೨೦) ಇತ್ಯೇವಮಾದಿಶ್ರುತಿಭ್ಯಃ ॥

(ಭಾಷ್ಯಾರ್ಥ)

ಉಪಾಸಕನಿಗೆ ಫಲವನ್ನು(ಶ್ರುತಿ)ಹೇಳುತ್ತಿದೆ. 'ಅವನಿಗೆ ಮೃತ್ಯುವು ದೂರ ವಾಗಿಯೇ ಇರುತ್ತದೆ.' ಅವನಿಗೆ ಎಂದರೆ ಹೀಗೆಂದು ಅರಿತುಕೊಂಡವನಿಗೆ, ಯಾವನು ಹೀಗೆಂದು ಅರಿತುಕೊಳ್ಳುವನೋ ಅವನಿಗೆ. 'ಹೀಗೆ' ಎಂದರೆ ಪ್ರಕೃತವಾಗಿರುವ ವಿಶುದ್ಧಿಗುಣದಿಂದ ಕೂಡಿದ ಪ್ರಾಣನನ್ನು(ಯಾವನು) ಉಪಾಸನೆಮಾಡುತ್ತಾನೋ (ಅವನಿಗೆ) ಎಂದರ್ಥ. **ಉಪಾಸನೆ ಎಂದರೆ ಉಪಾಸ್ಯಾರ್ಥವಾದದಲ್ಲಿ ಹೇಗೆ**

---

1. ಹೇಗೆ ಯಾಗವೆಂಬ ಕ್ರಿಯೆಯಲ್ಲಿ ದ್ರವ್ಯವೇ ಮುಂತಾದವುಗಳು ಕಾರಕರೂಪದಿಂದ ಗುಣಭೂತವಾಗಿರುವವೋ ಹಾಗೆಯೇ ಇಲ್ಲಿ ಪ್ರಾಣನು ಉಪಾಸನಾಕ್ರಿಯೆಗೆ ಗುಣಭೂತನಾಗಿರುವ ದೇವತೆ.

2. ಈ ಇತಿಯು ಇಲ್ಲದಿದ್ದರೂ ಆಗುತ್ತದೆ. ಆದರೆ ಅಚ್ಚಿನ ಪುಸ್ತಕಗಳಲ್ಲೆಲ್ಲ ಇದೆ.

**ದೇವತಾದಿಸ್ವರೂಪವನ್ನು ಶ್ರುತಿಯು ತಿಳಿಸುತ್ತದೆಯೋ ಹಾಗೆ ಮನಸ್ಸಿನಿಂದ ಅದರ ಬಳಿಗೆ ಬಂದು ('ಉಪ') ಕುಳಿತಿರುವದು ('ಆಸನಮ್'), ಎಂದರೆ ಲೋಕದ (ವಸ್ತುಗಳ) ಪ್ರತ್ಯಯವು ನಡುವೆ ಬಾರದಂತೆ ಆ ದೇವತೆಯೇ ಮುಂತಾದದ್ದರ ಸ್ವರೂಪವೇ ತಾನೆಂಬ ಅಭಿಮಾನವು ಲೌಕಿಕವಾದ (ದೇಹಾದಿಗಳು) ತಾನೆಂಬ ಅಭಿಮಾನದಂತೆ (ಗಟ್ಟಿಯಾಗಿ) ಹೊರತೋರು ವವರೆಗೂ[1] ಚಿಂತಿಸುತ್ತಿರುವದು.** "ದೇವನಾಗಿ ದೇವರುಗಳಲ್ಲಿ ಲಯವಾಗುತ್ತಾನೆ"[2] (೪-೧-೨), "ಈ ಪೂರ್ವದಿಕ್ಕಿನಲ್ಲಿ ಯಾವ ದೇವತೆಯುಳ್ಳವನಾಗಿರುವೆ"[3] (೩-೯-೨೦) ಎಂಬಿವೇ ಮುಂತಾದ ಶ್ರುತಿಗಳಿಂದ (ಇದು ಗೊತ್ತಾಗುತ್ತದೆ).

## ಪ್ರಾಣನು ದೇವತೆಗಳ ಪಾಪವನ್ನು ದೂರವಾಗಿರಿಸಿದ್ದು

(ಉಪನಿಷತ್ತು)

**ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯ ಯತ್ರಾಸಾಂ ದಿಶಮನ್ತಸ್ತದ್ಗಮಯಾಂಚಕಾರ ತದಾಸಾಂ ಪಾಪ್ಮನೋಽವಿನ್ಯದಧಾತ್ ತಸ್ಮಾನ್ನ ಜನಮಿಯಾನ್ನಾನ್ತಮಿಯಾನ್ನೇತ್ ಪಾಪ್ಮಾನಂ ಮೃತ್ಯುಮನ್ವವಾಯಾನೀತಿ ॥ ೧೦ ॥**

೧೦. ಆ ಈ ದೇವತೆಯು ಇದೆಯಲ್ಲ (ಅದು) ಈ ದೇವತೆಗಳ ಪಾಪವೆಂಬ ಮೃತ್ಯುವನ್ನು ತೆಗೆದುಹಾಕಿ ಎಲ್ಲಿ ಈ ದಿಕ್ಕುಗಳ ಅಂತವೋ ಆ (ದೇಶಭಾಗ)ವನ್ನು ತಲುಪಿಸಿತು. ಅಲ್ಲಿ ಈ (ದೇವತೆ)ಗಳ ಪಾಪಗಳನ್ನು ವಿಂಗಡಿಸಿಟ್ಟನು. ಆದ್ದರಿಂದ ಆ ಜನವನ್ನು ಸೇರಬಾರದು. ಆ ಅಂಶವನ್ನು, ಪಾಪವೆಂಬ ಮೃತ್ಯುವನ್ನು ಸೇರಿಯೇನಲ್ಲ– ಎಂಬ ಅಂಜಿಕೆಯಿಂದ ಸೇರಬಾರದು.

## ಪ್ರಾಣೋಪಾಸಕನಿಗೆ ಮೃತ್ಯು ದೂರವಾಗಿರುವದೆಂಬುದು ಹೇಗೆ?

(ಭಾಷ್ಯ)

೬೮. "ಸಾ ವಾ ಏಷಾ ದೇವತಾ"। ದೂರಂ ಹ ವಾ ಅಸ್ಮಾನ್ಮೃತ್ಯುರ್ಭವತಿ ಇತ್ಯುಕ್ತಮ್ । ಕಥಂ ಪುನರೇವಂವಿದೋ ದೂರಂ ಮೃತ್ಯುರ್ಭವತೀತಿ ? ಉಚ್ಯತೇ।

---

1. ಇದೇ ಸಾಕ್ಷಾತ್ಕಾರವು.

2. ದೇವತೆಯೇ ತಾನೆಂಬ ಅಭಿಮಾನವುಂಟಾಗಿ ಆ ಸಾಕ್ಷಾತ್ಕಾರದಿಂದೊಡಗೂಡಿ ಸತ್ತ ಬಳಿಕ ಆಯಾ ದೇವತೆಯಲ್ಲಿ ಸೇರಿಹೋಗುತ್ತಾನೆ ಎಂದರ್ಥ.

3. ಯಾವ ದೇವತೆಯಿಂದ ನೀನು ಪೂರ್ವದಿಗ್ರೂಪನಾಗಿರುವೆ? ಯಾವ ದೇವತೆಯ ಸಾಕ್ಷಾತ್ಕಾರದಿಂದ ಈ ರೂಪವನ್ನು ತಾಳಿದೆ ?– ಎಂದರ್ಥ.

ಏವಂವಿತ್ತ್ವವಿರೋಧಾತ್। ಇನ್ದ್ರಿಯವಿಷಯಸಂಸರ್ಗಾಸಙ್ಗಜೋ ಹಿ ಪಾಪ್ಮಾ ಪ್ರಾಣಾತ್ಮಾಭಿಮಾನಿನೋ ವಿರುಧ್ಯತೇ। ವಾಗಾದಿವಿಶೇಷಾತ್ಮಾಭಿಮಾನಹೇತುತ್ವಾತ್, ಸ್ವಾಭಾವಿಕಾಜ್ಞಾನಹೇತುತ್ವಾಚ್ಚ। ಶಾಸ್ತ್ರಜನಿತೋ ಹಿ ಪ್ರಾಣಾತ್ಮಾಭಿಮಾನಃ। ತಸ್ಮಾತ್ ಏವಂವಿದಃ ಪಾಪ್ಮಾ ದೂರಂ ಭವತಿ ಇತಿ ಯುಕ್ತಮ್। ವಿರೋಧಾತ್। ತದೇತತ್ ಪ್ರದರ್ಶಯತಿ– 'ಸಾ ವಾ ಏಷಾ ದೇವತಾ' ಇತ್ಯಕ್ತಾರ್ಥಮ್। ಏತಾಸಾಂ ವಾಗಾದೀನಾಂ ದೇವತಾನಾಂ ಪಾಪ್ಮಾನಂ ಸ್ವಾಭಾವಿಕಾಜ್ಞಾನಪ್ರಯುಕ್ತೇನ್ದ್ರಿಯವಿಷಯಸಂಸರ್ಗಾಸಙ್ಗಜನಿತೇನ ಹಿ ಪಾಪ್ಮನಾ ಸರ್ವೋ ಮ್ರಿಯತೇ। ಸ ಹಿ ಅತೋ ಮೃತ್ಯುಃ। ತಂ ಪ್ರಾಣಾತ್ಮಾಭಿಮಾನರೂಪಾಭ್ಯೋ ದೇವತಾಭ್ಯೋಽಪಚ್ಛಿದ್ಯ ಅಪಹತ್ಯ। ಪ್ರಾಣಾತ್ಮಾಭಿಮಾನಮಾತ್ರತಯೈವ ಪ್ರಾಣಃ 'ಅಪಹನ್ತಾ' ಇತ್ಯುಚ್ಯತೇ। ವಿರೋಧಾದೇವ ತು ಪಾಪ್ಮಾ ಏವಂವಿದೋ ದೂರಂ ಗತೋ[1] ಭವತಿ। ಕಿಂ ಪುನಶ್ಚಕಾರ ದೇವತಾನಾಂ ಮೃತ್ಯುಮ್ ಅಪಹತ್ಯೇತಿ? ಉಚ್ಯತೇ। ಯತ್ರ ಯಸ್ಮಿನ್ ಆಸಾಂ ಪ್ರಾಚ್ಯಾದೀನಾಂ ದಿಶಾಮ್ ಅನ್ತಃ ಅವಸಾನಮ್ ತತ್ ತತ್ರ ಗಮಯಾಂಚಕಾರ ಗಮನಂ ಕೃತವಾನ್ ಇತ್ಯೇತತ್। ನನು ನಾಸ್ತಿ ದಿಶಾಮ್ ಅನ್ತಃ। ಕಥಮನ್ತಂ ಗಮಿತವಾನಿತಿ? ಉಚ್ಯತೇ। ಶ್ರೌತವಿಜ್ಞಾನವಜ್ಜನಾವಧಿನಿಮಿತ್ತಕಲ್ಪಿತತ್ವಾದ್ದಿಶಾಂ ತದ್ವಿರೋಧಿಜನಾಧ್ಯುಷಿತ ಏವ ದೇಶೋ ದಿಶಾಮನ್ತಃ। 'ದೇಶಾನ್ತೋಽರಣ್ಯಮ್' ಇತಿ ಯದ್ವತ್ ಇತ್ಯದೋಷಃ। ತತ್ ತತ್ರ ಗಮಯಿತ್ವಾ ಆಸಾಂ ದೇವತಾನಾಂ ಪಾಪ್ಮನಃ ಇತಿ ದ್ವಿತೀಯಾಬಹುವಚನಮ್। ವ್ಯದಧಾತ್ ವಿವಿಧಂ ನ್ಯಗ್ಭಾವೇನ ಅದಧಾತ್ ಸ್ಥಾಪಿತವತೀ ಪ್ರಾಣದೇವತಾ ಪ್ರಾಣಾತ್ಮಾಭಿಮಾನಶೂನ್ಯೇಷು ಅನ್ತಜನೇಷು ಇತಿ ಸಾಮರ್ಥ್ಯಾತ್। ಇನ್ದ್ರಿಯಸಂಸರ್ಗಜೋ ಹಿ ಸಃ ಇತಿ ಪ್ರಾಣ್ಯಾಶ್ರಯತಾ ಅವಗಮ್ಯತೇ। ತಸ್ಮಾತ್ ತಮ್ ಅನ್ತ್ಯಂ ಜನಂ ನೇಯಾತ್ ನ ಗಚ್ಛೇತ್ ಸಂಭಾಷಣದರ್ಶನಾದಿಭಿಃ ನ ಸಂಸೃಜೇತ್। ತತ್ಸಂಸರ್ಗೇ ಪಾಪ್ಮನಾ ಸಂಸರ್ಗಃ ಕೃತಃ ಸ್ಯಾತ್ ಪಾಪ್ಮಾಶ್ರಯೋ ಹಿ ಸಃ। ತಜ್ಜನನಿವಾಸಂ ಚ ಅನ್ತಂ ದಿಗನ್ತಶಬ್ದವಾಚ್ಯಂ ನೇಯಾತ್ ಜನಶೂನ್ಯಮಪಿ। ಜನಮಪಿ ತದ್ದೇಶವಿಯುಕ್ತಮ್ ಇತ್ಯಭಿಪ್ರಾಯಃ। 'ನೇತ್' ಇತಿ ಪರಿಭಯಾರ್ಥೇ ನಿಪಾತಃ। ಇತ್ಥಂ ಜನಸಂಸರ್ಗೇ ಪಾಪ್ಮಾನಂ ಮೃತ್ಯುಮ್ ಅನ್ವವಾಯಾನಿ ಇತಿ। ಅನು ಅವ ಅಯಾನಿ ಇತಿ ಅನುಗಚ್ಛೇಯಮ್ ಇತ್ಯೇವಂ ಭೀತೋ ನ ಜನಮನ್ತಂ ಚ ಇಯಾತ್ ಇತಿ ಪೂರ್ವೇಣ ಸಂಬನ್ಧಃ॥

(ಭಾಷ್ಯಾರ್ಥ)

"ಸಾ ವಾ ಏಷಾ ದೇವತಾ" (ಎಂಬುದರ ಸಂಬಂಧವೇನೆಂದರೆ)[2]: ಇವನಿಗೆ ಮೃತ್ಯುವು ದೂರವಾಗಿರುತ್ತದೆ ಎಂದು ಹೇಳಿದ್ದಾಗಿದೆ(ಯಷ್ಟೆ). ಹೀಗೆಂದರಿತು

1. 'ದೂರಂಗಮೋ' ಎಂಬ ಪಾಠಕ್ಕಿಂತ ಈ ಪಾಠವು ಮೇಲು.
2. ಇದರ ಮುಂದಿರುವ 'ಹಿ' ಹೆಚ್ಚೆಂದು ಬಿಟ್ಟಿದೇವೆ.

ಕೊಂಡವನಿಗೆ ಮೃತ್ಯುವು ದೂರವಾಗಿರುತ್ತದೆ ಎಂಬುದು ಹೇಗೆ? ಎಂದರೆ ಹೇಳುತ್ತೇವೆ. ಏಕೆಂದರೆ ಹೀಗೆಂದರಿತಿರುವದಕ್ಕೆ (ಅದು) ವಿರುದ್ಧವಾಗಿರುತ್ತದೆ. ಇಂದ್ರಿಯಗಳಿಗೂ ವಿಷಯಗಳಿಗೂ (ಆಗುವ) ಸಂಬಂಧದಿಂದಾಗುವ ಪಾಪವು ಪ್ರಾಣನೇ ತಾನೆಂಬ ಅಭಿಮಾನವುಳ್ಳವನಿಗೆ (ಇರುವದು) ವಿರುದ್ಧವೇ. ಏಕೆಂದರೆ (ಆ ಪಾಪವು) ವಾಗಾದಿವಿಶೇಷಗಳೇ ತಾನೆಂಬ ಅಭಿಮಾನದ ಕಾರಣದಿಂದ ಉಂಟಾಗಿರುತ್ತದೆ. (ಅದು) ಸ್ವಾಭಾವಿಕವಾದ ಅಜ್ಞಾನದ ಕಾರಣದಿಂದಲೂ ಆಗಿರುತ್ತದೆ ; ಪ್ರಾಣನೇ ತಾನೆಂಬ ಅಭಿಮಾನವು ಶಾಸ್ತ್ರದಿಂದ ಉಂಟಾದದ್ದಲ್ಲವೆ?[1] ಆದ್ದರಿಂದ ಹೀಗೆಂದು ಅರಿತುಕೊಂಡಿರುವವನಿಗೆ ಪಾಪವು ದೂರವಾಗಿರುತ್ತದೆ ಎಂಬುದು ಯುಕ್ತ, ಏಕೆಂದರೆ (ಆ ಜ್ಞಾನಕ್ಕೂ ಇದಕ್ಕೂ) ವಿರೋಧ(ವಿರುತ್ತದೆ). ಆ ಇದನ್ನು (ಶ್ರುತಿ) ತಿಳಿಸುತ್ತಿದೆ.

'ಸಾ ವಾ ಏಷಾ ದೇವತಾ' (ಆ ಈ ದೇವತೆಯು) ಎಂಬುದಕ್ಕೆ (ಹಿಂದೆ ಭಾ.ಭಾ. ೬೭ರಲ್ಲಿ) ಹೇಳಿರುವದೇ ಅರ್ಥವು. ಈ ವಾಗಾದಿದೇವತೆಗಳ ಪಾಪವೆಂಬ ಮೃತ್ಯುವನ್ನು- **ಸ್ವಾಭಾವಿಕವಾದ ಅಜ್ಞಾನನಿಮಿತ್ತವಾದ ಇಂದ್ರಿಯ ವಿಷಯಗಳ ಸಂಸರ್ಗದ ಆಸಕ್ತಿಯಿಂದುಂಟಾಗುವ ಪಾಪದಿಂದಲ್ಲವೆ, ಪ್ರತಿಯೊಬ್ಬನೂ ಸಾಯುತ್ತಿರುವನು? ಆದ್ದರಿಂದ ಅದೇ ಮೃತ್ಯುವಷ್ಟೆ?** ಅದನ್ನು- ಪ್ರಾಣಗಳೇ ತಾವೆಂಬ ಅಭಿಮಾನರೂಪವಾಗಿರುವ ದೇವತೆಗಳಿಂದ ಕಿತ್ತು ತೆಗೆದುಹಾಕಿ, ಪ್ರಾಣನೇ ತಾವೆಂಬ ಅಭಿಮಾನಮಾತ್ರ(ವುಂಟಾದದ್ದು)ರಿಂದಲೇ ಪ್ರಾಣನು (ಪಾಪವನ್ನು) ತೆಗೆದುಹಾಕುವವನು ಎನಿಸಿಕೊಂಡಿರುತ್ತಾನೆ; ಆದರೆ (ನಿಜವಾಗಿ ಜ್ಞಾನಕ್ಕೂ ಅಜ್ಞಾನಜನಿತಪಾಪಕ್ಕೂ) ವಿರೋಧವಿರುವದರಿಂದಲೇ ಹೀಗೆಂದು ಅರಿತುಕೊಂಡವನಿಗೆ ಪಾಪವು ದೂರವಾಗಿಹೋಗಿಬಿಡುತ್ತದೆ.[2] ದೇವತೆಗಳ ಪಾಪವೆಂಬ ಮೃತ್ಯುವನ್ನು ತೆಗೆದುಹಾಕಿ ಮುಂದೇನುಮಾಡಿದನು? ಎಂದರೆ (ಶ್ರುತಿ) ಹೇಳುತ್ತದೆ. ಎಲ್ಲಿ ಯಾವ (ದೇಶ)ದಲ್ಲಿ ಈ ಪೂರ್ವವೇ ಮುಂತಾದ ದಿಕ್ಕುಗಳ ಅಂತವು ಕೊನೆಯು (ಆಗುವದೋ ತತ್=ತತ್ರ) ಅಲ್ಲಿಗೆ ತಲುಪಿಸಿದನು ಹೋಗುವಂತೆ ಮಾಡಿದನು ಎಂದು ಅಭಿಪ್ರಾಯ.

## ದಿಕ್ಕುಗಳ ಅಂತವೆಂದರೇನು?

(ಆಕ್ಷೇಪ):—ದಿಕ್ಕುಗಳಿಗೆ ಕೊನೆಯೋ ಇಲ್ಲ. (ಹೀಗಿರುವಲ್ಲಿ) 'ಕೊನೆಗೆ' ಹೋಗುವಂತೆ ಮಾಡಿದನು ಎಂದು ಹೇಳಿದ್ದು ಹೇಗೆ (ಸರಿ)?

---

1. ವಾಗಾದಿಗಳೇ ತಾನೆಂಬುದು ಮನುಷ್ಯನಿಗೆ ತಾನಾಗಿಯೇ ಅಜ್ಞಾನದಿಂದ ಇದ್ದುಕೊಂಡಿರುತ್ತದೆ; ಪ್ರಾಣನೇ ತಾನೆಂಬ ಶಾಸ್ತ್ರಜ್ಞಾನದಿಂದ ಅದು ಬಾಧಿತವಾಗುತ್ತದೆ.

2. ಪ್ರಾಣಾತ್ಮಭಾವವು ವಾಗಾದಿಗಳು ತಾನೆಂಬ ಪರಿಚ್ಛಿನ್ನಭಾವಕ್ಕೆ ವಿರುದ್ಧವಾಗಿರುವದರಿಂದ ಉಪಾಸಕನ ಜ್ಞಾನಬಲದಿಂದ ಪಾಪವು ತಾನೇ ಹೋಗಿಬಿಡುತ್ತದೆ.

(ಪರಿಹಾರ):—(ಇದಕ್ಕೆ) ಹೇಳುತ್ತೇವೆ: ಶ್ರೌತವಿಜ್ಞಾನವುಳ್ಳ ಜನರನ್ನು ಅವಧಿ(ಯಾಗಿ ಮಾಡಿಕೊಂಡ)ನಿಮಿತ್ತದಿಂದ ದಿಕ್ಕುಗಳನ್ನು ಕಲ್ಪಿಸಿರುವದರಿಂದ[1] ಆ (ವಿಜ್ಞಾನಕ್ಕೆ) ವಿರೋಧಿಯಾಗಿರುವ ಜನರು ವಾಸಮಾಡುವ ದೇಶವೇ ದಿಕ್ಕುಗಳ ಕೊನೆಯು. 'ಅರಣ್ಯವು ದೇಶಾಂತವು' (ದೇಶದ ಕೊನೆ)ಎಂಬ (ಪ್ರಯೋಗ)ದಂತೆಯೇ (ಇದು). ಆದ್ದರಿಂದ (ಇಲ್ಲಿ ಏನೂ) ತಪ್ಪಿಲ್ಲ.

## ಪ್ರಾಣಾಭಿಮಾನವಿಲ್ಲದವರ ಸಂಸರ್ಗವು ಸಲ್ಲದು

(ತತ್=ತತ್ರ) ಅಲ್ಲಿಗೆ ತಲುಪಿಸಿದ ಈ ದೇವತೆಗಳ ಪಾಪಗಳನ್ನು-ಪಾಪ್ಮನಃ ಎಂಬುದು ದ್ವಿತೀಯಾಬಹುವಚನವು-'ವಿನ್ಯದಧಾತ್' ವಿವಿಧವಾಗಿ ಕೆಳಗಡೆಗೆ ದೇವತೆಯಾದ ಪ್ರಾಣನು ಇಟ್ಟನು. ಪ್ರಾಣನೇ ನಾನೆಂಬ ಅಭಿಮಾನವಿಲ್ಲದ ಅಂತ್ಯಜನಗಳಲ್ಲಿ (ಇಟ್ಟನು) ಎಂದು, ಆ (ಪಾಪವು) ಇಂದ್ರಿಯಸಂಸರ್ಗದಿಂದ ಉಂಟಾಗತಕ್ಕದ್ದಾದ್ದರಿಂದ (ಅದು) ಜನರೆಂಬ ಪ್ರಾಣಿಗಳನ್ನು ಆಶ್ರಯಿಸಿಕೊಂಡಿರತಕ್ಕದ್ದೆಂದು ಸಾಮರ್ಥ್ಯದಿಂದ ನಿಶ್ಚಯಿಸಬೇಕು.[2] ಆದ್ದರಿಂದ ಆ ಅಂತ್ಯಜನರನ್ನು ಸೇರಬಾರದು, (ಆ ಜನಗಳ ಬಳಿಗೆ) ಹೋಗಬಾರದು. ಅವರೊಡನೆ ಮಾತಾಡುವದು, (ಅವರನ್ನು) ನೋಡುವದು ಮುಂತಾದವುಗಳಿಂದ (ಅವರ) ಸಂಪರ್ಕವನ್ನು ಮಾಡಿಕೊಳ್ಳಬಾರದು. ಅವರ ಸಂಪರ್ಕವನ್ನು ಮಾಡಿಕೊಂಡರೆ ಪಾಪದ ಸಂಪರ್ಕವನ್ನೇ ಮಾಡಿಕೊಂಡಂತೆ ಆದೀತು; ಏಕೆಂದರೆ ಅವರು ಪಾಪಕ್ಕೆ ಆಶ್ರಯಭೂತರಾದವರು. ಆ ಜನದ ವಾಸವಾದ ದಿಗಂತಶಬ್ದವಾಚ್ಯವಾದ ಅಂತವನ್ನು (ಅಲ್ಲಿ) ಜನವಿಲ್ಲದಿದ್ದರೂ ಸೇರಬಾರದು, ಆ ದೇಶದಿಂದ ಹೊರಕ್ಕೆ ಬಂದಿರುವ ಜನರನ್ನೂ ಸೇರಬಾರದು ಎಂದು ಅಭಿಪ್ರಾಯ. (ಮೂಲದಲ್ಲಿರುವರ) ನೇತ್ ಎಂಬುದು ಪರಿಭಯವೆಂಬರ್ಥದಲ್ಲಿ (ಪ್ರಯೋಗಿಸಿರುವ) ನಿಪಾತವು. ಹೀಗೆ (ಈ) ಜನದ ಸಂಪರ್ಕವನ್ನು ಮಾಡಿಕೊಂಡರೆ ಮೃತ್ಯುವನ್ನು ಅನುಸರಿಸಿಯೇನು (ಅನ್ವವಾಯಾನಿ=ಅನು, ಅವ, ಅಯಾನಿ) ಹಿಂಬಾಲಿಸಿಯೇನಲ್ಲ ಎಂದಿಂತು ಅಂಜಿಕೆಯಿಂದ (ಆ) ಜನವನ್ನೂ ಅಂತವನ್ನೂ ಸೇರಬಾರದು ಎಂದು ಹಿಂದಕ್ಕೆ ಸಂಬಂಧಮಾಡಿಕೊಳ್ಳಬೇಕು.

## ಪ್ರಾಣನು ವಾಗಾದಿಗಳನ್ನು ದೇವಭಾವಕ್ಕೆ ತಲುಪಿಸಿದ್ದು

(ಉಪನಿಷತ್ತು)

**ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯಾಥೈನಾ ಮೃತ್ಯುಮತ್ಯವಹತ್ ‖ ೧೧ ‖**

---

1. ಶ್ರೌತವಿಜ್ಞಾನವುಳ್ಳವರು ಇರುವಷ್ಟು ದೇಶವು ದಿಕ್ಕುಗಳ ಅವಧಿ ಎಂದು ಕಲ್ಪಿಸಿರುವದರಿಂದ.

2. ಪಾಪವು ದೇಶಕ್ಕೆ ಸಂಬಂಧಪಟ್ಟದ್ದಲ್ಲ, ಜನಗಳಿಗೆ ಸಂಬಂಧಪಟ್ಟದ್ದು. ಆದ್ದರಿಂದ ದೇಶದಲ್ಲಿಟ್ಟನು ಎಂದರೆ ಅಲ್ಲಿರುವ ಜನರಲ್ಲಿಟ್ಟನು ಎಂದೇ ಅರ್ಥಮಾಡಿಕೊಳ್ಳಬೇಕು.

೧೧. ಆ ಈ ದೇವತೆಯಿದೆಯಲ್ಲ, (ಇದು) ಈ ದೇವತೆಗಳ ಪಾಪವೆಂಬ ಮೃತ್ಯುವನ್ನು ತೆಗೆದುಹಾಕಿ ಇನ್ನು ಇವರನ್ನು ಮೃತ್ಯುವನ್ನು ದಾಟಿಸಿ ಒಯ್ದನು.

(ಭಾಷ್ಯ)

೬೯. 'ಸಾ ವಾ ಏಷಾ ದೇವತಾ'। ತದೇತತ್ ಪ್ರಾಣಾತ್ಮಜ್ಞಾನಕರ್ಮಫಲಂ ವಾಗಾದೀನಾಮ್ ಅಗ್ನ್ಯಾದ್ಯಾತ್ಮತ್ವಮ್ ಉಚ್ಯತೇ। ಅಥೈನಾಃ ಮೃತ್ಯುಮ್ ಅತ್ಯವಹತ್। ಯಸ್ಮಾತ್ ಆಧ್ಯಾತ್ಮಿಕಪರಿಚ್ಛೇದಕರಃ ಪಾಪ್ಮಾ ಮೃತ್ಯುಃ ಪ್ರಾಣಾತ್ಮವಿಜ್ಞಾನೇನ ಅಪಹತಃ ತಸ್ಮಾತ್ ಸ ಪ್ರಾಣೋಽಪಹನ್ತಾ ಪಾಪ್ಮನೋ ಮೃತ್ಯೋಃ। ತಸ್ಮಾತ್ ಸ ಏವ ಪ್ರಾಣ ಏನಾ ವಾಗಾದಿದೇವತಾಃ ಪ್ರಕೃತಂ ಪಾಪ್ಮಾನಂ ಮೃತ್ಯುಮ್ ಅತೀತ್ಯ ಅವಹತ್ ಪ್ರಾಪಯತ್ ಸ್ವಂಸ್ವಮ್ ಅಪರಿಚ್ಛಿನ್ನಮ್ ಅಗ್ನ್ಯಾದಿದೇವತಾತ್ಮರೂಪಮ್ ॥

(ಭಾಷ್ಯಾರ್ಥ)

'ಸಾ ವಾ ಏಷಾ ದೇವತಾ' (ಎಂಬೀ ಕಂಡಿಕೆಯ ಸಂಬಂಧವೇನೆಂದರೆ) ಈ ಪ್ರಾಣನೇ ನಾನು ಎಂಬ ಜ್ಞಾನದ ಮತ್ತು ಕರ್ಮದ ಫಲವಾದ, ವಾಗಾದಿಗಳಿಗೆ ಅಗ್ನ್ಯಾದ್ಯಾತ್ಮಭಾವವನ್ನು (ಈಗ) ಹೇಳಲಾಗುತ್ತದೆ. ಇನ್ನು ಇವರನ್ನು ಮೃತ್ಯುವನ್ನು ದಾಟಿಸಿ ಒಯ್ದನು. ಆಧ್ಯಾತ್ಮಿಕಪರಿಚ್ಛೇದವನ್ನುಂಟುಮಾಡುವ ಪಾಪವೆಂಬ ಮೃತ್ಯುವು ಪ್ರಾಣನೇ ತಾನೆಂಬ ವಿಜ್ಞಾನದಿಂದ ನಾಶವಾಯಿತಷ್ಟೆ, ಆದ್ದರಿಂದ ಆ ಪ್ರಾಣನು ಪಾಪವೆಂಬ ಮೃತ್ಯುವಿಗೆ ನಾಶಕನು. ಆದ್ದರಿಂದ ಅದೇ ಪ್ರಾಣನೇ ಈ ವಾಗಾದಿದೇವತೆಗಳನ್ನು ಪ್ರಕೃತವಾಗಿರುವ ಪಾಪವೆಂಬ ಮೃತ್ಯುವನ್ನು ದಾಟಿಸಿದನು. ಅವರವರ ಅಪರಿಚ್ಛಿನ್ನವಾದ ಅಗ್ನ್ಯಾದಿದೇವತಾತ್ಮರೂಪವನ್ನು ಸೇರಿಸಿದನು.

## ವಾಕ್ಕಿಗೆ ಅಗ್ನಿಭಾವ

(ಉಪನಿಷತ್ತು)

**ಸ ವೈ ವಾಚಮೇವ ಪ್ರಥಮಾಮತ್ಯವಹತ್ ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್ ಸೋಽಯಮಗ್ನಿಃ ಪರೇಣ ಮೃತ್ಯುಮತಿಕ್ರಾನ್ತೋ ದೀಪ್ಯತೇ ॥ ೧೨ ॥**

೧೨. ಆ (ಪ್ರಾಣ)ನಿದಾನಲ್ಲ, (ಅವನು) ವಾಕ್ಕನ್ನೇ ಮೊದಲನೆಯದಾಗಿ ದಾಟಿಸಿ ಒಯ್ದನು. ಆ (ವಾಕ್ಕು) ಯಾವಾಗ ಮೃತ್ಯುವನ್ನು

ಅತಿಕ್ರಮಿಸಿ ಮುಕ್ತವಾಯಿತೋ (ಆಗ) ಅದು ಅಗ್ನಿಯಾಯಿತು. ಆ ಈ ಅಗ್ನಿಯು ಮೃತ್ಯುವಿನ ಆಚೆಗೆ ಅತಿಕ್ರಾಂತನಾಗಿ ಉರಿಯುತ್ತಾನೆ.

(ಭಾಷ್ಯ)

೭೦. ಸ ವೈ ವಾಚಮೇವ ಪ್ರಥಮಾಮತ್ಯವಹತ್ | ಸಪ್ರಾಣಃ ವಾಚಮೇವ ಪ್ರಥಮಾಂ ಪ್ರಧಾನಾಮ್ ಇತ್ಯೇತತ್| ಉದ್ಗೀಥಕರ್ಮಣಿ ಇತರಕರಣಾಪೇಕ್ಷಯಾ ಸಾಧಕತಮತ್ವಂ ಪ್ರಾಧಾನ್ಯಂ ತಸ್ಯಾಃ | ತಾಂ ಪ್ರಥಮಾಮ್ ಅತ್ಯವಹತ್ ವಹನಂ ಕೃತವಾನ್ । ತಸ್ಯಾಃ ಪುನರ್ಮೃತ್ಯುಮತೀತ್ಯ ಊಢಾಯಾಃ ಕಿಂ ರೂಪಮಿತಿ ? ಉಚ್ಯತೇ | ಸಾ ವಾಕ್ ಯದಾ ಯಸ್ಮಿನ್ ಕಾಲೇ ಪಾಪ್ಮಾನಂ ಮೃತ್ಯುಮ್ ಅತ್ಯಮುಚ್ಯತ ಅತೀತ್ಯ ಅಮುಚ್ಯತ ಮೋಚಿತಾ ಸ್ವಯಮೇವ ತದಾ ಸೋಽಗ್ನಿರಭವತ್| ಸಾ ವಾಕ್ ಪೂರ್ವಮಪಿ ಅಗ್ನಿರೇವ ಸತೀ ಮೃತ್ಯುವಿಯೋಗೇಽಪಿ ಅಗ್ನಿರೇವಾಭವತ್ | ಏತಾವಾಂಸ್ತು ವಿಶೇಷೋ ಮೃತ್ಯುವಿಯೋಗೇ | ಸೋಽಯಮ್ ಅತಿಕ್ರಾನ್ತೋಽಗ್ನಿಃ ಪರೇಣ ಮೃತ್ಯುಂ ಪರಸ್ತಾನ್ಮೃತ್ಯೋಃ ದೀಪ್ಯತೇ । ಪ್ರಾಙ್ಮೋಕ್ಷಾತ್ ಮೃತ್ಯುಪ್ರತಿಬದ್ಧೋಽಧ್ಯಾತ್ಮವಾಗಾತ್ಮನಾ ನೇದಾನೀಮಿವ ದೀಪ್ತಿಮಾನ್ ಆಸೀತ್ | ಇದಾನೀಂ ತು ಮೃತ್ಯುಂ ಪರೇಣ ದೀಪ್ಯತೇ ಮೃತ್ಯುವಿಯೋಗಾತ್ ||

(ಭಾಷ್ಯಾರ್ಥ)

'ಸ ವೈ ವಾಚಮೇವ ಪ್ರಥಮಾಮತ್ಯವಹತ್' (ಎಂಬ ಕಂಡಿಕೆಯ ಅರ್ಥವಿದು). ಆ ಪ್ರಾಣನು ವಾಕ್ಕನ್ನೇ ಮೊದಲನೆಯದಾಗಿ ಮುಖ್ಯವಾದದ್ದನ್ನಾಗಿ ಎಂದರ್ಥ. ಉದ್ಗೀಥಕರ್ಮದಲ್ಲಿ ಮಿಕ್ಕ ಕರಣಗಳಿಗಿಂತಲೂ (ವಾಕ್ಕು) ಸಾಧಕತಮವಾಗಿರುವದರಿಂದ ಅದು ಪ್ರಧಾನವು. ಅದನ್ನು ಮೊದಲನೆಯದಾಗಿ ದಾಟಿಸಿ ಒಯ್ದನು, ಒಯ್ಯುವನಾದನು. ಮೃತ್ಯುವನ್ನು ದಾಟಿ ಒಯ್ದ ಆ ವಾಕ್ಕಿಗೆ ಯಾವ ರೂಪವು (ಬಂದಿತು)? ಎಂದರೆ (ಶ್ರುತಿ) ಹೇಳುತ್ತದೆ: ಆ ವಾಕ್ಕು ಯಾವಾಗ ಯಾವ ಕಾಲದಲ್ಲಿ ಪಾಪವೆಂಬ ಮೃತ್ಯುವನ್ನು ಅತಿಕ್ರಮಿಸಿ ಮುಕ್ತವಾಯಿತೋ ಮೀರಿ ಬಿಡುಗಡೆಯನ್ನು ಹೊಂದಿತೋ ತಾನೇ ಬಿಡುಗಡೆಮಾಡಿಕೊಂಡಿತೋ[1] ಆಗ ಅದು ಅಗ್ನಿಯಾಯಿತು. ಆ ವಾಕ್ಕು ಮೊದಲೂ ಅಗ್ನಿಯೇ ಆಗಿದ್ದು ಮೃತ್ಯು ಹೋದಬಳಿಕವೂ ಅಗ್ನಿಯೇ ಆಯಿತು. ಮೃತ್ಯುವು ಹೋದಾಗ ಇಷ್ಟುಮಾತ್ರ ವಿಶೇಷ(ವಾಯಿತು): ಈ ಅತಿಕ್ರಮಿಸಿದ ಅಗ್ನಿಯು ಮೃತ್ಯುವಿನ ಆಚೆಗೆ ಮೃತ್ಯುವಿಗಿಂತಲೂ ಅತ್ತಲಾಗಿ ಬೆಳಗುತ್ತಿದೆ. ಮೋಕ್ಷವಾಗುವ ಮುಂಚೆ

---

1. ಮೂಲದಲ್ಲಿ ಕರ್ಮಕರ್ತರಿಪ್ರಯೋಗವಿದೆ. ಎಂಬುದನ್ನು ಈ ಅರ್ಥವು ಸೂಚಿಸುತ್ತದೆ.

ಮೃತ್ಯುವು ಅಡ್ಡಿಯಾಗಿದ್ದದ್ದರಿಂದ ಅಧ್ಯಾತ್ಮವಾಗ್ರೂಪದಿಂದ ಇದ್ದಾಗ ಈಗಿನ ಹಾಗೆ ಪ್ರಕಾಶಯುತವಾಗಿರಲಿಲ್ಲ. ಈಗಲೋ ಎಂದರೆ ಮೃತ್ಯುವು ಹೋದದ್ದರಿಂದ ಮೃತ್ಯುವಿನ ಆಚೆಗೆ (ನಿಂತು) ಉರಿಯುತ್ತಿದಾನೆ.

## ಘ್ರಾಣಕ್ಕೆ ವಾಯುಭಾವ

(ಉಪನಿಷತ್ತು)

**ಅಥ ಪ್ರಾಣಮತ್ಯವಹತ್ ಸ ಯದಾ ಮೃತ್ಯುಮತ್ಯಮುಚ್ಯತ ಸ ವಾಯುರಭವತ್ ಸೋಽಯಂ ವಾಯುಃ ಪರೇಣ ಮೃತ್ಯುಮತಿ ಕ್ರಾನ್ತಃ ಪವತೇ ॥ ೧೩ ॥**

೧೩. ಬಳಿಕ ಪ್ರಾಣವನ್ನು ದಾಟಿಸಿ ಒಯ್ದನು. ಆ (ಪ್ರಾಣವು) ಯಾವಾಗ ಮೃತ್ಯುವನ್ನು ಅತಿಕ್ರಮಿಸಿ ಮುಕ್ತವಾಯಿತೋ ಆಗ (ಅದು) ವಾಯುವಾಯಿತು. ಆ ಈ ವಾಯುವು ಮೃತ್ಯುವಿನ ಆಚೆಗೆ ಅತಿಕ್ರಾಂತ ನಾಗಿ ಬೀಸುತ್ತಿದಾನೆ.

(ಭಾಷ್ಯ)

೭೧. ತಥಾ ಪ್ರಾಣಃ ಘ್ರಾಣಂ ವಾಯುರಭವತ್। ಸ ತು ಪವತೇ ಮೃತ್ಯುಂ ಪರೇಣ ಅತಿಕ್ರಾನ್ತಃ। ಸರ್ವಮನ್ಯತ್ ಉಕ್ತಾರ್ಥಮ್ ॥

(ಭಾಷ್ಯಾರ್ಥ)

ಇದರಂತೆ ಪ್ರಾಣವು, ಎಂದರೆ ಘ್ರಾಣವು ವಾಯುವಾಯಿತು. ಆ (ವಾಯು) ವಾದರೋ ಅತಿಕ್ರಮಿಸಿ ಮೃತ್ಯುವಿನಿಂದಾಚೆಗೆ ಬೀಸುತ್ತಿದಾನೆ. ಮಿಕ್ಕೆಲ್ಲದರ ಅರ್ಥವೂ (ಹಿಂದೆ) ಹೇಳಿದಂತೆ.

## ಚಕ್ಷುಸ್ಸಿಗೆ ಆದಿತ್ಯಭಾವ

(ಉಪನಿಷತ್ತು)

**ಅಥ ಚಕ್ಷುರತ್ಯವಹತ್ ತದ್ಯದಾ ಮೃತ್ಯುಮತ್ಯಮುಚ್ಯತ ಸ ಆದಿತ್ಯೋಽಭವತ್ ಸೋಽಸಾವಾದಿತ್ಯಃ ಪರೇಣ ಮೃತ್ಯುಮತಿಕ್ರಾನ್ತ ಸ್ತಪತಿ ॥ ೧೪ ॥**

೧೪. ಬಳಿಕ ಚಕ್ಷುಸ್ಸನ್ನು ದಾಟಿಸಿ ಒಯ್ದನು. ಆ (ಚಕ್ಷುಸ್ಸು) ಯಾವಾಗ ಮೃತ್ಯುವನ್ನು ಅತಿಕ್ರಮಿಸಿ ಮುಕ್ತವಾಯಿತೋ (ಆಗ) ಅದು ಆದಿತ್ಯನಾಯಿತು. ಆ ಈ ಆದಿತ್ಯನು ಮೃತ್ಯುವಿನಿಂದಾಚೆ ಅತಿಕ್ರಾಂತ ನಾಗಿ ಸುಡುತ್ತಿದಾನೆ.

(ಭಾಷ್ಯ)

೭೨. ತಥಾ ಚಕ್ಷುಃ ಆದಿತ್ಯೋಽಭವತ್ । ಸ ತು ತಪತಿ ॥

(ಭಾಷ್ಯಾರ್ಥ)

ಹಾಗೆಯೇ ಚಕ್ಷುಸ್ಸು ಆದಿತ್ಯನಾಯಿತು. ಅವನಾದರೋ (ಮೃತ್ಯುವಿನಿಂದಾಚೆಗೆ) ಸುಡುತ್ತಿದಾನೆ.

## ಶ್ರೋತ್ರಕ್ಕೆ ದಿಗ್ಭಾವ

(ಉಪನಿಷತ್ತು)

**ಅಥ ಶ್ರೋತ್ರಮತ್ಯವಹತ್ ತದ್ಯದಾ ಮೃತ್ಯುಮತ್ಯಮುಚ್ಯತ ತಾ ದಿಶೋಽಭವಗ್ಂಸ್ತಾ ಇಮಾ ದಿಶಃ ಪರೇಣ ಮೃತ್ಯುಮತಿಕ್ರಾನ್ತಾಃ ॥ ೧೫ ॥**

೧೫. ಬಳಿಕ ಶ್ರೋತ್ರವನ್ನು ದಾಟಿಸಿ ಒಯ್ದನು. ಅದು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೋ (ಆಗ) ದಿಕ್ಕುಗಳಾಯಿತು. ಆ ಈ (ದಿಕ್ಕುಗಳು) ಮೃತ್ಯುವಿನಿಂದಾಚೆಗೆ ಅತಿಕ್ರಮಿಸಿರುತ್ತವೆ.

(ಭಾಷ್ಯ)

೭೩. ತಥಾ ಶ್ರೋತ್ರಂ ದಿಶೋಽಭವನ್ । ದಿಶಃ ಪ್ರಾಚ್ಯಾದಿವಿಭಾಗೇನ ಅವಸ್ಥಿತಾಃ ॥ ೧೫ ॥

(ಭಾಷ್ಯಾರ್ಥ)

ಅದರಂತೆ ಶ್ರೋತ್ರವು ದಿಕ್ಕುಗಳಾಯಿತು. ದಿಕ್ಕುಗಳು ಪ್ರಾಚ್ಯಾದಿವಿಭಾಗದಿಂದ ಇದ್ದುಕೊಂಡಿವೆ.

## ಮನಸ್ಸಿಗೆ ಚಂದ್ರಭಾವ, ಉಪಾಸನೆಯ ಫಲ

(ಉಪನಿಷತ್ತು)

**ಅಥ ಮನೋಽತ್ಯವಹತ್ ತದ್ಯದಾ ಮೃತ್ಯುಮತ್ಯಮುಚ್ಯತ ಸ ಚನ್ದ್ರಮಾ ಅಭವತ್ ಸೋಽಸೌ ಚನ್ದ್ರಃ ಪರೇಣ ಮೃತ್ಯುಮತಿಕ್ರಾನ್ತೋ ಭಾತ್ಯೇವಗ್ಂ ಹ ವಾ ಏನಮೇಷಾ ದೇವತಾ ಮೃತ್ಯುಮತಿವಹತಿ ಯ ಏವಂ ವೇದ ॥ ೧೬ ॥**

೧೬. ಬಳಿಕ ಮನಸ್ಸನ್ನು ದಾಟಿಸಿ ಒಯ್ದನು. ಅದು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೋ (ಆಗ) ಅದು ಚಂದ್ರನಾಯಿತು.

ಆ ಈ ಚಂದ್ರನು ಮೃತ್ಯುವಿನಿಂದಾಚೆ ಅತಿಕ್ರಮಿಸಿ ಬೆಳಗುತ್ತಿದಾನೆ. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಹೀಗೆಯೇ ಅವನನ್ನು ಈ ದೇವತೆಯು ದಾಟಿಸಿ ಒಯ್ಯುವದು.

(ಭಾಷ್ಯ)

೭೪. ಮನಶ್ಚನ್ದ್ರಮಾ ಭಾತಿ। ಯಥಾಪೂರ್ವಯಜಮಾನಂ ವಾಗಾದ್ಯಗ್ನ್ಯಾದಿಭಾವೇನ ಮೃತ್ಯುಮವಹತ್, ಏವಮೇನಂ ವರ್ತಮಾನಯಜಮಾನಮಪಿ ಹ ವಾ ಏಷಾ ಪ್ರಾಣದೇವತಾ ಮೃತ್ಯುಮ್ ಅತಿವಹತಿ ವಾಗಾದ್ಯಗ್ನ್ಯಾದಿಭಾವೇನ ಏವಂ ಯೋ ವಾಗಾದಿಪಞ್ಚಕವಿಶಿಷ್ಟಂ ಪ್ರಾಣಂ ವೇದ। "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ. ೧೦-೫-೨-೨೦) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಮನಸ್ಸು ಚಂದ್ರನಾಗಿ ಬೆಳಗುತ್ತಿದೆ. ಹೇಗೆ ಹಿಂದಿನ ಯಜಮಾನನನ್ನು ವಾಗಾದಿಗಳು ಅಗ್ನ್ಯಾದಿಭಾವವನ್ನು ಹೊಂದುವಂತೆ (ಪ್ರಾಣನು) ಮೃತ್ಯುವನ್ನು ದಾಟಿಸಿ ಒಯ್ದನೋ ಹಾಗೆಯೇ ಯಾವನು ಪ್ರಾಣನು ಪಂಚಕದ ರೂಪದಿಂದ ಕೂಡಿರುವನೆಂದು ಉಪಾಸನೆಮಾಡುವನೋ (ಆ) ಈ ವರ್ತಮಾನಕಾಲದ ಯಜಮಾನನನ್ನೂ ಈ ಪ್ರಾಣದೇವತೆಯು ವಾಗಾದಿಗಳು ಅಗ್ನ್ಯಾದಿಭಾವವನ್ನು ಹೊಂದುವಂತೆ ದಾಟಿಸಿ ಒಯ್ಯುವನು. "ಆತನನ್ನು ಹೇಗೆ ಹೇಗೆ ಉಪಾಸನೆ ಮಾಡುತ್ತಾನೋ ಅದೇ ಆಗುತ್ತಾನೆ"(ಶತ.ಬ್ರಾ. ೧೦-೫-೨-೨೦) ಎಂಬ ಶ್ರುತಿ (ಪ್ರಮಾಣ)ದಿಂದ (ಹೀಗೆಂದು ಸಿದ್ಧವಾಗುತ್ತದೆ.)

## ಪ್ರಾಣನು ಅನ್ನವನ್ನು ಆಗಾನಮಾಡಿಕೊಂಡದ್ದು

(ಉಪನಿಷತ್ತು)

**ಅಥಾತ್ಮನೇಽನ್ನಾದ್ಯಮಾಗಾಯದ್ ಯದ್ಧಿ ಕಿಂಚಾನ್ನಮದ್ಯತೇಽನೇನೈವ ತದದ್ಯತ ಇಹ ಪ್ರತಿತಿಷ್ಠತಿ ॥ ೧೭ ॥**

೧೭. ಬಳಿಕ ತನಗಾಗಿ ಅನ್ನಾದ್ಯವನ್ನು ಆಗಾನಮಾಡಿಕೊಂಡನು. ಯಾವದೊಂದಿಷ್ಟು ಅನ್ನವನ್ನು ತಿನ್ನುತ್ತಾರೋ (ಅದು) ಅನನಿಂದಲೇ ತಿನ್ನಲ್ಪಡುತ್ತದೆ. ಇಲ್ಲಿ ನಿಂತಿರುತ್ತದೆ.

(ಭಾಷ್ಯ)

೭೫. "ಅಥಾತ್ಮನೇ"। ಯಥಾ ವಾಗಾದಿಭಿರಾತ್ಮಾರ್ಥಮಾಗಾನಂ ಕೃತಮ್, ತಥಾ ಮುಖ್ಯೋಽಪಿ ಪ್ರಾಣಃ ಸರ್ವಪ್ರಾಣಸಾಧಾರಣಂ ಪ್ರಾಜಾಪತ್ಯಫಲಮ್ ಆಗಾನಂ ಕೃತ್ವಾ ತ್ರಿಷು ಪವಮಾನೇಷು ಅಥ ಅನನ್ತರಂ ಶಿಷ್ಟೇಷು ನವಸು

ಸ್ತೋತ್ರೇಷು ಆತ್ಮನೇ ಆತ್ಮಾರ್ಥಮ್ ಅನ್ನಾದ್ಯಮ್ ಅನ್ನಂ ಚ ತದಾದ್ಯಂ ಚ ಅನ್ನಾದ್ಯಮ್ ಆಗಾಯತ್। ಕರ್ತುಃ ಕಾಮಸಂಯೋಗಃ ವಾಚನಿಕಃ ಇತ್ಯುಕ್ತಮ್। ಕಥಂ ಪುನಸ್ತದನ್ನಾದ್ಯಂ ಪ್ರಾಣೇನ ಆತ್ಮಾರ್ಥಮಾಗೀತಮ್ ಇತಿ ಗಮ್ಯತ ಇತಿ? ಅತ್ರ ಹೇತುಮಾಹ। ಯತ್ಕಿಂಚ ಇತಿ ಸಾಮಾನ್ಯಾನ್ನಮಾತ್ರಪರಾಮರ್ಶಾರ್ಥಃ। ಹಿ ಇತಿ ಹೇತೌ। ಯಸ್ಮಾತ್ ಲೋಕೇ ಪ್ರಾಣಿಭಿರ್ಯತ್ಕಿಂಚಿತ್ ಅನ್ನಮದ್ಯತೇ ಭಕ್ಷ್ಯತೇ, ತತ್ ಅನೇನೈವ ಪ್ರಾಣೇನೈವ। 'ಅನಃ' ಇತಿ ಪ್ರಾಣಸ್ಯ ಆಖ್ಯಾ ಪ್ರಸಿದ್ಧಾ। ಅನಃಶಬ್ದಃ ಸಾನ್ತಃ ಶಕಟವಾಚೀ। ಯಸ್ತ್ವನ್ಯಃ ಸ್ವರಾನ್ತಃ ಸ ಪ್ರಾಣ ಪರ್ಯಾಯಃ। ಪ್ರಾಣೇನೈವ ತದದ್ಯತ ಇತ್ಯರ್ಥ। ಕಿಂ ಚ ನ ಕೇವಲಂ ಪ್ರಾಣೇನ ಅದ್ಯತ ಏವಾನ್ನಾದ್ಯಮ್, ತಸ್ಮಿನ್ ಶರೀರಾಕಾರಪರಿಣತೇ ಅನ್ನಾದ್ಯೇ ಇಹ ಪ್ರತಿ ತಿಷ್ಠತಿ ಪ್ರಾಣಃ। ತಸ್ಮಾತ್ ಪ್ರಾಣೇನ ಆತ್ಮನಃ ಪ್ರತಿಷ್ಠಾರ್ಥಮ್ ಆಗೀತಮ್ ಅನ್ನಾದ್ಯಮ್। ಯದಪಿ ಪ್ರಾಣೇನ ಅನ್ನಾದನಂ ತದಪಿ ಪ್ರಾಣಸ್ಯ ಪ್ರತಿಷ್ಠಾರ್ಥ ಮೇವ ಇತಿ ನ ವಾಗಾದಿಷ್ವಿವ ಕಲ್ಯಾಣಾಸಙ್ಗಜಪಾಪ್ಮಸಂಭವಃ ಪ್ರಾಣೇಽಸ್ತಿ ॥

(ಭಾಷ್ಯಾರ್ಥ)

"ಈಗ ತನಗಾಗಿ" (ಎಂಬ ಕಂಡಿಕೆಯ ಅರ್ಥ): ಹೇಗೆ ವಾಗಾದಿಗಳು ತಮ ಗಾಗಿ ಆಗಾನವನ್ನು ಮಾಡಿಕೊಂಡಿದ್ದವೋ ಹಾಗೆ ಮುಖ್ಯಪ್ರಾಣನೂ ಸರ್ವ ಪ್ರಾಣಗಳಿಗೂ ಸಾಧಾರಣವಾಗಿರುವ ಪ್ರಾಜಾಪತ್ಯಫಲವನ್ನು ಮೂರು ಪವಮಾನ ಗಳಲ್ಲಿ ಆಗಾನವನ್ನು ಮಾಡಿಕೊಂಡು ಉಳಿದ ಒಂಭತ್ತು ಸ್ತೋತ್ರಗಳಲ್ಲಿ ತನಗಾಗಿ, ತನಗೋಸ್ಕರ, ಅನ್ನಾದ್ಯವನ್ನು ಎಂದರೆ ತಿನ್ನುವದಕ್ಕೆ ಯೋಗ್ಯವಾದ ಅನ್ನವನ್ನು ಆಗಾನಮಾಡಿಕೊಂಡನು. (ಉದ್ಗಾನ)ಕರ್ತೃವಿಗೆ (ಈ) ಕಾಮಸಂಬಂಧವು ವಚನಬಲದಿಂದ (ಆಗುತ್ತದೆ) ಎಂದು (ಹಿಂದೆ ಭಾ. ಭಾ. ೫ರಲ್ಲಿ) ಹೇಳಿರುತ್ತೇವೆ.

ಆ ಅನ್ನಾದ್ಯವನ್ನು ಪ್ರಾಣನು ತನಗಾಗಿ ಆಗಾನಮಾಡಿಕೊಂಡನೆಂಬುದು ಹೇಗೆ ತಿಳಿಯಿತು? ಇದಕ್ಕೆ ಕಾರಣವನ್ನು (ಶ್ರುತಿ) ಹೇಳುತ್ತದೆ. 'ಯಾವ ದೊಂದಿಷ್ಟು' ಎಂಬ ಮಾತು ಸಾಮಾನ್ಯವಾದ ಅನ್ನಮಾತ್ರವನ್ನು ಪರಾಮರ್ಶ ಮಾಡುವದಕ್ಕೆ (ಬಂದಿದೆ), ಹಿ ಎಂಬುದು ಹೇತುವನ್ನು ತಿಳಿಸುವದಕ್ಕೆ (ಬಂದಿದೆ). ಲೋಕದಲ್ಲಿ ಪ್ರಾಣಿಗಳು ಯಾವ ಒಂದಿಷ್ಟು ಅನವನ್ನು ತಿಂದರೂ ಅದು ಅನನಿಂದಲೇ ಪ್ರಾಣನಿಂದಲೇ ತಿನ್ನಲ್ಪಡುತ್ತದೆ. ಅನ ಎಂಬಿದು ಪ್ರಾಣನ ಹೆಸರೆಂದು ಪ್ರಸಿದ್ಧವಾಗಿದೆ. ಸಕಾರಾಂತವಾದ ಅನಃಶಬ್ದವು ಬಂಡಿಯನ್ನು ಹೇಳುತ್ತದೆ. ಇನ್ನು ಸ್ವರಾಂತವಾದ ಮತ್ತೊಂದು (ಅನಶಬ್ದ)ವಿದೆಯಲ್ಲ, ಅದು ಪ್ರಾಣಪರ್ಯಾ ಯವು. (ಅನನಿಂದಲೇ ಎಂದರೆ) ಪ್ರಾಣನಿಂದಲೇ ಅದು ತಿನ್ನಲ್ಪಡುತ್ತದೆ (ಎಂದರ್ಥ. ಮತ್ತು ಅನ್ನಾದ್ಯವು, ತಿನ್ನಲ್ಪಡುತ್ತದೆ) ಎಂಬುದಿಷ್ಟೇ ಅಲ್ಲ, (ಅದು) ಶರೀರಾಕಾರವಾಗಿ ಪರಿಣತವಾಗಲು ಆ ಅನ್ನಾದ್ಯದಲ್ಲಿ ಅದರಲ್ಲಿ

ಪ್ರಾಣವು ನಿಂತಿರುತ್ತದೆ. ಆದ್ದರಿಂದ ಪ್ರಾಣನು ತನ್ನ ನಿಲ್ಲುವಿಕೆಗಾಗಿ ಅನ್ನಾದ್ಯವನ್ನು ಆಗಾನಮಾಡಿಕೊಂಡನು (ಎಂದು ನಿಶ್ಚಿತವಾಗುತ್ತದೆ). ಪ್ರಾಣನು ಅನ್ನವನ್ನು ತಿನ್ನುತ್ತಾನಲ್ಲ, ಅದೂ ಪ್ರಾಣನು ನಿಂತಿರುವದಕ್ಕೇ ಆಗಿರುವದರಿಂದ ವಾಗಾದಿಗಳಲ್ಲಿ ಹೇಗೋ ಹಾಗೆ ಕಲ್ಯಾಣದ ಆಸಂಗದಿಂದುಂಟಾಗುವ ಪಾಪದ ಸಂಭವವು ಪ್ರಾಣನಲ್ಲಿರುವದಿಲ್ಲ.

## ಪ್ರಾಣನು ವಾಗಾದಿಗಳ ಪೋಷಕನಾದದ್ದು, ಉಪಾಸನೆಯ ಫಲ

(ಉಪನಿಷತ್ತು)

**ತೇ ದೇವಾ ಅಬ್ರುವನ್ನೇತಾವದ್ವಾ ಇದಗ್ಂ ಸರ್ವಂ ಯದನ್ನಂ ತದಾತ್ಮನ ಆಗಾಸೀರನು ನೋಽಸ್ಮಿನ್ನನ್ನ ಆಭಜಸ್ವೇತಿ ತೇ ವೈ ಮಾಭಿ ಸಂವಿಶತೇತಿ ತಥೇತಿ ತಗ್ಂ ಸಮನ್ತಂ ಪರಿಣ್ಯವಿಶನ್ತ। ತಸ್ಮಾದ್ಯದನೇನಾನ್ನಮತ್ತಿ ತೇನೈತಾಸ್ತೃಪ್ಯನ್ತ್ಯೇವಗ್ಂ ಹ ವಾ ಏನಗ್ಂ ಸ್ವಾ ಅಭಿಸಂವಿಶನ್ತಿ ಭರ್ತಾ ಸ್ವಾನಾಗ್ಂ ಶ್ರೇಷ್ಠಃ ಪುರ ಏತಾ ಭವತ್ಯನ್ನಾದೋಽಧಿಪತಿರ್ಯ ಏವಂ ವೇದ ಯ ಉ ಹೈವಂವಿದಗ್ಂ ಸ್ವೇಷು ಪ್ರತಿ ಪ್ರತಿಬುಭೂಷತಿ ನ ಹೈವಾಲಂ ಭಾರ್ಯೇಭ್ಯೋ ಭವತ್ಯಥ ಯ ಏವೈತಮನುಭವತಿ ಯೋ ವೈ ತಮನು ಭಾರ್ಯಾನ್ ಬುಭೂಷತಿ ಸ ಹೈವಾಲಂ ಭಾರ್ಯೇಭ್ಯೋ ಭವತಿ ॥ ೧೮ ॥**

೧೮. ಆ ದೇವತೆಗಳು "ಅನ್ನವೆಂಬಿದೆಲ್ಲ ಇಷ್ಟೇ, ಅದನ್ನು ನಿನಗೆ ಆಗಾನಮಾಡಿಕೊಂಡಿರುತ್ತೀಯೆ. ಬಳಿಕ ಆ ಅನ್ನದಲ್ಲಿ ನಮ್ಮನ್ನು ಭಾಗವಂತರಾಗಿಸು'' ಎಂದರು. (ಪ್ರಾಣನು) "ಆ (ನೀವು) ನನ್ನ ಸುತ್ತಲೂ ಕೂತುಕೊಳ್ಳಿರಿ'' (ಎಂದನು). "ಹಾಗೇ ಆಗಲಿ'' ಎಂದು ಅವರು ಅವನ ಸುತ್ತಲೂ ಕುಳಿತುಕೊಂಡರು. ಆದ್ದರಿಂದ ಯಾವ ಅನ್ನವನ್ನು ಅವನಿಂದ ತಿನ್ನುತ್ತಾನೋ ಅದರಿಂದ ಇವರು ತೃಪ್ತರಾಗುತ್ತಾರೆ. ಯಾವನು ಹೀಗೆಂದು ಅರಿತುಕೊಳ್ಳುತ್ತಾನೋ ಹಾಗೆ ಇವನ ಸುತ್ತಲೂ ತನ್ನವರು ಕುಳಿತುಕೊಳ್ಳುತ್ತಾರೆ. ಅವನು (ತನ್ನವರ) ಪೋಷಕನೂ ಶ್ರೇಷ್ಠನೂ ಮುಂದೆ ಹೋಗುವವನೂ ಅನ್ನಾದನೂ ಅಧಿಪತಿಯೂ ಆಗುತ್ತಾನೆ. ಹೀಗೆಂದು ಅರಿತುಕೊಂಡಿರುವಾತನನ್ನು ತನ್ನವರಲ್ಲಿ ಯಾವನು ಪ್ರತಿಯಾಗಿ ಪ್ರತಿಯಾಗಿರಲು ಇಚ್ಛಿಸುತ್ತಾನೋ (ಅವನು ತನ್ನ) ಭಾರ್ಯರಿಗೆ ಶಕ್ತನಾಗಿರುವದಿಲ್ಲ; ಇನ್ನು ಯಾವನು ಇವನಿಗೆ ಅನುವಾಗಿರುತ್ತಾನೋ ಯಾವನು ಇವನಿಗೆ

ಅನುವಾಗಿ ಭಾರ್ಯರನ್ನು ಭರಣಮಾಡಲಿಚ್ಛಿಸುತ್ತಾನೋ ಅವನೇ (ತನ್ನ) ಭಾರ್ಯರಿಗೆ ಶಕ್ತನಾಗಿರುತ್ತಾನೆ.

## ಕಂಡಿಕೆಯು ಸಂಬಂಧ

(ಭಾಷ್ಯ)

೭೬. ತೇ ದೇವಾಃ। ನನ್ವವಧಾರಣಮಯುಕ್ತಂ ಪ್ರಾಣೇನೈವ ತದದ್ಯತ ಇತಿ। ವಾಗಾದೀನಾಮಪಿ ಅನ್ನನಿಮಿತ್ತೋಪಕಾರದರ್ಶನಾತ್। ನೈಷ ದೋಷಃ। ಪ್ರಾಣದ್ವಾರತ್ವಾತ್ ತದುಪಕಾರಸ್ಯ। ಕಥಂ ಪ್ರಾಣದ್ವಾರಕೋಽನ್ನಕೃತೋ ವಾಗಾದೀನಾಮ್ ಉಪಕಾರ ಇತಿ ? ಏತಮರ್ಥಂ ಪ್ರದರ್ಶಯನ್ ಆಹ—

(ಭಾಷ್ಯಾರ್ಥ)

'ತೇ ದೇವಾಃ' (ಎಂಬ ಕಂಡಿಕೆಯು ಸಂಬಂಧವೇನೆಂದರೆ): 'ಅದು ಪ್ರಾಣನಿಂದಲೇ ತಿನ್ನಲ್ಪಡುತ್ತದೆ' ಎಂದು (ಹಿಂದಿನ ಕಂಡಿಕೆಯಲ್ಲಿ) ಒತ್ತಿ ಹೇಳಿರುವದು ಸರಿಯಲ್ಲ. ಏಕೆಂದರೆ ವಾಗಾದಿಗಳಿಗೆ ಕೂಡ ಅನ್ನನಿಮಿತ್ತವಾದ ಉಪಕಾರವಾಗುತ್ತಿರುವದು ಕಂಡುಬರುತ್ತದೆ (ಎಂದು ಆಕ್ಷೇಪಿಸಬಹುದು. ಇದಕ್ಕೆ ಪರಿಹಾರವೇನೆಂದರೆ), ಇದೇನೂ ತಪ್ಪಲ್ಲ, ಏಕೆಂದರೆ ಆ ಉಪಕಾರವು ಪ್ರಾಣಮೂಲಕವಾಗಿರುತ್ತದೆ. ವಾಗಾದಿಗಳಿಗೆ ಅನ್ನದಿಂದಾಗುವ ಉಪಕಾರವು ಪ್ರಾಣಮೂಲಕವೇ ಎಂಬುದು ಹೇಗೆ ?– ಎಂಬೀ ವಿಷಯವನ್ನು ತಿಳಿಸಿಕೊಡುವದಕ್ಕೆ (ವೇದವು) ಹೀಗೆಂದು ಹೇಳುತ್ತಿದೆ:

## ವಾಗಾದಿಗಳಿಗೆ ಪ್ರಾಣನು ಅನ್ನವನ್ನು ಕೊಟ್ಟದ್ದು

(ಭಾಷ್ಯ)

೭೭. ತೇ ವಾಗಾದಯೋ ದೇವಾಃ। ಸ್ವವಿಷಯದ್ಯೋತನಾತ್ ದೇವಾಃ। ಅಬ್ರುವನ್ ಉಕ್ತವನ್ತಃ ಮುಖ್ಯಂ ಪ್ರಾಣಮ್। ಇದಮ್ ಏತಾವತ್, ನಾತೋಽಧಿಕಮಸ್ತಿ। ವೈ ಇತಿ ಸ್ಮರಣಾರ್ಥಃ। ಇದಂ ತತ್ ಸರ್ವಮ್ ಏತಾವದೇವ। ಕಿಮ್ ? ಯದನ್ನಂ ಪ್ರಾಣಸ್ಥಿತಿಕರಮ್ ಅದ್ಯತೇ ಲೋಕೇ। ತತ್ ಸರ್ವಮ್ ಆತ್ಮನೇ ಆತ್ಮಾರ್ಥಮ್ ಆಗಾಸೀಃ ಆಗೀತವಾನಸಿ। ಆಗಾನೇನ ಆತ್ಮಸಾತ್ಕೃತಮ್ ಇತ್ಯರ್ಥಃ। ವಯಂ ಚ ಅನ್ನಮನ್ತರೇಣ ಸ್ಥಾತುಂ ನೋತ್ಸಹಾಮಹೇ। ಅತಃ ಅನು ಪಶ್ಚಾತ್ ನಃ ಅಸ್ಮಾನ್ ಅಸ್ಮಿನ್ ಅನ್ನೇ ಆತ್ಮಾರ್ಥೇ ತವಾನ್ನೇ ಆಭಜಸ್ವ ಆಭಾಜಯಸ್ವ। ಣಿಚೋಽಶ್ರವಣಂ ಛಾನ್ದಸಮ್। ಅಸ್ಮಾಂಶ್ಚ ಅನ್ನಭಾಗಿನಃ ಕುರು। ಇತರ ಆಹ। ತೇ ಯೂಯಂ ಯದಿ ಅನ್ನಾರ್ಥಿನಃ ವೈ ಮಾ ಮಾಮ್

ಅಭಿಸಂವಿಶತ ಸಮನ್ತತೋ ಮಾಮ್ ಆಭಿಮುಖ್ಯೇನ ನಿವಿಶತ ಇತಿ। ಏವಮುಕ್ತವತಿ ಪ್ರಾಣೇ ತಥೇತಿ ಏವಮಿತಿ ತಂ ಪ್ರಾಣಮ್ ಪರಿಸಮನ್ತಂ ಪರಿಸಮನ್ತಾತ್ ನ್ಯವಿಶನ್ತ ನಿಶ್ಚಯೇನ ಅವಿಶನ್ತ। ತಂ ಪ್ರಾಣಂ ಪರಿವೇಷ್ಟ್ಯ ನಿವಿಷ್ಟವನ್ತಃ ಇತ್ಯರ್ಥಃ। ತಥಾ ನಿವಿಷ್ಟಾನಾಂ ಪ್ರಾಣಾನುಜ್ಞಯಾ ತೇಷಾಂ ಪ್ರಾಣೇನೈವ ಅದ್ಯಮಾನಂ ಪ್ರಾಣಸ್ಥಿತಿಕರಂ ಸತ್ ಅನ್ನಂ ತೃಪ್ತಿಕರಂ ಭವತಿ, ನ ಸ್ವಾತನ್ತ್ರ್ಯೇಣ ಅನ್ನಸಂಬನ್ಧೋ ವಾಗಾದೀನಾಮ್। ತಸ್ಮಾತ್ ಯುಕ್ತ ಮೇವ ಅವಧಾರಣಮ್ 'ಅನೇನೈವ ತದದ್ಯತೇ ಇತಿ। ತದೇವ ಚಾಹ। ತಸ್ಮಾತ್ ಯಸ್ಮಾತ್ ಪ್ರಾಣಾಶ್ರಯತಯೈವ ಪ್ರಾಣಾನುಜ್ಞಯಾ ಅಭಿಸಂನಿವಿಷ್ಟಾ ವಾಗಾದಿದೇವತಾಃ। ತಸ್ಮಾತ್ ಯದನ್ನಮ್ ಅನೇನ ಪ್ರಾಣೇನ ಅತ್ತಿ ಲೋಕಃ ತೇನ ಅನ್ನೇನ ಏತಾ ವಾಗಾದ್ಯಾಸ್ತೃಪ್ಯನ್ತಿ ॥

(ಭಾಷ್ಯಾರ್ಥ)

ಆ ವಾಗಾದಿದೇವತೆಗಳು-ತಮ್ಮ (ತಮ್ಮ) ವಿಷಯವನ್ನು ಬೆಳಗುವದರಿಂದ (ವಾಗಾದಿಗಳು) ದೇವತೆಗಳೆನಿಸಿರುತ್ತವೆ. ಅವು- ಮುಖ್ಯಪ್ರಾಣನನ್ನು ಕುರಿತು ಎಂದರು, (ಹೀಗೆಂದು) ಹೇಳಿದರು. "ಇದು ಇಷ್ಟೇ ಇದಕ್ಕಿಂತ ಹೆಚ್ಚಿಲ್ಲ. ವೈ ಎಂಬುದು (ಅಷ್ಟೇ ಎಂದು) ನೆನಪಿಗೆ ತಂದುಕೊಡುವದಕ್ಕಾಗಿ. ಅದೆಲ್ಲವೂ ಇಷ್ಟೆ. ಯಾವದು? ಪ್ರಾಣನು ನಿಂತಿರುವದಕ್ಕೆ ಕಾರಣವಾಗಿ ಲೋಕದಲ್ಲಿ ತಿನ್ನುತ್ತಾರಲ್ಲ ಆ ಅನ್ನವು. ಅದೆಲ್ಲವನ್ನೂ ನಿನಗೆ ನಿನಗೋಸ್ಕರವಾಗಿಯೇ ಆಗಾನಮಾಡಿರುವೆ, ಆಗಾನಮಾಡಿಕೊಂಡವನಾಗಿರುತ್ತೀಯೆ, ಆಗಾನದಿಂದ ವಶಪಡಿಸಿಕೊಂಡಿರುತ್ತೀಯೆ ಎಂದರ್ಥ. ಆದರೆ ನಾವು ಅನ್ನವಿಲ್ಲದೆ ಇರುವದಕ್ಕೆ ಶಕ್ತರಲ್ಲ. ಆದ್ದರಿಂದ ಬಳಿಕ ಇನ್ನುಮೇಲೆ (ನಃ=ಅಸ್ಮಾನ್) ನಮ್ಮನ್ನು ಈ ಅನ್ನದಲ್ಲಿ (ಆ ಭಜಸ್ವ=ಆ ಭಾಜ ಯಸ್ವ; ಈ ಮಾತಿನಲ್ಲಿ) ಣಿಚ್‌ಪ್ರತ್ಯಯವು ಇಲ್ಲದಿರುವದು ವೈದಿಕಪ್ರಕ್ರಿಯೆ.[1] ನಮ್ಮನ್ನು (ಈ) ಅನ್ನದಲ್ಲಿ ಭಾಗವಂತರಾಗಿ ಮಾಡು ಎಂದರ್ಥ.

(ಆಗ ಆ) ಇನ್ನೊಬ್ಬ(ನಾದ ಮುಖ್ಯಪ್ರಾಣನು) ಹೇಳುತ್ತಾನೆ: ಆ ನೀವು ಅನ್ನವನ್ನು ಬಯಸುವಿರಾದರೆ (ಬಯಸುವಿ)ರಲ್ಲವೆ (ಮಾ=ಮಾಮ್) ನನ್ನ ಸುತ್ತಲೂ ಕೂತುಕೊಳ್ಳಿರಿ ; ಸುತ್ತಲೂ ನನಗೆ ಎದುರಾಗಿ (ಅಭಿ) ಕೂತುಕೊಳ್ಳಿರಿ.

ಪ್ರಾಣನು ಹೀಗೆನ್ನಲು, ಹಾಗೇ (ಆಗಲಿ), ಹೀಗೆಯೇ (ಮಾಡುವೆವು) ಎಂದು ಆ ಪ್ರಾಣನ (ಪರಿಸಮನ್ತಮ್=ಪರಿ ಸಮನ್ತಾತ್) ಸುತ್ತಲೂ (ನ್ಯವಿಶನ್ತ) ನಿಶ್ಚಯದಿಂದ (ನಿ) ಕುಳಿತುಕೊಂಡರು (ವಿಶ್); ಆ ಪ್ರಾಣನನ್ನು ಬಳಸಿಕೊಂಡು ಕೂತುಕೊಂಡರು (ಎಂದರ್ಥ.)

---

1. ಪ್ರೇರಣಾರ್ಥದ ಪ್ರತ್ಯಯಕ್ಕೆ ಪಾಣಿನೀಯವ್ಯಾಕರಣದಲ್ಲಿ ಣಿಚ್ ಎಂದು ಹೆಸರು. ಆಭಾಜಯಸ್ವ ಎಂಬುದಕ್ಕೆ ಬದಲು ಣಿಚ್‌ಪ್ರತ್ಯಯವಿಲ್ಲದೆ 'ಆಭಜಸ್ವ' ಎಂದಿಷ್ಟೇ ಇರುವದು ವೈದಿಕಪ್ರಯೋಗ. ವೇದದಲ್ಲಿ ಹೀಗೆ ಪ್ರಯೋಗವುಂಟು.

ಹೀಗೆ ಪ್ರಾಣನ ಅನುಮತಿಯಿಂದ ಕೂತುಕೊಂಡದ್ದರಿಂದ ಪ್ರಾಣನೇ ತಿನ್ನುವದಾದ ಅನ್ನವು ಪ್ರಾಣನ ಇರುವಿಕೆಗೆ ಸಾಧಕವಾಗಿರುವದಾದರೂ ಅವರಿಗೂ ತೃಪ್ತಿಕರವಾಗಿರುತ್ತದೆ ; (ಇಷ್ಟೇ ಹೊರತು) ಸ್ವತಂತ್ರವಾಗಿ ವಾಗಾದಿಗಳಿಗೆ ಅನ್ನದ ಸಂಬಂಧವಿರುವದಿಲ್ಲ. ಆದ್ದರಿಂದ "ಅನನಿಂದಲೇ ಅದು ತಿನ್ನಲ್ಪಡುತ್ತದೆ" ಎಂದು (ಹಿಂದಿನ ಕಂಡಿಕೆಯಲ್ಲಿ) ಒತ್ತಿ ಹೇಳಿದ್ದು ಸರಿಯೇ. ಇದನ್ನೇ (ಈ ಮುಂದಿನ ವಾಕ್ಯವು) ಹೇಳುತ್ತದೆ. ಆದಕಾರಣ, ಪ್ರಾಣನ ಆಶ್ರಯದಿಂದಲೇ ಪ್ರಾಣನ ಅನುಮತಿಯಿಂದ ವಾಗಾದಿದೇವತೆಗಳು ಸುತ್ತಲೂ ಅಭಿಮುಖವಾಗಿ ಕೂತುಕೊಂಡರಲ್ಲ ಆ ಕಾರಣದಿಂದ, ಜನವು ಅನನಿಂಂದ ಪ್ರಾಣನಿಂದ ಅನ್ನವನ್ನು ತಿನ್ನುತ್ತದೆ; ಆ ಅನ್ನದಿಂದ ವಾಗಾದಿಗಳು ತೃಪ್ತರಾಗುತ್ತಿವೆ.

## ಉಪಾಸನೆಯ ಫಲ

(ಭಾಷ್ಯ)

೭೮. ವಾಗ್ವಾದ್ಯಾಶ್ರಯಂ ಪ್ರಾಣಂ ಯೋ ವೇದ ವಾಗಾದಯಶ್ಚ ಪಞ್ಚ ಪ್ರಾಣಾಶ್ರಯಾ ಇತಿ ತಮುಪಿ ಏವಮೇವ ಹ ವೈ ಸ್ವಾಃ ಜ್ಞಾತಯಃ ಅಭಿಸಂವಿಶನ್ತಿ। ವಾಗಾದಯ ಇವ ಪ್ರಾಣಮ್। ಜ್ಞಾತೀನಾಮ್ ಆಶ್ರಯಣೀಯೋ ಭವತಿ ಇತ್ಯಭಿಪ್ರಾಯಃ। ಅಭಿಸಂನಿವಿಷ್ಟಾನಾಂ ಚ ಸ್ವಾನಾಂ ಪ್ರಾಣವದೇವ ವಾಗಾದೀನಾಂ ಸ್ವಾನ್ನೇನ ಭರ್ತಾ ಭವತಿ। ತಥಾ ಶ್ರೇಷ್ಠಃ ಪುರಃ ಅಗ್ರತಃ ಏತಾ ಗನ್ತಾ ಭವತಿ। ವಾಗಾದೀನಾಮಿವ ಪ್ರಾಣಃ। ತಥಾ ಅನ್ನಾದಃ ಅನಾಮಯಾವೀ ಇತ್ಯರ್ಥಃ। ಅಧಿಪತಿಃ ಅಧಿಷ್ಠಾಯ ಪಾಲಯಿತಾ ಸ್ವತನ್ತ್ರಃ ಪತಿಃ ಪ್ರಾಣವದೇವ ವಾಗಾದೀನಾಂ ಯ ಏವಂ ಪ್ರಾಣಂ ವೇದ ತಸ್ಯ ಏತದ್ ಯಥೋಕ್ತಂ ಫಲಂ ಭವತಿ। ಕಿಂ ಚ ಯು ಉ ಹ ಏವಂವಿದಂ ಪ್ರಾಣವಿದಂ ಪ್ರತಿ ಸ್ವೇಷು ಜ್ಞಾತೀನಾಂ ಮಧ್ಯೇ ಪ್ರತಿಃ ಪ್ರತಿಕೂಲಃ ಬುಭೂಷತಿ ಪ್ರತಿಸ್ಪರ್ಧೀ ಭವಿತುಮಿಚ್ಛತಿ ಸಃ ಅಸುರಾ ಇವ ಪ್ರಾಣ ಪ್ರತಿಸ್ಪರ್ಧಿನಃ ನ ಹೈವ ಅಲಂ ನ ಪರ್ಯಾಪ್ತಃ ಭಾರ್ಯೇಭ್ಯೋ ಭರಣೀಯೇಭ್ಯೋ ಭವತಿ ಭರ್ತುಮ್ ಇತ್ಯರ್ಥಃ। ಅಥ ಪುನಃ ಯ ಏವ ಜ್ಞಾತೀನಾಂ ಮಧ್ಯೇ ಏತಮ್ ಏವಂವಿದಂ ವಾಗಾದಯ ಇವ ಪ್ರಾಣಮ್ ಅನು ಅನುಗತಃ ಭವತಿ ಯೋ ವಾ ಏತಮ್ ಏವಂವಿದಮ್ ಅನ್ವೇವ ಅನುವರ್ತಯನ್ನೇವ ಆತ್ಮೀಯಾನ್ ಭಾರ್ಯಾನ್ ಬುಭೂರ್ಷತಿ ಭರ್ತುಮಿಚ್ಛತಿ ಯಥೈವ ವಾಗಾದಯಃ ಪ್ರಾಣಾನುವೃತ್ತ್ಯಾ ಆತ್ಮಬುಭೂರ್ಷವ ಆಸನ್। ಸ ಹೈವ ಅಲಂ ಪರ್ಯಾಪ್ತಃ ಭಾರ್ಯೇಭ್ಯಃ ಭರಣೀಯೇಭ್ಯಃ ಭವತಿ ಭರ್ತುಮ್, ನೇತರಃ ಸ್ವತನ್ತ್ರಃ। ಸರ್ವಮೇತತ್ ಪ್ರಾಣಗುಣವಿಜ್ಞಾನಫಲಮ್ ಉಕ್ತಮ್ ॥

(ಭಾಷ್ಯಾರ್ಥ)

ವಾಗಾದಿಗಳಿಗೆ ಆಶ್ರಯನಾಗಿರುವ ಪ್ರಾಣನನ್ನು ಯಾವನು ಅರಿತುಕೊಂಡಿರುವನೋ, ವಾಗಾದಿಗಳು ಐದೂ ಪ್ರಾಣವನ್ನು ಆಶ್ರಯಿಸಿಕೊಂಡಿರುವವೆಂದೂ

(ಅರಿತುಕೊಂಡಿರುವನೋ) ಅವನನ್ನು ಹೀಗೆಯೇ ವಾಗಾದಿಗಳು ಪ್ರಾಣನನ್ನು (ಬಳಸಿಕೊಂಡಿರುವಂತೆಯೇ) ತನ್ನವರು, ಜ್ಞಾತಿಗಳು, (ಆಶ್ರಯಿಸಿಕೊಂಡು) ಬಳಸಿಕೊಳ್ಳುವರು. ಬಳಸಿ ಕೂತುಕೊಂಡ ತನ್ನವರಿಗೆ ವಾಗಾದಿಗಳಿಗೆ ಪ್ರಾಣನು (ಪೋಷಕನಾಗಿರು)ವಂತೆಯೇ ತನ್ನ ಅನ್ನದಿಂದ ಪೋಷಕನಾಗುತ್ತಾನೆ. ವಾಗಾದಿಗಳಿಗೆ ಪ್ರಾಣನಂತೆಯೇ ಶ್ರೇಷ್ಠನೂ ಮುಂದೆ ಹೋಗುವವನೂ ನಡೆಯುವವನೂ ಆಗಿರುತ್ತಾನೆ. ಮತ್ತು ಅನ್ನಾದನು ಎಂದರೆ ರೋಗವಿಲ್ಲದವನು ಎಂದರ್ಥ; ಅಧಿಪತಿಯೂ ಮೇಲಿದ್ದುಕೊಂಡು ಕಾಪಾಡುವವನೂ ಎಂದರೆ ಸ್ವತಂತ್ರನಾದ ಪತಿಯೂ ವಾಗಾದಿಗಳಿಗೆ ಪ್ರಾಣನು (ಪತಿಯಾಗಿರು)ವಂತೆಯೇ (ಪತಿಯೂ) ಆಗುತ್ತಾನೆ. ಯಾವನು ಹೀಗೆಂದು ಪ್ರಾಣನನ್ನು ಅರಿತುಕೊಳ್ಳುತ್ತಾನೋ ಅವನಿಗೆ ಈ ಮೇಲೆ ಹೇಳಿದ ಫಲವು ಉಂಟಾಗುತ್ತದೆ.

ಮತ್ತು ಹೀಗೆಂದು ಅರಿತುಕೊಂಡ ಪ್ರಾಣೋಪಾಸಕನನ್ನು ಕುರಿತು ತನ್ನವನಲ್ಲಿ ಜ್ಞಾತಿಗಳೊಳಗೆ ಯಾವನು ಪ್ರತಿಯಾಗಿ ಪ್ರತಿಕೂಲನಾಗಿ ಇರಲಿಚ್ಛಿಸುತ್ತಾನೋ ಎದುರಾಳಿಯಾಗಿರಲು ಬಯಸುತ್ತಾನೋ ಅವನು ಪ್ರಾಣನಮೇಲೆ ಸ್ಪರ್ಧೆಮಾಡಿದ ಅಸುರರಂತೆ ಭಾರ್ಯರಿಗೆ, ಪೋಷಕರಿಗೆ ಶಕ್ತನಾಗುವದಿಲ್ಲ; (ಅವರನ್ನು ಕಾಪಾಡುವದಕ್ಕೆ ಸಮರ್ಥನಾಗುವದಿಲ್ಲ ಎಂದರ್ಥ. ಇದಕ್ಕೆ ಬದಲು ಜ್ಞಾತಿಗಳೊಳಗೆ ಈ ಹೀಗೆಂದು ಅರಿತುಕೊಂಡವನಿಗೆ, ವಾಗಾದಿಗಳು ಪ್ರಾಣನನ್ನು (ಅನುಸರಿಸಿಕೊಂಡಿರು)ವಂತೆ ಅನುವಾಗಿ (ಇವನನ್ನು) ಅನುಸರಿಸಿಕೊಂಡೇ ತನ್ನವರಾದ ಭಾರ್ಯರನ್ನು (ಪೋಷ್ಯರನ್ನು) ಭರಣಮಾಡಲಿಚ್ಛಿಸುತ್ತಾನೋ ಪೋಷಿಸಲಿಚ್ಛಿಸುತ್ತಾನೋ ಹೇಗೆ ವಾಗಾದಿಗಳು ಪ್ರಾಣನನ್ನು ಅನುವರ್ತಿಸಿಕೊಂಡು ತಮ್ಮನ್ನು ತಾವು ಪೋಷಿಸಿಕೊಳ್ಳಲಿಚ್ಛಿಸುವವರಾಗಿದ್ದವೋ (ಹಾಗೆ ಯಾವನು ಇಚ್ಛಿಸುತ್ತಾನೋ)–ಅವನೇ ಭಾರ್ಯರಿಗೆ, ಪೋಷ್ಯರಿಗೆ, (ಅವರನ್ನು) ಪೋಷಣೆ ಮಾಡುವ ಶಕ್ತಿಯುಳ್ಳವನಾಗಿರುತ್ತಾನೆಯೇ ಹೊರತು ಸ್ವತಂತ್ರವಾಗಿರುವ ಮತ್ತೊಬ್ಬನು (ಶಕ್ತ)ನಾಗಿರುವದಿಲ್ಲ. ಇದೆಲ್ಲವೂ ಪ್ರಾಣನ (ಈ) ಗುಣವನ್ನು ಉಪಾಸನೆಮಾಡಿದ್ದರ ಫಲವು.

## ಪ್ರಾಣನು ಆಂಗಿರಸನೆಂಬುದು ಹೇಗೆ?

(ಉಪನಿಷತ್ತು)

**ಸೋಽಯಾಸ್ಯ ಆಙ್ಗಿರಸೋಽಙ್ಗಾನಾಗ್ಂ ಹಿ ರಸಃ ಪ್ರಾಣೋ ವಾ ಅಙ್ಗಾನಾಗ್ಂ ರಸಃ ಪ್ರಾಣೋ ಹಿ ವಾ ಅಙ್ಗಾನಾಗ್ಂ ರಸಸ್ತಸ್ಮಾದ್ಯಸ್ಮಾತ್ಕಸ್ಮಾಚ್ಚಾಙ್ಗಾತ್ ಪ್ರಾಣ ಉತ್ಕ್ರಾಮತಿ ತದೇವ ತಚ್ಛುಷ್ಯತ್ಯೇಷ ಹಿ ವಾ ಅಙ್ಗಾನಾಗ್ಂ ರಸಃ ॥ ೧೯ ॥**

೧. ಅವನು ಅಯಾಸ್ಯ ಆಂಗಿರಸನು; ಏಕೆಂದರೆ (ಅವನು) ಅಂಗಗಳ ರಸವು. ಪ್ರಾಣನೇ ಅಂಗಗಳ ರಸವು, ಪ್ರಾಣನೇ ಅಲ್ಲವೆ, ಅಂಗಗಳ ರಸವು? ಆದ್ದರಿಂದಲೇ ಯಾವ ಯಾವ ಅಂಗದಿಂದ ಪ್ರಾಣವು ಬಿಟ್ಟು ಹೋಗುವದೋ ಅಲ್ಲಿಯೇ ಅದು ಒಣಗುತ್ತದೆ. ಇವನೇ ಅಂಗಗಳ ರಸವೆಂಬುದು ಸರಿ.

## ಕಂಡಿಕೆಯ ಸಂಬಂಧ

(ಭಾಷ್ಯ)

೭೯. ಕಾರ್ಯಕರಣಾನಾಮ್ ಆತ್ಮತ್ವಪ್ರತಿಪಾದನಾಯ ಪ್ರಾಣಸ್ಯ ಆಙ್ಗಿರಸತ್ವಮ್ ಉಪನ್ಯಸ್ತಮ್ 'ಸೋಽಯಾಸ್ಯ ಆಙ್ಗಿರಸಃ' ಇತಿ| ಅಸ್ಮಾದ್ ಹೇತೋರಯಮ್ ಆಙ್ಗಿರಸ ಇತಿ ಆಙ್ಗಿರಸತ್ವೇ ಹೇತುರ್ನೋಕ್ತಃ| ತದ್ಧೇತುಸಿದ್ಧ್ಯರ್ಥಮ್ ಆರಭ್ಯತೇ| ತದ್ಧೇತುಸಿದ್ಧ್ಯಾಯತ್ತಂ ಹಿ ಕಾರ್ಯಕರಣಾತ್ಮತ್ವಂ ಪ್ರಾಣಸ್ಯ| ಅನನ್ತರಂ ಚ ವಾಗಾದೀನಾಂ ಪ್ರಾಣಾಧೀನತಾ ಉಕ್ತಾ| ಸಾ ಚ ಕಥಮುಪಪಾದನೀಯೇತಿ? ಆಹ –

(ಭಾಷ್ಯಾರ್ಥ)

ಕಾರ್ಯಕರಣಗಳಿಗೆ ಆತ್ಮನೆಂದು ತಿಳಿಸುವದಕ್ಕಾಗಿ 'ಅವನು ಅಯಾಸ್ಯ ಆಂಗಿರಸನು' (೧-೩-೮) ಎಂದು ಪ್ರಾಣನಿಗೆ ಆಂಗಿರಸತ್ವವನ್ನು ಹೇಳಿದ್ದಾಯಿತು. ಇಂಥ ಕಾರಣದಿಂದ ಇವನು ಆಂಗಿರಸನು ಎಂದು ಆಂಗಿರಸತ್ವಕ್ಕೆ ಹೇತುವನ್ನು ಹೇಳಿರುವದಿಲ್ಲ. ಅದಕ್ಕೆ ಹೇತುವನ್ನು ಸಾಧಿಸುವದಕ್ಕಾಗಿ ಈ ಕಂಡಿಕೆಯನ್ನು ಆರಂಭಿಸಿರುತ್ತದೆ. ಅದಕ್ಕೆ ಹೇತುವು ಸಿದ್ಧವಾಗುವದನ್ನಲ್ಲವೆ, ಪ್ರಾಣನು ಕಾರ್ಯಕರಣಗಳ ಆತ್ಮನೆಂಬುದು ಅವಲಂಬಿಸಿರುತ್ತದೆ? ಮತ್ತು ಹಿಂದಿನ (ಕಂಡಿಕೆ)ಯಲ್ಲಿ ವಾಗಾದಿಗಳು ಪ್ರಾಣನಿಗೆ ಅಧೀನರಾಗಿರುವರೆಂದು ಹೇಳಿರುತ್ತದೆ(ಯಷ್ಟೆ); ಅದನ್ನು ಸರಿಯೆಂದು ತೋರಿಸಿಕೊಡುವದು ಹೇಗೆ? (ಎಂದರೆ ಅದನ್ನು ತಿಳಿಸಿಕೊಡು)ವದಕ್ಕಾಗಿ (ಶ್ರುತಿ) ಹೇಳುತ್ತದೆ.

## ಪ್ರಾಣನೇ ಕಾರ್ಯಕರಣಗಳಿಗೆ ಆತ್ಮನು

(ಭಾಷ್ಯ)

೮೦. "ಸೋಽಯಾಸ್ಯ ಆಙ್ಗಿರಸಃ' ಇತ್ಯಾದಿ ಯಥೋಪನ್ಯಸ್ತಮೇವ ಉಪಾದೀಯತ ಉತ್ತರಾರ್ಥಮ್| 'ಪ್ರಾಣೋ ವಾ ಅಙ್ಗಾನಾಂ ರಸಃ' ಇತ್ಯೇವಮನ್ತಂ ವಾಕ್ಯಂ ಯಥಾವ್ಯಾಖ್ಯಾತಾರ್ಥಮೇವ ಪುನಃ ಸ್ಮಾರಯತಿ| ಕಥಂ 'ಪ್ರಾಣೋ ವಾ

ಅಙ್ಗಾನಾಂ ರಸಃ' ಇತಿ ? ಪ್ರಾಣೋ ಹಿ। ಹಿ ಶಬ್ದಃ ಪ್ರಸಿದ್ಧೌ। ಅಙ್ಗಾನಾಂ ರಸಃ। ಪ್ರಸಿದ್ಧಮೇತತ್ ಪ್ರಾಣಸ್ಯ ಅಙ್ಗರಸತ್ವಮ್, ನ ವಾಗಾದೀನಾಮ್। ತಸ್ಮಾತ್ ಯುಕ್ತಂ 'ಪ್ರಾಣೋ ವಾ' ಇತಿ ಸ್ಮಾರಣಮ್ । ಕಥಂ ಪುನಃ ಪ್ರಸಿದ್ಧತ್ವಮಿತಿ ? ಅತ ಆಹ। ತಸ್ಮಾಚ್ಛಬ್ದಃ ಉಪಸಂಹಾರಾರ್ಥಃ ಉಪರಿತ್ವೇನ ಸಂಬಧ್ಯತೇ । ಯಸ್ಮಾತ್ ಯತೋಽವಯವಾತ್ ಕಸ್ಮಾತ್ ಅನುಕ್ತವಿಶೇಷಾತ್। ಯಸ್ಮಾತ್ಕಸ್ಮಾತ್ ಯತಃ ಕುತಶ್ಚಿಚ್ಚ ಅಙ್ಗಾತ್ ಶರೀರಾವಯವಾತ್ ಅವಿಶೇಷಿತಾತ್ ಪ್ರಾಣ ಉತ್ಕ್ರಾಮತಿ ಅಪಸರ್ಪತಿ ತದೇವ ತತ್ರೈವ ತದಙ್ಗಂ ಶುಷ್ಯತಿ ನೀರಸಂ ಭವತಿ ಶೋಷಮುಪೈತಿ । 'ತಸ್ಮಾದೇಷ ಹಿ ವಾ ಅಙ್ಗಾನಾಂ ರಸಃ' ಇತ್ಯುಪಸಂಹಾರಃ। ಅತಃ ಕಾರ್ಯಕರಣಾನಾಮ್ ಆತ್ಮಾ ಪ್ರಾಣಃ ಇತ್ಯೇತತ್ ಸಿದ್ಧಮ್। ಆತ್ಮಾಪಾಯೇ ಹಿ ಶೋಷೋ ಮರಣಂ ಸ್ಯಾತ್ । ತಸ್ಮಾತ್ ತೇನ ಜೀವನ್ತಿ ಪ್ರಾಣಿನಃ ಸರ್ವೇ। ತಸ್ಮಾತ್ ಅಪಾಸ್ಯ ವಾಗಾದೀನ್ ಪ್ರಾಣ ಏವ ಉಪಾಸ್ಯಃ ಇತಿ ಸಮುದಾಯಾರ್ಥಃ ॥

(ಭಾಷ್ಯಾರ್ಥ)

'ಸೋಽಯಾಸ್ಯ ಆಙ್ಗಿರಸಃ' (ಅವನು ಆಯಾಸ್ಯ ಆಂಗಿರಸನು) ಎಂದು ಮುಂತಾಗಿ (೮ನೆಯ ಕಂಡಿಕೆಯಲ್ಲಿ) ಹೇಳಿದಂತೆಯೇ (ವಾಕ್ಯವನ್ನು) ಮುಂದಿನ (ವಿಷಯವನ್ನು ತಿಳಿಸುವ)ದಕ್ಕಾಗಿ ತೆಗೆದುಕೊಂಡು (ಇಲ್ಲಿ ಅನುವಾದ)ಮಾಡಿದೆ. "ಪ್ರಾಣೋ ವಾ ಅಙ್ಗಾನಾಂ ರಸಃ" (ಪ್ರಾಣನೇ ಅಂಗಗಳ ರಸವು) ಎಂಬ ವರೆಗಿನ ವಾಕ್ಯವು ಹಿಂದೆ (ನಾವು) ವಿವರಿಸಿದ ಅರ್ಥವುಳ್ಳದ್ದೇ; ಅದನ್ನು ಮತ್ತೆ ನೆನಪಿಗೆ ತಂದಿರುತ್ತದೆ. ಪ್ರಾಣನೇ ಅಂಗಗಳ ರಸವು ಎಂಬುದು ಹೇಗೆ? (ಎಂದರೆ) ಪ್ರಾಣನೇ ಅಲ್ಲವೆ–ಹಿ (ಅಲ್ಲವೆ) ಎಂಬ ಮಾತು ಪ್ರಸಿದ್ಧಿಯನ್ನು ತಿಳಿಸುವದಕ್ಕೆ (ಬಂದಿದೆ. ಪ್ರಾಣನೇ ಅಲ್ಲವೆ,) ಅಂಗಗಳ ರಸವು? ಪ್ರಾಣನೇ ಅಂಗಗಳ ರಸವು, ವಾಗಾದಿಗಳಲ್ಲ ಎಂಬುದು ಪ್ರಸಿದ್ಧವು ; ಆದ್ದರಿಂದ 'ಪ್ರಾಣನೇ' (ಅಂಗಗಳ ರಸವು) ಎಂದು ನೆನಪಿಗೆ ತಂದುಕೊಟ್ಟಿರುವದು ಯುಕ್ತವೇ.

ಇದು ಪ್ರಸಿದ್ಧವೆಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ.[1] 'ತಸ್ಮಾತ್' (ಆದ್ದರಿಂದ) ಎಂಬ( ಮಾತು) ಉಪಸಂಹಾರಕ್ಕಾಗಿ (ಬಂದದ್ದು, ಅದು) ಮುಂದಕ್ಕೆ ಸಂಬಂಧಿಸುತ್ತದೆ. (ಹೇಗೆಂದರೆ), ಯಸ್ಮಾತ್ (ಯಾವದರಿಂದ) ಎಂದರೆ ಯಾವ ಅವಯುವದಿಂದ ; ಕಸ್ಮಾತ್ (ಯಾವದರಿಂದಲೇ ಆಗಲಿ) ಎಂದರೆ (ಇಂಥದ್ದೆಂದು) ಗೊತ್ತಾಗಿ ಹೇಳದೆ ಇರುವ (ಅವಯುವ)ದಿಂದ ಯಾವ ಯಾವ ಅಂಗದಿಂದ, ಎಂದರೆ ಇಂಥದ್ದೆಂದು ನಿರ್ದಿಷ್ಟವಾಗದ ಶರೀರಾವಯುವದಿಂದ, ಪ್ರಾಣವು ಬಿಟ್ಟುಹೋಗು

---

1. ಈ ಹೇತುವನ್ನು ಹೇಳುವದಕ್ಕಾಗಿಯೇ ಎಂಟನೆಯ ಕಂಡಿಕೆಯ ವಾಕ್ಯವನ್ನು ಇಲ್ಲಿ ಅನುವಾದಮಾಡಿ ನೆನಪಿಗೆ ತಂದುಕೊಟ್ಟಿರುವದು.

ವದೋ ಅಗಲಿಹೋಗುವದೋ (ತದೇವ=ತತ್ರೈವ) ಅಲ್ಲಿಯೇ ಆ ಲಿಂಗವು ಒಣಗುತ್ತದೆ. ನೀರಸವಾಗುತ್ತದೆ, ಒಣಕಲಾಗುತ್ತದೆ. ಆದ್ದರಿಂದ ಇದೇ ಅಂಗಗಳ ರಸವು ಎಂದು ಉಪಸಂಹಾರ. ಆದ್ದರಿಂದ ಕಾರ್ಯಕರಣಗಳಿಗೆ ಪ್ರಾಣವು ಆತ್ಮನು ಎಂಬುದು ಸಿದ್ಧವಾಯಿತು. ಆತ್ಮವು ಹೋದರಲ್ಲವೆ, ಒಣಕಲಾಗುವದು. ಸಾಯುವದು? ಆದ್ದರಿಂದ ಆ (ಪ್ರಾಣನಿಂದ) ಎಲ್ಲರೂ ಬದುಕಿರುತ್ತಾರೆ. ಆದ್ದರಿಂದ ವಾಗಾದಿಗಳನ್ನು ಬಿಟ್ಟು ಪ್ರಾಣನನ್ನೇ ಉಪಾಸನೆಮಾಡತಕ್ಕದ್ದು, ಎಂದು ಒಟ್ಟರ್ಥ.

## ಪ್ರಾಣನು ಋಕ್ಕಿನ ಆತ್ಮನು

(ಉಪನಿಷತ್ತು)

**ಏಷ ಉ ಏವ ಬೃಹಸ್ಪತಿರ್ವಾಗ್ವೈ ಬೃಹತೀ ತಸ್ಯಾ ಏಷ ಪತಿಸ್ತಸ್ಮಾದು ಬೃಹಸ್ಪತಿಃ ॥ ೨೦ ॥**

೨೦. ಮತ್ತು ಈತನೇ ಬೃಹಸ್ಪತಿಯು, ವಾಕ್ಕೇ ಅಲ್ಲವೆ, ಬೃಹಸ್ಪತಿಯು? ಅದಕ್ಕೆ ಇವನು ಪತಿಯು. ಆದ್ದರಿಂದ ಇವನು ಬೃಹಸ್ಪತಿಯು.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೮೧. "ಏಷ ಉ" । ನ ಕೇವಲಂ ಕಾರ್ಯಕರಣಯೋರೇವ ಆತ್ಮಾ ಪ್ರಾಣಃ ರೂಪಕರ್ಮಭೂತಯೋಃ । ಕಿಂ ತರ್ಹಿ ಋಗ್ಯಜುಃಸಾಮ್ನಾಂ ನಾಮಭೂತಾನಾಮ್ ಆತ್ಮಾ ಇತಿ ಸರ್ವಾತ್ಮಕತಯಾ ಪ್ರಾಣಂ ಸ್ತುವನ್ ಮಹೀಕರೋತಿ ಉಪಾಸ್ಯತ್ವಾಯ ॥

(ಭಾಷ್ಯಾರ್ಥ)

"ಏಷ ಉ" (ಎಂದು ಮುಂತಾಗಿರುವ ಮುಂದಿನ ಗ್ರಂಥದ ಸಂಬಂಧವೇನೆಂದರೆ), ಪ್ರಾಣನು ರೂಪಕರ್ಮಗಳಾಗಿರುವ[1] ಕಾರ್ಯಕರಣಗಳಿಗೆ ಮಾತ್ರವೇ ಆತ್ಮನಾಗಿರುವದಿಲ್ಲ, ಮತ್ತೇನೆಂದರೆ ನಾಮವಾಗಿರುವ ಋಗ್ಯಜುಸ್ಸಾಮಗಳಿಗೂ ಆತ್ಮನು

---

1. ಶರೀರವು ಪ್ರತ್ಯಕ್ಷನಿರೂಪ್ಯವಾಗಿರುವದರಿಂದ ರೂಪವು, ಇಂದ್ರಿಯಗಳು ಜ್ಞಾನಕ್ರಿಯಾಶಕ್ತಿಗಳಿಂದ ಕೂಡಿರುವದರಿಂದ ಕರ್ಮವು ಎಂದು ಬೃ. ವಾ.

ಎಂದು ಪ್ರಾಣನ ಸರ್ವಾತ್ಮಕತ್ವವನ್ನು ಹೊಗಳಿ (ಅವನನ್ನು) ಉಪಾಸನೆಮಾಡ ಬೇಕೆಂದು (ತಿಳಿಸುವದ)ಕ್ಕಾಗಿ (ಶ್ರುತಿಯು ಅವನನ್ನು) ದೊಡ್ಡದು ಮಾಡಿ ಹೇಳು ತ್ತಿದೆ.

(ಭಾಷ್ಯ)

೮೨. ಏಷ ಉ ಏವ ಪ್ರಕೃತ ಆಙ್ಗಿರಸೋ ಬೃಹಸ್ಪತಿಃ। ಕಥಂ ಬೃಹಸ್ಪತಿ ರಿತಿ? ಉಚ್ಯತೇ। ವಾಗ್ವೈ ಬೃಹತೀ। ಬೃಹತೀಛ್ಛನ್ದಃ ಷಟ್ತ್ರಿಂಶದಕ್ಷರಾ। ಅನು ಷ್ಟುಪ್ಚ ವಾಕ್! ಕಥಮ್? "ವಾಗ್ವಾ ಅನುಷ್ಟುಪ್" (ತೈ. ಸಂ. ೧-೩-೫) ಇತಿ ಶ್ರುತೇಃ। ಸಾ ಚ ವಾಕ್ ಅನುಷ್ಟುಪ್ ಬೃಹತ್ಯಾಂ ಛನ್ದಸಿ ಅನ್ತರ್ಭವತಿ। ಅತೋ ಯುಕ್ತಂ 'ವಾಗ್ವೈ ಬೃಹತೀ' ಇತಿ ಪ್ರಸಿದ್ಧವದ್ ವಕ್ತುಮ್। ಬೃಹತ್ಯಾಂ ಚ ಸರ್ವಾ ಋಚೋಽನ್ತರ್ಭವನ್ತಿ ಪ್ರಾಣ ಸಂಸ್ತುತತ್ವಾತ್।"ಪ್ರಾಣೋ ಬೃಹತೀ" (ಐ. ಆ. ೨-೧-೬)"ಪ್ರಾಣ ಋಚ ಇತ್ಯೇವ ವಿದ್ಯಾತ್" (ಐ. ಆ. ೨-೨-೨) ಇತಿ ಶ್ರುತ್ಯನ್ತ ರಾತ್। ವಾಗಾತ್ಮತ್ವಾಚ್ಚ ಋಚಾಂ ಪ್ರಾಣೇಽನ್ತರ್ಭಾವಃ। ತತ್ಕಥಮಿತಿ? ಆಹ। ತಸ್ಯಾ ವಾಚೋ ಬೃಹತ್ಯಾ ಋಚಃ ಏಷ ಪ್ರಾಣಃ ಪತಿಃ। ತಸ್ಯಾ ನಿರ್ವರ್ತಕತ್ವಾತ್। ಕೌಷ್ಠ್ಯಾಗ್ನಿಪ್ರೇರಿತಮಾರುತನಿರ್ವರ್ತ್ಯಾ ಹಿ ಋಕ್। ಪಾಲನಾದ್ ವಾ ವಾಚಃ ಪತಿಃ। ಪ್ರಾಣೇನ ಹಿ ಪಾಲ್ಯತೇ ವಾಕ್। ಅಪ್ರಾಣಸ್ಯ ಶಬ್ದೋಚ್ಚಾರಣಸಾಮರ್ಥ್ಯಾಭಾವಾತ್। ತಸ್ಮಾತ್ ಉ ಬೃಹಸ್ಪತಿಃ ಋಚಾಂ ಪ್ರಾಣ ಆತ್ಮಾ ಇತ್ಯರ್ಥಃ॥

(ಭಾಷ್ಯಾರ್ಥ)

ಮತ್ತು ಈತನೇ ಎಂದರೆ ಪ್ರಕೃತನಾದ ಆಂಗಿರಸನೇ ಬೃಹಸ್ಪತಿಯು. (ಈತನು) ಬೃಹಸ್ಪತಿ ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ.[1] ವಾಕ್ಕೇ ಬೃಹತಿ. ಬೃಹತೀಚ್ಛಂದಸ್ಸಿನಲ್ಲಿ ಮೂವತ್ತಾರು ಅಕ್ಷರಗಳಿರುತ್ತವೆ. ವಾಕ್ಕು ಅನುಷ್ಟುಪ್ಪು. ಅದು ಹೇಗೆ ಎಂದರೆ 'ವಾಕ್ಕೇ ಅನುಷ್ಟುಪ್ಪು' (ತೈ. ೧-೩-೫) ಎಂದು ಶ್ರುತಿಯಿರುವದರಿಂದ. ಮತ್ತು ಆ ವಾಕ್ಕು ಎಂಬ ಅನುಷ್ಟುಪ್ಪು ಬೃಹತೀ ಎಂಬ ಛಂದಸ್ಸಿನಲ್ಲಿ ಅಡಕವಾಗಿರುತ್ತದೆ. ಆದ್ದರಿಂದ 'ವಾಕ್ಕೇ ಬೃಹತಿ' ಎಂದು ಪ್ರಸಿದ್ಧವಾಗಿದ್ದಂತೆ ಹೇಳಿದ್ದು ಸರಿ. ಬೃಹತಿಯಲ್ಲಂತೂ ಎಲ್ಲಾ ಋಕ್ಕುಗಳೂ ಅಡಕವಾಗಿರುತ್ತವೆ; ಏಕೆಂದರೆ ಪ್ರಾಣರೂಪದಿಂದ ಅದನ್ನು ಹೊಗಳಿರುತ್ತದೆ. "ಪ್ರಾಣನೇ ಬೃಹತಿಯು" (ಐ. ಆ. ೨-೧-೬) "ಪ್ರಾಣನೇ ಋಕ್ಕು ಎಂದೇ

---

1. ವಾಕ್ಕೇ ಉದ್ಗೀಥದಲ್ಲಿ ಮುಖ್ಯ; ಹೀಗಿರುವಲ್ಲಿ ಪ್ರಾಣನು ದೇವತೆ ಎಂಬುದು ಹೇಗೆ? ಎಂಬ ಶಂಕೆಗೆ ಪರಿಹಾರವನ್ನು ಹೇಳುವದಕ್ಕಾಗಿ ವಾಕ್ಕು ಪ್ರಾಣವಶವಾಗಿರುತ್ತದೆ ಎಂದು ತಿಳಿಸಬೇಕಾಗಿದೆ. ಆದ್ದರಿಂದ ಮುಂದಿನ ಶಂಕೆಗಳು ಬಂದಿವೆ. ಬೃ.ವಾ.

ತಿಳಿಯಬೇಕು" (ಐ.ಆ. ೨-೨-೨) ಎಂಬ ಬೇರೊಂದು ಶ್ರುತಿಯಿಂದ (ಇದು ಸಿದ್ಧವಾಗಿರುತ್ತದೆ). ಮತ್ತು ಋಕ್ಕುಗಳು ವಾಗ್ರೂಪವಾಗಿರುವದರಿಂದ (ಅವು) ಪ್ರಾಣನಲ್ಲಿ ಅಡಕವಾಗುತ್ತವೆ. ಅದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ; ಆ ವಾಕ್ಕಿಗೆ, ಬೃಹತೀ(ರೂಪವಾದ) ಋಕ್ಕಿಗೆ, ಈ ಪ್ರಾಣನು ಪತಿಯು; ಏಕೆಂದರೆ ಆ (ಋಕ್ಕನ್ನು) ಸಿದ್ಧಪಡಿಸುವವನು ಇವನೇ. ಉದರದಲ್ಲಿರುವ, ಅಗ್ನಿಯಿಂದ ಪ್ರೇರಿತವಾದ ವಾಯುವಿನಿಂದ ಆಗತಕ್ಕದ್ದಲ್ಲವೆ, ಋಕ್ಕು[1]? ಕಾಪಾಡುತ್ತಾನಾದ್ದರಿಂದ ವಾಕ್ಕಿಗೆ (ಪ್ರಾಣನು) ಪತಿಯು ಎಂದಾದರೂ ಹೇಳಬಹುದು; ಪ್ರಾಣದಿಂದಲ್ಲವೆ ವಾಕ್ಕು ಕಾಪಾಡಲ್ಪಡುತ್ತದೆ? ಹೇಗೆಂದರೆ ಪ್ರಾಣವೇ ಇಲ್ಲದವನಿಗೆ ಶಬ್ದವನ್ನು ಉಚ್ಚಾರಣೆಮಾಡುವ ಶಕ್ತಿಯಿರುವದಿಲ್ಲ. ಆದ್ದರಿಂದ ಬೃಹಸ್ಪತಿಯೂ (ಆಗಿರುತ್ತಾನೆ); ಋಕ್ಕುಗಳಿಗೆ ಪ್ರಾಣನು ಆತ್ಮನು ಎಂದರ್ಥ.

## ಪ್ರಾಣನು ಯಜುಸ್ಸುಗಳಿಗೆ ಆತ್ಮನು

(ಉಪನಿಷತ್ತು)

**ಏಷ ಉ ಏವ ಬ್ರಹ್ಮಣಸ್ಪತಿರ್ವಾಗ್ವೈ ಬ್ರಹ್ಮ ತಸ್ಯಾ ಏಷ ಪತಿಸ್ತಸ್ಮಾದು ಬ್ರಹ್ಮಣಸ್ಪತಿಃ ॥ ೨೧ ॥**

೨೧. ಮತ್ತು ಇವನೇ ಬ್ರಹ್ಮಣಸ್ಪತಿಯು (ಆಗಿರುತ್ತಾನೆ). ವಾಕ್ಕೇ ಬ್ರಹ್ಮವು; ಅದಕ್ಕೆ ಇವನು ಪತಿಯು. ಆದ್ದರಿಂದ ಬ್ರಹ್ಮಣಸ್ಪತಿಯು.

(ಭಾಷ್ಯ)

೮೩. ತಥಾ ಯಜುಷಾಮ್। ಕಥಮ್? ಏಷ ಉ ಏವ ಬ್ರಹ್ಮಣಸ್ಪತಿಃ। ವಾಗ್ವೈಬ್ರಹ್ಮ। ಬ್ರಹ್ಮಯಜುಃ। ತಚ್ಚ ವಾಗ್ವಿಶೇಷ ಏವ ತಸ್ಯಾ ವಾಚೋ ಯಜುಷಃ ಬ್ರಹ್ಮಣಃ ಏಷ ಪತಿಃ। ತಸ್ಮಾದು ಬ್ರಹ್ಮಣಸ್ಪತಿಃ ಪೂರ್ವವತ್। ಕಥಂ ಪುನರೇತದವಗಮ್ಯತೇ ಬೃಹತೀಬ್ರಹ್ಮಣೋರ್ಋಗ್ಯಜುಷ್ಟ್ವಂ ನ ಪುನರನ್ಯಾರ್ಥತ್ವಮಿತಿ? ಉಚ್ಯತೇ। ವಾಚೋಽನ್ತೇ ಸಾಮಸಾಮಾನಾಧಿಕರಣ್ಯನಿರ್ದೇಶಾತ್ 'ವಾಗ್ವೈ ಸಾಮ' ಇತಿ। ತಥಾ ಚ 'ವಾಗ್ವೈ ಬೃಹತೀ' 'ವಾಗ್ವೈ

---

1. ಉದರದಲ್ಲಿರುವ ಅಗ್ನಿಯಿಂದ ಪ್ರೇರಿತವಾದ ನಾದ ಅದರಲ್ಲಿರುವ ವಾಯು ಮೇಲಕ್ಕೆ ಬಂದು ಕಂಠಾದಿಗಳಿಗೆ ತಗಲಿದರೆ ವರ್ಣವಾಗಿ ವ್ಯಕ್ತವಾಗುತ್ತದೆ; ಅದರ ರೂಪವಾಗಿರುವದೇ ವಾಕ್ಕೆಂದು ದೇವತಾಧಿಕರಣದಲ್ಲಿ ನಿರ್ಣಯವಾಗಿರುತ್ತದೆ; ಋಕ್ಕು ವಾಗ್ರೂಪವೆಂದು ಹೇಳಿದ್ದಾಗಿದೆ. ಆದ್ದರಿಂದ ಅದು ಪ್ರಾಣನಲ್ಲಿ ಅಂತರ್ಭೂತವೆಂಬುದು ಸರಿ ಎಂದರ್ಥ. ಆ॥ ೧॥

ಬ್ರಹ್ಮ' ಇತಿ ಚ ವಾಕ್ಸಮಾನಾಧಿಕರಣಯೋಃ ಋಗ್ಯಜುಷ್ಟ್ವಂ ಯುಕ್ತಮ್। ಪರಿಶೇಷಾಚ್ಚ। ಸಾಮ್ನ್ಯಭಿಹಿತೇ ಋಗ್ಯಜುಷೀ ಏವ ಪರಿಶಿಷ್ಟೇ। ವಾಗ್ವಿಶೇಷತ್ವಾಚ್ಚ। ವಾಗ್ವಿಶೇಷೌ ಹಿ ಋಗ್ಯಜುಷೀ। ತಸ್ಮಾತ್ ತಯೋರ್ವಾಚಾ ಸಮಾನಾಧಿಕರಣತಾ ಯುಕ್ತಾ ।ಅವಿಶೇಷಪ್ರಸಙ್ಗಾಚ್ಚ। 'ಸಾಮ' 'ಉದ್ಗೀಥಃ' ಇತಿ ಚ ಸ್ಪಷ್ಟಂ ವಿಶೇಷಾಭಿಧಾನತ್ವಮ್। ತಥಾ ಬೃಹತೀಬ್ರಹ್ಮಶಬ್ದಯೋರಪಿ ವಿಶೇಷಾಭಿಧಾನತ್ವಂ ಯುಕ್ತಮ್। ಅನ್ಯಥಾ ಅನಿರ್ಧಾರಿತವಿಶೇಷಯೋಃ ಆನರ್ಥಕ್ಯಾಪತ್ತೇಶ್ಚ। ವಿಶೇಷಾಭಿಧಾನಸ್ಯ ವಾಙ್ಮಾತ್ರತ್ವೇ ಚ ಉಭಯತ್ರ ಪೌನರುಕ್ತ್ಯಾತ್। ಋಗ್ಯಜುಃಸಾಮೋದ್ಗೀಥಶಬ್ದಾನಾಂ ಚ ಶ್ರುತಿಷು ಏವಂಕ್ರಮದರ್ಶನಾತ್ ॥

(ಭಾಷ್ಯಾರ್ಥ)

ಹೀಗೆಯೇ ಯಜುಸ್ಸುಗಳಿಗೂ (ಈತನು ಆತ್ಮನು). ಹೇಗೆ? ಎಂದರೆ "ಈತನೇ ಬ್ರಹ್ಮಣಸ್ಪತಿಯೂ (ಆಗಿರುತ್ತಾನೆ)". "ವಾಕ್ಕೇ ಬ್ರಹ್ಮವು. ಬ್ರಹ್ಮವೆಂದರೆ ಯಜುಸ್ಸು. ಅದೂ ಒಂದು ಬಗೆಯ ವಾಕ್ಕೇ. ಆ ವಾಕ್ಕಿಗೆ ಎಂದರೆ ಯಜುಸ್ಸೆಂಬ ಬ್ರಹ್ಮಕ್ಕೆ ಈತನು ಪತಿಯು; ಆದ್ದರಿಂದ ಬ್ರಹ್ಮಣಸ್ಪತಿಯೂ ಆಗಿರುತ್ತಾನೆ. (ಎಂಬುದನ್ನು) ಹಿಂದಿನಂತೆ (ವ್ಯಾಖ್ಯಾನಮಾಡಬೇಕು).

(ಆಕ್ಷೇಪ):—'ಬೃಹತೀ', 'ಬ್ರಹ್ಮ' (ಎಂಬ ಶಬ್ದ)ಗಳಿಗೆ ಋಕ್ಕು ಯಜುಸ್ಸು ಎಂಬುದೇ ಅರ್ಥ ಮತ್ತೊಂದು (ಅರ್ಥ)ವಲ್ಲ ಎಂಬುದು ಹೇಗೆ ಗೊತ್ತಾಯಿತು?

(ಪರಿಹಾರ):—(ಇದಕ್ಕೆ ಪರಿಹಾರವನ್ನು) ಹೇಳುತ್ತೇವೆ. 'ವಾಗ್ವೈ ಸಾಮ' ಎಂದು ಕೊನೆಯಲ್ಲಿ ವಾಕ್ಕನ್ನು ಸಾಮಕ್ಕೆ ಸಮಾನಾಧಿಕರಣ(ವಾಗಿ ಪ್ರಯೋಗಿಸಿರುವ)ದರಿಂದ (ಹೀಗೆಂದು ಗೊತ್ತಾಯಿತು). ಆದ್ದರಿಂದಲೇ 'ವಾಕ್ಕೇ ಬೃಹತಿಯು' 'ವಾಕ್ಕೇ ಬ್ರಹ್ಮವು' ಎಂದು ವಾಕ್ಕಿಗೆ ಸಮಾನಾಧಿಕರಣ(ವಾಗಿ ಪ್ರಯೋಗಿಸಿರುವ ಈ ಎರಡು ಶಬ್ದ)ಗಳಿಗೆ ಋಕ್ಕು ಯಜುಸ್ಸು (ಎಂಬರ್ಥವು) ಯುಕ್ತವು. ಪರಿಶೇಷದಿಂದಲೂ (ಹೀಗೆ. ಹೇಗೆಂದರೆ), ಸಾಮವನ್ನು ಹೇಳಿದರೆ ಋಗ್ಯಜುಸ್ಸುಗಳು ಉಳಿದಿರುತ್ತವೆ. ವಾಗ್ವಿಶೇಷಗಳಾಗಿರುವದರಿಂದಲೂ (ಹೀಗೆ. ಹೇಗೆಂದರೆ,) ಋಗ್ಯಜುಸ್ಸುಗಳು ವಾಕ್ಕಿನ ವಿಶೇಷಗಳೇ ಅಲ್ಲವೆ? ಆದ್ದರಿಂದ ಅವುಗಳನ್ನು ವಾಕ್ಕಿಗೆ (ಪ್ರಯೋಗಿಸಿದೆ ಎಂಬುದು) ಯುಕ್ತವು. (ಇಲ್ಲದಿದ್ದರೆ ವಾಕ್ಕಿನ) ವಿಶೇಷವಲ್ಲದೆ ಹೋಗಬೇಕಾಗುವದರಿಂದಲೂ (ಹೀಗೆ. ಹೇಗೆಂದರೆ,) 'ಸಾಮ' 'ಉದ್ಗೀಥ' (ಎಂದು ಮುಂದಿನ ಎರಡು ಕಂಡಿಕೆಗಳಲ್ಲಿ ವಾಕ್ಕಿನ) ವಿಶೇಷಗಳನ್ನು ಹೇಳಿದೆ ಎಂಬುದು ಸ್ಪಷ್ಟವು. ಅದರಂತೆ (ಈ ಎರಡು ಕಂಡಿಕೆಗಳಲ್ಲಿಯೂ)ಬೃಹತೀ ಬ್ರಹ್ಮಶಬ್ದಗಳೂ (ವಾಕ್ಕಿನ) ವಿಶೇಷಗಳನ್ನು ಹೇಳುತ್ತವೆ (ಎಂದು ಕಲ್ಪಿಸುವದು) ಯುಕ್ತವು; ಹಾಗಿಲ್ಲದಿದ್ದರೆ (ಇಂಥ) ವಿಶೇಷವೆಂದು ನಿಶ್ಚಯವಾಗದೆ (ಇದ್ದರೆ, 'ಬೃಹತೀ', 'ಬ್ರಹ್ಮ' ಎಂದು) ವಿಶೇಷವನ್ನು ಹೇಳಿದ್ದು

ವ್ಯರ್ಥವೇ ಆಗುವದು.[1] (ಆದ್ದರಿಂದಲೂ ಹೀಗೆಂದು ತಿಳಿಯಬೇಕು. ಇವೆರಡೂ) ಬರಿಯ ವಾಕ್ಕೇ ಆದರೆ ಎರಡು ಕಡೆಯಲ್ಲಿ ಪುನರುಕ್ತಿಯೂಗುವದರಿಂದಲೂ (ಹೀಗೆ).[2] ಋಕ್ಕು, ಯಜುಸ್ಸು, ಸಾಮ, ಉದ್ಗೀಥ—ಈ ಶಬ್ದಗಳನ್ನು ಶ್ರುತಿಗಳಲ್ಲಿ ಈ ಕ್ರಮ(ದಲ್ಲಿ ಪ್ರಯೋಗಿಸಿರುವದು) ಕಂಡುಬರುವದರಿಂದಲೂ (ಈ ಶಬ್ದಗಳಿಗೆ ಇದೇ ಅರ್ಥವೆಂದು ನಿಶ್ಚಯಿಸಬಹುದು).

## ಪ್ರಾಣನು ಸಾಮಗಳಿಗೂ ಆತ್ಮನು

(ಉಪನಿಷತ್ತು)

**ಏಷ ಉ ಏವ ಸಾಮ ವಾಗ್ವೈ ಸಾಮೈಷ ಸಾ ಚಾಮಶ್ಚೇತಿ ತತ್ಸಾಮ್ನಃ ಸಾಮತ್ವಮ್ । ಯದ್ವೇವ ಸಮಃ ಪ್ಲುಷಿಣಾ ಸಮೋ ಮಶಕೇನ ಸಮೋ ನಾಗೇನ ಸಮ ಏಭಿಸ್ತ್ರಿಭಿರ್ಲೋಕೈಃ ಸಮೋಽನೇನ ಸರ್ವೇಣ ತಸ್ಮಾದ್ವೇವ ಸಾಮಾಶ್ನುತೇ ಸಾಮ್ನಃ ಸಾಯುಜ್ಯಗ್ಂ ಸಲೋಕತಾಂ ಯ ಏವಮೇತತ್ ಸಾಮ ವೇದ ॥ ೨೨ ॥**

೨೨. ಈತನೇ ಸಾಮವೂ (ಆಗಿರುತ್ತಾನೆ). ವಾಕ್ಕೇ ಸಾಮವು; ಈತನು ಸಾ ಮತ್ತು ಅಮ (ಎಂಬ) ಇದೇ ಸಾಮದ ಸಾಮತ್ವವು. (ಅಥವಾ) ಪ್ಲುಷಿಗೆ ಸಮ, ಸೊಳ್ಳೆಗೆ ಸಮ, ನಾಗಕ್ಕೆ ಸಮ, ಈ ಮೂರು ಲೋಕಗಳಿಗೂ ಸಮ, ಇದೆಲ್ಲಕ್ಕೂ ಸಮ. ಆದ್ದರಿಂದಲೇ ಸಾಮ. ಯಾವನು ಈ ಸಾಮವನ್ನು ಹೀಗೆಂದು ಅರಿತುಕೊಳ್ಳುವನೋ ಅವನು ಸಾಮದ ಸಾಯುಜ್ಯವನ್ನು, ಸಲೋಕತೆಯನ್ನು ಪಡೆದುಕೊಳ್ಳುತ್ತಾನೆ.

(ಭಾಷ್ಯ)

೮೪. ಏಷ ಉ ಏವ ಸಾಮ । ಕಥಮಿತಿ ? ಆಹ । ವಾಗ್ವೈ ಸಾ ಯತ್ಕಿಂಚಿತ್ ಸ್ತ್ರೀಶಬ್ದಾಭಿಧೇಯಂ ಸಾ ವಾಕ್ । ಸರ್ವಸ್ತ್ರೀಶಬ್ದಾಭಿಧೇಯವಸ್ತುವಿಷಯೋ ಹಿ ಸರ್ವನಾಮಸಾಶಬ್ದಃ । ತಥಾ ಅಮ ಏಷ ಪ್ರಾಣಃ । ಸರ್ವಪುಂಶಬ್ದಾಭಿಧೇಯವಸ್ತುವಿಷಯೋಽಮಃಶಬ್ದಃ । "ಕೇನ ಮೇ ಪೌಂಸ್ನಾನಿ ನಾಮಾನ್ಯಾಪ್ನೋಷಿ

---

1. ಇಲ್ಲಿ ಯಾವ ವಾಗ್ವಿಶೇಷವನ್ನು ಹೇಳಿದೆ ಎಂಬುದು ಗೊತ್ತಾಗದೆ ಶಬ್ದಪ್ರಯೋಗವು ವ್ಯರ್ಥವಾಗುವದು. ಹಾಗೆ ಆಗದೆ ಇರುವದಕ್ಕಾಗಿಯೂ ಈ ಅರ್ಥವನ್ನು ಕಲ್ಪಿಸಬೇಕು.

2. ವಾಗ್ವಿಶೇಷವೇ ಬೇಡ ಎಂದರೆ 'ವಾಗ್ವೈ ಬೃಹತೀ' ಎಂದರೆ ವಾಕ್ಕೇ ವಾಕ್ಕು ಎಂದಂತೆ ಆಗುವದು; ಇದರಂತೆ 'ವಾಗ್ವೈ ಬ್ರಹ್ಮ' ಎಂಬಲ್ಲಿಯೂ ಪುನರುಕ್ತಿಯೇ ಆಗುವದು.

ಪ್ರಾಣೇನೇತಿ ಬ್ರೂಯಾತ್ ಕೇನ ಮೇ ಸ್ತ್ರೀನಾಮಾನೀತಿ ವಾಚಾ"[1] (ಕೌ. ೧-೭) ಇತಿ ಶ್ರುತ್ಯನ್ತರಾತ್ ವಾಕ್ಪ್ರಾಣಾಭಿಧಾನಭೂತೋಽಯಂ ಸಾಮಶಬ್ದಃ। ತಥಾ ಪ್ರಾಣನಿರ್ವರ್ತ್ಯಸ್ವರಾದಿಸಮುದಾಯಮಾತ್ರಂ ಗೀತಿಃ ಸಾಮಶಬ್ದೇನ ಅಭಿಧೀಯತೇ। ಅತೋ ನ ಪ್ರಾಣವಾಗ್ವ್ಯತಿರೇಕೇಣ ಸಾಮನಾಮಾಸ್ತಿ ಕಿಂಚಿತ್। ಸ್ವರವರ್ಣಾದೇಶ್ಚ ಪ್ರಾಣನಿರ್ವರ್ತ್ಯತ್ವಾತ್ ಪ್ರಾಣತನ್ತ್ರತ್ವಾಚ್ಚ। ಏಷ ಉ ಏವ ಪ್ರಾಣಃ ಸಾಮ।ಯಸ್ಮಾತ್ ಸಾಮ ಸಾಮೇತಿ ವಾಕ್ಪ್ರಾಣಾತ್ಮಕಂ ಸಾ ಚ ಅಮಶ್ಚೇತಿ ತತ್ ತಸ್ಮಾತ್ ಸಾಮ್ನೋ ಗೀತಿರೂಪಸ್ಯ ಸ್ವರಾದಿಸಮುದಾಯಸ್ಯ ಸಾಮತ್ವಂ ತತ್ ಪ್ರಗೀತಂ ಭುವಿ॥

(ಭಾಷ್ಯಾರ್ಥ)

ಈತನೇ ಸಾಮವು. ಹೇಗೆ? ಎಂದರೆ(ಶ್ರುತಿ)ಹೇಳುತ್ತದೆ. ವಾಕ್ಕೇ ಸಾ; ಯಾವಯಾವದು ಸ್ತ್ರೀಶಬ್ದವಾಚ್ಯವೋ ಅದು ವಾಕ್ಕು. ಸಾ ಎಂಬ ಸರ್ವನಾಮಶಬ್ದಕ್ಕೆ ಸ್ತ್ರೀಶಬ್ದವಾಚ್ಯಗಳಾದ ವಸ್ತುಗಳೆಲ್ಲವೂ ವಿಷಯವಷ್ಟೆ. ಮತ್ತು ಈ ಪ್ರಾಣನು ಅಮವು ; ಅಮ ಎಂಬ ಶಬ್ದಕ್ಕೆ ಪುಂಶಬ್ದವಾಚ್ಯಗಳಾದ ವಸ್ತುಗಳೆಲ್ಲವೂ ವಿಷಯವು. "ನನ್ನ ಪುಂನಾಮಗಳನ್ನು ಯಾವದರಿಂದ ಪಡೆದುಕೊಳ್ಳುತ್ತೀಯೆ?" ಎಂದರೆ ಪ್ರಾಣನಿಂದ ಎಂದು ಹೇಳಬೇಕು; ನನ್ನ ಸ್ತ್ರೀನಾಮಗಳನ್ನು ಯಾವದರಿಂದ (ಪಡೆದುಕೊಳ್ಳುತ್ತೀಯೆ)? ಎಂದರೆ ವಾಕ್ಕಿನಿಂದ (ಎಂದು ಹೇಳಬೇಕು)" (ಕೌ. ೧-೭) ಎಂದು ಬೇರೊಂದು ಶ್ರುತಿಯಿಂದ (ಇದು ಸಿದ್ಧವಾಗುತ್ತದೆ. ಹೀಗೆ) ಈ ಸಾಮ ಎಂಬ ಶಬ್ದವು ವಾಕ್ಕು ಮತ್ತು ಪ್ರಾಣ–ಇವುಗಳಿಗೆ ಹೆಸರಾಗಿರುತ್ತದೆ. ಇದರಂತೆ ಪ್ರಾಣನಿಂದಾಗುವ ಸ್ವರಾದಿಗಳ ಸಮುದಾಯಮಾತ್ರವಾಗಿರುವ ಗೀತಿಯನ್ನೇ ಸಾಮವೆಂಬ ಹೆಸರಿನಿಂದ (ವೇದದಲ್ಲಿ) ಕರೆದಿದೆ.[2] ಆದ್ದರಿಂದ ಪ್ರಾಣವಾಕ್ಕುಗಳನ್ನು ಬಿಟ್ಟು ಸಾಮ ಎಂಬುದೇ ಯಾವದೂ ಇಲ್ಲ. ಸ್ವರವರ್ಣಾದಿಗಳು

---

1. ನಿ. ಸಾ. ಪಾಠದಲ್ಲಿ 'ನಾಮಾನ್ಯಾಪ್ನೋತಿ' ಎಂದಿದೆ; ವಾಚೇತಿ' ಆದ ಬಳಿಕ "ಕೇನ ನಪುಂಸಕ ನಾಮಾನೀತಿ' ಎಂದಿದೆ. ಆನಂದಾಶ್ರಮದ ಶಾಂಖಾಯನಾರಣ್ಯಕದಲ್ಲಿ" ಕೇನ ಮೇ ನಪುಂಸಕಾನಿ ನಾಮಾನೀತಿ ಮನಸೇತಿ ಕೇನ ಸ್ತ್ರೀನಾಮಾನೀತಿ ವಾಚೇತಿ" (೩-೭). ಎರಡು ಪಾಠದಂತೆಯೂ ಪ್ರಕೃತಭಾಷ್ಯದಲ್ಲಿ ಒಂದು ಇತಿ ಶಬ್ದವು ಬಿಟ್ಟುಹೋಗಿದೆ ಎಂದು ಹೇಳಬೇಕಾಗಿದೆ.

2. "ಗೀತಿಷು ಸಾಮಾಖ್ಯಾ" (ಜೈ. ಸೂ. ೨-೧-೩೬) ಎಂಬ ನ್ಯಾಯದಿಂದ ಗೀತಿಯನ್ನೇ ಸಾಮವೆನ್ನಬೇಕಲ್ಲವೆ? ಎಂಬ ಶಂಕೆಗೆ ಪರಿಹಾರವಿದು. ಗೀತಿಯು ವಾಗಾತ್ಮಕವಾಗಿದ್ದು ಪ್ರಾಣನಿಂದ ಆಗತಕ್ಕದ್ದು. ಪ್ರಾಣನು ಮುಖ್ಯಾರ್ಥದಲ್ಲಿ ಸಾಮವು; ತತ್ಸಂಬಂಧದಿಂದ ಗೀತಿಯನ್ನು ಸಾಮವೆಂದು ಗೌಣಾರ್ಥದಲ್ಲಿ ಕರೆಯುತ್ತಾರೆ ಎಂದು ಭಾವ.

ಪ್ರಾಣನಿಂದ ಆಗತಕ್ಕದ್ದಾದ್ದರಿಂದಲೂ ಪ್ರಾಣನ ಅಧೀನವಾಗಿರುವದರಿಂದಲೂ ಈ ಪ್ರಾಣನೇ ಸಾಮವು.[1] (ಹೀಗೆ) ಸಾಮ, ಸಾಮ ಎಂಬುದು (ಎಲ್ಲವೂ) ಸಾಮತ್ತು ಅವು ಆಗಿರುವದರಿಂದ ವಾಕ್ಪ್ರಾಣಾತ್ಮಕವಾಗಿದೆಯಷ್ಟೆ, (ತತ್=ತಸ್ಮಾತ್) ಆದ್ದರಿಂದ ಗೀತಿರೂಪವಾದ ಸ್ವರಾದಿಸಮುದಾಯರೂಪವಾದ ಸಾಮಕ್ಕೂ ಸಾಮವೆಂಬ (ಹೆಸರು) ಭೂಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ.

## ಪ್ರಾಣನು ಸಾಮವೆಂಬುದಕ್ಕೆ ಮತ್ತೊಂದು ಯುಕ್ತಿ

(ಭಾಷ್ಯ)

೮೫. ಯದು ಏವ ಸಮಃ ತುಲ್ಯಃ ಸರ್ವೇಣ ವಕ್ಷ್ಯಮಾಣೇನ ಪ್ರಕಾರೇಣ ತಸ್ಮಾದ್ ವಾ ಸಾಮ ಇತ್ಯನೇನ ಸಂಬನ್ಧಃ। ವಾಶಬ್ದಃ ಸಾಮಶಬ್ದಲಾಭನಿಮಿತ್ತಪ್ರಕಾರಾನ್ತರನಿರ್ದೇಶಸಾಮರ್ಥ್ಯಲಭ್ಯಃ। ಕೇನ ಪುನಃ ಪ್ರಕಾರೇಣ ಪ್ರಾಣಸ್ಯ ತುಲ್ಯತ್ವಮಿತಿ ? ಉಚ್ಯತೇ। ಸಮಃ ಪ್ಲುಷಿಣಾ ಪುತ್ತಿಕಾಶರೀರೇಣ ಸಮೋ ಮಶಕೇನ ಮಶಕಶರೀರೇಣ ಸಮೋ ನಾಗೇನ ಹಸ್ತಿಶರೀರೇಣ ಸಮ ಏಭಿಸ್ತ್ರಿಭಿರ್ಲೋಕೈಃ ತ್ರೈಲೋಕ್ಯಶರೀರೇಣ ಪ್ರಾಜಾಪತ್ಯೇನ ಸಮೋಽನೇನ (ಸರ್ವೇಣ) ಜಗದ್ರೂಪೇಣ ಹೈರಣ್ಯಗರ್ಭೇಣ। ಪುತ್ತಿಕಾದಿಶರೀರೇಷು ಗೋತ್ವಾದಿವತ್ ಕಾರ್ತ್ಸ್ನ್ಯೇನ ಪರಿಸಮಾಪ್ತ ಇತಿ ಸಮತ್ವಂ ಪ್ರಾಣಸ್ಯ। ನ ಪುನಃ ಶರೀರಮಾತ್ರಪರಿಮಾಣೇನೈವ। ಅಮೂರ್ತತ್ವಾತ್, ಸರ್ವಗತತ್ವಾಚ್ಚ। ನ ಚ ಘಟಪ್ರಾಸಾದಾದಿಪ್ರದೀಪವತ್ ಸಂಕೋಚವಿಕಾಸಿತಯಾ ಶರೀರೇಷು ತಾವನ್ಮಾತ್ರಂ ಸಮತ್ವಮ್ "ತ ಏತೇ ಸರ್ವ ಏವ ಸಮಾಃ ಸರ್ವೇಽನನ್ತಾಃ" (೧-೫-೧೩) ಇತಿ ಶ್ರುತೇಃ। ಸರ್ವಗತಸ್ಯ ತು ಶರೀರೇಷು ಶರೀರಪರಿಮಾಣವೃತ್ತಿಲಾಭೋ ನ ವಿರುಧ್ಯತೇ ॥

(ಭಾಷ್ಯಾರ್ಥ)

ಅಥವಾ ಮುಂದೆ ಹೇಳುವ ಪ್ರಕಾರದಿಂದ ಎಲ್ಲಕ್ಕೂ ಸಮವಾಗಿರುವನಷ್ಟೆ, ಆದ್ದರಿಂದಲಾದರೂ (ಪ್ರಾಣನು) ಸಾಮ ಎಂಬೀ (ವಾಕ್ಯ)ದೊಡನೆ ಇದಕ್ಕೆ ಸಂಬಂಧವನ್ನು ಮಾಡಿಕೊಳ್ಳಬೇಕು.[2] ಸಾಮವೆಂಬ ಹೆಸರನ್ನು ಪಡೆದಿರುವದಕ್ಕೆ ಬೇರೊಂದು ಪ್ರಕಾರದ ನಿಮಿತ್ತವನ್ನು ತಿಳಿಸಿರುವದರಿಂದ (ಅದರ) ಸಾಮರ್ಥ್ಯ

---

1. ಕಾರಣನಾದ ಪ್ರಾಣನನ್ನು ಕಾರ್ಯವಾದ ಸಾಮದ ಹೆಸರಿನಿಂದ ಕರೆದಿದೆ ಎಂದು ಭಾವ.

2. ಹೀಗೆ ಅಧ್ಯಾಹಾರಮಾಡಿಕೊಳ್ಳಬೇಕು ಎಂದರ್ಥ.

ದಿಂದ ವಾ ಶಬ್ದವು ದೊರೆಯುತ್ತದೆ.[1] ಹಾಗಾದರೆ ಯಾವ ಪ್ರಕಾರದಿಂದ ಪ್ರಾಣನು (ಎಲ್ಲಕ್ಕೂ) ಸಮನಾಗಿರುತ್ತಾನೆ? ಎಂದರೆ (ಶ್ರುತಿ) ಹೇಳುತ್ತದೆ; ಪ್ಲುಷಿಗೆ ಎಂದರೆ ಗೆದ್ದಲಿನ ಶರೀರಕ್ಕೆ ಸಮವು ; ಸೊಳ್ಳೆಗೆ ಎಂದರೆ ಸೊಳ್ಳೆಯ ಶರೀರಕ್ಕೆ ಸಮವು ; ನಾಗಕ್ಕೆ ಎಂದರೆ ಆನೆಯ ಶರೀರಕ್ಕೆ ಸಮವು; ಈ ಮೂರು ಲೋಕಗಳಿಗೂ ಎಂದರೆ ತ್ರೈಲೋಕ್ಯವೆಂಬ ಪ್ರಜಾಪತಿಯ ಶರೀರಕ್ಕೆ ಸಮವು. ಈ (ಸರ್ವಕ್ಕೂ[2] ಎಂದರೆ) ಹಿರಣ್ಯಗರ್ಭನ ಜಗದ್ರೂಪಕ್ಕೆ ಸಮವು. ಗೆದ್ದಲಿನ ಶರೀರವೇ ಮುಂತಾದದ್ದರಲ್ಲಿ ಸಂಪೂರ್ಣವಾಗಿ ಗೋತ್ವಾದಿ(ಜಾತಿಯಂತೆ ಪ್ರಾಣನು) ಪರಿಸಮಾಪ್ತನಾಗಿರು ತ್ತಾನೆ, ಆದ್ದರಿಂದ ಪ್ರಾಣನು ಸಮವು. ಇಷ್ಟೇ ಹೊರತು ಬರಿಯ ಶರೀರದಷ್ಟು ಪರಿಮಾಣದವನಾಗಿರುವದರಿಂದಲೇ (ಸಮನೆಂದು ಅರ್ಥ)ವಲ್ಲ ; ಏಕೆಂದರೆ (ಪ್ರಾಣನು) ಅಮೂರ್ತನೂ ಸರ್ವಗತನೂ (ಆಗಿರುತ್ತಾನೆ). ಗಡಿಗೆ, ಉಪ್ಪರಿಗೆಯ ಮನೆ- ಮುಂತಾದದ್ದರಲ್ಲಿರುವ ದೀಪದಂತೆ ಸಂಕೋಚವಿಕಾಸವುಳ್ಳವನಾದ್ದರಿಂದ ಶರೀರಗಳಲ್ಲಿ ಅಷ್ಟೇ ಪರಿಮಾಣವುಳ್ಳವನಾಗಿರುತ್ತಾನೆಂದು ಹೇಳುವದಕ್ಕೂ ಬರುವ ದಿಲ್ಲ;[3] ಏಕೆಂದರೆ "ಆ ಇವರು ಎಲ್ಲರೂ ಸಮರು, ಎಲ್ಲರೂ ಅನಂತರು" (೧-೫-೧೩) ಎಂದು ಶ್ರುತಿಯಿದೆ. (ಪ್ರಾಣನು) ಸರ್ವಗತನಾದರೂ (ಆಯಾ) ಶರೀರದ ಪರಿಮಾಣಕ್ಕೆ ತಕ್ಕಷ್ಟು ವೃತ್ತಿಯನ್ನು ಪಡೆದಿರುತ್ತಾನಾದ್ದರಿಂದ (ಅವನು ಆಯಾ ಶರೀರಕ್ಕೆ ಸಮನು) ಎಂಬುದು ವಿರುದ್ಧವಲ್ಲ.[4]

## ಸಾಮನೆಂದು ಉಪಾಸನೆಮಾಡಿದರೆ ಫಲ

(ಭಾಷ್ಯ)

೮೬. ಏವಂ ಸಮತ್ವಾತ್ ಸಾಮಾಖ್ಯಂ ಪ್ರಾಣಂ ವೇದ ಯಃ ಶ್ರುತಿಪ್ರಕಾಶಿತಮಹತ್ತ್ವಂ[5] ತಸ್ಯ ಏತತ್ ಫಲಮ್ | ಅಶ್ನುತೇ ವ್ಯಾಪ್ನೋತಿ ಸಾಮ್ನಃ ಪ್ರಾಣಸ್ಯ ಸಾಯುಜ್ಯಂ ಸಯುಗ್ಭಾವಂ ಸಮಾನದೇಹೇನ್ದ್ರಿಯಾಭಿಮಾನತ್ವಮ್,

---

1. ಪ್ರಕಾರಾಂತರವಾಚಿಯಾದ ವಾಶಬ್ದವು ಮೂಲದಲ್ಲಿಲ್ಲದಿದ್ದರೂ ಹೀಗೆ ಅದು ಲಭ್ಯ ವಾಗುತ್ತದೆ.

2. ಸರ್ವೇಣ ಎಂಬ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿದೆ.

3. ಸೂ. ಭಾ. ೨-೪-೧೩ಕ್ಕೂ ಈ ವಾಕ್ಯಕ್ಕೂ ಏಕವಾಕ್ಯತೆಯನ್ನು ಮಾಡಿಕೊಳ್ಳು ವದು ಅವಶ್ಯವು.

4. ಇದಕ್ಕೂ ಸೂ. ಭಾ. ೩-೧-೧ಕ್ಕೂ ವಿರೋಧವಿದೆಯೆ? ಎಂಬುದಕ್ಕೆ **ಪೀಠಿಕೆ** ಯನ್ನು ನೋಡಿ.

5. 'ಪ್ರಸಾದಿತಮಹತ್ತ್ವಂ' ಎಂಬುದಕ್ಕಿಂತ ಈ ಪಾಠವೇ ಮೇಲು.

(ಸಲೋಕತಾಂ)[1] ಸಾಲೋಕ್ಯಂ ಸಮಾನಲೋಕತಾಂ ವಾ ಭಾವನಾವಿಶೇಷತಃ, ಯ ಏವಮ್ ಏತತ್ ಯಥೋಕ್ತಂ ಸಾಮ ಪ್ರಾಣಂ ವೇದ। ಆಪ್ರಾಣಾತ್ಮಾಭಿಮಾನಾಭಿವ್ಯಕ್ತೇರುಪಾಸ್ತೇ ಇತ್ಯರ್ಥಃ ||

(ಭಾಷ್ಯಾರ್ಥ)

ಹೀಗೆ ಸಮನಾಗಿರುವದರಿಂದ ಪ್ರಾಣನಿಗೆ ಸಾಮ ಎಂಬ ಹೆಸರೆಂದು ಶ್ರುತಿ ಪ್ರಕಾಶಿತವಾದ ಮಹತ್ತ್ವವುಳ್ಳ ಪ್ರಾಣನನ್ನು ಯಾವನು ಅರಿತುಕೊಳ್ಳುವನೋ ಆ (ಉಪಾಸಕನಿಗೆ) ಈ ಫಲವು (ಆಗುವದು): ಸಾಮನ ಎಂದರೆ ಪ್ರಾಣನ ಸಾಯುಜ್ಯವನ್ನು(ಅವನಲ್ಲಿ) ಸೇರಿಹೋಗುವಿಕೆಯನ್ನು, ಅದೇ ದೇಹೇಂದ್ರಿಯಗಳ ಅಭಿಮಾನವನ್ನು, ಅಥವಾ (ಸಲೋಕತೆಯನ್ನು) ಸಾಲೋಕ್ಯವನ್ನು ಎಂದರೆ ಅವನ ಲೋಕದಲ್ಲಿರುವಿಕೆಯನ್ನು-(ಈ ಫಲವಿಕಲ್ಪವು) ಭಾವನಾವಿಶೇಷದಿಂದ (ಆಗತಕ್ಕದ್ದು)- ಯಾವನು ಹೀಗೆ ಮೇಲೆ ಹೇಳಿದ ಸಾಮನನ್ನು, ಪ್ರಾಣನನ್ನು ಅರಿತುಕೊಳ್ಳುವನೋ, ಪ್ರಾಣನೇ ತಾನೆಂಬ ಅಭಿಮಾನವು ಅಭಿವ್ಯಕ್ತವಾಗುವವರೆಗೂ[2] ಉಪಾಸನೆ ಮಾಡುವನೋ (ಅವನಿಗೆ ಈ ಫಲವಾಗುವದು) ಎಂದರ್ಥ.

## ಪ್ರಾಣನು ಉದ್ಗೀಥದ ಆತ್ಮನು

(ಉಪನಿಷತ್ತು)

**ಏಷ ಉ ವಾ ಉದ್ಗೀಥಃ ಪ್ರಾಣೋ ವಾ ಉತ್ಪ್ರಾಣೇನ ಹೀದಗ್ಂ ಸರ್ವಮುತ್ತಬ್ಧಂ ವಾಗೇವ ಗೀಥೋಚ್ಚ ಗೀಥಾ ಚೇತಿ ಸ ಉದ್ಗೀಥಃ || ೨೩ ||**

೨೩. ಮತ್ತು ಈತನೇ ಉದ್ಗೀಥವೂ (ಆಗಿರುತ್ತಾನೆ). ಪ್ರಾಣನೇ ಉತ್; ಏಕೆಂದರೆ ಇದೆಲ್ಲವೂ ಪ್ರಾಣದಿಂದಲೇ ಉತ್ತಬ್ಧವಾಗಿರುತ್ತದೆ. ವಾಕ್ಕೇ ಗೀಥೆ. ಉತ್ತೂ ಗೀಥೆಯೂ ಆಗಿರುವದರಿಂದ ಅವನು ಉದ್ಗೀಥವು.

(ಭಾಷ್ಯ)

೮೭. ಏಷ ಉ ವಾ ಉದ್ಗೀಥಃ। ಉದ್ಗೀಥೋ ನಾಮ ಸಾಮಾವಯವೋ ಭಕ್ತಿವಿಶೇಷಃ। ನೋದ್ಗಾನಮ್। ಸಾಮಾಧಿಕಾರಾತ್। ಕಥಮುದ್ಗೀಥಃ

1. ಈ ಮಾತು ಭಾಷ್ಯದಲ್ಲಿದ್ದು ಬರೆದವರ ಕೈತಪ್ಪಿನಿಂದ ಬಿಟ್ಟುಹೋಗಿರಬೇಕು.

2. ಪ್ರಾಣನೇ ನಾನೆಂಬ ಸಾಕ್ಷಾತ್ಕಾರವಾಗುವವರೆಗೂ ಎಂದರ್ಥ. ಉಪಾಸನೆಯ ಫಲದ ಸಾಕ್ಷಾತ್ಕಾರವು ಬದುಕಿರುವಾಗಲೇ ಆದರೇ ಸತ್ತಬಳಿಕ ಆಯಾ ಫಲವಾಗುತ್ತದೆ. ಸೂ. ಭಾ. ೩-೩-೫೯.

ಪ್ರಾಣಃ ? ಪ್ರಾಣೋ ವಾ ಉತ್। ಪ್ರಾಣೇನ ಹಿ ಯಸ್ಮಾತ್ ಇದಂ ಸರ್ವಂ ಜಗತ್ ಉತ್ತಬ್ಧಮ್ ಊರ್ಧ್ವಂ ಸ್ತಬ್ಧಮ್, ಉತ್ತಮ್ಭಿತಮ್, ವಿಧೃತಮ್ ಇತ್ಯರ್ಥಃ। ಉತ್ತಬ್ಧಾರ್ಥಾವದ್ಯೋತಕೋಽಯಮ್ ಉಚ್ಛಬ್ದಃ ಪ್ರಾಣಗುಣಾಭಿಧಾಯಕಃ। ತಸ್ಮಾತ್ ಉತ್ ಪ್ರಾಣಃ। ವಾಗೇವ ಗೀಥಾ। ಶಬ್ದವಿಶೇಷತ್ವಾತ್ ಉದ್ಗೀಥಭಕ್ತೇಃ। ಗಾಯತೇಃ ಶಬ್ದಾರ್ಥತ್ವಾತ್ ಸಾ ವಾಗೇವ। ನ ಹಿ ಉದ್ಗೀಥ ಭಕ್ತೇಃ ಶಬ್ದವ್ಯತಿರೇಕೇಣ ಕಿಂಚಿದ್ರೂಪಮ್ ಉತ್ಪ್ರೇಕ್ಷ್ಯತೇ। ತಸ್ಮಾತ್ ಯುಕ್ತಮ್ ಅವಧಾರಣಂ ವಾಗೇವ ಗೀಥಾ ಇತಿ। ಉಚ್ಚ ಪ್ರಾಣಃ, ಗೀಥಾ ಚ ಪ್ರಾಣತನ್ತ್ರಾ ವಾಕ್ ಇತಿ ಉಭಯಮ್ ಏಕೇನ ಶಬ್ದೇನ ಅಭಿಧೀಯತೇ ಸ ಉದ್ಗೀಥಃ ॥

(ಉಪನಿಷತ್ತು)

'ಈತನೇ ಉದ್ಗೀಥವೂ (ಆಗಿರುತ್ತಾನೆ).' ಉದ್ಗೀಥವೆಂದರೆ ಸಾಮದ ಅವಯವವಾದ ಒಂದಾನೊಂದು ಭಕ್ತಿಯು,[1] ಉದ್ಗಾನ(ಕರ್ಮ)ವಲ್ಲ; ಏಕೆಂದರೆ (ಇದು) ಸಾಮದ ಪ್ರಕರಣವಾಗಿರುತ್ತದೆ. ಪ್ರಾಣನು ಉದ್ಗೀಥವೆಂಬುದು ಹೇಗೆ ? ಎಂದರೆ ಪ್ರಾಣನೇ ಉತ್; ಏಕೆಂದರೆ ಪ್ರಾಣನಿಂದಲೇ ಈ ಜಗತ್ತೆಲ್ಲ ಉತ್ತಬ್ಧವಾಗಿರುತ್ತದೆ, ಮೇಲಕ್ಕೆ (ಉತ್) ಸ್ತಬ್ಧವಾಗಿರುತ್ತದೆ; ಎತ್ತಲ್ಪಟ್ಟಿರುತ್ತದೆ, ಧರಿಸಲ್ಪಟ್ಟಿದೆ ಎಂದರ್ಥ. ಉತ್ತಬ್ಧವೆಂಬ ಅರ್ಥವನ್ನು ತಿಳಿಸುವದರಿಂದ ಈ ಉತ್ ಎಂಬ ಮಾತು ಪ್ರಾಣನ ಗುಣವನ್ನು ಹೇಳುತ್ತದೆ. ಆದ್ದರಿಂದ ಪ್ರಾಣನು ಉತ್ ವಾಕ್ಕೇ ಗೀಥಾ, ಉದ್ಗೀಥಭಕ್ತಿಯು (ಒಂದು) ಶಬ್ದವಿಶೇಷವಾಗಿರುವದರಿಂದಲೂ ಗೈಧಾತುವಿಗೆ ಶಬ್ದವೇ ಅರ್ಥವಾಗಿರುವದರಿಂದಲೂ ಆ (ಭಕ್ತಿಯು) ವಾಕ್ಕೇ. ಉದ್ಗೀಥಭಕ್ತಿಗೆ ಶಬ್ದವಲ್ಲದೆ (ಮತ್ತೆ) ಯಾವ ರೂಪವನ್ನೂ, ಕಲ್ಪಿಸುವದಕ್ಕೆ ಆಗುವದಿಲ್ಲವಷ್ಟೆ; ಆದ್ದರಿಂದ ವಾಕ್ಕೇ ಗೀಥಾ ಎಂದು ಒತ್ತಿ ಹೇಳಿರುವದು ಸರಿಯಾಯಿತು. ಉತ್ ಎಂದರೆ ಪ್ರಾಣನು, ಗೀಥಾ ಎಂದರೆ ಪ್ರಾಣಾಧೀನವಾಗಿರುವ ವಾಕ್ಕು; ಆದ್ದರಿಂದ ಇವೆರಡನ್ನೂ (ಉದ್ಗೀಥ) ಎಂಬ ಒಂದು ಶಬ್ದದಿಂದ ಹೇಳಿದೆ. (ಹೀಗೆ) ಅವನು ಉದ್ಗೀಥವು.

## ಪ್ರಾಣನೇ ಉದ್ಗೀಥದೇವತೆ ಎಂಬುದಕ್ಕೆ ಆಖ್ಯಾಯಿಕೆ

(ಉಪನಿಷತ್ತು)

**ತದ್ಧಾಪಿ ಬ್ರಹ್ಮದತ್ತಶ್ಚೈಕಿತಾನೇಯೋ ರಾಜಾನಂ ಭಕ್ಷಯನ್ನುವಾಚಾಯಂ ತ್ಯಸ್ಯ ರಾಜಾಮೂರ್ಧಾನಂ ವಿಪಾತಯತಾದ್ಯ**

1. ಛಾಂ. ೧-೧-೧ ನೋಡಿ.

**ದಿತೋಽಯಾಸ್ಯ ಆಙ್ಗಿರಸೋಽನ್ಯೇನೋದಗಾಯದಿತಿ ವಾಚಾ ಚ ಹ್ಯೇವ ಸ ಪ್ರಾಣೇನ ಚೋದಗಾಯದಿತಿ ॥ ೨೪ ॥**

೨೪. ಅಲ್ಲಿ (ಆಖ್ಯಾಯಿಕೆ)ಯೂ (ಇದೆ). ಬ್ರಹ್ಮದತ್ತ ಚೈಕಿತಾನೇಯನು ರಾಜನನ್ನು ಭಕ್ಷಿಸುತ್ತಿರುವಾಗ ಹೇಳಿದ್ದೇನೆಂದರೆ "ಇದಕ್ಕಿಂತ ಬೇರೆಯ (ದೇವತೆಯಿಂದ) ಅಯಾಸ್ಯಆಂಗಿರಸನು ಉದ್ಗಾನಮಾಡಿದ್ದರೆ (ನನ್ನ) ತಲೆಯನ್ನು ಕೆಡವಿಹಾಕಲಿ!" ಅವನು ವಾಕ್ಕಿನಿಂದಲೂ ಪ್ರಾಣನಿಂದಲೂ ಅಲ್ಲವೆ, ಉದ್ಗಾನಮಾಡಿದನು?

(ಭಾಷ್ಯ)

೮೮. ಉಕ್ತಾರ್ಥದಾರ್ಢ್ಯಾಯ ಆಖ್ಯಾಯಿಕಾ ಆರಭ್ಯತೇ । ತದ್ಧಾಪಿ ತತ್ ತತ್ರ ಏತಸ್ಮಿನ್ನುಕ್ತೇಽರ್ಥೇ ಹಾಽಪಿ ಆಖ್ಯಾಯಿಕಾಪಿ ಶ್ರೂಯತೇ ಹ ಸ್ಮ । ಬ್ರಹ್ಮದತ್ತೋ ನಾಮತಃ । ಚಿಕಿತಾನಸ್ಯ ಅಪತ್ಯಂ ಚೈಕಿತಾನಃ । ತದಪತ್ಯಂ ಯುವಾ ಚೈಕಿತಾನೇಯೋ ರಾಜಾನಂ ಯಜ್ಞೇ ಸೋಮಂ ಭಕ್ಷಯನ್ ಉವಾಚ । ಕಿಮ್ ? ಅಯಂ ಚಮಸಸ್ಥೋ ಮಯಾ ಭಕ್ಷ್ಯಮಾಣೋ ರಾಜಾ ತ್ಯಸ್ಯ ತಸ್ಯ ಮಮ ಅನೃತವಾದಿನೋ ಮೂರ್ಧಾನಂ ಶಿರಃ ವಿಪಾತಯತಾತ್ ವಿಸ್ಪಷ್ಟಂ ಪಾತಯತು । ತೋರಯಂ ತಾತಙಾದೇಶಃ ಆಶಿಷಿ ಲೋಟ್ ವಿಪಾತಯತಾತ್ ಇತಿ । ಯದ್ಯಹಮ್ ಅನೃತವಾದೀ ಸ್ಯಾಮ್ ಇತ್ಯರ್ಥಃ । ಕಥಂ ಪುನರನೃತವಾದಿತ್ವಪ್ರಾಪ್ತಿರಿತಿ? ಉಚ್ಯತೇ । ಯತ್ ಯದಿ ಇತೋಽಸ್ಮಾತ್ ಪ್ರಕೃತಾತ್ ಪ್ರಾಣಾತ್ ವಾಕ್ಸಂಯುಕ್ತಾತ್ ಅಯಾಸ್ಯಃ ಮುಖ್ಯಪ್ರಾಣಾಭಿಧಾಯಕೇನ ಅಯಾಸ್ಯಾಙ್ಗಿರಸಶಬ್ದೇನ ಅಭಿಧೀಯತೇ ವಿಶ್ವಸೃಜಾಂ ಪೂರ್ವರ್ಷೀಣಾಂ ಸತ್ರೇ ಉದ್ಗಾತಾ । ಸೋಽನ್ಯೇನ ದೇವತಾನ್ತರೇಣ ವಾಕ್ಪ್ರಾಣವ್ಯತಿರಿಕ್ತೇನ ಉದಗಾಯತ್ ಉದ್ಗಾನಂ ಕೃತವಾನ್ ತತೋಽಹಮ್ ಅನೃತವಾದೀ ಸ್ಯಾಮ್ । ತಸ್ಯ ಮಮ ದೇವತಾವಿಪರೀತಪ್ರತಿಪತ್ತುಃ ಮೂರ್ಧಾನಂ ವಿಪಾತಯತು । ಇತ್ಯೇವಂ ಶಪಥಂ ಚಕಾರ ಇತಿ ವಿಜ್ಞಾನೇ ಪ್ರತ್ಯಯದಾರ್ಢ್ಯಕರ್ತವ್ಯತಾಂ ದರ್ಶಯತಿ । ತಮಿಮಮ್ ಆಖ್ಯಾಯಿಕಾನಿರ್ಧಾರಿತಮರ್ಥಂ ಸ್ವೇನ ವಚಸಾ ಉಪಸಂಹರತಿ ಶ್ರುತಿಃ । ವಾಚಾ ಚ ಪ್ರಾಣಪ್ರಧಾನತಯಾ ಪ್ರಾಣೇನ ಚ ಸ್ವಸ್ಯ ಆತ್ಮಭೂತೇನ ಸೋಽಯಾಸ್ಯ ಆಙ್ಗಿರಸ ಉದ್ಗಾತಾ ಉದಗಾಯತ್ ಇತ್ಯೇಷೋಽರ್ಥೋ ನಿರ್ಧಾರಿತಃ ಶಪಥೇನ ॥

(ಭಾಷ್ಯಾರ್ಥ)

ಮೇಲೆ ಹೇಳಿದ ವಿಷಯವು ಗಟ್ಟಿಯಾಗಲೆಂದು (ಈ) ಆಖ್ಯಾಯಿಕೆಯನ್ನು ಆರಂಭಿಸಿದೆ. 'ತದ್ಧಾಪಿ' (ಎಂಬ ಕಂಡಿಕೆಯ ಅರ್ಥವೇನೆಂದರೆ) (ತತ್=ತತ್ರ)

ಅಲ್ಲಿ, ಈ ಹೇಳಿದ ವಿಷಯದಲ್ಲಿ (ಅಪಿ=ಆಖ್ಯಾಯಿಕಾಪಿ) ಆಖ್ಯಾಯಿಕೆಯು ಕೂಡ (ಶ್ರುತಿಯಲ್ಲಿ) ಕೇಳಬಂದಿರುತ್ತದೆ. ಬ್ರಹ್ಮದತ್ತನೆಂಬ ಹೆಸರಿನವನು ಚಿಕಿತಾನನ ಮಗನು ಚೈಕಿತಾನನು, ಅವನ ಮಗನು ಚೈಕಿತಾನೇಯನು ಎಂದು ಯುವ(ಪ್ರತ್ಯಯವು) ಬಂದಿದೆ.[1] ಆ ಚೈಕಿತಾನೇಯನು ರಾಜನನ್ನು ಭಕ್ಷಿಸುತ್ತಾ ಎಂದರೆ ಯಜ್ಞದಲ್ಲಿ ಸೋಮವನ್ನು ಪಾನಮಾಡುತ್ತಾ ಹೇಳಿದನೇ ನೆಂದರೆ, ಈ ಚಮಸದಲ್ಲಿರುವ ನಾನು ಕುಡಿಯುತ್ತಿರುವ ರಾಜನು (ಸೋಮವು) (ನಾನು) ಸುಳ್ಳುಹೇಳುವದಾದರೆ (ಯತ್=ಯದಿ ತ್ಯಸ್ಯ=ತಸ್ಯ) ಆ ನನ್ನ ತಲೆಯನ್ನು ಕೆಡವಿಹಾಕಲಿ, ವಿಸ್ಪಷ್ಟವಾಗಿ ಕೆಡವಿಬಿಡಲಿ ? ತು ಎಂಬುದಕ್ಕೆ (ಬಂದಿರುವ) ತಾತಙ್ ಎಂಬ ಆದೇಶದಿಂದ ಆಶೀರರ್ಥದಲ್ಲಿ 'ವಿಪಾತಯತಾತ್' ಎಂಬೀ ಲೋಟ್(ರೂಪವಾಗಿರುತ್ತದೆ). ನಾನು ಸುಳ್ಳುಹೇಳುವದಾದರೆ (ಕೆಡವಲಿ) ! ಎಂದರ್ಥ. ಸುಳ್ಳುಹೇಳುವದೆಂಬುದು ಹೇಗೆ ಬಂದೊದಗೀತು ? ಎಂದರೆ (ಶ್ರುತಿ) ಹೇಳುತ್ತದೆ. ಇವನಿಗಿಂತ, ಪ್ರಕೃತನಾದ ಈ ವಾಕ್ಸಂಯುಕ್ತನಾದ ಪ್ರಾಣನಿಗಿಂತ, ಅಯಾಸ್ಯ (ಆಂಗಿರಸನು)–ಮುಖ್ಯಪ್ರಾಣನ ಹೆಸರಾದ ಆಯಾಸ್ಯಆಂಗಿರಸನೆಂಬ ಹೆಸರಿನಿಂದ ವಿಶ್ವಸೃಜರೆಂಬ ಪೂರ್ವಋಷಿಗಳ ಸತ್ರದಲ್ಲಿದ್ದ ಉದ್ಗಾತೃವನ್ನು (ಇಲ್ಲಿ) ಕರೆದಿದೆ. ಅವನು– ವಾಕ್ಪ್ರಾಣರಿಗಿಂತ ಬೇರೆಯಾದ ಮತ್ತೊಂದು ದೇವತೆಯಿಂದ ಉದ್ಗಾನಮಾಡಿದ್ದರೆ ಉದ್ಗಾನವನ್ನು ಮಾಡಿದವನಾಗಿದ್ದರೆ, ಆಗ ನಾನು ಅನೃತವಾದಿಯಾಗುವೆನು. (ಹಾಗೆ) ದೇವತೆಯನ್ನು ವಿಪರೀತವಾಗಿ ತಿಳಿದುಕೊಂಡ ಆ ನನ್ನ ತಲೆಯನ್ನು ಕೆಡವಿಹಾಕಲಿ ! ಎಂದಿಂತು ಶಪಥವನ್ನು ಮಾಡಿದನು ಎಂದು (ಪ್ರಾಣ)ವಿಜ್ಞಾನದಲ್ಲಿ ವಿಶ್ವಾಸವು ಗಟ್ಟಿಯಾಗುವಂತೆ ಮಾಡಿಕೊಳ್ಳಬೇಕು ಎಂದು (ಶ್ರುತಿಯು) ತಿಳಿಸುತ್ತದೆ.[2]

ಈ ಆಖ್ಯಾಯಿಕೆಯಿಂದ ನಿಶ್ಚಯಿಸಿದ ಅರ್ಥವನ್ನು ಶ್ರುತಿಯು ತನ್ನ ಮಾತಿನಿಂದ ಉಪಸಂಹಾರಮಾಡುತ್ತಿದೆ: ಪ್ರಾಣಪ್ರಧಾನವಾದ ವಾಕ್ಕಿನಿಂದಲೂ ತನ್ನ ಸ್ವರೂಪವೇ ಆಗಿರುವ ಪ್ರಾಣನಿಂದಲೂ ಆ ಆಯಾಸ್ಯ ಆಂಗಿರಸನೆಂಬ ಉದ್ಗಾತೃವು ಉದ್ಗಾನಮಾಡಿದನು ಎಂಬೀ ಅರ್ಥವು ಶಪಥದಿಂದ ನಿಶ್ಚಯವಾಯಿತು.[3]

---

1. ಚಿಕಿತಾನನ ತಂದೆಯು ಬದುಕಿರುವಾಗ ಅವನ ಮೊಮ್ಮಗನನ್ನು ಹೇಳುವ ಪ್ರತ್ಯಯವು ಯುವ ಪ್ರತ್ಯಯ.

2. ಉಪಾಸನೆಯ ಪ್ರತ್ಯಯವು ಗಟ್ಟಿಯಾಗುವದು ಅವಶ್ಯ. ಛಾಂ. ಭಾ. ೩–೧೪–೧, ೩–೧೪–೪ ಇವುಗಳ ಭಾಷ್ಯವನ್ನು ನೋಡಿ.

3. ಶಿಷ್ಟಾಚಾರರೂಪವಾದ ಶಪಥವೂ ಪ್ರಮಾಣವು ಎಂದು ಭಾವಿಸಬೇಕು ಎಂದು ಶ್ರುತಿಯ ಅಭಿಪ್ರಾಯ.

# ಸಾಮರೂಪನಾದ ಪ್ರಾಣನ ಸ್ವತ್ತು

(ಉಪನಿಷತ್ತು)

**ತಸ್ಯ ಹೈತಸ್ಯ ಸಾಮ್ನೋ ಯಃ ಸ್ವಂ ವೇದ ಭವತಿ ಹಾಸ್ಯ ಸ್ವಂ ತಸ್ಯ ವೈ ಸ್ವರ ಏವ ಸ್ವಂ ತಸ್ಮಾದಾರ್ತ್ವಿಜ್ಯಂ ಕರಿಷ್ಯನ್ ವಾಚಿ ಸ್ವರಮಿಚ್ಛೇತ ತಯಾ ವಾಚಾ ಸ್ವರಸಂಪನ್ನಯಾ ಆರ್ತ್ವಿಜ್ಯಂ ಕುರ್ಯಾತ್ತಸ್ಮಾದ್ಯಜ್ಞೇ ಸ್ವರವನ್ತಂ ದಿದೃಕ್ಷನ್ತ ಏವ। ಅಥೋ ಯಸ್ಯ ಸ್ವಂ ಭವತಿ ಭವತಿ ಹಾಸ್ಯ ಸ್ವಂ ಯ ಏವಮೇತತ್ಸಾಮ್ನಃ ಸ್ವಂ ವೇದ ॥ ೨೫ ॥**

೨೫. ಆ ಈ ಸಾಮದ ಸ್ವತ್ತನ್ನು ಯಾವನು ಅರಿತುಕೊಳ್ಳುವನೋ ಅವನಿಗೆ ಸ್ವತ್ತು ಉಂಟಾಗುವದು. ಆ (ಸಾಮಕ್ಕೆ) ಸ್ವರವೇ ಸ್ವತ್ತು. ಆದ್ದರಿಂದ ಆರ್ತ್ವಿಜ್ಯವನ್ನು ಮಾಡುವವನು ವಾಕ್ಕಿನಲ್ಲಿ ಸ್ವರವನ್ನು ಬಯಸಬೇಕು. ಆ ಸ್ವರಯುಕ್ತವಾದ ವಾಕ್ಕಿನಿಂದ ಆರ್ತ್ವಿಜ್ಯವನ್ನು ಮಾಡಬೇಕು. ಆದ್ದರಿಂದ ಸ್ವರವಂತನಾದವನನ್ನು ನೋಡುವದಕ್ಕೆ ಅವಶ್ಯವಾಗಿ (ಜನರು) ಇಚ್ಛಿಸುತ್ತಾರೆ; ಮತ್ತು ಯಾವನಿಗೆ ಸ್ವತ್ತು ಇರುವದೋ ಅವನನ್ನು ನೋಡಲು ಇಚ್ಛಿಸುತ್ತಾರೆ. ಯಾವನು ಹೀಗೆ ಸಾಮದ (ಈ) ಸ್ವತ್ತನ್ನು ಅರಿತುಕೊಳ್ಳುವನೋ ಅವನಿಗೆ ಸ್ವತ್ತು ಉಂಟಾಗುತ್ತದೆ.

(ಭಾಷ್ಯ)

೮೯. ತಸ್ಯ ಹೈತಸ್ಯ। ತಸ್ಯ ಇತಿ ಪ್ರಕೃತಂ ಪ್ರಾಣಮಭಿಸಂಬಧ್ನಾತಿ। ಹ ಏತಸ್ಯ ಇತಿ ಮುಖ್ಯಂ ವ್ಯಪದಿಶತ್ಯಭಿನಯೇನ। ಸಾಮ್ನಃ ಸಾಮಶಬ್ದವಾಚ್ಯಸ್ಯ ಪ್ರಾಣಸ್ಯ ಯಃ ಸ್ವಂ ಧನಂ ವೇದ ತಸ್ಯ ಹ ಕಿಂ ಸ್ಯಾತ್ ? ಭವತಿ ಹಾಸ್ಯ ಸ್ವಮ್। ಫಲೇನ ಪ್ರಲೋಭ್ಯ ಅಭಿಮುಖೀಕೃತ್ಯ ಶುಶ್ರೂಷವ ಆಹ। ತಸ್ಯ ವೈ ಸಾಮ್ನಃ ಸ್ವರ ಏವ ಸ್ವಮ್। ಸ್ವರ ಇತಿ ಕಣ್ಠಗತಂ ಮಾಧುರ್ಯಂ ತದೇವಾಸ್ಯ ಸ್ವಂ ವಿಭೂಷಣಮ್। ತೇನ ಹಿ ಭೂಷಿತಮ್ ಋದ್ಧಿಮತ್ ಲಕ್ಷ್ಯತ ಉದ್ಗಾನಮ್। ಯಸ್ಮಾದೇವಂ ತಸ್ಮಾತ್ ಆರ್ತ್ವಿಜ್ಯಂ ಋತ್ವಿಕ್ಕರ್ಮ ಉದ್ಗಾನಂ ಕರಿಷ್ಯನ್ ವಾಚಿ ವಿಷಯೇ ವಾಚಿ ವಾಗಾಶ್ರಿತಂ ಸ್ವರಮಿಚ್ಛೇತ ಇಚ್ಛೇತ್ ಸಾಮ್ನೋ ಧನವತ್ತಾಂ ಸ್ವರೇಣ ಚಿಕೀರ್ಷುರುದ್ಗಾತಾ। ಇದಂ ತು ಪ್ರಾಸಙ್ಗಿಕಂ ವಿಧೀಯತೇ ಸಾಮ್ನಃ ಸೌಸ್ವರ್ಯೇಣ ಸ್ವರವತ್ತ್ವಪ್ರತ್ಯಯೋ ಕರ್ತವ್ಯೋ। ಇಚ್ಛಾಮಾತ್ರೇಣ ಸೌಸ್ವರ್ಯಂ ನ ಭವತೀತಿ ದನ್ತಧಾವನತೈಲಪಾನಾದಿ ಸಾಮರ್ಥ್ಯಾತ್ ಕರ್ತವ್ಯಮ್ ಇತ್ಯರ್ಥಃ। ತಯಾ ಏವಂ ಸಂಸ್ಕೃತಯಾ ವಾಚಾ ಸ್ವರಸಂಪನ್ನಯಾ

ಆರ್ತ್ವಿಜ್ಯಂ ಕುರ್ಯಾತ್| ತಸ್ಮಾತ್ ಯಸ್ಮಾತ್ ಸಾಮ್ನಃ ಸ್ವಭೂತಃ ಸ್ವರಃ ತೇನ ಸ್ವೇನ ಭೂಷಿತಂ ಸಾಮ। ಅತಃ ಯಜ್ಞೇ ಸ್ವರವನ್ತಮ್ ಉದ್ಗಾತಾರಂ ದಿದೃಕ್ಷನ್ತ ಏವ ದ್ರಷ್ಟುಮಿಚ್ಛನ್ತ ಏವ ಧನಿನಮಿವ ಲೌಕಿಕಾಃ| ಪ್ರಸಿದ್ಧಂ ಹಿ ಲೋಕೇ ಅಥೋ ಅಪಿ ಯಸ್ಯ ಸ್ವಂ ಧನಂ ಭವತಿ ತಂ ಧನಿನಂ ದಿದೃಕ್ಷನ್ತ ಇತಿ| ಸಿದ್ಧಸ್ಯ ಗುಣವಿಜ್ಞಾನ ಫಲಸಂಬನ್ಧಸ್ಯ ಉಪಸಂಹಾರಃ ಕ್ರಿಯತೇ ಭವತಿ ಹಾಸ್ಯ ಸ್ವಂ ಯ ಏವ ಮೇತತ್ಸಾಮ್ನಃ ಸ್ವಂ ವೇದ ಇತಿ ||

(ಭಾಷ್ಯಾರ್ಥ)

'ತಸ್ಯ ಹೈತಸ್ಯ' (ಎಂಬ ಕಂಡಿಕೆಯ ಅರ್ಥವೇನೆಂದರೆ), ತಸ್ಯ (ಆ) ಎಂಬುದು ಪ್ರಕೃತನಾದ ಪ್ರಾಣನನ್ನು ಸಂಬಂಧಿಸಿಕೊಂಡಿರುತ್ತದೆ. ಹ ಏತಸ್ಯ (ಈ) ಎಂಬುದು ಮುಖ್ಯ(ಪ್ರಾಣನನ್ನು) ಅಭಿನಯದಿಂದ (ತೋರಿಸಿ) ತಿಳಿಸುತ್ತದೆ. ಸಾಮುದ ಎಂದರೆ ಸಾಮವೆಂಬ ಹೆಸರಿನಿಂದ ಕರೆದಿರುವ ಪ್ರಾಣನ ಸ್ವತ್ತನ್ನು ಧನವನ್ನು ಯಾವನು ಅರಿತುಕೊಂಡಿರುವನೋ– ಅವನಿಗೆ ಏನಾಗುವದು? ಎಂದರೆ– ಅವನಿಗೆ ಸ್ವತ್ತು ಉಂಟಾಗುತ್ತದೆ. ಫಲದಿಂದ (ಶ್ರೋತೃವಿನ) ಮನಸ್ಸನ್ನೆಳೆದು (ಅವನನ್ನು) ತನ್ನ ಕಡೆಗೆ ತಿರುಗಿಸಿಕೊಂಡು, (ವಿಷಯವನ್ನು) ಕೇಳಬೇಕೆಂದು ಇಚ್ಛಿಸುವವನಿಗೆ (ಶ್ರುತಿಯು) ಹೇಳುತ್ತದೆ. ಆ ಸಾಮುನಿದಾನಲ್ಲ, (ಅವನಿಗೆ) ಸ್ವರವೇ ಸ್ವತ್ತು. ಸ್ವರವೆಂದರೆ ಕಂಠದಲ್ಲಿರುವ ಇಂಪು; ಅದೇ ಅವನ ಸ್ವತ್ತು, ಒಡವೆಯು. ಆ (ಒಡವೆಯಿಂದ) ಅಲಂಕೃತವಾಗಿಯಲ್ಲವೆ, ಉದ್ಗಾನವು ಋದ್ಧಿಯುಕ್ತವಾಗಿ ಕಾಣಿಸುತ್ತದೆ?

ಹೀಗಿದೆಯಷ್ಟೆ, ಆದ್ದರಿಂದ ಆರ್ತ್ವಿಜ್ಯವನ್ನು ಎಂದರೆ ಉದ್ಗಾನವೆಂಬ ಋತ್ವಿಕ್ಕರ್ಮವನ್ನು ಮಾಡುವವನು ವಾಕ್ಕೆಂಬ ವಿಷಯದಲ್ಲಿ ವಾಗಾಶ್ರಿತವಾದ ಸ್ವರವನ್ನು[1] ಬಯಸಬೇಕು; ಸಾಮಕ್ಕೆ ಸ್ವರದಿಂದ ಧನವತ್ತ್ವವನ್ನುಂಟುಮಾಡಬೇಕೆಂಬ ಉದ್ಗಾತೃವು (ಸ್ವರವನ್ನು ಬಯಸಬೇಕು) ಸಾಮವು ಒಳ್ಳೆಯ ಸ್ವರದಿಂದ ಸ್ವರವುಳ್ಳದ್ದು ಎಂಬ ಪ್ರತ್ಯಯವನ್ನು (ಇಲ್ಲಿ) ಮಾಡಬೇಕಾಗಿರುವದರಿಂದ (ಉದ್ಗಾತೃವಿಗೆ ಕರ್ತವ್ಯವೆಂದು) ಇದನ್ನು ಪ್ರಾಸಂಗಿಕವಾಗಿ ವಿಧಿಸಿದೆ.[2] ಬರಿಯ ಇಚ್ಛೆಯಿಂದ ಒಳ್ಳೆಯ ಸ್ವರವು ಬರಲಾರದಾದ್ದರಿಂದ ಹಲ್ಲನ್ನು ಉಜ್ಜುವದು, (ವಿಶೇಷವಾದ) ತೈಲವನ್ನು ಪಾನಮಾಡುವದು– ಮುಂತಾದದ್ದನ್ನು ಮಾಡಬೇಕು (ಎಂದು ವಿಧಿಸಿದೆ) ಎಂದು ಸಾಮರ್ಥ್ಯದಿಂದ ಅರ್ಥವಾಗುತ್ತದೆ.[3] ಹೀಗೆ

1. ವಾಕ್ಕೆಂಬ ಮಾತು ಇಲ್ಲಿ ಸ್ವರವನ್ನು ಹೇಳುತ್ತದೆ ಎಂದು ಭಾವ.

2. ಸ್ವತ್ತು ಎಂಬ ಗುಣವನ್ನು ಉಪಾಸನೆಮಾಡಬೇಕೆಂಬುದೇ ಇಲ್ಲಿ ವಿವಕ್ಷಿತವೆಂಬುದನ್ನು ತಿಳಿಸುವದಕ್ಕಾಗಿ ಹೀಗೆ ಉಪಸಂಹಾರಮಾಡಿರುತ್ತದೆ.

3. ಇಚ್ಛೆಯನ್ನು ವಿಧಿಸುವದಕ್ಕೆ ಆಗುವದಿಲ್ಲ; ಇಚ್ಛೆಯಿಂದ ಮಾಡುವ ಕರ್ತವ್ಯವನ್ನು ವಿಧಿಸಬಹುದು. ಆದ್ದರಿಂದ ಹೀಗೆ ಅರ್ಥಮಾಡಬೇಕು.

ಸಂಸ್ಕೃತವಾದ ಆ ಸ್ವರಯುಕ್ತವಾದ ವಾಕ್ಕಿನಿಂದ ಆರ್ತ್ವಿಜ್ಯವನ್ನು ಮಾಡಬೇಕು.

ಆದ್ದರಿಂದ–ಎಂದರೆ ಸಾಮಕ್ಕೆ ಸ್ವರವು ಸ್ವತ್ತಾಗಿ, ಆ ಸ್ವತ್ತಿನಿಂದ ಸಾಮವು ಅಲಂಕೃತವಾಗಿರುವದಷ್ಟೆ. ಆದಕಾರಣ– ಯಜ್ಞದಲ್ಲಿ ಸ್ವರವಂತನಾದ ಉದ್ಗಾತೃವನ್ನು ಜನರು ಹಣವಂತನನ್ನು ನೋಡಲಿಚ್ಛಿಸುವಂತೆ ಆವಶ್ಯವಾಗಿ ನೋಡುವದಕ್ಕೆ ಇಚ್ಛಿಸುತ್ತಾರೆ, ಕಾಣಲು ಬಯಸುತ್ತಾರೆ, ಮತ್ತು ಇದಲ್ಲದೆ ಯಾವನಿಗೆ ಸ್ವತ್ತು ಎಂದರೆ ಧನವು ಇರುವದೋ ಆ ಧನವಂತನನ್ನು ನೋಡಲು ಇಚ್ಛಿಸುತ್ತಾರೆ ಎಂಬದು ಲೋಕದಲ್ಲಿ ಪ್ರಸಿದ್ಧವಾಗಿದೆಯಲ್ಲವೆ?

(ಈಗ), ಸಿದ್ಧವಾಗಿರುವ (ಈ) ಗುಣವಿಜ್ಞಾನದ ಫಲವನ್ನು '(ಹೀಗೆ) ಯಾವನು ಸಾಮದ ಈ ಸ್ವತ್ತನ್ನು ಅರಿತುಕೊಂಡಿರುವನೋ ಅವನಿಗೆ ಸ್ವತ್ತು ಉಂಟಾಗುತ್ತದೆ, ಎಂದು ಉಪಸಂಹಾರಮಾಡಿರುತ್ತದೆ.

## ಸಾಮರೂಪನಾದ ಪ್ರಾಣನ ಸುವರ್ಣ

(ಉಪನಿಷತ್ತು)

**ತಸ್ಯ ಹೈತಸ್ಯ ಸಾಮ್ನೋ ಯಃ ಸುವರ್ಣಂ ವೇದ ಭವತಿ ಹಾಸ್ಯ ಸುವರ್ಣಂ ತಸ್ಯ ವೈ ಸ್ವರ ಏವ ಸುವರ್ಣಂ ಭವತಿ ಹಾಸ್ಯ ಸುವರ್ಣಂ ಯ ಏವಮೇತತ್ಸಾಮ್ನಃ ಸುವರ್ಣಂ ವೇದ ||೨೬||**

೨೬. ಆ ಈ ಸಾಮದ ಸುವರ್ಣವನ್ನು ಯಾವನು ಅರಿತುಕೊಳ್ಳುವನೋ ಅವನಿಗೆ ಸುವರ್ಣವು ಉಂಟಾಗುವದು. ಅದಕ್ಕೆ ಸ್ವರವೇ ಸುವರ್ಣವು. ಯಾವನು ಸಾಮದ ಸುವರ್ಣವನ್ನು ಹೀಗೆ ಅರಿತುಕೊಳ್ಳುವನೋ ಅವನಿಗೆ ಸುವರ್ಣವು ಉಂಟಾಗುತ್ತದೆ.

## ಸ್ವರಕ್ಕೂ ಸುವರ್ಣಕ್ಕೂ ತಾರತಮ್ಯ

(ಭಾಷ್ಯ)

೯೦. ಅಥ ಅನ್ಯೋ ಗುಣಃ ಸುವರ್ಣವತ್ತಾಲಕ್ಷಣೋ ವಿಧೀಯತೇ ಅಸಾವಪಿ ಸೌಸ್ವರ್ಯಮೇವ। ಏತಾವಾನ್ ವಿಶೇಷಃ। ಪೂರ್ವಂ ಕಣ್ಠಗತಮಾಧುರ್ಯಮ್, ಇದಂ ತು ಲಾಕ್ಷಣಿಕಂ ಸುವರ್ಣಶಬ್ದವಾಚ್ಯಮ್। ತಸ್ಯ ಹ ಏತಸ್ಯ ಸಾಮ್ನಃ ಯಃ ಸುವರ್ಣಂ ವೇದ ಭವತಿ ಹಾಸ್ಯ ಸುವರ್ಣಮ್। ಸುವರ್ಣಶಬ್ದಸಾಮಾನ್ಯಾತ್ ಸ್ವರಸುವರ್ಣಯೋಃ। ಲೌಕಿಕಮೇವ ಸುವರ್ಣಂ ಗುಣವಿಜ್ಞಾನಫಲಂ ಭವತಿ ಇತ್ಯರ್ಥಃ। ತಸ್ಯ ವೈ ಸ್ವರ ಏವ ಸುವರ್ಣಮ್ 'ಭವತಿ ಹಾಸ್ಯ ಸುವರ್ಣಂ ಯ ಏವಮ್ ಏತತ್ ಸಾಮ್ನೋ ಸುವರ್ಣಂ ವೇದ' ಇತಿ ಪೂರ್ವವತ್ ಸರ್ವಮ್ ||

(ಭಾಷ್ಯಾರ್ಥ)

ಈಗ ಸುವರ್ಣವತ್ತಾರೂಪವಾದ ಮತ್ತೊಂದು ಗುಣವನ್ನು[1] ವಿಧಿಸಲಾಗುತ್ತದೆ. ಇದೂ ಒಳ್ಳೆಯ ಸ್ವರಸಂಪತ್ತೇ. (ಆದರೆ ಇಲ್ಲಿ) ಇಷ್ಟು ವಿಶೇಷ(ವಿದೆ): ಹಿಂದೆ ಹೇಳಿದ್ದು ಕಂಠದಲ್ಲಿರುವ ಇಂಪು; ಇದಾದರೋ ಲಕ್ಷಣಸಂಬಂಧವಾದ ಸುವರ್ಣವೆಂಬ ಹೆಸರಿನಿಂದ ಕರೆಯುವ ಗುಣವು.[2]

ಆ ಈ ಸಾಮದ ಸುವರ್ಣವನ್ನು ಯಾವನು ಅರಿತುಕೊಳ್ಳುವನೋ ಅವನಿಗೆ ಸುವರ್ಣವು ಉಂಟಾಗುವದು. ಏಕೆಂದರೆ ಸ್ವರ, ಸುವರ್ಣ[3]– ಇವೆರಡಕ್ಕೂ ಸುವರ್ಣಶಬ್ದ(ವಾಚ್ಯತ್ವ)ವೆಂಬುದು ಸಮಾನವಾಗಿರುತ್ತದೆ. ಈ ಗುಣವಿಜ್ಞಾನದ ಫಲವಾಗಿ ಲೋಕದ ಸುವರ್ಣವೇ (ಅವನಿಗೆ) ಆಗುತ್ತದೆ ಎಂದರ್ಥ. 'ಅವನಿಗೆ ಸ್ವರವೇ ಸುವರ್ಣವು. ಯಾವನು ಸಾಮದ ಸುವರ್ಣವನ್ನು ಹೀಗೆ ಅರಿತುಕೊಳ್ಳುವನೋ ಅವನಿಗೆ ಸುವರ್ಣವು ಉಂಟಾಗುತ್ತದೆ' ಎಂಬುದೆಲ್ಲವೂ ಹಿಂದಿನಂತೆ (ವ್ಯಾಖ್ಯಾನಮಾಡತಕ್ಕದ್ದು).

## ನಾಮರೂಪನಾದ ಪ್ರಾಣನ ಪ್ರತಿಷ್ಠೆ

(ಉಪನಿಷತ್ತು)

**ತಸ್ಯ ಹೈತಸ್ಯ ಸಾಮ್ನೋ ಯಃ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತಿ ತಸ್ಯ ವೈ ವಾಗೇವ ಪ್ರತಿಷ್ಠಾ ವಾಚಿ ಹಿ ಖಲ್ವೇಷ ಏತತ್ ಪ್ರಾಣಃ ಪ್ರತಿಷ್ಠಿತೋ ಗೀಯತೇಽನ್ನ ಇತ್ಯುಹೈಕ ಆಹುಃ ॥ ೨೭ ॥**

೨೭. ಆ ಈ ಸಾಮದ ಪ್ರತಿಷ್ಠೆಯನ್ನು ಯಾವನು ಅರಿತುಕೊಳ್ಳುವನೋ ಅವನು ಪ್ರತಿಷ್ಠಿತನಾಗುವನು. ಅದಕ್ಕೆ ವಾಕ್ಕೇ ಪ್ರತಿಷ್ಠೆ. ಈ ಪ್ರಾಣನು ವಾಕ್ಕಿನಲ್ಲಲ್ಲವೆ, ಹೀಗೆ ಪ್ರತಿಷ್ಠಿತನಾಗಿ ಹಾಡಲ್ಪಡುತ್ತಾನೆ? ಅನ್ನದಲ್ಲಿ ಎಂದು ಒಬ್ಬರು ಹೇಳುತ್ತಾರೆ.

(ಭಾಷ್ಯ)

೯೧. ತಥಾ ಪ್ರತಿಷ್ಠಾಗುಣಂ ವಿಧಿತ್ಸನ್ ಆಹ। ತಸ್ಯ ಹೈತಸ್ಯ ಸಾಮ್ನೋ ಯಃ ಪ್ರತಿಷ್ಠಾಂ ವೇದ। ಪ್ರತಿತಿಷ್ಠತಿ ಅಸ್ಯಾಮ್ ಇತಿ ಪ್ರತಿಷ್ಠಾ

---

1. ಗುಣದ ಉಪಾಸನೆಯನ್ನು.

2. ಕಂಠ್ಯಾದಿವರ್ಣಗಳನ್ನು ಶಾಸ್ತ್ರದಿಂದ ಅರಿತು ಸರಿಯಾಗಿ ಉಚ್ಚಾರಣೆಮಾಡುವ ಗುಣವು.

3. ಚಿನ್ನ.

ವಾಕ್ ತಾಂ ಪ್ರತಿಷ್ಠಾಂ ಸಾವ್ನೋ, ಗುಣಂ ಯೋ ವೇದ ಸ ಪ್ರತಿತಿಷ್ಠತಿ ಹ। "ತಂ ಯಥಾ ಯಥೋಪಾಸತೇ" (ಶತ. ಬ್ರಾ. ೧೦-೫-೨-೨೦) ಇತಿ ಶ್ರುತೇ ಸ್ತದ್ಗುಣತ್ವಂ ಯುಕ್ತಮ್। ಪೂರ್ವವತ್ ಫಲೇನ ಪ್ರತಿಲೋಭಿತಾಯ ಕಾ ಪ್ರತಿಷ್ಠಾ ಇತಿ ಶುಶ್ರೂಷವೇ ಆಹ। ತಸ್ಯ ವೈ ಸಾವ್ನೋ ವಾಗೇವ। ವಾಗಿತಿ ಜಿಹ್ವಾಮೂಲೀಯಾದೀನಾಂ ಸ್ಥಾನಾನಾಮ್ ಆಖ್ಯಾ। ಸೈವ ಪ್ರತಿಷ್ಠಾ। ತದಾಹ। ವಾಚಿ ಹಿ ಜಿಹ್ವಾಮೂಲೀಯಾದಿಷು ಹಿ ಯಸ್ಮಾತ್ ಪ್ರತಿಷ್ಠಿತಃ ಸನ್ ಏಷ ಪ್ರಾಣಃ ಏತದ್ ಗಾನಂ ಗೀಯತೇ, ಗೀತಿಭಾವಮ್ ಆಪದ್ಯತೇ। ತಸ್ಮಾತ್ ಸಾಮ್ನಃ ಪ್ರತಿಷ್ಠಾ ವಾಕ್। ಅನ್ನೇ ಪ್ರತಿಷ್ಠಿತೋ ಗೀಯತೇ ಇತಿ ಉ ಹ ಏಕೇ ಅನ್ಯೇ ಆಹುಃ। ಇಹ ಪ್ರತಿತಿಷ್ಠತಿ ಇತಿ ಯುಕ್ತಮ್। ಅನಿನ್ದಿತತ್ವಾತ್ ಏಕೀಯ ಪಕ್ಷಸ್ಯ ವಿಕಲ್ಪೇನ ಪ್ರತಿಷ್ಠಾಗುಣವಿಜ್ಞಾನಂ ಕುರ್ಯಾತ್ ವಾಗ್ವಾ ಪ್ರತಿಷ್ಠಾ ಅನ್ನಂ ವಾ ಇತಿ ॥

(ಭಾಷ್ಯಾರ್ಥ)

ಹೀಗೆಯೇ ಪ್ರತಿಷ್ಠಾಗುಣವನ್ನು ವಿಧಿಸಬೇಕೆಂದು (ವೇದವು) ಹೀಗೆನ್ನು ತ್ತಿದೆ: ಆ ಈ ಸಾಮದ ಪ್ರತಿಷ್ಠೆಯನ್ನು ಯಾವನು ಅರಿತುಕೊಳ್ಳುವನೋ– ಇದರಲ್ಲಿ ಪ್ರತಿಷ್ಠಿತನಾಗಿರುತ್ತಾನಾದ್ದರಿಂದ ವಾಕ್ಕು ಪ್ರತಿಷ್ಠೆ ಎನಿಸುವದು– ಸಾಮದ ಆ ಪ್ರತಿಷ್ಠೆ ಎಂಬ ಗುಣವನ್ನು ಯಾವನು ಅರಿತುಕೊಳ್ಳುವನೋ ಅವನು ಪ್ರತಿಷ್ಠಿತನಾಗಿರುವನು. "ಅವನನ್ನು ಹೇಗೆ ಹೇಗೆ ಉಪಾಸನೆಮಾಡುವರೋ (ಅದದೇ ಆಗುತ್ತದೆ)" (ಶತ. ಬ್ರಾ. ೧-೫-೭-೨೦) ಎಂದು ಶ್ರುತಿಯಿರುವದರಿಂದ ಈ ಗುಣವು (ಉಪಾಸಕನಿಗೆ) ಆಗುವದು ಯುಕ್ತವು.

ಮೊದಲಿನಂತೆ ಫಲದಿಂದ ಆಶಾಯುಕ್ತನಾಗಿರುವ, ಪ್ರತಿಷ್ಠೆಯು ಯಾವದು ಎಂಬುದನ್ನು ಕೇಳಬೇಕೆಂಬ ಇಚ್ಛೆಯುಳ್ಳವನಿಗೆ (ಶ್ರುತಿಯು ಹೀಗೆಂದು) ಹೇಳು ತ್ತಿದೆ: ಆ ಸಾಮಕ್ಕೆ ವಾಕ್ಕೇ– ವಾಕ್ಕೆಂಬುದು ಜಿಹ್ವಾಮೂಲೀಯವೇ ಮುಂತಾದ ಸ್ಥಾನಗಳ ಹೆಸರು: ಅದೇ– ಪ್ರತಿಷ್ಠೆ. ಅದನ್ನೇ (ಶ್ರುತಿ) ಹೇಳುತ್ತಿದೆ: ವಾಕ್ಕಿನಲ್ಲಿಯೇ, ಜಿಹ್ವಾಮೂಲೀಯವೇ ಮುಂತಾದವುಗಳಲ್ಲಿಯೇ ಅಲ್ಲವೆ, ಪ್ರತಿ ಷ್ಠಿತನಾಗಿ ಈ ಪ್ರಾಣನು ಈ ಗಾನವು ಹಾಡಲ್ಪಡುತ್ತದೆ, ಗೀತಿಭಾವವನ್ನು ಹೊಂದುತ್ತದೆ ? ಆದ್ದರಿಂದ ಸಾಮಕ್ಕೆ ವಾಕ್ಕು ಪ್ರತಿಷ್ಠೆಯು.

ಮತ್ತು ಅನ್ನದಲ್ಲಿ ಪ್ರತಿಷ್ಠಿತವಾಗಿ (ಹಾಡಲ್ಪಡುತ್ತದೆ) ಎಂದು ಒಬ್ಬರು ಇನ್ನೂ (ಕೆಲವರು) ಹೇಳುತ್ತಾರೆ. ಇಲ್ಲಿ ಪ್ರತಿಷ್ಠಿತವಾಗಿರುತ್ತದೆ ಎಂಬಿದು (ಕೂಡ) ಯುಕ್ತವು. ಈ ಕೆಲವರ ಪಕ್ಷವನ್ನು ನಿಂದಿಸಿಲ್ಲವಾಗಿ, ವಾಕ್ಕೇ ಪ್ರತಿಷ್ಠೆ ಎಂದಾಗಲಿ, ಅನ್ನವೇ ಪ್ರತಿಷ್ಠೆ ಎಂದಾಗಲಿ, ಪ್ರತಿಷ್ಠಾಗುಣದ ಉಪಾಸನೆಯನ್ನು ಮಾಡಬಹುದು.

## ಪ್ರಾಣೋಪಾಸಕನಿಗೆ ಅಭ್ಯಾರೋಹಜಪವಿಧಿ

(ಉಪನಿಷತ್ತು)

**ಅಥಾತಃ ಪವಮಾನಾನಾಮೇವಾಭ್ಯಾರೋಹಃ ಸ ವೈ ಖಲು ಪ್ರಸ್ತೋತಾ ಸಾಮ ಪ್ರಸ್ತೌತಿ ಸ ಯತ್ರ ಪ್ರಸ್ತುಯಾತ್ ತದೇತಾನಿ ಜಪೇತ್ । ಅಸತೋ ಮಾ ಸದ್ಗಮಯ ತಮಸೋ ಮಾ ಜ್ಯೋತಿರ್ಗಮಯ ಮೃತ್ಯೋರ್ಮಾಽಮೃತಂ ಗಮಯೇತಿ ಸ ಯದಾ ಹಾಸತೋ ಮಾ ಸದ್ಗಮಯೇತಿ ಮೃತ್ಯುರ್ವಾ ಅಸತ್ ಸದಮೃತಂ ಮೃತ್ಯೋರ್ಮಾಽಮೃತಂ ಗಮಯಾಮೃತಂ ಮಾ ಕುರ್ವಿತ್ಯೇವೈತದಾಹ ತಮಸೋ ಮಾ ಜ್ಯೋತಿರ್ಗಮಯೇತಿ ಮೃತ್ಯುರ್ವೈ ತಮೋ ಜ್ಯೋತಿರಮೃತಂ ಮೃತ್ಯೋರ್ಮಾಽಮೃತಂ ಗಮಯಾಮೃತಂ ಮಾ ಕುರ್ವಿತ್ಯೇವೈತದಾಹ ಮೃತ್ಯೋರ್ಮಾಽಮೃತಂ ಗಮಯೇತಿ ನಾತ್ರ ತಿರೋಹಿತಮಿವಾಸ್ತಿ । ಅಥ ಯಾನೀತರಾಣಿ ಸ್ತೋತ್ರಾಣಿ ತೇಷ್ವಾತ್ಮನೇಽನ್ನಾದ್ಯಮಾಗಾಯೇತ್ ತಸ್ಮಾದು ತೇಷು ವರಂ ವೃಣೀತ ಯಂ ಕಾಮಂ ಕಾಮಯೇತ ತಗ್ಂ ಸ ಏಷ ಏವಂ ವಿದುದ್ಗಾತಾಽತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ ತದ್ಧೈತಲ್ಲೋಕಜಿದೇವ ನ ಹೈವಾಲೋಕ್ಯತಾಯಾ ಆಶಾಽಸ್ತಿ ಯ ಏವಮೇತತ್ ಸಾಮ ವೇದ ॥೨೮॥**

೨೮. ಈಗ ಆದ್ದರಿಂದ ಪವಮಾನಗಳದೇ ಅಭ್ಯಾರೋಹವನ್ನು (ಹೇಳಲಾಗುತ್ತದೆ). ಆ ಪ್ರಸ್ತೋತೃವೇ ಸಾಮವನ್ನು ಪ್ರಸ್ತಾವ ಮಾಡುತ್ತಾನಲ್ಲವೆ ? ಅವನು ಯಾವಾಗ ಪ್ರಸ್ತಾವಮಾಡುವನೋ ಆಗ ಅವುಗಳನ್ನು ಜಪಿಸಬೇಕು. 'ಅಸತೋ ಮಾ ಸದ್ಗಮಯ', 'ತಮಸೋ ಮಾ ಜ್ಯೋತಿರ್ಗಮಯ', 'ಮೃತ್ಯೋರ್ಮಾಽಮೃತಂ ಗಮಯ' ಎಂಬ(ವೇ ಆ ಯಜುಸ್ಸುಗಳು). ಆ (ಮಂತ್ರವು) 'ಅಸತೋ ಮಾ ಸದ್ಗಮಯ' (ಅಸತ್ತಿನಿಂದ ನನ್ನನ್ನು ಸತ್ತನ್ನು ಸೇರಿಸು) ಎಂದು ಹೇಳುತ್ತದೆಯಷ್ಟೆ. (ಅಲ್ಲಿ) ಅಸತ್ತೆಂದರೆ ಮೃತ್ಯುವೇ, ಸತ್ತೆಂದರೆ ಅಮೃತವು; (ಆದ್ದರಿಂದ) ಮೃತ್ಯುವಿನಿಂದ ನನ್ನನ್ನು ಅಮೃತವನ್ನು ಸೇರಿಸು, ನನ್ನನ್ನು ಅಮೃತನನ್ನಾಗಿ ಮಾಡು ಎಂಬುದನ್ನೇ (ಮಂತ್ರವು) ಹೇಳುತ್ತದೆ. 'ತಮಸೋ ಮಾ ಜ್ಯೋತಿರ್ಗಮಯ' (ತಮಸ್ಸಿನಿಂದ ನನ್ನನ್ನು ಜ್ಯೋತಿಯನ್ನು ಸೇರಿಸು) ಎಂದು (ಹೇಳುತ್ತದೆಯಷ್ಟೆ, ಅಲ್ಲಿ) ತಮಸ್ಸೆಂದರೆ ಮೃತ್ಯುವೇ,

ಜ್ಯೋತಿ ಎಂದರೆ ಅಮೃತವು. ಮೃತ್ಯುವಿನಿಂದ ನನ್ನನ್ನು ಅಮೃತವನ್ನು ಸೇರಿಸು, ನನ್ನನ್ನು ಅಮೃತನನ್ನಾಗಿ ಮಾಡು ಎಂಬಿದನ್ನೇ (ಮಂತ್ರವು) ಹೇಳುತ್ತದೆ. 'ಮೃತ್ಯೋರ್ಮಾಽಮೃತಂ ಗಮಯ' ಎಂದು (ಮಂತ್ರವು ಹೇಳುತ್ತದೆಯಷ್ಟೆ,) ಇಲ್ಲಿ ಮರೆಯಾಗಿರುವ(ದೇನೂ) ಇಲ್ಲ. ಇನ್ನು ಬೇರೆಯ ಸ್ತೋತ್ರಗಳಿರುವವಲ್ಲ, ಅವುಗಳಲ್ಲಿ ತನಗಾಗಿ ಅನ್ನಾದ್ಯವನ್ನು ಗಾನಮಾಡಿಕೊಳ್ಳಬೇಕು. ಆದ್ದರಿಂದ ಅವುಗಳಲ್ಲಿ ವರವನ್ನು ಕೇಳಿಕೊಳ್ಳಬೇಕು; ಹೀಗೆಂದು ಅರಿತುಕೊಂಡ ಉದ್ಗಾತೃವು ತನಗಾಗಿ ಯಾವ ಕಾಮವನ್ನು ಕಾಮಿಸುವನೋ ಅದನ್ನು ಅಥವಾ ಯಜಮಾನನಿಗಾಗಿ ಯಾವ ಕಾಮವನ್ನು ಕಾಮಿಸುವನೋ ಅದನ್ನು ಆಗಾನಮಾಡುತ್ತಾನೆ. ಆ ಇದು ಲೋಕವನ್ನು ಜಯಿಸಿಯೇತೀರುತ್ತದೆ, ಅಲೋಕ್ಯತೆಯ ಆಸೆಯೇ ಇರುವದಿಲ್ಲ. ಯಾವನು ಹೀಗೆ ಈ ಸಾಮವನ್ನು ಅರಿತುಕೊಂಡಿರುವನೋ (ಅವನಿಗೆ ಈ ಫಲವಾಗುವದು).

## ಕಂಡಿಕೆಯ ಸಂಬಂಧ

(ಭಾಷ್ಯ)

೯೨. ಏವಂ ಪ್ರಾಣವಿಜ್ಞಾನವತೋ ಜಪಕರ್ಮ ವಿಧಿತ್ಸ್ಯತೇ। ಯದ್ವಿಜ್ಞಾನವತೋ ಜಪಕರ್ಮಣಿ ಅಧಿಕಾರಃ, ತದ್ವಿಜ್ಞಾನಮುಕ್ತಮ್। ಅಥಾನನ್ತರಂ ಯಸ್ಮಾಚ್ಚೈವಂ ವಿದುಷಾ ಪ್ರಯುಜ್ಯಮಾನಂ ದೇವಭಾವಾಯಾಭ್ಯಾರೋಹಫಲಂ ಜಪಕರ್ಮ, ಅತಸ್ತಸ್ಮಾದ್ ವಿಧೀಯತ ಇಹ। ತಸ್ಯ ಚ ಉದ್ಗೀಥಸಂಬನ್ಧಾತ್ ಸರ್ವತ್ರ ಪ್ರಾಪ್ತೌ 'ಪವಮಾನಾನಾಮ್' ಇತಿ ವಚನಾತ್। ಪವಮಾನೇಷು ತ್ರಿಷ್ವಪಿ ಕರ್ತವ್ಯತಾಯಾಂ ಪ್ರಾಪ್ತಾಯಾಂ ಪುನಃ ಕಾಲಸಂಕೋಚಂ ಕರೋತಿ। ಸ ವೈ ಖಲು ಪ್ರಸ್ತೋತಾ ಸಾಮ ಪ್ರಸ್ತೌತಿ। ಸ ಪ್ರಸ್ತೋತಾ ಯತ್ರ ಯಸ್ಮಿನ್ ಕಾಲೇ ಸಾಮ ಪ್ರಸ್ತುಯಾತ್ ಪ್ರಾರಭೇತ ತಸ್ಮಿನ್ ಕಾಲೇ ಏತಾನಿ ಜಪೇತ್। ಅಸ್ಯ ಚ ಜಪಕರ್ಮಣ ಆಖ್ಯಾ ಅಭ್ಯಾರೋಹ ಇತಿ। ಆಭಿಮುಖ್ಯೇನ ಆರೋಹತಿ ಅನೇನ ಜಪಕರ್ಮಣಾ ಏವಂವಿತ್ ದೇವಭಾವಮಾತ್ಮಾನಮ್ ಇತಿ ಅಭ್ಯಾರೋಹಃ ॥

(ಭಾಷ್ಯಾರ್ಥ)

ಈ ರೀತಿಯಲ್ಲಿ ಪ್ರಾಣನ ವಿಜ್ಞಾನವುಳ್ಳವನಿಗೆ[1] ಜಪಕರ್ಮವನ್ನು (ಈಗ) ವಿಧಿಸಲಾಗುವದು. ಯಾವ ವಿಜ್ಞಾನವುಳ್ಳವನಿಗೆ ಜಪಕರ್ಮದಲ್ಲಿ ಅಧಿಕಾರವೋ

---

1. ಹಿಂದೆ ಹೇಳಿದ ವಿಶುದ್ಧ್ಯಾದಿಗುಣಯುಕ್ತನಾದ ಪ್ರಾಣನನ್ನು ಉಪಾಸನೆಮಾಡುವವನಿಗೆ ಎಂದರ್ಥ; ಆತನೇ ಈ ಜಪಕ್ಕೆ ಅಧಿಕಾರಿ.

ಆ ವಿಜ್ಞಾನವನ್ನು ಹೇಳಿದ್ದಾಯಿತು. ಈಗ, (ಉಪಾಸನೆಯನ್ನು ವಿಧಿಸಿದ) ಬಳಿಕ, ಈರೀತಿಯಲ್ಲಿ ಅರಿತುಕೊಂಡವನು ಮಾಡುವ ಜಪಕರ್ಮವು ದೇವಭಾವಕ್ಕೆ ಏರುವದೆಂಬ ಫಲವುಳ್ಳದ್ದಾಗಿರುವದಷ್ಟೆ, ಆದ್ದರಿಂದ ಆ ಕಾರಣದಿಂದ ಅದನ್ನು ಇಲ್ಲಿ ವಿಧಿಸಲಾಗುತ್ತದೆ. ಆ (ಜಪಕರ್ಮಕ್ಕೆ) ಉದ್ಗೀಥದ ಸಂಬಂಧವಿರುವದರಿಂದ (ಅದನ್ನು) ಎಲ್ಲೆಲ್ಲಿಯೂ (ಮಾಡತಕ್ಕದ್ದು ಎಂದು) ಬಂದೊದಗುವದರಿಂದ[1] ಪವಮಾನಗಳ ಎಂದು (ಹೇಳಿರುತ್ತದೆ). ಪವಮಾನಗಳ ಎಂಬ ಮಾತಿನಿಂದ ಮೂರು ಪವಮಾನಗಳಲ್ಲಿಯೂ (ಈ ಜಪವನ್ನು) ಮಾಡತಕ್ಕದ್ದು ಎಂದು ಬಂದೊದಗುವದರಿಂದ ಮತ್ತೆ (ಕಂಡಿಕೆಯು ಅದಕ್ಕೆ) ಕಾಲವನ್ನು ಸಂಕೋಚಪಡಿಸುತ್ತಿದೆ.[2] ಆ ಪ್ರಸ್ತೋತೃವೇ ಸಾಮವನ್ನು ಪ್ರಸ್ತಾಪಿಸುವನಷ್ಟೆ, ಆ ಪ್ರಸ್ತೋತೃವು ಯಾವಾಗ ಯಾವ ಕಾಲದಲ್ಲಿ ಸಾಮವನ್ನು ಪ್ರಸ್ತಾಪಿಸುವನೋ (ಗಾನಕ್ಕೆ) ಮೊದಲುಮಾಡುವನೋ (ಆಗ) ಆ ಕಾಲದಲ್ಲಿ ಇವುಗಳನ್ನು ಜಪಿಸಬೇಕು. ಈ ಜಪಕರ್ಮಕ್ಕೆ 'ಅಭ್ಯಾರೋಹ' ಎಂದು ಹೆಸರು. ಈ ಜಪಕರ್ಮದಿಂದ ದೇವಭಾವಕ್ಕೆ ತನ್ನನ್ನು ಅಭಿಮುಖವಾಗಿ ಏರಿಸಿಕೊಳ್ಳುತ್ತಾನಾದ್ದರಿಂದ (ಇದು) ಅಭ್ಯಾರೋಹ(ವೆನಿಸಿರುತ್ತದೆ).

## ಅಭ್ಯಾರೋಹದ ಯಜುಸ್ಸುಗಳು
### (ಭಾಷ್ಯ)

೯೩. ಏತಾನಿ ಇತಿ ಬಹುವಚನಾತ್ ತ್ರೀಣಿ ಯಜೂಂಷಿ। ದ್ವಿತೀಯಾನಿರ್ದೇಶಾತ್ ಬ್ರಾಹ್ಮಣೋತ್ಪನ್ನತ್ವಾಚ್ಚ ಯಥಾಪಠಿತ ಏವ ಸ್ವರಃ ಪ್ರಯೋಕ್ತವ್ಯೋ ನ ಮಾನ್ತ್ರಃ। ಯಜಮಾನಂ ಜಪಕರ್ಮ। ಏತಾನಿ ತಾನಿ ಯಜೂಂಷಿ। 'ಅಸತೋ ಮಾ ಸದ್ಗಮಯ', 'ತಮಸೋ ಮಾ ಜ್ಯೋತಿರ್ಗಮಯ', 'ಮೃತ್ಯೋರ್ಮಾಽಮೃತಂ ಗಮಯ' ಇತಿ। ಮನ್ತ್ರಾಣಾಮರ್ಥಸ್ತಿರೋಹಿತೋ ಭವತಿ ಇತಿ ಸ್ವಯಮೇವ ವ್ಯಾಚಷ್ಟೇ ಬ್ರಾಹ್ಮಣಂ ಮನ್ತ್ರಾರ್ಥಮ್। ಸ ಮನ್ತ್ರಯದಾಹ ಯದುಕ್ತವಾನ್ ಕೋಽಸಾವರ್ಥ ಇತಿ? ಉಚ್ಯತೇ। 'ಅಸತೋ ಮಾ ಸದ್ಗಮಯ' ಇತಿ। ಮೃತ್ಯುರ್ವಾ ಅಸತ್ ಸ್ವಾಭಾವಿಕಕರ್ಮವಿಜ್ಞಾನೇ ಮೃತ್ಯುರಿತ್ಯುಚ್ಯೇತೇ। ಅಸತ್ ಅತ್ಯನ್ತಾಧೋಭಾವಹೇತುತ್ವಾತ್। ಸದಮೃತಂ ಸತ್ ಶಾಸ್ತ್ರೀಯಕರ್ಮವಿಜ್ಞಾನೇ ಅಮರಣಹೇತುತ್ವಾತ್ ಅಮೃತಮ್। ತಸ್ಮಾತ್

---

1. ಪ್ರಕರಣಪಲ್ಲಿ ಉದ್ಗಾನದ ಸಂಬಂಧವಿರುವದರಿಂದ ಉದ್ಗಾತೃವು ಸಾಮವನ್ನು ಆಗಾನಮಾಡುವಾಗಲೆಲ್ಲ ಇದನ್ನು ಜಪಿಸಬೇಕೆಂದು ಪ್ರಾಪ್ತವಾಗುವದರಿಂದ.

2. 'ಪವಮಾನಗಳ' ಎಂದಿರುವದರಿಂದ ಮೂರು ಪವಮಾನಗಳ ಒಂದೊಂದನ್ನು ಗಾನಮಾಡುವ ಮೊದಲು ಇದನ್ನು ಜಪಿಸಬೇಕು ಎಂದು ಪ್ರಾಪ್ತವಾಗುವದರಿಂದ; ಆದ್ದರಿಂದ ಪವಮಾನಗಳನ್ನು ಗಾನಮಾಡುವದಕ್ಕೆ ಆರಂಭಿಸುವ ಮೊದಲೇ ಇದನ್ನು ಜಪಿಸಬೇಕು ಎಂದಿದೆ ಎಂದರ್ಥ.

ಅಸತೋ ಅಸತ್ ಕರ್ಮಣೋ ಅಜ್ಞಾನಾಚ್ಚ ಮಾ ಮಾಂ ಸತ್ ಶಾಸ್ತ್ರೀಯಕರ್ಮ ವಿಜ್ಞಾನೇ ಗಮಯ ದೇವಭಾವಸಾಧನಾತ್ಮಭಾವಮ್ ಆಪಾದಯ ಇತ್ಯರ್ಥಃ। ತತ್ರ ವಾಕ್ಯಾರ್ಥಮಾಹ 'ಅಮೃತಂ ಮಾ ಕುರ್ವಿತ್ಯೇವೈತದಾಹ' ಇತಿ। ತಥಾ ತಮಸೋ ಮಾ ಜ್ಯೋತಿರ್ಗಮಯೇತಿ ಮೃತ್ಯುರ್ವೈ ತಮಃ। ಸರ್ವಂ ಹಿ ಅಜ್ಞಾನಮ್ ಆವರಣಾತ್ಮಕತ್ವಾತ್ ತಮಃ। ತದೇವ ಚ ಮರಣಹೇತುತ್ವಾತ್ ಮೃತ್ಯುಃ। ಜ್ಯೋತಿರಮೃತಮ್ ಪೂರ್ವೋಕ್ತವಿಪರೀತಂ ದೈವಂ ಸ್ವರೂಪಮ್। ಪ್ರಕಾಶಾತ್ಮಕತ್ವಾತ್ ಜ್ಞಾನಂ ಜ್ಯೋತಿಃ। ತದೇವ ಅಮೃತಮ್ ಅವಿನಾಶಾತ್ಮಕತ್ವಾತ್। ತಸ್ಮಾತ್ ತಮಸೋ ಮಾ ಜ್ಯೋತಿರ್ಗಮಯೇತಿ ಪೂರ್ವವತ್ ಮೃತ್ಯೋರ್ಮಾಽಮೃತಂ ಗಮಯೇತ್ಯಾದಿ 'ಅಮೃತಂ ಮಾಕುರ್ವಿತ್ಯೇವೈತದಾಹ। ದೈವಂ ಪ್ರಾಜಾಪತ್ಯಂ ಫಲಭಾವಮ್ ಆಪಾದಯ ಇತ್ಯರ್ಥಃ। ಪೂರ್ವೋ ಮನ್ತ್ರಃ ಅಸಾಧನಸ್ವಭಾವಾತ್ ಸಾಧನಭಾವಮ್ ಆಪಾದಯ ಇತಿ। ದ್ವಿತೀಯಸ್ತು ಸಾಧನಭಾವಾದಪಿ ಅಜ್ಞಾನರೂಪಾತ್ ಸಾಧ್ಯಭಾವಮ್ ಆಪಾದಯ ಇತಿ। 'ಮೃತ್ಯೋರ್ಮಾಽಮೃತಂ ಗಮಯ' ಇತಿ ಪೂರ್ವಯೋರೇವ ಮನ್ತ್ರಯೋಃ ಸಮುಚ್ಚಿತೋಽರ್ಥಃ ತೃತೀಯೇನ ಮನ್ತ್ರೇಣ ಉಚ್ಯತೇ ಇತಿ ಪ್ರಸಿದ್ಧಾರ್ಥತೈವ। ನಾತ್ರ ತೃತೀಯೇ ಮನ್ತ್ರೇ ತಿರೋಹಿತಮನ್ತರ್ಹಿತಮಿವಾರ್ಥರೂಪಂ ಪೂರ್ವಯೋರಿವ ಮನ್ತ್ರಯೋರಸ್ತಿ। ಯಥಾಶ್ರುತ ಏವಾರ್ಥಃ ॥

(ಭಾಷ್ಯಾರ್ಥ)

'ಏತಾನಿ' ಎಂದು ಬಹುವಚನವನ್ನು ಹೇಳಿರುವದರಿಂದ ಮೂರು ಯಜುಸ್ಸುಗಳನ್ನೂ (ಜಪಿಸಬೇಕು). ದ್ವಿತೀಯಾವಿಭಕ್ತಿಯಿಂದ ತಿಳಿಸಿರುವದರಿಂದಲೂ[1] ಬ್ರಾಹ್ಮಣೋತ್ಪನ್ನವಾಗಿರುವದರಿಂದಲೂ ಇಲ್ಲಿ ಪಠಿಸಿರುವಂತೆಯೇ ಸ್ವರವನ್ನು ಪ್ರಯೋಗಿಸಬೇಕೇ ಹೊರತು ಮಂತ್ರ(ಸ್ವರವನ್ನು ಪ್ರಯೋಗಿಸ) ಬಾರದು[2]. ಈ ಜಪಕರ್ಮವು ಯಜಮಾನನಿಗೆ (ಸಂಬಂಧಪಟ್ಟದ್ದು).[3]

---

1. ಶುಕ್ಲಯಜುರ್ವೇದದ ಮಂತ್ರಗಳ ಸ್ವರವನ್ನು ಗೊತ್ತುಪಡಿಸುವದಕ್ಕೆ ಒಂದಾನೊಂದು ಲಕ್ಷಣಗ್ರಂಥವಿದೆ; ಆ ಪ್ರಕಾರ ಸ್ವರವನ್ನು ಉಚ್ಚರಿಸಬೇಕೆಂದಿದ್ದರೆ ತೃತೀಯಾ ವಿಭಕ್ತಿಯಿಂದ ಮಂತ್ರನಿರ್ದೇಶವನ್ನು ಮಾಡುತ್ತದೆ. ಇಲ್ಲಿ ಹಾಗಿಲ್ಲ.

2. ಸಂಹಿತೆಯಲ್ಲಿ ಈ ಮಂತ್ರಗಳಿಲ್ಲ; ಈ ಬ್ರಾಹ್ಮಣದಲ್ಲಿಯೇ ಹೊಸದಾಗಿ ಉಪದಿಷ್ಟವಾಗಿವೆ. ಆದ್ದರಿಂದಲೂ ಇವುಗಳಿಗೆ ಬ್ರಾಹ್ಮಣದಲ್ಲಿ ಕೊಟ್ಟಿರುವ ಸ್ವರಗಳನ್ನೇ ಪ್ರಯೋಗಿಸಬೇಕು. ಇವು ಮಂತ್ರಗಳೆಂಬ ಕಾರಣದಿಂದ ಇಲ್ಲಿ ಕೊಟ್ಟಿರುವ ಸ್ವರವನ್ನು ಬಿಟ್ಟು ಲಕ್ಷಣ ಗ್ರಂಥದಲ್ಲಿ ಹೇಳಿದಂತೆ ಮಂತ್ರಸ್ವರವನ್ನು ಕಲ್ಪಿಸಿಕೊಂಡು ಪ್ರಯೋಗಿಸಬಾರದು ಎಂದರ್ಥ. ಈ ಬ್ರಾಹ್ಮಣದ ಸ್ವರದ ವಿಚಾರಕ್ಕೆ ಪೀಠಿಕೆಯನ್ನು ನೋಡಿ.

3. ಯಜಮಾನನಿಗಾಗಿ ಪ್ರಸ್ತೋತೃವು ಉದ್ಗಾನಮಾಡತಕ್ಕದ್ದು; ಇದರ ಫಲವು ಯಜಮಾನನಿಗೇ; ತನಗಲ್ಲ.

ಇವೇ ಆ ಯಜುಸ್ಸುಗಳು: 'ಅಸತೋ ಮಾ ಸದ್ಗಮಯ', 'ತಮಸೋ ಮಾ ಜ್ಯೋತಿರ್ಗಮಯ', 'ಮೃತ್ಯೋರ್ಮಾಽಮೃತಂ ಗಮಯ'–ಮಂತ್ರಗಳ ಅರ್ಥವು (ಸಾಮಾನ್ಯವಾಗಿ) ಮರೆಯಾಗಿರುತ್ತದೆಯಾದ್ದರಿಂದ ಬ್ರಾಹ್ಮಣವು ತಾನೇ (ಈ) ಮಂತ್ರಗಳ ಅರ್ಥವನ್ನು ವ್ಯಾಖ್ಯಾನಮಾಡಿ (ತಿಳಿಸುತ್ತದೆ). ಆ ಮಂತ್ರವು ಹೇಳಿದೆಯಲ್ಲ, ಹೇಳುವದಾಗಿದೆಯಲ್ಲ, ಆ ಅರ್ಥವು ಯಾವದು? ಎಂದರೆ (ಬ್ರಾಹ್ಮಣವು) ಹೇಳುತ್ತಿದೆ. 'ಅಸತೋ ಮಾ ಸದ್ಗಮಯ' ಎಂಬಲ್ಲಿ ಮೃತ್ಯುವೇ ಅಸತ್ತು; ಸ್ವಾಭಾವಿಕವಾದ ಕರ್ಮವಿಜ್ಞಾನಗಳನ್ನು ಮೃತ್ಯು ಎಂದು ಕರೆದಿರುತ್ತದೆ. ಅತ್ಯಂತವಾಗಿ ಅಧೋಗತಿಗೆ ಕಾರಣವಾಗಿರುವದರಿಂದ ಅದು ಅಸತ್ತು.[1] 'ಸತ್ತೆಂಬುದು ಅಮೃತವು'. ಸತ್ತು ಎಂದರೆ ಶಾಸ್ತ್ರೀಯವಾದ ಕರ್ಮವಿಜ್ಞಾನಗಳು; ಅಮರಣಕ್ಕೆ[2] ಕಾರಣವಾಗಿರುವದರಿಂದ ಅಮೃತವು. ಆದ್ದರಿಂದ ಅಸತ್ತಾಗಿರುವ ಕರ್ಮದಿಂದಲೂ ಜ್ಞಾನದಿಂದಲೂ (ಮಾ=ಮಾಮ್) ನನ್ನನ್ನು ಸತ್ತನ್ನು ಶಾಸ್ತ್ರೀಯವಾದ ಕರ್ಮವಿಜ್ಞಾನಗಳನ್ನು ಸೇರಿಸು; ದೇವಭಾವಕ್ಕೆ ಸಾಧನವಾಗುವ ಸ್ವರೂಪವನ್ನು (ಅವಕ್ಕೆ) ಉಂಟುಮಾಡು ಎಂದರ್ಥ. ಇಲ್ಲಿ (ಮಂತ್ರದ) ವಾಕ್ಯಾರ್ಥವೇನೆಂಬುದನ್ನು (ಬ್ರಾಹ್ಮಣವು) ಹೇಳುತ್ತಿದೆ. 'ನನ್ನನ್ನು ಅಮೃತನನ್ನಾಗಿ ಮಾಡು ಎಂದೇ (ಮಂತ್ರ) ಹೇಳುತ್ತದೆ'.[3]

ಹೀಗೆಯೇ 'ತಮಸೋ ಮಾ ಜ್ಯೋತಿರ್ಗಮಯ' ಎಂಬಲ್ಲಿ ಮೃತ್ಯುವೇ ತಮಸ್ಸು. ಅಜ್ಞಾನವೆಲ್ಲವೂ ಆವರಣರೂಪವಾಗಿರುವದರಿಂದ[4] ತಮಸ್ಸು; ಅದೇ ಮರಣಕ್ಕೆ ಹೇತುವಾಗಿರುವದರಿಂದ ಮೃತ್ಯುವೆನಿಸುವದು. 'ಜ್ಯೋತಿಯು ಅಮೃತವು' ಹಿಂದೆ ಹೇಳಿದ (ಅಜ್ಞಾನಕ್ಕೆ) ವಿಪರೀತವಾದ ಸ್ವರೂಪವುಳ್ಳದ್ದಾದ್ದರಿಂದ ದೈವಸ್ವರೂಪವು ಜ್ಞಾನವು ಪ್ರಕಾಶರೂಪವಾಗಿರುವದರಿಂದ ಜ್ಯೋತಿಯು; ಅದೇ ಅಮೃತವು, ಏಕೆಂದರೆ (ಅದು) ಅವಿನಾಶಸ್ವಭಾವದ್ದಾಗಿರುತ್ತದೆ. ಆದ್ದರಿಂದ 'ತಮಸೋ ಮಾ ಜ್ಯೋತಿರ್ಗಮಯ' ಎಂದರೆ ಹಿಂದಿನ(ಮಂತ್ರ)ದಂತೆ ಮೃತ್ಯುವಿನಿಂದ ನನ್ನನ್ನು ಅಮೃತವನ್ನು ಸೇರಿಸು' ಎಂದು ಮುಂತಾಗಿ ಅರ್ಥ. 'ನನ್ನನ್ನು ಅಮೃತನನ್ನಾಗಿ

---

1. ಕೆಟ್ಟದ್ದು; ಇಲ್ಲದ್ದು ಎಂದು ಅರ್ಥವಲ್ಲ. ಗೀ. ಭಾ. ೧೭-೨೮ನ್ನು ನೋಡಿ.

2. ದೇವಾತ್ಮಭಾವಕ್ಕೆ ಎಂದರ್ಥ.

3. ಸ್ವಾಭಾವಿಕಕರ್ಮಜ್ಞಾನಗಳನ್ನು ಮಾಡದಂತೆಯೂ ಶಾಸ್ತ್ರೀಯವಾದ ಕರ್ಮವಿಜ್ಞಾನಗಳನ್ನು ಅನುಷ್ಠಾನಮಾಡಿ ದೇವಾತ್ಮಭಾವವನ್ನು ಪಡೆಯುವಂತೆಯೂ ಮಾಡು ಎಂದರ್ಥ.

4. ಅಜ್ಞಾನವು ಆವರಣರೂಪವಾಗಿರುವದರಿಂದ ಭಾವರೂಪವಾಗಿಯೇ ಇರಬೇಕು ಎಂಬ ವಾದಿಗಳ ಮತವು ಈ ಭಾಷ್ಯಕ್ಕೆ ವಿರುದ್ಧ; ಏಕೆಂದರೆ ಎಲ್ಲಾ ಅಜ್ಞಾನವೂ ಆವರಣಾತ್ಮಕವೇ ಎಂದು ಇಲ್ಲಿ ಹೇಳಿದೆ. ಆವರಣಾತ್ಮಕವೆಂದರೆ ವಸ್ತುವನ್ನು ತಿಳಿಯಗೊಡಿಸದ ಅಪ್ರಕಾಶವು ಎಂದಿಷ್ಟೇ ಇಲ್ಲಿ ಅರ್ಥ.

ಮಾಡು ಎಂದೇ (ಈ ಮಂತ್ರವು) ಹೇಳುತ್ತದೆ,[1]; ದೈವವಾದ ಪ್ರಾಜಾಪತ್ಯವೆಂಬ[2] ಫಲಭಾವವನ್ನು ಹೊಂದಿಸು ಎಂದರ್ಥ. **ಹಿಂದಿನ ಮಂತ್ರವು ಅಸಾಧನ ಸ್ವಭಾವದಿಂದ (ಬಿಡಿಸಿ) ಸಾಧನಭಾವವನ್ನು ಉಂಟುಮಾಡು ಎಂದು (ಹೇಳುತ್ತದೆ); (ಈ) ಎರಡನೆಯದಾದರೋ ಅಜ್ಞಾನರೂಪವಾದ ಸಾಧನರೂಪದಿಂದಲೂ (ಬಿಡಿಸಿ) ಸಾಧ್ಯಭಾವವನ್ನುಂಟುಮಾಡು ಎಂದು (ಹೇಳುತ್ತದೆ).**[3] 'ಮೃತ್ಯೋರ್ಮಾಮೃತಂ ಗಮಯ' ಎಂದು ಹಿಂದಿನ (ಎರಡು) ಮಂತ್ರಗಳ ಅರ್ಥವನ್ನೇ ಒಟ್ಟುಗೂಡಿಸಿ ಹೇಳಿರುತ್ತದೆ. ಈ ಮೂರನೆಯ ಮಂತ್ರದಲ್ಲಿ ಹಿಂದಿನ ಮಂತ್ರಗಳಲ್ಲಿರುವಂತೆ ಮರೆಯಾಗಿರುವ ಅರ್ಥವು, ಗೂಢವಾಗಿರುವ ಅರ್ಥವು, ಅರ್ಥರೂಪವು ಇರುವದಿಲ್ಲ. ಶ್ರುತಿಯಲ್ಲಿರುವಂತೆಯೇ ಅರ್ಥ(ವನ್ನು ತಿಳಿಯಬೇಕು).

(ಭಾಷ್ಯ)

೯೪. ಯಾಜಮಾನಮ್ ಉದ್ಗಾನಂ ಕೃತ್ವಾ ಪವಮಾನೇಷು ತ್ರಿಷು ಅಥ ಅನನ್ತರಂ ಯಾನಿ ಇತರಾಣಿ ಶಿಷ್ಟಾನಿ ಸ್ತೋತ್ರಾಣಿ ತೇಷು ಆತ್ಮನೇ ಅನ್ನಾದ್ಯಮ್ ಆಗಾಯೇತ್ ಪ್ರಾಣವಿದುದ್ಗಾತಾ ಪ್ರಾಣಭೂತಃ ಪ್ರಾಣವದೇವ। ಯಸ್ಮಾತ್ ಸ ಏಷ ಉದ್ಗಾತಾ ಏವಂ ಪ್ರಾಣಂ ಯಥೋಕ್ತಂ ವೇತ್ತಿ ಅತಃ ಪ್ರಾಣವದೇವ ತಂ ಕಾಮಂ ಸಾಧಯಿತುಂ ಸಮರ್ಥಃ। ತಸ್ಮಾತ್ ಯಜಮಾನಃ ತೇಷು ಸ್ತೋತ್ರೇಷು ಪ್ರಯುಜ್ಯಮಾನೇಷು ವರಂ ವೃಣೀತ ಯಂ ಕಾಮಂ ಕಾಮಯೇತ ತಂ ಕಾಮಂ ವರಂ ವೃಣೀತ ಪ್ರಾರ್ಥಯೇತ। ಯಸ್ಮಾತ್ ಸ ಏಷ ಏವಂವಿದ್ ಉದ್ಗಾತಾ ಇತಿ ತಸ್ಮಾಚ್ಛಬ್ದಾತ್ ಪ್ರಾಗೇವ ಸಂಬಧ್ಯತೇ। ಆತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ಇಚ್ಛತಿ ಉದ್ಗಾತಾ ತಮ್ ಆಗಾಯತಿ ಆಗಾನೇನ ಸಾಧಯತಿ ||

---

1. ಅಜ್ಞಾನರೂಪವಾದ ಮೃತ್ಯುವನ್ನು ದಾಟಿಸಿ ಜ್ಞಾನರೂಪವಾದ ಅಮೃತವನ್ನು ಹೊಂದಿಸು ಎಂದು ಅರ್ಥವನ್ನು ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

2. ಹಿರಣ್ಯಗರ್ಭಸಾಯುಜ್ಯವೆಂಬ.

3. ಮೊದಲನೆಯ ಮಂತ್ರದಲ್ಲಿ ಮೃತ್ಯುವಿನಿಂದ ಎಂದರೆ ಸ್ವಾಭಾವಿಕವಾದ ಆಸುರ ಪಾಪ್ಮಾಸಂಗವೆಂಬ ಅಸಾಧನಸ್ವಭಾವದಿಂದ ಅಮೃತವನ್ನು ಎಂದರೆ ಶಾಸ್ತ್ರೀಯಜ್ಞಾನಕರ್ಮಸಮುಚ್ಚಯವೆಂಬ ಸಾಧನಸ್ವಭಾವವನ್ನು ಸೇರಿಸು ಎಂದು ಪ್ರಾರ್ಥಿಸಿದೆ. ಎರಡನೆಯ ಮಂತ್ರದಲ್ಲಿ ಮೃತ್ಯುವಿನಿಂದ ಎಂದರೆ ಸಾಧನರೂಪದಿಂದ ಬಿಡುಗಡೆಮಾಡಿ ಅಮೃತವನ್ನು ಎಂದರೆ ಸಾಧ್ಯರೂಪವಾದ ಹಿರಣ್ಯಗರ್ಭಪದವಿಯನ್ನು ಮುಟ್ಟಿಸು ಎಂದು ಬೇಡಿಕೊಂಡಿದೆ. ಹೀಗೆ ಮೃತ್ಯುವಿನಿಂದ ಅಮೃತತ್ವಕ್ಕೆ ಏರಿಸುವದರಿಂದ ಇದಕ್ಕೆ '**ಅಭ್ಯಾರೋಹ**' ಎಂದು ಹೆಸರು.

(ಭಾಷ್ಯಾರ್ಥ)

ಯಜಮಾನನಿಗಾಗಿ (ಮಾಡುವ) ಉದ್ಗಾನವನ್ನು ಮೂರು ಪವಮಾನಗಳಲ್ಲಿ ಮಾಡಿ ಇನ್ನು ಆ ಬಳಿಕ ಇನ್ನು ಬೇರೆಯಾದ ಉಳಿದ ಸ್ತೋತ್ರಗಳಲ್ಲಿರುವವಲ್ಲ, ಅವುಗಳಲ್ಲಿ ಪ್ರಾಣವಿದನಾದ ಉದ್ಗಾತೃವು ಪ್ರಾಣನೇ ಆಗಿ[1] ಪ್ರಾಣನಂತೆಯೇ[2] ತನಗೆ ಅನ್ನಾದ್ಯವನ್ನು ಆಗಾನಮಾಡಿಕೊಳ್ಳಬೇಕು.

ಆ ಈ ಉದ್ಗಾತೃವು ಹೀಗೆ ಹಿಂದೆ ಹೇಳಿರುವಂಥ ಪ್ರಾಣನನ್ನು ಅರಿತುಕೊಂಡಿರುವನಷ್ಟೆ, ಆದ್ದರಿಂದ ಪ್ರಾಣನಂತೆ ಆ ಕಾಮವನ್ನು ಸಾಧಿಸಿಕೊಡುವದಕ್ಕೆ ಸಮರ್ಥ(ನಾಗಿರುತ್ತಾನೆ). ಆದ್ದರಿಂದ ಯಜಮಾನನು ಆ ಸ್ತೋತ್ರಗಳನ್ನು (ಉದ್ಗಾತೃವು) ಪ್ರಯೋಗಿಸುತ್ತಿರುವಾಗ ವರವನ್ನು ಕೇಳಿಕೊಳ್ಳಬೇಕು; ಯಾವ ಕಾಮವನ್ನು ಬಯಸುತ್ತಾನೋ ಆ ಕಾಮವನ್ನು ವರವನ್ನು ಕೇಳಿಕೊಳ್ಳಬೇಕು, ಬೇಡಿಕೊಳ್ಳಬೇಕು.[3] 'ಯಸ್ಮಾತ್ ಸ ಏಷ ಏವಂವಿದುದ್ಗಾತಾ' (ಹೀಗೆ ಬಲ್ಲ ಆ ಈ ಉದ್ಗಾತೃವು . . . ಸಾಧಿಸಬಲ್ಲನಷ್ಟೆ) ಎಂಬುದನ್ನು 'ತಸ್ಮಾತ್' (ಆದ್ದರಿಂದ ಬೇಡಿಕೊಳ್ಳಬೇಕು) ಎಂಬ ಶಬ್ದದ ಹಿಂದೆಯೇ ಅನ್ವಯಿಸಿಕೊಳ್ಳಬೇಕು. (ಆ ಈ ಉದ್ಗಾತೃವು) ತನಗಾಗಿ ಅಥವಾ ಯಜಮಾನನಿಗಾಗಿ ಯಾವ ಕಾಮವನ್ನು ಕಾಮಿಸುತ್ತಾನೋ ಬಯಸುತ್ತಾನೋ ಅದನ್ನು ಆಗಾನಮಾಡುತ್ತಾನೆ, ಆಗಾನದಿಂದ ಸಾಧಿಸಿಕೊಳ್ಳುತ್ತಾನೆ.[4]

## ಕರ್ಮರಹಿತೋಪಾಸನೆಗೂ ಫಲವುಂಟು

(ಭಾಷ್ಯ)

೯೫. ಏವಂ ತಾವತ್ ಜ್ಞಾನಕರ್ಮಭ್ಯಾಂ ಪ್ರಾಣಾತ್ಮಾಪತ್ತಿಃ ಇತ್ಯುಕ್ತಮ್। ತತ್ರ ನಾಸ್ತಿ ಆಶಙ್ಕಾಸಂಭವಃ। ಅತಃ ಕರ್ಮಾಪಾಯೇ ಪ್ರಾಣಾಪತ್ತಿರ್ಭವತಿ ವಾ ನ ವಾ ಇತ್ಯಾಶಙ್ಕ್ಯತೇ। ತದಾಶಙ್ಕಾನಿವೃತ್ತ್ಯರ್ಥಮಾಹ 'ತದ್ಧೈತಲ್ಲೋಕ

---

1. ಪ್ರಾಣಭಾವನೆಯಿಂದ ಪ್ರಾಣಸಾಕ್ಷಾತ್ಕಾರವನ್ನು ಹೊಂದಿ ಎಂದರ್ಥ.

2. ಪ್ರಾಣನು ಎಲ್ಲರಿಗೂ ಸಾಧಾರಣವಾದ ಫಲವನ್ನು ಪವಮಾನಗಳಿಂದ ಆಗಾನಮಾಡಿಕೊಟ್ಟು ತನಗಾಗಿ ಅನ್ನಾದ್ಯವನ್ನು ಆಗಾನಮಾಡಿಕೊಂಡನು ಎಂದು ೧೭ನೆಯ ಮಂತ್ರದಲ್ಲಿ ಹೇಳಿರುವ ಹಾಗೆಯೇ.

3. ಉದ್ಗಾತೃವು ತನಗೇ ಆಗಾನಮಾಡಿಕೊಳ್ಳಬೇಕೆಂಬ ನಿರ್ಬಂಧವಿಲ್ಲ; ಯಜಮಾನನು ಇಚ್ಛಿಸಿದರೆ ಅವನಿಗೆ ಬೇಕಾದದ್ದನ್ನು ಆಗಾನಮಾಡಿಕೊಡಬಹುದು. ಇದಕ್ಕೆ ಕಾರಣವನ್ನು ಮುಂದಿನ ವಾಕ್ಯದಲ್ಲಿ ಸ್ಪಷ್ಟಪಡಿಸಿದೆ.

4. ಆದ್ದರಿಂದ ಯಜಮಾನನು ಆ ಸ್ತೋತ್ರಗಳನ್ನು ಆಗಾನಮಾಡುವಾಗ ತನ್ನ ಕಾಮವು ಪೂರ್ತಿಯಾಗಲೆಂದು ವರವನ್ನು ಕೇಳಿಕೊಳ್ಳಬೇಕು.

ಜಿವೇವ್ ಇತಿ। ತದ್ ಹ ತದೇತತ್ ಪ್ರಾಣದರ್ಶನಂ ಕರ್ಮವಿಯುಕ್ತಂ ಕೇವಲಮಪಿ ಲೋಕಜಿದೇವ ಇತಿ ಲೋಕಸಾಧನಮೇವ। ನ ಹ ಏವ ಅಲೋಕ್ಯತಾಯೈ ಅಲೋಕಾರ್ಹತ್ವಾಯ ಆಶಾ ಆಶಂಸನಂ ಪ್ರಾರ್ಥನಂ ನೈವಾಸ್ತಿ ಹ। ನ ಹಿ ಪ್ರಾಣಾತ್ಮನಿ ಉತ್ಪನ್ನಾತ್ಮಾಭಿಮಾನಸ್ಯ ತತ್ಪ್ರಾಪ್ತ್ಯಾಶಂಸನಂ ಸಂಭವತಿ। ನ ಹಿ ಗ್ರಾಮಸ್ಥಃ ಕದಾ ಗ್ರಾಮಂ ಪ್ರಾಪ್ನುಯಾಮ್ ಇತಿ ಅರಣ್ಯಸ್ಥ ಇವ ಆಶಾಸ್ತೇ। ಅಸಂನಿಕೃಷ್ಟವಿಷಯೇ ಹಿ ಅನಾತ್ಮನಿ ಆಶಂಸನಂ ನ ತತ್ ಸ್ವಾತ್ಮನಿ ಸಂಭವತಿ। ತಸ್ಮಾತ್ ನ ಆಶಾ ಅಸ್ತಿ ಕದಾಚಿತ್ ಪ್ರಾಣಾತ್ಮಭಾವಂ ನ ಪ್ರಪದ್ಯೇಯಮ್ ಇತಿ ॥

(ಭಾಷ್ಯಾರ್ಥ)

ಹೀಗೆ ಮೊದಲನೆಯದಾಗಿ ಜ್ಞಾನಕರ್ಮಗಳಿಂದ[1] ಪ್ರಾಣಾತ್ಮನಾಗುವನೆಂದು[2] ಹೇಳಿದ್ದಾಯಿತು. ಆ ವಿಷಯದಲ್ಲಿ ಆಶಂಕೆಯುಂಟಾಗುವಂತೆಯೇ ಇಲ್ಲ.[3] ಆದ್ದರಿಂದ ಕರ್ಮವು ಇಲ್ಲದಿರುವಾಗ ಪ್ರಾಣಭಾವವುಂಟಾಗುವದೊ, ಇಲ್ಲವೊ ಎಂದು ಶಂಕೆಯನ್ನು ಮಾಡಬಹುದು; ಆ ಶಂಕೆಯನ್ನು ತೊಲಗಿಸುವದಕ್ಕಾಗಿ (ಶ್ರುತಿಯು) 'ಆ ಇದು ಲೋಕವನ್ನು ಜಯಿಸಿಯೇತೀರುತ್ತದೆ' ಎಂದು ಹೇಳಿರುತ್ತದೆ. ಆ ಈ ಪ್ರಾಣದರ್ಶನವು ಕರ್ಮವಿಲ್ಲದೆ ಬರಿಯದೇ ಆದರೂ ಲೋಕವನ್ನು ಜಯಿಸಿಯೇತೀರುತ್ತದೆ, ಲೋಕವನ್ನು ಸಾಧಿಸಿಯೇಕೊಡುತ್ತದೆ. ಅಲೋಕ್ಯತೆಯು, ಲೋಕಕ್ಕೆ ತಕ್ಕವನಲ್ಲದೆ ಹೋಗುವೆನಲ್ಲ ಎಂದು ಆಶೆಯು, ಆಶಂಕಿಸಬೇಕಾದದ್ದು ಬಯಸಬೇಕಾದದ್ದು ಇರುವದೇ ಇಲ್ಲ.[4] ಪ್ರಾಣಾತ್ಮನಲ್ಲಿ ತಾನೇ (ಅವನೆಂಬ) ಅಭಿಮಾನವುಂಟಾದವನಿಗೆ ಅವನನ್ನು ಪಡೆಯಬೇಕೆಂಬ ಆಶೆಯುಂಟಾಗುವದೆಂಬುದಿಲ್ಲವಷ್ಟೆ. ಊರಿನಲ್ಲಿಯೇ ಇರುವವನು ಯಾವಾಗ ಊರನ್ನು ಸೇರಿಯೇನು–ಎಂದು ಕಾಡಿನಲ್ಲಿರುವವನು (ಆಶಿಸುವಂತೆ) ಆಶಿಸುವದಿಲ್ಲವಲ್ಲವೆ? ಹತ್ತಿರ

---

1. ಪ್ರಾಣೋಪಾಸನೆ, ಅಭ್ಯಾರೋಹಜಪ– ಇವುಗಳ ಸಮುಚ್ಚಯದಿಂದ.

2. ಹಿರಣ್ಯಗರ್ಭಪ್ರಾಪ್ತಿಯಾಗುವನೆಂದು.

3. ಏಕೆಂದರೆ ಜ್ಯೋತಿಷ್ಟೋಮಕರ್ಮಸಂಬಂಧದಿಂದ ಈ ಸಮುಚ್ಚಯವನ್ನು ವಿಧಿಸಿರುವದೇ ಫಲವಿಷಯದ ಶಂಕೆಯನ್ನು ತೊಲಗಿಸುತ್ತದೆ.

4. ಫಲವಿಲ್ಲದೆಹೋದೀತೆಂದು ಅಂಜಬೇಕಾದದ್ದೇ ಇಲ್ಲ. "ಸಮುಚ್ಚಯದಿಂದಾಗುವ ಫಲವು ಯಜಮಾನನಿಗೂ ಆಗಬಹುದು, ಉದ್ಗಾತೃವಿಗೂ ಆಗಬಹುದು; ಇದರಲ್ಲಿ ಸಂಶಯವೇ ಇಲ್ಲ. ಆದ್ದರಿಂದ ಕರ್ಮಸಂಬಂಧವಿಲ್ಲದ ಆಶ್ರಮದವರಿಗೂ ಬರಿಯ ಉಪಾಸನೆಯಿಂದ ಈ ಫಲವು ಆಗುವದು ಎಂದು ತಿಳಿಸುವದಕ್ಕೇ ಈ ಶ್ರುತಿಯು ಬಂದಿದೆ. ಸ್ವಂತಕರ್ಮವಿಲ್ಲದೆ ಉದ್ಗಾತೃವಿನಲ್ಲಿರುವ ಜ್ಞಾನವು ಯಜಮಾನನಿಗಾಗಿ ಉದ್ಗಾನಕ್ಕೆ ಸಂಬದ್ಧವಾಗಿದ್ದರೂ ದೇವತ್ವವನ್ನು ಕೊಡುತ್ತಿರುವದರಿಂದ ಕೇವಲೋಪಾಸನೆಯು ಕರ್ಮದ ಹಂಗಿಲ್ಲದೆ ಫಲವನ್ನು ಕೊಡುವದು ಯುಕ್ತವಾಗಿದೆ" ಎಂದು ವಾರ್ತಿಕದಲ್ಲಿದೆ.

ವಿಲ್ಲದ ಅನಾತ್ಮದಲ್ಲಲ್ಲವೆ, ಆಶೆಯು? ಅದು ತನ್ನ ಸ್ವರೂಪದಲ್ಲಿಯೇ ಆಗುವ ಹಾಗಿರುವದಿಲ್ಲ.[1] ಆದ್ದರಿಂದ ಒಂದು ವೇಳೆ (ನಾನು) ಪ್ರಾಣಾತ್ಮಭಾವವನ್ನು ಪಡೆಯದೆ ಇರಬಹುದು ಎಂಬ ಕಳವಳವಿರುವದಿಲ್ಲ.

## ಪ್ರಾಣೋಪಾಸನೆಯ ಸ್ವರೂಪವರ್ಣನೆ

(ಭಾಷ್ಯ)

೯೬. ಕಸ್ಯೈತತ್? ಯ ಏವಮ್ ಏತತ್ ಸಾಮ ಪ್ರಾಣಂ ಯಥೋಕ್ತಂ ನಿರ್ಧಾರಿತಮಹಿಮಾನಂ ವೇದ "ಅಹಮಸ್ಮಿ ಪ್ರಾಣಃ, ಇನ್ದ್ರಿಯವಿಷಯಾಸಙ್ಗರಾಸುರೈಃ ಪಾಪ್ಮಭಿರಧರ್ಷಣೀಯಃ, ವಿಶುದ್ಧಃ। ವಾಗಾದಿಪಞ್ಚಕಂ ಚ ಮದಾಶ್ರಯತ್ವಾತ್ ಅಗ್ನ್ಯಾದ್ಯಾತ್ಮರೂಪಂ ಸ್ವಾಭಾವಿಕವಿಜ್ಞಾನೋತ್ಥೇನ್ದ್ರಿಯವಿಷಯಾಸಙ್ಗಜನಿತಾಸುರಪಾಪ್ಮದೋಷವಿಯುಕ್ತಮ್। ಸರ್ವಭೂತೇಷು ಚ ಮದಾಶ್ರಯಾನ್ನಾದ್ಯೋಪಯೋಗಬನ್ಧನಮ್। ಆತ್ಮಾ ಚಾಹಂ ಸರ್ವಭೂತಾನಾಮ್। ಆಙ್ಗಿರಸತ್ವಾತ್। ಋಗ್ಯಜುಃಸಾಮೋದ್ಗೀಥಭೂತಾಯಾಶ್ಚ ವಾಚ ಆತ್ಮಾ। ತದ್ವ್ಯಾಪ್ತೇಸ್ತನ್ನಿರ್ವರ್ತಕತ್ವಾಚ್ಚ। ಮಮ ಸಾಮ್ನೋ ಗೀತಿಭಾವಮ್ ಆಪದ್ಯಮಾನಸ್ಯ ಬಾಹ್ಯಂ ಧನಂ ಭೂಷಣಂ ಸೌಸ್ವರ್ಯಮ್। ತತೋಽಪ್ಯಾನ್ತರಂ ಸೌವರ್ಣ್ಯಂ ಲಾಕ್ಷಣಿಕಂ ಸೌಸ್ವರ್ಯಮ್ ಗೀತಿಭಾವಮ್ ಆಪದ್ಯಮಾನಸ್ಯ ಮಮ ಕಣ್ಠಾದಿಸ್ಥಾನಾನಿ ಪ್ರತಿಷ್ಠಾ। ಏವಂಗುಣೋಽಹಂ ಪುತ್ತಿಕಾದಿಶರೀರೇಷು ಕಾರ್ತ್ಸ್ನ್ಯೇನ ಪರಿಸಮಾಪ್ತಃ। ಅಮೂರ್ತತ್ವಾತ್, ಸರ್ವಗತತ್ವಾಚ್ಚ"। ಇತಿ ಆ ಏವಮಭಿಮಾನಾಭಿವ್ಯಕ್ತೇಃ ವೇದ ಉಪಾಸ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಈ (ಫಲವು) ಯಾರಿಗೆ? ಯಾವನು ಈ ಸಾಮವನ್ನು, ಹಿಂದೆ ಹೇಳಿದಂಥ ಪ್ರಾಣನನ್ನು, (ಇಂಥ) ಮಹಿಮೆಯುಳ್ಳವನೆಂದು ನಿಶ್ಚಯಿಸಿದೆಯಷ್ಟೆ, (ಅವನನ್ನು) ಅರಿತುಕೊಂಡಿರುವನೋ, "ನಾನು ಇಂದ್ರಿಯವಿಷಯಾಸಂಗಗಳೆಂಬ ಪಾಪಗಳಿಂದ ಎದುರಿಸುವದಕ್ಕಾಗದ, ವಿಶುದ್ಧನಾದ, ಪ್ರಾಣನಾಗಿರುವೆನು. ಮತ್ತು ವಾಗಾದಿಪಂಚಕವು ನನ್ನ ಆಶ್ರಯದಿಂದ ಅಗ್ನ್ಯಾದಿಸ್ವರೂಪವುಳ್ಳದ್ದಾಗಿರುವದು, ಸ್ವಾಭಾವಿಕವಾದ ವಿಜ್ಞಾನದಿಂದಾದ ಇಂದ್ರಿಯವಿಷಯಾಸಂಗದಿಂದುಂಟಾಗುವ ಆಸುರಪಾಪವೆಂಬ ದೋಷದಿಂದ ಬಿಡುಗಡೆಯಾಗಿರುವದು, ಮತ್ತು ಸರ್ವಭೂತಗಳಲ್ಲಿಯೂ ನನ್ನನ್ನು ಆಶ್ರಯಿಸಿಕೊಂಡೇ ಅನ್ನಾದ್ಯದ ಉಪಯೋಗಸಂಬಂಧವುಳ್ಳದ್ದಾಗಿದೆ. ನಾನು ಆಂಗಿರಸನಾಗಿರುವದರಿಂದ ಸರ್ವಭೂತಗಳಿಗೂ ಆತ್ಮನು

1. ಪ್ರಾಣಾತ್ಮಸಾಕ್ಷಾತ್ಕಾರವಾದ ಕೂಡಲೆ ತಾನೇ ಪ್ರಾಣನಾಗಿರುವದರಿಂದ ಆಗ ಪ್ರಾಣನನ್ನು ಪಡೆಯುವನೋ ಇಲ್ಲವೋ ಎಂಬ ಶಂಕೆಯುಂಟಾಗಲಾರದು.

ಋಗ್ಯಜುಸಾವೋದ್ಗೀಥಗಳಾಗಿರುವ ವಾಕ್ಕಿಗೂ ನಾನು ಆತ್ಮನು ; ಏಕೆಂದರೆ ಅದನ್ನು ವ್ಯಾಪಿಸಿಕೊಂಡಿರುವೆನು, ಮತ್ತು ಅದನ್ನುಂಟುಮಾಡುವವನಾಗಿರುವೆನು. ಗೀತಿಭಾವವನ್ನು ಪಡೆದು ಸಾಮನಾಗಿರುವ ನನಗೆ ಹೊರಗಿನ ಧನವು ಸೌಸ್ವರ್ಯವು ಅದಕ್ಕಿಂತಲೂ ಒಳಗಿನದಾದ ಲಾಕ್ಷಣಿಕ ಸೌಸ್ವರ್ಯವು ಸೌವರ್ಣ್ಯ. ಗೀತಿಭಾವವನ್ನು ಹೊಂದಿರುವ ನನಗೆ ಕಂಠಾದಿಸ್ಥಾನಗಳು ಪ್ರತಿಷ್ಠೆ. ಈ ಗುಣಗಳಿಂದೊಡಗೂಡಿದ ನಾನು ಅಮೂರ್ತನೂ ಸರ್ವಗತನೂ ಆಗಿರುವದರಿಂದ ಗೆದ್ದಲೇ ಮುಂತಾದ ಪ್ರಾಣಿಗಳ ಶರೀರಗಳಲ್ಲಿ ಪೂರ್ಣವಾಗಿ ತುಂಬಿಕೊಂಡಿರುತ್ತೇನೆ" ಎಂದು ಈ ಅಭಿಮಾನವುಂಟಾಗುವವರೆಗೂ (ಯಾವನು) ಅರಿತುಕೊಂಡಿರುವನೋ, ಉಪಾಸನೆ ಮಾಡಿಕೊಂಡಿರುವನೋ (ಅವನಿಗೆ) ಎಂದರ್ಥ.



# ಮೂರನೆಯ ಬ್ರಾಹ್ಮಣದ ಸಾರ

೧. ವರ್ತಮಾನಕಲ್ಪದ ಪ್ರಜಾಪತಿಯ ಪೂರ್ವಜನ್ಮದಲ್ಲಿ ಅವನ ವಾಗಾದಿಪ್ರಾಣಗಳು ದೇವ, ಅಸುರ– ಎಂದು ಎರಡು ಬಗೆಯಾಗಿದ್ದವು. ಶಾಸ್ತ್ರೀಯಜ್ಞಾನಕರ್ಮಗಳಿಂದ ಭಾವಿತರಾದವರು ದೇವತೆಗಳು, ಸ್ವಾಭಾವಿಕಜ್ಞಾನದಿಂದ ದೃಷ್ಟಪ್ರಯೋಜನವುಳ್ಳ ಜ್ಞಾನಕರ್ಮಭಾವಿತರಾದವರು ಅಸುರರು. ಅವರಲ್ಲಿ ದೇವತೆಗಳು ಅಲ್ಪಸಂಖ್ಯೆಯವರು, ಅಸುರರು ಹೆಚ್ಚಿನ ಸಂಖ್ಯೆಯವರು. ಅವರಿಬ್ಬರಿಗೂ ಸ್ಪರ್ಧೆಯಾಯಿತು. ದೇವತೆಗಳು ಅಗ್ನಿಷ್ಟೋಮದಲ್ಲಿ ಮಾಡುವ ಉದ್ಗಾನಕರ್ಮದಿಂದ ಅಸುರರನ್ನು ಮೀರೋಣವೆಂದು ಆಲೋಚಿಸಿಕೊಂಡರು.

೨–೬. ಅವರು ವಾಕ್ಕನ್ನು 'ನೀನು ಉದ್ಗಾನಮಾಡು' ಎಂದರು. ವಾಕ್ಕು ಹಾಗೇ ಆಗಲೆಂದು ಉದ್ಗಾನಕ್ಕೆ ಆರಂಭಿಸಿ ವಾಙ್ನಿಮಿತ್ತವಾದ ಸಾಧಾರಣಭೋಗವನ್ನು ಒಟ್ಟು ಸಂಘಕ್ಕೂ ಕಲ್ಯಾಣವಾಗಿ ನುಡಿಯುವದರ ಫಲವನ್ನು ತನಗೂ ಗಾನಮಾಡಿಕೊಂಡಿತು. ಅಸುರರು ಈ ಸಂಧಿಯನ್ನು ಕಂಡುಕೊಂಡು ನಮ್ಮನ್ನು ದೇವತೆಗಳು ಮೀರುವರು ಎಂಬ ಅಂಜಿಕೆಯಿಂದ ಬೇಗನೆ ವಾಕ್ಕಿನ ಬಳಿಗೆ ಬಂದು ಅದಕ್ಕೆ ಆಡಬಾರದ ಮಾತನ್ನು ಆಡುವದೆಂಬ ಪಾಪದ ಸಂಗವನ್ನು ತಗಲಿಸಿದರು. ಇದರಂತೆ ಮೂಗಿಗೆ ಮೂಸಬಾರದ್ದನ್ನು ಮೂಸುವ ಪಾಪದ ಸಂಗವನ್ನು, ಕಣ್ಣಿಗೆ ನೋಡಬಾರದ್ದನ್ನು ನೋಡುವವೆಂಬ ಪಾಪದ ಸಂಗವನ್ನು, ಕಿವಿಗೆ ಕೇಳಬಾರದ್ದನ್ನು ಕೇಳುವ ಪಾಪದ ಸಂಗವನ್ನು, ಮನಸ್ಸಿಗೆ ಸಂಕಲ್ಪಿಸಬಾರದ್ದನ್ನು ಸಂಕಲ್ಪಿಸುವ ಪಾಪದ ಸಂಗವನ್ನು– ಹೀಗೆಯೇ ಮಿಕ್ಕ ದೇವತೆಗಳಿಗೂ ಆಯಾ ಪಾಪಗಳ ಸಂಗವನ್ನು ತಗಲಿಸಿದರು. ಆದ್ದರಿಂದಲೇ ಪ್ರಜಾಪತಿಯ ವಂಶದವರಲ್ಲಿ ಈಗಲೂ ಈ ಪಾಪವಿದೆ. ಈ ರೀತಿಯಲ್ಲಿ ವಾಗಾದಿಗಳು ಉದ್ಗಾನಮಾಡಿದಾಗ ಕಲ್ಯಾಣವಿಷಯವಿಶೇಷವನ್ನು ತಮತಮಗೆ ಸಂಬಂಧಿಸಿ ಗಾನಮಾಡಿಕೊಂಡದ್ದರಿಂದ ಅಸುರಪಾಪಸಂಬಂಧದಿಂದ ಅವರ ಉಪಾಸನೆಯನ್ನು ಮಾಡುವವರಿಗೆ ಪಾಪಸಂಗರೂಪವಾದ ಮೃತ್ಯುವನ್ನು ದಾಟುವದು ಆಗಲಾರದು.

೭. ಆಗ ದೇವತೆಗಳು ಮುಖ್ಯಪ್ರಾಣನನ್ನು 'ನೀನು ಉದ್ಗಾನಮಾಡು' ಎಂದರು. ಅವನು ಉದ್ಗಾನಮಾಡಲಾರಂಭಿಸಲು ಮೊದಲಿನಂತೆ ಅಸುರರು ಅವನಿಗೆ ಪಾಪಸಂಸರ್ಗವನ್ನುಂಟು ಮಾಡುವದಕ್ಕೆಳಸಿದರು. ಆದರೆ ಕಲ್ಲುಬಂಡೆಯ ಮೇಲೆ ಬಿದ್ದ ಮಣ್ಣುಹೆಂಟೆಯಂತೆ ಅವರೇ ಹುಡಿಹುಡಿಯಾಗಿ ದಿಕ್ಕಾಪಾಲಾಗಿ ಓಡಿಹೋಗಿ ನಾಶವಾದರು. ವಾಗಾದಿಗಳು ತಮ್ಮತಮ್ಮ ಅಗ್ನ್ಯಾದಿಸ್ವರೂಪವನ್ನು ಮುಖ್ಯಪ್ರಾಣನ ಆಶ್ರಯದಿಂದ ಪಡೆದುಕೊಂಡರು. ಯಾವನು ಈ ಮುಖ್ಯಪ್ರಾಣನೇ ಆತ್ಮನೆಂದು ಉಪಾಸನೆಮಾಡುವನೋ ಅವನು ತನ್ನ ಪ್ರಜಾಪತಿಸ್ವರೂಪವನ್ನು ಪಡೆದುಕೊಳ್ಳುವನು; ಅವನನ್ನು ದ್ವೇಷಿಸುವ ದಾಯಾದಿಗಳೂ ನಾಶವಾಗುವವು.

೮. ಆ ದೇವತೆಗಳು ತಮಗೆ ದೇವತ್ವವನ್ನು ತಂದುಕೊಟ್ಟ ಪ್ರಾಣನನ್ನು ಕುರಿತು "ಇವನು ಎಲ್ಲಿದ್ದನು ?" ಎಂದು ಆಲೋಚನೆಮಾಡಿ "ಇವನು ಆಸ್ಯದ (ಮುಖದ) ಒಳಗಡೆ

ಇರುತ್ತಾನೆ, ಅಂಗಗಳಿಗೆಲ್ಲ ರಸವಾಗಿರುತ್ತಾನೆ; ಅದ್ದರಿಂದ ಇವನು 'ಅಯಾಸ್ಯಆಂಗಿರಸ'ನು ಎಂದು ನಿಶ್ಚಯಿಸಿಕೊಂಡರು. ಆದ್ದರಿಂದ ಪ್ರಾಣನೇ ಕಾರ್ಯಕರಣಗಳಿಗೆ ಆತ್ಮನೆಂದು ತಿಳಿಯ ಬೇಕು.

೯-೧೬. ಈ ಪ್ರಾಣದೇವತೆಯು ದೂರ್ ಎಂಬ ನಾಮವುಳ್ಳದ್ದು; ಏಕೆಂದರೆ ಮೃತ್ಯುವು ಅದಕ್ಕೆ ದೂರವಾಗಿರುತ್ತದೆ. ಹಾಗೆಂದು ಉಪಾಸನೆಮಾಡುವವರಿಗೂ ಮೃತ್ಯುವು ದೂರ ವಾಗುತ್ತದೆ. ಇದು ಪಾಪದೂರವಾಗಿರುವದೆಂಬುದು ಹೇಗೆಂದರೆ, ಇದೇ ಈ ದೇವತೆಗಳ ಪಾಪ ವೆಂಬ ಮೃತ್ಯುವನ್ನು ಬಿಡಿಸಿ ದೂರಕ್ಕೆ, ಅಂತ್ಯಜರ ಪ್ರದೇಶಕ್ಕೆ, ಕಳುಹಿಸಿಬಿಟ್ಟಿರುತ್ತದೆ. ಇದರಿಂದಲೇ ವಾಕ್ಕಿಗೆ ಅಗ್ನಿಭಾವವೂ ಘ್ರಾಣಕ್ಕೆ ವಾಯುಭಾವವೂ ಚಕ್ಷುಸ್ಸಿಗೆ ಆದಿತ್ಯಭಾವವೂ ಶ್ರೋತ್ರಕ್ಕೆ ದಿಗ್ಭಾವವೂ ಮನಸ್ಸಿಗೆ ಚಂದ್ರಭಾವವೂ ಬಂದಿರುತ್ತದೆ.

೧೭-೧೯. ಮುಖ್ಯಪ್ರಾಣನು ಎಲ್ಲರಿಗೋಸ್ಕರವಾಗಿ ಪ್ರಾಜಾಪತ್ಯಫಲವನ್ನು ಕೊಡುವ ಗಾನವನ್ನು ಮಾಡಿದ ಬಳಿಕ ತನಗಾಗಿ ಅನ್ನವನ್ನು ಗಾನಮಾಡಿಕೊಂಡನು. ಅದರಿಂದಲೇ ಪ್ರಾಣವು ಶರೀರದಲ್ಲಿದ್ದುಕೊಂಡಿರುವದು. ಈ ಗಾನವು ಕೇವಲ ಇರವಿಗಾಗಿ ಮಾಡಿಕೊಂಡದ್ದಾದ್ದರಿಂದ ಪ್ರಾಣನಿಗೆ ಪಾಪದ ಆಸಂಗವಿಲ್ಲ. ಬಳಿಕ ದೇವತೆಗಳು 'ನಿನ್ನ ಅನ್ನದಲ್ಲಿ ನಮಗೂ ಭಾಗವನ್ನು ಕೊಡು' ಎಂದರು. ಹಾಗೇ ಆಗಲೆಂದು ಪ್ರಾಣನು ಅವರನ್ನು ಸುತ್ತಲೂ ಕುಳ್ಳಿರಿಸಿ ಅನ್ನವನ್ನು ಕೊಟ್ಟನು; ಆದ್ದರಿಂದಲೇ ಈ ಪ್ರಾಣವು ತಿಂದ ಅನ್ನದಿಂದ ವಾಗಾದಿಗಳಿಗೂ ತೃಪ್ತಿಯಾಗುತ್ತದೆ. ಆದ್ದರಿಂದ ಹೀಗೆಂದು ಪ್ರಾಣನನ್ನು ಉಪಾಸನೆಮಾಡಿದವನು ಪ್ರಾಣನಂತೆಯೇ ತನ್ನವರಿಗೆ ಆಶ್ರಯವಾಗಿದ್ದುಕೊಂಡು ಅವರನ್ನು ಪೋಷಿಸುವವನಾಗುವನು. ಪ್ರಾಣನು ಎಲ್ಲಾ ಅಂಗಗಳಿಗೂ ರಸವಾಗಿರುವದರಿಂದ ಆಂಗಿರಸನು; ಅದ್ದರಿಂದಲೇ ಯಾವ ಯಾವ ಅಂಗದಿಂದ ಪ್ರಾಣೋತ್ಕ್ರಮಣವಾಗುವದೋ ಅಯಾ ಅಂಗವು ಒಣಗಿಕೊಳ್ಳುತ್ತದೆ.

೨೦-೨೪. ಈ ಪ್ರಾಣನೇ ಬೃಹಸ್ಪತಿಯು. ಹೇಗೆಂದರೆ ವಾಕ್ಕೇ ಬೃಹತೀ ಛಂದಸ್ಸು, ಏಕೆಂದರೆ ವಾಕ್ಕೆಂಬ ಅನುಷ್ಟುಪ್ಪು ಬೃಹತಿಯಲ್ಲಿ ಅಡಗಿದೆ. ಆ ಬೃಹತಿಗೆ ಋಕ್ಕಿಗೆ ಪ್ರಾಣನು ಪತಿಯು; ಆದ್ದರಿಂದ ಬೃಹಸ್ಪತಿಯು, ಎಂದರೆ ಋಕ್ಕುಗಳಿಗೆ ಆತ್ಮನು. ಇವನೇ ಬ್ರಹ್ಮಣಸ್ಪತಿಯು. ಹೇಗೆಂದರೆ ವಾಕ್ಕೇ ಬ್ರಹ್ಮವು, ಯಜುಸ್ಸು; ಅದಕ್ಕೆ ಇವನು ಪತಿಯು. ಆದ್ದರಿಂದ ಇವನು ಬ್ರಹ್ಮಣಸ್ಪತಿಯು. ಈತನೇ ಸಾಮವು, ಹೇಗೆಂದರೆ ವಾಕ್ಕೇ ಸಾ (ಸರ್ವಸ್ತ್ರೀವಾಚಕವು), ಪ್ರಾಣ ಎಂಬುದು ಅಮ (ಸರ್ವಪುಂವಾಚಕವು). ಹೀಗೆ ಸಾಮ ಎಂಬ ಶಬ್ದವು ವಾಕ್ಕನ್ನೂ ಪ್ರಾಣವನ್ನೂ ತಿಳಿಸುತ್ತದೆ. ಆದ್ದರಿಂದ ಪ್ರಾಣನೇ ಸಾಮವು, ಪ್ರಾಣನಿಗೆ ವ್ಯತಿರಿಕ್ತವಾಗಿ ಯಾವ ಸಾಮವೂ ಇಲ್ಲ. ಅಥವಾ ಪ್ರತಿಯೊಂದು ಶರೀರಕ್ಕೂ ಸಮವಾಗಿ ಅದರಲ್ಲೆಲ್ಲ ತುಂಬಿರುವದರಿಂದ ಪ್ರಾಣನು ಸಾಮವು. ಹೀಗೆ ಪ್ರಾಣನು ಸಾಮವಾಗಿರುವನೆಂದು ಅರಿತುಕೊಂಡ ಉಪಾಸಕನು ಸಾಮಸಾಯುಜ್ಯವನ್ನೋ ಸಾಲೋಕ್ಯವನ್ನೋ, ಉಪಾಸನೆಯ ಔತ್ಕಟ್ಯಕ್ಕೆ ಅನುಗುಣವಾಗಿ ಪಡೆದು ಕೊಳ್ಳುತ್ತಾನೆ. ಈ ಪ್ರಾಣನೇ ಉದ್ಗೀಥವು. ಹೇಗೆಂದರೆ ಪ್ರಾಣನೇ ಉತ್; ವಾಕ್ಕೇ ಗೀಥಾ (ಶಬ್ದವು); ಆದ್ದರಿಂದ ಪ್ರಾಣನು ಉದ್ಗೀಥವು. ಆದ್ದರಿಂದಲೇ ಪೂರ್ವದಲ್ಲಿ ವಿಶ್ವಸೃಜರೆಂಬ

ಋಷಿಗಳ ಸತ್ರದಲ್ಲಿ ಆಯಾಸ್ಯಆಂಗಿರಸನೆಂಬ ಉದ್ಗಾತೃವು ವಾಕ್ಸಂಯುಕ್ತಪ್ರಾಣದೇವತೆಯೇ ಉದ್ಗಾನದೇವತೆಯೆಂದೆಣಿಸಿ ಉದ್ಗಾನಮಾಡಿದನು ಎಂದು ಬ್ರಹ್ಮದತ್ತಚೈಕಿತಾನನು ಸೋಮದ ಮೇಲೆ ಆಣೆಯಿಟ್ಟು ಹೇಳಿರುತ್ತಾನೆ.

೨೫-೨೭. ಸಾಮವೆಂಬ ಈ ಪ್ರಾಣನ ಸ್ವವು (ಸ್ವತ್ತು) ಸ್ವರವೇ ಎಂದು ಅರಿತುಕೊಂಡ ಉಪಾಸಕನಿಗೆ ಸ್ವವು (ಧನವು) ಲಭಿಸುವದು. ಈ ಸಾಮವೆಂಬ ಪ್ರಾಣನಿಗೆ ಸ್ವರವೇ ಸುವರ್ಣ (ಉತ್ತಮವಾದ ವರ್ಣವು) ಎಂದು ಅರಿತುಕೊಂಡ ಉಪಾಸಕನಿಗೆ ಸುವರ್ಣವು (ಚಿನ್ನವು) ದೊರೆಯುವದು. ಈ ಸಾಮವೆಂಬ ಪ್ರಾಣನಿಗೆ ವಾಕ್ಕೇ ಪ್ರತಿಷ್ಠೆಯು, ನಿಲ್ಲುವ ಆಧಾರವು; ಅಥವಾ ಅನ್ನವೇ ಪ್ರತಿಷ್ಠೆಯು ಎಂದು ಅರಿತುಕೊಂಡ ಉಪಾಸಕನಿಗೆ ಪ್ರತಿಷ್ಠೆಯು ದೊರಕುವದು.

೨೮. ಈ ರೀತಿಯಲ್ಲಿ ಪ್ರಾಣನನ್ನು ಉಪಾಸನೆಮಾಡುವವನಿಗೇ ಪವಮಾನಸ್ತೋತ್ರಗಳ ಆದಿಯಲ್ಲಿ ಜಪಿಸಬೇಕಾದ ದೇವತ್ವಕ್ಕೇರಿಸುವ ಅಭ್ಯಾರೋಹವೆಂಬ ಜಪವನ್ನು ವಿಧಿಸಿದೆ. ಪ್ರಸ್ತೋತೃವಾದ ಉಪಾಸಕನು ಯಾವಾಗ ಪವಮಾನದ ಮೊದಲನೆಯ ಸ್ತೋತ್ರರೂಪವಾದ ಸಾಮವನ್ನು ಪ್ರಾರಂಭಿಸುವನೋ ಆಗ 'ಅಸತೋ ಮಾ ಸದ್ಗಮಯ', 'ತಮಸೋ ಮಾ ಜ್ಯೋತಿರ್ಗಮಯ', 'ಮೃತ್ಯೋರ್ಮಾಮೃತಂ ಗಮಯ' ಎಂಬೀ ಮಂತ್ರಗಳನ್ನು ಜಪಿಸಬೇಕು. ಮೂರು ಪವಮಾನಗಳನ್ನು ಗಾನಮಾಡಿದ ಬಳಿಕ ಉಳಿದ ಸ್ತೋತ್ರಗಳನ್ನು ಗಾನಮಾಡುವಾಗ ತನಗಾಗಿ ಅನ್ನವನ್ನು ಗಾನಮಾಡಿಕೊಳ್ಳಬೇಕು. ಈ ಪ್ರಾಣೋಪಾಸಕನಾದ ಉದ್ಗಾತೃವು ಯಾವ ಕಾಮವನ್ನು ಬಯಸಿದರೂ ಅದನ್ನು ತನಗಾಗಿ ಅಥವಾ ಯಜಮಾನನಿಗಾಗಿ ಆಗಾನಮಾಡ ಬಲ್ಲವನಾಗಿರುತ್ತಾನೆ.

ಈ ಜಪಕರ್ಮಗಳಿಂದ ಪ್ರಾಣಸಾಯುಜ್ಯವು ದೊರಕುವದು. ಬರಿಯ ಪ್ರಾಣೋಪಾಸನೆಯಿಂದಲೂ ಪ್ರಾಣಸಾಯುಜ್ಯವು ತಪ್ಪದೆ ದೊರಕುವದು.



# ಒಂದನೆಯ ಅಧ್ಯಾಯ—ನಾಲ್ಕನೆಯ ಬ್ರಾಹ್ಮಣ

## (ಅವಿದ್ಯಾವರ್ಣನೆ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೯೭. ಆತ್ಮೈವೇದಮಗ್ರ ಆಸೀತ್। ಜ್ಞಾನಕರ್ಮಭ್ಯಾಂ ಸಮುಚ್ಚಿತಾಭ್ಯಾಂ ಪ್ರಜಾಪತಿತ್ವಪ್ರಾಪ್ತಿರ್ವ್ಯಾಖ್ಯಾತಾ। ಕೇವಲಪ್ರಾಣದರ್ಶನೇನ ಚ 'ತದ್ಧೈತಲ್ಲೋಕಜಿದೇವ' ಇತ್ಯಾದಿನಾ। ಪ್ರಜಾಪತೇಃ ಫಲಭೂತಸ್ಯ ಸೃಷ್ಟಿಸ್ಥಿತಿಸಂಹಾರೇಷು ಜಗತಃ ಸ್ವಾತನ್ತ್ರ್ಯಾದಿವಿಭೂತ್ಯುಪವರ್ಣನೇನ ಜ್ಞಾನಕರ್ಮಣೋರ್ವೈದಿಕಯೋಃ ಫಲೋತ್ಕರ್ಷೋ ವರ್ಣಯಿತವ್ಯಃ ಇತ್ಯೇವಮರ್ಥಮ್ ಆರಭ್ಯತೇ। ತೇನ ಚ ಕರ್ಮಕಾಣ್ಡವಿಹಿತಜ್ಞಾನಕರ್ಮಸ್ತುತಿಃ ಕೃತಾ ಭವೇತ್ ಸಾಮರ್ಥ್ಯಾತ್। ವಿವಕ್ಷಿತಂ ತ್ವೇತತ್। ಸರ್ವಮಪಿ ಏತತ್ ಜ್ಞಾನಕರ್ಮಫಲಂ ಸಂಸಾರ ಏವ। ಭಯಾರತ್ಯಾದಿಯುಕ್ತತ್ವಶ್ರವಣಾತ್। ಕಾರ್ಯಕರಣಲಕ್ಷಣತ್ವಾಚ್ಚ ಸ್ಥೂಲವ್ಯಕ್ತಾನಿತ್ಯವಿಷಯತ್ವಾಚ್ಚ ಇತಿ ಬ್ರಹ್ಮವಿದ್ಯಾಯಾಃ ಕೇವಲಾಯಾ ವಕ್ಷ್ಯಮಾಣಾಯಾಃ ಮೋಕ್ಷಹೇತುತ್ವಮ್ ಇತ್ಯುತ್ತರಾರ್ಥಂ ಚ ಇತಿ। ನ ಹಿ ಸಂಸಾರವಿಷಯಾತ್ ಸಾಧ್ಯಸಾಧನಾದಿಭೇದಲಕ್ಷಣಾತ್ ಅವಿರಕ್ತಸ್ಯ ಆತ್ಮೈಕತ್ವಜ್ಞಾನವಿಷಯೇ ಅಧಿಕಾರಃ, ಅತೃಷಿತಸ್ಯೇವ ಪಾನೇ। ತಸ್ಮಾತ್ ಜ್ಞಾನಕರ್ಮಫಲೋತ್ಕರ್ಷೋಪವರ್ಣನಮ್ ಉತ್ತರಾರ್ಥಮ್। ತಥಾ ಚ ವಕ್ಷ್ಯತಿ "ತದೇತತ್ ಪದನೀಯಮಸ್ಯ" (೧-'-೭), "ತದೇತತ್ಪ್ರೇಯಃ ಪುತ್ರಾತ್" (೧-೪-೮) ಇತ್ಯಾದಿ ॥

(ಭಾಷ್ಯಾರ್ಥ)

"ಆತ್ಮೈವೇದಮಗ್ರ ಆಸೀತ್" (ಎಂಬ ಬ್ರಾಹ್ಮಣದ ಸಂಬಂಧವೇನೆಂದರೆ) ಜ್ಞಾನಕರ್ಮಗಳ ಸಮುಚ್ಚಯದಿಂದ ಪ್ರಜಾಪತಿತ್ವವು[1] ಪ್ರಾಪ್ತವಾಗುವದೆಂದು ತಿಳಿಸಿಕೊಟ್ಟದ್ದಾಯಿತು. ಬರಿಯ ಪ್ರಾಣದರ್ಶನದಿಂದಲೂ (ಪ್ರಜಾಪತಿತ್ವವು ಪ್ರಾಪ್ತವಾಗುವದೆಂದು) "ಆ ಇದು ಲೋಕವನ್ನು ಜಯಿಸಿಯೇ ತೀರುವದು" (೧-೩-೨೮) ಮುಂತಾದ (ವಾಕ್ಯದಿಂದ ತಿಳಿಸಿದ್ದಾಯಿತು). ಫಲವಾಗಿರುವ ಪ್ರಜಾಪತಿಯು ಸೃಷ್ಟಿಸ್ಥಿತಿಸಂಹಾರಗಳಲ್ಲಿ ಸ್ವತಂತ್ರನಾಗಿರುವನೆಂದು ಮುಂತಾಗಿ

---

1. ಹಿರಣ್ಯಗರ್ಭತ್ವವು.

(ಅವನ) ವಿಭೂತಿಯನ್ನು ಉಪವರ್ಣನೆಮಾಡಿ ವೇದೋಕ್ತವಾದ ಜ್ಞಾನ ಕರ್ಮಗಳಿಗೆ ಆಗುವ ಹೆಚ್ಚಿನ ಫಲವನ್ನು ವರ್ಣಿಸಬೇಕು ಎಂಬೀ ಪ್ರಯೋಜನಕ್ಕಾಗಿ (ಮುಂದಿನ ಬ್ರಾಹ್ಮಣವನ್ನು) ಆರಂಭಿಸಿರುತ್ತದೆ. ಅರ್ಥವಶದಿಂದ ಆ (ವರ್ಣನೆ)ಯಿಂದ ಕರ್ಮಕಾಂಡದಲ್ಲಿ ವಿಹಿತವಾಗಿರುವ ಜ್ಞಾನಕರ್ಮಗಳನ್ನು ಸ್ತುತಿಸಿದಂತೆಯೂ ಆಗುವದು. ಆದರೆ (ಇಲ್ಲಿ ಮುಖ್ಯವಾಗಿ) ಹೇಳಬೇಕೆಂದಿರುವದು ಇದು : ಈ ಜ್ಞಾನಕರ್ಮಗಳ ಫಲವೆಂಬಿದೆಲ್ಲ ಸಂಸಾರವೇ, ಏಕೆಂದರೆ (ಇಲ್ಲಿ ಪ್ರಜಾಪತಿಯು) ಭಯ, ಅರತಿ– ಮುಂತಾದವುಗಳಿಂದ ಕೂಡಿರುವನೆಂದು ಶ್ರುತಿ (ಹೇಳುತ್ತಿದೆ), (ಅವನು) ಕಾರ್ಯಕರಣರೂಪನಾಗಿರುತ್ತಾನೆಂದೂ ಹೇಳುತ್ತಿದೆ) ; ಸ್ಥೂಲವೂ ವ್ಯಕ್ತವೂ ಅನಿತ್ಯವೂ ಆದ ವಿಷಯವಾಗಿರುವದರಿಂದಲೂ (ಇದು ಸಂಸಾರವೇ ಎಂಬುದು ವಿವಕ್ಷಿತವು). ಮುಂದೆ ಹೇಳುವ ಬರಿಯ[1] ಬ್ರಹ್ಮವಿದ್ಯೆಯು ಮೋಕ್ಷಕ್ಕೆ ಕಾರಣವಾಗಿದೆ ಎಂದು ಮುಂದೆ (ತಿಳಿಸುವದಕ್ಕೆ ಅವತರಣಿಕೆಯಾಗಿಯೂ ಇದನ್ನು ಆರಂಭಿಸಿರುತ್ತದೆ). ಏಕೆಂದರೆ ನೀರಡಿಕೆಯಿಲ್ಲದವನಿಗೆ ನೀರುಕುಡಿಯುವದರಲ್ಲಿ (ಹೇಗೆ ಅಧಿಕಾರವಿರುವದಿಲ್ಲವೋ) ಹಾಗೆ ಸಾಧ್ಯ, ಸಾಧನ– ಮುಂತಾದ ಭೇದರೂಪವಾಗಿರುವ ಸಂಸಾರವಿಷಯದಿಂದ ವಿರಕ್ತನಾಗದೆ ಇರುವವನಿಗೆ ಆತ್ಮೈಕತ್ವಜ್ಞಾನವಿಷಯದಲ್ಲಿ ಅಧಿಕಾರವಿರುವದಿಲ್ಲವಷ್ಟೆ. ಆದ್ದರಿಂದ ಜ್ಞಾನಕರ್ಮಗಳ ಹೆಚ್ಚಿನ ಫಲವನ್ನು ವರ್ಣಿಸಿರುವದು ಮುಂದಿನ (ಗ್ರಂಥಕ್ಕೆ ಅವತರಣಿಕೆಯನ್ನು ಮಾಡುವ) ಉದ್ದೇಶದಿಂದ. ಆದ್ದರಿಂದಲೇ "ಇದರೊಳಗೆಲ್ಲ ಆ ಈ (ಆತ್ಮನೆಂಬುದೇ) ಪದನೀಯವು" (೧-೪-೭), "ಆ ಈ (ಆತ್ಮತತ್ತ್ವವು) ಪುತ್ರನಿಗಿಂತಲೂ ಪ್ರಿಯತರವಾದದ್ದು"[2] (೧-೪ ೮) ಎಂದು ಮುಂತಾಗಿ (ಶ್ರುತಿ) ಮುಂದೆ ಹೇಳುವದು.

## ಪ್ರಜಾಪತಿಯು ಅಹಂನಾಮನಾದದ್ದು, ಪುರುಷನಾದದ್ದು

(ಉಪನಿಷತ್ತು)

**ಆತ್ಮೈವೇದಮಗ್ರ ಆಸೀತ್ ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ ಸೋಽಹಮಸ್ಮೀತ್ಯಗ್ರೇ ವ್ಯಾಹರತ್ ತತೋಽಹಂ**

---

1. ಕರ್ಮಸಂಬಂಧವಿಲ್ಲದ. 2. ವೈದಿಕಕರ್ಮಜ್ಞಾನಗಳನ್ನು ಹೊಗಳುವದರಲ್ಲಿಯೇ ಪರ್ಯವಸಾನವಾಗಿದ್ದರೆ ಈ ವಾಕ್ಯವು ಕರ್ಮಕಾಂಡಕ್ಕೆ ಸೇರಬೇಕಾಗಿತ್ತು. ಆದರೆ ಅತ್ಯುತ್ಕೃಷ್ಟ ಕರ್ಮೋಪಾಸನೆಗಳ ಫಲವು ಸಂಸಾರಗೋಚರವೇ ಎಂದು ಅವರಲ್ಲಿ ವಿರಕ್ತಿಯನ್ನು ಹುಟ್ಟಿಸಿ ಆತ್ಮಜ್ಞಾನಕ್ಕೆ ಅವತರಣಿಕೆಯಾಗಿರಲೆಂದೇ ಇದನ್ನು ಹೇಳಿದೆ ಎಂದು ಭಾವ. ಕ.ಭಾ. ೧-೧-೨೦ (ಭಾ.ಭಾ ೬೨), ತೈ.ಭಾ. ೨-೧ (ಭಾ.ಭಾ. ೪೦) ಇವನ್ನು ನೋಡಿ.

**ನಾಮಾಭವತ್ ತಸ್ಮಾದಪ್ಯೇತರ್ಹ್ಯಾಮನ್ತ್ರಿತೋಽಹಮಯಮಿತ್ಯೇವಾಗ್ರ ಉಕ್ತ್ವಾಽಥಾನ್ಯನ್ನಾಮ ಪ್ರಬ್ರೂತೇ ಯದಸ್ಯ ಭವತಿ ಸ ಯತ್ಪೂರ್ವೋಽಸ್ಮಾತ್ ಸರ್ವಸ್ಮಾತ್ ಸರ್ವಾನ್ ಪಾಪ್ಮನ ಔಷತ್ ತಸ್ಮಾತ್ ಪುರುಷ ಓಷತಿ ಹ ವೈ ಸ ತಂ ಯೋಽಸ್ಮಾತ್ ಪೂರ್ವೋ ಬುಭೂಷತಿ ಯ ಏವಂ ವೇದ ॥ ೧ ॥**

೧. ಇದು ಮೊದಲು ಪುರುಷವಿಧನಾದ ಆತ್ಮನೇ ಆಗಿತ್ತು. ಅವನು ಅನುಸರಿಸಿ ನೋಡಿ ತನಗಿಂತ ಬೇರೊಂದನ್ನು ಕಾಣದೆ ಇದ್ದನು. ನಾನು ಅವನಾಗಿರುವೆನು ಎಂದು ಮೊದಲು ಹೇಳಿದನು; ಆದ್ದರಿಂದ ಅಹಂನಾಮನಾದನು. ಆದ್ದರಿಂದ ಈಗಲೂ ಕೂಡ ಕರೆದರೆ 'ನಾನು' ಎಂದೇ ಮೊದಲು ಹೇಳಿ ಆಮೇಲೆ ಅವನ (ನಾನು)ವಿರುವದಲ್ಲ, ಆ ಇನ್ನೊಂದು ನಾಮವನ್ನು ಹೇಳಿಕೊಳ್ಳುತ್ತಾನೆ. ಅವನು ಈ ಎಲ್ಲಕ್ಕಿಂತಲೂ ಮೊದಲು ಸರ್ವಪಾಪಗಳನ್ನೂ ಸುಟ್ಟನಲ್ಲ, ಆದ್ದರಿಂದ ಪುರುಷ(ನೆನಿಸುವನು). ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ತನಗಿಂತ ಮೊದಲು ಆಗಲಿಚ್ಛಿಸುವನಲ್ಲ, ಅವನನ್ನು ಸುಟ್ಟುಹಾಕುವನು.

## ಪ್ರಜಾಪತಿಗೆ ನಾನು ಎಂಬ ಹೆಸರು

(ಭಾಷ್ಯ)

೯೮. ಆತ್ಮೈವ। ಆತ್ಮಾ ಇತಿ ಪ್ರಜಾಪತಿಃ। ಪ್ರಥಮೋಽಣ್ಡಜಃ ಶರೀರ್ಯಭಿಧೀಯತೇ। ವೈದಿಕಜ್ಞಾನಕರ್ಮಫಲಭೂತಃ ಸ ಏವ। ಕಿಮ್? ಇದಂ ಶರೀರಭೇದಜಾತಂ ತೇನ ಪ್ರಜಾಪತಿಶರೀರೇಣ ಅವಿಭಕ್ತಮ್ ಆತ್ಮೈವ ಆಸೀತ್ ಅಗ್ರೇ ಪ್ರಾಕ್ ಶರೀರಾನ್ತರೋತ್ಪತ್ತೇಃ। ಸ ಚ ಪುರುಷವಿಧಃ ಪುರುಷಪ್ರಕಾರಃ ಶಿರಃಪಾಣ್ಯಾದಿಲಕ್ಷಣೋ ವಿರಾಟ್। ಸ ಏವ ಪ್ರಥಮಃ ಸಂಭೂತಃ ಅನುವೀಕ್ಷ್ಯ ಅನ್ವಾಲೋಚನಂ ಕೃತ್ವಾ ಕೋಽಹಂ ಕಿಂಲಕ್ಷಣೋ ವಾ ಅಸ್ಮಿ ಇತಿ ನಾನ್ಯದ್ ವಸ್ತ್ವನ್ತರಮ್ ಆತ್ಮನಃ ಪ್ರಾಣಪಿಣ್ಡಾತ್ಮಕಾತ್ ಕಾರ್ಯಕರಣರೂಪಾತ್ ನಾಪಶ್ಯತ್ ನ ದದರ್ಶ। ಕೇವಲಂ ತು ಆತ್ಮಾನಮೇವ ಸರ್ವಾತ್ಮಾನಮ್ ಅಪಶ್ಯತ್ ತಥಾ ಪೂರ್ವಜನ್ಮಶ್ರೌತವಿಜ್ಞಾನಸಂಸ್ಕೃತಃ ಸೋಽಹಂ ಪ್ರಜಾಪತಿಃ ಸರ್ವಾತ್ಮಾ ಅಹಮಸ್ಮಿ ಇತಿ ಅಗ್ರೇ ವ್ಯಾಹರತ್ ವ್ಯಾಹೃತವಾನ್। ತತಃ ತಸ್ಮಾತ್ ಯತಃ ಪೂರ್ವಜ್ಞಾನಸಂಸ್ಕಾರಾತ್ ಆತ್ಮಾನಮೇವ ಅಹಮ್ ಇತಿ ಅಭ್ಯಧಾತ್ ಅಗ್ರೇ, ತಸ್ಮಾತ್, ಅಹಂನಾಮಾ ಅಭವತ್ "ತಸ್ಯೋಪನಿಷದಹಮಿತಿ" (೫-೫-೪) ಇತಿ[1]

1. ಇಲ್ಲೊಂದು 'ಇತಿ'ಯು ಬೇಕೆಂದು ತೋರುತ್ತದೆ.

ಶ್ರುತಿಪ್ರದರ್ಶಿತಮೇವ ನಾಮ ವಕ್ಷ್ಯತಿ। ತಸ್ಮಾತ್ ಯಸ್ಮಾತ್ ಕಾರಣೇ ಪ್ರಜಾಪತೌ ಏವಂ ವೃತ್ತಮ್, ತಸ್ಮಾತ್ ತತ್ಕಾರ್ಯಭೂತೇಷು ಪ್ರಾಣಿಷು ಏತರ್ಹಿ ಏತಸ್ಮಿನ್ನಪಿ ಕಾಲೇ ಆಮನ್ತ್ರಿತಃ ಕಸ್ತ್ವಮ್ ? ಇತ್ಯುಕ್ತಃ ಸನ್ ಅಹಮಯಮ್ ಇತ್ಯೇವ ಅಗ್ರೇ ಉಕ್ತ್ವಾ ಕಾರಣಾತ್ಮಾಭಿಧಾನೇನ ಆತ್ಮಾನಮ್ ಅಭಿಧಾಯ ಅಗ್ರೇ ಪುನರ್ವಿಶೇಷನಾಮಜಿಜ್ಞಾಸವೇ ಅಥ ಅನನ್ತರಂ ವಿಶೇಷಪಿಣ್ಡಾಭಿಧಾನಂ ದೇವದತ್ತೋ ಯಜ್ಞದತ್ತೋ ವಾ ಪ್ರಬ್ರೂತೇ ಕಥಯತಿ ಯನ್ನಾಮ ಅಸ್ಯ ವಿಶೇಷಪಿಣ್ಡಸ್ಯ ಮಾತಾಪಿತೃಕೃತಂ ಭವತಿ ತತ್ ಕಥಯತಿ ॥

(ಭಾಷ್ಯಾರ್ಥ)

'ಆತ್ಮನೇ', ಎಂದು ಮೊದಲು ಅಂಡದಿಂದ ಹುಟ್ಟಿದ ಶರೀರಿಯಾದ ವೈದಿಕ ಜ್ಞಾನ ಕರ್ಮಗಳಿಗೆ ಫಲವಾಗಿರುವ ಪ್ರಜಾಪತಿಯನ್ನು[1] (ಇಲ್ಲಿ) ಹೇಳಿರುತ್ತದೆ. ಅವನೇ-ಏನು ? ಎಂದರೆ–ಇದು ಎಂದರೆ ಶರೀರಭೇದಸಮೂಹವು ಆ ಪ್ರಜಾಪತಿಯ ಶರೀರದೊಡನೆ ಅವಿಭಕ್ತವಾಗಿ ಆತ್ಮನೇ ಆಗಿತ್ತು, ಮೊದಲು ಬೇರೆಯ ಶರೀರಗಳು ಹುಟ್ಟುವ ಮುಂಚೆ (ಪ್ರಜಾಪತಿಯೇ ಆಗಿತ್ತು). ಮತ್ತು ಅವನು ಪುರುಷವಿಧನಾಗಿ, ಪುರುಷಪ್ರಕಾರನಾಗಿ, ಎಂದರೆ ತಲೆಕೈಗಳು ಮುಂತಾದ ರೂಪದವನಾಗಿದ್ದ ವಿರಾಟ್ಪುರುಷನೇ.[2] ಮೊದಲು ಹುಟ್ಟಿದ ಅವನೇ[3] ಅನುಸರಿಸಿ ನೋಡಿ ಅನ್ವಾಲೋಚನೆಯನ್ನು ಮಾಡಿ, 'ನಾನು ಯಾರು ? ಮತ್ತು ಯಾವ ಸ್ವರೂಪದವನಾಗಿರುವೆನು ?' ಎಂದು (ಆಲೋಚನೆಯನ್ನು ಮಾಡಿ) ಪ್ರಾಣಶರೀರಾತ್ಮಕನಾದ, ಕಾರ್ಯಕರಣರೂಪನಾದ[4] ತನಗಿಂತ ಬೇರೊಂದು ವಸ್ತುವನ್ನು ಕಾಣದೆ ಇದ್ದನು, ಕಾಣಲಿಲ್ಲ; ಬರಿಯ ತಾನೊಬ್ಬನೇ ಎಲ್ಲದರ ರೂಪದಲ್ಲಿರುವೆನೆಂದು ಕಂಡುಕೊಂಡನು. ಅದೇ ಬಗೆಯ ಹಿಂದಿನ ಜನ್ಮದ ಶ್ರೌತ

---

1. ವಿರಾಟ್‌ಪುರುಷನನ್ನು ಎಂದರ್ಥ. ಪ್ರಜಾಪತಿ ಎಂಬ ಮಾತಿಗೆ ಹಿರಣ್ಯಗರ್ಭನು, ವಿರಾಟ್ಪುರುಷನು– ಎಂಬ ಎರಡರ್ಥವಲ್ಲಿಯೂ ಭಾಷ್ಯದಲ್ಲಿ ಪ್ರಯೋಗವಿದೆ. ಒಬ್ಬನಿಗೆ ಉಪಾಧಿಭೇದದಿಂದ ನಾಮಭೇದವುಂಟಾಗಿರುವದೆಂಬುದನ್ನು ಇದು ಸೂಚಿಸುತ್ತದೆ. ಐ.ಭಾ. ೩–೩ (ಭಾ.ಭಾ. ೮೭)ನ್ನು ನೋಡಿ.

2. 'ಪುರುಷವಿಧಃ' ಎಂಬ ವಿಶೇಷಣದಿಂದ ಇಲ್ಲಿ ಆತ್ಮನೆಂದರೆ ವಿರಾಟ್ಪುರುಷನೆಂದು ಗೊತ್ತಾಗುತ್ತದೆ ಎಂದು ಭಾವ.

3. ಇದು ಟೀಕೆಯ ಪಾಠಕ್ಕೆ ಅನುಗುಣವಾಗಿ ಕನ್ನಡಿಸಿದ್ದು. 'ಸ ಏವ' ಎಂಬುದನ್ನು ಹಿಂದಿನ ವಾಕ್ಯಕ್ಕೇ ಸೇರಿಸಿಕೊಂಡರೆ 'ಆ (ಪ್ರಜಾಪತಿಯೇ) ಆಗಿತ್ತು' ಎಂದು ಕನ್ನಡಿಸಬೇಕಾಗುವದು.

4. ಪ್ರಾಣಶರೀರಾತ್ಮನಾದ ಎಂಬಿದರ ವ್ಯಾಖ್ಯಾನವಿದು.

ವಿಜ್ಞಾನದಿಂದ ಸಂಸ್ಕೃತನಾಗಿ 'ಅವನೇ ನಾನು, ಸರ್ವಾತ್ಮನಾದ ಪ್ರಜಾಪತಿಯೇ ನಾನು'[1] ಎಂದು ಮೊದಲು ಹೇಳಿದನು, ಹೇಳಿಕೊಂಡನು.

ಅದರಿಂದ ಆದ್ದರಿಂದ ಪೂರ್ವಜ್ಞಾನಸಂಸ್ಕಾರದಿಂದ ತನ್ನನ್ನೇ ನಾನು ಎಂದು ಮೊದಲು ಹೇಳಿದನಲ್ಲ, ಹೇಳಿಕೊಂಡನಷ್ಟೆ, ಆದ್ದರಿಂದ ಅಹಂನಾಮನಾದನು. 'ಅವನಿಗೆ ಅಹಂ ಎಂದು ಉಪನಿಷತ್ತು'[2] (೫-೫-೪) ಎಂದು (ಈ) ಶ್ರುತಿಯಲ್ಲಿ ತಿಳಿಸಿರುವ ನಾಮವನ್ನೇ ಮುಂದೆ ಹೇಳಲಾಗುವದು. ಆದ್ದರಿಂದ– ಕಾರಣನಾದ ಪ್ರಜಾಪತಿಯಲ್ಲಿ ಹೀಗಾಯಿತಷ್ಟೆ, ಆ ಕಾರಣದಿಂದ– ಅವನ ಕಾರ್ಯವಾಗಿರುವ ಪ್ರಾಣಿಗಳಲ್ಲಿ, ಈಗಲೂ ಈ ಕಾಲದಲ್ಲಿಯೂ ಕೂಡ, ಕರೆದರೆ, 'ಯಾರು ನೀನು?' ಎಂದರೆ 'ಇಗೋ ನಾನು' ಎಂದೇ ಮೊದಲು ಹೇಳಿ, ಕಾರಣಾತ್ಮನ ಹೆಸರಿನಿಂದ ತನ್ನನ್ನು ಹೇಳಿಕೊಂಡು, ಮತ್ತೂ ವಿಶೇಷನಾಮವನ್ನು ತಿಳಿಯಲಿಚ್ಛಿಸುವವರಿಗಾಗಿ ಆಮೇಲೆ ಬಳಿಕ ಆಯಾ ಶರೀರದ ಹೆಸರನ್ನು, 'ದೇವದತ್ತ,' 'ಯಜ್ಞದತ್ತ'–ಎಂದು ಹೇಳಿಕೊಳ್ಳುತ್ತಾನೆ; ಈ ಗೊತ್ತಾದ ಶರೀರಕ್ಕೆ ತಾಯಿತಂದೆಗಳು ಇಟ್ಟದ್ದುರಲ್ಲ, ಆ ಹೆಸರನ್ನು ಹೇಳಿಕೊಳ್ಳುತ್ತಾನೆ.[3]

## ಪ್ರಜಾಪತಿಯು ಪುರುಷನೆನಿಸಿದ್ದು

(ಭಾಷ್ಯ)

೯೯. ಸ ಚ ಪ್ರಜಾಪತಿಃ ಅತಿಕ್ರಾನ್ತಜನ್ಮನಿ ಸಮ್ಯಕ್ಕರ್ಮಜ್ಞಾನಭಾವನಾನುಷ್ಠಾನೈಃ ಸಾಧಕಾವಸ್ಥಾಯಾಂ ಯತ್ ಯಸ್ಮಾತ್ ಕರ್ಮಜ್ಞಾನಭಾವನಾನುಷ್ಠಾನೈಃ ಪ್ರಜಾಪತಿತ್ವಂ ಪ್ರತಿಪಿತ್ಸೂನಾಂ ಪೂರ್ವಃ ಪ್ರಥಮಃ ಸನ್ ಅಸ್ಮಾತ್ ಪ್ರಜಾಪತಿತ್ವಪ್ರತಿಪಿತ್ಸುಸಮುದಾಯಾತ್ ಸರ್ವಸ್ಮಾತ್ ಆದೌ ಔಷತ್ ಅದಹತ್। ಕಿಮ್? ಆಸಙ್ಗಾಜ್ಞಾನಲಕ್ಷಣಾನ್ ಸರ್ವಾನ್ ಪಾಪ್ಮನಃ ಪ್ರಜಾಪತಿತ್ವ ಪ್ರತಿಬನ್ಧಕಾರಣಭೂತಾನ್। ಯಸ್ಮಾದೇವಮ್, ತಸ್ಮಾತ್ ಪುರುಷಃ ಪೂರ್ವಮ್ ಔಷದಿತಿ ಪುರುಷಃ ||

(ಭಾಷ್ಯಾರ್ಥ)

ಮತ್ತು ಆ ಪ್ರಜಾಪತಿಯು ಹಿಂದಿನ ಜನ್ಮದಲ್ಲಿ ಚೆನ್ನಾಗಿ ಕರ್ಮ, ಜ್ಞಾನ, ಭಾವನೆ– ಇವುಗಳ ಅನುಷ್ಠಾನಗಳಿಂದ (ತಾನು) ಸಾಧಕಾವಸ್ಥೆಯಲ್ಲಿದ್ದಾಗ,

1. ನಾನು ಪ್ರಜಾಪತಿಯು ಎಂದು ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಂಡದ್ದದ್ದರಿಂದ ಈಗ ಪ್ರಜಾಪತಿಯಾದಾಗಲೂ ಹಾಗೆಂದುಕೊಂಡನು.

2. ರಹಸ್ಯವಾದ ಹೆಸರು.

3. ಕಾರ್ಯವು ಕಾರಣವನ್ನು ಅನುಕರಿಸುತ್ತದೆ ಎಂಬ ನ್ಯಾಯವು ಇಲ್ಲಿ ಕಾಣುತ್ತದೆ ಎಂದು ಭಾವ.

ಕರ್ಮಜ್ಞಾನಭಾವನೆಗಳ ಅನುಷ್ಠಾನಗಳಿಂದ ಪ್ರಜಾಪತಿತ್ವವನ್ನು ಪಡೆಯಲೆಳಸು ವವರಲ್ಲಿ ಮೊದಲು, ಒಂದನೆಯವನಾಗಿ, ಈ ಪ್ರಜಾಪತಿತ್ವವನ್ನು ಪಡೆಯಲೆಳಸು ವವರ ಸಮೂಹವೆಲ್ಲಕ್ಕಿಂತ ಆದಿಯಲ್ಲಿಯೇ ಯಾವ ಕಾರಣದಿಂದ ಸುಟ್ಟನೋ ಉರು ಹಿದನೋ–ಏನನ್ನು(ಸುಟ್ಟನು)? ಎಂದರೆ– ಪ್ರಜಾಪತಿತ್ವಕ್ಕೆ ಪ್ರತಿಬಂಧಕಾರಣ ವಾಗಿರುವ ಆಸಂಗಜ್ಞಾನರೂಪವಾಗಿರುವ ಸರ್ವಪಾಪಗಳನ್ನೂ (ಸುಟ್ಟನೋ), ಹೀಗೆ ಮಾಡಿದನಲ್ಲ, ಆ ಕಾರಣದಿಂದ ಪುರುಷ(ನೆನಿಸಿದನು). ಮೊದಲು ಸುಟ್ಟನು (ಪೂರ್ವಮ್ ಔಷದ್), ಆದ್ದರಿಂದ ಪುರುಷನು (ಎನಿಸಿದನು).

## ಜ್ಞಾನಕರ್ಮಭಾವನೆಗಳಿಗೆ ಫಲ

(ಭಾಷ್ಯ)

೧೦೦. ಯಥಾಯಂ ಪ್ರಜಾಪತಿಃ ಓಷಿತ್ವಾ ಪ್ರತಿಬನ್ಧಕಾನ್ ಪಾಪ್ಮನಃ ಸರ್ವಾನ್ ಪುರುಷಃ ಪ್ರಜಾಪತಿರಭವತ್ । ಏವಮ್ ಅನ್ಯೋಽಪಿ ಜ್ಞಾನಕರ್ಮ ಭಾವನಾನುಷ್ಠಾನವಹ್ನಿನಾ ಕೇವಲಂ ಜ್ಞಾನಬಲಾದ್ವಾ ಔಷತಿ ಭಸ್ಮೀಕರೋತಿ ಹ ವೈ ಸ ತಮ್ ಕಮ್? ಯೋಽಸ್ಮಾತ್ ವಿದುಷಃ ಪೂರ್ವಃ ಪ್ರಥಮಃ ಪ್ರಜಾಪತಿಃ ಬುಭೂಷತಿ ಭವಿತುಮಿಚ್ಛತಿ ತಮ್ ಇತ್ಯರ್ಥಃ । ತಂ ದರ್ಶಯತಿ ಯ ಏವಂ ವೇದ ಇತಿ । ಸಾಮರ್ಥ್ಯಾತ್ ಜ್ಞಾನಭಾವನಾಪ್ರಕರ್ಷವಾನ್ । ನನು ಅನರ್ಥಾಯ ಪ್ರಾಜಾಪತ್ಯಪ್ರತಿಪಿತ್ಸಾ ಏವಂವಿದಾ ಚೇತ್ ದಹ್ಯತೇ । ನೈಷ ದೋಷಃ । ಜ್ಞಾನಭಾವನೋತ್ಕರ್ಷಾಭಾವಾತ್ ಪ್ರಥಮಂ ಪ್ರಜಾಪತಿತ್ವಪ್ರತಿಪತ್ತ್ಯಭಾವ ಮಾತ್ರತ್ವಾತ್ ದಾಹಸ್ಯ । ಉತ್ಕೃಷ್ಟಸಾಧನಃ ಪ್ರಥಮಂ ಪ್ರಜಾಪತಿತ್ವಂ ಪ್ರಾಪ್ನುವನ್ ನ್ಯೂನಸಾಧನೋ ನ ಪ್ರಾಪ್ನೋತಿ ಇತಿ ಸ ತಂ ದಹತಿ ಇತ್ಯುಚ್ಯತೇ, ನ ಪುನಃ ಪ್ರತ್ಯಕ್ಷಮ್ ಉತ್ಕೃಷ್ಟಸಾಧನೇನ ಇತರೋ ದಹ್ಯತೇ । ಯಥಾ ಲೋಕೇ ಆಜಿಸೃತಾಂ ಯಃ ಪ್ರಥಮಮ್ ಆಜಿಮ್ ಉಪಸರ್ಪತಿ ತೇನ ಇತರೇ ದಗ್ಧಾ ಇವ ಅಪಹೃತಸಾಮರ್ಥ್ಯಾ ಭವನ್ತಿ ತದ್ವತ್ ॥

(ಭಾಷ್ಯಾರ್ಥ)

ಈ ಪ್ರಜಾಪತಿಯು ಪ್ರತಿಬಂಧಕವಾದ ಪಾಪಗಳನ್ನೆಲ್ಲ ಸುಟ್ಟು ಹೇಗೆ ಪುರುಷ(ನಾದನೋ) ಪ್ರಜಾಪತಿಯಾದನೋ, ಹೀಗೆಯೇ ಮತ್ತೊಬ್ಬನೂ ಜ್ಞಾನಕರ್ಮಗಳ ಭಾವನೆಯ ಅನುಷ್ಠಾನವೆಂಬ ಬೆಂಕಿಯಿಂದ, ಅಥವಾ ಬರಿಯ ಜ್ಞಾನಬಲದಿಂದಲೇ, ಸುಡುತ್ತಾನೆ, ಬೂದಿಗೈಯುತ್ತಾನೆ. ಅವನು ಅವನನ್ನು (ಸುಡುತ್ತಾನೆ) ; ಯಾರನ್ನು? ಎಂದರೆ ಈ ಉಪಾಸಕನಿಗಿಂತ ಮೊದಲನೆಯುವ ನಾಗಿ ಒಂದನೆಯವನಾಗಿ ಪ್ರಜಾಪತಿಯಾಗಲಿಚ್ಛಿಸುವನಲ್ಲ, ಅವನನ್ನು ಎಂದರ್ಥ. (ಹೀಗೆ ಸುಡುವ)ವನನ್ನು 'ಯಾವನು ಹೀಗೆಂದು ಅರಿತುಕೊಳ್ಳು

ವನೋ' ಎಂದು (ಶ್ರುತಿ) ತಿಳಿಸಿರುತ್ತದೆ; ಜ್ಞಾನಭಾವನೆಯು ಹೆಚ್ಚಾಗಿದ್ದವನು (ಸುಡುತ್ತಾನೆ) ಎಂದು ಸಾಮರ್ಥ್ಯದಿಂದ (ತಿಳಿಯಬರುತ್ತದೆ).

(ಆಕ್ಷೇಪ):—ಹೀಗೆಂದು ಅರಿತುಕೊಂಡವನಿಂದ ಸುಡಿಸಿಕೊಳ್ಳುವದಾದರೆ ಪ್ರಜಾಪತಿತ್ವವನ್ನು ಪಡೆದುಕೊಳ್ಳಬೇಕೆಂದು ಬಯಸುವದು ಅನರ್ಥಕ್ಕೇ ಕಾರಣ (ವೆಂದಾಯಿತಲ್ಲ)!

(ಪರಿಹಾರ):—ಇದೇನೂ ದೋಷವಲ್ಲ. ಏಕೆಂದರೆ ಜ್ಞಾನಭಾವನೆಯ ಹೆಚ್ಚುಗಾರಿಕೆಯಿಲ್ಲದ್ದರಿಂದ (ಮೊದಲು ಪ್ರಜಾಪತಿತ್ವವನ್ನು ಪಡೆಯುವದಿಲ್ಲವೆಂಬುದಿಷ್ಟೇ (ಈ) ಸುಡಿಸಿಕೊಳ್ಳುವದೆಂಬುದು. ಉತ್ಕೃಷ್ಟವಾದ ಸಾಧನವುಳ್ಳಾತನು ಮೊದಲು ಪ್ರಜಾಪತಿತ್ವವನ್ನು ಪಡೆದುಕೊಳ್ಳುವನಾಗಿ–ಕಡಿಮೆಯ ಸಾಧನವುಳ್ಳಾತನು (ಅದನ್ನು) ಪಡೆದುಕೊಳ್ಳುವದಿಲ್ಲ ಎಂಬ ಕಾರಣದಿಂದ–ಅವನು ಅವನನ್ನು ಸುಡುತ್ತಾನೆ ಎಂದು ಹೇಳಿರುತ್ತದೆಯೇ ಹೊರತು ಉತ್ಕೃಷ್ಟಸಾಧನವುಳ್ಳವನಿಂದ ಪ್ರತ್ಯಕ್ಷವಾಗಿಯೇ ಇನ್ನೊಬ್ಬನು ಸುಡಿಸಿಕೊಳ್ಳುತ್ತಾನೆಂದಲ್ಲ. ಹೇಗೆ ಲೋಕದಲ್ಲಿ ಓಟದ (ಪಂದ್ಯದಲ್ಲಿ) ಓಡುತ್ತಿರುವವರಲ್ಲಿ ಯಾವನು ಮೊದಲು ಕೊನೆಯನ್ನು ಮುಟ್ಟುವನೋ ಅವನಿಂದ ಉಳಿದವರು ಸುಡಿಸಿಕೊಂಡವರಂತೆ ಸಾಮರ್ಥ್ಯವನ್ನು ಕಳೆದುಕೊಂಡವರಾಗುವರೋ ಹಾಗೆಯೇ (ಇದು).

## ಪ್ರಜಾಪತಿಗೆ ಭಯಪ್ರಾಪ್ತಿ, ಅದರ ನಿವೃತ್ತಿ

(ಉಪನಿಷತ್ತು)

**ಸೋಽಬಿಭೇತ್ ತಸ್ಮಾದೇಕಾಕೀ ಬಿಭೇತಿ ಸ ಹಾಯಮೀಕ್ಷಾಂಚಕ್ರೇ ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮೀತಿ ತತ ಏವಾಸ್ಯ ಭಯಂ ವೀಯಾಯ ಕಸ್ಮಾದ್ಧ್ಯಭೇಷ್ಯದ್ ದ್ವಿತೀಯಾದ್ವೈ ಭಯಂ ಭವತಿ ॥ ೨ ॥**

೨. ಅವನು ಭಯಪಟ್ಟನು. ಆದ್ದರಿಂದ ಒಂಟಿಗನು ಭಯಪಡುತ್ತಾನೆ. ಆ ಇವನು (ಹೀಗೆಂದು ಯೋಚಿಸಿ) ನೋಡಿದನು. "ನನಗಿಂತ ಬೇರೆಯಿಲ್ಲವೇ ಇಲ್ಲವಲ್ಲ, ನಾನು ಏತಕ್ಕೆ ಹೆದರುವೆನೊ!' ಎಂದು; ಅದರಿಂದಲೇ ಅವನ ಭಯವು ಹೋಗಿಬಿಟ್ಟಿತು. (ಅವನು) ಏತಕ್ಕೆ ತಾನೆ ಭಯಪಟ್ಟನು? ಎರಡನೆಯದರಿಂದಲೇ ಅಲ್ಲವೆ, ಭಯವಾಗುತ್ತದೆ?

## ಮುಂದಿನ ಕಂಡಿಕೆಯ ಸಂಬಂಧ

(ಭಾಷ್ಯ)

೧೦೭. ಯದಿದಂ ತುಷ್ಟೂಷಿತಂ ಕರ್ಮಕಾಣ್ಡವಿಹಿತಜ್ಞಾನಕರ್ಮಫಲಂ ಪ್ರಾಜಾಪತ್ಯಲಕ್ಷಣಮ್, ನೈವ ತತ್ ಸಂಸಾರವಿಷಯಮ್ ಅತ್ಯಕ್ರಾಮತ್ ಇತೀಮಮ್ ಅರ್ಥಂ ಪ್ರದರ್ಶಯಿಷ್ಯನ್ ಆಹ—

(ಭಾಷ್ಯಾರ್ಥ)

ಹೊಗಳಬೇಕೆಂದು ಹೊರಟಿರುವ ಪ್ರಜಾಪತಿತ್ವರೂಪವಾದ ಕರ್ಮಕಾಂಡ ವಿಹಿತವಾದ ಜ್ಞಾನಕರ್ಮಗಳ ಫಲವಿದೆಯಲ್ಲ, ಅದು ಸಂಸಾರವಿಷಯವನ್ನು ಮೀರಿಯೇ ಇರಲಿಲ್ಲ ಎಂಬೀ ಅರ್ಥವನ್ನು ತಿಳಿಸುವದಕ್ಕಾಗಿ (ವೇದವು ಹೀಗೆಂದು) ಹೇಳುತ್ತಿದೆ.

## ಪ್ರಜಾಪತಿಯೂ ನಮ್ಮಂತೆಯೇ ಸಂಸಾರಿಯೇ

(ಭಾಷ್ಯ)

೧೨೧. ಸೋಽಬಿಭೇತ್ । ಸ ಪ್ರಜಾಪತಿಃ ಯೋಽಯಂ ಪ್ರಥಮಃ ಶರೀರೀ ಪುರುಷವಿಧೋ ವ್ಯಾಖ್ಯಾತಃ, ಸೋಽಬಿಭೇತ್ ಭೀತವಾನ್ ಅಸ್ಮದಾದಿವದೇವ ಇತ್ಯಾಹ । ಯಸ್ಮಾತ್ ಅಯಂ ಪುರುಷವಿಧಃ ಶರೀರಕರಣವಾನ್ ಆತ್ಮನಾಶ ವಿಪರೀತದರ್ಶನವತ್ತ್ವಾತ್ ಅಬಿಭೇತ್ । ತಸ್ಮಾತ್ ತತ್ಸಾಮಾನ್ಯಾತ್ ಅದ್ಯತ್ವೇಽಪಿ ಏಕಾಕೀ ಬಿಭೇತಿ । ಕಿಂ ಚ ಅಸ್ಮದಾದಿವದೇವ ಭಯಹೇತುವಿಪರೀತದರ್ಶನಾಪ ನೋದಕಾರಣಂ ಯಥಾಭೂತಾತ್ಮದರ್ಶನಮ್, ಸೋಽಯಂ ಪ್ರಜಾಪತಿಃ ಈಕ್ಷಾಮ್ ಈಕ್ಷಣಂ ಚಕ್ರೇ ಕೃತವಾನ್ ಹ । ಕಥಮಿತಿ ? ಆಹ । ಯದ್ ಯಸ್ಮಾತ್ ಮತ್ತೋಽನ್ಯತ್ ಆತ್ಮವ್ಯತಿರೇಕೇಣ ವಸ್ತ್ವನ್ತರಂ ಪ್ರತಿದ್ವಂದ್ವೀ ಭೂತಂ ನಾಸ್ತಿ ತಸ್ಮಿನ್ ಆತ್ಮವಿನಾಶಹೇತ್ವಭಾವೇ ಕಸ್ಮಾನ್ನು ಬಿಭೇಮಿ ? ಇತಿ । ತತ ಏವ ಯಥಾಭೂತಾತ್ಮದರ್ಶನಾತ್ ಅಸ್ಯ ಪ್ರಜಾಪತೇಃ ಭಯಂ ವೀಯಾಯ ವಿಸ್ಪಷ್ಟಮ್ ಅಪಗತವತ್ ॥

(ಭಾಷ್ಯಾರ್ಥ)

'ಸೋಽಬಿಭೇತ್' (ಎಂಬ ಕಂಡಿಕೆಯ ಅರ್ಥವೇನೆಂದರೆ), ಅವನು ಎಂದರೆ ಈ ಪುರುಷವಿಧನಾದ ಪ್ರಥಮಶರೀರಿ ಎಂದು ಹೇಳಿತ್ತಲ್ಲ, ಆ ಪ್ರಜಾಪತಿಯು ಅವನು ಭಯಪಟ್ಟನು. ನಮ್ಮಂಥವರಂತೆಯೇ ಹೆದರಿದನು ಎಂದು ಶ್ರುತಿ ಹೇಳುತ್ತಿದೆ. ಈ ಪುರುಷವಿಧನಾದ, ಶರೀರಕರಣವಂತನಾದ (ಪ್ರಜಾಪತಿಯು) ತಾನು ನಾಶವಾಗುವೆನೆಂದು ತಪ್ಪುತಿಳಿವಳಿಕೆಯುಳ್ಳವನಾದ್ದರಿಂದ[1] ಭಯಪಟ್ಟನಲ್ಲ, ಆದ್ದರಿಂದ ಅವನಂತಿರುವದರಿಂದ[2] ಈಗಲೂ ಒಂಟಿಗನು ಭಯಪಡುತ್ತಾನೆ. ಮತ್ತು ನಮ್ಮಂಥವರಂತೆಯೇ ಭಯಹೇತುವಿದೆ ಎಂಬ ವಿಪರೀತಜ್ಞಾನವನ್ನು

---

1. ಆತ್ಮನಿಗೆ ನಾಶವಿಲ್ಲ; ಶರೀರನಿಮಿತ್ತವಾದ ನಾಶವನ್ನು ಆತ್ಮನಲ್ಲಿ ಹುಟ್ಟಿಸಿಗಟ್ಟಿದ ತಪ್ಪುತಿಳಿವಳಿಕೆಯೇ ಅಂಜಿಕೆಗೆ ಕಾರಣವಾಗಿತ್ತು.

2. ಅವನಂತೆ ಶರೀರವೇ ತಾನೆಂಬ ತಪ್ಪುತಿಳಿವಳಿಕೆಯಿರುವದರಿಂದ ಎಂದರ್ಥ.

ನೀಗುವ ಕಾರಣವಾದ ಇದ್ದದ್ದು ಇದ್ದಂತೆ ತಿಳಿಸುವ ಆತ್ಮದರ್ಶನವನ್ನು ಆ ಈ ಪ್ರಜಾಪತಿಯು ಯೋಚನೆಯನ್ನು ವಿಚಾರವನ್ನು ಮಾಡಿದನು, (ಆಲೋಚನೆ) ಮಾಡಿನೋಡಿದನು.[1] ಹೇಗೆ (ಆಲೋಚನೆಮಾಡಿದನು)? ಎಂದರೆ ಶ್ರುತಿ ಹೇಳುತ್ತದೆ. "ನನಗಿಂತ ಬೇರೆಯ, ನನ್ನನ್ನು ಬಿಟ್ಟಿರುವ ಪ್ರತಿದ್ವಂದ್ವಿಯಾಗಿರುವ ಮತ್ತೊಂದು ವಸ್ತುವು ಇಲ್ಲವೇ ಇಲ್ಲವಲ್ಲ, ಆತ್ಮವಿನಾಶಕ್ಕೆ ಕಾರಣವಾದ ಆ (ಎರಡನೆಯ ವಸ್ತು)ವಿಲ್ಲದಿರುವಲ್ಲಿ ನಾನು ಏತಕ್ಕೆ ಹೆದರುವೆನೋ!" ಆದರಿಂದಲೇ (ಆ) ಇದ್ದದ್ದು ಇದ್ದಂತೆ ಆತ್ಮೈಕತ್ವವನ್ನು ತಿಳಿದುಕೊಂಡದ್ದರಿಂದಲೇ ಈ ಪ್ರಜಾಪತಿಗೆ ಭಯವು ಹೋಗಿಬಿಟ್ಟಿತು (ವೀಯಾಯ=ವಿಸ್ಪಷ್ಟಮ್ ಅಪಗತವತ್) ವಿಸ್ಪಷ್ಟವಾಗಿ ತೊಲಗಿತು.

## ಅವಿದ್ಯಾಕೃತದ್ವೈತವೇ ಭಯಹೇತು

(ಭಾಷ್ಯ)

೧೦೨. ತಸ್ಯ ಪ್ರಜಾಪತೇಃ ಯದ್ಭಯಮ್ ತತ್ ಕೇವಲಾವಿದ್ಯಾನಿಮಿತ್ತಮೇವ ಪರಮಾರ್ಥದರ್ಶನೇ ಅನುಪಪನ್ನಮ್ ಇತ್ಯಾಹ–ಕಸ್ಮಾತ್ ಹಿ ಅಭೇಷ್ಯತ್ ಕಿಮಿತಿ ಅಸೌ ಭೀತವಾನ್ ಪರಮಾರ್ಥನಿರೂಪಣಾಯಾಂ ಭಯಮ್ ಅನುಪಪನ್ನಮೇವ ಇತ್ಯಭಿಪ್ರಾಯಃ| ಯಸ್ಮಾತ್ ದ್ವಿತೀಯಾದ್ ವಸ್ತ್ವನ್ತರಾದ್ ವೈ ಭಯಂ ಭವತಿ| ದ್ವಿತೀಯಂ ಚ ವಸ್ತ್ವನ್ತರಮ್ ಅವಿದ್ಯಾಪ್ರತ್ಯುಪಸ್ಥಾಪಿತಮೇವ। ನ ಹಿ ಅದೃಶ್ಯಮಾನಂ ದ್ವಿತೀಯಂ ಭಯಂ ಜನ್ಮನೋ ಹೇತುಃ| "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತಿ ಮನ್ತ್ರವರ್ಣಾತ್| ಯಚ್ಚ ಏಕತ್ವದರ್ಶನೇನ ಭಯಮ್ ಅಪನುನೋದ[2] ತದ್ಯುಕ್ತಮ್| ಕಸ್ಮಾತ್? ದ್ವಿತೀಯಾತ್ ವಸ್ತ್ವನ್ತರಾದ್ ವೈ ಭಯಂ ಭವತಿ| ತದೇಕತ್ವದರ್ಶನೇನ ದ್ವಿತೀಯದರ್ಶನಮ್ ಅಪನೀತಮ್ ಇತಿ ನಾಸ್ತಿ ಯತಃ[3] ||

(ಭಾಷ್ಯಾರ್ಥ)

ಆ ಪ್ರಜಾಪತಿಗೆ ಭಯವಾಯಿತಲ್ಲ, ಅದು ಬರಿಯ ಅವಿದ್ಯಾನಿಮಿತ್ತವೇ; (ಅದು) ಪರಮಾರ್ಥವನ್ನು ಕಂಡುಕೊಂಡಾಗ ಆಗಲಾರದು ಎಂದು (ಶ್ರುತಿ) ಹೇಳುತ್ತಿದೆ. (ಅವನು) ಏತಕ್ಕೆತಾನೆ ಭಯಪಟ್ಟನು, ಅವನು ಏತರಿಂದ

1. ಅವಿದ್ಯೆಯಿಂದಾದ ಅಂಜಿಕೆಗೆ ವಿಚಾರದಿಂದಾದ ವಿದ್ಯೆಯೇ ಪರಿಹಾರಕವೆಂಬುದು ನಮ್ಮಂತೆಯೇ ಪ್ರಜಾಪತಿಗೂ ಅನ್ವಯಿಸುತ್ತದೆ.

2. ಇದರ ಮುಂದಿರುವ 'ಅಪನೋದಿತಂ' ಎಂಬ ಮಾತು ಬೇಕಿಲ್ಲವೆಂದು ಬಿಟ್ಟಿದೆ.

3. ಅದಕ್ಕೆ ನಿಜವಾದ ಹೊರಗಿನ ನಿಮಿತ್ತವು ಯಾವದೂ ಇಲ್ಲ.

ಹೆದರಿದನು? ಪರಮಾರ್ಥವನ್ನು ಪರೀಕ್ಷಿಸಿನೋಡಿದರೆ ಭಯವು ಅಯುಕ್ತವೇ ಎಂದು ಅಭಿಪ್ರಾಯ. ಏಕೆಂದರೆ ಎರಡನೆಯ ಮತ್ತೊಂದು ವಸ್ತುವಿನಿಂದಲೇ ಭಯವುಂಟಾಗುತ್ತದೆ. ಎರಡನೆಯದಾದ ಬೇರೊಂದು ವಸ್ತುವು ಅವಿದ್ಯೆಯು ತಂದೊಡ್ಡಿದ್ದೇ. ಕಾಣದೆ ಇರುವ ಎರಡನೆಯ (ವಸ್ತು) ಭಯವುಂಟಾಗುವದಕ್ಕೆ ಕಾರಣವಾಗಲಾರದು. "ಅಲ್ಲಿ ಏಕತ್ವವನ್ನು ಕಂಡುಕೊಂಡಿರುವವನಿಗೆ (ಯಾವ) ಮೋಹವು, ಯಾವ ಶೋಕವು?" (ಈ. ೭.) ಎಂಬ ಮಂತ್ರವರ್ಣದಿಂದ[1] ಇದು ಸಿದ್ಧವಾಗುತ್ತದೆ. ಏಕತ್ವದರ್ಶನದಿಂದ ಭಯವನ್ನು ಕಳೆದುಕೊಂಡನಲ್ಲ, ಅದೂ ಯುಕ್ತವು; ಎರಡನೆಯದಾದ ಬೇರೊಂದು ವಸ್ತುವಿನಿಂದಲ್ಲವೆ, ಭಯವಾಗುವದು? ಆ ಎರಡನೆಯ (ವಸ್ತುವಿನ) ಅರಿವು ಏಕತ್ವಜ್ಞಾನದಿಂದ ತೊಲಗಿದ್ದರಿಂದ ಇರುವದಿಲ್ಲವಾದ್ದರಿಂದ (ಭಯವಿಲ್ಲ).

## ಚರ್ಚೆ: ಪ್ರಜಾಪತಿಗೆ ಏಕತ್ವದರ್ಶನವು ಹೇಗೆ ಆಯಿತು?

### ಆಕ್ಷೇಪ: ಏಕತ್ವದರ್ಶನವು ವ್ಯರ್ಥ

(ಭಾಷ್ಯ)

೧೦೩. ಅತ್ರ ಚೋದಯನ್ತಿ । ಕುತಃ ಪ್ರಜಾಪತೇರೇಕತ್ವದರ್ಶನಂ ಜಾತಮ್? ಕೋ ವಾ ಅಸ್ಮೈ ಉಪದಿದೇಶ? ಅಥ ಅನುಪದಿಷ್ಟಮೇವ ಪ್ರಾದುರಭೂತ್, ಅಸ್ಮದಾದೇರಪಿ ತಥಾ ಪ್ರಸಜ್ಗಃ । ಅಥ ಜನ್ಮಾನ್ತರಕೃತಸಂಸ್ಕಾರಹೇತುಕಮ್, ಏಕತ್ವದರ್ಶನಾನರ್ಥಕ್ಯಪ್ರಸಜ್ಗಃ । ಯಥಾ ಪ್ರಜಾಪತೇಃ ಅತಿಕ್ರಾನ್ತಜನ್ಮಾವಸ್ಥಸ್ಯ ಏಕತ್ವದರ್ಶನಂ ವಿದ್ಯಮಾನಮಪಿ ಅವಿದ್ಯಾಬನ್ಧಕಾರಣಂ ನಾಪನಿನ್ಯೇ । ಯತೋಽವಿದ್ಯಾಸಂಯುಕ್ತ ಏವ ಅಯಂ ಜಾತೋಽಬಿಭೇತ್ । ಏವಂ ಸರ್ವೇಷಾಮೇಕತ್ವದರ್ಶನಾನರ್ಥಕ್ಯಂ ಪ್ರಾಪ್ನೋತಿ । ಅನ್ತ್ಯಮೇವ ನಿವರ್ತಕಮ್ ಇತಿ ಚೇತ್ । ನ । ಪೂರ್ವವತ್ ಪುನಃ ಪ್ರಸಜ್ಗೇನ ಅನೈಕಾನ್ತ್ಯಾತ್ । ತಸ್ಮಾತ್ ಅನರ್ಥಕಮೇವ ಏಕತ್ವದರ್ಶನಮ್ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಪೂರ್ವಪಕ್ಷಿಗಳು) ಆಕ್ಷೇಪಿಸುತ್ತಾರೇನೆಂದರೆ: ಪ್ರಜಾಪತಿಗೆ ಏಕತ್ವಜ್ಞಾನವು ಏತರಿಂದ ಆಯಿತು? ಅವನಿಗೆ ಉಪದೇಶಮಾಡಿದವರಾದರೂ ಯಾರು?

---

1. ಈಶಾವಾಸ್ಯವು ಶುಕ್ಲಯಜುರ್ವೇದದ ಸಂಹಿತಾಭಾಗದಲ್ಲಿರುವದರಿಂದ ಅದನ್ನು ಮಂತ್ರವರ್ಣವೆಂದಿವೆ.

ಇನ್ನು (ಯಾವ) ಉಪದೇಶವೂ ಇಲ್ಲದೆಯೇ (ಜ್ಞಾನವು) ತೋರಿಕೊಂಡಿತು ಎನ್ನುವದಾದರೆ, ನಮ್ಮಂಥವರಿಗೂ ಹಾಗೆಯೇ ಆಗಬೇಕಾಗುವದು. ಹಾಗಿಲ್ಲದೆ ಮತ್ತೊಂದು ಜನ್ಮದಿಂದಾದ ಸಂಸ್ಕಾರವೇ ಅದಕ್ಕೆ ಕಾರಣವು ಎನ್ನುವದಾದರೆ ಏಕತ್ವಜ್ಞಾನವು ವ್ಯರ್ಥವಾಗಬೇಕಾದೀತು. ಹೇಗೆ ಪ್ರಜಾಪತಿಗೆ ಹಿಂದಿನ ಜನ್ಮದ ಅವಸ್ಥೆಯಲ್ಲಿ ಏಕತ್ವಜ್ಞಾನವು ಇದ್ದರೂ ಅವಿದ್ಯೆ ಎಂಬ ಬಂಧಕಾರಣವನ್ನು ತೊಲಗಿಸಲಿಲ್ಲವೋ, ಆದ್ದರಿಂದಲೇ ಅವನು (ಹೇಗೆ) ಅವಿದ್ಯಾಯುಕ್ತನೇ ಆಗಿ ಹುಟ್ಟಿ ಭಯಪಟ್ಟನೋ, ಇದರಂತೆ ಎಲ್ಲರಿಗೂ ಏಕತ್ವಜ್ಞಾನವು ವ್ಯರ್ಥವೆಂದಾಗುವದು. ಕೊನೆಯ ಜ್ಞಾನವೇ (ಅವಿದ್ಯಾ)ನಿವರ್ತಕವು ಎನ್ನುವದಾದರೆ ಹಾಗಲ್ಲ. ಏಕೆಂದರೆ ಮೊದಲಿನಂತೆಯೇ ಮತ್ತೆ (ಅವಿದ್ಯೆಯು) ಬರಬಹುದಾದ್ದರಿಂದ (ಆ) ನಿಯಮವಿಲ್ಲದೆಹೋಗುವದು.[1] ಆದ್ದರಿಂದ ಏಕತ್ವಜ್ಞಾನವು ವ್ಯರ್ಥವೇ.

## ಪರಿಹಾರ : ಪೂರ್ವಜನ್ಮಕೃತಚಿತ್ತಶುದ್ಧಿಯಿಂದ ಜ್ಞಾನೋತ್ಪತ್ತಿ

(ಭಾಷ್ಯ)

೧೦೪. ನೈಷ ದೋಷಃ । ಉತ್ಕೃಷ್ಟಹೇತೂದ್ಭವತ್ವಾತ್ ಲೋಕವತ್ । ಯಥಾ ಪುಣ್ಯಕರ್ಮೋದ್ಭವೈಃ ವಿವಿಕ್ತೈಃ ಕಾರ್ಯಕರಣೈಃ ಸಂಯುಕ್ತೇ ಜನ್ಮನಿ ಸತಿ ಪ್ರಜ್ಞಾಮೇಧಾಸ್ಮೃತಿವೈಶಾರದ್ಯಂ ದೃಷ್ಟಮ್, ತಥಾ ಪ್ರಜಾಪತೇಃ ಧರ್ಮಜ್ಞಾನವೈರಾಗ್ಯೈಶ್ವರ್ಯವಿಪರೀತಹೇತುಸರ್ವಪಾಪ್ಮದಾಹಾತ್ ವಿಶುದ್ಧೈಃ ಕಾರ್ಯಕರಣೈಃ ಸಂಯುಕ್ತಮ್ ಉತ್ಕೃಷ್ಟಂ ಜನ್ಮ, ತದುದ್ಭವಂ ಚ ಅನುಪದಿಷ್ಟಮೇವ ಯುಕ್ತಮ್ ಏಕತ್ವದರ್ಶನಂ ಪ್ರಜಾಪತೇಃ । ತಥಾ ಚ ಸ್ಮೃತಿಃ–"ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ । ಐಶ್ವರ್ಯಂ ಚೈವ ಧರ್ಮಶ್ಚ ಸಹಸಿದ್ಧಂ ಚತುಷ್ಟಯಮ್" (?)[2].

---

1. ಜ್ಞಾನವನ್ನು ಅಭ್ಯಾಸಮಾಡುತ್ತಿದ್ದರೆ ಸಾಯುವ ಕಾಲಕ್ಕೆ ಉಂಟಾಗುವ ಜ್ಞಾನವೇ ಅಜ್ಞಾನವನ್ನೂ ಅದರಿಂದಾಗುವ ಭಯವನ್ನೂ ಕಳೆಯುವದು ಎಂಬ ವಾದಕ್ಕೆ ಪರಿಹಾರವಿದು. ಯಾವ ಜ್ಞಾನವಾದರೂ ಜ್ಞಾನವೇ; ಕೊನೆಯ ಜ್ಞಾನವೇ ಏತಕ್ಕೆ ಭಯಹಾರಕವಾಗಬೇಕು. ಎಂದು ಅಭಿಪ್ರಾಯ. ಇಲ್ಲಿರುವ ಪೂರ್ವಪಕ್ಷಸಿದ್ಧಾಂತಗಳನ್ನು **ಅವಿದ್ಯಾಲೇಶವಾದಕ್ಕೆ** ಹೊಂದಿಸುವ ಪ್ರಯತ್ನವನ್ನು ವ್ಯಾಖ್ಯಾನಕಾರರು ಮಾಡಿರುತ್ತಾರೆ. ಆ ವಾದಕ್ಕೆ ಭಾಷ್ಯವಾರ್ತಿಕಗಳ ಸಮ್ಮತಿಯಲ್ಲ; ಪೀಠಿಕೆಯನ್ನು ನೋಡಿ.

2. ಇದು ವಾಯುಪುರಾಣದಲ್ಲಿದೆ; ಆದರೆ ಆ ಪುರಾಣವನ್ನು ಆಚಾರ್ಯರು ಮತ್ತೆಲ್ಲಿಯೂ ಉದಾಹರಿಸಿದಂತೆ ಕಾಣಲಿಲ್ಲ.

(ಭಾಷ್ಯಾರ್ಥ)

ಇದೇನೂ ದೋಷವಲ್ಲ. ಏಕೆಂದರೆ ಲೋಕದಂತೆ (ಜ್ಞಾನವು) ಉತ್ಕೃಷ್ಟವಾದ ಹೇತುವಿನಿಂದ ಉಂಟಾಗುತ್ತದೆ. (ಇದರ ವಿವರ): ಹೇಗೆ ಪುಣ್ಯಕರ್ಮಗಳಿಂದುಂಟಾಗಿರುವ ಶುದ್ಧವಾದ ಕಾರ್ಯಕರಣಗಳಿಂದೊಡಗೂಡಿದ ಜನ್ಮವು (ದೊರಕಲು) ಪ್ರಜ್ಞೆ, ಮೇಧೆ, ಸ್ಮೃತಿ– ಇವುಗಳ ವಿಶುದ್ಧಿಯುಂಟಾಗುವದು ಕಂಡುಬರುತ್ತದೆಯೋ, ಹಾಗೆಯೇ ಪ್ರಜಾಪತಿಗೆ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ–ಇವುಗಳಿಗೆ ವಿಪರೀತವಾದ (ಅಧರ್ಮಾದಿಗಳ) ಹೇತುವಾದ ಪಾಪವನ್ನು ಸುಡುವದರಿಂದ ವಿಶುದ್ಧವಾದ ಕಾರ್ಯಕರಣಗಳಿಂದೊಡಗೂಡಿದ ಉತ್ಕೃಷ್ಟ ಜನ್ಮವೂ, ಅದರಿಂದ ಯಾವ ಉಪದೇಶವೂ ಇಲ್ಲದೆಯೇ ಪ್ರಜಾಪತಿಗೆ ಏಕತ್ವದರ್ಶನವುಂಟಾಗುವದೆಂಬುದೂ ಯುಕ್ತವು. ಆದ್ದರಿಂದಲೇ ಸ್ಮೃತಿಯು (ಹೀಗೆಂದು ಹೇಳುತ್ತಿದೆ). "ಆ ಜಗತ್ಪತಿಗೆ ಅಪ್ರತಿಹತವಾದ ಜ್ಞಾನವೂ ವೈರಾಗ್ಯವೂ ಐಶ್ವರ್ಯವೂ ಧರ್ಮವೂ (ಈ) ನಾಲ್ಕೂ ಸಹ ಸಿದ್ಧವಾಗಿರುತ್ತವೆ."

## ಪ್ರಜಾಪತಿಗೆ ಉಪದೇಶವಿಲ್ಲದೆ ಜ್ಞಾನವುಂಟಾಗುತ್ತದೆ

(ಭಾಷ್ಯ)

೧೧೫. ಸಹಸಿದ್ಧತ್ವೇ ಭಯಾನುಪಪತ್ತಿಃ ಇತಿ ಚೇತ್ । ನ ಹಿ ಆದಿತ್ಯೇನ ಸಹ ತಮ ಉದೇತಿ । ನ । ಅನ್ಯಾನುಪದಿಷ್ಟಾರ್ಥತ್ವಾತ್ ಸಹಸಿದ್ಧವಾಕ್ಯಸ್ಯ । ಶ್ರದ್ಧಾತಾತ್ಪರ್ಯಪ್ರಣಿಪಾತಾದೀನಾಮ್ ಅಹೇತುತ್ವಮ್ ಇತಿ ಚೇತ್ । ಸ್ಯಾನ್ಮತಮ್[1] "ಶ್ರದ್ಧಾವಾಲ್ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ" (ಗೀ. ೪-೩೯) "ತದ್ವಿದ್ಧಿ ಪ್ರಣಿಪಾತೇನ" (ಗೀ. ೪-೩೪) ಇತ್ಯೇವಮಾದೀನಾಂ ಶ್ರುತಿಸ್ಮೃತಿವಿಹಿತಾನಾಂ ಜ್ಞಾನಹೇತೂನಾಮ್ ಅಹೇತುತ್ವಂ ಪ್ರಜಾಪತೇರಿವ ಜನ್ಮಾನ್ತರಕೃತಧರ್ಮಹೇತುತ್ವೇ ಜ್ಞಾನಸ್ಯ ಇತಿ ಚೇತ್ । ನ । ನಿಮಿತ್ತವಿಕಲ್ಪಸಮುಚ್ಚಯಗುಣವದಗುಣವತ್ತ್ವಭೇದೋಪಪತ್ತೇಃ। ಲೋಕೇ ಹಿ ನೈಮಿತ್ತಿಕಾನಾಂ ಕಾರ್ಯಾಣಾಂ ನಿಮಿತ್ತಭೇದೋಽನೇಕಧಾ ವಿಕಲ್ಪ್ಯತೇ । ತಥಾ ನಿಮಿತ್ತಸಮುಚ್ಚಯಃ । ತೇಷಾಂ ಚ ವಿಕಲ್ಪಿತಾನಾಂ ಸಮುಚ್ಚಿತಾನಾಂ ಚ ಪುನರ್ಗುಣವದಗುಣವತ್ತ್ವಕೃತೋ ಭೇದೋ ಭವತಿ । ತದ್ಯಥಾ ರೂಪಜ್ಞಾನೇ ಏವ ತಾವತ್ ನೈಮಿತ್ತಿಕೇ ಕಾರ್ಯೇ ತಮಸಿ ವಿನಾ ಆಲೋಕೇನ ಚಕ್ಷೂರೂಪಸಂನಿಕರ್ಷೋ ನಕ್ತಂಚರಾಣಾಂ ರೂಪಜ್ಞಾನೇ ನಿಮಿತ್ತಂ ಭವತಿ । ಮನ ಏವ ಕೇವಲಂ ರೂಪಜ್ಞಾನನಿಮಿತ್ತಂ ಯೋಗಿನಾಮ್ ।ಅಸ್ಮಾಕಂ ತು ಸಂನಿಕರ್ಷಾಲೋಕಾಭ್ಯಾಂ ಸಹ। ತಥಾ ಆದಿತ್ಯಚನ್ದ್ರಾದ್ಯಾ

---

1. ವಾಕ್ಯದ ಕೊನೆಯಲ್ಲಿ 'ಇತಿ ಚೇತ್' ಎಂದಿರುವದರಿಂದ ಇದು ಇಲ್ಲಿಲ್ಲದಿದ್ದರೂ ಸಾಗುತ್ತಿತ್ತು.

ಲೋಕಭೇದೈಃ ಸಮುಚ್ಚಿತಾ ನಿಮಿತ್ತಭೇದಾ ಭವನ್ತಿ। ತಥಾ ಆಲೋಕವಿಶೇಷ ಗುಣವದಗುಣವತ್ತ್ವೇನ ಭೇದಾಃ ಸ್ಯುಃ। ಏವಮೇವ ಆತ್ಮೈಕತ್ವಜ್ಞಾನೇಽಪಿ ಕ್ವಚಿತ್ ಜನ್ಮಾನ್ತರಕೃತಂ ಕರ್ಮ ನಿಮಿತ್ತಂ ಭವತಿ। ಯಥಾ ಪ್ರಜಾಪತೇಃ। ಕ್ವಚಿತ್ ತಪೋ ನಿಮಿತ್ತಮ್। "ತಪಸಾ ಬ್ರಹ್ಮ ವಿಜಿಜ್ಞಾಸಸ್ವ" (ತೈ. ೩-೨) ಇತಿ ಶ್ರುತೇಃ। ಕ್ವಚಿತ್[1] "ಆಚಾರ್ಯವಾನ್ ಪುರುಷೋ ವೇದ" (ಛಾಂ. ೬-೧೪-೨) "ಶ್ರದ್ಧಾವಾಲ್ಲಭತೇ ಜ್ಞಾನಮ್" (ಗೀ. ೪-೩೯), "ತದ್ವಿದ್ಧಿ ಪ್ರಣಿಪಾತೇನ" (ಗೀ. ೪-೩೪), "ಆಚಾರ್ಯಾದ್ಧೈವ" (ಛಾಂ. ೪-೯-೩) "ದ್ರಷ್ಟವ್ಯಃ ಶ್ರೋತವ್ಯಃ" (೨-೪-೫, ೪-೫-೬) ಇತ್ಯಾದಿಶ್ರುತಿಸ್ಮೃತಿಭ್ಯಃ ಏಕಾನ್ತಜ್ಞಾನಲಾಭನಿಮಿತ್ತತ್ವಂ ಶ್ರದ್ಧಾಪ್ರಭೃತೀನಾಮ್। ಅಧರ್ಮಾದಿನಿಮಿತ್ತವಿಯೋಗಹೇತುತ್ವಾತ್। ವೇದಾನ್ತ ಶ್ರವಣಮನನನಿದಿಧ್ಯಾಸನಾನಾಂ ಚ ಸಾಕ್ಷಾಜ್ಜ್ಞೇಯವಿಷಯತ್ವಾತ್। ಪಾಪಾದಿ ಪ್ರತಿಬನ್ಧಕ್ಷಯೇ ಚ ಆತ್ಮಮನಸೋಃ ಭೂತಾರ್ಥಜ್ಞಾನನಿಮಿತ್ತಸ್ವಾಭಾವ್ಯಾತ್। ತಸ್ಮಾತ್ ಅಹೇತುತ್ವಂ ನ ಜಾತು ಜ್ಞಾನಸ್ಯ ಶ್ರದ್ಧಾಪ್ರಣಿಪಾತಾದೀನಾಮ್ ಇತಿ ||

(ಭಾಷ್ಯಾರ್ಥ)

(ಆಕ್ಷೇಪ):—ಇವು ಸಹಸಿದ್ಧವಾದರೆ (ಅವನಿಗೆ) ಭಯವು ಯುಕ್ತವಾಗುವದಿಲ್ಲವಲ್ಲ! ಸೂರ್ಯನೊಡನೆ ಕತ್ತಲೆಯು ಹುಟ್ಟಲಾರದಲ್ಲವೆ?[2]

(ಪರಿಹಾರ):—ಹಾಗಲ್ಲ. ಏಕೆಂದರೆ ಸಹಸಿದ್ಧ(ವಾಗಿವೆ) ಎಂಬ ವಾಕ್ಯಕ್ಕೆ ಮತ್ತೊಬ್ಬರಿಂದ ಉಪದಿಷ್ಟವಾಗದೆ ಇದ್ದರೂ (ಜ್ಞಾನವು) ಉಂಟಾಗುವದು ಎಂದು ಅರ್ಥ.

(ಆಕ್ಷೇಪ):—ಶ್ರದ್ಧೆ, ತಾತ್ಪರ್ಯ, ಪ್ರಣಿಪಾತ– ಮುಂತಾದವುಗಳು ಹೇತುವೆಂದಾಗುವದಿಲ್ಲವಲ್ಲ! (ಇದರ ವಿವರ): ಪ್ರಜಾಪತಿಗೆ ಹೇಗೋ ಹಾಗೆ ಜನ್ಮಾಂತರದಲ್ಲಿ ಮಾಡಿದ ಧರ್ಮವೇ ಜ್ಞಾನಕ್ಕೆ ಹೇತುವೆಂದಾದರೆ, "ಶ್ರದ್ಧೆಯುಳ್ಳವನೂ ತತ್ಪರನೂ ಸಂಯತೇಂದ್ರಿಯನೂ ಆದವನಿಗೆ ಜ್ಞಾನವು ದೊರಕುತ್ತದೆ" (ಗೀ. ೪-೩೯), "ಅದನ್ನು ಪ್ರಣಿಪಾತದಿಂದ (ಅರಿತುಕೊ)" (ಗೀ. ೪-೩೪) ಎಂಬಿವೇ ಮುಂತಾದ ಶ್ರುತಿಸ್ಮೃತಿವಿಹಿತವಾದ ಜ್ಞಾನಹೇತುಗಳು ಹೇತುವಲ್ಲವೆಂದೇ ಆಗುವದಲ್ಲ?

(ಪರಿಹಾರ):—ಹಾಗಲ್ಲ. ಏಕೆಂದರೆ ನಿಮಿತ್ತಗಳಲ್ಲಿ ವಿಕಲ್ಪವೂ ಸಮುಚ್ಚಯವೂ, ಗುಣವತ್ತ್ವ, ಅಗುಣವತ್ತ್ವ– ಎಂಬ ಭೇದವೂ ಇರಬಹುದಾಗಿದೆ.

1. ಈ ಶಬ್ದವು ಇಲ್ಲಿ ಬೇಕಿಲ್ಲವೆಂದು ತೋರುತ್ತದೆ.

2. ಸಹಸಿದ್ಧವೆಂದರೆ ಜೊತೆಯಲ್ಲಿಯೇ ಇದ್ದುಕೊಂಡಿರುವ ಹುಟ್ಟುಗುಣವು. ಜ್ಞಾನಾದಿಗಳು ಹುಟ್ಟುಗುಣವಾದರೆ ಅಜ್ಞಾನವು ಅದರ ಜೊತೆಯಲ್ಲಿಯೇ ಇರುವದು ಹೇಗೆ?

(ಇದರ ವಿವರ) : ಲೋಕದಲ್ಲಿ ನಿಮಿತ್ತಗಳಿಂದಾಗುವ ಕಾರ್ಯಗಳಿಗೆ ನಿಮಿತ್ತಗಳಲ್ಲಿ ಭೇದವು ವಿಕಲ್ಪದಿಂದ ಅನೇಕಪ್ರಕಾರವಾಗಿರಬಹುದೆಂದು (ಕಂಡುಬರುತ್ತದೆ); ಅದರಂತೆ ನಿಮಿತ್ತಗಳ ಸಮುಚ್ಚಯವೂ (ಕಂಡುಬರುತ್ತದೆ). ಮತ್ತು ಬೇರೆ ಬೇರೆಯಾಗಿರುವಲ್ಲಿಯೂ ಸಮುಚ್ಚಿತವಾಗಿರುವಲ್ಲಿಯೂ ಆ (ನಿಮಿತ್ತಗಳಲ್ಲಿ) ಗುಣವತ್ತ್ವ, ಅಗುಣವತ್ತ್ವ– ಇವುಗಳಿಂದಾದ ಭೇದವೂ ಇರುತ್ತದೆ. ಅದು ಹೇಗೆಂದರೆ, ಮೊದಲನೆಯದಾಗಿ ನೈಮಿತ್ತಿಕಕಾರ್ಯವಾದ ರೂಪಜ್ಞಾನದಲ್ಲಿಯೇ (ನೋಡಿರಿ) : ಕತ್ತಲೆಯಲ್ಲಿ ಬೆಳಕು ಇಲ್ಲದೆಯೇ ಚಕ್ಷುರಿಂದ್ರಿಯಕ್ಕೂ ರೂಪಕ್ಕೂ ಸಂನಿಕರ್ಷ(ವೊಂದೇ) ಕತ್ತಲೆಯಲ್ಲಿ ಸಂಚರಿಸುವ (ಪ್ರಾಣಿಗಳಿಗೆ) ರೂಪಜ್ಞಾನಕ್ಕೆ ನಿಮಿತ್ತವಾಗುವದು ; **ಯೋಗಿಗಳಿಗೆ** ಬರಿಯ ಮನಸ್ಸೇ ನಿಮಿತ್ತವಾಗುವದು[1] ; ನಮ್ಮಗಳಿಗೋ ಎಂದರೆ ಸಂನಿಕರ್ಷ, ಬೆಳಕು– ಇವುಗಳೊಡನೆ ಹಾಗೂ ಸೂರ್ಯ ಚಂದ್ರರೇ ಮುಂತಾದವುಗಳ ಬೆಳಕಿನ ವಿಶೇಷಗಳೊಡನೆ ಸಮುಚ್ಚಿತವಾದ ಬೇರೆ ಬೇರೆಯ ನಿಮಿತ್ತಗಳಿರುವವು. ಇದರಂತೆ (ಈ) ಬೇರೆಬೇರೆಯ ಬೆಳಕುಗಳ ಗುಣವತ್ತ್ವ, ಅಗುಣವತ್ತ್ವ– ಇವುಗಳಿಂದಲೂ (ಬೇರೆಬೇರೆಯ) ನಿಮಿತ್ತಗಳಿರುವವು. ಇದರಂತೆಯೇ ಆತ್ಮೈಕತ್ವಜ್ಞಾನಕ್ಕೂ ಒಂದೊಂದು ಕಡೆಯಲ್ಲಿ ಪ್ರಜಾಪತಿಗೆ ಆದಂತೆ ಜನ್ಮಾಂತರದಲ್ಲಿ ಮಾಡಿದ **ಕರ್ಮವು** ನಿಮಿತ್ತವಾಗುತ್ತದೆ. ಒಂದೊಂದು ಕಡೆಯಲ್ಲಿ **ತಪಸ್ಸು** ನಿಮಿತ್ತವಾಗುತ್ತದೆ ; "ತಪಸ್ಸಿನಿಂದ ಬ್ರಹ್ಮವನ್ನು ಅರಿಯಲಿಚ್ಛಿಸು" (ತೈ. ೩-೨) ಎಂಬ ಶ್ರುತಿಯ (ಪ್ರಮಾಣ)ದಿಂದ (ಹೀಗೆಂದು ನಿಶ್ಚಯಿಸಬಹುದು). ಒಂದೊಂದು ಕಡೆಯಲ್ಲಿ "ಆಚಾರ್ಯನನ್ನುಳ್ಳ ಪುರುಷನೇ ಅರಿತುಕೊಳ್ಳುವನು" (ಛಾಂ. ೬-೧೪-೨), "ಶ್ರದ್ಧೆಯುಳ್ಳವನಿಗೆ ಜ್ಞಾನವು ದೊರಕುವದು" (ಗೀ. ೪-೩೯), "ಅದನ್ನು ಪ್ರಣಿಪಾತದಿಂದ ಅರಿತುಕೊ" (ಗೀ. ೪-೩೪), "ಆಚಾರ್ಯನಿಂದಲೇ (ಬಂದ ಜ್ಞಾನವು ಸಾಧಕತಮವಾಗುವದು)" (ಛಾಂ. ೪-೯-೩), "(ಆತ್ಮನನ್ನೇ) ಕಂಡುಕೊಳ್ಳತಕ್ಕದ್ದು) ; ಕೇಳತಕ್ಕದ್ದು" (೨-೪-೫, ೪-೫-೬) ಎಂದು (ಮುಂತಾಗಿರುವ) ಶ್ರುತಿಸ್ಮೃತಿಗಳಿಂದ ಶ್ರದ್ಧೆಯೇ ಮುಂತಾದವುಗಳು ಜ್ಞಾನಪ್ರಾಪ್ತಿಗೆ ನಿಯತವಾದ ನಿಮಿತ್ತಗಳಾಗಿರುವವು. ಏಕೆಂದರೆ (ಅವು) ಅಧರ್ಮವೇ ಮುಂತಾದ (ಪ್ರತಿಬಂಧಕ) ನಿಮಿತ್ತಗಳು ಹೋಗುವದಕ್ಕೆ ಕಾರಣವಾಗಿರುತ್ತವೆ. ವೇದಾಂತಶ್ರವಣಮನನ ನಿದಿಧ್ಯಾಸನಗಳಂತು ನೇರಾಗಿ ಜ್ಞೇಯವಾದ (ಬ್ರಹ್ಮದ) ವಿಷಯವಾದವುಗಳೇ ಆಗಿರುತ್ತವೆಯಾದ್ದರಿಂದ (ಅವೂ ನಿಮಿತ್ತವಾಗಿರುತ್ತವೆ).[2] ಪಾಪವೇ ಮುಂತಾದ

---

1. ಯೋಗಿಪ್ರತ್ಯಕ್ಷಕ್ಕೆ ಇಂದ್ರಿಯಗಳು ಬೇಕಿಲ್ಲವೆಂದು ನಂಬಿಕೆಯಿದೆ.

2. ಶ್ರದ್ಧಾಪ್ರಣಿಪಾತಾದಿಗಳು ಅಧರ್ಮಾದಿಗಳನ್ನು ಕಳೆಯುವ ಮೂಲಕ ಪರಂಪರಾ ಸಾಧನಗಳು, ಶ್ರವಣಾದಿಗಳು ವಸ್ತುವನ್ನು ಬೆಳಗುವದರಿಂದ ನೇರಾಗಿಯೇ ಸಾಧನಗಳು.

ಪ್ರತಿಬಂಧಗಳು ಸವೆಯಲು ಆತ್ಮಮನಸ್ಸುಗಳು ಸಿದ್ಧವಸ್ತುವನ್ನು ತಿಳಿಸಿಕೊಡುವ ನಿಮಿತ್ತವಾಗಿರುವದು ಸ್ವಾಭಾವಿಕವಾಗಿರುತ್ತದೆಯಾದ್ದರಿಂದಲೂ[1] (ಹೀಗೆಂದು ತಿಳಿಯಬೇಕು). ಆದ್ದರಿಂದ ಶ್ರದ್ಧಾಪ್ರಣಿಪಾತಾದಿಗಳು ಜ್ಞಾನಕ್ಕೆ ಹೇತುವಾಗುವದಿಲ್ಲ ಎಂಬುದು ಎಂದಿಗೂ ಇಲ್ಲ.[2]

## ಪ್ರಜಾಪತಿಯು ಮನುವನ್ನೂ ಶತರೂಪೆಯನ್ನೂ ಸೃಷ್ಟಿಸಿದ್ದು

(ಉಪನಿಷತ್ತು)

**ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಗ್ಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಽಪಾತಯತ್ ತತಃ ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಽಹ ಯಾಜ್ಞವಲ್ಕ್ಯಸ್ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ ತಾಗ್ಂ ಸಮಭವತ್ತತೋ ಮನುಷ್ಯಾ ಅಜಾಯನ್ತ ॥ ೩ ॥**

೩. ಅವನು ರಮಿಸಲೇ ಇಲ್ಲ. ಆದ್ದರಿಂದ ಒಂಟಿಗನು ಸುಖಿಯಾಗಿರುವದಿಲ್ಲ. ಅವನು ಎರಡನೆಯದನ್ನು ಬಯಸಿದನು. ಅವನು ಸಂಪರಿಷ್ವಕ್ತರಾದ ಸ್ತ್ರೀಪುರುಷರಿರುವರಲ್ಲ, ಅಷ್ಟಾದನು. ಅವನು ಇದೇ ಆತ್ಮವನ್ನ ಎರಡು ಪಾಲಾಗಿ ಕೆಡಹಿದನು. ಅದರಿಂದ ಪತಿಯೂ ಪತ್ನಿಯೂ ಆದರು. ಆದ್ದರಿಂದ ಇದು ತನ್ನ ಅರ್ಧಬೃಗಲದಂತೆ (ಇರುವದು) ಎಂದು

---

1. ಆತ್ಮಚೈತನ್ಯದ ಬೆಳಕಿನಿಂದಲೇ ಎಲ್ಲವೂ ಬೆಳಗುವದರಿಂದಲೂ ಆತ್ಮಚೈತನ್ಯದ ಪ್ರಾಪ್ತಿಯಿಂದ ವಸ್ತುವನ್ನು ಬೆಳಗುವದು ಮನಸ್ಸಿಗೆ ಸ್ವಭಾವವಾಗಿರುವದರಿಂದಲೂ ಆತ್ಮಮನಸ್ಸುಗಳು ಜ್ಞಾನಕ್ಕೆ ಸಾಧಾರಣಕಾರಣವು ; ಪಾಪಾದಿಪ್ರತಿಬಂಧಕವಿದ್ದರೆ ಅವುಗಳ ಸ್ವಭಾವವು ತೋರಿಕೊಳ್ಳಬಾರದಾದ್ದರಿಂದ ಪ್ರತಿಬಂಧಕವನ್ನು ತೊಲಗಿಸುವದಕ್ಕೆ ವಿಶೇಷಕಾರಣಗಳೂ ಬೇಕು.

2. ಈ ಸಂದರ್ಭದಲ್ಲಿ ಪ್ರಜಾಪತಿಗೆ ಆದ ಜ್ಞಾನವು ವಿರಾಡೈಕ್ಯಜ್ಞಾನವೆಂದೂ ಭಯ, ಅರತಿ, ಇಚ್ಛೆ- ಮುಂತಾದವುಗಳು ಅವಿದ್ಯೆಯ ಗುರುತುಗಳಾದ್ದರಿಂದ ಇಲ್ಲಿ ಅಪ್ರಕೃತವಾದ ಆತ್ಮೈಕ್ಯಜ್ಞಾನವನ್ನು ಪ್ರಸ್ತಾಪಿಸಲು ಕಾರಣವಿಲ್ಲವೆಂದೂ ವಾರ್ತಿಕಕಾರರು ಒಂದು ಪಕ್ಷವನ್ನು ಬರೆದಿದಾರೆ. ಆದರೆ ಅದು ಪೂರ್ವಪಕ್ಷವೆಂದು ಟೀಕೆಯಲ್ಲಿದೆ.

ಯಾಜ್ಞವಲ್ಕ್ಯನು ಹೇಳಿದನು. ಆದ್ದರಿಂದ ಈ ಆಕಾರವು ಸ್ತ್ರೀಯಿಂದಲೇ ಪೂರ್ಣವಾಗುತ್ತದೆ. ಆಕೆಯೊಡನೆ ಬೆರೆತನು; ಅದರಿಂದ ಮನುಷ್ಯರು ಹುಟ್ಟಿದರು.

## ಪ್ರಜಾಪತಿಗೆ ಬೇಸರವಾದದ್ದು

(ಭಾಷ್ಯ)

೧೦೬. ಇತಶ್ಚ ಸಂಸಾರವಿಷಯ ಏವ ಪ್ರಜಾಪತಿತ್ವಮ್। ಯತಃ ಸ ಪ್ರಜಾಪತಿಃ ನೈವ ರೇಮೇ ರತಿಂ ನಾನ್ವಭವತ್ ಅರತ್ಯಾವಿಷ್ಟೋಽಭೂತ್ ಇತ್ಯರ್ಥೋಽಸ್ಮದಾದಿವದೇವ। ಯತಃ ಇದಾನೀಮಪಿ ತಸ್ಮಾತ್ ಏಕಾಕಿತ್ವಾದಿ ಧರ್ಮವತ್ತ್ವಾತ್ ಏಕಾಕೀ ನ ರಮತೇ ರತಿಂ ನಾನುಭವತಿ। ರತಿರ್ನಾಮ ಇಷ್ಟಾರ್ಥ ಸಂಯೋಗಜಾ ಕ್ರೀಡಾ। ತತ್ಪ್ರಸಙ್ಗಿನ ಇಷ್ಟವಿಯೋಗಾತ್ ಮನಸಿ ಆಕುಲೀಭಾವಃ ಅರತಿರಿತ್ಯುಚ್ಯತೇ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಪ್ರಜಾಪತಿತ್ವವು ಸಂಸಾರವಿಷಯವೇ. ಏಕೆಂದರೆ ಆ ಪ್ರಜಾಪತಿಯು ರಮಿಸಲೇ ಇಲ್ಲ; ರತಿಯನ್ನು ಅನುಭವಿಸಲಿಲ್ಲ, ಬೇಸರದಿಂದ ತುಂಬಿದ್ದನು[1] ಎಂದರ್ಥ. ನಮ್ಮಂಥವರಂತೆಯೇ ಅವನು (ಬೇಸರವನ್ನು ಹೊಂದಿದ್ದನೆಂದು ಗೊತ್ತಾಗುತ್ತದೆ). ಏಕೆಂದರೆ ಈಗಲೂ ಒಂಟಿಗನಾಗಿರುವದು ಮುಂತಾದ ಧರ್ಮವುಳ್ಳವನಾಗಿರುವದರಿಂದ ಒಂಟಿಗನು ರಮಿಸುವದಿಲ್ಲ, ರತಿಯನ್ನು ಅನುಭವಿಸುವದಿಲ್ಲ.[2] ರತಿ ಎಂದರೆ ಬೇಕಾದ ವಸ್ತುವಿನ ಸಂಬಂಧದಿಂದ ಆಗುವ ಕ್ರೀಡೆಯು. ಆ (ಕ್ರೀಡೆಯಲ್ಲಿ) ಪ್ರಸಕ್ತನಾದವನಿಗೆ ಇಷ್ಟವಸ್ತುವಿನ ಅಗಲುವಿಕೆಯಿಂದ ಮನಸ್ಸಿನಲ್ಲಿ (ಆಗುವ) ಕಳವಳವು ಅರತಿಯೆನಿಸುತ್ತದೆ.

## ಪ್ರಜಾಪತಿಯು ಮನುಷ್ಯರನ್ನು ಹುಟ್ಟಿಸಿದ್ದು

(ಭಾಷ್ಯ)

೧೦೭. ಸ ತಸ್ಯಾಃ ಅರತೇಃ ಅಪನೋದಾಯ ದ್ವಿತೀಯಮ್ ಅರತ್ಯಪಘಾತಸಮರ್ಥಂ ಸ್ತ್ರೀವಸ್ತು ಐಚ್ಛತ್ ಗೃದ್ಧಿಮ್ ಅಕರೋತ್। ತಸ್ಯ ಚ ಏವಂ

---

1. ತಾನು ಒಂಟಿಯಾಗಿರುವದರಿಂದಲೂ ತನ್ನ ಒಂಟಿಗತನವನ್ನು ಕಳೆದು ತನ್ನನ್ನು ಪೂರ್ಣಮಾಡುವ ಅರ್ಧವಾದ ಸ್ತ್ರೀವಸ್ತುವಿಲ್ಲದ್ದರಿಂದಲೂ.

2. ಆದ್ದರಿಂದ ಪ್ರಜಾಪತಿಯೂ ಹಾಗೆ ಅರತಿಯನ್ನು ಹೊಂದಿದ್ದನು ಎಂದು ಕಲ್ಪಿಸಬಹುದು ಎಂದರ್ಥ.—ಕಾರ್ಯಲಿಂಗಗಳಿಂದ ಕಾರಣವನ್ನು ಅನುಮಾನಿಸುವ ತಾರ್ಕಿಕರ ವಾದಗಳಿಗೆ ಈ ಶ್ರುತಿಯೇ ಮೂಲವು ಎಂದು **ವಾರ್ತಿಕ.**

ಸ್ತ್ರೀವಿಷಯಃ ಗೃಧ್ಯತಃ ಸ್ತ್ರಿಯಾ ಪರಿಷ್ವಕ್ತಸ್ಯೇವ ಆತ್ಮನೋ ಭಾವೋ ಬಭೂವ। ಸ ತೇನ ಸತ್ಯೇಪ್ಸುತ್ವಾತ್ ಏತಾವಾನ್ ಏತತ್ಪರಿಮಾಣ ಆಸ ಬಭೂವ ಹ। ಕಿಂ ಪರಿಮಾಣ ಇತಿ ? ಆಹ। ಯಥಾ ಲೋಕೇ ಸ್ತ್ರೀಪುಮಾಂಸೌ ಅರತ್ಯಪನೋದಾಯ ಸಂಪರಿಷ್ವಕ್ತೌ ಯತ್ಪರಿಮಾಣೌ ಸ್ಯಾತಾಂ ತಥಾ ತತ್ಪರಿಮಾಣೋ ಬಭೂವ ಇತ್ಯರ್ಥಃ। ಸ ತಥಾ ತತ್ಪರಿಮಾಣಮೇವ ಇಮಂ ಆತ್ಮಾನಂ ದ್ವೇಧಾ ದ್ವಿಪ್ರಕಾರಂ ಅಪಾತಯತ್ ಪಾತಿತವಾನ್ ಇಮಮೇವ ಇತಿ ಅವಧಾರಣಂ ಮೂಲಕಾರಣಾತ್ ವಿರಾಜೋ ವಿಶೇಷಣಾರ್ಥಮ್। ನ ಕ್ಷೀರಸ್ಯ ಸರ್ವೋಪಮರ್ದೇನ ದಧಿಭಾವಾಪತ್ತಿವತ್ ವಿರಾಟ್ ಸರ್ವೋಪಮರ್ದೇನ ಏತಾವಾನ್ ಆಸ। ಕಿಂ ತರ್ಹಿ ಆತ್ಮನಾ ವ್ಯವಸ್ಥಿತಸ್ಯೈವ ವಿರಾಜಃ ಸತ್ಯಸಂಕಲ್ಪತ್ವಾತ್ ಆತ್ಮವ್ಯತಿರಿಕ್ತಂ ಸ್ತ್ರೀಪುಂಸಪರಿಷ್ವಕ್ತಪರಿಮಾಣಂ, ಶರೀರಾನ್ತರಂ ಬಭೂವ। ಸ ಏವ ಚ ವಿರಾಟ್ ತಥಾಭೂತಃ ಸ ಹೈತಾವಾನಾಸ ಇತಿ ಸಾಮಾನಾಧಿಕರಣ್ಯಾತ್। ತತಃ ತಸ್ಮಾತ್ ಪಾತನಾತ್ ಪತಿಶ್ಚ ಪತ್ನೀ ಚ ಅಭವತಾಮ್ ಇತಿ ದಂಪತ್ಯೋರ್ನಿರ್ವಚನಂ ಲೌಕಿಕಯೋಃ। ಅತ ಏವ ತಸ್ಮಾತ್ ಯಸ್ಮಾತ್ ಆತ್ಮನ ಏವಾರ್ಧಃ ಪೃಥಗ್ಭೂತೋ ಯೇಯಂ ಸ್ತ್ರೀ ತಸ್ಮಾತ್ ಇದಂ ಶರೀರಮ್ ಆತ್ಮನಃ ಅರ್ಧಬೃಗಲಮಿವ[1] ಅರ್ಧಂ ಚ ತದ್ ಬೃಗಲಂ ಚ ವಿದಲಮ್ ತತ್ ಅರ್ಧಬೃಗಲಮ್। ಅರ್ಧವಿದಲಮಿವ ಇತ್ಯರ್ಥಃ। ಪ್ರಾಕ್ ಸ್ತ್ರ್ಯುದ್ವಹನಾತ್ ಕಸ್ಯಾರ್ಧಬೃಗಲಮಿತಿ ? ಉಚ್ಯತೇ। ಸ್ವಃ ಆತ್ಮನಃ। ಇತಿ ಏವಮ್ ಆಹ ಸ್ಮ ಉಕ್ತವಾನ್ ಕಿಲ ಯಾಜ್ಞವಲ್ಕ್ಯಃ। ಯಜ್ಞಸ್ಯ ವಲ್ಕಃ ವಕ್ತಾ ಯಜ್ಞವಲ್ಕಃ। ತಸ್ಯಾಪತ್ಯಂ ಯಾಜ್ಞವಲ್ಕ್ಯೋ ದೈವರಾತಿಃ ಇತ್ಯರ್ಥಃ। ಬ್ರಹ್ಮಣೋ ವಾ ಅಪತ್ಯಮ್। ಯಸ್ಮಾತ್ ಅಯಂ ಪುರುಷಾರ್ಧಃ ಆಕಾಶಃ ಸ್ತ್ರ್ಯರ್ಧಶೂನ್ಯಃ ಪುನರುದ್ವಹನಾತ್ ತಸ್ಮಾತ್ ಪೂರ್ಯತೇ ಸ್ತ್ರ್ಯರ್ಧೇನ ಪುನಃ ಸಂಪುಟೀಕರಣೇನೇವ ವಿದಲಾರ್ಧಃ। ತಾಂ ಸ ಪ್ರಜಾಪತಿರ್ಮನ್ವಾಖ್ಯಃ ಶತರೂಪಾಖ್ಯಾಮ್ ಆತ್ಮನೋ ದುಹಿತರಂ ಪತ್ನೀತ್ವೇನ ಕಲ್ಪಿತಾಂ ಸಮಭವತ್ ಮೈಥುನಮುಪಗತವಾನ್। ತತಃ ತಸ್ಮಾದುಪಗಮನಾತ್ ಮನುಷ್ಯಾ ಅಜಾಯನ್ತ ಉತ್ಪನ್ನಾಃ ॥

(ಭಾಷ್ಯಾರ್ಥ)

ಆ (ಪ್ರಜಾಪತಿಯು) ಆ ಅರತಿಯನ್ನು ತೊಲಗಿಸಿಕೊಳ್ಳುವದಕ್ಕಾಗಿ[2] ಅರತಿಯನ್ನು ಕಳೆಯಬಲ್ಲ ಎರಡನೆಯದನ್ನು ಸ್ತ್ರೀವಸ್ತುವನ್ನು ಬಯಸಿದನು, (ಆದರ)

---

1. ಈ ವಾಕ್ಯದ ಪಾಠವನ್ನು ಸ್ವಲ್ಪ ತಿದ್ದಿಕೊಂಡಿದೆ.

2. ಏಕತ್ವಜ್ಞಾನವುಂಟಾದವನಿಗೆ ಅರತ್ಯಾದಿಗಳು ಉಂಟಾಗಬಾರದಲ್ಲ ಎಂಬ ಶಂಕೆಗೆ ಆಧಿಕಾರಿಕಪುರುಷರಂತೆ ಅವನಿಗೂ ಆಗಬಹುದು ಎಂಬ ಸಮಾಧಾನವನ್ನು ವಾರ್ತಿಕದಲ್ಲಿ ಕೊಟ್ಟಿದೆ.

ಆಶೆಯನ್ನು ಮಾಡಿದನು.[1] ಹೀಗೆ ಸ್ತ್ರೀವಿಷಯವನ್ನು ಆಶಿಸಿದ ಆ (ಪ್ರಜಾಪತಿಗೆ) ತಾನು ಸ್ತ್ರೀಯಿಂದ ಆಲಿಂಗಿತನಾದಂತೆ ಭಾವವುಂಟಾಯಿತು. ಅದರಿಂದ ಅವನು ಸತ್ಯಕಾಮನಾದ್ದರಿಂದ ಅಷ್ಟಾದನು. ಎಷ್ಟು ಪರಿಮಾಣದವ(ನಾದನು)? ಎಂದರೆ (ಶ್ರುತಿ) ಹೇಳುತ್ತದೆ. ಲೋಕದಲ್ಲಿ ಸ್ತ್ರೀಪುರುಷರು ಅರತಿಯನ್ನು ಕಳೆದುಕೊಳ್ಳುವದಕ್ಕಾಗಿ (ಒಬ್ಬರನ್ನೊಬ್ಬರು) ಆಲಿಂಗಿಸಿಕೊಂಡವರು ಎಷ್ಟು ಪರಿಮಾಣದವರಾಗುವರೋ ಅಷ್ಟು, ಅಷ್ಟು ಪರಿಮಾಣದವನು, ಆದನು ಎಂದರ್ಥ. ಅವನು ಅಷ್ಟು, ಅಷ್ಟು ಪರಿಮಾಣವುಳ್ಳದ್ದಾಗಿದ್ದ ಈ ಆತ್ಮವನ್ನೇ[2] ಎರಡು ಪಾಲಾಗಿ ಎರಡು ಪ್ರಕಾರವುಳ್ಳದ್ದನ್ನಾಗಿ ಕೆಡಹಿದನು, ಬೀಳಿಸಿದನು. 'ಈ ಆತ್ಮವನ್ನೇ' ಎಂದು ಒತ್ತಿ ಹೇಳಿರುವದು ಮೂಲಕಾರಣನಾದ ವಿರಾಜನಿಗಿಂತ ಬೇರೆ ಎಂದು ತಿಳಿಸುವದಕ್ಕೆ. ಹಾಲು ಎಲ್ಲವೂ ನಾಶವಾಗಿ ಮೊಸರಾಗುವಂತೆ ವಿರಾಜನು (ತಾನು) ಎಲ್ಲವೂ ನಾಶವಾಗಿ ಇಷ್ಟಾಗಲಿಲ್ಲ; ಮತ್ತೇನೆಂದರೆ ವಿರಾಜನು ತನ್ನ ರೂಪದಲ್ಲಿದ್ದುಕೊಂಡೇ ಇರಲು, ಸತ್ಯಸಂಕಲ್ಪನಾದ್ದರಿಂದ[3] (ಅವನಿಗೆ) ತನಗಿಂತ ಬೇರೆಯಾದ, ಸ್ತ್ರೀಪುರುಷರು (ಒಬ್ಬರನ್ನೊಬ್ಬರು) ಆಲಿಂಗಿಸಿಕೊಂಡರೆ (ಆಗುವ) ಪರಿಮಾಣದ ಮತ್ತೊಂದು ಶರೀರವಾಯಿತು. ಅದೇ ವಿರಾಜನೇ ಅಷ್ಟು ಪರಿಮಾಣದವನಾದನು; ಏಕೆಂದರೆ "ಅವನು ಅಷ್ಟಾದನು" ಎಂದು ಸಾಮಾನಾಧಿಕರಣ್ಯದಿಂದ (ಶ್ರುತಿ ಹೇಳಿದೆ)[4]

ಅದರಿಂದ ಹಾಗೆ ಕೆಡಹಿದ್ದರಿಂದ ಪತಿಯೂ ಪತ್ನಿಯೂ ಆದರು ಎಂಬುದು ಲೋಕದ ದಂಪತಿಗಳ ನಿರ್ವಚನವು. ಆದ್ದರಿಂದಲೇ ಆ ಕಾರಣದಿಂದಲೇ– ಈ ಸ್ತ್ರೀ ಎಂಬುವಳು ಬೇರೆಯಾಗಿ (ವಿಂಗಡಿಸಿಕೊಂಡಿ)ರುವ ತನ್ನದೇ ಅರ್ಧವಾಗಿರುವಳಷ್ಟೆ, ಆ ಕಾರಣದಿಂದಲೇ– ಈ ಶರೀರವು ತನ್ನ ಅರ್ಧಬೃಗಲದಂತೆ ಅರ್ಧವಾಗಿರುವ ಬೃಗಲವು ಅರ್ಧಬೃಗಲವು, ಬೇಳೆಯು– ಬೇಳೆಯಂತೆ ಎಂದರ್ಥ;

---

1. ಆದ್ದರಿಂದ ಪ್ರಜಾಪತಿಗೆ ಅವಿದ್ಯೆಯಿತ್ತು ಎಂದಾಯಿತು. **ವಾರ್ತಿಕ.**

2. ಈ ಶರೀರವನ್ನೇ ಎಂದರ್ಥ.

3. ವಿರಾಜನ ಮಾನಸಸೃಷ್ಟಿಯಿಂದ ಮನುಶತರೂಪೆಯರು ಆದರು.

4. ಅವನು ಎಂದರೆ ವಿರಾಜನು 'ಅಷ್ಟಾದನು' ಎಂದರೆ ಸ್ತ್ರೀಪುರುಷರು ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡಷ್ಟಾದನು ಎಂದು ಒಬ್ಬನಿಗೇ ಹೇಳಿರುವದರಿಂದ ವಿರಾಡ್ರೂಪದಿಂದ ಇರುವ ಪ್ರಜಾಪತಿಯೂ ಸ್ತ್ರೀಪುರುಷರಷ್ಟು ಆದ ಶರೀರವೂ ಒಂದೇ; ಅವನೇ ಆ ಶರೀರಾಂತರವನ್ನು ಸಂಕಲ್ಪಮಾತ್ರದಿಂದ ಮಾಡಿಕೊಂಡನು ಎಂದು ಹೇಳಿದಂತಾಯಿತು. ಮುಂದೆ ಹೇಳುವ ಮನುವಿನ ಸೃಷ್ಟಿಯಂತೆ ಇದು ಸ್ತ್ರೀಪುರುಷರ ಸಂಪರ್ಕದಿಂದಾದ ಸೃಷ್ಟಿಯಲ್ಲ ಎಂಬುದನ್ನು ತಿಳಿಸುವದಕ್ಕೆ 'ಸತ್ಯಸಂಕಲ್ಪನಾದ್ದರಿಂದ' ಎಂಬ ವಿಶೇಷಣವನ್ನು ಭಾಷ್ಯದಲ್ಲಿ ಉಪಯೋಗಿಸಿದೆ.

ಸ್ತ್ರೀಯನ್ನು ಮದುವೆಯಾಗುವ ಮುಂಚೆ ಯಾರ ಅರ್ಧಬೃಗಲವು ? ಎಂದರೆ ತನ್ನ (ಅರ್ಧಬೃಗಲವು). ಎಂದು ಹೀಗೆಂದು ಯಾಜ್ಞವಲ್ಕ್ಯನು-ಯಜ್ಞದ ವಲ್ಕನು ಎಂದರೆ ವಕ್ತೃವು ಯಜ್ಞವಲ್ಕನು ; ಅವನ ಮಗನು ಯಾಜ್ಞವಲ್ಕ್ಯನು-ದೈವ ರಾತಿಯು[1] ಎಂದರ್ಥ. ಅಥವಾ ಬ್ರಹ್ಮನ[2] ಮಗನು- (ಹೇಳಿರುತ್ತಾನೆ). ಈ ಪುರುಷಾರ್ಥವೆಂಬ ಆಕಾಶವು ಸ್ತ್ರೀ ಎಂಬ ಅರ್ಧವಿಲ್ಲದೆ ಇರುವದಷ್ಟೆ, ಆದ್ದರಿಂದ ಮತ್ತೆ ಮದುವೆಯಿಂದ ಆ ಸ್ತ್ರೀಯೆಂಬ (ಅರ್ಧ)ದಿಂದ ಬೇಳೆಯಾಗಿರುವ ಅರ್ಧವು ಮತ್ತೆ ಸಂಪುಟೀಕರಣದಿಂದ (ಪೂರ್ಣವಾಗುವಂತೆ) ಪೂರ್ಣವಾಗುತ್ತದೆ.[3]

ಆಕೆಯನ್ನು (ಆ) **ಶತರೂಪೆ**ಯೆಂಬ ತನ್ನ ಮಗಳನ್ನು ಪತ್ನಿ ಎಂದು ಕಲ್ಪಿಸಿ ಕೊಂಡು ಆ **ಮನು** ಎಂಬ ಪ್ರಜಾಪತಿಯು[4] ಬೆರೆತನು, (ಅವಳ) ಕೂಟವನ್ನು ಹೊಂದಿದನು, ಅದರಿಂದ ಆ ಕೂಟದಿಂದ ಮನುಷ್ಯರು ಹುಟ್ಟಿದರು, ಉಂಟಾದರು.

## ಮನುಶತರೂಪೆಯರಿಂದ ಪ್ರಾಣಿಗಳ ಸೃಷ್ಟಿ

(ಉಪನಿಷತ್ತು)

**ಸೋ ಹೇಯಮೀಕ್ಷಾಂಚಕ್ರೇ ಕಥಂ ನು ಮಾತ್ಮನ ಏವ ಜನಯಿತ್ವಾ ಸಂಭವತಿ ಹನ್ತ ತಿರೋಽಸಾನೀತಿ ಸಾ ಗೌರಭವದೃಷಭ ಇತರ ಸ್ತಾಗ್ಂ ಸಮೇವಾಭವತ್ತತೋ ಗಾವೋಽಜಾಯನ್ತ ವಡವೇತರಾಽ ಭವದಶ್ವವೃಷ ಇತರೋ ಗರ್ದಭೀತರಾ ಗರ್ದಭ ಇತರಸ್ತಾಗ್ಂ ಸಮೇವಾಭವತ್ತತ ಏಕಶಫಮಜಾಯತಾಜೇತರಾಽಭವದ್ವಸ್ತ ಇತರೋಽವಿರಿತರಾ ಮೇಷ ಇತರಸ್ತಾಗ್ಂ ಸಮೇವಾಭವತ್**

---

1. ದೇವರಾತನ ಮಗನು.

2. ಬ್ರಹ್ಮನೇ, ಹಿರಣ್ಯಗರ್ಭನೇ, ಯಜ್ಞವಲ್ಕನು ; ಅವನ ಮಗನು ಯಾಜ್ಞವಲ್ಕ್ಯನು-ಎಂದಾದರೂ ಅರ್ಥವನ್ನು ಹೇಳಬಹುದು. ಏಕೆಂದರೆ ಯಜ್ಞವಿಷಯದಲ್ಲಿ ಬ್ರಹ್ಮನೇ ಮೊದಲು ಪ್ರಜೆಗಳಿಗೆ ಉಪದೇಶಕನು.

3. ಪುರುಷಾರ್ಥವು ಮೊದಲು ಸ್ತ್ರೀಯಿಲ್ಲದೆ ಅಪೂರ್ಣವಾಗಿರುತ್ತದೆ; ಮದುವೆಯಾದ ಬಳಿಕ ಅರ್ಧಾಂಗಿಯಾದ ಸ್ತ್ರೀಯನ್ನು ಸೇರಲು ಪೂರ್ಣವಾಗುತ್ತದೆ ಎಂಬುದು ಲೋಕಪ್ರಸಿದ್ಧವಾಗಿದೆ ; ಈ ವಿಷಯಕ್ಕೆ ಯಾಜ್ಞವಲ್ಕ್ಯನ ಸಮ್ಮತಿವಾಕ್ಯವೂ ಇದೆ.

4. ಹಿರಣ್ಯಗರ್ಭನಿಂದ ವಿರಾಜನೂ, ವಿರಾಜನಿಂದ ಮನುವೂ ಆದದ್ದು ಮಾನಸಸೃಷ್ಟಿ ; ಮನುಶತರೂಪೆಯರಿಂದ ಆದದ್ದು ಮೈಥುನಸೃಷ್ಟಿ.

**ತತೋಽಜಾವಯೋಽಜಾಯನ್ತೈವಮೇವ ಯದಿದಂ ಕಿಂ ಚ ಮಿಥುನಮ್ ಆ ಪಿಪೀಲಿಕಾಭ್ಯಸ್ತತ್ಸರ್ವಮಸೃಜತ ॥ ೪ ॥**

೪. ಆ ಈಕೆಯು "ನನ್ನನ್ನು ತನ್ನಿಂದಲೇ ಹುಟ್ಟಿಸಿ ಹೇಗೆ ಬೆರೆಯುತ್ತಾನೊ ! ಒಳ್ಳೆಯದು, ಮರೆಯಾಗುವೆನು !'' ಎಂದು ಯೋಚಿಸಿಕೊಂಡಳು. ಆಕೆಯು ಹಸುವಾದಳು, (ಆ) ಇನ್ನೊಬ್ಬನು ಎತ್ತಾದನು; ಆಕೆಯನ್ನು ಬೆರೆತೇ ಬೆರೆತನು, ಅದರಿಂದ ಗೋಗಳು ಹುಟ್ಟಿದವು. ಅವಳು ಹೆಣ್ಣುಕುದುರೆಯಾದಳು, (ಆ) ಇನ್ನೊಬ್ಬನು ಗಂಡುಕುದುರೆಯಾದನು; ಅವಳು ಹೆಣ್ಣುಕತ್ತೆ, (ಆ) ಇನ್ನೊಬ್ಬನು ಗಂಡುಕತ್ತೆ; ಆಕೆಯನ್ನು ಬೆರೆತೇ ಬೆರೆತನು, ಅದರಿಂದ ಏಕಶಫವುಂಟಾಯಿತು. ಅವಳು ಹೆಣ್ಣಾಡು, (ಆ) ಇನ್ನೊಬ್ಬನು ಬಸ್ತವಾದನು; ಅವಳು ಹೆಣ್ಣುಕುರಿಯಾದಳು, (ಆ) ಇನ್ನೊಬ್ಬನು ಟಗರಾದನು; ಆಕೆಯನ್ನು ಬೆರೆತೇ ಬೆರೆತನು, ಅದರಿಂದ ಆಡುಕುರಿಗಳು ಹುಟ್ಟಿದವು. ಹೀಗೆಯೇ ಇರುವೆಗಳವರೆಗೂ ಈ ಯಾವ ಯಾವ ಮಿಥುನವಿದೆಯೋ ಅದೆಲ್ಲವನ್ನೂ ಸೃಜಿಸಿದನು.

(ಭಾಷ್ಯ)

೧೦೮. ಸಾ ಶತರೂಪಾ ಉ ಹ ಇಯಂ ಸೇಯಂ ದುಹಿತೃಗಮನೇ ಸ್ಮಾರ್ತಂ ಪ್ರತಿಷೇಧಮ್ ಅನುಸ್ಮರನ್ತೀ ಈಕ್ಷಾಂಚಕ್ರೇ ಕಥಂ ನು ಇದಮ್ ಅಕೃತ್ಯಂ ಯನ್ಮಾ ಮಾಮ್ ಆತ್ಮನ ಏವ ಜನಯಿತ್ವಾ ಉತ್ಪಾದ್ಯ ಸಂಭವತಿ ಉಪಗಚ್ಛತಿ । ಯದ್ಯಪ್ಯಯಂ ನಿರ್ಘೃಣಃ ಅಹಂ ಹನ್ತ ಇದಾನೀಂ ತಿರೋಽಸಾನಿ ಜಾತ್ಯನ್ತರೇಣ ತಿರಸ್ಕೃತಾ ಭವಾನಿ ಇತಿ ಏವಮೀಕ್ಷಿತ್ವಾ ಅಸೌ ಗೌರಭವತ್, ಉತ್ಪಾದ್ಯಪ್ರಾಣಿಕರ್ಮಭಿಶ್ಚೋದ್ಯಮಾನಾಯಾಃ ಪುನಃಪುನಃ ಸೈವ ಮತಿಃ ಶತರೂಪಾಯಾಃ ಮನೋಶ್ಚ ಅಭವತ್ । ತತಶ್ಚ ಋಷಭ ಇತರಃ । ತಾಂ ಸಮೇವಾಭವತ್ ಇತ್ಯಾದಿ ಪೂರ್ವವತ್ । ತತೋ ಗಾವೋಽಜಾಯನ್ತ । ತಥಾ ವಡವಾ ಇತರಾ ಅಭವತ್ ಅಶ್ವವೃಷ ಇತರಃ । ತಥಾ ಗರ್ದಭೀ ಇತರಾ ಗರ್ದಭ ಇತರಃ । ತತ್ರ ವಡವಾಶ್ವವೃಷಾದೀನಾಂ ಸಂಗಮಾತ್ ತತಃ ಏಕಶಫಮ್ ಏಕಖುರಮ್ ಅಶ್ವಾಶ್ವತರಗರ್ದಭಾಖ್ಯಂ ತ್ರಯಮ್ ಅಜಾಯತ । ತಥಾ ಅಜಾ ಇತರಾ ಅಭವತ್ ಬಸ್ತಶ್ಛಾಗ ಇತರಃ । ತಥಾ ಅವಿರಿತರಾ ಮೇಷ ಇತರಃ । ತಾಂ ಸಮೇವಾಭವತ್ । ತಾಂ ತಾಮಿತಿ ವೀಪ್ಸಾ ತಾಮಜಾಂ ತಾಮವಿಂಚ ಇತಿ[1] ಸಮಭವದೇವ ಇತ್ಯರ್ಥಃ । ತತಃ ಅಜಾಶ್ಚ ಅವಯಶ್ಚ ಅಜಾವಯಃ ಅಜಾಯನ್ತ । ಏವಮೇವ ಯದಿದಂ ಕಿಂ

---

1. ಈ ಇತಿಯು ಬೇಡವೆಂದು ತೋರುತ್ತದೆ.

ಚ ಯತ್ಕಿಂಚೇದಂ ಮಿಥುನಂ ಸ್ತ್ರೀಪುಂಸಲಕ್ಷಣಂ ದ್ವಂದ್ವಮ್ ಆ ಪಿಪೀಲಿಕಾಭ್ಯಃ ಪಿಪೀಲಿಕಾಭಿಃ ಸಹ ಅನೇನೈವ ನ್ಯಾಯೇನ ತತ್ಸರ್ವಮ್ ಅಸೃಜತ, ಜಗತ್ ಸೃಷ್ಟವಾನ್ ||

(ಭಾಷ್ಯಾರ್ಥ)

ಅವಳು ಎಂದರೆ ಶತರೂಪೆಯು (ಉ ಹ ಇಯಮ್) ಮತ್ತು ಆ ಇವಳು[1] ಮಗಳನ್ನು ಕೂಡುವದನ್ನು ಸ್ಮೃತಿಗಳಲ್ಲಿ ನಿಷೇಧಿಸಿರುವದನ್ನುಮನದಂದುಕೊಂಡು[2] (ಹೀಗೆಂದು) ಯೋಚಿಸಿಕೊಂಡಳು. 'ಹೇಗೆತಾನೆ?' ಎಂದರೆ ಇದು ಮಾಡ ಬಾರದ್ದು (ಎಂದಭಿಪ್ರಾಯ) ; (ಮಾ=ಮಾಮ್) ನನ್ನನ್ನು ತನ್ನಿಂದಲೇ ಹುಟ್ಟಿಸಿ ಉಂಟುಮಾಡಿ ಬೆರೆಯುವನಲ್ಲ, ಕೂಡುವನಲ್ಲ (ಇದು) ಮಾಡತಕ್ಕದ್ದಲ್ಲ. ಇವ ನೇನೋ ಜುಗುಪ್ಸೆಯಿಲ್ಲದವನಾದರೂ ನಾನು, ಒಳ್ಳೆಯದು, ಈಗ ಮರೆಯಾಗು ವೆನು, ಬೇರೊಂದು ಜಾತಿಯ (ಪ್ರಾಣಿಯ ರೂಪದಿಂದ) ಬಚ್ಚಿಟ್ಟುಕೊಳ್ಳುವೆನು. ಹೀಗೆಂದು ಯೋಚಿಸಿಕೊಂಡು ಆಕೆಯು ಹಸುವಾದಳು. ಹುಟ್ಟಿಸಬೇಕಾಗಿರುವ ಪ್ರಾಣಿಗಳ ಕರ್ಮಗಳಿಂದ ಪ್ರೇರಿತಳಾದ ಶತರೂಪೆಗೂ ಮನುವಿಗೂ ಮತ್ತೆ ಮತ್ತೆ ಅದೇ ಬುದ್ಧಿಯುಂಟಾಯಿತು.[3] ಆಮೇಲೆ[4] (ಆ) ಇನ್ನೊಬ್ಬನಾದ (ಮನುವು) ಎತ್ತಾದನು. 'ಆಕೆಯನ್ನು ಬೆರೆತೇ ಬೆರೆತನು' ಎಂದು ಮುಂತಾಗಿರುವ (ಗ್ರಂಥ ಭಾಗವನ್ನು) ಹಿಂದಿನಂತೆ (ಅರ್ಥಮಾಡಿಕೊಳ್ಳಬೇಕು). ಅದರಿಂದ[5] ಗೋಗಳು ಹುಟ್ಟಿದವು, ಹಾಗೆಯೇ ಅವಳು ಹೆಣ್ಣುಕುದುರೆಯಾದಳು, ಇನ್ನೊಬ್ಬನಾದ (ಮನುವು) ಗಂಡುಕುದುರೆಯಾದನು. ಅದರಂತೆ ಅವಳು ಹೆಣ್ಣುಕತ್ತೆ, ಇನ್ನೊಬ್ಬ ನಾದ (ಮನುವು) ಗಂಡುಕತ್ತೆ. (ಸಂದರ್ಭ)ದಲ್ಲಿ ಹೆಣ್ಣುಕುದುರೆ ಆ ಗಂಡು ಕುದುರೆ ಮುಂತಾದವುಗಳ ಕೂಟದಿಂದ ; ಅದರಿಂದ ಏಕಶಫವು, ಒಂದು (ಉಂಡೆ) ಗೊರಸಿನ ಕುದುರೆ, ಹೇಸರಕತ್ತೆ, ಕತ್ತೆ ಎಂಬ ಮೂರು ಹುಟ್ಟಿತು. ಹಾಗೆಯೇ

---

1. 'ಸಾ ಉ ಹ ಇಯಮ್' ಎಂಬ ಮೂಲವನ್ನು ಸೇಯಮ್ ಉ ಈಕ್ಷಾಂ ಚಕ್ರೇ ಹ ಎಂದು ಅನ್ವಯಿಸಿಕೊಳ್ಳಬೇಕು; ಉ ಎಂದರೆ ಮತ್ತು ಹ, ಎಂಬುದು ಭೂತಕಾಲದಲ್ಲಿ ನಡೆದದ್ದನ್ನು ನೆನಪಿಗೆ ತರುವ ನಿಪಾತವು ಎಂಬುದನ್ನು ಭಾಷ್ಯದಲ್ಲಿ ಸೂಚಿಸಿದೆ.

2. ಗೌ. ಧ. ೧-೪-೨೧೩

3. ಬೇರೆಬೇರೆಯ ಜಾತಿಯ ಪ್ರಾಣಿಗಳ ರೂಪವನ್ನು ತಾಳುವ ಬುದ್ಧಿಯೇ ಉಂಟಾ ಯಿತು ಎಂದರ್ಥ.

4. ಅವಳು ಹಸುವಾದ ಬಳಿಕ.

5. ಅವೆರಡರ ಕೂಟದಿಂದ.

ಅವಳು ಹೆಣ್ಣಾಡಾದಳು, (ಆ) ಇನ್ನೊಬ್ಬನಾದ ಮನುವು ಬಸ್ತವಾದನು, ಮೇಕೆಯಾದನು. ಅದರಂತೆ ಅವಳು ಹೆಣ್ಣುಕುರಿ(ಯಾದಳು), ಇನ್ನೊಬ್ಬನಾದ (ಮನುವು) ಟಗರು (ಆದನು). ಆಕೆಯನ್ನು ಬೆರೆತೇ ಬೆರೆತನು. (ಇಲ್ಲಿ) ತಾಂ ತಾವ್ ಎಂದು ವೀಪ್ಸೆಯನ್ನು (ಇಟ್ಟುಕೊಳ್ಳಬೇಕು). ಆ ಹೆಣ್ಣಾಡನ್ನು ಆ ಕುರಿಯನ್ನು ಬೆರೆತೇ ಬೆರೆತನು ಎಂದರ್ಥ. ಅದರಿಂದ ಆಡುಕುರಿಗಳು ಎಂದರೆ ಆಡುಗಳು ಮತ್ತು ಕುರಿಗಳು (ಎಂಬ ಪ್ರಾಣಿಗಳು) ಹುಟ್ಟಿದವು. ಹೀಗೆಯೇ (ಯದಿದಂ ಕಿಂ ಚ ಯತ್ಕಿಂಚೇದಂ) ಈ ಯಾವ ಯಾವ ಸ್ತ್ರೀಪುರುಷರೂಪವಾದ ಮಿಥುನವು (ಜೋಡಿಯು) ಇರುವೆಗಳವರೆಗೆ ಇರುವೆಗಳನ್ನೂ ಸೇರಿಸಿಕೊಂಡು (ಯಾವ ಯಾವ ಮಿಥುನವು) ಇದೆಯೋ ಇದೇ ರೀತಿಯಿಂದಲೇ[1] ಅದೆಲ್ಲವನ್ನೂ ಸೃಜಿಸಿದನು, ಜಗತ್ತನ್ನು[2] ಸೃಷ್ಟಿಸಿದನು.

## ಪ್ರಜಾಪತಿಗೆ ಸೃಷ್ಟಿ ಎಂಬ ಹೆಸರಾದದ್ದು

(ಉಪನಿಷತ್ತು)

**ಸೋಽವೇದಹಂ ವಾವ ಸೃಷ್ಟಿರಸ್ಮ್ಯಹಗ್ಂ ಹೀದಗ್ಂ ಸರ್ವಮಸೃಕ್ಷೀತಿ ತತಃ ಸೃಷ್ಟಿರಭವತ್ಸೃಷ್ಟ್ಯಾಗ್ಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ॥ ೫ ॥**

೫. ಅವನು "ನಾನೇ ಸೃಷ್ಟಿಯು. ನಾನೇ ಅಲ್ಲವೆ, ಇದೆಲ್ಲವನ್ನೂ ಸೃಜಿಸಿರುವೆನು?'' ಎಂದು ಅರಿತುಕೊಂಡನು. ಯಾವನು ಹೀಗೆ ಅರಿತುಕೊಳ್ಳುವನೋ (ಅವನು) ಈ ಸೃಷ್ಟಿಯಲ್ಲಿ (ಸ್ರಷ್ಟೃ.)ನಾಗುವನು.

(ಭಾಷ್ಯ)

೧೧೯. ಸ ಪ್ರಜಾಪತಿಃ ಸರ್ವಮಿದಂ ಜಗತ್‌ಸೃಷ್ಟ್ವಾ ಅವೇತ್। ಕಥಮ್? ಅಹಂ ವಾವ ಅಹಮೇವ ಸೃಷ್ಟಿಃ ಸೃಜ್ಯತ ಇತಿ ಸೃಷ್ಟಂ ಜಗದುಚ್ಯತೇ ಸೃಷ್ಟಿಃ ಇತಿ। ಯನ್ಮಯಾ ಸೃಷ್ಟಂ ಜಗತ್ ಮದಭೇದತ್ವಾತ್ ಅಹಮೇವಾಸ್ಮಿ ನ ಮತ್ತೋ ವ್ಯತಿರಿಚ್ಯತೇ। ಕುತ ಏತತ್? ಅಹಂ ಹಿ ಯಸ್ಮಾತ್ ಇದಂ ಸರ್ವಂ ಜಗತ್ ಅಸೃಕ್ಷಿ ಸೃಷ್ಟವಾನಸ್ಮಿ ತಸ್ಮಾತ್ ಇತ್ಯರ್ಥಃ। ಯಸ್ಮಾತ್ ಸೃಷ್ಟಿಶಬ್ದೇನ ಆತ್ಮಾನಮೇವ ಅಭ್ಯಧಾತ್ ಪ್ರಜಾಪತಿಃ ತತಃ ತಸ್ಮಾತ್ ಸೃಷ್ಟಿರಭವತ್ ಸೃಷ್ಟಿನಾಮಾ ಅಭವತ್। ಸೃಷ್ಟ್ಯಾಂ ಜಗತಿ ಹಾಸ್ಯ ಪ್ರಜಾಪತೇಃ ಏತಸ್ಯಾಮ್ ಏತಸ್ಮಿನ್ ಜಗತಿ ಸ ಪ್ರಜಾಪತಿವತ್ ಸ್ರಷ್ಟಾ ಭವತಿ ಸ್ವಾತ್ಮನೋಽನನ್ಯಭೂತಸ್ಯ

---

1. ಹೀಗೆಯೇ ಬೇರೆಬೇರೆಯ ಪ್ರಾಣಿಗಳ ರೂಪವನ್ನು ತಳೆದು ಬೆರೆತದ್ದರಿಂದಲೇ.
2. ಸ್ತ್ರೀಪುರುಷಾತ್ಮಕವಾದ ಜಗತ್ತೆಲ್ಲವನ್ನೂ ಎಂದರ್ಥ.

ಜಗತಃ। ಕಃ? ಯ ಏವಂ ಪ್ರಜಾಪತಿವತ್ ಯಥೋಕ್ತಂ ಸ್ವಾತ್ಮನೋಽನನ್ಯಭೂತಂ ಜಗತ್ ಸಾಧ್ಯಾತ್ಮಾಧಿಭೂತಾಧಿದೈವಂ ಜಗತ್ ಅಹಮಸ್ಮಿ ಇತಿ ವೇದ ॥

(ಭಾಷ್ಯಾರ್ಥ)

ಆ ಪ್ರಜಾಪತಿಯು ಈ ಜಗತ್ತೆಲ್ಲವನ್ನೂ ಸೃಷ್ಟಿಸಿ (ಹೀಗೆಂದು) ಅರಿತುಕೊಂಡನು. ಹೇಗೆ (ಅರಿತುಕೊಂಡನು)? ಎಂದರೆ (ಅಹಂ ವಾವ=ಅಹಮೇವ) ನಾನೇ ಸೃಷ್ಟಿಯು. ಸೃಜಿಸಲ್ಪಡುವದರಿಂದ 'ಸೃಷ್ಟಿಯು' ಎಂದು ಸೃಷ್ಟವಾದ ಜಗತ್ತನ್ನೇ ಕರೆದಿರುತ್ತದೆ. ನನ್ನಿಂದ ಸೃಷ್ಟವಾದ ಜಗತ್ತು ನನಗೆ ಅಭಿನ್ನವಾಗಿರುವದರಿಂದ ನಾನೇ (ಅದಾ)ಗಿರುವೆನು, (ಅದೂ) ನನಗಿಂತ ಬೇರೆಯಾಗಿರುವದಿಲ್ಲ. ಇದು ಏತರಿಂದ (ಗೊತ್ತಾಗುತ್ತದೆ)? ಎಂದರೆ ಏಕೆಂದರೆ ನಾನೇ ಅಲ್ಲವೆ, ಈ ಜಗತ್ತೆಲ್ಲವನ್ನೂ ಸೃಜಿಸಿರುವೆನು, ಸೃಜಿಸಿದವನಾಗಿರುವೆನು? ಆದ್ದರಿಂದ (ನಾನೇ ಸೃಷ್ಟಿಯು) ಎಂದರ್ಥ. ಸೃಷ್ಟಿ ಎಂಬ ಮಾತಿನಿಂದ ಪ್ರಜಾಪತಿಯು ತನ್ನನ್ನೇ ಕರೆದುಕೊಂಡನಲ್ಲ, ಅದರಿಂದ ಸೃಷ್ಟಿಯಾದನು, 'ಸೃಷ್ಟಿ' ಎಂಬ ಹೆಸರುಳ್ಳವನಾದನು. ಇವನು (ಈ) ಪ್ರಜಾಪತಿಯು ಈ ಸೃಷ್ಟಿಯಲ್ಲಿ (ಈ) ಜಗತ್ತಿನಲ್ಲಿ[1] ಪ್ರಜಾಪತಿಯಂತೆಯೇ ತನಗಿಂತ ಅಭಿನ್ನವಾಗಿರುವ ಜಗತ್ತನ್ನು ಸೃಷ್ಟಿಸುವನಾಗುವನು.[2] ಯಾವನು ಯಾವನು ಹೀಗೆ ಪ್ರಜಾಪತಿಯಂತೆ ಮೇಲೆ ಹೇಳಿದ ಜಗತ್ತು ತನಗೆ ಅಭಿನ್ನವಾದದ್ದು, ಅಧ್ಯಾತ್ಮಾಧಿಭೂತಾಧಿದೈವಗಳೊಡಗೂಡಿರುವ ಜಗತ್ತು ನಾನೇ ಆಗಿರುವೆನು, ಎಂದು ಅರಿತುಕೊಳ್ಳುವನೋ (ಅವನು)[3].

## ಪ್ರಜಾಪತಿಯು ದೇವಾದಿಗಳನ್ನು ಸೃಜಿಸಿದ್ದು

(ಉಪನಿಷತ್ತು)

**ಅಥೇತ್ಯಭ್ಯಮನ್ಥತ್ ಸ ಮುಖಾಚ್ಚ ಯೋನೇರ್ಹಸ್ತಾಭ್ಯಾಂ ಚಾಗ್ನಿಮಸೃಜತ ತಸ್ಮಾದೇತದುಭಯಮಲೋಮಕಮನ್ತರತೋಽಲೋಮಕಾ ಹಿ ಯೋನಿರನ್ತರತಃ। ತದ್ಯದಿದಮಾಹುರಮುಂ ಯಜಾಮುಂ ಯಜೇತ್ಯೇಕೈಕಂ ದೇವಮೇತಸ್ಯೈವ ಸಾ ವಿಸೃಷ್ಟಿರೇಷ ಉ ಹ್ಯೇವ ಸರ್ವೇ ದೇವಾಃ। ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ**

---

1. ಈಗಿನ ಪ್ರಜಾಪತಿಯ ಸೃಷ್ಟಿಯಲ್ಲಿರುವ ಉಪಾಸಕನಿಗೂ ಈ ಫಲವಾಗುವದು.

2. ಪ್ರಜಾಪತಿತ್ವವನ್ನೇ ಪಡೆದುಕೊಳ್ಳುವನು ಎಂದರ್ಥ.

3. ಪ್ರಜಾಪತಿಯು ತಾನೇ ಸೃಷ್ಟಿಯ ರೂಪವನ್ನು ತಾಳಿದ್ದು, 'ನಾನೇ ಇದೆಲ್ಲವೂ ಆಗಿರುವೆನು' ಎಂದು ಅರಿತುಕೊಂಡಂತೆ, ಯಾವ ಉಪಾಸಕನು 'ಅಧ್ಯಾತ್ಮಾದಿಭೇದಭಿನ್ನವಾದ ಈ ಜಗತ್ತೆಲ್ಲವೂ ನಾನೇ. ನನಗಿಂತ ಇದು ಬೇರೆಯಲ್ಲ' ಎಂದು ಉಪಾಸನೆಮಾಡಿ ಸಾಕ್ಷಾತ್ಕರಿಸಿಕೊಳ್ಳುವನೋ ಅವನು ಮುಂದಿನ ಕಲ್ಪದಲ್ಲಿ ಪ್ರಜಾಪತಿಯೇ ಆಗುವನು ಎಂದರ್ಥ.

**ತದು ಸೋಮ ಏತಾವದ್ವಾ ಇದಗ್ಂ ಸರ್ವಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ಸೈಷಾ ಬ್ರಹ್ಮಣೋಽತಿಸೃಷ್ಟಿಃ। ಯಚ್ಛ್ರೇಯಸೋ ದೇವಾನಸೃಜತಾಥಯನ್ಮರ್ತ್ಯಃ ಸನ್ನಮೃತಾನಸೃಜತ ತಸ್ಮಾದತಿಸೃಷ್ಟಿರತಿ ಸೃಷ್ಟ್ಯಾಗ್ಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ॥ ೬ ॥**

೬. ಬಳಿಕ ಹೀಗೆ ಅಭಿಮಥನಮಾಡಿದನು. ಅವನು ಯೋನಿಯಾದ ಮುಖದಿಂದಲೂ, ಕೈಗಳಿಂದಲೂ ಅಗ್ನಿಯನ್ನು ಸೃಜಿಸಿದನು. ಆದ್ದರಿಂದ ಈ ಎರಡೂ ಒಳಗೆ ಅಲೋಮಕವು; ಯೋನಿಯು ಒಳಗೆ ಅಲೋಮಕವಲ್ಲವೆ? ಅಲ್ಲಿ 'ಇವನಿಗೆ ಯಾಗಮಾಡು!' 'ಇವನಿಗೆ ಯಾಗ ಮಾಡು!' ಎಂಬುದನ್ನು ಹೇಳುತ್ತಾರಲ್ಲ, ಒಬ್ಬೊಬ್ಬ ದೇವನನ್ನು ಹೇಳುತ್ತಾರಷ್ಟೆ; ಈತನದೇ ಅದು ವಿಸೃಷ್ಟಿಯು. ಈತನೇ ಸರ್ವದೇವತೆಗಳೂ (ಆಗಿರುತ್ತಾನೆ). ಇನ್ನು ಈ ಒದ್ದೆಯಾಗಿರುವದು ಯಾವ ಯಾವದುಂಟೋ ಅದನ್ನು ರೇತಸ್ಸಿನಿಂದ ಸೃಜಿಸಿದನು. ಅದೇ ಸೋಮವು. ಇದೆಲ್ಲವೂ ಅನ್ನ, ಅನ್ನಾದ- ಎಂಬಿಷ್ಟೇ. ಸೋಮವೇ ಅನ್ನವು; ಅಗ್ನಿಯೇ ಅನ್ನಾದನು. ಒಳ್ಳೆಯವರಾದ ದೇವರುಗಳನ್ನು ಸೃಜಿಸಿದನಲ್ಲ, ಆ ಇದು ಬ್ರಹ್ಮನ ಅತಿಸೃಷ್ಟಿಯು. (ಇನ್ನು) ತಾನು ಮರ್ತ್ಯನಾಗಿದ್ದುಕೊಂಡು ಅಮೃತವನ್ನು ಸೃಜಿಸಿದನಲ್ಲ, (ಅದು) ಅತಿಸೃಷ್ಟಿಯು. ಯಾವನು ಹೀಗೆ ಅರಿತುಕೊಳ್ಳುವನೋ ಈ ಅತಿಸೃಷ್ಟಿಯಲ್ಲಿ (ಸ್ರಷ್ಟೃ)ವಾಗುವನು.

## ಅಗ್ನಿಬ್ರಾಹ್ಮಣರ ಸೃಷ್ಟಿ

(ಭಾಷ್ಯ)

೧೧೦. ಏವಂ ಸ ಪ್ರಜಾಪತಿಃ ಜಗದಿದಂ ಮಿಥುನಾತ್ಮಕಂ ಸೃಷ್ಟ್ವಾ ಬ್ರಾಹ್ಮಣಾದಿವರ್ಣನಿಯನ್ತ್ರೀಃ ದೇವತಾಃ ಸಿಸೃಕ್ಷುಃ ಆದೌ ಅಥೇತಿ (ಇತಿ)[1]ಶಬ್ದದ್ವಯಮ್ ಅಭಿನಯಪ್ರದರ್ಶನಾರ್ಥಮ್। ಅನೇನ ಪ್ರಕಾರೇಣ ಮುಖೇ ಹಸ್ತೌ ಪ್ರಕ್ಷಿಪ್ಯ ಅಭ್ಯಮನ್ಥತ್ ಆಭಿಮುಖ್ಯೇನ ಮನ್ಥನಮ್ ಅಕರೋತ್। ಸ ಮುಖಂ ಹಸ್ತಾಭ್ಯಾಂ ಮಥಿತ್ವಾ ಮುಖಾಚ್ಚ ಯೋನೇಃ ಹಸ್ತಾಭ್ಯಾಂ ಚ

---

1. ಇಲ್ಲಿ ಒಂದು ಇತಿಯು ಬೇಕು; ಅಥವಾ ಅಧ್ಯಾಹೃತವಾಗಿದೆ.

ಯೋನಿಭ್ಯಾಮ್ ಅಗ್ನಿಮ್ ಬ್ರಾಹ್ಮಣಜಾತೇರನುಗ್ರಹಕರ್ತಾರಮ್, ಅಸೃಜತ ಸೃಷ್ಟವಾನ್। ಯಸ್ಮಾತ್ ದಾಹಕಸ್ಯ ಅಗ್ನೇಃ ಯೋನಿಃ ಏತದುಭಯಂ ಹಸ್ತೌ ಮುಖಂ ಚ ತಸ್ಮಾತ್ ಉಭಯಮಪ್ಯೇತತ್ ಅಲೋಮಕಂ ಲೋಮವಿವರ್ಜಿತಮ್। ಕಿಂ ಸರ್ವಮೇವ ? ನ। ಅನ್ತರತಃ ಅಭ್ಯನ್ತರತಃ। ಅಸ್ತಿ ಹಿ ಯೋನ್ಯಾ ಸಾಮಾನ್ಯಮ್ ಉಭಯಸ್ಯಾಸ್ಯ। ಕಿಮ್? ಅಲೋಮಕಾ ಹಿ ಯೋನಿರನ್ತರತಃ ಸ್ತ್ರೀಣಾಮ್। ತಥಾ ಬ್ರಾಹ್ಮಣೋಽಪಿ ಮುಖಾದೇವ ಜಜ್ಞೇ ಪ್ರಜಾಪತೇಃ। ತಸ್ಮಾತ್ ಏಕ ಯೋನಿತ್ವಾತ್ ಜ್ಯೇಷ್ಠೇನೇವ ಅನುಜಃ ಅನುಗೃಹ್ಯತೇ ಅಗ್ನಿನಾ ಬ್ರಾಹ್ಮಣಃ। ತಸ್ಮಾತ್ ಬ್ರಾಹ್ಮಣೋಽಗ್ನಿದೈವತ್ಯೋ[1] ಮುಖವೀರ್ಯಶ್ಚ ಇತಿ ಶ್ರುತಿಸ್ಮೃತಿ ಸಿದ್ಧಮ್ ॥

(ಭಾಷ್ಯಾರ್ಥ)

ಹೀಗೆ ಆ ಪ್ರಜಾಪತಿಯು ಈ ಮಿಥುನರೂಪವಾದ ಜಗತ್ತನ್ನು ಸೃಷ್ಟಿಸಿ ಬ್ರಾಹ್ಮಣನೇ ಮುಂತಾದ ವರ್ಣಗಳನ್ನು ಆಳುವ ದೇವತೆಗಳನ್ನು ಸೃಜಿಸಬೇಕೆಂದು ಮೊದಲು– ಅಥ ಇತಿ ಎಂಬ ಎರಡು ಮಾತುಗಳು ಅಭಿನಯಮಾಡಿ ತೋರಿಸುವದಕ್ಕೆ (ಬಂದಿದೆ). ಈ ಪ್ರಕಾರದಿಂದ ಬಾಯಿಯಲ್ಲಿ ಕೈಗಳನ್ನು ಹಾಕಿಕೊಂಡು ಅಭಿಮಥನಮಾಡಿದನು, ಅಭಿಮುಖವಾಗಿ ಮಂಥನಮಾಡಿದನು. ಅವನು (ಹೀಗೆ) ಮುಖವನ್ನು ಕೈಗಳಿಂದ ಕಡೆದು ಯೋನಿಯಾದ[2] ಮುಖದಿಂದಲೂ ಯೋನಿಗಳಾದ ಕೈಗಳಿಂದಲೂ ಬ್ರಾಹ್ಮಣಜಾತಿಗೆ ಅನುಗ್ರಾಹಕನಾದ ಅಗ್ನಿಯನ್ನು ಸೃಜಿಸಿದನು, ಸೃಷ್ಟಿಮಾಡಿದನು. ಕೈಗಳು ಮುಖವು ಎಂಬೀ ಎರಡೂ ದಾಹಕನಾದ ಅಗ್ನಿಗೆ ಯೋನಿಯಾಗಿರುವದಷ್ಟೆ, ಆದ್ದರಿಂದ ಈ ಎರಡೂ ಅಲೋಮಕವು, ಲೋಮಗಳಿಲ್ಲದ್ದಾಗಿದೆ. ಪೂರ (ಅಲೋಮಕ)ವೇನು ? ಎಂದರೆ ಅಲ್ಲ, ಒಳಗೆ ಒಳಗಡೆಯಲ್ಲಿ (ಮಾತ್ರ ಲೋಮಗಳಿಲ್ಲದ್ದು). ಏಕೆಂದರೆ ಈ ಎರಡಕ್ಕೂ ಯೋನಿಯ ಹೋಲಿಕೆ ಇರುತ್ತದೆ. ಯಾವ (ಹೋಲಿಕೆ)? ಎಂದರೆ ಸ್ತ್ರೀಯರ ಯೋನಿಯು ಒಳಗೆ ಅಲೋಮಕವಾಗಿರುತ್ತದೆಯಲ್ಲವೆ ? (ಅದೇ ಹೋಲಿಕೆ).

ಇದರಂತೆ ಬ್ರಾಹ್ಮಣನೂ ಪ್ರಜಾಪತಿಯ ಮುಖದಿಂದಲೇ ಹುಟ್ಟಿದನು. ಆದ್ದರಿಂದ ಒಂದೇ ಯೋನಿಯಿಂದ (ಹುಟ್ಟಿರುವದ)ರಿಂದ ಬ್ರಾಹ್ಮಣನಿಗೆ, ಅಣ್ಣನ (ಅನುಗ್ರಹವು) ತಮ್ಮನಿಗಾಗುವಂತೆ, ಅಗ್ನಿಯ ಅನುಗ್ರಹವಾಗುತ್ತಿದೆ. ಆದ್ದ

---

1. ದೇವತ್ಯ ಎಂಬುದಕ್ಕಿಂತ ಇದೇ ಮೇಲು.

2. ಕಾರಣವಾದ.

ರಿಂದಲೇ ಬ್ರಾಹ್ಮಣನು ಅಗ್ನಿದೈವತ್ಯನು[1], ಮುಖವೀರ್ಯನು[2] ಎಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ.[3]

## ಉಳಿದ ದೇವತೆಗಳ ಮತ್ತು ವರ್ಣಗಳ ಸೃಷ್ಟಿ

(ಭಾಷ್ಯ)

೧೧೧. ತಥಾ ಬಲಾಶ್ರಯಾಭ್ಯಾಂ ಬಾಹುಭ್ಯಾಂ ಬಲಭಿದಾದಿಕಂ ಕ್ಷತ್ರಿಯಜಾತಿನಿಯನ್ತಾರಂ ಕ್ಷತ್ರಿಯಂ ಚ। ತಸ್ಮಾತ್ ಐನ್ದ್ರಂ ಕ್ಷತ್ರಂ ಬಾಹುವೀರ್ಯಂ ಚ ಇತಿ ಶ್ರುತೌ ಸ್ಮೃತೌ ಚಾವಗತಮ್। ತಥಾ ಊರುತಃ ಈಹಾ ಶ್ರಯಾತ್ ವಸ್ವಾದಿಲಕ್ಷಣಂ ವಿಶೋನಿಯನ್ತಾರ ವಿಶಂ ಚ। ತಸ್ಮಾತ್ಕೃಷ್ಯಾದಿಪರೋ ವಸ್ವಾದಿದೈವತ್ಯಶ್ಚ ವೈಶ್ಯಃ। ತಥಾಪೂಷಣಂ ಪೃಥ್ವೀದೈವತ್ಯಂ ಶೂದ್ರಂಚ ಪದ್ಭ್ಯಾಂ ಪರಿಚರಣಕ್ಷಮಮ್ ಅಸೃಜತ ಇತಿ। ಶ್ರುತಿಸ್ಮೃತಿಪ್ರಸಿದ್ಧೇಃ। ತತ್ರ ಕ್ಷತ್ರಾದಿದೇವತಾಸರ್ಗಮಿಹಾನುಕ್ತಂ ವಕ್ಷ್ಯಮಾಣಮಪಿ ಉಕ್ತವತ್ ಉಪಸಂಹರತಿ ಸೃಷ್ಟಿಸಾಕಲ್ಯಾನುಕೀರ್ತ್ಯೈ। ಯಥೇಯಂ ಶ್ರುತಿರ್ವ್ಯವಸ್ಥಿತಾ ತಥಾ ಪ್ರಜಾಪತಿರೇವ ಸರ್ವೇ ದೇವಾ ಇತಿ ನಿಶ್ಚಿತೋಽರ್ಥಃ। ಸ್ರಷ್ಟುರನನ್ಯತ್ವಾತ್ ಸೃಷ್ಟಾನಾಮ್। ಪ್ರಜಾಪತಿನೈವ ತು ಸೃಷ್ಟತ್ವಾತ್ ದೇವಾನಾಮ್। ಅಥೈವಂ ಪ್ರಕರಣಾರ್ಥೇ ವ್ಯವಸ್ಥಿತೇ ತತ್ಸ್ತುತ್ಯಭಿಪ್ರಾಯೇಣ ಅವಿದ್ವನ್ಮತಾನ್ತರನಿನ್ದೋಪನ್ಯಾಸಃ। ಅನ್ಯನಿನ್ದಾ ಅನ್ಯಸ್ತುತಯೇ। ತತ್ ತತ್ರ ಕರ್ಮಪ್ರಕರಣೇ ಕೇವಲ ಯಾಜ್ಞಿಕಾಃ ಯಾಗಕಾಲೇ ಯದಿದಂ ವಚಃ ಆಹುಃ ಅಮುಮ್ ಅಗ್ನಿಂ ಯಜ ಅಮುಮ್ ಇನ್ದ್ರಂ ಯಜ ಇತ್ಯಾದಿ ನಾಮಶಸ್ತ್ರಸ್ತೋತ್ರಕರ್ಮಾದಿಭಿನ್ನತ್ವಾತ್ ಭಿನ್ನಮೇವ ಅಗ್ನ್ಯಾದಿದೇವಮ್ ಏಕೈಕಂ ಮನ್ಯಮಾನಾಃ ಆಹುಃ ಇತ್ಯಭಿಪ್ರಾಯಃ। ತನ್ನ ತಥಾ ವಿದ್ಯಾತ್। ಯಸ್ಮಾತ್ ಏತಸ್ಯೈವ ಪ್ರಜಾಪತೇಃ ಸಾ ವಿಸೃಷ್ಟಿಃ ದೇವಭೇದಃ ಸರ್ವಃ। ಏಷ ಉ ಹ್ಯೇವ ಪ್ರಜಾಪತಿರೇವ ಪ್ರಾಣಃ ಸರ್ವೇ ದೇವಾಃ ॥

(ಭಾಷ್ಯಾರ್ಥ)

ಹೀಗೆಯೇ ಬಲಕ್ಕೆ ಆಶ್ರಯವಾಗಿರುವ ತೋಳುಗಳಿಂದ ಇಂದ್ರನೇ ಮುಂತಾದ[4] ಕ್ಷತ್ರಿಯಜಾತಿಯನ್ನು ಆಳುವ (ದೇವತೆಯನ್ನೂ) ಕ್ಷತ್ರಿಯನನ್ನೂ

---

1. ಅಗ್ನಿಯೇ ಇವನಿಗೆ ಅನುಗ್ರಾಹಕದೇವತೆ.

2. ವೇದಶಾಸ್ತ್ರಾದಿಗಳಿಂದ ಜೀವಿಸುವ ಸಾಮರ್ಥ್ಯವುಳ್ಳವನು.

3. 'ಆಗ್ನೇಯೋ ಬ್ರಾಹ್ಮಣಃ' (?) ಮುಂತಾದ ಶ್ರುತಿ, ಅದಕ್ಕನುಗುಣವಾಗಿರುವ ಸ್ಮೃತಿ– ಇವುಗಳಲ್ಲಿ. ಆ.ಗಿ.

4. ಮುಂತಾದ ಎಂದರೆ ವರುಣಾದಿಗಳು.

(ಸೃಜಿಸಿದನು). ಆದ್ದರಿಂದಲೇ ಕ್ಷತ್ರಿಯನು ಇಂದ್ರದೈವತ್ಯನೆಂದೂ ಬಾಹುವೀರ್ಯನೆಂದೂ ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ನಿಶ್ಚಿತವಾಗಿರುತ್ತದೆ. ಅದರಂತೆ (ಚಲನ)ಕರ್ಮಕ್ಕೆ ಆಶ್ರಯವಾಗಿರುವ ತೊಡೆಯಿಂದ ವಸುಗಳೇ ಮುಂತಾದ ವೈಶ್ಯನಿಯಂತೃ(ದೇವತೆಗಳನ್ನೂ) ವೈಶ್ಯನನ್ನೂ (ಸೃಜಿಸಿದನು). ಆದ್ದರಿಂದಲೇ ವೈಶ್ಯನು ಕೃಷ್ಯಾದಿಪರನೂ ವಸ್ವಾದಿದೈವತ್ಯನೂ (ಆಗಿರುತ್ತಾನೆ). ಅದರಂತೆ ಪೂಷನನ್ನೂ ಪೃಥ್ವೀದೈವತ್ಯನಾಗಿ ಪರಿಚರಣಶಕ್ತನಾದ ಶೂದ್ರನನ್ನೂ ಸೃಜಿಸಿದನು ಎಂದು ಶ್ರುತಿಸ್ಮೃತಿಗಳ ಪ್ರಸಿದ್ಧಿಯಿಂದ (ಅರಿಯಬೇಕು). ಇಲ್ಲಿ ಕ್ಷತ್ರಾದಿದೇವತಾಸೃಷ್ಟಿಯನ್ನು ಹೇಳಿಲ್ಲ; ಮುಂದೆ ಹೇಳಲಾಗುವದಾದರೂ[1] (ಇಲ್ಲಿಯೇ) ಹೇಳಿರುವಂತೆ ಸೃಷ್ಟಿಸಂಪೂರ್ಣತ್ವವನ್ನು ಅನುವಾದಮಾಡುವದಕ್ಕಾಗಿ (ಶ್ರುತಿಯು) ಉಪಸಂಹಾರಮಾಡಿರುತ್ತದೆ.[2] ಹೀಗೆ ಈ ಶ್ರುತಿಯು ವ್ಯವಸ್ಥಿತವಾಗಿರುವದಷ್ಟೆ[3], ಆದ್ದರಿಂದ ಪ್ರಜಾಪತಿಯೇ ಎಲ್ಲಾ ದೇವತೆಗಳೂ ಎಂಬ ಅರ್ಥವೂ ನಿಶ್ಚಯವಾಯಿತು.[4] ಏಕೆಂದರೆ ಸೃಷ್ಟಿಯಾದ(ಪದಾರ್ಥ)ಗಳು ಸೃಷ್ಟಿ ಮಾಡುವವನಿಗಿಂತ ಬೇರೆಯಲ್ಲ; ದೇವತೆಗಳನ್ನೆಲ್ಲ ಪ್ರಜಾಪತಿಯೇ ಸೃಷ್ಟಿಸಿರುತ್ತಾನೆ.

ಹೀಗೆ (ಈ) ಪ್ರಕರಣದ ಅರ್ಥವು[5] ನಿಶ್ಚಿತವಾಗಿರುವಲ್ಲಿ ಅದನ್ನು ಹೊಗಳುವ ಉದ್ದೇಶದಿಂದ ಅಜ್ಞರ ಬೇರೊಂದು ಅಭಿಪ್ರಾಯವನ್ನು (ಈಗ) ಹೇಳಲಾಗು

---

1. ಮುಂದೆ ೧೧, ೧೨, ೧೩– ಈ ಕಂಡಿಕೆಗಳಲ್ಲಿ ದೇವತೆಗಳ ಸೃಷ್ಟಿಯನ್ನು ಹೇಳಲಾಗುವದು.

2. ನಾನೇ ಸೃಷ್ಟಿಯು, ಏಕೆಂದರೆ ನಾನೇ ಎಲ್ಲವನ್ನೂ ಸೃಷ್ಟಿಮಾಡಿರುವೆನು ಎಂದು ಪ್ರಜಾಪತಿಯು ಹೇಳಿಕೊಂಡನೆಂದು ಹಿಂದಿನ ಕಂಡಿಕೆಯಲ್ಲಿ ತಿಳಿಸಿದೆಯಷ್ಟೆ; ಎಲ್ಲಾ ಸೃಷ್ಟಿಯೂ ಪ್ರಜಾಪತಿಯಿಂದ ಬಂತೆಂದು ತಿಳಿಸುವದಕ್ಕೆ ಇಲ್ಲಿ ದೇವತೆಗಳ ಸೃಷ್ಟಿಯನ್ನು ಸೇರಿಸಿಕೊಳ್ಳಬೇಕಾಗಿದೆ. ಆದ್ದರಿಂದ ಮುಂದೆ ಹೇಳುವದನ್ನೂ ಶ್ರುತಿಯು ಇಲ್ಲಿ ಸೇರಿಸಿಕೊಂಡಿದೆ ಎಂದು ತಿಳಿಯಬೇಕು.

3. ಈ ಶ್ರುತಿಯಲ್ಲಿ ಸರ್ವಸೃಷ್ಟಿಯನ್ನೂ ಹೇಳಿದೆ ಎಂದು ವ್ಯವಸ್ಥೆಯಾಯಿತಷ್ಟೆ.

4. ಹೀಗೆ ದೇವತೆಗಳ ಸೃಷ್ಟಿಯನ್ನೂ ಇಲ್ಲಿ ಉಪಸಂಹಾರಮಾಡಿಕೊಂಡರೆ 'ಈತನೇ ಸರ್ವದೇವತೆಗಳೂ ಆಗಿರುತ್ತಾನೆ' ಎಂದು ಈ ಕಂಡಿಕೆಯಲ್ಲಿ ಹೇಳಿರುವದು ಸಿದ್ಧವಾಗುವದು ಎಂದರ್ಥ.

5. ಪ್ರಜಾಪತಿಯು ಸರ್ವದೇವತಾತ್ಮನಾಗಿರುವನೆಂಬುದೇ ಪ್ರಕರಣಾರ್ಥವು.

ತ್ತದೆ. ಒಂದನ್ನು ನಿಂದಿಸುವದು ಮತ್ತೊಂದನ್ನು ಹೊಗಳುವದಕ್ಕಾಗಿ.[1] (ತತ್=ತತ್ರ) ಅಲ್ಲಿ ಎಂದರೆ ಕರ್ಮಪ್ರಕರಣದಲ್ಲಿ ಕೇವಲ ಯಾಜ್ಞಿಕರು ಯಾಗಮಾಡುವ ಕಾಲದಲ್ಲಿ 'ಈ ಅಗ್ನಿಗೆ ಯಾಗಮಾಡು, ಈ ಇಂದ್ರನಿಗೆ ಯಾಗಮಾಡು' ಎಂಬೀ ಮಾತನ್ನು ಹೇಳುತ್ತಾರಲ್ಲ; ಹೆಸರು, ಶಸ್ತ್ರ[2], ಸ್ತೋತ್ರ, ಕರ್ಮ- ಮುಂತಾದವುಗಳು ಬೇರೆ(ಬೇರೆ)ಯಾಗಿರುವದರಿಂದ ಅಗ್ನಿಯೇ ಮುಂತಾದ ದೇವತೆಯು ಒಂದೊಂದಾಗಿ ಬೇರೆ(ಬೇರೆ)ಯೇ ಎಂದೆಣಿಸಿಕೊಂಡು ಹೇಳುತ್ತಾರಲ್ಲ, ಎಂದರ್ಥ; ಅದನ್ನು ಹಾಗೆ ತಿಳಿಯಬಾರದು. ಏಕೆಂದರೆ ಬೇರೆಬೇರೆ ದೇವತೆಗಳೆಂಬುದೆಲ್ಲ ಇದೇ ಪ್ರಜಾಪತಿಯ ವಿಸೃಷ್ಟಿಯು. ಈತನೇ (ಈ) ಪ್ರಜಾಪತಿಯೇ, ಪ್ರಾಣನೇ[3], ಎಲ್ಲಾ ದೇವತೆಗಳೂ ಆಗಿರುತ್ತಾನೆ.

## ಚರ್ಚೆ: ಹಿರಣ್ಯಗರ್ಭನು ಸಂಸಾರಿಯೆ, ಪರಮಾತ್ಮನೆ?

### ಹಿರಣ್ಯಗರ್ಭನ ವಿಷಯಕ್ಕೆ ಮತಭೇದಗಳು

(ಭಾಷ್ಯ)

೧೧೨. ಅತ್ರ ವಿಪ್ರತಿಪದ್ಯನ್ತೇ। ಪರ ಏವ ಹಿ ಹಿರಣ್ಯಗರ್ಭ ಇತ್ಯೇಕೇ। ಸಂಸಾರೀ ಇತ್ಯಪರೇ। ಪರ ಏವ ತು ಮನ್ತ್ರವರ್ಣಾತ್। "ಇನ್ದ್ರಂ ಮಿತ್ರಂ ವರುಣಮಗ್ನಿಮಾಹುಃ" (ಋ. ೧-೧೬೪-೪೬) ಇತಿ ಶ್ರುತೇಃ "ಏಷ ಬ್ರಹ್ಮೈಷ ಇನ್ದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾಃ"[4] (ಐ. ೫-೩) ಇತಿ ಚ। ಸ್ಮೃತೇಶ್ಚ "ಏತಮೇಕೇ ವದನ್ತ್ಯಗ್ನಿಂ ಮನುಮನ್ಯೇ ಪ್ರಜಾಪತಿಮ್" (ಮನು. ೧೨-೧೨೩) "ಯೋಽಸಾವತೀನ್ದ್ರಿಯೋಽಗ್ರಾಹ್ಯಃ ಸೂಕ್ಷ್ಮೋಽವ್ಯಕ್ತಃ ಸನಾತನಃ। ಸರ್ವಭೂತಮಯೋಽಚಿನ್ತ್ಯಃ ಸ ಏಷ ಸ್ವಯಮುದ್ಬಭೌ" (ಮನು. ೧-೭) ಇತಿ ಚ। ಸಂಸಾರ್ಯೇವ ವಾ ಸ್ಯಾತ್। "ಸರ್ವಾನ್ ಪಾಪ್ಮನ ಔಷತ್" (೧-೪-೧) ಇತಿ

---

1. ವೇದದಲ್ಲಿ ಯಾವದನ್ನಾದರೂ ನಿಂದಿಸಿರುವದು ಬರಿಯ ನಿಂದಿಸುವ ಉದ್ದೇಶದಿಂದಲ್ಲ, ಮತ್ತೊಂದನ್ನು ಹೊಗಳುವದಕ್ಕೆ. ಇದನ್ನು ಮೀಮಾಂಸಕರು 'ನಹಿನಿಂದಾನ್ಯಾಯ'ವೆಂದು ಕರೆಯುತ್ತಾರೆ. ಪ್ರಕೃತದಲ್ಲಿ ಪ್ರಜಾಪತಿಯು ಸರ್ವದೇವತಾತ್ಮನೆಂಬ ಮತವನ್ನು ಹೊಗಳಬೇಕಾಗಿದೆ; ಅದಕ್ಕಾಗಿ ಏಕೈಕದೇವತಾವಾದವನ್ನು ನಿಂದಿಸಿದೆ ಎಂದು ಅಭಿಪ್ರಾಯ.

2. ಹೊಗಳುವ ಋಕ್ಕು.

3. ಪ್ರಾಣನು ಸರ್ವದೇವತಾತ್ಮನೆಂಬುದನ್ನು ಮುಂದೆ ಶಾಕಲ್ಯಬ್ರಾಹ್ಮಣದಲ್ಲಿ ಹೇಳಿದೆ ಎಂಬ ಅಭಿಪ್ರಾಯದ ವಿಶೇಷಣವಿದು. ಆ.ಗಿ.

4. ಇದರ ಮುಂದಿನ 'ಶ್ರುತೇಃ' ಎಂಬ ಮಾತು ಬೇಕಿಲ್ಲ.

ಶ್ರುತೇಃ। ನ ಹಿ ಅಸಂಸಾರಿಣಃ ಪಾಪ್ಮದಾಹಪ್ರಸಙ್ಗೋಽಸ್ತಿ। ಭಯಾರತಿ ಸಂಯೋಗಶ್ರವಣಾಚ್ಚ। "ಅಥ ಯನ್ಮರ್ತ್ಯಃ ಸನ್ನಮೃತಾನಸೃಜತ" (೧-೪-೬) ಇತಿ ಚ। "ಹಿರಣ್ಯಗರ್ಭಂ ಪಶ್ಯತ ಜಾಯಮಾನಮ್" (ಶ್ವೇ. ೪-೧೨) ಇತಿ ಚ ಮನ್ತ್ರವರ್ಣಾತ್। ಸ್ಮೃತೇಶ್ಚ ಕರ್ಮವಿಪಾಕಪ್ರಕ್ರಿಯಾಯಾಮ್ "ಬ್ರಹ್ಮಾ ವಿಶ್ವಸೃಜೋ ಧರ್ಮೋಽಮಹಾನವ್ಯಕ್ತಮೇವ ಚ। ಉತ್ತಮಾಂ ಸಾತ್ತ್ವಿಕೀಮೇತಾಂ ಗತಿಮಾಹುರ್ಮನೀಷಿಣಃ॥" (ಮನು. ೧೨-೫೦).

(ಭಾಷ್ಯಾರ್ಥ)

ಇಲ್ಲಿ (ವಾದಿಗಳು) ವಿರುದ್ಧಾಭಿಪ್ರಾಯವುಳ್ಳವರಾಗಿರುತ್ತಾರೆ. (ಹೇಗೆಂದರೆ), ಹಿರಣ್ಯಗರ್ಭನು ಪರ(ಮಾತ್ಮನೇ) ಎಂದು ಕೆಲವರು, ಅವನು ಸಂಸಾರಿ ಎಂದು ಮತ್ತೆ ಕೆಲವರು.

(ಮೊದಲನೆಯ ಪಕ್ಷದವರ ಅಭಿಪ್ರಾಯವೇನೆಂದರೆ): (ಹಿರಣ್ಯಗರ್ಭನು) ಪರ(ಮಾತ್ಮ)ನೇ ; ಏಕೆಂದರೆ " ಇಂದ್ರ, ಮಿತ್ರ, ವರುಣ, ಅಗ್ನಿ– ಎಂದು (ಬಗೆ ಬಗೆಯಿಂದ) ಕರೆಯುತ್ತಾರೆ" (ಋ. ಸಂ. ೧-೧೬೪-೪೬) ಎಂದೂ "ಇದೇ ಬ್ರಹ್ಮನು, ಇದೇ ಇಂದ್ರನು, ಇದೇ ಪ್ರಜಾಪತಿಯು, (ಇದೇ) ಈ ಎಲ್ಲಾ ದೇವತೆಗಳೂ" (ಐ. ೫-೩) ಎಂದೂ ಶ್ರುತಿಯಿದೆ. "ಕೆಲವರು ಈತನನ್ನು ಅಗ್ನಿಯೆನ್ನುವರು, ಮತ್ತೆ ಕೆಲವರು ಮನುವೆನ್ನುವರು, (ಮತ್ತೂ ಕೆಲವರು) ಪ್ರಜಾಪತಿಯೆನ್ನುವರು" (ಮನು. ೧೨-೧೨೩) ಎಂದೂ " ಈ ಅತೀಂದ್ರಿಯನೂ ಅಗ್ರಾಹ್ಯನೂ ಸೂಕ್ಷ್ಮನೂ ಅವ್ಯಕ್ತನೂ ಸನಾತನನೂ ಸರ್ವಭೂತಮಯನೂ ಅಚಿಂತ್ಯನೂ ಆಗಿರುವ (ದೇವ) ನಿದಾನಲ್ಲ, ಆ ಇವನು ತಾನೇ ತೋರಿಕೊಂಡನು" (ಮನು. ೧-೭) ಎಂದೂ ಸ್ಮೃತಿಯೂ ಇದೆ.

(ಇನ್ನು ಎರಡನೆಯ ಪಕ್ಷದವರ ಅಭಿಪ್ರಾಯವೇನೆಂದರೆ, ಹಿರಣ್ಯಗರ್ಭನು) ಸಂಸಾರಿಯೇ ಆಗಿದಾನೆಂದು (ಹೇಳ)ಬಹುದು. ಏಕೆಂದರೆ "ಎಲ್ಲಾ ಪಾಪ ಗಳನ್ನೂ ಸುಟ್ಟುಕೊಂಡನು" (೧-೪-೧) ಎಂದು ಶ್ರುತಿಯಲ್ಲಿ ಹೇಳಿರುತ್ತದೆ, ಸಂಸಾರಿಯಲ್ಲದವನಿಗೆ ಪಾಪವನ್ನು ಸುಟ್ಟುಕೊಳ್ಳಬೇಕಾದ ಪ್ರಸಂಗವೇ ಇರುವ ದಿಲ್ಲ. ಭಯ, ಅರತಿ- ಇವುಗಳ ಸಂಬಂಧವನ್ನು ಶ್ರುತಿಯಲ್ಲಿ ಹೇಳಿರುವದ ರಿಂದಲೂ " ತಾನು ಮರ್ತ್ಯನಾಗಿದ್ದುಕೊಂಡು ಅಮೃತರನ್ನು ಸೃಜಿಸಿದನಲ್ಲ" ಎಂದು (ಈ ಕಂಡಿಕೆಯಲ್ಲಿ) ಹೇಳಿರುವದರಿಂದಲೂ (ಅವನು ಸಂಸಾರಿಯೇ). "ಹುಟ್ಟುತ್ತಿರುವ ಹಿರಣ್ಯಗರ್ಭನನ್ನು ನೋಡಿರಿ" (ಶ್ವೇ. ೪-೧೨) ಎಂದು ಮಂತ್ರವರ್ಣವಿರುವದರಿಂದಲೂ (ಹೀಗೆಂದು ತಿಳಿಯಬೇಕು). ಕರ್ಮವಿಪಾಕ

ಪ್ರಕರಣದಲ್ಲಿ[1] "ಬ್ರಹ್ಮನು, ವಿಶ್ವಸೃಜರು, ಧರ್ಮನು, ಮಹಾನ್ (ಆತ್ಮನು), ಮತ್ತು ಅವ್ಯಕ್ತವು- ಇದೇ ಉತ್ತಮವಾದ ಸಾತ್ತ್ವಿಕಗತಿಯೆಂದು ತಿಳಿದವರು ಹೇಳುತ್ತಾರೆ" (ಮನು. ೧೨-೫೦) ಎಂದು ಸ್ಮೃತಿಯಿರುವದರಿಂದಲೂ (ಹೀಗೆ)[2].

## ಸಿದ್ಧಾಂತ : ಹಿರಣ್ಯಗರ್ಭನಿಗೆ ಉಪಾಧಿವಶದಿಂದ ಸಂಸಾರಿತ್ವ

(ಭಾಷ್ಯ)

೧೧೩. ಅಥೈವಂ ವಿರುದ್ಧಾರ್ಥಾನುಪಪತ್ತೇಃ ಪ್ರಾಮಾಣ್ಯವ್ಯಾಘಾತಃ ಇತಿ ಚೇತ್ ನ । ಕಲ್ಪನಾನ್ತರೋಪಪತ್ತೇರವಿರೋಧಾತ್ । ಉಪಾಧಿವಿಶೇಷಸಂಬನ್ಧಾತ್ ವಿಶೇಷಕಲ್ಪನಾತ್[3] ಕಲ್ಪನಾನ್ತರಮ್ ಉಪಪದ್ಯತೇ। "ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ। ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ" (ಕ.೧-೨-೨೧) ಇತ್ಯೇವಮಾದಿಶ್ರುತಿಭ್ಯಃ। ಉಪಾಧಿವಶಾತ್ ಸಂಸಾರಿತ್ವಂ ನ ಪರಮಾರ್ಥತಃ। ಸ್ವತೋಽಸಂಸಾರ್ಯೇವ। ಏವಮ್ ಏಕತ್ವಂ ನಾನಾತ್ವಂ ಚ ಹಿರಣ್ಯಗರ್ಭಸ್ಯ। ತಥಾ ಸರ್ವಜೀವಾನಾಮ್ "ತತ್ತ್ವಮಸಿ" (ಛಾಂ. ೬-೮-೭) ಇತಿ ಶ್ರುತೇಃ। ಹಿರಣ್ಯಗರ್ಭಸ್ತು ಉಪಾಧಿಶುದ್ಧ್ಯತಿಶಯಾಪೇಕ್ಷಯಾ ಪ್ರಾಯಶಃ ಪರ ಏವೇತಿ ಶ್ರುತಿಸ್ಮೃತಿವಾದಾಃ ಪ್ರವೃತ್ತಾಃ। ಸಂಸಾರಿತ್ವಂ ತು ಕ್ವಚಿದೇವ ದರ್ಶಯನ್ತಿ। ಜೀವಾನಾಂ ತು ಉಪಾಧಿಗತಾಶುದ್ಧಿಬಾಹುಲ್ಯಾತ್ ಸಂಸಾರಿತ್ವಮೇವ ಪ್ರಾಯಶೋಽಭಿಲಪ್ಯತೇ। ವ್ಯಾವೃತ್ತಕೃತ್ಸ್ನೋಪಾಧಿಭೇದಾಪೇಕ್ಷಯಾ ತು ಸರ್ವಃ ಪರತ್ವೇನ ಅಭಿಧೀಯತೇ ಶ್ರುತಿಸ್ಮೃತಿವಾದೈಃ। ತಾರ್ಕಿಕೈಸ್ತು ಪರಿತ್ಯಕ್ತಾಗಮಬಲೈಃ 'ಅಸ್ತಿ', 'ನಾಸ್ತಿ', 'ಕರ್ತಾ', 'ಅಕರ್ತಾ' ಇತ್ಯಾದಿವಿರುದ್ಧಂ ಬಹುತರ್ಕಯದ್ಭಿಃ ಆಕುಲೀಕೃತಃ ಶಾಸ್ತ್ರಾರ್ಥಃ। ತೇನಾರ್ಥನಿಶ್ಚಯೋ ದುರ್ಲಭಃ। ಯೇ ತು ಕೇವಲಶಾಸ್ತ್ರಾನುಸಾರಿಣಃ ಶಾನ್ತದರ್ಪಾಃ, ತೇಷಾಂ ಪ್ರತ್ಯಕ್ಷವಿಷಯೇ ಇವ ನಿಶ್ಚಿತಃ ಶಾಸ್ತ್ರಾರ್ಥೋ ದೇವತಾದಿವಿಷಯಃ॥

(ಭಾಷ್ಯಾರ್ಥ)

(ಆಕ್ಷೇಪ):— ಹಾಗಾದರೆ (ಒಂದಕ್ಕೊಂದು) ವಿರುದ್ಧವಾದ (ಎರಡು) ಅರ್ಥಗಳೂ ಇರುವಹಾಗಿಲ್ಲವಾದ್ದರಿಂದ (ವೇದ)ಪ್ರಾಮಾಣ್ಯವೇ ತಪ್ಪಿ ಹೋಗುವದಲ್ಲ !

---

1. ಕರ್ಮವು ಪಕ್ವವಾದ ಬಳಿಕ ಕೊಡುವ ಫಲವನ್ನು ತಿಳಿಸುವ ಪ್ರಕರಣ.

2. ಬ್ರಹ್ಮನೆಂದರೆ ವಿರಾಟ್ಪುರುಷನು, ವಿಶ್ವಸೃಜರು ಎಂದರೆ ಮನ್ವಾದಿಗಳು, ಧರ್ಮವೆಂದರೆ ಧರ್ಮಾಭಿಮಾನಿದೇವತೆಯಾದ ಯಮನು, ಮಹಾನ್ ಎಂದರೆ ಸೂತ್ರಾತ್ಮನು, ಅವ್ಯಕ್ತವೆಂದರೆ ಅವ್ಯಾಕೃತಾತ್ಮನು.

3. ಇಲ್ಲಿ ಈ ಮಾತು ಅವಶ್ಯವೆಂದು ತೋರುತ್ತದೆ.

(ಪರಿಹಾರ):—ಹಾಗಲ್ಲ. ಏಕೆಂದರೆ ಮತ್ತೊಂದು ಕಲ್ಪನೆಯನ್ನು (ಮಾಡ) ಬಹುದಾಗಿರುವದರಿಂದ (ಈ ಎರಡಕ್ಕೂ ಒಂದಕ್ಕೊಂದಕ್ಕೆ) ವಿರೋಧವಿರುವದಿಲ್ಲ. ಉಪಾಧಿವಿಶೇಷಸಂಬಂಧದಿಂದ (ಅವನಿಗೆ ಆಯಾ) ವಿಶೇಷವನ್ನು ಕಲ್ಪಿಸುವದರಿಂದ ಮತ್ತೊಂದು ಕಲ್ಪನೆಯೂ ಹೊಂದುತ್ತದೆ. "ಕುಳಿತಿದ್ದು ದೂರಕ್ಕೆ ಹೋಗುತ್ತಾನೆ, ಮಲಗಿದ್ದು ಎಲ್ಲಾ ಕಡೆಗೂ ಹೋಗುತ್ತಾನೆ; ಆ ಮದಾಮದನಾದ[1] ದೇವನನ್ನು ನನ್ನ ಹೊರತು ಬೇರೆ ಯಾವನು ತಿಳಿಯಲಾಪನು ?" (ಕ. ೧-೨-೨೧) ಎಂಬಿದೇ ಮುಂತಾದ ಶ್ರುತಿಗಳಿಂದ (ಹೀಗೆಂದು ಸಿದ್ಧವಾಗುತ್ತದೆ).

ಉಪಾಧಿವಶದಿಂದ (ಅವನು) ಸಂಸಾರಿಯಾಗಿರುವನೇ ಹೊರತು ನಿಜವಾಗಿಯಲ್ಲ; (ಅವನು) ಸ್ವತಃ ಅಸಂಸಾರಿಯೇ. ಹೀಗೆ ಹಿರಣ್ಯಗರ್ಭನು ಒಬ್ಬನೂ (ಆಗಿದ್ದಾನೆ) ಬೇರೆಬೇರೆಯೂ ಆಗಿದ್ದಾನೆ;[2] ಇದರಂತೆಯೇ ಸರ್ವಜೀವರೂ (ಪ್ರತಿಯೊಬ್ಬರೂ ಒಬ್ಬರೂ ಅನೇಕರೂ ಆಗಿರುತ್ತಾರೆ). ಏಕೆಂದರೆ "ಅದೇ ನೀನಾಗಿರುವೆ" (ಛಾಂ.೬-೮-೭) ಎಂದು ಶ್ರುತಿಯಿದೆ.[3] ಹಿರಣ್ಯಗರ್ಭನಾದರೋ (ಅವನ) ಉಪಾಧಿಯು ಹೆಚ್ಚಾಗಿ ವಿಶುದ್ಧವಾಗಿರುವದೆಂಬ ಕಾರಣದಿಂದ[4] ಪರಮಾತ್ಮನೇ ಎಂದು ಬಲುಮಟ್ಟಿಗೆ ಶ್ರುತಿಸ್ಮೃತಿವಾದಗಳು ಹೊರಟಿರುತ್ತವೆ; (ಅವನು) ಸಂಸಾರಿಯೆಂದು ಎಲ್ಲಿಯೋ ಕೆಲವು ಕಡೆಗಳಲ್ಲಿ ಮಾತ್ರ ತಿಳಿಸಿರುತ್ತದೆ. ಆದರೆ ಜೀವರಿಗೆ ಉಪಾಧಿಯಲ್ಲಿ ಅಶುದ್ಧಿಯು ಹೆಚ್ಚಾಗಿರುವದರಿಂದ[5] (ಅವರು) ಸಂಸಾರಿಗಳೆಂದೇ ಬಲುಮಟ್ಟಿಗೆ ಹೇಳಿರುತ್ತದೆ. ಯಾವ ಉಪಾಧಿಯೂ ಇಲ್ಲದ ದೃಷ್ಟಿಯಿಂದಲಾದರೊ, ಪ್ರತಿಯೊಬ್ಬನೂ ಪರಮಾತ್ಮನೇ ಎಂದು ಶ್ರುತಿಸ್ಮೃತಿವಾದಗಳು (ಹೇಳುವದಕ್ಕೆ) ಹೊರಟಿವೆ.[6]

---

1. ಹರ್ಷಯುಕ್ತನೂ ಹರ್ಷರಹಿತನೂ ಆಗಿರುವ.

2. ಉಪಾಧಿಗಳನ್ನು ಕೈಬಿಟ್ಟರೆ ಒಬ್ಬನೇ, ಉಪಾಧಿಗಳಿಂದ ಬೇರೆ ಬೇರೆ ಜೀವರುಗಳಾಗಿರುತ್ತಾನೆ.

3. ಆದ್ದರಿಂದ ಪರಮಾರ್ಥವಾದ ನಿರುಪಾಧಿಕದೃಷ್ಟಿಯಿಂದ ಅವರು ಪರಮಾತ್ಮನೇ ಆಗಿರುವದರಿಂದ ಒಬ್ಬರು; ವ್ಯವಹಾರದೃಷ್ಟಿಯಿಂದ ಅನೇಕ ಉಪಾಧಿಗಳಿಂದೊಡಗೂಡಿರುವದರಿಂದ ಅನೇಕರು.

4. ಹಿರಣ್ಯಗರ್ಭನ ಉಪಾಧಿಯು ಸಮಷ್ಟಿಯಾದ ಅಂತಃಕರಣವು; ಅದರಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ–ಇವುಗಳು ಮಿಗಿಲಿಲ್ಲದಷ್ಟು ಇರುತ್ತವೆ, ಜೀವರುಗಳ ಉಪಾಧಿಗಳಲ್ಲಿ ಅವನಿಗೆ ಅಭಿಮಾನವಿಲ್ಲದ್ದರಿಂದ ಅವನಿಗೆ ಆ ಸಂಬಂಧವಾದ ಅಶುದ್ಧಿಯಿಲ್ಲ.

5. ಜೀವರ ಉಪಾಧಿಗಳು ವ್ಯಷ್ಟಿಯಾದ ಅಂತಃಕರಣಗಳು; ಅವುಗಳಲ್ಲಿ ರಾಗ, ದ್ವೇಷ, ಮೋಹ- ಮುಂತಾದ ಅಶುದ್ಧಿಗಳು ಹೇರಳವಾಗಿರುವವು.

6. ಇದು ವಸ್ತುಸ್ವಭಾವವನ್ನು ಅನುಸರಿಸಿರುವದರಿಂದ ಪರಮಾರ್ಥವಾಗಿವೆ.

ತಾರ್ಕಿಕರಾದರೋ ಆಗಮದ ಬಲವನ್ನು ಬಿಟ್ಟಿರುವದರಿಂದ[1] 'ಇದೆ, ಇಲ್ಲ, ಕರ್ತೃ, ಅಕರ್ತೃ'–ಎಂದುಮುಂತಾಗಿ[2] ವಿರುದ್ಧವಾದ (ಅರ್ಥವನ್ನು) ಬಹಳವಾಗಿ ಊಹಿಸುತ್ತಿರುವರಾದ್ದರಿಂದ ಶಾಸ್ತ್ರಾರ್ಥವನ್ನು ಕಲಸಿಬಿಟ್ಟಿರುತ್ತಾರೆ. ಅದರಿಂದ ಅರ್ಥವನ್ನು ನಿಶ್ಚಯಿಸುವದು (ಅವರಿಗೆ) ಕಷ್ಟವಾಗಿರುತ್ತದೆ. ಆದರೆ ಯಾರು ಬರಿಯ ಶಾಸ್ತ್ರವನ್ನೇ ಅನುಸರಿಸುವರೋ ಶಾಂತದರ್ಪರಾಗಿರುವರೋ[3] ಅವರಿಗೆ ಪ್ರತ್ಯಕ್ಷವಿಷಯದಲ್ಲಿ ಹೇಗೋ ಹಾಗೆ ದೇವತಾದಿವಿಷಯದಲ್ಲಿ ಶಾಸ್ತ್ರಾರ್ಥವು ನಿಶ್ಚಿತವಾಗಿ (ತಿಳಿದಿರು)ತ್ತದೆ.[4]

## ಸೋಮದ ಸೃಷ್ಟಿ

### (ಭಾಷ್ಯ)

೧೧೪. ತತ್ರ ಪ್ರಜಾಪತೇಃ ಏಕಸ್ಯ ದೇವಸ್ಯ ಅನ್ನಾನ್ನಾದಲಕ್ಷಣೋ[5] ಭೇದೋ ವಿವಕ್ಷಿತಃ ಇತಿ। ತತ್ರಾಗ್ನಿರುಕ್ತೋಽನ್ನಾದಃ। ಅನ್ನಾದ್ಯಃ ಸೋಮಃ ಇದಾನೀಮುಚ್ಯತೇ।[6] ಅಥ ಯತ್ಕಿಂಚೇದಂ ಲೋಕೇ ಆರ್ದ್ರಂ ದ್ರವಾತ್ಮಕಂ ತತ್ ರೇತಸಃ ಆತ್ಮನೋ ಬೀಜಾತ್ ಅಸೃಜತ। "ರೇತಸ ಆಪಃ" (ಐ. ೧-೪) ಇತಿ ಶ್ರುತೇಃ। ದ್ರವಾತ್ಮಕಶ್ಚ ಸೋಮಃ। ತಸ್ಮಾತ್ ಯತ್ ಆರ್ದ್ರಂ ಪ್ರಜಾಪತಿನಾ ರೇತಸಃ ಸೃಷ್ಟಂ ತದು ಸೋಮ ಏವ॥

### (ಭಾಷ್ಯಾರ್ಥ)

ಇಲ್ಲಿ ಪ್ರಜಾಪತಿಯೆಂಬ ಒಬ್ಬನೇ ದೇವನಿಗೆ ಅನ್ನ, ಅನ್ನಾದ ಎಂಬ ಭೇದವನ್ನು ಹೇಳಬೇಕೆಂದು ಹೊರಟಿರುತ್ತದೆ. ಅವುಗಳಲ್ಲಿ ಅನ್ನಾದನಾದ ಅಗ್ನಿಯನ್ನು ಹೇಳಿದ್ದಾಯಿತು. ಈಗ ಅನ್ನಾದ್ಯವಾದ ಸೋಮವನ್ನು ಹೇಳಲಾಗುತ್ತದೆ. ಇನ್ನು ಲೋಕದಲ್ಲಿ ಈ ಒದ್ದೆಯಾಗಿರುವದು, ಎಂದರೆ ನೀರಾಗಿರುವದು ಯಾವಯಾವ

---

1. ಶಾಸ್ತ್ರವನ್ನು ಅನುಸರಿಸುವಂತೆ ತೋರುವ ತಾರ್ಕಿಕರೂ ತರ್ಕಕ್ಕೇ ಪ್ರಾಧಾನ್ಯವನ್ನು ಕೊಟ್ಟಿರುತ್ತಾರಾದ್ದರಿಂದ ಅವರಿಗೂ ಆಗಮಬಲವಿಲ್ಲ ಎಂದು ಭಾವ.

2. ಐ. ಭಾ. ೧-೩ರ ಉಪಸಂಹಾರವನ್ನು (ಭಾ. ಭಾ. ೭೧) ನೋಡಿರಿ.

3. ದರ್ಪವೇ ಮುಂತಾದ ದೋಷಗಳಿಂದ ಕೂಡಿದ ಅಂತಃಕರಣದಿಂದ ವಿಷಯವನ್ನು ವಿಮರ್ಶಿಸುವವರಿಗೆ ಬಗೆಬಗೆಯ ವಿಕಲ್ಪಗಳೇ ಸರಿಯೆಂದು ಕಾಣುವವು; ಇದೇ ತತ್ತ್ವವೆಂಬ ನಿರ್ಧಾರಣೆಯು ಅವರಿಗೆ ಸಾಧ್ಯವಿಲ್ಲ.

4. ಶಾಸ್ತ್ರವು ಇದ್ದದ್ದನ್ನು ಇದ್ದಂತೆ ತಿಳಿಸುವದರಿಂದ ಪ್ರತ್ಯಕ್ಷದಂತೆ ನೇರಾಗಿ ಅನುಭವವನ್ನುಂಟುಮಾಡಿಬಿಡುತ್ತದೆ.

5. ಅನ್ನಾದಿ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

6. ಅಚ್ಚಿನ ಪುಸ್ತಕದಲ್ಲಿ ಇದಾದಮೇಲೆ 'ಏಕಸ್ಯೈವ ಪ್ರಜಾಪತೇಃ ದ್ವಿಧಾ ಉಪಾಸ್ಯತ್ವಾಯ ಅಗ್ನಿಸರ್ಗಮುಕ್ತ್ವಾ ಅನ್ನಸರ್ಗಮಾಹ ಪಾ॥

ದುಂಟೋ ಅದನ್ನು ರೇತಸ್ಸಿನಿಂದ ತನ್ನ ಬೀಜದಿಂದ ಸೃಜಿಸಿದನು. "ರೇತಸ್ಸಿನಿಂದ ಅಪ್ಪು (ಉಂಟಾಯಿತು)" (ಐ. ೧-೪) ಎಂಬ ಶ್ರುತಿಯು (ಇದನ್ನೇ ಹೇಳುತ್ತದೆ). ಸೋಮವಾದರೋ ದ್ರವಾತ್ಮಕವಾಗಿರುತ್ತದೆ. ಆದ್ದರಿಂದ ಪ್ರಜಾಪತಿಯು (ತನ್ನ) ರೇತಸ್ಸಿನಿಂದ ಯಾವ ಒದ್ದೆಯಾದ (ವಸ್ತುವನ್ನು) ಸೃಜಿಸಿದನೋ, ಅದು ಸೋಮವೇ.

## ಇವೆಲ್ಲವೂ ಅಗ್ನೀಷೋಮಗಳಲ್ಲಿ ಅಡಕ

(ಭಾಷ್ಯ)

೧೩೫. ಏತಾವದ್ವಾ ಏತಾವದೇವ ನಾತೋಽಧಿಕಮ್ ಇದಂ ಸರ್ವಮ್। ಕಿಂ ತತ್? ಅನ್ನಂ ಚೈವ ಸೋಮಃ ದ್ರವಾತ್ಮಕತ್ವಾತ್ ಆಪ್ಯಾಯಕಮ್। ಅನ್ನಾದಶ್ಚ ಅಗ್ನಿಃ। ಔಷ್ಣ್ಯಾತ್, ರೂಕ್ಷತ್ವಾಚ್ಚ। ತತ್ರ ಏವಮ್ ಅವಧ್ರಿಯತೇ। ಸೋಮ ಏವ ಅನ್ನಮ್। ಯತ್ ಅದ್ಯತೇ ತದೇವ ಸೋಮಃ ಇತ್ಯರ್ಥಃ। ಯ ಏವ ಅತ್ತಾ ಸ ಏವಾಗ್ನಿಃ। ಅರ್ಥಬಲಾದ್ ಹಿ ಅವಧಾರಣಮ್। ಅಗ್ನಿರಪಿ ಕ್ವಚಿತ್ ಹೂಯಮಾನಃ ಸೋಮಪಕ್ಷಸ್ಯೈವ। ಸೋಮೋಽಪಿ ಇಜ್ಯಮಾನಃ ಅಗ್ನಿರೇವ ಅತ್ತೃತ್ವಾತ್। ಏವಮ್ ಅಗ್ನೀಷೋಮಾತ್ಮಕಂ ಜಗತ್ ಆತ್ಮತ್ವೇನ ಪಶ್ಯನ್ ನ ಕೇನಚಿತ್ ದೋಷೇಣ ಲಿಪ್ಯತೇ। ಪ್ರಜಾಪತಿಶ್ಚ ಭವತಿ॥

(ಭಾಷ್ಯಾರ್ಥ)

(ಏತಾವದ್ವಾ=ಏತಾವದೇವ) ಇದೆಲ್ಲವೂ, ಇಷ್ಟೇ ಇದಕ್ಕಿಂತ ಹೆಚ್ಚಿಗೆಯಿಲ್ಲ. ಅದು ಯಾವದು? ಎಂದರೆ ಸೋಮವು, ಅನ್ನವು; ಏಕೆಂದರೆ (ಸೋಮವು) ನೀರಾಗಿರುವದರಿಂದ ಆಪ್ಯಾಯನವಾಗಿರುತ್ತದೆ. ಅಗ್ನಿಯು ಅನ್ನಾದನು; ಏಕೆಂದರೆ (ಬೆಂಕಿಯು) ಬಿಸಿಯಾಗಿಯೂ ಒಣಗಿಸುವದಾಗಿಯೂ ಇರುತ್ತದೆ. ಇಲ್ಲಿ ಹೀಗೆ ಅವಧಾರಣೆಮಾಡಲಾಗುತ್ತದೆ: ಸೋಮನೇ ಅನ್ನವು ಎಂದರೆ ಯಾವದನ್ನು ತಿನ್ನುತ್ತಾರೋ ಅದೇ ಸೋಮವು ಎಂದರ್ಥ. (ಹೀಗೆಯೇ) ಯಾವನು ತಿನ್ನುವವನೋ ಅವನೇ ಅಗ್ನಿಯು (ಎಂದು ಮುಂದಿನ ವಾಕ್ಯದ ಅರ್ಥ). ಏಕೆಂದರೆ ಅರ್ಥಬಲದಿಂದಲೇ ಅವಧಾರಣೆ(ಮಾಡತಕ್ಕದ್ದು ಯುಕ್ತವು)[1] ಅಗ್ನಿಯೂ ಕೆಲವು ಕಡೆಗಳಲ್ಲಿ ಹೋಮವಾಗುವದುಂಟು; (ಆಗ ಅದು) ಸೋಮಪಕ್ಷಕ್ಕೇ (ಸೇರಿದ್ದು). ಸೋಮವೂ (ಅದರಲ್ಲಿ ಯಾವದನ್ನಾದರೂ) ಯಾಗಮಾಡುವಾಗ ಅಗ್ನಿಯೇ; ಏಕೆಂದರೆ (ಆಗ ಅದು) ಅನ್ನವನ್ನು ತಿನ್ನತಕ್ಕದ್ದಾಗಿರು

---

1. ಅನ್ನವನ್ನು ಎಂದರೆ ಸಂಹರಣೀಯವಾದವದ್ದೆಲ್ಲವನ್ನೂ ಸೋಮವೆಂದೂ ಅನ್ನಾದನನ್ನು ಎಂದರೆ ಸಂಹರ್ತೃವನ್ನು ಅಗ್ನಿಯೆಂದೂ ಅವಧಾರಣಮಾಡಿದರೆ ಎಲ್ಲವೂ ಅಗ್ನೀಷೋಮಾತ್ಮಕವೆಂಬ ಅರ್ಥವು ಬರುವದು. ಆದ್ದರಿಂದ 'ಸೋಮ ಏವಾನ್ನಮ್' ಎಂಬ ವಾಕ್ಯವನ್ನು 'ಅನ್ನಂ ಸೋಮ ಏವ' ಎಂಬ ಅವಧಾರಣೆಗಾಗಿ ಹೇಳಿದೆ ಎಂದೇ ವ್ಯಾಖ್ಯಾನಮಾಡಬೇಕು- ಎಂದು ಭಾವ.

ತ್ತದೆ.[1] ಈ ರೀತಿಯಲ್ಲಿ ಅಗ್ನೀಷೋಮಾತ್ಮಕವಾದ ಜಗತ್ತನ್ನು ತಾನೆಂದು ಭಾವಿಸುವವನಿಗೆ ಯಾವ ದೋಷವೂ ಇರುವದಿಲ್ಲ[2]; ಅವನು ಪ್ರಜಾಪತಿಯೂ ಆಗುವನು[3].

## ಪ್ರಜಾಪತಿಯ ಅತಿಸೃಷ್ಟಿಯ ಉಪಾಸನೆಯ ಫಲ

(ಭಾಷ್ಯ)

೧೧೬. ಸೈಷಾ ಬ್ರಹ್ಮಣಃ ಪ್ರಜಾಪತೇಃ ಅತಿಸೃಷ್ಟಿಃ, ಆತ್ಮನೋಽಪಿ ಅತಿಶಯಾ। ಕಾ ಸಾ ಇತಿ? ಆಹ–ಯಚ್ಛ್ರೇಯಸಃ ಪ್ರಶಸ್ಯತರಾನ್ ಆತ್ಮನಃ ಸಕಾಶಾತ್ ಯಸ್ಮಾತ್ ಅಸೃಜತ ದೇವಾನ್, ತಸ್ಮಾತ್ ದೇವಸೃಷ್ಟಿಃ ಅತಿಸೃಷ್ಟಿಃ। ಕಥಂ ಪುನಃ ಆತ್ಮನೋಽತಿಶಯಾ ಸೃಷ್ಟಿರಿತಿ? ಅತ ಆಹ। ಅಥ ಯತ್ ಯಸ್ಮಾತ್ ಮರ್ತ್ಯಃ ಸನ್-ಮರಣಧರ್ಮಾ ಸನ್ ಅಮೃತಾನ್ ಅಮರಣಧರ್ಮಿಣಃ ದೇವಾನ್ ಕರ್ಮಜ್ಞಾನವಹ್ನಿನಾ ಸರ್ವಾನ್ ಆತ್ಮನಃ ಪಾಪ್ಮನ ಓಷಿತ್ವಾ ಅಸೃಜತ, ತಸ್ಮಾತ್ ಇಯಮ್ ಅತಿಸೃಷ್ಟಿಃ ಉತ್ಕೃಷ್ಟಜ್ಞಾನಸ್ಯ ಫಲಮ್ ಇತ್ಯರ್ಥಃ। ತಸ್ಮಾತ್ ಏತಾಮ್ ಅತಿಸೃಷ್ಟಿಂ ಪ್ರಜಾಪತೇಃ ಆತ್ಮಭೂತಾಮ್ ಯೋ ವೇದ ಸ ಏತಸ್ಯಾಮ್ ಅತಿಸೃಷ್ಟ್ಯಾಂ ಪ್ರಜಾಪತಿರಿವ ಭವತಿ। ಪ್ರಜಾಪತಿವದೇವ ಸ್ರಷ್ಟಾ ಭವತಿ ॥

(ಭಾಷ್ಯಾರ್ಥ)

ಆ ಇದು ಬ್ರಹ್ಮನ, ಪ್ರಜಾಪತಿಯ, ಅತಿಸೃಷ್ಟಿಯು, ತನಗಿಂತಲೂ ಅತಿಶಯವಾದ (ಸೃಷ್ಟಿಯು). ಅದು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ಒಳ್ಳೆಯವರನ್ನು ಎಂದರೆ ತನಗಿಂತಲೂ ಉತ್ತಮವಾದ ದೇವತೆಗಳನ್ನು ಸೃಜಿಸಿದನಲ್ಲ, ಆದ್ದರಿಂದ (ಈ) ದೇವಸೃಷ್ಟಿಯು ಅತಿಸೃಷ್ಟಿಯು. (ಈ) ಸೃಷ್ಟಿಯು ತನಗಿಂತಲೂ ಅತಿಶಯವಾದದ್ದೆಂಬುದು ಹೇಗೆ? ಎಂದರೆ ಅದಕ್ಕೆ (ಶ್ರುತಿ) ಹೇಳುತ್ತದೆ: ಇನ್ನು (ತಾನು) ಮರ್ತ್ಯನಾಗಿದ್ದುಕೊಂಡು ಸಾವೆಂಬ ಧರ್ಮವುಳ್ಳವ

---

1. ಇಲ್ಲಿ ಇಂಥದ್ದೊಂದು ಸೋಮವೇ ಅಥವಾ ಅಗ್ನಿಯೇ ಎಂದು ಅವಧಾರಣೆಮಾಡಿಲ್ಲ. ಪ್ರತಿಯೊಂದೂ ಅಪೇಕ್ಷಾವಿಶೇಷದಿಂದ ಅನ್ನವೂ ಅನ್ನಾದವೂ ಆಗಿರುವದರಿಂದ ಎಲ್ಲವೂ ಅಗ್ನೀಷೋಮಾತ್ಮಕವಾಗಿರುತ್ತದೆ ಎಂಬುದರಲ್ಲಿಯೇ ತಾತ್ಪರ್ಯವೆಂದು ಭಾವ. ಪ್ರ. ಭಾ. ಭಾ. ಭಾ. ೬ನ್ನು ನೋಡಿ.

2. ಅನ್ನಾನ್ನಾದರೂಪನಾದ, ಅಗ್ನೀಷೋಮಾತ್ಮಕರೂಪನಾದ, ಪ್ರಜಾಪತಿಯೇ ನಾನು ಎಂದು ಉಪಾಸನೆಮಾಡಿದವನಿಗೆ ಯಾವ ಅನ್ನದೋಷವೂ ಇರುವದಿಲ್ಲ. ಇದು ದೃಷ್ಟಫಲವು.

3. ಇದು ಅದೃಷ್ಟಫಲವು.

ನಾಗಿದ್ದರೂ[1] ಅಮೃತರಾದ ಸಾವೆಂಬ ಧರ್ಮವಿಲ್ಲದ ದೇವತೆಗಳನ್ನು, ಕರ್ಮಜ್ಞಾನಗಳೆಂಬ ಬೆಂಕಿಯಿಂದ ತನ್ನ ಪಾಪಗಳನ್ನೆಲ್ಲ ಸುಟ್ಟುಹಾಕಿ ಸೃಜಿಸಿದನಲ್ಲ, ಆದ್ದರಿಂದ ಇದು ಅತಿಸೃಷ್ಟಿಯು, ಉತ್ಕೃಷ್ಟವಾದ ಜ್ಞಾನದ ಫಲವು[2] ಎಂದರ್ಥ.

ಆದ್ದರಿಂದ ಈ ಪ್ರಜಾಪತಿಯ ಸ್ವರೂಪವೇ ಆಗಿರುವ ಈ ಅತಿಸೃಷ್ಟಿಯನ್ನು ಯಾವನು ಅರಿತುಕೊಳ್ಳುವನೋ[3] ಅವನು ಈ ಅತಿಸೃಷ್ಟಿಯಲ್ಲಿ ಆ ಪ್ರಜಾಪತಿಯಂತೆ ಆಗುವನು, ಪ್ರಜಾಪತಿಯಂತೆಯೇ ಸ್ರಷ್ಟೃವಾಗುವನು[4].

## ವಿದ್ಯಾವಿದ್ಯೆಗಳ ಸೂತ್ರಗಳು

(ಉಪನಿಷತ್ತು)

ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಮೇವ ವ್ಯಾಕ್ರಿಯತಾಸೌ ನಾಮಾಯಮಿದಗ್ಂ ರೂಪ ಇತಿ ತದಿದಮಪ್ಯೇತರ್ಹಿ ನಾಮರೂಪಾಭ್ಯಾಮೇವ ವ್ಯಾಕ್ರಿಯತೇಽಸೌನಾಮಾಯಮಿದಗ್ಂ ರೂಪ ಇತಿ ಸ ಏಷ ಇಹ ಪ್ರವಿಷ್ಟಃ। ಆನಖಾಗ್ರೇಭ್ಯೋ ಯಥಾ ಕ್ಷುರಃ ಕ್ಷುರಧಾನೇಽವಹಿತಃ ಸ್ಯಾದ್ವಿಶ್ವಂಭರೋ ವಾ ವಿಶ್ವಂಭರಕುಲಾಯೇ ತಂ ನ ಪಶ್ಯನ್ತಿ ಅಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ ವಾಕ್ಪಶ್ಯಗ್ಂ ಶ್ಚಕ್ಷುಃ ಶೃಣ್ವಞ್ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತ್ಯಾತ್ಮೇತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವನ್ತಿ। ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾಽನೇನ ಹ್ಯೇತತ್ ಸರ್ವಂ ವೇದ। ಯಥಾ ಹ ವೈ ಪದೇನಾನುವಿನ್ದೇದೇವಂ ಕೀರ್ತಿಗ್ಂ ಶ್ಲೋಕಂ ವಿನ್ದತೇ ಯ ಏವಂ ವೇದ ॥ ೭ ॥

---

1. ಪೂರ್ವಕಲ್ಪದ ಯಜಮಾನಾವಸ್ಥೆಯಲ್ಲಿ ಪ್ರಜಾಪತಿಯು ಮರ್ತ್ಯನೇ ಆಗಿದ್ದನು.

2. ಉಪಾಸನೆಯ ಬಲದಿಂದಲೇ ಈಗ ಅವನು ಇಂಥ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವುಳ್ಳವನಾದನು.

3. ಯಾವನು ಹೀಗೆಂದು ಉಪಾಸನೆಮಾಡಿ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವನೋ ಎಂದರ್ಥ.

4. ದೇವತೆಗಳನ್ನು ಸೃಜಿಸುವ ಪ್ರಜಾಪತಿಯಾಗುವನು.

೭. ಆ ಇದು ಆಗ ಅವ್ಯಾಕೃತವಾಗಿತ್ತು. 'ಇದು ಈ ನಾಮವುಳ್ಳದ್ದು, ಈ ರೂಪವುಳ್ಳದ್ದು' ಎಂದು ನಾಮರೂಪಗಳಿಂದಲೇ ವ್ಯಾಕೃತವಾಯಿತು. ಆ ಇದು ಈಗಲೂ 'ಇದು ಈ ನಾಮವುಳ್ಳದ್ದು, ಈ ರೂಪವುಳ್ಳದ್ದು' ಎಂದು ನಾಮರೂಪಗಳಿಂದಲೇ ವ್ಯಾಕೃತವಾಗುತ್ತಿದೆ. ಆ ಇವನು ಇಲ್ಲಿ ಉಗುರುತುದಿಗಳವರೆಗೂ ಒಳಹೊಕ್ಕನು. ಹೇಗೆ ಕ್ಷುರವು ಕ್ಷುರಧಾನದಲ್ಲಿ ಇಡಲ್ಪಟ್ಟಿರುವದೋ ಅಥವಾ ವಿಶ್ವಂಭರವು ವಿಶ್ವಂಭರಕುಲಾಯದಲ್ಲಿಡಲ್ಪಟ್ಟಿರುವದೋ (ಹಾಗೆ ಒಳಹೊಕ್ಕನು). ಅವನನ್ನು ಕಾಣದೆ ಇರುವರು. ಏಕೆಂದರೆ ಅವನು ಅಕೃತ್ಸ್ನನು. ಪ್ರಾಣನಮಾಡುವಾಗಲೇ ಪ್ರಾಣನು ಎಂದಾಗುವನು; ಮಾತನಾಡುವಾಗ ವಾಕ್ಕು, ನೋಡುವಾಗ ಚಕ್ಷುಸ್ಸು; ಕೇಳುವಾಗ ಶ್ರೋತ್ರವು; ಮನನಮಾಡುವಾಗ ಮನಸ್ಸು (ಎನಿಸುವನು). ಅವುಗಳು ಇವನಿಗೆ ಕರ್ಮನಾಮಗಳೇ. ಆದ್ದರಿಂದ ಯಾವನು ಒಂದೊಂದಾಗಿ ಉಪಾಸನೆಮಾಡುವನೋ ಅವನು ಅರಿಯನು. ಇವನು ಅಕೃತ್ಸ್ನನಲ್ಲವೆ? ಈ ಒಂದೊಂದರಿಂದಲೇ (ಕೂಡಿದವನಾಗಿರುತ್ತಾನೆ). ಆತ್ಮನೆಂದೇ ಉಪಾಸನೆಮಾಡಬೇಕು. ಏಕೆಂದರೆ ಇಲ್ಲಿಯೇ ಇವೆಲ್ಲವೂ ಏಕವಾಗುವವು. ಈ ಆತ್ಮನಿದಾನಲ್ಲ, ಆ ಇದು ಇದೆಲ್ಲಕ್ಕೂ ಪದನೀಯವು; ಏಕೆಂದರೆ ಹೇಗೆ ಪದದಿಂದ ಪಡೆದುಕೊಳ್ಳುತ್ತಾರೆಯೋ ಹಾಗೆ ಇದೆಲ್ಲವನ್ನೂ ಅರಿತುಕೊಳ್ಳುತ್ತಾನೆ. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಕೀರ್ತಿಯನ್ನೂ ಶ್ಲೋಕವನ್ನೂ ಹೊಂದುವನು.

## ಕಂಡಿಕೆಯ ಸಂಬಂಧ

(ಭಾಷ್ಯ)

೧೧೭. 'ತದ್ಧೇದಂ ತರ್ಹ್ಯವ್ಯಾಕೃತಮಾಸೀತ್'। ಸರ್ವಂ ವೈದಿಕಂ ಸಾಧನಂ ಜ್ಞಾನಕರ್ಮಲಕ್ಷಣಂ ಕರ್ತ್ರಾದ್ಯನೇಕಕಾರಕಾಪೇಕ್ಷಂ ಪ್ರಜಾಪತಿತ್ವಫಲಾವಸಾನಂ ಸಾಧ್ಯಂ[1] ಚ ಏತಾವದೇವ ಯದೇತದ್ ವ್ಯಾಕೃತಮ್ ಜಗತ್ ಸಂಸಾರಃ। ಅಥ ಏತಸ್ಯೈವ ಸಾಧ್ಯಸಾಧನಲಕ್ಷಣಸ್ಯ ವ್ಯಾಕೃತಸ್ಯ ಜಗತೋ ವ್ಯಾಕರಣಾತ್ ಪ್ರಾಕ್ ಬೀಜಾವಸ್ಥಾ ಯಾ ತಾಂ ನಿರ್ದಿದಿಕ್ಷತಿ ಅಙ್ಕುರಾದಿಕಾರ್ಯಾನುಮಿತಾಮಿವ ವೃಕ್ಷಸ್ಯ। ಕರ್ಮಬೀಜೋಽವಿದ್ಯಾಕ್ಷೇತ್ರೋ ಹ್ಯಸೌ

---

1. ಮೂಲದಲ್ಲಿರುವ 'ಸಾಧ್ಯಮ್' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

ಸಂಸಾರವೃಕ್ಷಃ ಸಮೂಲ ಉದ್ಧರ್ತವ್ಯಃ ಇತಿ। ತದುದ್ಧರಣೇ ಹಿ ಪುರುಷಾರ್ಥ ಪರಿಸಮಾಪ್ತಿಃ। ತಥಾ ಚೋಕ್ತಮ್ "ಊರ್ಧ್ವಮೂಲೋಽವಾಕ್ಶಾಖಃ"(ಕ.೨-೩-೧) ಇತಿ ಕಾಠಕೇ। ಗೀತಾಸು ಚ "ಊರ್ಧ್ವಮೂಲಮಧಃಶಾಖಮ್" (ಗೀ. ೧೫-೧), ಇತಿ, ಪುರಾಣೇ ಚ "ಬ್ರಹ್ಮವೃಕ್ಷಃ ಸನಾತನಃ" (?) ಇತಿ ||

(ಭಾಷ್ಯಾರ್ಥ)

'ತದ್ಧೇದಂ ತರ್ಹ್ಯವ್ಯಾಕೃತಮಾಸೀತ್' (ಎಂಬ ಕಂಡಿಕೆಯ ಸಂಬಂಧ ವೇನೆಂದರೆ), ಜ್ಞಾನಕರ್ಮಗಳ ರೂಪವಾಗಿರುವ, ಕರ್ತೃವೇ ಮುಂತಾದ ಅನೇಕ ಕಾರಕಗಳ ಅಪೇಕ್ಷೆಯಿಂದಿರುವ ಎಲ್ಲಾ ವೈದಿಕಸಾಧನವೂ[1] ಪ್ರಜಾಪತಿತ್ವವೆಂಬ ಫಲದಲ್ಲಿ ಕೊನೆಗಾಣುವ ಸಾಧ್ಯವೂ ಆದ ಈ ವ್ಯಾಕೃತವಾದ ಜಗತ್ತೆಂಬ ಸಂಸಾರ ವಿದೆಯಷ್ಟೆ, ಇಷ್ಟೇ.[2] ಇನ್ನು ಈ ಸಾಧ್ಯಸಾಧನರೂಪವಾಗಿರುವ ವ್ಯಾಕೃತಜಗತ್ತೇ (ನಾಮರೂಪಗಳಾಗಿ) ವ್ಯಾಕೃತವಾಗುವ ಮುಂಚೆ (ಇದರ) ಬೀಜಾವಸ್ಥೆಯಿರು ದಲ್ಲ, ಅದನ್ನು ತಿಳಿಸಬೇಕೆಂದು (ಈಗ ಶ್ರುತಿ) ಹೊರಟಿರುತ್ತದೆ. ಅಂಕುರವೇ ಮುಂತಾದ ಕಾರ್ಯದಿಂದಅನುಮಾನಿಸಬೇಕಾಗಿರುವ ಮರದ( ಬೀಜಾವಸ್ಥೆ)ಯಂತೆ (ಇದೂ ಅನುಮಾನಿಸಿ ತಿಳಿಯತಕ್ಕದ್ದಾಗಿದೆ.)[3] ಈ ಸಂಸಾರವೆಂಬ ವೃಕ್ಷಕ್ಕೆ ಕರ್ಮವೇ ಬೀಜವು, ಅವಿದ್ಯೆಯೇ ಕ್ಷೇತ್ರವು; (ಇದನ್ನು) ಬೇರುಮುಟ್ಟ ಕಿತ್ತು ಹಾಕಬೇಕೆಂಬ ಕಾರಣದಿಂದ (ಹೀಗೆ ಪ್ರಾರಂಭಿಸಿದೆ)[4]. ಅದನ್ನು ಕಿತ್ತುಹಾಕಿದರೇ ಪುರುಷಾರ್ಥವು ಪ್ರಾಪ್ತವಾಗುವದು.[5] ಆದ್ದರಿಂದಲೇ ಕಾಠಕದಲ್ಲಿ "ಊರ್ಧ್ವ

---

1. ಉಪಾಸನೆ, ಕರ್ಮ- ಎಂಬ ರೂಪದ ಸಾಧನಕ್ಕೆಲ್ಲ ಕರ್ತ್ರಾದಿಕಾರಕಗಳು ಬೇಕು.

2. ಸಾಧ್ಯಸಾಧನಗಳೆರಡೂ ವ್ಯಾಕೃತಸಂಸಾರದಲ್ಲಿಯೇ ಅಡಕವಾಗಿವೆ ಎಂದು ಅವತರಣಿಕೆ ಯಲ್ಲಿ (ಭಾ.ಭಾ. ೫ರಲ್ಲಿ) ಹೇಳಿರುವದು ಈ ಕಂಡಿಕೆಯ ಆಧಾರದಿಂದಲೇ.

3. ಜಗತ್ತು ಕಾರ್ಯವು, ಅವ್ಯಾಕೃತವು ಕಾರಣವು; ಎರಡೂ ಅವಿದ್ಯಾಕಲ್ಪಿತವೇ ಸೂ.ಭಾ. ೨-೧-೨೭ (ಭಾ.ಭಾ. ೪೬೪). ಅವಿದ್ಯಾನಿಮಿತ್ತವಾದ ವಿಭಾಗಶಕ್ತಿಯಾದ ಈ ಅವ್ಯಾಕೃತವನ್ನು ಅನುಮಾನದಿಂದ ತಿಳಿಯಬೇಕಾಗಿದೆ ಎಂಬುದನ್ನು ಸೂ.ಭಾ. ೨-೧-೯ (ಭಾ.ಭಾ. ೪೨೫)ರಲ್ಲಿ ತಿಳಿಸಿದೆ.

4. ಬೇರಿನಂತಿರುವ ಅವ್ಯಾಕೃತವೂ ವೃಕ್ಷದಂತಿರುವ ಸಂಸಾರವೂ ಮಿಥ್ಯೆ ಎಂಬುದನ್ನು ತಿಳಿಸುವದಕ್ಕಾಗಿ ಅವ್ಯಾಕೃತವಿಚಾರವನ್ನು ತಿಳಿಸಿದೆ. ಆದ್ದರಿಂದಲೇ ವಿದ್ಯೆಯಿಂದ ಅದನ್ನು ಕಿತ್ತುಹಾಕುವದು ಸಾಧ್ಯ ಎಂದು ಭಾವ.

5. ಪರಮಪುರುಷಾರ್ಥವಾದ ಮುಕ್ತಿಯು ದೊರಕುವದು. ಧರ್ಮಾದಿಗಳು ದೊರೆ ತರೂ ಆತ್ಯಂತಿಕಪುರುಷಾರ್ಥವು ದೊರಕಿದಂತಲ್ಲ; ಏಕೆಂದರೆ, ಅವೆಲ್ಲವೂ ಅವಿದ್ಯಾಕಾಮಕರ್ಮ ಗಳೊಳಗೇ ಅಡಕವಾಗಿರುತ್ತವೆ.

ಮೂಲವೂ ಅವಾಕ್ಶಾಖವೂ (ಆಗಿರುವದು ಈ ಸನಾತನವಾದ ಅಶ್ವತ್ಥವೃಕ್ಷವು)" (ಕ. ೨-೬-೧) ಎಂದೂ ಗೀತೆಗಳಲ್ಲಿ "ಮೇಲೆ ಬೇರೂ ಕೆಳಗೆ ಕೊಂಬೆಗಳೂ (ಆಗಿರುವ ಈ ಅಶ್ವತ್ಥವು ಅವ್ಯಯವೆನ್ನುವರು)" (ಗೀ. ೧೫-೧) ಎಂದೂ ಪುರಾಣದಲ್ಲಿಯೂ "ಸನಾತನನಾದ ಬ್ರಹ್ಮವೃಕ್ಷವು[1]" (?) ಎಂದೂ ಹೇಳಿರುತ್ತದೆ.[2]

## ಅವ್ಯಾಕೃತವೆಂದರೆ ಯಾವದು ?

(ಭಾಷ್ಯ)

೧೧೮. ತದ್ಧೇದಮ್ । ತದಿತಿ ಬೀಜಾವಸ್ಥಂ ಜಗತ್ ಪ್ರಾಗುತ್ಪತ್ತೇಃ ತರ್ಹಿ ತಸ್ಮಿನ್ ಕಾಲೇ ಪರೋಕ್ಷತ್ವಾತ್ ಸರ್ವನಾಮ್ನಾ ಅಪ್ರತ್ಯಕ್ಷಾಭಿಧಾನೇನ ಅಭಿಧೀಯತೇ । ಭೂತಕಾಲಸಂಬನ್ಧಿತ್ವಾತ್ ಅವ್ಯಾಕೃತಭಾವಿನೋ ಜಗತಃ । ಸುಖಗ್ರಹಣಾರ್ಥಮ್ ಐತಿಹ್ಯಪ್ರಯೋಗೋ ಹಶಬ್ದಃ । ಏವಂ ಹ ತದಾಸೀತ್ ಇತ್ಯುಚ್ಯಮಾನೇ ಸುಖಂ ತಾಂ ಪರೋಕ್ಷಾಮಪಿ ಜಗತೋ ಬೀಜಾವಸ್ಥಾಂ ಪ್ರತಿಪದ್ಯತೇ 'ಯುಧಿಷ್ಠಿರೋ ಹ ಕಿಲ ರಾಜಾ ಆಸೀತ್' ಇತ್ಯುಕ್ತೇ ಯದ್ವತ್ । ಇದಮ್ ಇತಿ ವ್ಯಾಕೃತನಾಮರೂಪಾತ್ಮಕಂ ಸಾಧ್ಯಸಾಧನಲಕ್ಷಣಂ ಯಥಾವರ್ಣಿತಮ್ ಅಭಿಧೀಯತೇ । ತದಿದಂಶಬ್ದಯೋಃ ಪರೋಕ್ಷಪ್ರತ್ಯಕ್ಷಾವಸ್ಥಜಗದ್ವಾಚಕಯೋಃ ಸಾಮಾನಾಧಿಕರಣ್ಯಾತ್ ಏಕತ್ವಮೇವ ಪರೋಕ್ಷಪ್ರತ್ಯಕ್ಷಾವಸ್ಥಸ್ಯ ಜಗತೋಽವಗಮ್ಯತೇ ತದೇವೇದಮ್, ಇದಮೇವ ಚ ತತ್ ಅವ್ಯಾಕೃತಮಾಸೀತ್ ಇತಿ । ಅಥ ಏವಂ ಸತಿ ನಾಸತ ಉತ್ಪತ್ತಿಃ ನ ಸತೋ ವಿನಾಶಃ ಕಾರ್ಯಸ್ಯ ಇತ್ಯವಧೃತಂ ಭವತಿ ॥

(ಭಾಷ್ಯಾರ್ಥ)

'ತದ್ಧೇದಮ್' (ಎಂಬ ಕಂಡಿಕೆಯಲ್ಲಿ) ಅದು ಎಂದರೆ ಬೀಜಾವಸ್ಥೆಯಲ್ಲಿದ್ದ ಜಗತ್ತು, ಹುಟ್ಟುವ ಮುಂಚೆ[3] ಆಗ ಆ ಕಾಲದಲ್ಲಿ ಪರೋಕ್ಷವಾಗಿರುವದರಿಂದ (ಬೀಜಾವಸ್ಥೆಯ ಜಗತ್ತನ್ನು) ಅಪ್ರತ್ಯಕ್ಷವಾದದ್ದನ್ನು ಹೇಳುವ (ತತ್ ಎಂಬ) ಸರ್ವನಾಮದಿಂದ ಹೇಳಿರುತ್ತದೆ;[4] ಅವ್ಯಾಕೃತಭಾವದಲ್ಲಿ ಜಗತ್ತು

---

1. ಈ ಪುರಾಣವು ಯಾವದೆಂಬುದು ತಿಳಿಯಲಿಲ್ಲ. ಶಿವಪುರಾಣ (೬-೧-೧೦-೭೬) ದಲ್ಲಿದ್ದರೂ ಆ ಪುರಾಣವನ್ನು ಆಚಾರ್ಯರು ಮತ್ತೆಲ್ಲಿಯೂ ಉದಾಹರಿಸಿರುವಂತೆ ಕಾಣಲಿಲ್ಲ. ಮಹಾಭಾರತದಲ್ಲಿ (ಅಶ್ವ. ೩೫-೪೭) ಈ ಅರ್ಥದ ಶ್ಲೋಕಗಳಿವೆ. ಗೀ.ಭಾ. ೧೫-೧ರಲ್ಲಿ ಇವನ್ನು ಪೂರ್ಣವಾಗಿ ಉದಾಹರಿಸಿದೆ.

2. ಸಂಸಾರವನ್ನು ನಾಶಗೊಳಿಸಿಕೊಂಡರೆ ಮೋಕ್ಷವೆಂದು ಹೇಳಿದೆ ಎಂದರ್ಥ.

3. 'ಹುಟ್ಟುವ ಮುಂಚಿನ ಜಗತ್ತು, ಎಂದು ಹಿಂದಕ್ಕೂ ಇದನ್ನು ಅನ್ವಯಿಸಿಕೊಳ್ಳಬಹುದು.

4. ಸಂಸ್ಕೃತದಲ್ಲಿ ತತ್ ಎಂಬ ಸರ್ವನಾಮವು ಪರೋಕ್ಷವಾಚಕವು.

ಭೂತಕಾಲಕ್ಕೆ ಸಂಬಂಧಪಟ್ಟಿರುವದರಿಂದ (ಅದು ಪರೋಕ್ಷವು).[1] ಸುಲಭವಾಗಿ ತಿಳಿಯುವದಕ್ಕಾಗಿ ಐತಿಹ್ಯವನ್ನು[2] (ತಿಳಿಸುವದಕ್ಕೆ) ಪ್ರಯೋಗಿಸುವ ಹಶಬ್ದವನ್ನು ಉಪಯೋಗಿಸಿದೆ. ಏವಂ ಹ (ಕಿಲ)[3] ತದಾಸೀತ್ (ಹೀಗೆ ಅದು ಇತ್ತಂತೆ) ಎಂದು ಹೇಳಿದರೆ ಪರೋಕ್ಷವಾಗಿದ್ದರೂ ಜಗತ್ತಿನ ಬೀಜಾವಸ್ಥೆಯನ್ನು ಸುಲಭವಾಗಿ ಗ್ರಹಿಸಬಹುದು ; ಯುಧಿಷ್ಠಿರನೆಂಬ ರಾಜನು ಇದ್ದನಂತೆ ; ಎಂದು ಹೇಳಿದರೆ ಹೇಗೆ (ಸುಲಭವಾಗಿ ಗ್ರಹಿಸುತ್ತಾರೋ) ಅದರಂತೆಯೇ.

ಇದು ಎಂಬ ಮಾತಿನಿಂದ ವ್ಯಾಕೃತವಾದ, ನಾಮರೂಪಗಳಾಗಿರುವ, ಸಾಧ್ಯ ಸಾಧನರೂಪದ, ಹಿಂದೆ ವರ್ಣಿಸಿರುವ (ಜಗತ್ತನ್ನು) ಹೇಳಿದೆ. 'ಅದು', 'ಇದು' ಎಂಬ ಪರೋಕ್ಷಪ್ರತ್ಯಕ್ಷಾವಸ್ಥೆಯ ಜಗತ್ತನ್ನು ಹೇಳುವ ಶಬ್ದಗಳನ್ನು ('ಆ ಇದು' ಎಂದು) ಸಮಾನಾಧಿಕರಣವಾಗಿ (ಪ್ರಯೋಗಿಸಿರುವದರಿಂದ) ಪರೋಕ್ಷಪ್ರತ್ಯಕ್ಷಾವಸ್ಥೆಗಳಲ್ಲಿರುವ ಜಗತ್ತು ಒಂದೇ, ಆ (ಅವ್ಯಾಕೃತವೇ) ಇದು, ಇದೇ ಆ ಅವ್ಯಾಕೃತವಾಗಿತ್ತು ಎಂದು, ನಿಶ್ಚಯವಾಗುತ್ತದೆ.[4] ಇನ್ನು ಹೀಗೆಂದಾದರೆ ಇಲ್ಲದ್ದಕ್ಕೆ ಉತ್ಪತ್ತಿಯಿಲ್ಲ, ಇದ್ದ ಕಾರ್ಯಕ್ಕೆ ನಾಶವಿಲ್ಲ ಎಂದು ನಿರ್ಧರಿಸಿದಂತೆ ಆಗುತ್ತದೆ.[5]

## ನಾಮರೂಪವ್ಯಾಕರಣ

(ಭಾಷ್ಯ)

೧೧೯. ತದೇವಂಭೂತಂ ಜಗತ್ ಅವ್ಯಾಕೃತಂ ಸತ್ ನಾಮರೂಪಾಭ್ಯಾಮೇವ ನಾಮ್ನಾ ರೂಪೇಣೈವ ಚ ವ್ಯಾಕ್ರಿಯತ । ವ್ಯಾಕ್ರಿಯತ ಇತಿ ಕರ್ಮಕರ್ತೃ

---

1. ಈಗ ನಮ್ಮ ಎದುರಿಗಿರುವದಾದರೂ ಜಗತ್ತು ಅವ್ಯಾಕೃತವಾಗಿದ್ದಾಗ ಪರೋಕ್ಷವು; ಆದ್ದರಿಂದ ಅದನ್ನು ತತ್ ಎಂಬ ಶಬ್ದದಿಂದ ಕರೆದಿದೆ. ಅವ್ಯಾಕೃತವನ್ನು ಭೂತಕಾಲಕ್ಕೆ ಸಂಬಂಧಿಸಿದ್ದೆಂದು ಹೇಳಿರುವದು ವ್ಯಾವಹಾರಿಕಪ್ರಪಂಚದ ದೃಷ್ಟಿಯಿಂದ ; ನಿಜವಾಗಿ ಅದು ತ್ರಿಕಾಲಾತೀತವಾದದ್ದು. ಮಾಂ. ಭಾ. ಭಾ. ೭ನ್ನು ನೋಡಿ.

2. ಹೀಗಿತ್ತಂತೆ ಎಂಬರ್ಥವನ್ನು.

3. ಕಿಲ ಎಂಬುದು ಹೆಚ್ಚಾಗಿರುವ ಈ ಪಾಠವೂ ಉಂಟು; ಆಗ ಹ,ಕಿಲ ಎಂಬಿವಕ್ಕೆ ವ್ಯಾಖ್ಯಾನವ್ಯಾಖ್ಯೇಯಭಾವವನ್ನು ಕಲ್ಪಿಸಬೇಕು.

4. ಜಗತ್ತು ಮತ್ತೆಮತ್ತೆ ವ್ಯಾಕೃತಾವ್ಯಾಕೃತರೂಪಗಳನ್ನು ಪಡೆಯುತ್ತಿದ್ದರೂ ತನ್ನ ತನವನ್ನು ಕಳೆದುಕೊಳ್ಳುವದಿಲ್ಲ ; ಆದ್ದರಿಂದ ಅಕೃತಾಭ್ಯಾಗಮಾದಿದೋಷಗಳಿಲ್ಲ ಎಂದು ಭಾವ. ಗೀ. ಭಾ. ೮-೧೯ (ಭಾ. ಭಾ. ೫೨೦)ನ್ನು ನೋಡಿ.

5. ಒಂದು ವಸ್ತುವೇ ಕಾರ್ಯಕಾರಣಗಳೆಂಬ ಎರಡು ಅವಸ್ಥೆಗಳನ್ನೂ ಪಡೆಯುವದು ಎಂದರೆ ಸತ್ಕಾರ್ಯವಾದವು ಸಿದ್ಧವಾಗುವದು ಎಂದರ್ಥ.

ಪ್ರಯೋಗಾತ್ ತತ್ ಸ್ವಯಮೇವ ಆತ್ಮೈವ ವ್ಯಾಕ್ರಿಯತ ವಿ ಆ ಅಕ್ರಿಯತ ವಿಸ್ಪಷ್ಟಂ ನಾಮರೂಪವಿಶೇಷಾವಧಾರಣಮರ್ಯಾದಂ ವ್ಯಕ್ತೀಭಾವಮ್ ಆಪದ್ಯತ। ಸಾಮರ್ಥ್ಯಾತ್ ಆಕ್ಷಿಪ್ತನಿಯನ್ತೃಕರ್ತೃಸಾಧನಕ್ರಿಯಾನಿಮಿತ್ತಮ್। ಅಸೌ ನಾಮಾ ಇತಿ ಸರ್ವನಾಮ್ನಾ ಅವಿಶೇಷಾಭಿಧಾನೇನ ನಾಮಮಾತ್ರಂ ವ್ಯಪದಿಶತಿ। ದೇವದತ್ತೋ ಯಜ್ಞದತ್ತಃ ಇತಿ ವಾ ನಾಮ ಅಸ್ಯ ಇತಿ ಅಸೌನಾಮಾಯಮ್। ತಥಾ ಇದಮಿತಿ ಶುಕ್ಲಕೃಷ್ಣಾದೀನಾಮವಿಶೇಷಃ। ಇದಂ ಶುಕ್ಲಮ್ ಇದಂ ಕೃಷ್ಣಂ ವಾ ರೂಪಮ್ ಅಸ್ಯ ಇತಿ ಇದಂರೂಪಃ। ತದಿದಮ್ ಅವ್ಯಾಕೃತಂ ವಸ್ತು ಏತರ್ಹಿ ಏತಸ್ಮಿನ್ನಪಿ ಕಾಲೇ ನಾಮರೂಪಾಭ್ಯಾಮೇವ ವ್ಯಾಕ್ರಿಯತೇ ಅಸೌನಾಮಾಯಮ್ ಇದಂ ರೂಪಃ ಇತಿ॥

(ಭಾಷ್ಯಾರ್ಥ)

ಅದು ಎಂದರೆ ಹೀಗಿರುವ[1] (ಈ) ಜಗತ್ತು ಅವ್ಯಾಕೃತವಾಗಿದ್ದು ನಾಮರೂಪಗಳಿಂದಲೇ ನಾಮದಿಂದಲೂ ಮತ್ತು ರೂಪದಿಂದಲೂ (ಕೂಡಿ)ಯೇ ವ್ಯಾಕೃತವಾಯಿತು. 'ವ್ಯಾಕ್ರಿಯತ'(ವ್ಯಾಕೃತವಾಯಿತು) ಎಂದು ಕರ್ಮಕರ್ತೃಪ್ರಯೋಗ(ವನ್ನು ಮಾಡಿರುವ)ದರಿಂದ[2] ಅದು ತಾನೇ, ತಾನೊಂದೇ ವ್ಯಾಕೃತವಾಯಿತು. (ವ್ಯಾಕ್ರಿಯತ=ವಿ ಆ ಅಕ್ರಿಯತ) ವಿಸ್ಪಷ್ಟವಾಗಿ ಆಯಾ ನಾಮರೂಪಗಳಿಂದು ಗೊತ್ತಾಗುವವರೆಗೂ ವ್ಯಕ್ತೀಭಾವವನ್ನು ಹೊಂದಿತು; ನಿಯಂತೃ, ಕರ್ತೃ, ಸಾಧನ, ಕ್ರಿಯೆ, ನಿಮಿತ್ತ-(ಇಷ್ಟನ್ನೂ) ಬಯಸಿಕೊಂಡು (ವ್ಯಕ್ತೀಭಾವವನ್ನು ಹೊಂದಿತು) ಎಂದು ಸಾಮರ್ಥ್ಯದಿಂದ (ಕಲ್ಪಿಸಬೇಕು)[3]. ಈ 'ನಾಮವುಳ್ಳವನು' ಎಂದು ಸಾಮಾನ್ಯವಾಚಕವಾದ ಸರ್ವನಾಮದಿಂದ ನಾಮಸಾಮಾನ್ಯವನ್ನು ಶ್ರುತಿ

---

1. ಪ್ರಜಾಪತಿತ್ವಫಲಾವಸಾನವಾದ ಸಾಧ್ಯವನ್ನೂ ಅದರ ಜ್ಞಾನಕರ್ಮಗಳೆಂಬ ಸಾಧನವನ್ನೂ ಅಡಕಮಾಡಿಕೊಂಡಿರುವ ಜಗತ್ತು.

2. ವ್ಯಾಕ್ರಿಯತ ಎಂಬುದು ವ್ಯಾಕರಣಮಾಡಲ್ಪಟ್ಟಿತು ಎಂಬರ್ಥದ ಕರ್ಮಣಿ ಪ್ರಯೋಗದಲ್ಲಾಗಲಿ ವ್ಯಾಕರಣವಾಯಿತು ಎಂಬರ್ಥದ ಕರ್ಮಕರ್ತರಿಪ್ರಯೋಗದಲ್ಲಾಗಲಿ ಇವೆ ಎಂದು ಭಾವಿಸಬಹುದು. ಇಲ್ಲಿ ಕರ್ತೃವನ್ನು ಸ್ಪಷ್ಟವಾಗಿ ಹೇಳಿಲ್ಲವಾದ್ದರಿಂದ ಕರ್ಮಕರ್ತರಿ ಪ್ರಯೋಗವೆಂದು ಭಾಷ್ಯದಲ್ಲಿ ಬರೆದಿದೆ.

3. 'ಲೂಯತೇ ಕೇದಾರಃ' (ಹೊಲವು ಕಟಾವಾಗುತ್ತದೆ) ಎಂಬ ಕರ್ಮಕರ್ತರಿ ಪ್ರಯೋಗದಲ್ಲಿಯೂ ಕಟಾವುಮಾಡುವವನು ಇದ್ದೇ ಇದ್ದಾನೆಂದು ಸಾಮರ್ಥ್ಯದಿಂದ ಗೊತ್ತಾಗುವಂತೆ ಇಲ್ಲಿಯೂ ನಿಯಂತೃ (ಈಶ್ವರ) ಕರ್ತೃ (ಜೀವ), ಸಾಧನ (ಕಾರಕ), ಕ್ರಿಯೆ (ಕೆಲಸ)– ಇಷ್ಟೂ ಇದ್ದುಕೊಂಡೇ ವ್ಯಾಕೃತವಾಯಿತು ಎಂದರ್ಥ. ಸೂ ಭಾ. ೧-೪-೨೫ (ಭಾ.ಭಾ. ೩೬೯)ನ್ನು ನೋಡಿ.

ಹೇಳುತ್ತದೆ. 'ದೇವದತ್ತ' ಎಂತಲೋ 'ಯಜ್ಞದತ್ತ' ಎಂತಲೋ ನಾಮವುಳ್ಳವ ನಾದ್ದರಿಂದ ಇವನು (ಅಸೌನಾಮಾ) ಈ ನಾಮವುಳ್ಳವನು (ಎಂದಿದೆ). ಹೀಗೆಯೇ 'ಇದು' ಎಂದು ಬಿಳಿದು, ಕರಿದು ಮುಂತಾದವುಗಳ ಸಾಮಾನ್ಯವನ್ನು (ಕರೆದಿದೆ). 'ಇದು ಬಿಳಿಯದು' ಅಥವಾ 'ಇದು ಕರಿಯದು' ಎಂಬ ರೂಪವು ಇವನದು; ಆದ್ದರಿಂದ (ಇದಂ ರೂಪಃ) ಈ ರೂಪವುಳ್ಳವನು ಎಂದಿದೆ.[1] ಆ ಈ ಅವ್ಯಾಕೃತವಸ್ತು ಈಗಲೂ ಈ ಕಾಲದಲ್ಲಿಯೂ ಇದು ಇಂಥ ನಾಮದ್ದು, ಇದು ಇಂಥ ರೂಪದ್ದು ಎಂದು ನಾಮರೂಪಗಳಾಗಿಯೇ ವ್ಯಾಕೃತವಾಗುತ್ತದೆ.[2]

## ಈಶ್ವರನು ಸೃಷ್ಟಿಯೊಳಗೆ ಪ್ರವೇಶಿಸಿದ್ದು

(ಭಾಷ್ಯ)

೧೨೦. ಯದರ್ಥಃ ಸರ್ವಶಾಸ್ತ್ರಾರಮ್ಭಃ, ಯಸ್ಮಿನ್ ಅವಿದ್ಯಯಾ ಸ್ವಾಭಾವಿಕ್ಯಾ ಕರ್ತೃಕ್ರಿಯಾಫಲಾಧ್ಯಾರೋಪಣಾ ಕೃತಾ ಯಃ ಕಾರಣಂ ಸರ್ವಸ್ಯ ಜಗತಃ, ಯದಾತ್ಮಕೇ ನಾಮರೂಪೇ ಸಲಿಲಾದಿವ ಸ್ವಚ್ಛಾತ್ ಮಲಮಿವ ಫೇನಮ್ ಅವ್ಯಾಕೃತೇ ವ್ಯಾಕ್ರಿಯೇತೇ, ಯಶ್ಚ ತಾಭ್ಯಾಂ ನಾಮರೂಪಾಭ್ಯಾಂ ವಿಲಕ್ಷಣಃ ಸ್ವತೋ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಸ ಏಷಃ ಅವ್ಯಾಕೃತೇ ಆತ್ಮಭೂತೇ ನಾಮರೂಪೇ ವ್ಯಾಕುರ್ವನ್ ಬ್ರಹ್ಮಾದಿಸ್ತಮ್ಬಪರ್ಯನ್ತೇಷು ದೇಹೇಷು ಇಹ ಕರ್ಮಫಲಾಶ್ರಯೇಷು ಅಶನಾಯಾದಿಮತ್ಸು ಪ್ರವಿಷ್ಟಃ ||

(ಭಾಷ್ಯಾರ್ಥ)

ಶಾಸ್ತ್ರವೆಲ್ಲವೂ ಯಾರಿಗಾಗಿ ಪ್ರಾರಂಭವಾಗಿದೆಯೋ,[3] ಯಾವನಲ್ಲಿ ಸ್ವಾಭಾವಿಕವಾದ[4] ಅವಿದ್ಯೆಯಿಂದ ಕರ್ತೃಕ್ರಿಯಾಫಲಗಳ ಅಧ್ಯಾರೋಪಣವನ್ನು ಮಾಡ

---

1. 'ಇಂಥ ಹೆಸರಿನವನು', 'ಇಂಥ ರೂಪದವನು' ಎಂದು ಹೇಳುವುದು ಬೇರೆ ಬೇರೆಯ ನಾಮಗಳ ಮತ್ತು ರೂಪಗಳ ಸಾಮಾನ್ಯವನ್ನು ಸೂಚಿಸುತ್ತದೆ. ಅವುಗಳಿಂದ ಬೇರೆ ಬೇರೆಯ ಹೆಸರುಗಳನ್ನೂ ರೂಪಗಳನ್ನೂ ಗ್ರಹಿಸಬೇಕು ಎಂದರ್ಥ.

2. ಒಂದೊಂದು ವಸ್ತುವೂ ಬೇರೆಬೇರೆಯ ನಾಮರೂಪಗಳಿಂದ ಬಿಡಿಬಿಡಿಯಾಗಿ ತೋರಿಕೊಳ್ಳುತ್ತದೆ.

3. ಕರ್ಮಕಾಂಡವೂ ಉಪನಿಷತ್ತೂ ಆತನನ್ನೇ ತಾತ್ಪರ್ಯದಿಂದ ಹೇಳುತ್ತದೆ. ಕ. ಭಾ. ೧-೨-೧೫, ಭಾ. ಭಾ. ೬೭ ನೋಡಿ.

4. ಅನಿವಾರಿತಸಿದ್ಧವಾದ.

ಲಾಗಿದೆಯೋ[1] ಯಾವನು (ಈ) ಜಗತ್ತಿಗೆಲ್ಲ ಕಾರಣನೋ[2], ಯಾವನ ರೂಪವಾಗಿರುವ ಅವ್ಯಾಕೃತನಾಮರೂಪಗಳು ನಿರ್ಮಲವಾದ ನೀರಿನಿಂದ ಕೊಳೆಯಾದ ನೊರೆಯು (ಬರು)ವಂತೆ ವ್ಯಾಕೃತವಾಗುವವೋ ಮತ್ತು ಯಾವನು ಆ ನಾಮರೂಪಗಳಿಂದ ವಿಲಕ್ಷಣನಾಗಿ ತನ್ನ ರೂಪದಲ್ಲಿ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವನೋ[3] ಆ ಈತನು ಅವ್ಯಾಕೃತವಾದ (ತನ್ನ) ಸ್ವರೂಪವೇ ಆಗಿರುವ ನಾಮರೂಪಗಳನ್ನು ವ್ಯಾಕರಣಮಾಡುವವನಾಗಿ ಇಲ್ಲಿ ಎಂದರೆ ಕರ್ಮಫಲಗಳಿಗೆ ಆಶ್ರಯವಾಗಿರುವ ಹಸಿವು ಮುಂತಾದವುಗಳುಳ್ಳ ಬ್ರಹ್ಮನು ಮುಂತಾಗಿ ಸ್ತಂಬದವರೆಗಿನ (ಪ್ರಾಣಿಗಳ) ದೇಹಗಳಲ್ಲಿ, ಒಳಹೊಕ್ಕನು.

# ಈಶ್ವರನ ಪ್ರವೇಶದ ವಿಷಯದಲ್ಲಿ ಚರ್ಚೆ

## ಜಗತ್ತು ಪರಮೇಶ್ವರನಿಂದಲೇ ವ್ಯಾಕೃತವಾಗುತ್ತದೆ

(ಭಾಷ್ಯ)

೧೨೧. ನನು ಅವ್ಯಾಕೃತಂ ಸ್ವಯಮೇವ ವ್ಯಾಕ್ರಿಯತ ಇತ್ಯುಕ್ತಮ್ । ಕಥಮಿದಮ್ ಇದಾನೀಮ್ ಉಚ್ಯತೇ ಪರ ಏವ ತು ಆತ್ಮಾ ಅವ್ಯಾಕೃತಂ ವ್ಯಾಕುರ್ವನ್ ಇಹ ಪ್ರವಿಷ್ಟಃ ಇತಿ? ನೈಷ ದೋಷಃ ।ಪರಸ್ಯಾಪಿ ಆತ್ಮನಃ ಅವ್ಯಾಕೃತಜಗದಾತ್ಮತ್ವೇನ ವಿವಕ್ಷಿತತ್ವಾತ್ । ಆಕ್ಷಿಪ್ತನಿಯನ್ತೃಕರ್ತೃಕ್ರಿಯಾನಿಮಿತ್ತಂ ಹಿ ಜಗತ್ ಅವ್ಯಾಕೃತಂ ವ್ಯಾಕ್ರಿಯತ ಇತ್ಯವೋಚಾಮ । ಇದಂಶಬ್ದಸಾಮಾನಾಧಿಕರಣ್ಯಾಚ್ಚ ಅವ್ಯಾಕೃತಶಬ್ದಸ್ಯ । ಯಥಾ ಇದಂ ಜಗತ್ ನಿಯನ್ತ್ರಾದ್ಯನೇಕಕಾರಕನಿಮಿತ್ತಾದಿ ವಿಶೇಷವತ್ ವ್ಯಾಕೃತಮ್ ತಥಾ ಅಪರಿತ್ಯಕ್ತಾನ್ಯತಮವಿಶೇಷವದೇವ ತತ್ ಅವ್ಯಾಕೃತಮ್। ವ್ಯಾಕೃತಾವ್ಯಾಕೃತಮಾತ್ರಂ ತು ವಿಶೇಷಃ । ದೃಷ್ಟಶ್ಚ ಲೋಕೇ ವಿವಕ್ಷಾತಃ ಶಬ್ದಪ್ರಯೋಗಃ ಗ್ರಾಮ ಆಗತಃ, 'ಗ್ರಾಮಃ ಶೂನ್ಯಃ' ಇತಿ । ಕದಾಚಿತ್, ಗ್ರಾಮಶಬ್ದೇನ ನಿವಾಸಮಾತ್ರವಿವಕ್ಷಾಯಾಂ 'ಗ್ರಾಮಃ ಶೂನ್ಯಃ' ಇತಿ ಶಬ್ದಪ್ರಯೋಗೋ ಭವತಿ । ಕದಾಚಿತ್ ನಿವಾಸಿಜನವಿವಕ್ಷಾಯಾಂ 'ಗ್ರಾಮ ಆಗತಃ' ಇತಿ । ಕದಾಚಿತ್ ಉಭಯ

---

1. ಕರ್ತೃತ್ವಾದಿರಹಿತನಾದ ಪರಮಾತ್ಮನೇ ಜಗತ್ತಿನೊಳಗಿರುತ್ತಾನೆ; ಜಗತ್ತು ಅವಿದ್ಯಾಕಲ್ಪಿತವಾಗಿರುವದರಿಂದ ಆವನು ಕರ್ತ್ರಾದಿರೂಪದಿಂದ ತೋರುತ್ತಿರುತ್ತಾನೆ ಎಂದು ಭಾವ.

2. ಆವನೇ ಉಪಾದಾನಕಾರಣವು; ಅವನು ಜಗತ್ತಿಗೆ ಬರಿಯ ಕರ್ತೃವಲ್ಲ. ಸೂ. ಭಾ. ೧-೪-೨೩, ಭಾ. ಭಾ. ೩೯೧ನ್ನು ನೋಡಿ.

3. ನೊರೆಗೆ ಸ್ವರೂಪವು ನೀರೇ ಆಗಿರುವಂತೆ ಜಗತ್ತಿನ ಪರಮಾರ್ಥರೂಪವು ಪರಮಾತ್ಮನೇ. ನೀರುನೊರೆಗಳ ದೃಷ್ಟಾಂತಕ್ಕೆ ಛಾಂ. ಭಾ. ೮-೧೪-೧, ಐ. ಭಾ. ೧-೧ ಇವುಗಳನ್ನು ನೋಡಿ. ಮುಂದೆ ೩-೫-೧ರ ಭಾಷ್ಯದಲ್ಲಿಯೂ ಇದನ್ನು ವಿವರಿಸಲಾಗುತ್ತದೆ.

ವಿವಕ್ಷಾಯಾಮಪಿ ಗ್ರಾಮಶಬ್ದಪ್ರಯೋಗೋ ಭವತಿ 'ಗ್ರಾಮಂ ಚ ನ ಪ್ರವಿಶೇತ್' (ಗೌ. ಧ. ೧-೪-೩೨) ಇತಿ ಯಥಾ। ತದ್ವತ್ ಇಹಾಪಿ 'ಜಗದಿದಂ ವ್ಯಾಕೃತಮ್ ಅವ್ಯಾಕೃತಂ ಚ' ಇತ್ಯಭೇದವಿವಕ್ಷಾಯಾಮ್ ಆತ್ಮಾನಾತ್ಮನೋ ರ್ಭವತಿ ವ್ಯಪದೇಶಃ। ತಥಾ 'ಇದಂ ಜಗತ್ ಉತ್ಪತ್ತಿವಿನಾಶಾತ್ಮಕಮ್' ಇತಿ ಕೇವಲಜಗದ್ವ್ಯಪದೇಶಃ। ತಥಾ 'ಮಹಾನಜ ಆತ್ಮಾಽಸ್ಥೂಲೋಽನಣುಃ ಸ ಏಷ ನೇತಿ ನೇತಿ' ಇತ್ಯಾದಿ ಕೇವಲಾತ್ಮವ್ಯಪದೇಶಃ॥

(ಭಾಷ್ಯಾರ್ಥ)

(ಆಕ್ಷೇಪ):—ಅವ್ಯಾಕೃತವು ತಾನೇ ವ್ಯಾಕೃತವಾಯಿತು ಎಂದು ಹಿಂದೆ ಹೇಳಿದೆ. ಆದರೆ ಈಗ ಪರಮಾತ್ಮನೇ ಅವ್ಯಾಕೃತಗಳನ್ನು ವ್ಯಾಕರಣಮಾಡುವವನಾಗಿ ಇಲ್ಲಿ ಒಳಹೊಕ್ಕನು ಎಂಬಿದನ್ನು ಹೇಳಿದೆಯಲ್ಲ (ಇದು) ಹೇಗೆ (ಸರಿ) ?

(ಪರಿಹಾರ):—ಇದು ತಪ್ಪಲ್ಲ. ಏಕೆಂದರೆ ಪರಮಾತ್ಮನೂ ಅವ್ಯಾಕೃತ ಜಗದ್ರೂಪನಾಗಿರುವನೆಂದು (ಇಲ್ಲಿ) ವಿವಕ್ಷಿತವಾಗಿರುತ್ತದೆ[1] ನಿಯಂತೃ, ಕರ್ತೃ, ಕ್ರಿಯೆ, ನಿಮಿತ್ತ- ಇವುಗಳನ್ನು ಬಯಸಿಯೇ ಅವ್ಯಾಕೃತಜಗತ್ತು ವ್ಯಾಕೃತವಾಯಿತು ಎಂದಲ್ಲವೆ, ನಾವು ಹಿಂದೆ ಹೇಳಿರುವದು ? ಅವ್ಯಾಕೃತ ಎಂಬ ಶಬ್ದವನ್ನು 'ಇದು' ಎಂಬ ಶಬ್ದದೊಡನೆ ಸಮಾನಾಧಿಕರಣವಾಗಿ ಉಪಯೋಗಿಸಿರುವದರಿಂದಲೂ[2] (ಹೀಗೆಂದು ತಿಳಿಯಬೇಕು). ಈ ಜಗತ್ತು ಹೇಗೆ ನಿಯಂತೃವೇ ಮುಂತಾದ ಅನೇಕಕಾರಕಗಳು, ನಿಮಿತ್ತಗಳು- ಮುಂತಾದ ವಿಶೇಷಗಳಿಂದ ಕೂಡಿ ವ್ಯಾಕೃತವಾಗಿರುವದೋ ಹಾಗೆಯೇ (ಈ) ವಿಶೇಷಗಳಲ್ಲಿ ಯಾವದೊಂದನ್ನೂ ಬಿಡದೆಯೇ ಆ ಅವ್ಯಾಕೃತ(ವಾಗಿರುತ್ತದೆ). ವ್ಯಾಕೃತವಾಗಿರುವದು, ಅವ್ಯಾಕೃತವಾಗಿರುವದು- ಇಷ್ಟೇ (ಇವೆರಡಕ್ಕೂ) ವಿಶೇಷವು. ಲೋಕದಲ್ಲಿ 'ಊರು ಬಂತು', 'ಊರು ಹಾಳಾಗಿದೆ' ಎಂದು ವಿವಕ್ಷಾನುಸಾರವಾಗಿ (ಒಂದೇ) ಶಬ್ದವನ್ನು (ಬೇರೆ ಬೇರೆಯ ಅರ್ಥಗಳಲ್ಲಿ) ಪ್ರಯೋಗಿಸುವದು ಕಂಡೂ ಇದೆ. ಒಂದು ಸಲ 'ಊರು', ಎಂಬ ಶಬ್ದದಿಂದ ನಿವಾಸವನ್ನುಮಟ್ಟಿಗೆ ಹೇಳಬೇಕೆಂಬ ಇಚ್ಛೆಯಿರುವಲ್ಲಿ 'ಊರು ಹಾಳಾಗಿದೆ' ಎಂದು ಶಬ್ದಪ್ರಯೋಗವಾಗುವದು ; ಇನ್ನೊಂದು ಸಲ ನಿವಾಸಿ ಜನರನ್ನು ಹೇಳಬೇಕೆಂಬ ಇಚ್ಛೆಯಿರುವಲ್ಲಿ 'ಊರು ಬಂತು' ಎಂದು (ಪ್ರಯೋಗ

---

1. ಪರಮಾತ್ಮನನ್ನು ಸೇರಿಸಿಕೊಂಡೇ ಅವ್ಯಾಕೃತವೆಂಬ ಶಬ್ದವನ್ನು ಪ್ರಯೋಗಿಸಿರುತ್ತದೆ. ಪರಮಾತ್ಮನನ್ನು ಬಿಟ್ಟಿಲ್ಲ- ಎಂದರ್ಥ. ಇದನ್ನು ಮುಂದಿನ ವಾಕ್ಯದಲ್ಲಿ ಸ್ಪಷ್ಟಪಡಿಸಿದೆ.

2. ಇದು ಎಂದರೆ ನಿಯಂತೃವಾದ ಈಶ್ವರ, ನಿಯಮ್ಯರಾದ ಜೀವರು, ಅಚೇತನವಾದ ನಾಮರೂಪಗಳು- ಎಲ್ಲವೂ ಸೇರಿರುವ ಜಗತ್ತು. ಇದೇ ಅವ್ಯಾಕೃತವೆಂದು ಸಾಮಾನಾಧಿಕರಣ್ಯದಿಂದ ಹೇಳಿರುತ್ತದೆ.

ವಾಗುವದು); ಮತ್ತೂ ಒಂದು ವೇಳೆ ಈ ಎರಡನ್ನೂ ಹೇಳಬೇಕೆಂಬ ಇಚ್ಛೆಯಿರುವಲ್ಲಿಯೂ 'ಊರು' ಎಂಬ ಶಬ್ದದ ಪ್ರಯೋಗವಾಗುತ್ತದೆ. ಉದಾಹರಣೆಗೆ 'ಊರನ್ನು ಪ್ರವೇಶಿಸಬಾರದು' (ಗೌ.ಧ. ೧-೪-೩೨) ಎಂಬ ಪ್ರಯೋಗವು ಇಂಥದ್ದು). ಇದರಂತೆ ಇಲ್ಲಿಯೂ "ಈ ಜಗತ್ತು ವ್ಯಾಕೃತವೂ ಅವ್ಯಾಕೃತವೂ (ಆಗಿರುತ್ತದೆ)" ಎಂದು ಆತ್ಮಾನಾತ್ಮರುಗಳು ಬೇರೆಯಾಗಿಲ್ಲವೆಂಬ ವಿವಕ್ಷೆಯಿರುವಲ್ಲಿ ಶಬ್ದಪ್ರಯೋಗವಾಗುತ್ತದೆ; ಇದರಂತೆ "ಈ ಜಗತ್ತು ಉತ್ಪತ್ತಿವಿನಾಶಾತ್ಮಕವಾದದ್ದು" ಎಂದು ಬರಿಯ ಜಗತ್ತನ್ನು (ತಿಳಿಸುವದಕ್ಕೆ) ಶಬ್ದಪ್ರಯೋಗವಾಗುತ್ತದೆ;[1] ಹೀಗೆಯೇ "ಮಹಾಂತನು, ಅಜನು, ಆತ್ಮನು, ಅಸ್ಥೂಲನು, ಅನಣುವು, ಆ ಇವನು 'ಇದಲ್ಲ, ಇದಲ್ಲ' ಎಂಬ ರೂಪದವನು" ಎಂದು ಬರಿಯ ಆತ್ಮನನ್ನು (ತಿಳಿಸುವದಕ್ಕೆ) ಶಬ್ದಪ್ರಯೋಗವಾಗುತ್ತದೆ.[2]

## ಪ್ರವೇಶಪ್ರಕಾರಗಳ ಮೇಲಿನ ಆಕ್ಷೇಪ

(ಭಾಷ್ಯ)

೧೨೨. ನನು ಪರೇಣ ವ್ಯಾಕರ್ತ್ರಾ ವ್ಯಾಕೃತಂ ಸರ್ವತೋ ವ್ಯಾಪ್ತಂ ಸರ್ವದಾ ಜಗತ್। ಸ ಕಥಮಿಹ ಪ್ರವಿಷ್ಟಃ ಪರಿಕಲ್ಪ್ಯತೇ। ಅಪ್ರವಿಷ್ಟೋ ಹಿ ದೇಶಃ ಪರಿಚ್ಛಿನ್ನೇನ ಪ್ರವೇಷ್ಟುಂ ಶಕ್ಯತೇ। ಯಥಾ ಪುರುಷೇಣ ಗ್ರಾಮಾದಿಃ। ನಾಕಾಶೇನ ಕಿಂಚಿತ್। ನಿತ್ಯಪ್ರವಿಷ್ಟತ್ವಾತ್। ಪಾಷಾಣಸರ್ಪಾದಿವತ್ ಧರ್ಮಾನ್ತರೇಣ ಇತಿ ಚೇತ್। ಅಥಾಪಿ ಸ್ಯಾತ್ ನ ಪರ ಆತ್ಮಾ ಸ್ವೇನೈವ ರೂಪೇಣ ಪ್ರವಿವೇಶ, ಕಿಂ ತರ್ಹಿ, ತತ್ಸ್ಥ ಏವ ಧರ್ಮಾನ್ತರೇಣ ಉಪಜಾಯತೇ ತೇನ ಪ್ರವಿಷ್ಟಃ ಇತಿ ಉಪಚರ್ಯತೇ। ಯಥಾ ಪಾಷಾಣೇ ಸಹಜಃ ಅನ್ತಸ್ಥಃ ಸರ್ಪಃ, ನಾಲಿಕೇರೇ ವಾ ತೋಯಮ್, ನ। 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' (ತೈ. ೨-೬-೬) ಇತಿ ಶ್ರುತೇಃ। ಯಃ ಸ್ರಷ್ಟಾ ಸ ಭಾವಾನ್ತರಮನಾಪನ್ನ ಏವ ಕಾರ್ಯಂ ಸೃಷ್ಟ್ವಾ ಪಶ್ಚಾತ್ ಪ್ರಾವಿಶತ್ ಇತಿ ಹಿ ಶ್ರೂಯತೇ। ಯಥಾ ಭುಕ್ತ್ವಾ ಗಚ್ಛತಿ ಇತಿ ಭುಜಿಗಮಿಕ್ರಿಯಯೋಃ ಪೂರ್ವಾಪರಕಾಲಯೋಃ ಇತರೇತರವಿಚ್ಛೇದಃ ಅವಿಶಿಷ್ಟಶ್ಚ ಕರ್ತಾ, ತದ್ವತ್ ಇಹಾಪಿ ಸ್ಯಾತ್ ನ ತು ತತ್ಸ್ಥಸ್ಯೈವ ಭಾವಾನ್ತರೋಪಜನನೇ ಏತತ್ ಸಂಭವತಿ। ನ ಚ ಸ್ಥಾನಾನ್ತರೇಣ ವಿಯುಜ್ಯ ಸ್ಥಾನಾನ್ತರಸಂಯೋಗಲಕ್ಷಣಃ ಪ್ರವೇಶಃ ನಿರವಯವಸ್ಯ ಅಪರಿಚ್ಛಿನ್ನಸ್ಯ ದೃಷ್ಟಃ। ಸಾವಯವ ಏವ ಪ್ರವೇಶಶ್ರವಣಾತ್ ಇತಿ ಚೇತ್।

---

1. ಈ ಎರಡು ವಾಕ್ಯಗಳಲ್ಲಿ ಜಗತ್ತೆಂಬ ಶಬ್ದವನ್ನೇ ಬೇರೆ ಬೇರೆಯ ಅರ್ಥದಲ್ಲಿ ಪ್ರಯೋಗಿಸಿದೆ.

2. ಇಲ್ಲಿ ಆತ್ಮನೆಂಬ ಶಬ್ದವನ್ನು ಪರಮಾತ್ಮನೆಂಬರ್ಥದಲ್ಲಿ ಪ್ರಯೋಗಿಸಿವೆ.

ನ। "ದಿವ್ಯೋ ಹ್ಯಮೂರ್ತಃ ಪುರುಷಃ" (ಮುಂ. ೨-೧-೨) "ನಿಷ್ಕಲಂ ನಿಷ್ಕ್ರಿಯಮ್" (ಶ್ವೇ. ೬ ೧೯)ಇತ್ಯಾದಿಶ್ರುತಿಭ್ಯಃ। ಸರ್ವವ್ಯಪದೇಶ್ಯಧರ್ಮವಿಶೇಷ ಪ್ರತಿಷೇಧಶ್ರುತಿಭ್ಯಶ್ಚ। ಪ್ರತಿಬಿಮ್ಬಪ್ರವೇಶವತ್ ಇತಿ ಚೇತ್। ನ। ವಸ್ತ್ವನ್ತರೇಣ ವಿಪ್ರಕರ್ಷಾನುಪಪತ್ತೇಃ। ದ್ರವ್ಯೇ ಗುಣಪ್ರವೇಶವತ್ ಇತಿಚೇತ್। ನ। ಅನಾಶ್ರಿತತ್ವಾತ್। ನಿತ್ಯಪರತನ್ತ್ರಸ್ಯೈವ ಆಶ್ರಿತಸ್ಯ ಗುಣಸ್ಯ ದ್ರವ್ಯೇ ಪ್ರವೇಶ ಉಪಚರ್ಯತೇ। ನ ತು ಬ್ರಹ್ಮಣಃ ಸ್ವಾತನ್ತ್ರ್ಯಶ್ರವಣಾತ್ ತಥಾ ಪ್ರವೇಶ ಉಪಪದ್ಯತೇ। ಫಲೇ ಬೀಜವತ್ ಇತಿ ಚೇತ್। ನ। ಸಾವಯವತ್ವವೃದ್ಧಿಕ್ಷಯೋತ್ಪತ್ತಿವಿನಾಶಾದಿಧರ್ಮವತ್ತ್ವಪ್ರಸಙ್ಗಾತ್। ನ ಚೈವಂ ಧರ್ಮವತ್ತ್ವಂ ಬ್ರಹ್ಮಣಃ। "ಅಜೋಽಜರಃ" (೪-೪-೨೫) ಇತ್ಯಾದಿಶ್ರುತಿನ್ಯಾಯವಿರೋಧಾತ್॥

(ಭಾಷ್ಯಾರ್ಥ)

(ಆಕ್ಷೇಪ):—ವ್ಯಾಕರಣವನ್ನು ಮಾಡುವ ಪರಮಾತ್ಮನಿಂದ ವ್ಯಾಕೃತ (ಜಗತ್ತು) ಎಲ್ಲೆಲ್ಲಿಯೂ ಯಾವಾಗಲೂ ವ್ಯಾಪ್ತವಾಗಿರುತ್ತದೆ. ಆ (ಪರಮಾತ್ಮನು) ಇಲ್ಲಿ ಪ್ರವೇಶಿಸಿದನೆಂದು ಕಲ್ಪಿಸಿರುವದು ಹೇಗೆ ಸರಿ? ಪ್ರವೇಶಮಾಡದೆ ಇರುವ ಸ್ಥಲವನ್ನು ಪರಿಚ್ಛಿನ್ನನಾದವನು ಪ್ರವೇಶಿಸುವದಕ್ಕಾಗುತ್ತದೆ. ಉದಾಹರಣೆಗೆ (ಒಬ್ಬ) ಮನುಷ್ಯನು ಊರು ಮುಂತಾದದ್ದನ್ನು (ಪ್ರವೇಶಿಸಬಹುದು); ಆದರೆ ಆಕಾಶವು ಯಾವದೊಂದನ್ನೂ (ಪ್ರವೇಶಿಸುತ್ತದೆ ಎಂಬುದು ಹೊಂದುವ)ದಿಲ್ಲ; ಏಕೆಂದರೆ (ಎಲ್ಲವನ್ನೂ ಅದು) ಯಾವಾಗಲೂ ಪ್ರವೇಶಿಸಿಯೇ ಇರುತ್ತದೆ.

(ಏಕದೇಶಿಯ ಪರಿಹಾರ):—**ಕಲ್ಲಿನೊಳಗಿನ ಹಾವೇ ಮುಂತಾದದ್ದರಂತೆ** ಧರ್ಮಾಂತರದಿಂದೊಡಗೂಡಿ (ಹೊಕ್ಕನು) ಎಂದರೊ? (ಇದರ ವಿವರ): (ಸಿದ್ಧಾಂತಿಯ ಅಭಿಪ್ರಾಯವು) ಹೀಗೆ ಇದ್ದರೂ ಇರಬಹುದು: ಪರಮಾತ್ಮನು ತನ್ನ ರೂಪದಿಂದ (ಜಗತ್ತನ್ನು) ಪ್ರವೇಶಿಸಲಿಲ್ಲ; ಮತ್ತೇನೆಂದರೆ ಅದರೊಳಗಿದ್ದುಕೊಂಡೇ ಮತ್ತೊಂದು ಧರ್ಮದಿಂದೊಡಗೂಡಿದವನಾಗುತ್ತಾನೆ. ಅದರಿಂದ ಪ್ರವೇಶಿಸಿರುತ್ತಾನೆಂದು ಉಪಚಾರದಿಂದ ಹೇಳಿರುತ್ತದೆ. ಹೇಗೆ ಕಲ್ಲಿನಲ್ಲಿ ಸಹಜವಾಗಿ ಒಳಗೆ ಇರುವ ಹಾವು ಅಥವಾ ತೆಂಗಿನಕಾಯಿಯಲ್ಲಿ ನೀರು (ಹೊಕ್ಕಿದೆ ಎನ್ನುತ್ತಾರೋ ಹಾಗೆ).[1]

(ಆಕ್ಷೇಪಕ):—ಹಾಗಲ್ಲ. ಏಕೆಂದರೆ "ಅದನ್ನು ಸೃಜಿಸಿ ಅದನ್ನೇ ಪ್ರವೇಶಿಸಿದನು" (ತೈ. ೨-೬-೬) ಎಂದು ಶ್ರುತಿಯಿದೆ. ಯಾವನು ಸೃಜಿಸಿದನೋ ಅವನೇ

1. ಕಲ್ಲು ಹಾವಾಗಿ, ತೆಂಗಿನಕಾಯಿ ನೀರಾಗಿ ಪರಿಣಮಿಸುವಂತೆ ಪರಮಾತ್ಮನೇ ಜೀವನಾಗಿ ಪರಿಣಮಿಸುತ್ತಾನೆ ಎಂದರ್ಥ. ಈ ಅಭಿಪ್ರಾಯವನ್ನು ಯಾರೋ ನಿಜವಾಗಿಯೂ ಇಟ್ಟುಕೊಂಡಿದ್ದಿರಬೇಕೆಂದು ತೋರುತ್ತದೆ.

ರೂಪಾಂತರವನ್ನು ಪಡೆಯದೆಯೇ ಕಾರ್ಯವನ್ನು ಸೃಜಿಸಿ ಆ ಬಳಿಕ ಪ್ರವೇಶಿಸಿದನು ಎಂದಲ್ಲವೆ, (ಈ) ಶ್ರುತಿಯಲ್ಲಿ ಹೇಳಿದೆ? 'ಊಟಮಾಡಿ ಹೋಗುತ್ತಾನೆ' ಎಂಬಲ್ಲಿ ಊಟ, ಹೋಗುವದು– ಎಂಬ ಹಿಂದುಮುಂದಿನ ಕಾಲದಲ್ಲಾಗುವ ಕ್ರಿಯೆಗಳು ಒಂದಕ್ಕಿಂತ ಒಂದು ಬೇರೆಯಾಗಿದ್ದು (ಅವುಗಳನ್ನು) ಮಾಡುವ ಕರ್ತೃವು ಒಬ್ಬನೇ ಆಗಿರುತ್ತಾನೋ ಅದರಂತೆ ಇಲ್ಲಿಯೂ ಆಗಬೇಕು. ಆದರೆ ಅದರೊಳಗೇ ಇದ್ದು ರೂಪಾಂತರವುಂಟಾದರೆ ಇದು ಆಗುವ ಹಾಗಿಲ್ಲ[1] ಅವಯವಗಳಿಲ್ಲದ ಪರಿಚ್ಛೇದವಿಲ್ಲದ ವಸ್ತುವು ಒಂದು ಸ್ಥಾನವನ್ನು ಅಗಲಿ ಮತ್ತೊಂದು ಸ್ಥಾನವನ್ನು ಸೇರುವದೆಂಬ ರೂಪದ ಪ್ರವೇಶವನ್ನು ಮಾಡಿದ್ದು ಕಂಡಿರುವದೂ ಇಲ್ಲ.[2]

(ಏಕದೇಶಿ):–ಪ್ರವೇಶಿಸಿದನೆಂದು ಶ್ರುತಿಯಲ್ಲಿರುವದರಿಂದ (ಪರಮಾತ್ಮನೂ) ಸಾವಯವನೇ ಎಂದರೊ?

(ಆಕ್ಷೇಪಕ) :—ಅದಾಗದು. ಏಕೆಂದರೆ "ಪುರುಷನು ದಿವ್ಯನು, ಅಮೂರ್ತನೂ ಅಲ್ಲವೆ?" (ಮುಂ. ೨-೧-೨), "ನಿರವಯವನೂ ಕ್ರಿಯಾರಹಿತನೂ (ಆಗಿರುವ ದೇವನನ್ನು....)" (ಶ್ವೇ. ೬-೧೯) ಎಂದು ಮುಂತಾಗಿ ಶ್ರುತಿಗಳು (ಹೇಳುತ್ತಿವೆ). ಶಬ್ದಗಳಿಂದ ಹೇಳಬಹುದಾದ ಯಾವ ಧರ್ಮವೂ (ಆತ್ಮನಲ್ಲಿ) ಇಲ್ಲ ಎಂದು ಹೇಳುವ ಶ್ರುತಿಗಳೂ (ಇದಕ್ಕೆ ಪ್ರಮಾಣವು).

(ಏಕದೇಶಿ) :—**ಪ್ರತಿಬಿಂಬವು ಪ್ರವೇಶಿಸಿದಂತೆ** (ಪ್ರವೇಶಿಸಿರುತ್ತಾನೆ) ಎಂದರೊ?

(ಆಕ್ಷೇಪಕ) :—ಕೂಡದು. ಏಕೆಂದರೆ (ಆತ್ಮನು) ಮತ್ತೊಂದು ವಸ್ತುವಿಗಿಂತ ದೂರವಾಗಿರುವದಿಲ್ಲ.[3]

(ಏಕದೇಶಿ) :—ದ್ರವ್ಯದಲ್ಲಿ ಗುಣಗಳು ಪ್ರವೇಶಿಸಿರುವಂತೆ (ಪ್ರವೇಶಿಸಿರುತ್ತಾನೆ) ಎಂದರೊ?

(ಆಕ್ಷೇಪಕ) :—ಕೂಡದು. ಏಕೆಂದರೆ ಆತ್ಮನು ಆಶ್ರಿತನಲ್ಲ. ಯಾವಾಗಲೂ ಪರಾಧೀನವಾಗಿಯೇ ಇದ್ದು ಆಶ್ರಿತವಾಗಿರುವ ಗುಣವು (ದ್ರವ್ಯದಲ್ಲಿ ಪ್ರವಿಷ್ಟವಾಗಿರುವದೆಂದು ಉಪಚಾರಕ್ಕೆ ಹೇಳುತ್ತಾರೆ. ಆದರೆ ಬ್ರಹ್ಮವು ಸ್ವತಂತ್ರ

---

1. ಮೊದಲು ಸೃಜಿಸುವದೆಂಬ ಕ್ರಿಯೆ, ಬಳಿಕ ಪ್ರವೇಶಿಸುವದೆಂಬ ಕ್ರಿಯೆ–ಇವೆರಡಕ್ಕೂ ಆತ್ಮನೊಬ್ಬನೇ ಕರ್ತೃ ಎನ್ನುವದಕ್ಕೆ ಬರುವಂತಿಲ್ಲ.

2. ನಿರವಯವನೂ ಸರ್ವಗತನೂ ಆಗಿರುವ ಆತ್ಮನಿಗೆ ಸಂಯೋಗವಿಯೋಗಗಳಾಗುವಂತಿಲ್ಲ ಎಂದರ್ಥ. ಏಕದೇಶಿಗಳ ಮತವನ್ನು ಖಂಡನೆಮಾಡುವದಕ್ಕಾಗಿ ಸಿದ್ಧಾಂತಿಯೇ ಆಕ್ಷೇಪಕನ ಬಾಯಿಯಿಂದ ಈ ಆಕ್ಷೇಪಗಳನ್ನು ಒಡ್ಡುತ್ತಿದಾನೆಂಬುದನ್ನು ನೆನಪಿನಲ್ಲಿಡಬೇಕು.

3. ದೂರದಲ್ಲಿರುವ ಸೂರ್ಯಾದಿಗಳಿಗೆ ಮಾತ್ರ ಪ್ರತಿಬಿಂಬವುಂಟಾಗಬಹುದು.

ವಾಗಿರುವದೆಂದು ಶ್ರುತಿಯಲ್ಲಿರುವದರಿಂದ [1] ಹಾಗೆ ಪ್ರವೇಶಮಾಡುವದು (ಅದಕ್ಕೆ) ಹೊಂದುವದಿಲ್ಲ.

(ಏಕದೇಶಿ) :—**ಹಣ್ಣಿನಲ್ಲಿ ಬೀಜದಂತೆ**(ಪ್ರವೇಶಿಸಿರುತ್ತಾನೆ)ಎಂದರೊ [2] ?

(ಆಕ್ಷೇಪಕ) :—ಕೂಡದು. ಏಕೆಂದರೆ (ಆಗ ಬ್ರಹ್ಮವು) ಸಾವಯವತ್ವ, ಬೆಳವಣಿಗೆ, ಸವೆಯುವದು, ಹುಟ್ಟುವದು, ಹಾಳಾಗುವದು- ಮುಂತಾದ ಧರ್ಮವುಳ್ಳದ್ದೆಂದು ಆದೀತು. ಆದರೆ ಬ್ರಹ್ಮವು ಇಂಥ ಧರ್ಮವುಳ್ಳದ್ದಲ್ಲ. ಏಕೆಂದರೆ (ಇದು) "ಅಜನು, ಅಜರನು" (೪ ೪-೨೫ರೊಳಗಿರುವ ಭಾಗ) ಮುಂತಾದ ಶ್ರುತಿಗಳಿಗೂ ಯುಕ್ತಿಗೂ ವಿರುದ್ಧವಾಗಿರುತ್ತದೆ.

## ಇಲ್ಲಿ ಪರಿಚ್ಛಿನ್ನನಾದ ಸಂಸಾರಿಯ ಪ್ರವೇಶವನ್ನು ಹೇಳಿಲ್ಲ

(ಭಾಷ್ಯ)

೧೨೩. ಅನ್ಯ ಏವ ಸಂಸಾರೀ ಪರಿಚ್ಛಿನ್ನ ಇಹ ಪ್ರವಿಷ್ಟಃ ಇತಿ ಚೇತ್ । ನ । "ಸೇಯಂ ದೇವತೈಕ್ಷತ" (ಛಾಂ. ೬-೩-೨) ಇತ್ಯಾರಭ್ಯ "ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತಿ ತಸ್ಯಾ ಏವ ವ್ಯಾಕರಣಪ್ರವೇಶಕರ್ತೃತ್ವ ಶ್ರುತೇಃ । ತಥಾ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨-೬), "ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ" (ಐ. ೧-೩-೧೨), "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್‌ಯದಾಸ್ತೇ" (ತೈ. ೩-೧೨-೬) "ತ್ವಂ ಕುಮಾರ ಉತ ವಾ ಕುಮಾರೀ ತ್ವಂ ಜೀರ್ಣೋದಣ್ಡೇನ ವಞ್ಚಸಿ" (ಶ್ವೆ. ೪-೩) ಇತಿ ಚ । [3] ಪುರಶ್ಚಕ್ರೇ ದ್ವಿಪದಃ" (೨-೫-೧೮), "ರೂಪಂ ರೂಪಮ್" (೨-೫-೧೯, ಋ. ೨-೫-೧೮) ಇತಿ ಚ ಮನ್ತ್ರ ವರ್ಣಾತ್ ನ ಪರಾದನ್ಯಸ್ಯ ಪ್ರವೇಶಃ ॥

(ಭಾಷ್ಯಾರ್ಥ)

(ಏಕದೇಶಿ) :—(ಪರಮಾತ್ಮನಿಗಿಂತ) ಬೇರೆಯಾಗಿ ಪರಿಚ್ಛಿನ್ನನಾಗಿರುವ ಸಂಸಾರಿಯೇ ಇಲ್ಲಿ ಪ್ರವೇಶಿಸಿರುತ್ತಾನೆ ಎಂದರೊ ?

---

1. "ಇವನು ಸರ್ವೇಶ್ವರನು" (೪-೪-೨೨) ಮುಂತಾದ ಶ್ರುತಿಗಳಲ್ಲಿ ಹೀಗೆಯೇ ಹೇಳಿದೆ.

2. ಕಲ್ಲಿನಲ್ಲಿ ಹಾವು ಹೊಕ್ಕಿರುವಂತೆ ಎಂದು ಹಿಂದೆ ಹೇಳಿರುವದು ಆಧಾರಾಧೇಯ ಭಾವಕ್ಕೆ ದೃಷ್ಟಾಂತ; ಈ ಹಣ್ಣುಬೀಜಗಳ ದೃಷ್ಟಾಂತವು ಅಂಶಾಂಶಿಭಾವಕ್ಕೆ.

3. ಈ ಮಾತುಗಳನ್ನು ಇಲ್ಲಿ ಸೇರಿಸಿಕೊಳ್ಳಬೇಕು; ಅನುವಾದದ ಟಿಪ್ಪಣಿಯನ್ನು ನೋಡಿ.

(ಆಕ್ಷೇಪಕ) :—ಹಾಗಲ್ಲ. ಏಕೆಂದರೆ "ಆ ಈ ದೇವತೆ (ಹೀಗೆಂದು) ಆಲೋಚನೆಮಾಡಿ ನೋಡಿತು" (ಛಾಂ. ೬-೩-೨) ಎಂಬದರಿಂದ ಹಿಡಿದು (ಈ ಜೀವ ನೆಂಬ ಸ್ವರೂಪದಿಂದ) "ನಾಮರೂಪಗಳನ್ನು ವಿಂಗಡಿಸುವೆನು" (ಛಾಂ. ೬-೩-೨) ಎಂದು ಅದೇ (ದೇವತೆಯು) ಪ್ರವೇಶಮಾಡಿ ವ್ಯಾಕರಣಮಾಡಿತು ಎಂದು[1] ಶ್ರುತಿ (ಹೇಳುತ್ತದೆ). ಹಾಗೂ "ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕನು" (ತೈ. ೨-೬), "ಅವನು ಇದೇ (ಕೂದಲಿನ) ಎಲ್ಲೆಯನ್ನು ಸೀಳಿಕೊಂಡು ಈ ದ್ವಾರದಿಂದ (ಒಳಸೇರಿದನು)" (ಐ. ೧-೧೨), "(ಆ) ಧೀರನು ರೂಪಗಳನ್ನೆಲ್ಲ ಕಂಡುಕೊಂಡು (ಅವಕ್ಕೆ) ಹೆಸರುಗಳನ್ನಿಟ್ಟು ಕರೆಯುತ್ತಾ ಇರುವನಷ್ಟೆ" (ತೈ. ಆ. ೩-೧೨-೭), "ನೀನು ಕುಮಾರನು, ಮತ್ತು ಕುಮಾರಿಯು; ನೀನೇ ಮುದುಕನಾಗಿ ಕೋಲು (ಎಂಬ ಸಾಧನದಿಂದ) ಓಡಾಡುತ್ತಿರುವೆ" (ಶ್ವೇ. ೪-೩) ಎಂದೂ (ಶ್ರುತಿಯಿದೆ). "ಎರಡು ಕಾಲಿನ ಪುರಗಳನ್ನು ಮಾಡಿಕೊಂಡನು" (೨-೫-೧೮) ಎಂದೂ "ರೂಪರೂಪಕ್ಕೂ (ಪ್ರತಿರೂಪನಾಗಿರುತ್ತಾನೆ)" (೨-೫-೧೯, ಋ. ೬-೪೭-೧೮) ಎಂದೂ ಮಂತ್ರವರ್ಣವಿರುವದರಿಂದಲೂ[2] ಪರಮಾತ್ಮನಿಗಿಂತ ಬೇರೊಬ್ಬನು ಪ್ರವೇಶಮಾಡಿರುವದಿಲ್ಲ.

## ಪರಮಾತ್ಮರು ಅನೇಕರಲ್ಲ

(ಭಾಷ್ಯ)

೧೭೪. ಪ್ರವಿಷ್ಟಾನಾಮ್ ಇತರೇತರಭೇದಾತ್ ಪರಾನೇಕತ್ವಮ್ ಇತಿ ಚೇತ್ । ನ ! "ಏಕೋ ದೇವೋ ಬಹುಧಾ ಸಂನಿವಿಷ್ಟಃ" (ತೈ. ಆ. ೩-೧೪-೧) "ಏಕಃ ಸನ್ ಬಹುಧಾ ವಿಚಾರಃ" (ತೈ. ಆ. ೩-೧೧-೧), "ತ್ವಮೇಕೋಽಸಿ ಬಹೂನನುಪ್ರವಿಷ್ಟಃ" (ತೈ. ಆ. ೩-೧೪-೧೩), "ಏಕೋ ದೇವಃ ಸರ್ವ ಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ" (ಶ್ವೇ. ೬-೧೧) ಇತ್ಯಾದಿಶ್ರುತಿಭ್ಯಃ ॥

---

1. ಈ ಶ್ರುತಿಯ ಅಭಿಪ್ರಾಯದ ವಿಷಯಕ್ಕೆ ಸೂ. ಭಾ. ೨-೪-೨೦ (ಭಾ. ಭಾ. ೨೦೭) ನ್ನು ನೋಡಿ.

2. ಇಲ್ಲಿ "ಮಂತ್ರವರ್ಣಾತ್" ಎಂಬ ಏಕವಚನವಿರುವದರಿಂದಲೂ ಮಂತ್ರವರ್ಣ -ವೆಂಬ ಮಾತನ್ನು ಸಂಹಿತೆಗೆ ಅಥವಾ ಬ್ರಾಹ್ಮಣೋತ್ಪನ್ನಮಂತ್ರಕ್ಕೆ ಭಾಷ್ಯಕಾರರು ಮೀಸಲಾಗಿಟ್ಟು ಕೊಂಡಿರುವಂತೆ ತೋರುವದರಿಂದಲೂ ನಾವು ಹಿಂದಿನ ವಾಕ್ಯದ ಕೊನೆಯಲ್ಲಿ 'ಇತಿ ಚ' ಎಂಬ ಮಾತುಗಳನ್ನು ಸೇರಿಸಿಕೊಂಡಿರುತ್ತೇವೆ. ಶ್ವೇತಾಶ್ವತರವೂ ಮಂತ್ರವರ್ಣವೇ ಆಗಿರುವದರಿಂದ ಜಾತ್ಯೇಕವಚನವನ್ನು ಉಪಯೋಗಿಸಿದೆ ಎಂದು ಭಾವಿಸಿದರೆ ಅದರ ಹಿಂದಿನ ವಾಕ್ಯದ ಕೊನೆ ಯಲ್ಲಿಯೇ 'ಇತಿ ಚ' ಎಂದು ಸೇರಿಸಿಕೊಳ್ಳಬೇಕಾಗುವದು.

(ಭಾಷ್ಯಾರ್ಥ)

(ಆಕ್ಷೇಪ) :—ಒಳಹೊಕ್ಕಿರುವ (ಆತ್ಮರು) ಒಬ್ಬರಿಗೊಬ್ಬರು ಬೇರೆಯಾಗಿರುವದರಿಂದ ಪರಮಾತ್ಮರು ಅನೇಕರು ಎಂದಾಯಿತಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ "ಒಬ್ಬ ದೇವನೇ ಬಹುಪ್ರಕಾರವಾಗಿರುತ್ತಾನೆ" (ತೈ. ಆ. ೩-೧೪-೧), "ಒಬ್ಬನೇ ಆಗಿದ್ದು ಬಹುಪ್ರಕಾರದಿಂದ ಚರಿಸುತ್ತಿರುವವನು" (ತೈ. ಆ. ೩-೧೧-೧) "ನೀನೊಬ್ಬನೇ ಬಹು (ಭೂತ)ಗಳನ್ನು ಅನುಪ್ರವೇಶಮಾಡಿರುತ್ತೀಯೆ" (ತೈ. ಆ. ೩-೪-೧೩), "ಒಬ್ಬ ದೇವನೇ ಸರ್ವಭೂತಗಳಲ್ಲಿಯೂ ಗೂಢನಾಗಿರುವನು, (ಅವನು) ಸರ್ವವ್ಯಾಪಿಯು, ಸರ್ವಭೂತಗಳಿಗೂ ಅಂತರಾತ್ಮನು" (ಶ್ವೇ. ೬-೧೧) ಮುಂತಾದ ಶ್ರುತಿಗಳಿರುತ್ತವೆ.

## ಪ್ರವೇಶನಾದ ಬಳಿಕ ಆತ್ಮನು ಸಂಸಾರಿ ಎನ್ನಬಾರದು

(ಭಾಷ್ಯ)

೧೨೫. ಪ್ರವೇಶ ಉಪಪದ್ಯತೇ ನೋಪಪದ್ಯತೇ ಇತಿ ತಿಷ್ಠತು ತಾವತ್ । ಪ್ರವಿಷ್ಟಾನಾಂ ಸಂಸಾರಿತ್ವಾತ್ ತದನನ್ಯತ್ವಾಚ್ಚ ಪರಸ್ಯ ಸಂಸಾರಿತ್ವಮ್ ಇತಿ ಚೇತ್ । ನ । ಅಶನಾಯಾದ್ಯತ್ಯಯಶ್ರುತೇಃ । ಸುಖಿತ್ವದುಃಖಿತ್ವಾದಿದರ್ಶನಾತ್ ನೇತಿ ಚೇತ್ । ನ । "ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೧-೩-೧೧) ಇತಿ ಶ್ರುತೇಃ । ಪ್ರತ್ಯಕ್ಷಾದಿವಿರೋಧಾತ್ ಅಯುಕ್ತಮ್ ಇತಿ ಚೇತ್ । ನ । ಉಪಾಧ್ಯಾಶ್ರಯಜನಿತವಿಶೇಷವಿಷಯತ್ವಾತ್ ಪ್ರತ್ಯಕ್ಷಾದೇಃ । "ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ" (೩-೪-೨), "ವಿಜ್ಞಾತಾರಮರೇ ಕೇನ ವಿಜಾನೀಯಾತ್" (೨-೪-೧೪, ೪-೫-೧) "ಅವಿಜ್ಞಾತಂ ವಿಜ್ಞಾತೃ" (೩-೮-೧೧)ಇತ್ಯಾದಿಶ್ರುತಿಭ್ಯೋ ನಾತ್ಮವಿಷಯಂ ವಿಜ್ಞಾನಮ್, ಕಿಂ ತರ್ಹಿ, ಬುದ್ಧ್ಯಾದ್ಯುಪಾಧ್ಯಾತ್ಮಪ್ರತಿಚ್ಛಾಯಾವಿಷಯಮೇವ ಸುಖಿತೋಽಹಮ್, ದುಃಖಿತೋಽಹಮ್ ಇತ್ಯೇವಮಾದಿ ಪ್ರತ್ಯಕ್ಷವಿಜ್ಞಾನಮ್ । ಅಯಮಹಮ್ ಇತಿ ವಿಷಯೇಣ ವಿಷಯಿಣಃ ಸಾಮಾನಾಧಿಕರಣ್ಯೋಪಚಾರಾತ್ । "ನಾನ್ಯದತೋಽಸ್ತಿ ದ್ರಷ್ಟೃ" (೩-೮-೧೧) ಇತಿ ಅನ್ಯಾತ್ಮಪ್ರತಿಷೇಧಾಚ್ಚ । ದೇಹಾವಯವವಿಶೇಷ್ಯತ್ವಾಚ್ಚ ಸುಖದುಃಖಯೋರ್ವಿಷಯಧರ್ಮತ್ವಮ್ । "ಆತ್ಮನಸ್ತು ಕಾಮಾಯ" (೨-೪-೫, ೪-೫-೬) ಇತ್ಯಾತ್ಮಾರ್ಥತ್ವಶ್ರುತೇರಯುಕ್ತಮ್ ಇತಿ ಚೇತ್ । ನ । "ಯತ್ರ ವಾ ಅನ್ಯದಿವ ಸ್ಯಾತ್" (೪-೩-೩೧) ಇತ್ಯವಿದ್ಯಾವಿಷಯಾತ್ಮಾರ್ಥತ್ವಾಭ್ಯುಪಗಮಾತ್ । "ತತ್ಕೇನ ಕಂ ಪಶ್ಯೇತ್" (೨-೪-೧೪, ೪-೫-೧೫), "ನೇಹ ನಾನಾಸ್ತಿ ಕಿಂಚನ" (೪-೪-೧೯, ಕ. ೨-೧-೧೧), "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತ್ಯಾದಿನಾ ವಿದ್ಯಾವಿಷಯೇ ತತ್ಪ್ರತಿಷೇಧಾಚ್ಚ ನಾತ್ಮಧರ್ಮತ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ):—ಪ್ರವೇಶವು ಹೊಂದುತ್ತದೆಯೆ, ಇಲ್ಲವೆ- ಎಂಬ (ಚರ್ಚೆ) ಸದ್ಯಕ್ಕೆ ಹಾಗಿರಲಿ; ಪ್ರವಿಷ್ಟರಾಗಿರುವವರು ಸಂಸಾರಿಗಳಾಗಿರುವದರಿಂದಲೂ (ಪರಮಾತ್ಮನಿಗಿಂತ) ಬೇರೆಯಲ್ಲವಾದ್ದರಿಂದಲೂ)[1] ಪರಮಾತ್ಮನು ಸಂಸಾರಿ (ಎಂದಾಗುತ್ತದೆ).

(ಪರಿಹಾರ):—ಹಾಗಲ್ಲ. ಏಕೆಂದರೆ, ಹಸಿವು ಮುಂತಾದ (ದೋಷ ಗಳನ್ನು ಮೀರಿರುತ್ತಾನೆಂದು ಶ್ರುತಿಯು (ಹೇಳುತ್ತದೆ).[2]

(ಆಕ್ಷೇಪ):—(ಜೀವನಲ್ಲಿ) ಸುಖಿತ್ವ, ದುಃಖಿತ್ವ-ಮುಂತಾದ ದೋಷಗಳು (ಅನುಭವದಲ್ಲಿ) ಕಂಡುಬರುತ್ತಿರುವದರಿಂದ ಇದು ಸರಿಯಲ್ಲ.[3]

(ಪರಿಹಾರ):—ಹಾಗಲ್ಲ. ಏಕೆಂದರೆ "ಜನರ ದುಃಖದಿಂದ ಲಿಪ್ತನಾಗಿರುವ ದಿಲ್ಲ; (ಏಕೆಂದರೆ ಅದಕ್ಕೆ) ಹೊರಚ್ಚಾಗಿರುತ್ತಾನೆ" (ಕ. ೧-೭-೧೧) ಎಂದು ಶ್ರುತಿಯಿದೆ.[4]

(ಆಕ್ಷೇಪ):—ಪ್ರತ್ಯಕ್ಷಾದಿ(ಪ್ರಮಾಣಗಳಿಗೆ) ವಿರೋಧವಾಗುವದರಿಂದ ಇದು (ಪ್ರಮಾಣ)ವಲ್ಲವೆಂದರೊ?[5]

(ಪರಿಹಾರ):—ಹಾಗಲ್ಲ. ಏಕೆಂದರೆ ಉಪಾಧಿಯ ಆಶ್ರಯದಿಂದ ಉಂಟಾದ ವಿಶೇಷವೇ ಪ್ರತ್ಯಕ್ಷಾದಿ(ಪ್ರಮಾಣ)ಗಳಿಗೆ ವಿಷಯವು.[6] (ಇದರ ವಿವರ): "ದೃಷ್ಟಿಯ ದ್ರಷ್ಟೃವನ್ನು ನೋಡಲಾರೆ" (೩-೪-೨) "ಎಲೆ, ಅರಿಯುವಾತನನ್ನು ಏತರಿಂದ ಅರಿತುಕೊಂಡಾನು?" (೨-೪-೧೪, ೪-೫-೧), "(ತಾನು) ಅವಿಜ್ಞಾತ ವಾಗಿದ್ದು ವಿಜ್ಞಾತೃ" (೩-೮-೧೧) ಮುಂತಾದ ಶ್ರುತಿಗಳಿರುವದರಿಂದ (ಸುಖಿತ್ವಾದಿ ಗಳ) ಅನುಭವವು ಆತ್ಮವಿಷಯವಲ್ಲ; ಮತ್ತೇನೆಂದರೆ ಅಂತಃಕರಣವೇ ಮುಂತಾದ

---

1. ಅಥವಾ 'ಪರಮಾತ್ಮನು ಅವರಿಗಿಂತ ಬೇರೆಯಾಗಿರುವದರಿಂದಲೂ' ಎಂದೂ ಕನ್ನಡಿಸ ಬಹುದು. ಪರಮಾತ್ಮನೇ ಜಗತ್ತಿನಲ್ಲಿ ಪ್ರವಿಷ್ಟನಾಗಿ ಸಂಸಾರಿಯಾಗಿರುತ್ತಾನೆ- ಎಂದು ಪೂರ್ವ ಪಕ್ಷಿಯ ಭಾವ.

2. ೩-೫-೧ನ್ನು ನೋಡಿ. ಈ ಸಂದರ್ಭದಲ್ಲಿ ಆಕ್ಷೇಪಗಳೆಲ್ಲ ಸಂಸಾರಿತ್ವವಾದಿಯವು. ಪರಿಹಾರಗಳು ಪ್ರವೇಶಾಕ್ಷೇಪಕನವು.

3. ಅನುಭವಕ್ಕೆ ವಿರುದ್ಧವಾಗಿ ಶ್ರುತಿಗೆ ಅರ್ಥವನ್ನು ಮಾಡುವದು ಸರಿಯಲ್ಲ ಎಂದರ್ಥ.

4. ಶ್ರುತಿವಿರುದ್ಧವಾಗಿರುವ ದುಃಖಿತ್ವಪ್ರತೀತಿಯು ಪರೀಕ್ಷಿತಾನುಭವವಲ್ಲ.

5. ಅನುಭವವು ಪ್ರಮಾಣದಿಂದ ಪರೀಕ್ಷಿತವಾದದ್ದು ಎಂಬ ತಾರ್ಕಿಕರ ಮತವನ್ನು ಅವಲಂಬಿಸಿ ಇಲ್ಲಿ ಸಂಸಾರವಾದಿಯು ಆಕ್ಷೇಪಿಸುತ್ತಿದ್ದಾನೆ.

6. ಅಂತಃಕರಣವೆಂಬ ಉಪಾಧಿಯಲ್ಲಿ ತೋರುವ ಚಿದಾಭಾಸವೇ ದುಃಖಕ್ಕೆ ವಿಷಯ; ಇದನ್ನೇ ಪ್ರತ್ಯಕ್ಷಾದಿಗಳು ತಿಳಿಸುತ್ತವೆ ಎಂದರ್ಥ.

ಉಪಾಧಿಗಳ (ಆಶ್ರಯದಿಂದಾದ) ಆತ್ಮನ ನೆರಳಿನ ವಿಷಯವೇ[1] "ನಾನು ಸುಖಿಯಾದೆನು", 'ನಾನು ದುಃಖಿಯಾದೆನು' ಎಂಬೀ ಪ್ರತ್ಯಕ್ಷವಿಜ್ಞಾನವು. ಏಕೆಂದರೆ 'ನಾನು ಇಂಥವನು'[2] ಎಂದು ವಿಷಯದೊಡನೆ ವಿಷಯಿಗೆ ಸಾಮಾನಾಧಿಕರಣ್ಯವನ್ನು ತಿಳಿಸುವದು (ಈ ವಿಜ್ಞಾನದಲ್ಲಿ) ಕಂಡುಬರುತ್ತದೆ. "ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ" (೩-೮-೧೧) ಎಂದು ಮತ್ತೊಬ್ಬ ಆತ್ಮನನ್ನು ಅಲ್ಲಗಳೆದಿರುವದರಿಂದಲೂ (ಹೀಗೆಂದು ನಿರ್ಣಯಿಸಬೇಕು). ದೇಹದ ಅವಯವಗಳೇ ಸುಖದುಃಖಗಳಿಗೆ ವಿಶೇಷ್ಯವಾಗಿರುವದರಿಂದಲೂ[3] (ಅವು) ವಿಷಯಧರ್ಮವಾಗಿವೆ.

(ಆಕ್ಷೇಪ):—"ಆದರೆ ಆತ್ಮನ ಕಾಮಕ್ಕಾಗಿ (ಎಲ್ಲವೂ ಪ್ರಿಯವಾಗಿರುತ್ತದೆ)" (೨-೪-೫, ೪-೫-೬) ಎಂದು (ಸುಖಸಾಧನಗಳು) ಆತ್ಮಾರ್ಥವೆಂದು ಶ್ರುತಿಯಲ್ಲಿ ಹೇಳಿರುವದರಿಂದ (ಇದು) ಅಯುಕ್ತವೆಂದರೊ ?

(ಪರಿಹಾರ):—ಹಾಗಲ್ಲ. "ಎಲ್ಲಿ ಮತ್ತೊಂದರಂತೆ ಇರುವದೋ...." (೪-೩-೩೧) ಎಂದು (ಶ್ರುತಿಯಲ್ಲಿ ಹೇಳಿರುವ) ಅವಿದ್ಯಾವಿಷಯದ ಆತ್ಮನಿಗಾಗಿ (ಸುಖಸಾಧನಗಳು) ಎಂದು (ನಾವು) ಅಂಗೀಕರಿಸಿರುತ್ತೇವೆ.[4] "ಅಲ್ಲಿ ಏತರಿಂದ ಯಾರನ್ನು ಕಂಡಾನು ?" (೨-೪ ೧೪, ೪-೫-೧೫) "ಇಲ್ಲಿ ಒಂದಿಷ್ಟೂ ನಾನಾ ಇರುವದಿಲ್ಲ" (೪-೪-೧೯, ಕ. ೨-೧-೧೧), "ಅಲ್ಲಿ ಏಕತ್ವವನ್ನು ಕಂಡುಕೊಂಡಿರುವಾತನಿಗೆ ಯಾವ ಮೋಹವು, ಯಾವ ಶೋಕವು ?" (ಈ. ೭) ಎಂದು ವಿದ್ಯಾವಿಷಯದ (ಆತ್ಮನಲ್ಲಿ) ಆ (ಕಾಮವನ್ನು) ಅಲ್ಲಗಳೆದಿರುವದರಿಂದಲೂ (ಸುಖಾದಿಗಳು) ಆತ್ಮನ ಧರ್ಮವಲ್ಲ.

---

1. ಪ್ರತಿಬಿಂಬದಂತಿರುವ ಚಿದಾಭಾಸದ ವಿಷಯವೇ ಎಂದರ್ಥ. ಅಂತಃಕರಣದಲ್ಲಿ ಚಿದ್ವ್ಯಾಪ್ತವಾಗಿಯೇ ಚಿತ್ತಿನಂತೆ ತೋರುವ ವ್ಯಕ್ತಿಗಳುಂಟಾಗುತ್ತಿರುವವು. ತೈ. ಭಾ. ೨-೧ (ಭಾ. ಭಾ. ೧೦೬ನ್ನು ನೋಡಿ).

2. ನಾನು ಎಂಬ ವಿಷಯಿಗೆ ಇಂಥವನು ಎಂಬ ವಿಷಯಧರ್ಮವು ವಿಶೇಷಣವಾಗಿ ತೋರುತ್ತದೆ; ಆದ್ದರಿಂದ ನಾನು ಎಂಬುದು ಚಿದಾಭಾಸವೇ ಎಂದು ನಿಶ್ಚಿತವಾಗುತ್ತದೆ. ಏಕೆಂದರೆ ನಿಜವಾದ ಆತ್ಮನು ವಿಷಯಿಯೇ ಹೊರತು ಎಂದಿಗೂ ವಿಷಯವಾಗಲಾರನು.

3. 'ನನ್ನ ತಲೆಯಲ್ಲಿ ನೋವು', 'ನಾಲಗೆಯಲ್ಲಿ ರುಚಿಯ ಸುಖವು' ಎಂದು ಮುಂತಾಗಿ ಸುಖದುಃಖಾದಿಗಳು ದೇಹಾವಯವಗಳಲ್ಲಿಯೇ ಕಾಣಿಸುತ್ತವೆ.

4. "ಆತ್ಮನ ಕಾಮಕ್ಕಾಗಿ" ಎಂಬ ಶ್ರುತಿಯು ದ್ವೈತವನ್ನು ಕಾಣುವ ಅವಿದ್ಯಾವಿಷಯಾತ್ಮನ ಸಂಬಂಧದಲ್ಲಿ ಹೇಳಿದ್ದೆಂದು ನಮ್ಮ ಮತ; ಏಕೆಂದರೆ ವಿದ್ಯಾವಿಷಯದಲ್ಲಿ ಆತ್ಮನು ಅದ್ವಿತೀಯನೆಂದು ಶ್ರುತಿಯೇ ಹೇಳಿರುವದರಿಂದ ಅವನಲ್ಲಿ ನಿಜವಾಗಿ ಸುಖದುಃಖಗಳು ಇರುವದಕ್ಕೆ ಅವಕಾಶವಿರುವದಿಲ್ಲ ಎಂದರ್ಥ.

## ಆತ್ಮನು ದುಃಖಿಯೆಂಬುದು ತರ್ಕಕ್ಕೂ ವಿರುದ್ಧ

(ಭಾಷ್ಯ)

೧೨೬. ತಾರ್ಕಿಕಸಮಯವಿರೋಧಾತ್ ಅಯುಕ್ತಮ್ ಇತಿ ಚೇತ್ । ನ । ಯುಕ್ತ್ಯಾಪಿ ಆತ್ಮನೋ ದುಃಖಿತ್ವಾನುಪಪತ್ತೇಃ । ನ ಹಿ ದುಃಖೇನ ಪ್ರತ್ಯಕ್ಷ ವಿಷಯೇಣ ಆತ್ಮನೋ ವಿಶೇಷ್ಯತ್ವಂ ಪ್ರತ್ಯಕ್ಷಾವಿಷಯತ್ವಾತ್ । ಆಕಾಶಸ್ಯ ಶಬ್ದ ಗುಣವತ್ತ್ವವತ್ ಆತ್ಮನೋ ದುಃಖಿತ್ವಮ್ ಇತಿ ಚೇತ್ । ನ । ಏಕಪ್ರತ್ಯಯ ವಿಷಯತ್ವಾನುಪಪತ್ತೇಃ । ನ ಹಿ ಸುಖಗ್ರಾಹಕೇಣ ಪ್ರತ್ಯಕ್ಷವಿಷಯೇಣ ಪ್ರತ್ಯ ಯೇನ ನಿತ್ಯಾನುಮೇಯಸ್ಯ ಆತ್ಮನೋ ವಿಷಯೀಕರಣಮ್ ಉಪಪದ್ಯತೇ । ತಸ್ಯ ಚ ವಿಷಯೀಕರಣೇ ಆತ್ಮನ ಏಕತ್ವಾತ್ ವಿಷಯ್ಯಭಾವಪ್ರಸಙ್ಗಃ । ಏಕ ಸ್ಯೈವ ವಿಷಯವಿಷಯಿತ್ವಂ ದೀಪವತ್ ಇತಿ ಚೇತ್ । ನ । ಯುಗಪದಸಂಭವಾತ್, ಆತ್ಮನಿ ಅಂಶಾನುಪಪತ್ತೇಶ್ಚ । ಏತೇನ ವಿಜ್ಞಾನಸ್ಯ ಗ್ರಾಹ್ಯಗ್ರಾಹಕತ್ವಂ ಪ್ರತ್ಯು ಕ್ತಮ್ । ಪ್ರತ್ಯಕ್ಷಾನುಮಾನವಿಷಯಯೋಶ್ಚ ದುಃಖಾತ್ಮನೋರ್ಗುಣಗುಣಿತ್ವೇ ನಾನುಮಾನಮ್ । ದುಃಖಸ್ಯ ನಿತ್ಯಮೇವ ಪ್ರತ್ಯಕ್ಷವಿಷಯತ್ವಾತ್ ರೂಪಾದಿಸಾಮಾ ನಾಧಿಕರಣ್ಯಾಚ್ಚ । ಮನಃಸಂಯೋಗಜತ್ವೇಪಿ ಆತ್ಮನಿ ದುಃಖಸ್ಯ ಸಾವಯವತ್ವ ವಿಕ್ರಿಯಾವತ್ತ್ವಾನಿತ್ಯತ್ವಪ್ರಸಙ್ಗಾತ್ । ನ ಹಿ ಅವಿಕೃತ್ಯ ಸಂಯೋಗಿದ್ರವ್ಯಂ ಗುಣಃ ಕಶ್ಚಿತ್ ಉಪಯನ್ ಅಪಯನ್ವಾ ದೃಷ್ಟಃ ಕ್ವಚಿತ್ । ನ ಚ ನಿರವಯವಂ ವಿಕ್ರಿಯಮಾಣಂ ದೃಷ್ಟಂ ಕ್ವಚಿತ್ ಅನಿತ್ಯಗುಣಾಶ್ರಯಂ ವಾ ನಿತ್ಯಮ್ । ನ ಚ ಆಕಾಶಃ ಆಗಮವಾದಿಭಿರ್ನಿತ್ಯೋಽಭ್ಯುಪಗಮ್ಯತೇ[1] । ನ ಚಾನ್ಯೋ ದೃಷ್ಟಾನ್ತೋಽಸ್ತಿ । ವಿಕ್ರಿಯಮಾಣಮಪಿ ತತ್ಪ್ರತ್ಯಯಾನಿವೃತ್ತೇರ್ನಿತ್ಯಮೇವ ಇತಿ ಚೇತ್ । ನ । ದ್ರವ್ಯಸ್ಯ ಅವಯವಾನ್ಯಥಾತ್ವವ್ಯತಿರೇಕೇಣ ವಿಕ್ರಿಯಾನುಪ ಪತ್ತೇಃ । ಸಾವಯವತ್ವೇಽಪಿ ನಿತ್ಯತ್ವಮ್ ಇತಿ ಚೇತ್ । ನ । ಸಾವಯವಸ್ಯ ಅವಯವಸಂಯೋಗಪೂರ್ವಕತ್ವೇ ಸತಿ ವಿಭಾಗೋಪಪತ್ತೇಃ । ವಜ್ರಾದಿಷು ಅದರ್ಶನಾತ್ ನೇತಿ ಚೇತ್ । ನ । ಅನುಮೇಯತ್ವಾತ್ ಸಂಯೋಗಪೂರ್ವತ್ವಸ್ಯ । ತಸ್ಮಾನ್ನಾತ್ಮನೋ ದುಃಖಾದ್ಯನಿತ್ಯಗುಣಾಶ್ರಯತ್ವೋಪಪತ್ತಿಃ । ಪರಸ್ಯ ಅದುಃಖಿತ್ವೇ ಅನ್ಯಸ್ಯ ಚ ದುಃಖಿನೋಽಭಾವೇ ದುಃಖೋಪಶಮನಾಯ ಶಾಸ್ತ್ರಾ ರಮ್ಭಾನರ್ಥಕ್ಯಮ್ ಇತಿ ಚೇತ್ । ನ । ಅವಿದ್ಯಾಧ್ಯಾರೋಪಿತದುಃಖಿತ್ವಭ್ರಮಾ ಪೋಹಾರ್ಥತ್ವಾತ್, ಆತ್ಮನಿ ಪ್ರಕೃತಸಂಖ್ಯಾಪೂರಣಭ್ರಮಾಪೋಹವತ್ । ಕಲ್ಪಿತ ದುಃಖ್ಯಾತ್ಮಾಭ್ಯುಪಗಮಾಚ್ಚ ಜಲಸೂರ್ಯಾದಿಪ್ರತಿಬಿಮ್ಬವತ್ ॥

---

1. 'ನಿತ್ಯತಯಾ ಅವಗಮ್ಯತೇ' ಎಂಬ ಪಾಠಕ್ಕಿಂತ ಮೇಲು; ನಿತ್ಯತಯಾ ಅಭ್ಯುಪ ಗಮ್ಯತೇ । ಅ ॥

(ಭಾಷ್ಯಾರ್ಥ)

(ಆಕ್ಷೇಪ):—ತಾರ್ಕಿಕರ ಶಾಸ್ತ್ರಕ್ಕೆ ವಿರುದ್ಧವಾಗಿರುವದರಿಂದ[1] ಇದು ಸರಿಯಲ್ಲ ಎಂದರೊ ?

(ಪರಿಹಾರ):—ಹಾಗಲ್ಲ. ಏಕೆಂದರೆ ಯುಕ್ತಿಯಿಂದಲೂ ಆತ್ಮನು ದುಃಖಿಯೆಂಬುದು ಹೊಂದುವದಿಲ್ಲ. ಏಕೆಂದರೆ ಪ್ರತ್ಯಕ್ಷಕ್ಕೆ ವಿಷಯವಾಗಿರುವ ದುಃಖಕ್ಕೆ ಆತ್ಮನು ವಿಶೇಷ್ಯವಾಗಲಾರನು ; (ಅವನು) ಪ್ರತ್ಯಕ್ಷಕ್ಕೆ ವಿಷಯನಲ್ಲದ್ದೇ (ಇದಕ್ಕೆ ಕಾರಣ).

(ಆಕ್ಷೇಪ):—ಆಕಾಶವು ಶಬ್ದಗುಣವುಳ್ಳದ್ದಾಗಿರುವಂತೆ ಆತ್ಮನೂ ದುಃಖಿಯಾಗಿರಬಹುದಲ್ಲವೆ ?

(ಪರಿಹಾರ):—ಹಾಗಲ್ಲ. ಏಕೆಂದರೆ (ಅವೆರಡೂ) ಒಂದೇ ಪ್ರತ್ಯಯಕ್ಕೆ ವಿಷಯವಾಗಲಾರವು. (ಇದರ ವಿವರ): ಸುಖಗ್ರಾಹಕವಾದ ಪ್ರತ್ಯಕ್ಷವಿಷಯವುಳ್ಳ ಪ್ರತ್ಯಯವು ನಿತ್ಯಾನುಮೇಯನಾದ ಆತ್ಮನನ್ನು ವಿಷಯಿಾಕರಿಸುವದಕ್ಕೆ ಆಗುವಂತೆಯೇ ಇಲ್ಲ.[2] ಅವನನ್ನೂ ವಿಷಯಿಾಕರಿಸಬಹುದೆಂದರೆ ಆತ್ಮನು ಒಬ್ಬನೇ ಆಗಿರುವದರಿಂದ ವಿಷಯಿಯೇ ಇಲ್ಲವಾಗಬೇಕಾಗುವದು.[3] ದೀಪದಂತೆ ಒಬ್ಬನೇ ವಿಷಯಿಯೂ ವಿಷಯವೂ ಆಗಬಹುದಲ್ಲ ! ಎಂದರೆ ಹಾಗಲ್ಲ ; ಏಕೆಂದರೆ ಒಂದೇ ಸಲಕ್ಕೆ (ಒಬ್ಬನಿಗೇ ವಿಷಯತ್ವವೂ ವಿಷಯಿತ್ವವೂ) ಆಗುವ ಹಾಗಿಲ್ಲ.[4] ಆತ್ಮನಲ್ಲಿ ಅಂಶಗಳಿರುವಂತಿಲ್ಲವಾದ್ದರಿಂದಲೂ (ವಿಷಯವಿಷಯಿಭಾವವು) ಆಗುವ ಹಾಗಿಲ್ಲ.[5] ಇದರಿಂದ ವಿಜ್ಞಾನವು (ತಾನೇ) ಗ್ರಾಹ್ಯವೂ ಗ್ರಾಹಕವೂ ಆಗಿದೆ

---

1. ಸುಖದುಃಖಾದಿಗಳು ಆತ್ಮನ ಗುಣಗಳೆಂದು ತಾರ್ಕಿಕರು ಹೇಳುತ್ತಾರೆ. ಗೀ.ಭಾ. ೧೩-೬ನ್ನು ನೋಡಿ.

2. ಆತ್ಮನು ಅನುಮೇಯನು, ಪ್ರತ್ಯಕ್ಷನಲ್ಲ ; ದುಃಖವು ಪ್ರತ್ಯಕ್ಷವು, ಅನುಮೇಯವಲ್ಲ ಎಂಬುದು ತಾರ್ಕಿಕಸಮಯವು. ಆದ್ದರಿಂದ ಅವರು 'ನಾನು ಸುಖಿಯು' ಎಂಬುದನ್ನು ಪ್ರತ್ಯಕ್ಷವೆನ್ನುವದಕ್ಕೂ ಬರುವದಿಲ್ಲ, ಅನುಮಾನವೆನ್ನುವದಕ್ಕೂ ಬರುವದಿಲ್ಲ.

3. ಆತ್ಮನು ಅನುಮೇಯನೆಂಬುದೂ ಸರಿಯಲ್ಲ ; ಏಕೆಂದರೆ ಅವನು ವಿಷಯಕ್ಕೂ ವಿಷಯಿ. ಅವನೂ ವಿಷಯನೆಂದರೆ ವಿಷಯಿಯೇ ಇಲ್ಲವೆಂದಂತೆ ಆಗುತ್ತದೆ.

4. ವಿಷಯವಾದರೆ ವಿಷಯಿಯಲ್ಲ, ವಿಷಯಿಯಾದರೆ ವಿಷಯವಲ್ಲ ; ಇದು ವಿಷಯವಾಗುವ ವಸ್ತುವಿಗೂ ಅದೇ ಕಾಲದಲ್ಲಿ ವಿಷಯಿತ್ವವು ಹೊಂದುವದಿಲ್ಲವೆಂಬ ಅಭಿಪ್ರಾಯದಿಂದ ಹೇಳಿದ್ದು.

5. ಒಂದೇ ಕಾಲದಲ್ಲಿ ಆತ್ಮನ ಒಂದಂಶವು ವಿಷಯಿಯಾಗಿದ್ದು ಇನ್ನೊಂದಂಶವು ವಿಷಯವಾಗಬಹುದಲ್ಲ !—ಎಂಬ ಮೀಮಾಂಸಕರ ವಾದಕ್ಕೆ ಉತ್ತರವಿದು. ಆತ್ಮನು ಸಾಂಶನಾದರೆ ಅನಿತ್ಯನಾಗುವನು, ಆತ್ಮನು ಸಾಂಶನೆಂಬುದು ಅನುಭವಕ್ಕೂ ವಿರುದ್ಧ.

ಎಂಬುದನ್ನು[1] ತಿರಸ್ಕರಿಸಿದಂತೆ ಆಯಿತು. ಪ್ರತ್ಯಕ್ಷಕ್ಕೂ ಅನುಮಾನಕ್ಕೂ (ಯಥಾಕ್ರಮವಾಗಿ) ವಿಷಯವಾಗಿರುವ ದುಃಖ, ಆತ್ಮ-ಇವರಿಗೆ ಗುಣಗುಣಿಗಳೆಂದು ಅನುಮಾನಿಸುವದನ್ನು (ತಿರಸ್ಕರಿಸಿದಂತೆ ಆಯಿತು).[2] ದುಃಖವು ಯಾವಾಗಲೂ ಪ್ರತ್ಯಕ್ಷವಿಷಯವಾಗಿರುವದರಿಂದಲೂ ರೂಪಾದಿಗಳೊಡನೆ ಸಮಾನಾಧಿಕರಣವುಳ್ಳದ್ದಾಗಿರುವದರಿಂದಲೂ (ಗುಣಗುಣಿಭಾವವನ್ನು ಅನುಮಾನಿಸುವಂತಿರುವದಿಲ್ಲ.) ಆತ್ಮನಲ್ಲಿ ಮನಃಸಂಯೋಗದಿಂದ ದುಃಖವುಂಟಾಗುತ್ತದೆ ಎಂಬ ಪಕ್ಷದಲ್ಲಿಯೂ[3] (ಆತ್ಮನು) ಸಾವಯವ, ವಿಕಾರಿ, ಅನಿತ್ಯನು- ಎಂದಾಗಬೇಕಾಗುವದರಿಂದಲೂ- (ಗುಣಗುಣಿಭಾವವಿಲ್ಲ. ಇದರ ವಿವರ): ಬಂದು ಸೇರುವದು, ಬಿಟ್ಟು ತೊಲಗುವದು- ಎಂಬ ಸ್ವಭಾವದ ಗುಣವು ಸಂಯೋಗಿದ್ರವ್ಯವನ್ನು ವಿಕಾರಗೊಳಿಸದೆ ಇರುವದು ಎಲ್ಲಿಯೂ ಕಂಡಿಲ್ಲ. ನಿರವಯವವಾದದ್ದು ಮಾರ್ಪಡುವದಾಗಲಿ ನಿತ್ಯವಾದದ್ದು ಅನಿತ್ಯಗುಣಕ್ಕೆ ಆಶ್ರಯವಾಗಿರುವದಾಗಲಿ ಎಲ್ಲಿಯೂ ಕಂಡಿಲ್ಲ.[4] ಆಕಾಶವು ನಿತ್ಯವಾಗಿರುವದೆಂದು ವೇದಾಂತಿಗಳು ಒಪ್ಪುವದೂ ಇಲ್ಲ.[5] (ನಿತ್ಯಕ್ಕೆ ಅನಿತ್ಯಗುಣವಿರಬಹುದೆಂಬುದಕ್ಕೆ) ಮತ್ತೆ ಬೇರೆಯ ದೃಷ್ಟಾಂತವೂ ಇಲ್ಲ. ಅದೇ (ಇದು) ಎಂಬ ಪ್ರತ್ಯಯವು ಹೋಗದೆ ಇರುವದರಿಂದ ಮಾರ್ಪಡುವ (ವಸ್ತು)ವೂ ನಿತ್ಯವೇ[6] ಎಂದರೆ (ಅದೂ) ಸರಿಯಲ್ಲ. ಏಕೆಂದರೆ ದ್ರವ್ಯದ ಅವಯವಗಳು ಬೇರ್ಪಟ್ಟ ಹೊರತು (ವಸ್ತುವಿಗೆ) ವಿಕಾರವುಂಟಾಗಲಾರದು. ಸಾವಯವವಾದರೂ ನಿತ್ಯವಾಗಲಿ ಎಂದರೆ (ಅದೂ) ಸರಿಯಲ್ಲ. ಏಕೆಂದರೆ ಸಾವಯವವಾಗಿರುವ (ವಸ್ತು) ಅವಯವಸಂಯೋಗದಿಂದ (ಆಗಿರುತ್ತದೆಯಾದ್ದರಿಂದ

---

1. ವಿಜ್ಞಾನವಾದಿಗಳ ಮತವಿದು ; ಅದಕ್ಕೂ ನಿರಂಶತ್ವಯುಕ್ತಿಯೇ ಬಾಧಕವಾಗಿದೆ.

2. ಆತ್ಮನು ಅನುಮಾನಕ್ಕೆ ವಿಷಯನೆಂದು ಒಪ್ಪಿದರೂ ದುಃಖವು ಪ್ರತ್ಯಕ್ಷಕ್ಕೆ ವಿಷಯವಾಗಿರುವದರಿಂದ ಪ್ರತ್ಯಕ್ಷಾನುಮೇಯಗಳಿಗೆ ಗುಣಗುಣಿತ್ವವನ್ನು ಅನುಮಾನದಿಂದ ಹೇಳುವದಕ್ಕೆ ಆಗುವದಿಲ್ಲ. ದುಃಖವು ಪ್ರತ್ಯಕ್ಷವಾಗಿರುವದರಿಂದ ಅನುಮೇಯವೇ ಅಲ್ಲ.

3. ಬುದ್ಧ್ಯಾದಿ ಒಂಬತ್ತು ಗುಣಗಳು ಆತ್ಮಮನಃಸಂಯೋಗದಿಂದ ಉಂಟಾಗುತ್ತವೆ ಎಂಬುದು ತಾರ್ಕಿಕರ ಮತವು.

4. ಸಂಯೋಗವಾಗುವ ವಸ್ತುವಿಗೆ ಗುಣಗಳ ಸಂಯೋಗವಾದಾಗಲೆಲ್ಲ ಮಾರ್ಪಾಡಾಗಬೇಕು. ವಿಯೋಗವಾದಾಗಲೂ ಮಾರ್ಪಾಡಾಗಬೇಕು.

5. ನಿತ್ಯವಸ್ತುಗಳೆಂದು ತಾರ್ಕಿಕರು ಹೇಳುವ ಆಕಾಶಕಾಲಾದಿಗಳೂ ಕಾರ್ಯವೇ ಎಂಬುದು ವೇದಾಂತಿಗಳ ಮತ. ಸೂ.ಭಾ. ೨-೩-೭ ; ಆದ್ದರಿಂದ ಆಕಾಶದಂತೆ ನಿತ್ಯವಸ್ತುವೂ ಅನಿತ್ಯಗುಣಕ್ಕೆ ಆಶ್ರಯವಾಗಿರಬಹುದೆಂಬ ತರ್ಕವು ಅವರಿಗೆ ಸಮ್ಮತವಲ್ಲ.

6. ಇದನ್ನು ಪರಿಣಾಮಿನಿತ್ಯವೆಂದು ಸಾಂಖ್ಯರು ಕರೆಯುತ್ತಾರೆ.

ಅವಯುವಗಳಿಗೆ) ವಿಭಾಗವೂ ಆಗಬಹುದಾಗಿದೆ.[1] ವಜ್ರಾದಿಗಳಲ್ಲಿ (ಅವಯುವ ಸಂಯೋಗವು) ಕಂಡಿಲ್ಲವಾಗಿ (ಈ ಯುಕ್ತಿಯು) ಸರಿಯಲ್ಲ ಎನ್ನುವದೂ ಸರಿಯಲ್ಲ; ಏಕೆಂದರೆ (ಅವುಗಳೂ) ಸಂಯೋಗಪೂರ್ವಕವಾಗಿ ಆಗಿರುತ್ತವೆ ಎಂದು ಅನುಮಾನಿಸಬಹುದಾಗಿರುತ್ತದೆ.[2] ಆದ್ದರಿಂದ ಆತ್ಮನು ದುಃಖವೇ ಮುಂತಾದ ಅನಿತ್ಯಗುಣಗಳಿಗೆ ಆಶ್ರಯನಾಗಲಾರನು.

(ಆಕ್ಷೇಪ):—ಪರಮಾತ್ಮನಿಗೆ ದುಃಖವಿಲ್ಲದಿರುವದರಿಂದಲೂ (ಅವನಿಗಿಂತ) ಬೇರೊಬ್ಬ ದುಃಖಿಯು ಇಲ್ಲದಿರುವದರಿಂದಲೂ ದುಃಖವನ್ನು ನೀಗುವದಕ್ಕಾಗಿ (ನಿಮ್ಮ ಮತದಲ್ಲಿ) ಶಾಸ್ತ್ರವನ್ನು ಪ್ರಾರಂಭಿಸಿರುವದು ವ್ಯರ್ಥವಲ್ಲವೆ ?

(ಪರಿಹಾರ):—ಹಾಗಲ್ಲ. ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವ[3] ದುಃಖಿಯೆಂಬ ಭ್ರಾಂತಿಯನ್ನು ಕಳೆಯುವದೆಂಬ ಪ್ರಯೋಜನವಿದೆ. ತನ್ನಲ್ಲಿ ಪ್ರಕೃತ ಸಂಖ್ಯೆಯ ಪೂರಣತ್ವವಿಲ್ಲವೆಂಬ ಭ್ರಾಂತಿಯನ್ನು (ಆಪ್ತವಾಕ್ಯವು) ಕಳೆಯುವಂತೆಯೇ ಇದು.[4] ನೀರನಲ್ಲಿ (ತೋರುವ) ಸೂರ್ಯಾದಿಪ್ರತಿಬಿಂಬದಂತೆ ಕಲ್ಪಿತನಾದ ದುಃಖ್ಯಾತ್ಮನನ್ನುಅಂಗೀಕರಿಸಿರುವದರಿಂದಲೂ[5] (ಶಾಸ್ತ್ರಾರಂಭವು ಸಾರ್ಥಕವಾಗಿರುತ್ತದೆ).

---

1. ಸಂಯೋಗಗಳು ವಿಯೋಗದಲ್ಲಿ ಕೊನೆಗಾಣುವವು ಎಂಬ ನ್ಯಾಯವನ್ನು ತಿರಸ್ಕರಿಸವದಕ್ಕೆ ಆಗುವದಿಲ್ಲ ; ವಿಯೋಗವಾದರೆ ನಿತ್ಯತ್ವಕ್ಕೆ ಹಾನಿ.

2. ವಜ್ರಾದಿಗಳು ಅವಯುವಸಂಯೋಗದಿಂದ ಆಗಿವೆ ಎಂಬುದು ಪ್ರತ್ಯಕ್ಷವಲ್ಲವಾದರೂ ಸಾವಯುವವಾದ್ದರಿಂದ ಅವೂ ಸಂಯೋಗಪೂರ್ವಕವಾಗಿವೆ- ಎಂದು ಅನುಮಾನಿಸಬಹುದು.

3. ಮಿಥ್ಯಾಜ್ಞಾನದಿಂದ ಹುಟ್ಟುಗಟ್ಟಿರುವ ಎಂದರ್ಥ. ಅವಿದ್ಯೆಯೇ ಬೇರೆ, ಅಧ್ಯಾರೋಪವೇ ಬೇರೆ ಎಂದೇನೂ ಅಭಿಪ್ರಾಯವಿಲ್ಲ.

4. ಸುಪ್ರಸಿದ್ಧವಾದ ದಶಮನ ಕಥೆಯಿದು. ದೃಷ್ಟಾಂತದಲ್ಲಿ ತಾನು ಹತ್ತನೆಯವನಲ್ಲವೆಂದು ಮಾಡಿಕೊಂಡಿರುವ ಭ್ರಾಂತಿಯನ್ನು 'ನೀನು ಹತ್ತನೆಯವನು' ಎಂಬ ಆಪ್ತವಾಕ್ಯವು ಕಳೆಯುವಂತೆ ಶಾಸ್ತ್ರದಲ್ಲಿರುವ 'ನೀನು ಅದುಃಖಿಯಾದ ಸದ್ಬ್ರಹ್ಮವು' ಎಂಬ ವಾಕ್ಯವು ಕಳೆಯುವದು ಎಂದರ್ಥ.

5. ಆತ್ಮನು ಸುಖಿದುಃಖಿ ಎಂದು ಮುಂತಾಗಿ ಕಲ್ಪಿಸಿರುವದು ನೀರಿನಲ್ಲಿ ತೋರುವ ಪ್ರತಿಬಿಂಬದಂತೆ ; ಅಂತಃಕರಣವೇ ಮುಂತಾದವುಗಳ ಸಂಬಂಧದಿಂದ ಕಾಣುವ ಚೈತನ್ಯಾಭಾಸವನ್ನು ಪರಮಾರ್ಥಸ್ವರೂಪದಿಂದ ವಿಂಗಡಿಸಿಕೊಳ್ಳದ್ದರಿಂದಾದ ಭ್ರಾಂತಿಯು. ಛಾಂ. ೬-೩-೨ರ ಭಾಷ್ಯವನ್ನು ನೋಡಿ. 'ಜಲಸೂರ್ಯಾದಿ ಪ್ರತಿಬಿಂಬವತ್' ಎಂಬುದನ್ನು ಮುಂದಿನ ವಾಕ್ಯಕ್ಕೇ ವ್ಯಾಖ್ಯಾನದಲ್ಲಿ ಅನ್ವಯಿಸಿದೆಯಾರೂ ಈ ವಾಕ್ಯಕ್ಕೆ ಅದು ಹೆಚ್ಚು ಒಪ್ಪುತ್ತದೆ.

## ಪ್ರವೇಶಶ್ರುತಿಗೆ ಸಿದ್ಧಾಂತಸಮ್ಮತವಾದ ತಾತ್ಪರ್ಯ

(ಭಾಷ್ಯ)

೧೨೭. ಆತ್ಮಪ್ರವೇಶಶ್ಚ ಪ್ರತಿಬಿಮ್ಬವತ್ ವ್ಯಾಕೃತೇ ಕಾರ್ಯೇ ಉಪಲಭ್ಯತ್ವಮ್ | ಪ್ರಾಗುತ್ಪತ್ತೇಃ ಅನುಪಲಬ್ಧ ಆತ್ಮಾ ಪಶ್ಚಾತ್ ಕಾರ್ಯೇ ಚ ಸೃಷ್ಟೇ ವ್ಯಾಕೃತೇ ಬುದ್ಧೇರನ್ತರುಪಲಭ್ಯಮಾನಃ ಸೂರ್ಯಾದಿಪ್ರತಿಬಿಮ್ಬವತ್ ಜಲಾದೌ ಕಾರ್ಯಂ ಸೃಷ್ಟ್ವಾ ಪ್ರವಿಷ್ಟ ಇವ ಲಕ್ಷ್ಯಮಾಣಃ ನಿರ್ದಿಶ್ಯತೇ "ಸ ಏಷ ಇಹ ಪ್ರವಿಷ್ಟಃ," "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨-೬), "ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ" (ಐ. ೧-೩-೧೨) "ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ" (ಛಾಂ. ೬-೩-೨) ಇತ್ಯೇವಮಾದಿಭಿಃ | ನ ತು ಸರ್ವಗತಸ್ಯ ನಿರವಯವಸ್ಯ ದಿಗ್ದೇಶಕಾಲಾನ್ತರಾಪಕ್ರಮಣಪ್ರಾಪ್ತಿಲಕ್ಷಣಃ ಪ್ರವೇಶಃ ಕದಾಚಿದಪಿ ಉಪಪದ್ಯತೇ| ನ ಚ ಪರಾತ್ ಆತ್ಮನೋಽನ್ಯೋಽಸ್ತಿ ದ್ರಷ್ಟಾ "ನಾನ್ಯದತೋಽಸ್ತಿ ದ್ರಷ್ಟೃ" "ನಾನ್ಯದತೋಽಸ್ತಿ ಶ್ರೋತೃ" (೩-೮-೧) ಇತ್ಯಾದಿಶ್ರುತೇಃ ಇತ್ಯವೋಚಾಮ||

(ಭಾಷ್ಯಾರ್ಥ)

ಆತ್ಮನು ಪ್ರವೇಶಿಸಿರುತ್ತಾನೆಂಬುದೂ ಪ್ರತಿಬಿಂಬದಂತೆ ವ್ಯಾಕೃತವಾದ ಕಾರ್ಯದಲ್ಲಿ ಕಾಣಬರುವದು. (ಜಗತ್ತು) ಹುಟ್ಟುವ ಮುಂಚೆ ಕಾಣದೆ ಇದ್ದ ಆತ್ಮನು ಆಮೇಲೆ ಕಾರ್ಯವು ಸೃಷ್ಟವಾಗಿ ವ್ಯಾಕೃತವಾಗಲು, ಸೂರ್ಯಾದಿಪ್ರತಿಬಿಂಬವು ನೀರೇ ಮುಂತಾದದ್ದರಲ್ಲಿ (ಕಾಣುವಂತೆ)[1] ಬುದ್ಧಿಯ ಒಳಗೆ ತೋರುತ್ತಾನಾದ್ದರಿಂದ ಕಾರ್ಯವನ್ನು ಸೃಜಿಸಿ (ಅದರ) ಒಳಹೊಕ್ಕವನಂತೆ ಕಾಣುವನಷ್ಟೆ, (ಅವನನ್ನು) "ಆ ಇವನು ಇಲ್ಲಿ ಒಳಹೊಕ್ಕನು", "ಅದನ್ನು ಸೃಜಿಸಿ ಅದನ್ನೇ ಒಳಹೊಕ್ಕನು" (ತೈ. ೨-೬), "ಅವನು ಇದೇ (ಕೂದಲಿನ) ಎಲ್ಲೆಯನ್ನು ಕೊರೆದುಕೊಂಡು ಈ ದ್ವಾರದಿಂದ ಒಳಹೊಕ್ಕನು" (ಐ. ೧-೩-೧೨), "ಆ ಈ ದೇವತೆಯು, ಒಳ್ಳೆಯದು, ನಾನು ಈ ಮೂರು ದೇವತೆಗಳನ್ನೂ ಈ ಜೀವನೆಂಬ ಸ್ವರೂಪದಿಂದ ಒಳಹೊಕ್ಕು (ನಾಮರೂಪಗಳನ್ನು ವ್ಯಾಕರಣಮಾಡುವೆನು)" (ಛಾಂ. ೬-೩-೨) ಎಂದು ಮುಂತಾಗಿರುವ (ಶ್ರುತಿಗಳು) ತಿಳಿಸುತ್ತವೆ. ಇಷ್ಟೇ

---

1. ಪ್ರತಿಬಿಂಬಪಕ್ಷವನ್ನು ಹಿಂದೆ (ಭಾ. ಭಾ. ೧೨೧) ತಿರಸ್ಕರಿಸಿದ್ದು ದೇಶದಲ್ಲಿರುವ ಬಿಂಬವಿನ ಪ್ರತಿಬಿಂಬವು ನೀರೇ ಮುಂತಾದ ದೂರದಲ್ಲಿರುವ ಮತ್ತೊಂದು ಆಧಾರದಲ್ಲಿ ತೋರುವಂತೆ ಆತ್ಮನು ಮತ್ತೊಂದು ವಸ್ತುವಿಗಿಂತ ದೂರವಾಗಿಲ್ಲ ಎಂದು ತಿಳಿಸುವದಕ್ಕೆ. ಈಗ ಅದನ್ನೇ ಮತ್ತೆ ಅಂಗೀಕರಿಸಿರುವದು ಆತ್ಮನು ತನ್ನಿಂದಲೇ ಆಗಿರುವ, ತನಗಿಂತ ಬೇರೆಯಲ್ಲವ, ಅಂತಃಕರಣದಲ್ಲಿ ಪ್ರತಿಬಿಂಬಿಸಿರುವಂತೆ ತೋರುತ್ತಾನೆಂದು ಹೇಳುವದಕ್ಕೆ.

**ಹೊರತು ಸರ್ವಗತನೂ, ನಿರವಯುವನೂ (ಆದ ಆತ್ಮನಿಗೆ) ದಿಕ್ಕು, ದೇಶ, ಕಾಲ- (ಇವನ್ನು) ಬಿಟ್ಟು (ಮತ್ತೊಂದನ್ನು) ಸೇರುವ ಸ್ವರೂಪದ ಪ್ರವೇಶವು ಎಂದಿಗೂ ಹೊಂದುವದಿಲ್ಲ.** ಪರಮಾತ್ಮನಿಗಿಂತ ಬೇರೊಬ್ಬ ದ್ರಷ್ಟೃವು ಇಲ್ಲವೂ ಇಲ್ಲ; ಏಕೆಂದರೆ "ಇದಕ್ಕಿಂತ ಬೇರೊಂದು ದ್ರಷ್ಟೃವಿಲ್ಲ, ಇದಕ್ಕಿಂತ ಬೇರೊಂದು ಶ್ರೋತೃವಿಲ್ಲ" (೩-೮-೧೧) ಎಂದು ಶ್ರುತಿಯಲ್ಲಿದೆ ಎಂದು (ಆಗಲೆ ಭಾ.ಭಾ. ೧೨೪ರಲ್ಲಿ) ಹೇಳಿರುತ್ತೇವೆ.

## ಪ್ರವೇಶವಾಕ್ಯವು ಜ್ಞಾನಕ್ಕಾಗಿ ಬಂದದ್ದು

(ಭಾಷ್ಯ)

೧೨೮. ಉಪಲಬ್ಧ್ಯರ್ಥತ್ವಾಚ್ಚ ಸೃಷ್ಟಿಪ್ರವೇಶಸ್ಥಿತ್ಯಪ್ಯಯವಾಕ್ಯಾನಾಮ್ ಉಪಲಬ್ಧೇಃ ಪುರುಷಾರ್ಥತ್ವಶ್ರವಣಾತ್ । "ಆತ್ಮಾನಮೇವಾವೇತ್ ತಸ್ಮಾತ್ ತತ್ಸರ್ವಮಭವತ್" (೧-೪-೧೦), "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧), "ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯), "ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಮ್" (ಛಾಂ. ೬-೧೪-೨) ಇತ್ಯಾದಿಶ್ರುತಿಭ್ಯಃ । "ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್" (ಗೀ. ೧೮-೫೫), "ತದ್ಧ್ಯಗ್ರ್ಯಂ ಸರ್ವವಿದ್ಯಾನಾಂ ಪ್ರಾಪ್ಯತೇ ಹ್ಯಮೃತಂ ತತಃ" (ಮನು. ೧೨-೮೫) ಇತ್ಯಾದಿಸ್ಮೃತಿಭ್ಯಶ್ಚ । ಭೇದದರ್ಶನಾಪವಾದಾಚ್ಚ ಸೃಷ್ಟ್ಯಾದಿವಾಕ್ಯಾನಾಮ್ ಆತ್ಮೈಕತ್ವದರ್ಶನಾರ್ಥತ್ವೋಪಪತ್ತಿಃ[1] ತಸ್ಮಾತ್ ಕಾರ್ಯಸ್ಥಸ್ಯ ಉಪಲಭ್ಯತ್ವಮೇವ ಪ್ರವೇಶ ಇತ್ಯುಪಚರ್ಯತೇ ॥

(ಭಾಷ್ಯಾರ್ಥ)

**ಸೃಷ್ಟಿ, ಪ್ರವೇಶ, ಸ್ಥಿತಿ, ಪ್ರಲಯ-(ಇವುಗಳನ್ನು ಹೇಳುವ) ವಾಕ್ಯಗಳು ಜ್ಞಾನಕ್ಕಾಗಿ (ಬಂದಿರುವದರಿಂದಲೂ) (ಇದು ನಿಜವಾದ ಪ್ರವೇಶವಲ್ಲ).** ಏಕೆಂದರೆ ಜ್ಞಾನವು ಪುರುಷಾರ್ಥವಾಗಿರುತ್ತದೆ[2] ಎಂದು ಶ್ರುತಿಯಲ್ಲಿರುತ್ತದೆ. "(ಅದು) ತನ್ನನ್ನೇ ಅರಿತುಕೊಂಡಿತು, ಅದರಿಂದ ಅದು ಎಲ್ಲವೂ ಆಯಿತು." (೧-೪-೧೦), "ಬ್ರಹ್ಮಜ್ಞಾನಿಯು ಪರ(ಪುರುಷಾರ್ಥವನ್ನು) ಪಡೆಯುತ್ತಾನೆ."

---

1. "ದರ್ಶನಾರ್ಥತ್ವೋಪಪತ್ತಿಃ" ಎಂದೋ "ದರ್ಶನಪರತ್ವೋಪಪತ್ತಿಃ" ಎಂದೋ ಇದ್ದರೆ ಸಾಕು. ಅಚ್ಚಿನ ಪುಸ್ತಕದಲ್ಲಿರುವಂತೆ ದರ್ಶನಾರ್ಥಪರತ್ವೋಪಪತ್ತಿಃ-ಎಂದಿರಬೇಕಾದದ್ದಿಲ್ಲ.

2. ಪುರುಷಾರ್ಥಕ್ಕೆ ಕಾರಣವಾಗಿದೆ ಎಂದರ್ಥ. ಆದ್ದರಿಂದ ಫಲವುಳ್ಳ ಜ್ಞಾನದ ಸಂನಿಧಿಯಲ್ಲಿ ಅಫಲವಾಗಿ ಹೇಳಿರುವ ಸೃಷ್ಟಿಪ್ರವೇಶಾದಿಗಳು ಜ್ಞಾನಕ್ಕೆ ಅಂಗವೆಂದಾಯಿತು. ಸೂ.ಭಾ. ೨-೧-೧೪ (ಭಾ.ಭಾ. ೪೩೯) ಐ.ಭಾ. ೧-೩ (ಭಾ.ಭಾ. ೬೧)

(ತೈ. ೨-೧), "ಯಾವನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುತ್ತಾನೋ ಅವನು ಬ್ರಹ್ಮವೇ ಆಗುತ್ತಾನೆ" (ಮುಂ. ೩-೨-೯), "ಆಚಾರ್ಯನನ್ನುಳ್ಳ ಪುರುಷನು (ಅದನ್ನು) ಅರಿತುಕೊಳ್ಳುತ್ತಾನೆ, ಅವನಿಗೆ ಅಲ್ಲಿಯವರೆಗೇ ತಡ, (ಬಳಿಕವೇ ಮುಕ್ತನಾಗುತ್ತಾನೆ)" (ಛಾಂ. ೬-೧೪-೨) ಇವೇ ಮುಂತಾದ ಶ್ರುತಿಗಳು (ಇದಕ್ಕೆ) ಪ್ರಮಾಣವು. "ಅದರಿಂದ ನನ್ನನ್ನು ಇದ್ದಂತೆ ಅರಿತುಕೊಂಡು ಅದರ ಅನಂತರದಲ್ಲಿಯೇ (ನನ್ನನ್ನು) ಹೋಗುತ್ತಾನೆ" (ಗೀ. ೧೮-೫೫), "ಅದೇ ವಿದ್ಯೆಗಳಲ್ಲೆಲ್ಲ ಮೊದಲನೆಯ ಸ್ಥಾನಕ್ಕೆ ಸೇರತಕ್ಕದ್ದು; ಏಕೆಂದರೆ ಅದರಿಂದ ಅಮೃತವು ಸಿಕ್ಕುತ್ತದೆ" (ಮನು. ೧೨-೮೫), ಇವೇ ಮುಂತಾದ ಸ್ಮೃತಿಗಳೂ (ಪ್ರಮಾಣವು). ಭೇದದರ್ಶನವನ್ನು (ಶ್ರುತಿಯಲ್ಲಿ) ನಿಂದಿಸಿರುವದರಿಂದಲೂ ಸೃಷ್ಟ್ಯಾದಿವಾಕ್ಯಗಳಿಗೆ ಆತ್ಮೈಕತ್ವದರ್ಶನದಲ್ಲಿಯೇ ತಾತ್ಪರ್ಯವೆಂಬುದು ಹೊಂದುತ್ತದೆ.

ಆದ್ದರಿಂದ ಕಾರ್ಯದಲ್ಲಿರುವ[1] (ಆತ್ಮನು) ಅರಿಯಬರುವದನ್ನೇ ಪ್ರವೇಶವೆಂದು (ಇಲ್ಲಿ) ಉಪಚಾರಕ್ಕಾಗಿ ಹೇಳಿರುತ್ತದೆ (ಎಂದು ನಿಶ್ಚಯವಾಯಿತು).

## ಆತ್ಮನು ಕಾರ್ಯದಲ್ಲಿ ಅರಿಯಬರುತ್ತಿರುವ ಬಗೆ

(ಭಾಷ್ಯ)

೧೯. ಆ ನಖಾಗ್ರೇಭ್ಯಃ ನಖಾಗ್ರಮರ್ಯಾದಮ್ ಆತ್ಮನಶ್ಚೈತನ್ಯಮ್ ಉಪಲಭ್ಯತೇ। ತತ್ರ ಕಥಮಿವ ಪ್ರವಿಷ್ಟಃ ಇತಿ? ಆಹ। ಯಥಾ ಲೋಕೇ ಕ್ಷುರಧಾನೇ ಕ್ಷುರಃ ಧೀಯತೇ ಅಸ್ಮಿನ್ ಇತಿ ಕ್ಷುರಧಾನಮ್। ತಸ್ಮಿನ್ ನಾಪಿತೋಪಸ್ಕರಾಧಾನೇ ಕ್ಷುರಃ ಅನ್ತಃಸ್ಥಃ ಉಪಲಭ್ಯತೇ ಅವಹಿತಃ ಪ್ರವೇಶಿತಃ ಸ್ಯಾತ್। ಯಥಾ ವಾ ವಿಶ್ವಂಭರಃ ಅಗ್ನಿಃ ವಿಶ್ವಸ್ಯ ಭರಣಾತ್ ವಿಶ್ವಂಭರಃ ಕುಲಾಯೇ ನೀಡೇ ಅಗ್ನಿಃ ಕಾಷ್ಠಾದೌ ಅವಹಿತಃ ಸ್ಯಾತ್ ಇತ್ಯನುವರ್ತತೇ। ತತ್ರ ಹಿ ಸಃ ಮಥ್ಯಮಾನಃ ಉಪಲಭ್ಯತೇ। ಯಥಾ ಚ ಕ್ಷುರಃ ಕ್ಷುರಧಾನೇ ಏಕದೇಶೇ ಅವಸ್ಥಿತಃ, ಯಥಾ ಚ ಅಗ್ನಿಃ ಕಾಷ್ಠಾದೌ ಸರ್ವತೋ ವ್ಯಾಪ್ಯ ಅವಸ್ಥಿತ ಏವಂ ಸಾಮಾನ್ಯತೋ ವಿಶೇಷತಶ್ಚ ದೇಹಂ ಸಂವ್ಯಾಪ್ಯ ಅವಸ್ಥಿತಃ ಆತ್ಮಾ। ತತ್ರ ಹಿ ಸ ಪ್ರಾಣನಾದಿಕ್ರಿಯಾವಾನ್ ದರ್ಶನಾದಿಕ್ರಿಯಾವಾಂಶ್ಚ ಉಪಲಭ್ಯತೇ॥

(ಭಾಷ್ಯಾರ್ಥ)

ಉಗುರುತುದಿಗಳವರೆಗೂ ಉಗುರುಗಳ ಕೊನೆಗಳ ತನಕವೂ ಆತ್ಮನ ಚೈತನ್ಯವು ಅರಿಯಬರುತ್ತಿದೆ. ಅದರಲ್ಲಿ ಹೇಗೆ ಒಳಹೊಕ್ಕನು? ಎಂದು (ಶ್ರುತಿ) ಹೇಳುತ್ತದೆ. ಹೇಗೆ ಲೋಕದಲ್ಲಿ ಕ್ಷುರಧಾನದಲ್ಲಿ ಕ್ಷೌರದ ಕತ್ತಿಯನ್ನು ಅದರಲ್ಲಿ ಡುತ್ತಾರಾದ್ದರಿಂದ (ಹಡಪಕ್ಕೆ) ಕ್ಷುರಧಾನ(ವೆಂದು ಹೆಸರು); ಅದರಲ್ಲಿ—ಕ್ಷೌರಿಕನ

---

1 ಸೃಷ್ಟಿಯಾದ ಪ್ರಪಂಚದೊಳಗೆ, ಶರೀರಾದಿಗಳಲ್ಲಿ

ಉಪಕರಣಗಳನ್ನು ಇಡುವ (ಚೀಲ)ದಲ್ಲಿ-ಒಳಗೆ ಕಾಣುತ್ತದೆ (ಯಾದ್ದರಿಂದ) ಅದರಲ್ಲಿಡಲ್ಪಟ್ಟಿರುವದೋ ಒಳಹೊಗಿಸಿದಂತಾಗಿರುವದೋ ಅಥವಾ ಹೇಗೆ ವಿಶ್ವಂಭರವು ಎಲ್ಲವನ್ನೂ ತುಂಬಿಕೊಂಡಿರುವದರಿಂದ ಬೆಂಕಿಯು (ವಿಶ್ವಂಭರವು.) ವಿಶ್ವಂಭರಕುಲಾಯದಲ್ಲಿ ಎಂದರೆ (ತನ್ನ) ಆಶ್ರಯವಾದ ಕಟ್ಟಿಗೆಯೇ ಮುಂತಾದದ್ದರಲ್ಲಿ ಬೆಂಕಿಯು ಇಡಲ್ಪಟ್ಟಿರುವದೋ ಎಂದು (ಇಲ್ಲಿಯೂ) ಸೇರಿಸಿಕೊಳ್ಳಬೇಕು. ಏಕೆಂದರೆ ಅಲ್ಲಿ ಕಡೆದರೆ ಅದು ಕಾಣಬರುತ್ತದೆ. (ಅಂತೂ) ಹೇಗೆ ಕ್ಷೌರದ ಕತ್ತಿಯು ಹಡಪದ ಒಂದು ಕಡೆಯಲ್ಲಿದ್ದುಕೊಂಡಿರುವದೋ, ಮತ್ತು ಹೇಗೆ ಅಗ್ನಿಯು ಕಟ್ಟಿಗೆಯೇ ಮುಂತಾದದ್ದರಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿದ್ದುಕೊಂಡಿರುವದೋ, ಹಾಗೆ ಸಾಮಾನ್ಯವಾಗಿಯೂ[1] ವಿಶೇಷವಾಗಿಯೂ ದೇಹವನ್ನು ವ್ಯಾಪಿಸಿಕೊಂಡು ಆತ್ಮನು ಇರುತ್ತಾನೆ. ಅಲ್ಲಿಯೇ ಅಲ್ಲವೆ, ಅವನು ಉಸಿರಾಡುವದೇ ಮುಂತಾದ ಕ್ರಿಯೆಗಳುಳ್ಳವನಾಗಿಯೂ ನೋಡುವದು ಮುಂತಾದ ಕ್ರಿಯೆಗಳುಳ್ಳವನಾಗಿಯೂ ಕಾಣಬರುತ್ತಿದ್ದಾನೆ ?[2]

## ಆತ್ಮನು ಪ್ರತ್ಯಕ್ಷವಾಗಿದ್ದರೂ ಮೂಢರು ಅರಿತುಕೊಳ್ಳಲಾರರು

(ಭಾಷ್ಯ)

೧೩೦. ತಸ್ಮಾತ್ ತತ್ರ ಏವಂ ಪ್ರವಿಷ್ಟಂ ತಮ್ ಆತ್ಮಾನಂ ಪ್ರಾಣನಾದಿ ಕ್ರಿಯಾವಿಶಿಷ್ಟಂ ನ ಪಶ್ಯನ್ತಿ ನೋಪಲಭನ್ತೇ । ನನು ಅಪ್ರಾಪ್ತಪ್ರತಿಷೇಧೋಽಯಂ ತಂ ನ ಪಶ್ಯನ್ತೀತಿ ದರ್ಶನಸ್ಯ ಅಪ್ರಕೃತತ್ವಾತ್ । ನೈಷದೋಷಃ । ಸೃಷ್ಟ್ಯಾದಿ ವಾಕ್ಯಾನಾಮ್ ಆತ್ಮೈಕತ್ವಪ್ರತಿಪತ್ತ್ಯರ್ಥಪರತ್ವಾತ್ ಪ್ರಕೃತಮೇವ ತಸ್ಯ ದರ್ಶನಮ್ । "ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ" (೨-೫-೧೯) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಆದ್ದರಿಂದ ಅದರಲ್ಲಿ ಹೀಗೆ ಒಳಹೊಕ್ಕಿರುವ[3] ಆ ಉಸಿರಾಡುವದೇ ಮುಂತಾದ ಕ್ರಿಯೆಗಳಿಂದ ಕೂಡಿರುವ ಆ ಆತ್ಮನನ್ನು ಕಾಣದೆ ಇರುವರು, ಅರಿತುಕೊಳ್ಳದೆ ಇರುವರು.[4]

---

1. ಉಗುರಿನವರೆಗೂ ಸಾಮಾನ್ಯಚೈತನ್ಯರೂಪದಿಂದ ವ್ಯಾಪಿಸಿಕೊಂಡಿರುತ್ತಾನೆ, ಸ್ಥಾನವಿಶೇಷಗಳಲ್ಲಿ ವಿಶೇಷರೂಪದಿಂದಲೂ ಇರುತ್ತಾನೆ.

2. ಇದೇ ಆತ್ಮನ ವಿಶೇಷರೂಪವು; ಇದು ಸುಷುಪ್ತಿಯಲ್ಲಿರುವದಿಲ್ಲ. ಅಲ್ಲಿ ಸಾಮಾನ್ಯವ್ಯಾಪ್ತಿಯು ಮಾತ್ರ ಇರುತ್ತದೆ.

3. ವಿಶೇಷರೂಪದಿಂದ ಕಾರ್ಯಕರಣಸಂಘಾತವನ್ನು ವ್ಯಾಪಿಸಿಕೊಂಡಿರುವ.

4. ನಿಜವಾದ ರೂಪದಿಂದ ಅರಿತುಕೊಳ್ಳಲಾರದೆ ಇರುವರು.

(ಆಕ್ಷೇಪ):—(ಆತ್ಮನನ್ನು) ಕಾಣುವದು (ಇಲ್ಲಿ) ಪ್ರಕೃತವಾಗಿರುವದಿಲ್ಲವಾದ್ದರಿಂದ ' ಅವನನ್ನು ಕಾಣದೆ ಇರುವರು ' ಎಂದು ಹೇಳಿರುವ ಈ (ವಾಕ್ಯವು) ಒದಗದೆ ಇದ್ದದ್ದನ್ನು ಅಲ್ಲಗಳೆದಂತಾಗುವದಿಲ್ಲವೆ ?

(ಪರಿಹಾರ):—ಇದೇನೂ ತಪ್ಪಲ್ಲ. (ಏಕೆಂದರೆ) ಸೃಷ್ಟ್ಯಾದಿವಾಕ್ಯಗಳು ಆತ್ಮೈಕತ್ವಜ್ಞಾನಕ್ಕಾಗಿಯೇ (ಬಂದಿರುವದರಿಂದ) ಆ (ಆತ್ಮನನ್ನು) ನೋಡಬೇಕೆಂಬುದು ಪ್ರಕೃತವೇ ಆಗಿರುತ್ತದೆ. " ರೂಪರೂಪಕ್ಕೂ ಪ್ರತಿರೂಪನಾದನು; ಆ ಇವನ ರೂಪವು ಅರಿತುಕೊಳ್ಳುವದಕ್ಕಾಗಿ[3] " (೨-೫-೧೯) ಎಂಬ ಮಂತ್ರವರ್ಣವು (ಇದಕ್ಕೆ ಆಧಾರವು).

## ಕಾರ್ಯದಲ್ಲಿರುವ ಆತ್ಮನನ್ನು ಮಾತ್ರ ಕಂಡವರು ಅರಿಯರು

(ಭಾಷ್ಯ)

೧೩೧. ತತ್ರ ಪ್ರಾಣನಾದಿಕ್ರಿಯಾವಿಶಿಷ್ಟಸ್ಯ ಅದರ್ಶನೇ[4] ಹೇತುಮ್ ಆಹ | ಅಕೃತ್ಸ್ನಃ ಅಸಮಸ್ತೋ ಹಿ ಯಸ್ಮಾತ್ ಸಃ ಪ್ರಾಣನಾದಿಕ್ರಿಯಾವಿಶಿಷ್ಟಃ | ಕುತಃ ಪುನರಕೃತ್ಸ್ನತ್ವಮ್ ಇತಿ ? ಉಚ್ಯತೇ | ಪ್ರಾಣನ್ನೇವ ಪ್ರಾಣನಕ್ರಿಯಾಮೇವ ಕುರ್ವನ್ ಪ್ರಾಣೋ ನಾಮ ಪ್ರಾಣಸಮಾಖ್ಯಃ ಪ್ರಾಣಾಭಿಧಾನೋ ಭವತಿ | ಪ್ರಾಣನಕ್ರಿಯಾಕರ್ತೃತ್ವಾತ್ ಹಿ ಪ್ರಾಣಃ ಪ್ರಾಣಿತಿ ಇತ್ಯುಚ್ಯತೇ ನಾನ್ಯಾಂ ಕ್ರಿಯಾಂ ಕುರ್ವನ್ | ಯಥಾ ಲಾವಕಃ ಪಾಚಕಃ ಇತಿ | ತಸ್ಮಾತ್ ಕ್ರಿಯಾನ್ತರವಿಶಿಷ್ಟಸ್ಯ ಅನುಪಸಂಹಾರಾತ್ ಅಕೃತ್ಸ್ನೋ ಹಿ ಸಃ | ತಥಾ ವದನ್ ವದನಕ್ರಿಯಾಂ ಕುರ್ವನ್ ವಕ್ತೀತಿ ವಾಕ್, ಪಶ್ಯನ್ ಚಕ್ಷುಃ | ಚಷ್ಟೇ ಇತಿ ಚಕ್ಷುಃ | ದ್ರಷ್ಟಾ | ಶೃಣ್ವನ್ ಶೃಣೋತೀತಿ ಶ್ರೋತ್ರಮ್, ಪ್ರಾಣನ್ನೇವ ಪ್ರಾಣಃ ವದನ್ ವಾಕ್ ಇತ್ಯಾಭ್ಯಾಂ ಕ್ರಿಯಾಶಕ್ತ್ಯುದ್ಭವಃ ಪ್ರದರ್ಶಿತೋ ಭವತಿ | ಪಶ್ಯಂಶ್ಚಕ್ಷುಃ, ಶೃಣ್ವಞ್ಛ್ರೋತ್ರಮ್-ಇತ್ಯಾಭ್ಯಾಂ ವಿಜ್ಞಾನಶಕ್ತ್ಯುದ್ಭವಃ ಪ್ರದರ್ಶ್ಯತೇ | ನಾಮರೂಪವಿಷಯತ್ವಾತ್ ವಿಜ್ಞಾನಶಕ್ತೇಃ | ಶ್ರೋತ್ರಚಕ್ಷುಷೀ ವಿಜ್ಞಾನಸ್ಯ ಸಾಧನೇ | ವಿಜ್ಞಾನಂ ತು ನಾಮರೂಪಸಾಧನಮ್ | ನ ಹಿ ನಾಮರೂಪವ್ಯತಿರಿಕ್ತಂ ವಿಜ್ಞೇಯಮಸ್ತಿ, ತಯೋಶ್ಚ ಉಪಲಬ್ಧೌ ಕರಣಂ ಚಕ್ಷುಃಶ್ರೋತ್ರೇ ಕ್ರಿಯಾ ಚ ನಾಮರೂಪಸಾಧ್ಯಾ ಪ್ರಾಣಸಮವಾಯಿನೀ | ತಸ್ಯಾಃ ಪ್ರಾಣಾಶ್ರಯಾಯಾ ಅಭಿವ್ಯಕ್ತೌ ವಾಕ್ ಕರಣಮ್ | ತಥಾ ಪಾಣಿಪಾದಪಾಯೂಪಸ್ಥಾಖ್ಯಾನಿ, ಸರ್ವೇಷಾಮ್

---

3. ವಿಶೇಷ ರೂಪವೇ ಆತ್ಮನ ನಿಜವಾದ ಸ್ವರೂಪವನ್ನು ತಿಳಿದುಕೊಳ್ಳುವದಕ್ಕೆ ಉಪಾಯವು ಎಂದರ್ಥ.

4. ' ವಿಶಿಷ್ಟಸ್ಯ ದರ್ಶನೇ ' ಎಂಬ ಪಾಠವು ಹಿಂದಿನ ಸಂದರ್ಭಕ್ಕಾಗಲಿ ಮುಂದಿನ ಹೇತುವಿಗಾಗಲಿ ಹೊಂದುವದಿಲ್ಲ ; ಆದ್ದರಿಂದ ' ಅದರ್ಶನೇ ' ಎಂಬ ಪಾಠವನ್ನೇ ಒಪ್ಪಿರುತ್ತೇವೆ.

ಉಪಲಕ್ಷಣಾರ್ಥಾ ವಾಕ್ । ಏತದೇವ ಹಿ ಸರ್ವಂ ವ್ಯಾಕೃತಮ್ । "ತ್ರಯಂ ವಾ ಇದಂ ನಾಮ ರೂಪಂ ಕರ್ಮ" (೧-೬-೧) ಇತಿ ಹಿ ವಕ್ಷ್ಯತಿ । ಮನ್ವಾನೋ ಮನಃ । ಮನುತ ಇತಿ । ಜ್ಞಾನಶಕ್ತಿವಿಕಾಸಾನಾಂ ಸಾಧಾರಣಂ ಕರಣಂ ಮನಃ । ಮನುತೇಽನೇನ ಇತಿ। ಪುರುಷಸ್ತು ಕರ್ತಾ ಸನ್ ಮನ್ವಾನೋ ಮನಃ ಇತ್ಯುಚ್ಯತೇ। ತಾನ್ಯೇತಾನಿ ಪ್ರಾಣಾದೀನಿ ಅಸ್ಯ ಆತ್ಮನಃ ಕರ್ಮನಾಮಾನಿ ಕರ್ಮಜಾನಿ ನಾಮಾನಿ ಕರ್ಮನಾಮಾನ್ಯೇವ, ನ ತು ವಸ್ತುಮಾತ್ರವಿಷಯಾಣಿ । ಅತಃ ನ ಕೃತ್ಸ್ನಾತ್ಮವಸ್ತ್ವವದ್ಯೋತಕಾನಿ । ಏವಂ ಹಿ ಅಸಾವಾತ್ಮಾ ಪ್ರಾಣನಾದಿಕ್ರಿಯಯಾ ತತ್ತತ್ಕ್ರಿಯಾಜನಿತಪ್ರಾಣಾದಿನಾಮರೂಪಾಭ್ಯಾಂ ವ್ಯಾಕ್ರಿಯಮಾಣೋಽವದ್ಯೋತ್ಯಮಾನೋಽಪಿ ॥

(ಭಾಷ್ಯಾರ್ಥ)

ಇಲ್ಲಿ ಪ್ರಾಣನಾದಿಕ್ರಿಯೆಗಳಿಂದೊಡಗೂಡಿದ (ಆತ್ಮನನ್ನು ಸರಿಯಾಗಿ) ಕಾಣದೆ ಇರುವದಕ್ಕೆ[1] ಕಾರಣವನ್ನು ಶ್ರುತಿ ಹೇಳುತ್ತದೆ. (ಏಕೆಂದರೆ) ಅವನು, ಎಂದರೆ ಪ್ರಾಣನಾದಿಕ್ರಿಯೆಗಳಿಂದೊಡಗೂಡಿದವನು, ಅಕೃತ್ಸ್ನನಾಗಿರುವನಷ್ಟೆ, (ಆದರಿಂದ).[2]

(ಅವನು) ಅಕೃತ್ಸ್ನನು ಎಂಬುದಾದರೂ ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ. ಪ್ರಾಣನಮಾಡುವಾಗಲೇ ಪ್ರಾಣನ (ಉಸಿರಾಡುವದು) ಎಂಬ ಕ್ರಿಯೆಯನ್ನು ಮಾಡುವಾಗಲೇ[3] ಪ್ರಾಣನು ಎಂದಾಗುವನು, ಪ್ರಾಣನೆಂಬ ಹೆಸರಿನವನು, ಪ್ರಾಣನೆಂದು ಕರೆಯಿಸಿಕೊಳ್ಳುವವನು ಆಗುವನು. ಪ್ರಾಣನ ಕ್ರಿಯೆಗೆ ಕರ್ತೃವಾಗಿರುವದರಿಂದಲೇ, "ಪ್ರಾಣಿತಿ" (ಉಸಿರಾಡುತ್ತಾನೆ) ಆದ್ದರಿಂದ ಪ್ರಾಣನು ಎನ್ನುವರೇ ಹೊರತು ಮತ್ತೆ ಯಾವ ಕ್ರಿಯೆಯನ್ನಾದರೂ ಮಾಡುವದರಿಂದ (ಅವನನ್ನು ಹಾಗೆಂದು ಕರೆಯು)ವದಿಲ್ಲ. ಕಟಾವುಗಾರ, ಅಡಿಗೆಯವನು, ಎಂಬ (ಹೆಸರುಗಳು ಆಯಾ ಕ್ರಿಯೆಯನ್ನು ಮಾಡುವದರಿಂದಲೇ ಬರು)ವಂತೆಯೇ

1. ಅಕೃತ್ಸ್ನನಾಗಿರುವವೇ ಕಾರಣವೆಂದು ಮುಂದೆ ಹೇಳಿವೆಯಾದ್ದರಿಂದ 'ಅದರ್ಶನೇ' (ಕಾಣದೆ ಇರುವದಕ್ಕೆ) ಎಂಬ ಪಾಠವೇ ಸರಿಯೆಂದು ನಿಶ್ಚಯವಾಗುತ್ತದೆ.

2. ಅಪೂರ್ಣನಾಗಿರುವದರಿಂದ ಅವನನ್ನು ಸರಿಯಾಗಿ ತಿಳಿದುಕೊಂಡಂತೆ ಅಲ್ಲ. ಗೀ.ಭಾ. ೧೫-೧೦ನ್ನೂ (ಭಾ.ಭಾ. ೩೬೭), ಕೆ.ಭಾ. ೨-೧-೩ (ಭಾ.ಭಾ. ೧೧೪)ನ್ನೂ ನೋಡಿ.

3. ಆಯಾ ಕ್ರಿಯೆಯನ್ನು ಮಾಡುವಾಗಲೇ ಪ್ರಾಣನು ಮುಂತಾದ ಹೆಸರುಗಳು ಬರುತ್ತವೆ; ಆದ್ದರಿಂದ ಅವು ಪೂರ್ಣಾತ್ಮನ ನಾಮಗಳಲ್ಲ ಎಂದರ್ಥ. ಪ್ರಾಣನನೆಂಬ ಕ್ರಿಯೆಯನ್ನು ಮಾಡುವಾಗಲೇ, ಇದೇ ಕರ್ಮವನ್ನು ಮಾಡುವಾಗಲೇ, ಈ ಕಾಲದಲ್ಲಿ ಮಾತ್ರವೇ ಇವನಿಗೆ ಪ್ರಾಣನೆಂಬ ನಾಮರೂಪಗಳಿರುವವು; ಮಿಕ್ಕ ಸಂದರ್ಭಗಳಲ್ಲಿ ಇರುವದಿಲ್ಲ ಎಂದು **ವಾರ್ತಿಕಕಾರರು** ಅವಧಾರಣೆಯ ಅರ್ಥವನ್ನು ಸ್ಫುಟಗೊಳಿಸಿರುತ್ತಾರೆ.

(ಇದು). ಆದ್ದರಿಂದ ಮತ್ತೊಂದು ಕ್ರಿಯೆಯಿಂದ ವಿಶಿಷ್ಟ(ನಾದ ಆತ್ಮನ ಸ್ವರೂಪವನ್ನು ತನ್ನೊಳಗೆ) ಸೇರಿಸಿಕೊಳ್ಳದೆ ಇರುವದರಿಂದ ಅವನು ಅಕೃತ್ಸ್ನನೇ.

ಇದರಂತೆ ಮಾತನಾಡುವಾಗ (ವಕ್ತಿ), ಮಾತನಾಡುತ್ತಾನಾದ್ದರಿಂದ[1] ವಾಕ್ಕು ಎನಿಸಿರುತ್ತಾನೆ. ನೋಡುತ್ತಿರುವಾಗ ಚಕ್ಷುಸ್ಸು. (ಚಷ್ಟೇ) ನೋಡುತ್ತಾನಾದ್ದರಿಂದ ಚಕ್ಷುಸ್ಸು ನೋಡುವವನು (ಎಂದರ್ಥ). ಕೇಳುವಾಗ (ಶೃಣೋತಿ) ಕೇಳುತ್ತಾನಾದ್ದರಿಂದ ಶ್ರೋತ್ರ. 'ಪ್ರಾಣನವೆಂಬ (ಕ್ರಿಯೆಯನ್ನು ಮಾಡು)ವಾಗ. ಪ್ರಾಣನು,' 'ಮಾತನಾಡುವಾಗ ವಾಕ್ಕು' ಎಂಬೀ ಎರಡರಿಂದ ಕ್ರಿಯಾಶಕ್ತಿಯ ಉದ್ಭವವನ್ನು[2] (ಉಪಲಕ್ಷಣೆಯಿಂದ) ತೋರಿಸಿಕೊಟ್ಟಂತಾಗಿದೆ[3] ; ನೋಡುವಾಗ ಚಕ್ಷುವು' 'ಕೇಳುವಾಗ ಶ್ರೋತ್ರ' ಎಂಬೀ ಎರಡರಿಂದ ವಿಜ್ಞಾನ ಶಕ್ತಿಯ ಉದ್ಭವವನ್ನು (ಉಪಲಕ್ಷಣೆಯಿಂದ) ತೋರಿಸಿರುತ್ತದೆ. ಏಕೆಂದರೆ ವಿಜ್ಞಾನಶಕ್ತಿಗೆ ನಾಮರೂಪಗಳೇ ವಿಷಯಗಳು. ಶ್ರೋತ್ರಚಕ್ಷುಗಳು ವಿಜ್ಞಾನಕ್ಕೆ ಸಾಧನವಾಗಿವೆ, ವಿಜ್ಞಾನವಾದರೋ ನಾಮರೂಪಗಳಿಗೆ ಸಾಧನವು. ನಾಮರೂಪಗಳಿಗಿಂತ ಬೇರೆಯಾದ ವಿಜ್ಞೇಯವಿರುವದಿಲ್ಲವಷ್ಟೆ ; ಅವುಗಳನ್ನು ಅರಿಯುವದಕ್ಕೆ ಚಕ್ಷುಃಶ್ರೋತ್ರಗಳೇ ಕರಣವು. ಮತ್ತು ಕ್ರಿಯೆ ಎಂಬುದು ನಾಮರೂಪಗಳಿಂದಾಗತಕ್ಕದ್ದು, ಪ್ರಾಣಕ್ಕೆ ಸಂಬಂಧಪಟ್ಟದ್ದು. ಪ್ರಾಣವನ್ನು ಆಶ್ರಯಿಸಿರುವ ಆ ಕ್ರಿಯೆಯು ಹೊರತೋರಿಕೊಳ್ಳುವದಕ್ಕೆ ವಾಕ್ಕು ಕರಣವು ; ಅದರಂತೆ ಪಾಣಿ, ಪಾದ, ಪಾಯು, ಉಪಸ್ಥ- ಎಂಬ (ಕರ್ಮೇಂದ್ರಿಯಗಳೂ ಕರಣಗಳು. ಈ) ಎಲ್ಲಕ್ಕೂ ಉಪಲಕ್ಷಣವಾಗಿ ವಾಕ್ಕನ್ನು (ಹೇಳಿದೆ). ವ್ಯಾಕೃತವೆಂಬುದೆಲ್ಲ ಇಷ್ಟೇ ; ಏಕೆಂದರೆ ಇದೆಲ್ಲ ನಾಮ, ರೂಪ, ಕರ್ಮ- ಎಂಬ ಮೂರೇ (೧-೬-೧) ಎಂದಲ್ಲವೆ, ಮುಂದೆ (ಶ್ರುತಿಯಲ್ಲಿ) ಹೇಳಿದೆ ?

ಮನನಮಾಡುವಾಗ ಮನಸ್ಸು (ಎನಿಸುವನು); (ಮನುತೇ) ಮನನ ಮಾಡುತ್ತಾನಾದ್ದರಿಂದ (ಇವನು ಮನಸ್ಸು ಎನಿಸಿರುತ್ತಾನೆ). ಜ್ಞಾನಶಕ್ತಿಯ ವಿಕಾಸಗಳಿಗೆಲ್ಲ ಸಾಧಾರಣವಾಗಿರುವ ಕರಣವು (ಮನುತೇ ಅನೇನ) ಇದರಿಂದ

---

1. ಈ ವ್ಯಾಖ್ಯಾನಕ್ಕೆ ಭರ್ತೃಪ್ರಪಂಚರ ಭಾಷ್ಯವು ಆಧಾರವೆಂದು ಊಹಿಸುವದಕ್ಕೆ ಅವಕಾಶವಿದೆ. ಮಾತನಾಡುವದಕ್ಕೆ ಕರಣವಾಗಿರುವದರಿಂದ ಎಂದರ್ಥವಲ್ಲ. ಪ್ರಾಣ, ವಾಕ್ಕು- ಮುಂತಾದ ಇಲ್ಲಿರುವ ನಾಮಗಳಿಗೆ ಪ್ರಾಣನ ಕರ್ತೃ, ವಕ್ತೃ, ದ್ರಷ್ಟೃ, ಶ್ರೋತೃ, ಮನ್ತೃ-ಎಂದು ಕರ್ತರ್ಥವನ್ನೇ ಕಲ್ಪಿಸಬೇಕು. ಆತ್ಮನು ಆಯಾ ಕ್ರಿಯೆಗಳಿಗೆ ಕರ್ತೃವಾಗಿಯೇ ತೋರುತ್ತಾನೆ.

2. ಹೊರತೋರಿಕೊಳ್ಳುವದನ್ನು.

3. ಆದ್ದರಿಂದ ಮುಂದೆ ವಿವರಿಸಿರುವಂತೆ ಪಾಣಿಪಾದಾದಿಗಳನ್ನು ಇದರಿಂದ ಗ್ರಹಿಸಬೇಕು.

ಮನನಮಾಡುತ್ತಾರಾದ್ದರಿಂದ ಮನಸ್ಸು (ಎನಿಸುವದು); ಆದರೆ ಪುರುಷನು ಕರ್ತೃವಾಗಿರುವದರಿಂದ ಮನನಮಾಡುವನಾದ್ದರಿಂದ ಮನಸ್ಸು ಎಂದಿರುತ್ತದೆ.

ಆ ಈ ಪ್ರಾಣನೇ ಮುಂತಾದವುಗಳು ಈ ಆತ್ಮನಿಗೆ ಕರ್ಮನಾಮಗಳು; ಕರ್ಮದಿಂದಾಗುವ ನಾಮಗಳಾದ್ದರಿಂದ ಕರ್ಮನಾಮಗಳು. ಬರಿಯ (ಆತ್ಮ) ವಸ್ತುವೇ ಇವಕ್ಕೆ ವಿಷಯವಲ್ಲ; ಆದ್ದರಿಂದ (ಇವು) ಪೂರ ಆತ್ಮವಸ್ತುವನ್ನು ಬೆಳಗುವ (ನಾಮ)ಗಳಲ್ಲ. ಪ್ರಾಣನನೇ ಮುಂತಾದ ಕ್ರಿಯೆಯಿಂದ ಆಯಾ ಕ್ರಿಯೆಯಿಂದುಂಟಾದ ಪ್ರಾಣಾದಿನಾಮರೂಪಗಳಿಂದ ವ್ಯಾಕೃತನಾಗಿ ತೋರಿಸಿಕೊಂಡರೂ ಈ ಆತ್ಮನು ಹೀಗೆ[1] (ಅಕೃತ್ಸ್ನನೇ) ಅಷ್ಟೆ.

## ಪ್ರಾಣಾದಿರೂಪದಿಂದ ತಿಳಿಯುವದು ಸಮ್ಯಗ್ಜ್ಞಾನವಲ್ಲ

(ಭಾಷ್ಯ)

೧೩೨. ಸ ಯೋಽತಃ ಅಸ್ಮಾತ್ ಪ್ರಾಣನಾದಿಕ್ರಿಯಾಸಮುದಾಯಾತ್ ಏಕೈಕಂ ಪ್ರಾಣಮ್ ಚಕ್ಷುಃ ಇತಿ ವಾ ವಿಶಿಷ್ಟಮ್ ಅನುಪಸಂಹೃತೇತರವಿಶಿಷ್ಟ ಕ್ರಿಯಾತ್ಮಕಂ ಮನಸಾ ಅಯಮಾತ್ಮಾ ಇತ್ಯುಪಾಸ್ತೇ ಚಿನ್ತಯತಿ ನ ಸ ವೇದ ನ ಸ ಜಾನಾತಿ ಬ್ರಹ್ಮ| ಕಸ್ಮಾತ್? ಅಕೃತ್ಸ್ನೋ, ಅಸಮಸ್ತೋ ಹಿ ಯಸ್ಮಾತ್ ಏಷ ಆತ್ಮಾ ಅಸ್ಮಾತ್ ಪ್ರಾಣನಾದಿಸಮುದಾಯಾತ್ | ಅತಃ ಪ್ರವಿಭಕ್ತಃ ಏಕೈಕೇನ ವಿಶೇಷಣೇನ ವಿಶಿಷ್ಟಃ ಇತರಧರ್ಮಾನ್ತರಾನುಪಸಂಹಾರಾತ್ ಭವತಿ। ಯಾವದಯಮ್ ಏವಂ ವೇದ ಪಶ್ಯಾಮಿ, ಶೃಣೋಮಿ, ಸ್ಪೃಶಾಮೀತಿ ವಾ ಸ್ವಭಾವಪ್ರವೃತ್ತಿವಿಶಿಷ್ಟಂ ವೇದ ತಾವತ್ ಅಞ್ಜಸಾ ಕೃತ್ಸ್ನಮ್ ಆತ್ಮಾನಂ ನ ವೇದ ||

(ಭಾಷ್ಯಾರ್ಥ)

ಯಾವನು (ಅತಃ=ಅಸ್ಮಾತ್) ಈ ಪ್ರಾಣನವೇ ಮುಂತಾದ ಕ್ರಿಯಾಸಮುದಾಯದೊಳಗೆ ಒಂದೊಂದನ್ನೇ ಪ್ರಾಣ, ಅಥವಾ ಚಕ್ಷುಸ್ಸು ಎಂದು (ಮುಂತಾಗಿ ಒಂದೊಂದು ಕ್ರಿಯೆಯಿಂದ ಕೂಡಿದ) ವಿಶೇಷವನ್ನೇ, ಉಳಿದ

---

1. ವ್ಯಾಖ್ಯಾನಕಾರರು 'ಕೃತ್ಸ್ನನಾಗಿ ಕಂಡುಬರುವದಿಲ್ಲ' ಎಂದು ಶೇಷಪೂರಣವನ್ನು ಮಾಡಿರುತ್ತಾರೆ; ನಾವು 'ಏವಂ ಹಿ' ಎಂಬುದರಿಂದಲೇ ಆ ಅರ್ಥವನ್ನು ತೆಗೆದಿರುತ್ತೇವೆ.

ಕ್ರಿಯಾವಿಶೇಷಗಳನ್ನೂ ಸೇರಿಸಿಕೊಳ್ಳದೆ[1] ಮನಸ್ಸಿನಲ್ಲಿ 'ಇವನು ಆತ್ಮನು' ಎಂದು ಉಪಾಸನೆಮಾಡುವನೋ ಚಿಂತಿಸುವನೋ[2] ಅವನು ಬ್ರಹ್ಮವನ್ನು ಅರಿಯನು, ಸರಿಯಾಗಿ ತಿಳಿದಿರುವವನಲ್ಲ. ಏಕೆಂದರೆ ಈ ಆತ್ಮನು ಈ ಪ್ರಾಣನಾದಿಸಮುದಾಯದಿಂದ ಅಕೃತ್ಸ್ನನು, ಅಸರ್ವನಾದವನು, ಆದ್ದರಿಂದ ಬಿಂಗಡವಾಗಿದ್ದು ಒಂದೊಂದು ವಿಶೇಷಣದಿಂದಲೇ ಕೂಡಿ ಉಳಿದ ಧರ್ಮಾಂತರಗಳನ್ನು ಸೇರಿಸಿಕೊಳ್ಳದೆ ಇರುವದರಿಂದ (ಅಕೃತ್ಸ್ನನು) ಆಗಿರುತ್ತಾನೆ.[3] ಎಲ್ಲಿಯವರೆಗೆ ಇವನು ನೋಡುತ್ತೇನೆ, ಕೇಳುತ್ತೇನೆ ಅಥವಾ ಮುಟ್ಟುತ್ತೇನೆ ಎಂದು ಸ್ವಭಾವಪ್ರವೃತ್ತಿಯಿಂದ ಕೂಡಿದವನನ್ನಾಗಿ[4] ಆತ್ಮನನ್ನು ಅರಿತುಕೊಂಡಿರುವನೋ ಅಲ್ಲಿಯವರೆಗೆ ಸರಿಯಾಗಿ ಕೃತ್ಸ್ನನಾದ[5] ಆತ್ಮನನ್ನು ಅರಿತಿರುವದಿಲ್ಲ.

## ಪೂರ್ಣಜ್ಞಾನವು ಯಾವದು ?

(ಭಾಷ್ಯ)

೧೩೩. ಕಥಂ ಪುನಃ ಪಶ್ಯನ್ ವೇದ ಇತಿ ? ಆಹ- ಆತ್ಮೇತ್ಯೇವ ಆತ್ಮೇತಿ ಪ್ರಾಣಾದೀನಿ ವಿಶೇಷಣಾನಿ ಯಾನಿ ಉಕ್ತಾನಿ ತಾನಿ ಯಸ್ಯ ಸ ಆಪ್ನುವನ್ ತಾನಿ

---

1. ಎಲ್ಲಾ ಕ್ರಿಯಾವಿಶೇಷಗಳನ್ನೂ ಸೇರಿಸಿಕೊಂಡರೆ ತಿಳಿದಂತೆ ಆಯಿತು ಎಂದೇನೂ ಅರ್ಥವಲ್ಲ. ಏಕೆಂದರೆ ಆತ್ಮನೆಂದೇ ಉಪಾಸನೆಮಾಡಬೇಕು-ಎಂದು ಹೇಳಿರುತ್ತದೆ. ಆದ್ದರಿಂದ ಇಲ್ಲಿ ಸಮಸ್ತವ್ಯಸ್ತರೂಪನಾದ ಪರಮಾತ್ಮನನ್ನು ತಿಳಿದುಕೊಳ್ಳಬೇಕು- ಎಂದು **ಭರ್ತೃಪ್ರಪಂಚರು** ಮಾಡಿರುವ ವ್ಯಾಖ್ಯಾನವು ಸರಿಯಲ್ಲ ಎಂದು ವಾರ್ತಿಕದಲ್ಲಿ ಬರೆದಿದೆ.

2. ಈ ಚಿಂತನೆಯು ಭಾವನಾರೂಪವಾದದ್ದಲ್ಲ ವಸ್ತುಜ್ಞಾನವೇ ಎಂದು ಪ್ರಕರಣವಶದಿಂದ **ವಾರ್ತಿಕ**ದಲ್ಲಿ ವಿವರಿಸಿದೆ.

3. ಒಂದೊಂದು ಕ್ರಿಯಾವಿಶಿಷ್ಟವಾದವನೇ ಆತ್ಮನೆಂದು ತಿಳಿದುಕೊಂಡರೆ ಮಿಕ್ಕವುಗಳಿಂದ ಕೂಡಿದ ಆತ್ಮನನ್ನು ಬಿಟ್ಟಂತೆ ಆಗುತ್ತದೆಯಾದ್ದರಿಂದ ಈ ಆತ್ಮಜ್ಞಾನವು ಅಕೃತ್ಸ್ನ, ಅಪೂರ್ಣಜ್ಞಾನ.

4. ದರ್ಶನಾದಿಕ್ರಿಯೆಗಳು ಸ್ವಾಭಾವಿಕಾವಿದ್ಯೆಯಿಂದಾದ ಪ್ರವೃತ್ತಿಗಳು; ಆತ್ಮನ ಸ್ವರೂಪಕ್ಕೆ ಸೇರಿದವುಗಳಲ್ಲ.

5. ಎಲ್ಲಾ ಕ್ರಿಯೆಗಳಲ್ಲಿಯೂ ಕಾಣಬರುವ ಸ್ವರೂಪದ ಆತ್ಮನನ್ನು ಎಂದರ್ಥ.

ಆತ್ಮೇತ್ಯುಚ್ಯತೇ। ಸ ತಥಾ ಕೃತ್ಸ್ನವಿಶೇಷಣೋಪಸಂಹಾರೀ[1] ಸನ್ ಕೃತ್ಸ್ನೋ ಭವತಿ। ವಸ್ತುಮಾತ್ರರೂಪೇಣ ಹಿ ಪ್ರಾಣಾದ್ಯುಪಾಧಿವಿಶೇಷಕ್ರಿಯಾಜನಿತಾನಿ ವಿಶೇಷಣಾನಿ ವ್ಯಾಪ್ನೋತಿ। ತಥಾ ಚ ವಕ್ಷ್ಯತಿ " ಧ್ಯಾಯತೀವ ಲೇಲಾಯತೀವ । (೪-೩-೭) ಇತಿ। ತಸ್ಮಾತ್ ಆತ್ಮೇತ್ಯೇವೋಪಾಸೀತ। ಏವಂ ಕೃತ್ಸ್ನೋ ಹ್ಯಸೌ ಸ್ವೇನ ವಸ್ತುರೂಪೇಣ ಗೃಹ್ಯಮಾಣೋ ಭವತಿ। ಕಸ್ಮಾತ್ ಕೃತ್ಸ್ನಃ? ಇತ್ಯಾಶಙ್ಕ್ಯಾಹ। ಅತ್ರ ಅಸ್ಮಿನ್ ಆತ್ಮನಿ ಹಿ ಯಸ್ಮಾತ್ ನಿರುಪಾಧಿಕೇ ಜಲಸೂರ್ಯಪ್ರತಿಬಿಮ್ಬಭೇದಾ ಇವ ಆದಿತ್ಯೇ ಪ್ರಾಣಾದ್ಯುಪಾಧಿಕೃತಾ ವಿಶೇಷಾಃ ಪ್ರಾಣಾದಿಕರ್ಮಜನಾಮಾಭಿಧೇಯಾಃ ಯಥೋಕ್ತಾಃ ಹಿ ಏತೇ ಏಕಮ್ ಅಭಿನ್ನತಾಂ ಭವನ್ತಿ ಪ್ರತಿಪದ್ಯನ್ತೇ॥

(ಭಾಷ್ಯಾರ್ಥ)

ಹಾಗಾದರೆ ಹೇಗೆ ತಿಳಿದುಕೊಂಡರೆ (ಸರಿಯಾಗಿ) ಅರಿತವನಾಗುತ್ತಾನೆ? ಎಂದರೆ (ಶ್ರುತಿ) ಹೇಳುತ್ತದೆ. ಆತ್ಮನೆಂದೇ– (ಇಲ್ಲಿ) ಆತ್ಮನೆಂದಿದೆಯಷ್ಟೆ. ಪ್ರಾಣನೇ ಮುಂತಾದ (ಬೇರೆಬೇರೆಯ) ವಿಶೇಷಣಗಳನ್ನು ಹೇಳಿದೆಯಲ್ಲ. ಅವನ್ನು ಯಾವ (ಆತ್ಮನಿಗೆ ಹೇಳಿರುತ್ತದೆಯೋ) ಅವನಿಗೆ ಅವುಗಳನ್ನು (ಆಪ್ನುವನ್) ವ್ಯಾಪಿಸಿಕೊಂಡಿರುವದರಿಂದ ಆತ್ಮನೆಂದು[2] ಹೆಸರು. ಅವನು ಹಾಗೆ[3] ಎಲ್ಲಾ ವಿಶೇಷಣಗಳನ್ನೂ (ತನ್ನೊಳಗೆ) ಸೇರಿಸಿಕೊಂಡವನಾಗಿರುವದರಿಂದ ಕೃತ್ಸ್ನನಾಗಿರುತ್ತಾನೆ. ಕೇವಲ (ಆತ್ಮ)ವಸ್ತುರೂಪದಿಂದಲೇ ಅಲ್ಲವೆ, ಪ್ರಾಣನೇ ಮುಂತಾದ ಆಯಾ ಉಪಾಧಿಗಳಿಂದುಂಟಾದ ವಿಶೇಷಣಗಳನ್ನು ವ್ಯಾಪಿಸಿಕೊಂಡಿರುತ್ತಾನೆ? ಆದ್ದರಿಂದಲೇ ಮುಂದೆ "ಧ್ಯಾನಮಾಡುವಂತೆ (ಇರುತ್ತಾನೆ), ಚಲಿಸುವಂತೆ (ಇರುತ್ತಾನೆ)" (೪-೩-೭) ಎಂದು ಹೇಳಿರುತ್ತದೆ.[4] ಆದ್ದ

---

1. 'ವಿಶೇಷೋಪಸಂಹಾರೀ' ಎಂಬುವದಕ್ಕಿಂತ ಈ ಪಾಠವೇ ಮೇಲು.

2. ಕ.ಭಾ. ೨-೧-೧ (ಭಾ.ಭಾ. ೧೧೦)ರಲ್ಲಿರುವ ಆತ್ಮಶಬ್ದವ್ಯುತ್ಪತ್ತಿಯನ್ನು ನೋಡಿ.

3. ಎಲ್ಲವನ್ನೂ ವ್ಯಾಪಿಸಿಕೊಂಡು ಎಂದರ್ಥ.

4. ಜ್ಞಾನೇಂದ್ರಿಯವ್ಯಾಪಾರಗಳೂ ಕರ್ಮೇಂದ್ರಿಯವ್ಯಾಪಾರಗಳೂ ಉಪಾಧಿಯಿಂದಲೇ ಆತ್ಮನಲ್ಲಿ ತೋರುತ್ತವೆ; ಅವುಗಳಲ್ಲೆಲ್ಲ ಆತ್ಮವಸ್ತುರೂಪದಿಂದಲೇ ಅವನು ಇದ್ದುಕೊಂಡಿರುತ್ತಾನೆ ಎಂಬುದು ಶ್ರುತಿಯ ಅಭಿಪ್ರಾಯ.

ರಿಂದ ಆತ್ಮನೆಂದೇ-ಉಪಾಸನೆಮಾಡಬೇಕು.[1] ಹೀಗೆ ತನ್ನದಾದ ವಸ್ತುರೂಪದಿಂದ ಗ್ರಹಿಸಿದರೆ ಅವನು ಕೃತ್ಸ್ನನಾಗುವನು.

(ಇವನು) ಏತರಿಂದ ಕೃತ್ಸ್ನನು? ಎಂದು ಶಂಕಿಸಿ (ಶ್ರುತಿ) ಹೇಳುತ್ತಿದೆ. ಇಲ್ಲಿ, ಎಂದರೆ ಈ ನಿರುಪಾಧಿಕನಾದ[2] ಆತ್ಮನಲ್ಲಲ್ಲವೆ, ಜಲಸೂರ್ಯಪ್ರತಿಬಿಂಬಗಳು ಸೂರ್ಯನಲ್ಲಿ (ಒಂದಾಗುವಂತೆ) ಪ್ರಾಣನೇ ಮುಂತಾದ ಉಪಾಧಿಕೃತವಾದ ವಿಶೇಷಗಳು– ಪ್ರಾಣನು ಮುಂತಾದ ಕರ್ಮಜನ್ಯವಾದ ಹೆಸರುಗಳುಳ್ಳ ಮೇಲೆ ಹೇಳಿದ ಈ (ವಿಶೇಷಗಳು)– ಒಂದಾಗುತ್ತವೆ, ಅಭಿನ್ನತೆಯನ್ನು ಹೊಂದುತ್ತವೆ?[3]

## ಚರ್ಚೆ: ಆತ್ಮೇತ್ಯೇವೋಪಾಸೀತ ಎಂಬುದು ವಿಧಿಯೆ?

### ಆತ್ಮೇತ್ಯೇವೋಪಾಸೀತ ಎಂಬುದು ಅಪೂರ್ವವಿಧಿಯಲ್ಲ

(ಭಾಷ್ಯ)

೧೩೪. "ಆತ್ಮೇತ್ಯೇವೋಪಾಸೀತ" ಇತಿ ನಾಪೂರ್ವವಿಧಿಃ। ಪಕ್ಷೇ ಪ್ರಾಪ್ತತ್ವಾತ್। "ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ" (೩-೪ ೧೨, ೩-೫-೧) "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ" (೪-೩-೭) ಇತ್ಯೇವಮಾದ್ಯಾತ್ಮಪ್ರತಿಪಾದನಪರಾಭಿಃ ಶ್ರುತಿಭಿರಾತ್ಮವಿಷಯಂ ವಿಜ್ಞಾನಮ್ ಉತ್ಪಾದಿತಮ್। ತತ್ರ ಆತ್ಮಸ್ವರೂಪವಿಜ್ಞಾನೇನೈವ ತದ್ವಿಷಯಾನಾತ್ಮಾಭಿಮಾನಬುದ್ಧಿಃ ಕಾರಕ[4] ಕ್ರಿಯಾಫಲಾಧ್ಯಾರೋಪಣಾತ್ಮಿಕಾ ಅವಿದ್ಯಾ ನಿವರ್ತಿತಾ। ತಸ್ಯಾಂ ನಿವರ್ತಿತಾಯಾಂ ಕಾಮಾದಿದೋಷಾನುಪಪತ್ತೇಃ ಅನಾತ್ಮಚಿಸ್ತಾನುಪಪತ್ತಿಃ। ಪಾರಿಶೇಷ್ಯಾತ್ ಆತ್ಮಚಿನ್ತೈವ। ತಸ್ಮಾತ್ ತದುಪಾಸನಮ್ ಅಸ್ಮಿನ್ ಪಕ್ಷೇ ನ ವಿಧಾತವ್ಯಮ್। ಪ್ರಾಪ್ತತ್ವಾತ್॥

---

1. ಅರಿತುಕೊಳ್ಳಬೇಕು.

2. 'ಆತ್ಮನೆಂದೇ ಉಪಾಸನೆಮಾಡಬೇಕು' ಎಂಬಲ್ಲಿ ಆತ್ಮನೆಂದರೆ ಯಾವ ಉಪಾಧಿಯ ಹಂಗೂ ಇಲ್ಲದ ಆತ್ಮನನ್ನೇ ಗ್ರಹಿಸಬೇಕೆಂದು ಹೇಳಿದೆ ಎಂದರ್ಥ.

3. ಆದ್ದರಿಂದ ಆತ್ಮನನ್ನು ಅರಿತರೆ ಪ್ರಾಣಾದಿಗಳೆಲ್ಲವನ್ನೂ ಅರಿತಂತೆ ಆದ್ದರಿಂದ ಈ ಆತ್ಮನು ಕೃತ್ಸ್ನನು ಎಂದು ಉಪಸಂಹಾರಮಾಡಿರುತ್ತದೆ. ಅಲೆಗಳು ಕಡಲಲ್ಲಿ ಒಂದಾಗುವಂತೆ ವಿಶೇಷಗಳೆಲ್ಲ ನಿರ್ವಿಶೇಷಪರಮಾತ್ಮನಲ್ಲಿ ಎಂದರೆ ಸಾಮಾನ್ಯಾತ್ಮನಲ್ಲಿ ಒಂದಾಗುತ್ತವೆ ಎಂಬ **ಭರ್ತೃಪ್ರಪಂಚಮತವು** ಏಕತಾಶಬ್ದಕ್ಕೆ ವಿರುದ್ಧ- ಎಂದು ಬೃ. **ವಾರ್ತಿಕ.**

4. ಕಾರಕಾದಿ ಎಂಬ ಅಚ್ಚಿನ ಪಾಠದಲ್ಲಿ ಆದಿ ಹೆಚ್ಚು.

(ಭಾಷ್ಯಾರ್ಥ)

'ಆತ್ಮನೆಂದೇ ಉಪಾಸನೆಮಾಡಬೇಕು' ಎಂಬುದು ಅಪೂರ್ವವಿಧಿಯಲ್ಲ.[1] ಏಕೆಂದರೆ (ಒಂದು) ಪಕ್ಷದಲ್ಲಿ (ಇದು) ಪ್ರಾಪ್ತವಾಗಿರುತ್ತದೆ.[2] "ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ" (೩-೪ ೧೨, ೩-೫-೧), "ಆತ್ಮನು ಯಾವನು? ಈ ವಿಜ್ಞಾನಮಯನಾದ (ಪುರುಷನಿದಾನಲ್ಲ ಅವನು)" (೪-೩-೭) ಎಂಬುದೇ ಮುಂತಾದ ಆತ್ಮಜ್ಞಾನವನ್ನು ಪ್ರತಿಪಾದನಮಾಡುವದರಲ್ಲಿ ತಾತ್ಪರ್ಯವುಳ್ಳ ಶ್ರುತಿಗಳಿಂದ ಆತ್ಮವಿಷಯವಾದ ಜ್ಞಾನವುಂಟಾಗಿರುತ್ತದೆ.[3] ಆತ್ಮಸ್ವರೂಪದ ವಿಜ್ಞಾನದಿಂದಲೇ ಅವನ ವಿಷಯದಲ್ಲಿ ಅನಾತ್ಮವೆಂಬ ಬುದ್ಧಿಯು, ಎಂದರೆ ಕಾರಕಗಳನ್ನೂ ಕ್ರಿಯೆಗಳನ್ನೂ ಫಲಗಳನ್ನೂ ಅಧ್ಯಾರೋಪಿಸುವದೆಂಬ ಅವಿದ್ಯೆಯನ್ನು ತೊಲಗಿಸಿದ್ದಾಗಿದೆ. ಆ (ಅವಿದ್ಯೆಯು) ತೊಲಗಿದ ಬಳಿಕ ಕಾಮವೇ ಮುಂತಾದ ದೋಷಗಳು ಉಂಟಾಗುವಂತಿಲ್ಲವಾದ್ದರಿಂದ ಅನಾತ್ಮಚಿಂತನೆಯೂ ಆಗುವಂತಿಲ್ಲ. (ಆದ್ದರಿಂದ) ಉಳಿದಿರುವದೆಂದರೆ ಆತ್ಮಚಿಂತೆ (ಯೊಂದೇ)[4]. ಆದ್ದರಿಂದ ಆ (ಆತ್ಮನ) ಉಪಾಸನೆಯನ್ನು ಈ ಪಕ್ಷದಲ್ಲಿ ವಿಧಿಸಬೇಕಾಗಿಲ್ಲ; ಏಕೆಂದರೆ (ಅದು ತಾನೇ) ಪ್ರಾಪ್ತವಾಗಿರುತ್ತದೆ.[5]

## ಉಪಾಸೀತ ಎಂಬ ವಿಧಿಯು ಅಪೂರ್ವವಿಧಿಯೆಂಬ ಪಕ್ಷ

(ಭಾಷ್ಯ)

೧೩೫. ತಿಷ್ಠತು ತಾವತ್ ಪಾಕ್ಷಿಕೀ ಆತ್ಮೋಪಾಸನಪ್ರಾಪ್ತಿಃ ನಿತ್ಯಾ ವಾ ಇತಿ। ಅಪೂರ್ವವಿಧಿಃ ಸ್ಯಾತ್। ಜ್ಞಾನೋಪಾಸನಯೋರೇಕತ್ವೇ ಸತಿ

1. ಅತ್ಯಂತವಾಗಿ ಅಪ್ರಾಪ್ತವಾಗಿರುವದನ್ನು ವಿಧಿಸುವದು ಅಪೂರ್ವವಿಧಿ; ಉದಾಹರಣೆಗೆ ಜ್ಯೋತಿಷ್ಟೋಮವಿಧಿ, ದರ್ಶಪೂರ್ಣಮಾಸವಿಧಿ– ಇವು ಅಪೂರ್ವವಿಧಿಗಳು.

2. ಒಂದು ಪಕ್ಷದಲ್ಲಿ ತಾನೇ ಪ್ರಾಪ್ತವಾಗಿದ್ದರೆ ಅದನ್ನು ಹೊಸದಾಗಿ ವಿಧಿಸಬೇಕಾಗಿರುವದಿಲ್ಲ; ಅದನ್ನು ಮಾಡಲೇಬೇಕೆಂದು ನಿಯಮಿಸಬೇಕಾಗುವದು. 'ಆತ್ಮನೆಂದೇ ಅರಿಯಬೇಕು' ಎಂಬುದು ಭಾವನಾರೂಪದ ಉಪಾಸನೆಯಲ್ಲವೆಂದೇ ಹೇಳಿದ್ದರೂ 'ಉಪಾಸೀತ' ಎಂಬ ವಿಧಿಯ ಅರ್ಥವನ್ನು ವಿವರಿಸುವದಕ್ಕಾಗಿ ಇದು ವಿಧಿಯೆನ್ನುವವರ ಪಕ್ಷವನ್ನು ಖಂಡಿಸುವದಕ್ಕೆ ಹೊರಟಿರುತ್ತದೆ ಎಂದು ತಿಳಿಯಬೇಕು.

3. ವಾಕ್ಯದಿಂದ ಆತ್ಮಜ್ಞಾನವುಂಟಾಗಿಯೇಬಿಡುವದೆಂಬ ಸಿದ್ಧಾಂತವಿದು. ಇದನ್ನು ಮುಂದೆ ಪೂರ್ವಪಕ್ಷಗಳ ಖಂಡನೆಯ ಪೂರ್ವಕವಾಗಿ ಸ್ಥಾಪಿಸಲಾಗುವದು.

4. ಆತ್ಮಜ್ಞಾನವೆಂದರೆ ಆತ್ಮನೊಬ್ಬನೇ ಸತ್ಯವೆಂಬ ಅರಿವು; ಈ ಅರಿವಿನಲ್ಲಿ ಅನಾತ್ಮವೇ ಇಲ್ಲವಾದ್ದರಿಂದ ಅನಾತ್ಮಚಿಂತೆಯ ಪ್ರಸಂಗವೇ ಇಲ್ಲ.

5. ಆತ್ಮಜ್ಞಾನಿಗೆ ಆತ್ಮಚಿಂತನೆಯಲ್ಲದೆ ಮತ್ತೇನೂ ಆಗುವಂತಿಲ್ಲ. ಆ ಚಿಂತನೆಯನ್ನೂ ಅವನು ವಿಧಿಪ್ರಯುಕ್ತನಾಗಿ ಮಾಡುವದಿಲ್ಲ.

ಅಪ್ರಾಪ್ತತ್ವಾತ್ | " ನ ಸ ವೇದ " ಇತಿ ವಿಜ್ಞಾನಂ ಪ್ರಸ್ತುತ್ಯ " ಆತ್ಮೇತ್ಯೇವೋಪಾಸೀತ " ಇತ್ಯಭಿಧಾನಾತ್ ವೇದೋಪಾಸನಶಬ್ದಯೋಃ ಏಕಾರ್ಥತಾ ಅವಗಮ್ಯತೇ | " ಅನೇನ ಹ್ಯೇತತ್ಸರ್ವಂ ವೇದ," " ಆತ್ಮಾನಮೇವಾವೇತ್ " (೧-೪-೧೦)- ಇತ್ಯಾದಿಶ್ರುತಿಭ್ಯಶ್ಚ ವಿಜ್ಞಾನಮುಪಾಸನಮ್। ತಸ್ಯ ಚ ಅಪ್ರಾಪ್ತತ್ವಾತ್ ವಿಧ್ಯರ್ಹತ್ವಮ್ | ನ ಚ ಸ್ವರೂಪಾನ್ವಾಖ್ಯಾನೇ ಪುರುಷಪ್ರವೃತ್ತಿರುಪಪದ್ಯತೇ। ತಸ್ಮಾತ್ ಅಪೂರ್ವವಿಧಿರೇವಾಯಮ್। ಕರ್ಮವಿಧಿಸಾಮಾನ್ಯಾಚ್ಚ | ಯಥಾ 'ಯಜೇತ', 'ಜುಹುಯಾತ್' ಇತ್ಯಾದಯಃ ಕರ್ಮವಿಧಯಃ, ನ ತೈರಸ್ಯ 'ಆತ್ಮೇತ್ಯೇವೋಪಾಸೀತ', 'ಆತ್ಮಾ ವಾ ಅರೇ ದ್ರಷ್ಟವ್ಯಃ' (೨-೫-೫, ೪-೫-೬) ಇತ್ಯಾದ್ಯಾತ್ಮೋಪಾಸನವಿಧೇರ್ವಿಶೇಷೋಽವಗಮ್ಯತೇ | ಮಾನಸಕ್ರಿಯಾತ್ವಾಚ್ಚ ವಿಜ್ಞಾನಸ್ಯ| ಯಥಾ " ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ ತಾಂ ಮನಸಾ ಧ್ಯಾಯೇದ್ವಷಟ್ಕರಿಷ್ಯನ್ " (ಐ.ಬ್ರಾ. ೩-೮-೧) ಇತ್ಯಾದ್ಯಾ ಮಾನಸೀ ಕ್ರಿಯಾ ವಿಧೀಯತೇ, ತಥಾ 'ಆತ್ಮೇತ್ಯೇವೋಪಾಸೀತ' 'ಮನ್ತವ್ಯೋ ನಿದಿಧ್ಯಾಸಿತವ್ಯಃ' (೨-೪-೫, ೪-೫-೬) ಇತ್ಯಾದ್ಯಾ ಕ್ರಿಯೈವ ವಿಧೀಯತೇ ಜ್ಞಾನಾತ್ಮಿಕಾ | ತಥಾ ಅವೋಚಾಮ ವೇದೋಪಾಸನಶಬ್ದಯೋರೇಕಾರ್ಥತ್ವಮ್ ಇತಿ | ಭಾವನಾಂಶತ್ರಯೋಪಪತ್ತೇಶ್ಚ | ಯಥಾ ಹಿ ಯಜೇತ ಇತ್ಯಸ್ಯಾಂ ಭಾವನಾಯಾಂ ಕಿಮ್ ? ಕೇನ ? ಕಥಮ್ ? ಇತಿ ಭಾವ್ಯಾದ್ಯಾಕಾಙ್ಕ್ಷಾಪನಯಕಾರಣಮ್ ಅಂಶತ್ರಯಮ್ ಅವಗಮ್ಯತೇ, ತಥಾ 'ಉಪಾಸೀತ' ಇತ್ಯಸ್ಯಾಮಪಿ ಭಾವನಾಯಾಂ ವಿಧೀಯಮಾನಾಯಾಂ ಕಿಮುಪಾಸೀತ? ಕೇನೋಪಾಸೀತ ? ಕಥಮುಪಾಸೀತ ? ಇತ್ಯಸ್ಯಾಮ್ ಆಕಾಙ್ಕ್ಷಾಯಾಮ್ ಆತ್ಮಾನಮ್ ಉಪಾಸೀತ, ಮನಸಾ, ತ್ಯಾಗಬ್ರಹ್ಮಚರ್ಯಶಮದಮೋಪರಮತಿತಿಕ್ಷಾದೀತಿಕರ್ತವ್ಯತಾಸಂಯುಕ್ತಃ ಇತ್ಯಾದಿ ಶಾಸ್ತ್ರೇಣೈವ ಸಮರ್ಪ್ಯತೇ[1] ಅಂಶತ್ರಯಮ್ | ಯಥಾ ಚ ಕೃತ್ಸ್ನಸ್ಯ ದರ್ಶಪೂರ್ಣಮಾಸಾದಿಪ್ರಕರಣಸ್ಯ ದರ್ಶಪೂರ್ಣಮಾಸಾದಿವಿಧ್ಯುದ್ದೇಶತ್ವೇನ ಉಪಯೋಗಃ, ಏವಮ್ ಔಪನಿಷದಾತ್ಮೋಪಾಸನಪ್ರಕರಣಸ್ಯ ಆತ್ಮೋಪಾಸನವಿಧ್ಯುದ್ದೇಶತ್ವೇನೈವ ಉಪಯೋಗಃ | " ನೇತಿ ನೇತಿ " (೨-೩-೬), " ಅಸ್ಥೂಲಮ್ " (೩-೮-೮), " ಏಕಮೇವಾದ್ವಿತೀಯಮ್ " (ಛಾಂ. ೬-೨-೧) " ಅಶನಾಯಾದ್ಯತೀತಃ " (೩-೫-೧)[2] ಇತ್ಯೇವಮಾದಿವಾಕ್ಯಾನಾಮ್ ಉಪಾಸ್ಯಾತ್ಮಸ್ವರೂಪವಿಶೇಷಸಮರ್ಪಣೇನ ಉಪಯೋಗಃ। ಫಲಂ ಚ ಮೋಕ್ಷಃ ಅವಿದ್ಯಾನಿವೃತ್ತಿರ್ವಾ ||

---

1. 'ಸಮರ್ಥ್ಯತೇ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಆತ್ಮೋಪಾಸನೆಯ ಪ್ರಾಪ್ತಿಯು ಪಾಕ್ಷಿಕವೋ, ನಿತ್ಯವೋ ?[1]- ಎಂಬ (ಮಾತು) ಸದ್ಯಕ್ಕೆ ಹಾಗಿರಲಿ. ಇದು ಅಪೂರ್ವವಿಧಿಯೇ ಆಗಿರಬೇಕು ; ಏಕೆಂದರೆ ಜ್ಞಾನ, ಉಪಾಸನ- ಇವೆರಡೂ ಒಂದೇ ಆಗಿರುವದರಿಂದ (ಈ ಉಪಾಸನೆಯು) ಅಪ್ರಾಪ್ತವಾಗಿರುತ್ತದೆ.[2] 'ಅವನು ಅರಿಯನು' ಎಂದು ವಿಜ್ಞಾನವನ್ನು ಪ್ರಾರಂಭಿಸಿ 'ಆತ್ಮನೆಂದೇ ಉಪಾಸನೆಮಾಡಬೇಕು' ಎಂದು (ಇಲ್ಲಿ) ಹೇಳಿರುವದರಿಂದ (ಶ್ರುತಿಯಲ್ಲಿ) ವೇದನ (ಅರಿವು), ಉಪಾಸನ- ಎಂಬ ಶಬ್ದಗಳೆರಡಕ್ಕೂ ಒಂದೇ ಅರ್ಥವೆಂದು ನಿಶ್ಚಯವಾಗುತ್ತದೆ.[3] "ಇದರಿಂದಲೇ ಇದೆಲ್ಲವನ್ನೂ ಅರಿತುಕೊಳ್ಳುತ್ತಾನೆ," "ತನ್ನನ್ನೇ ಅರಿತುಕೊಂಡಿತು" (೧-೪-೧೦) ಎಂಬಿವೇ ಮುಂತಾದ ಶ್ರುತಿಗಳಿಂದಲೂ (ತಿಳಿಯಬರುವ) ವಿಜ್ಞಾನವು ಉಪಾಸನೆಯೇ (ಎಂದಾಗುತ್ತದೆ)[4] ಈ ಉಪಾಸನೆಯು ಅಪ್ರಾಪ್ತವಾಗಿರುವದರಿಂದ ವಿಧಿಗೆ ತಕ್ಕದ್ದಾಗಿರುತ್ತದೆ. ಬರಿಯ

---

1. "ಯತ್ಸಾಕ್ಷಾತ್" (೩-೪-೨, ೩-೫-೧) ಮುಂತಾದ ಶ್ರುತಿಗಳಿಂದ ಆದ ಜ್ಞಾನವು ನಿತ್ಯವಾಗಿ ಇದ್ದೇ ಇರುವದಾದ್ದರಿಂದ ಅದನ್ನು ವಿಧಿಸಬೇಕಾದದ್ದಿಲ್ಲ. ಕರ್ಮವಿಧಿವಾಕ್ಯಜ್ಞಾನವು ಶ್ರುತಿಯಿಂದ ತಾನೇ ಆಗುವಂತೆ ಇದು ಆಗುತ್ತದೆ ಎಂಬುದು ಇಲ್ಲಿ ಭಾಷ್ಯಕಾರರ ನಿಜವಾದ ಅಭಿಪ್ರಾಯವು. ಹಸಿವು ಮುಂತಾದ ಕಾರಣಗಳಿಂದ ಅದು ಮರೆಯಾಗಬಹುದೆಂಬುದನ್ನು ಒಪ್ಪಿ ಅದು ಪಕ್ಷಪ್ರಾಪ್ತವೆಂದು ಅದನ್ನೇ ಮಾಡಬೇಕೆಂದು ವಿಧಿಸುವದರಿಂದ ಇದು ನಿಯಮವಿಧಿಯೆಂದೂ ಮುಂದೆ ಹೇಳಲಾಗುವದು.

2. ಜ್ಞಾನವೆಂಬುದು ಶಾಬ್ದಜ್ಞಾನವಾದರೆ ವಿಧಿ ಬೇಕಾಗುವದಿಲ್ಲ ; ಆದರೆ ಶಬ್ದದಿಂದ ಮತ್ತೆ ಮತ್ತೆ ಅಭ್ಯಾಸಮಾಡುತ್ತಿರುವದೆಂಬ ಉಪಾಸನೆಯೇ ಇಲ್ಲಿ ಜ್ಞಾನಶಬ್ದದಿಂದ ಉಕ್ತವಾಗಿರುವದು. ಆದ್ದರಿಂದ ಅದನ್ನು ಹೊಸದಾಗಿ ವಿಧಿಸಬೇಕಾಗಿದೆ ಎಂದು ಪೂರ್ವಪಕ್ಷಿಯ ಭಾವ.

3. ಆತ್ಮಶಬ್ದದಿಂದಾಗುವ ಅರಿವೇ ಜ್ಞಾನವಾಗಿದ್ದರೆ "ಅವನು ಅರಿಯನು" ಎಂದೂ "ಆತ್ಮನೆಂದೇ ಉಪಾಸನೆಮಾಡಬೇಕು" ಎಂದೂ ಹೇಳುತ್ತಿರಲಿಲ್ಲ. ಆದ್ದರಿಂದ ಅವನು ಅರಿಯನು ಎಂದರೆ ಸರಿಯಾಗಿ ಉಪಾಸನೆಮಾಡಿದವನಲ್ಲ ಎಂದರ್ಥ- ಎಂದು ಪೂರ್ವಪಕ್ಷಿಯ ಭಾವ.

4. "ಸ ಯೋಽತ ಏಕೈಕಮುಪಾಸ್ತೇ" (ಯಾವನು ಒಂದೊಂದನ್ನೇ ಉಪಾಸನೆ ಮಾಡುವನೋ ಅವನು) "ಆತ್ಮೇತ್ಯೇವಮುಪಾಸೀತ" (ಆತ್ಮನೆಂದೇ ಉಪಾಸನೆಮಾಡಬೇಕು), ಮುಂತಾದ ವಾಕ್ಯಗಳಲ್ಲಿ ಉಪಾಸನಾಶಬ್ದವೇ ಇದೆ ; "ಅದು ತನ್ನನ್ನೇ ಅರಿತುಕೊಂಡಿತು) ಅದರಿಂದ ಎಲ್ಲವೂ ಆಯಿತು" (೧-೪-೧೦) ಎಂಬಲ್ಲಿ ವಾಕ್ಯಜ್ಞಾನಮಾತ್ರದಿಂದ ಸರ್ವಾತ್ಮಭಾವವುಂಟಾಗಲಾರದಾದ್ದರಿಂದ ಜ್ಞಾನಾವೃತ್ತಿರೂಪವಾದ ಉಪಾಸನೆಯೇ ವಿವಕ್ಷಿತವೆನ್ನಬೇಕು- ಎಂದು ಪೂರ್ವಪಕ್ಷಿಯ ಭಾವ.

ವಸ್ತುರೂಪವನ್ನು ಅನುವಾದಮಾಡಿದರೆ ಮನುಷ್ಯರು (ಕರ್ಮದಲ್ಲಿ) ತೊಡಗುವದೆಂಬುದು ಹೊಂದುವದೂ ಇಲ್ಲ.[1] ಆದ್ದರಿಂದ ಇದು ಅಪೂರ್ವವಿಧಿಯೇ.

**ಕರ್ಮವಿಧಿಯಾಗಿರುವದರಿಂದಲೂ** (ಇದು ಅಪೂರ್ವವಿಧಿಯೆನ್ನಬೇಕು. ಇದರ ವಿವರ) : 'ಯಾಗಮಾಡಬೇಕು', 'ಹೋಮಮಾಡಬೇಕು' ಮುಂತಾದವುಗಳು ಕರ್ಮವಿಧಿಗಳು. "ಆತ್ಮನೆಂದೇ ಉಪಾಸನೆಮಾಡಬೇಕು", "ಎಲೆ ಆತ್ಮನನ್ನೇ ದರ್ಶನಮಾಡಿಕೊಳ್ಳತಕ್ಕದ್ದು" (೨–೪–೫, ೪–೫–೬) ಮುಂತಾದ ಆತ್ಮೋಪಾಸನೆಯ ವಿಧಿಯಲ್ಲಿ ಆ (ಕರ್ಮವಿಧಿಗಿಂತ) ಯಾವ ವಿಶೇಷವೂ ಕಂಡುಬರುವದಿಲ್ಲ.[2] **ವಿಜ್ಞಾನವೆಂಬುದು ಮಾನಸಕ್ರಿಯೆಯಾಗಿರುವದರಿಂದಲೂ (ಇದು ಅಪೂರ್ವವಿಧಿಯೇ).** ಹೇಗೆ ಯಾವ ದೇವತೆಗೆ ಹವಿಸ್ಸನ್ನು ತೆಗೆದುಕೊಳ್ಳುವರೋ ಆ (ದೇವತೆಯನ್ನು) ವಷಟ್ಕಾರಮಾಡುವವನಾಗಿ ಮನಸ್ಸಿನಿಂದ ಚಿಂತಿಸಬೇಕು" (ಐ.ಭಾ. ೩–೮–೧) ಎಂದು ಮುಂತಾಗಿರುವ ಮಾನಸಕ್ರಿಯೆಯನ್ನು ವಿಧಿಸಿರುತ್ತದೆಯೋ ಹಾಗೆ "ಆತ್ಮನೆಂದೇ ಉಪಾಸನೆ ಮಾಡಬೇಕು", "(ಆತ್ಮನನ್ನು) ಮನನಮಾಡತಕ್ಕದ್ದು, ನಿದಿಧ್ಯಾಸನಮಾಡತಕ್ಕದ್ದು". (೨–೪–೫, ೪–೫–೬) ಎಂದು ಮುಂತಾಗಿ ಜ್ಞಾನರೂಪವಾದ ಕ್ರಿಯೆಯನ್ನೇ ವಿಧಿಸಿರುತ್ತದೆ.[3] ಆದ್ದರಿಂದಲೇ ಅರಿವು, ಉಪಾಸನೆ–ಎಂಬ ಶಬ್ದಗಳಿಗೆರಡಕ್ಕೂ ಒಂದೇ ಅರ್ಥವೆಂದು (ಮೇಲೆ ನಾವು) ಹೇಳಿರುತ್ತೇವೆ.[4]

ಭಾವನಾಂಶತ್ರಯವು (ಇಲ್ಲಿಯೂ) ಹೊಂದುವದರಿಂದಲೂ (ಹೀಗೆಂದು ಒಪ್ಪಬೇಕು; ಇದರ ವಿವರ): ಹೇಗೆ 'ಯಾಗಮಾಡಬೇಕು' ಎಂಬ ಭಾವನೆ

---

1. ಪ್ರವರ್ತಕವಾಗದಿದ್ದರೆ ವಾಕ್ಯವು ಬರಿಯ ಅನುವಾದವಾಗಿ ಅಪ್ರಮಾಣವೆನಿಸುವದು ಎಂದು ಭಾವ.

2. ಅದೇ ಲಿಙ್ಲೋಟ್ತವ್ಯಾದಿಗಳೇ ಇಲ್ಲಿಯೂ ಕಂಡುಬರುತ್ತಿವೆ.

3. ಜ್ಞಾನವು ವಸ್ತುಬೋಧಕಮಾತ್ರವಿರುತ್ತದೆಯಾದರೂ ಅಷ್ಟುಮಾತ್ರದಿಂದ ಪ್ರವೃತ್ತಿಯಿಲ್ಲವಾದ್ದರಿಂದ ಉಪಾಸನಾರೂಪವಾದ ಜ್ಞಾನವನ್ನೇ ವಿಧಿಸಿದೆ ಎನ್ನಬೇಕು; ಆದ್ದರಿಂದ ಉಪಾಸನೆಮಾಡಬೇಕು, ನಿದಿಧ್ಯಾಸನಮಾಡಬೇಕು- ಎಂದು ಜ್ಞಾನರೂಪವಾದ ಕ್ರಿಯೆಯನ್ನೇ ವಿಧಿಸಿದೆ ಎನ್ನುವದು ಯುಕ್ತ.

4. ಕ್ರಿಯೆಯಲ್ಲದ ಜ್ಞಾನವು ವಿಧೇಯವಲ್ಲವಾದ್ದರಿಂದ ಕ್ರಿಯಾರೂಪವಾದ ಉಪಾಸನೆಯನ್ನೇ ಇಲ್ಲಿ ಜ್ಞಾನವೆಂದು ಕರೆದಿದೆ ಎಂದು ಒಪ್ಪಬೇಕು.

ಯಲ್ಲಿ[1] ಏನನ್ನು ? ಏತರಿಂದ ? ಹೇಗೆ ? ಎಂದು ಭಾವ್ಯವೇ[2] ಮುಂತಾದ ಆಕಾಂಕ್ಷೆಯನ್ನು ಪರಿಹರಿಸುವದಕ್ಕೆ ಕಾರಣವಾದ ಅಂಶತ್ರಯವು ಕಂಡುಬರುತ್ತದೆಯೋ ಅದರಂತೆ ಉಪಾಸನೆಮಾಡತಕ್ಕದ್ದು ಎಂಬೀ ಭಾವನೆಯನ್ನು ವಿಧಿಸುವಾಗಲೂ ಏನನ್ನು ಉಪಾಸನೆಮಾಡಬೇಕು ? ಏತರಿಂದ ಉಪಾಸನೆಮಾಡಬೇಕು ? ಹೇಗೆ ಉಪಾಸನೆಮಾಡಬೇಕು ?–ಎಂಬೀ ಆಕಾಂಕ್ಷೆಯುಂಟಾಗಲಾಗಿ ಆತ್ಮನನ್ನು ಉಪಾಸನೆಮಾಡಬೇಕು, ಮನಸ್ಸಿನಿಂದ (ಉಪಾಸನೆ)ಮಾಡಬೇಕು, ತ್ಯಾಗಬ್ರಹ್ಮಚರ್ಯಶಮದಮಉಪರತಿತಿತಿಕ್ಷೆಯೇ ಮುಂತಾದ ಇತಿಕರ್ತವ್ಯತೆಯಿಂದ ಕೂಡಿ (ಉಪಾಸನೆಮಾಡಬೇಕು) ಎಂದು[3] ಮುಂತಾಗಿ ಅಂಶತ್ರಯವನ್ನು ಶಾಸ್ತ್ರವೇ (ತಿಳಿಸಿ) ಕೊಡುತ್ತದೆ.

ಮತ್ತು ದರ್ಶಪೂರ್ಣಮಾಸವೇ ಮುಂತಾದದ್ದರ ಪ್ರಕರಣವೆಲ್ಲವೂ ಹೇಗೆ ದರ್ಶಪೂರ್ಣಮಾಸವೇ ಮುಂತಾದದ್ದರ ವಿಧಿಯನ್ನು ಉದ್ದೇಶಿಸಿಯೇ ಉಪಯೋಗವಾಗುತ್ತದೆಯೋ ಹಾಗೆಯೇ ಔಪನಿಷದನಾದ ಆತ್ಮನ ಉಪಾಸನೆಯ ಪ್ರಕರಣವೂ ಆತ್ಮೋಪಾಸನಾವಿಧಿಯನ್ನುದ್ದೇಶಿಸಿಯೇ ಉಪಯೋಗವಾಗಿರುತ್ತದೆ.[4] "ಇದಲ್ಲ, ಇದಲ್ಲ" (೨-೩-೬), "ಸ್ಥೂಲವಲ್ಲ" (೩-೮-೮), "ತನಗೆರಡನೆಯದಿಲ್ಲದ ಒಂದೇ" (ಛಾಂ. ೬-೨-೧), "ಹಸಿವು ಮುಂತಾದವುಗಳನ್ನು ಮೀರಿದ್ದು" (೩-೫-೧ರ ಅರ್ಥ)– ಎಂಬಿವೇ ಮುಂತಾದ ವಾಕ್ಯಗಳಿಗೆ ಉಪಾಸ್ಯ

---

1. ಏನನ್ನಾದರೂ ಸಾಧಿಸಬೇಕೆಂದು ಪುರುಷಪ್ರವೃತ್ತಿಯನ್ನು ವಿಧಿಸಿರುವಲ್ಲಿ ಎಂದರ್ಥ.

2. ಏನನ್ನು ಸಾಧಿಸಬೇಕೆಂದು ಎಂಬುದು ಭಾವ್ಯವನ್ನು ತಿಳಿಸುವದು. ಸ್ವರ್ಗವನ್ನು ಯಾಗದಿಂದ ಪ್ರಯಾಜವೇ ಮುಂತಾದುವುಗಳ ಉಪಕಾರವನ್ನು ಮಾಡಿಕೊಂಡು ಸಾಧಿಸಬೇಕು- ಎಂಬಲ್ಲಿ ಭಾವ್ಯ, ಕರಣ, ಇತಿಕರ್ತವ್ಯತೆ- ಈ ಮೂರೂ ಇವೆ.

3. ಇದನ್ನು ಅರ್ಥಭಾವನೆ ಎನ್ನುವರು. ಶಾಬ್ದಭಾವನೆಯಲ್ಲಿ ಲಿಙಾದಿಪದವೇ ವಿಧಿಯು, ಅದರ ಜ್ಞಾನವೇ ಕರಣವು, ಅರ್ಥವಾದ ಜ್ಞಾನವೇ ಇತಿಕರ್ತವ್ಯತೆ, ಪುರುಷಪ್ರವೃತ್ತಿಯೇ ಭಾವ್ಯ– ಹೀಗೆ ಮೂರು ಅಂಶಗಳಿರುವವು. ಬೃ. ವಾ.

4. ದರ್ಶಪೂರ್ಣಮಾಸಪ್ರಕರಣವೆಲ್ಲ ಹೇಗೆ ದರ್ಶಪೂರ್ಣಮಾಸಕ್ಕೇ ಶೇಷವಾಗಿರುತ್ತದೆಯೋ ಹಾಗೆ ಆತ್ಮಜ್ಞಾನವನ್ನು ತಿಳಿಸುವದೆಲ್ಲವೂ ಜ್ಞಾನಾವೃತ್ತಿರೂಪವಾದ ಉಪಾಸನೆಗೇ ಶೇಷವು. ಉಪಾಸನೆಯೇ ಪುರುಷಾರ್ಥಸಾಧನವೇ ಹೊರತು ಬರಿಯ ಜ್ಞಾನವು ಸಾಧಕವಲ್ಲ ಎಂದರ್ಥ.

ವಾದ ಆತ್ಮಸ್ವರೂಪವಿಶೇಷವನ್ನು (ತಿಳಿಸಿ)ಕೊಡುವದರಿಂದ ಉಪಯೋಗವು.[1] (ಈ ಉಪಾಸನೆಯ ಫಲವು) ಮೋಕ್ಷವು, ಅಥವಾ ಅವಿದ್ಯಾನಿವೃತ್ತಿಯು.[2]

## ಜ್ಞಾನವಿಧಿವಾದದಲ್ಲಿ ಪಕ್ಷಾಂತರ

(ಭಾಷ್ಯ)

೧೩೬. ಅಪರೇ ವರ್ಣಯನ್ತಿ ಉಪಾಸನೇನ ಆತವಿಷಯಂ ವಿಶಿಷ್ಟಂ ವಿಜ್ಞಾನಾನ್ತರಂ ಭಾವಯೇತ್ ತೇನ ಆತ್ಮಾ ಜ್ಞಾಯತೇ। ಅವಿದ್ಯಾನಿವರ್ತಕಂ ಚ ತದೇವ ನಾತ್ಮವಿಷಯಂ ವೇದವಾಕ್ಯಜನಿತಂ ವಿಜ್ಞಾನಮಿತಿ। ಏತಸ್ಮಿನ್ನರ್ಥೇ ವಚನಾನ್ಯಪಿ "ವಿಜ್ಞಾಯ ಪ್ರಜ್ಞಾಂ ಕುರ್ವೀತ" (೪-೪-೨೧), "ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (೨-೪-೫, ೪-೫-೬), "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ. ೮-೭-೧) ಇತ್ಯಾದೀನೀತಿ ||

(ಭಾಷ್ಯಾರ್ಥ)

ಮತ್ತೆ ಕೆಲವರು (ಈ ವಿಧಿಯನ್ನು ಹೀಗೆ) ವರ್ಣಿಸುತ್ತಾರೆ: ಉಪಾಸನೆಯಿಂದ ಆತ್ಮವಿಷಯವಾದ ಅಸಾಧಾರಣವಾದ ಮತ್ತೊಂದು ವಿಜ್ಞಾನವನ್ನು ಉಂಟುಮಾಡಿಕೊಳ್ಳಬೇಕು.[3] ಅದರಿಂದಲೇ ಆತ್ಮನು ಅರಿತುಕೊಳ್ಳಬಹುದು; ಅವಿದ್ಯೆಯನ್ನು ತೊಲಗಿಸುವದೂ ಅದೇ ಹೊರತು ಆತ್ಮವಿಷಯಕವಾದ (ಬರಿಯ)

---

1. ಆತ್ಮಜ್ಞಾನಪ್ರಕರಣವಲ್ಲಿಯೂ ವಿಧಿವಾಕ್ಯಗಳಿವೆ; ಅವಕ್ಕೆ ಶೇಷವಾಗಿ ಉಪಾಸ್ಯಸ್ವರೂಪವನ್ನು ತಿಳಿಸುವದಕ್ಕೆ ಈ ವಸ್ತುವಾಕ್ಯಗಳು ಬಂದಿವೆ ಎಂದು ಭಾವ. ಸೂ. ಭಾ. ೧-೧-೪ನೆಯ ೩ನೆಯ ವರ್ಣಕವಲ್ಲಿಯೂ ಈ ಪೂರ್ವಪಕ್ಷವನ್ನು ತೆಗೆದು ಖಂಡಿಸಿದೆ.

2. ಕಾಲಾಂತರವಲ್ಲಿ ಲೋಕಾಂತರವಲ್ಲಿ ಆಗುವ ಬ್ರಹ್ಮಪ್ರಾಪ್ತಿಯೇ ಮುಕ್ತಿಯು ಅದಕ್ಕಾಗಿ ಉಪಾಸನೆ ಬೇಕು–ಎಂಬುದು ಮೊದಲನೆಯ ಮತ; ಜ್ಞಾನಾವೃತ್ತಿರೂಪವಾದ ಉಪಾಸನೆಯಿಂದಲೇ ಅನಾದಿಕಾಲದಿಂದ ಗಟ್ಟಿಯಾಗಿರುವ ಅವಿದ್ಯಾವಾಸನೆಯನ್ನು ಕಳೆಯುವದಕ್ಕಾದೀತು ಎಂಬುದು ಎರಡನೆಯ ಮತ.

3. ಈ ಮತ್ತೊಂದು ಜ್ಞಾನವೇ **ಸಾಕ್ಷಾತ್ಕಾರವು**. ಸಾಕ್ಷಾತ್ಕಾರವನ್ನು ಕೊಡುವ ಉಪಾಸನೆಗೆ ವಸ್ತುಜ್ಞಾನವು ಅಂಗಮಾತ್ರವಾಗಿದೆ ಎಂಬುದು ಪೂರ್ವಪಕ್ಷಿಯ ಭಾವ.

ವೇದವಾಕ್ಯಜನಿತವಿಜ್ಞಾನವಲ್ಲ.[1] ಈ ವಿಷಯದಲ್ಲಿ "ಅರಿತುಕೊಂಡು ಪ್ರಜ್ಞೆಯನ್ನು ಮಾಡಿಕೊಳ್ಳಬೇಕು" (೪-೪-೨೧),[2] (ಆತ್ಮನನ್ನೇ) ಕಾಣತಕ್ಕದ್ದು, ನಿದಿಧ್ಯಾಸನಮಾಡತಕ್ಕದ್ದು"[3] (೨-೪-೫, ೪-೫-೬), "ಅವನನ್ನೇ ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು" (ಛಾಂ. ೮-೭-೧) ಎಂದು ಮುಂತಾದ ವಚನಗಳೂ[4] ಇವೆ (ಎಂಬುದು ಅವರ ಮತವು).

## ಸಿದ್ಧಾಂತ : ವಾಕ್ಯಜನ್ಯಜ್ಞಾನಕ್ಕಿಂತ ಬೇರೆ ಕರ್ತವ್ಯವಿಲ್ಲ

(ಭಾಷ್ಯ)

೧೩೭. ನ । ಅರ್ಥಾನ್ತರಾಭಾವಾತ್ । ನ ಚ "ಆತ್ಮೇತ್ಯೇವೋಪಾಸೀತ" ಇತ್ಯಪೂರ್ವವಿಧಿಃ । ಕಸ್ಮಾತ್ ? ಆತ್ಮಸ್ವರೂಪಕಥನಾನಾತ್ಮಪ್ರತಿಷೇಧವಾಕ್ಯಜನಿತವಿಜ್ಞಾನವ್ಯತಿರೇಕೇಣ ಅರ್ಥಾನ್ತರಸ್ಯ ಕರ್ತವ್ಯಸ್ಯ ಮಾನಸಸ್ಯ ಬಾಹ್ಯಸ್ಯ ವಾ ಅಭಾವಾತ್ । ತತ್ರ ಹಿ ವಿಧೇಃ ಸಾಫಲ್ಯಂ ಯತ್ರ ವಿಧಿವಾಕ್ಯಶ್ರವಣಮಾತ್ರಜನಿತವಿಜ್ಞಾನವ್ಯತಿರೇಕೇಣ ಪುರುಷಪ್ರವೃತ್ತಿರ್ಗಮ್ಯತೇ । ಯಥಾ "ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ" (?) ಇತ್ಯೇವಮಾದೌ । ನ ಹಿ ದರ್ಶಪೂರ್ಣಮಾಸವಾಕ್ಯಜನಿತವಿಜ್ಞಾನಮೇವ ದರ್ಶಪೂರ್ಣಮಾಸಾನುಷ್ಠಾನಮ್ । ತಚ್ಚ ಅಧಿಕಾರಾದ್ಯಪೇಕ್ಷಾನುಭಾವಿ । ನ ತು "ನೇತಿ ನೇತಿ" (೨-೩-೬) ಇತ್ಯಾದ್ಯಾತ್ಮಪ್ರತಿಪಾದಕವಾಕ್ಯಜನಿತವಿಜ್ಞಾನವ್ಯತಿರೇಕೇಣ ದರ್ಶಪೂರ್ಣಮಾಸಾದಿವತ್ ಪುರುಷವ್ಯಾಪಾರಃ ಸಂಭವತಿ । ಸರ್ವವ್ಯಾಪಾರೋಪಶಮಹೇತುತ್ವಾತ್ ತದ್ವಾಕ್ಯಜನಿತವಿಜ್ಞಾನಸ್ಯ । ನ ಹ್ಯುದಾಸೀನವಿಜ್ಞಾನಂ ಪ್ರವೃತ್ತಿಜನಕಮ್ । ಅಬ್ರಹ್ಮಾನಾತ್ಮವಿಜ್ಞಾನನಿವರ್ತಕತ್ವಾಚ್ಚ "ಏಕಮೇವಾದ್ವಿತೀಯಮ್" (ಛಾಂ. ೬-೨-೧) "ತತ್ತ್ವಮಸಿ" (ಛಾಂ. ೬-೮-೭) ಇತ್ಯೇವಮಾದಿವಾಕ್ಯಾನಾಮ್ । ನ ಚ

---

1. ವಾಕ್ಯಜನಿತಜ್ಞಾನವಾದ ಮೇಲೆ ಸಾಕ್ಷಾತ್ಕಾರರೂಪವಾದ ಅನುಭವವೂ ಆಗತಕ್ಕದ್ದು ಉಳಿದಿರುತ್ತದೆ ಎಂದು ಭಾವ. ಈ ಪಕ್ಷವನ್ನು ಉಪದೇಶಸಾಹಸ್ರಿ, ಸೂತ್ರಭಾಷ್ಯ, ಮಾಂಡೂಕ್ಯಭಾಷ್ಯ- ಮುಂತಾದುವುಗಳಲ್ಲಿಯೂ ಖಂಡಿಸಿದೆ.

2. ಅರಿತುಕೊಳ್ಳುವದು ಶಾಸ್ತ್ರದಿಂದ, ಪ್ರಜ್ಞೆಯೆಂಬ ಸಾಕ್ಷಾತ್ಕಾರವನ್ನು ಮಾಡಿಕೊಳ್ಳತಕ್ಕದ್ದು ಅನುಭವದಿಂದ- ಎಂದು ಪೂರ್ವಪಕ್ಷಿಯ ಭಾವ.

3. ಕೇಳತಕ್ಕದ್ದು ಶಾಸ್ತ್ರದಿಂದ, ಮನನಾದಿಗಳನ್ನು ಮಾಡತಕ್ಕದ್ದು ಸ್ವಪ್ರಯತ್ನದಿಂದ ಎಂದು ಭಾವ.

4. ವಚನವೂ ಇವೆ ಎಂದದ್ದರಿಂದ ಯುಕ್ತಿಯೂ ಇವೆ ಎಂದು ಹೇಳಿದಂತೆ ಆಯಿತು. ವಾಕ್ಯವು ಸಂಸೃಷ್ಟಾರ್ಥವನ್ನು ಮಾತ್ರ ತಿಳಿಸುತ್ತದೆ; ವಾಕ್ಯಜನ್ಯಜ್ಞಾನದ ಅಭ್ಯಾಸದಿಂದುಂಟಾಗುವ ಜ್ಞಾನವು ಅಖಂಡವಾದ ಅದ್ವೈತಾತ್ಮನನ್ನು ತಿಳಿಸಿಕೊಡುತ್ತದೆ ಎಂದು ಭಾವ.

ತನ್ನಿವೃತ್ತೌ ಪ್ರವೃತ್ತಿರುಪಪದ್ಯತೇ। ವಿರೋಧಾತ್। ವಾಕ್ಯಜನಿತವಿಜ್ಞಾನ ಮಾತ್ರಾತ್ ನಾಬ್ರಹ್ಮಾನಾತ್ಮವಿಜ್ಞಾನನಿವೃತ್ತಿಃ ಇತಿ ಚೇತ್। ನ। "ತತ್ತ್ವಮಸಿ" (ಛಾಂ. ೬-೮-೭), "ನೇತಿ ನೇತಿ" (೨-೩-೬), "ಆತ್ಮೈವೇದಮ್" (ಛಾಂ. ೭-೨೫-೨), "ಏಕಮೇವಾದ್ವಿತೀಯಮ್" (ಛಾಂ. ೬-೨-೧), "ಬ್ರಹ್ಮೈವೇದಮಮೃತಮ್" (ಮುಂ. ೨-೨-೧೧), "ನಾನ್ಯದತೋಽಸ್ತಿ ದ್ರಷ್ಟೃ" (೩-೮-೧೧), "ತದೇವ ಬ್ರಹ್ಮ ತ್ವಂ ವಿದ್ಧಿ" (ಕೇ. ೧-೪-೧), ಇತ್ಯಾದಿವಾಕ್ಯಾನಾಂ ತದ್ವಾದಿತ್ವಾತ್। ದ್ರಷ್ಟವ್ಯವಿಧೇರ್ವಿಷಯಸಮರ್ಪಕಾಣಿ ಏತಾನಿ ಇತಿ ಚೇತ್। ನ। ಅರ್ಥಾನ್ತರಾಭಾವಾತ್ ಇತ್ಯುಕ್ತೋತ್ತರತ್ವಾತ್। ಆತ್ಮವಸ್ತುಸ್ವರೂಪಸಮರ್ಪಕೈರೇವ ವಾಕ್ಯೈಃ ತತ್ತ್ವಮಸೀತ್ಯಾದಿಭಿಃ ಶ್ರವಣಕಾಲ ಏವ ತದ್ದರ್ಶನಸ್ಯ ಕೃತತ್ವಾತ್ ದ್ರಷ್ಟವ್ಯವಿಧೇರ್ನಾನುಷ್ಠಾನಾನ್ತರಂ ಕರ್ತವ್ಯಮ್ ಇತ್ಯುಕ್ತೋತ್ತರಮೇತತ್। ಆತ್ಮಸ್ವರೂಪಾನ್ವಾಖ್ಯಾನಮಾತ್ರೇಣ ಆತ್ಮವಿಜ್ಞಾನೇ ವಿಧಿಮನ್ತರೇಣ ನ ಪ್ರವರ್ತತೇ ಇತಿ ಚೇತ್। ನ। ಆತ್ಮವಾದಿವಾಕ್ಯಶ್ರವಣೇನ ಆತ್ಮವಿಜ್ಞಾನಸ್ಯ ಜನಿತತ್ವಾತ್ ಕಿಂ ಭೋಃ ಕೃತಸ್ಯ ಕರಣಮ್? ತಚ್ಛ್ರವಣೇಪಿ ನ ಪ್ರವರ್ತತೇ ಇತಿ ಚೇತ್। ನ। ಅನವಸ್ಥಾಪ್ರಸಙ್ಗಾತ್। ಯಥಾ ಆತ್ಮವಾದಿವಾಕ್ಯಾರ್ಥಶ್ರವಣೇ ವಿಧಿಮನ್ತರೇಣ ನ ಪ್ರವರ್ತತೇ ತಥಾ ವಿಧಿವಾಕ್ಯಾರ್ಥಶ್ರವಣೇಽಪಿ ವಿಧಿಮನ್ತರೇಣ ನ ಪ್ರವರ್ತಿಷ್ಯತ ಇತಿ ವಿಧ್ಯನ್ತರಾಪೇಕ್ಷಾ। ತಥಾ ತದರ್ಥಶ್ರವಣೇಽಪಿ ಇತ್ಯಾನವಸ್ಥಾ ಪ್ರಸಜ್ಯೇತ॥

(ಭಾಷ್ಯಾರ್ಥ)

(ಈ ಎರಡು ಮತಗಳೂ) ಸರಿಯಲ್ಲ. ಏಕೆಂದರೆ ಮತ್ತೊಂದು ಮಾಡತಕ್ಕದ್ದು ಇರುವದಿಲ್ಲ. (ಇದರ ವಿವರ): 'ಆತ್ಮನೆಂದೇ ಉಪಾಸನೆಮಾಡಬೇಕು' ಎಂಬುದು ಅಪೂರ್ವವಿಧಿಯಲ್ಲ. ಏಕೆಂದರೆ **ಆತ್ಮಸ್ವರೂಪವನ್ನು ಹೇಳುವ (ಅಥವಾ) ಅನಾತ್ಮವನ್ನು ಅಲ್ಲಗಳೆಯುವ ವಾಕ್ಯದಿಂದುಂಟಾದ ವಿಜ್ಞಾನಕ್ಕಿಂತ ಬೇರೆಯಾಗಿ ಮಾನಸವಾಗಲಿ ಬಾಹ್ಯವಾಗಲಿ ಮಾಡಬೇಕಾದ ಮತ್ತೊಂದು (ಯಾವದೂ) ಇರುವದಿಲ್ಲ.**[1] ಎಲ್ಲಿ ಬರಿಯ ವಿಧಿವಾಕ್ಯಶ್ರವಣದಿಂದ ಉಂಟಾಗುವ ವಿಜ್ಞಾನಕ್ಕಿಂತ ಬೇರೆಯಾಗಿ ಪುರುಷಪ್ರವೃತ್ತಿ(ಯುಂಟಾಗುವದು) ಕಂಡುಬರುತ್ತದೆಯೋ ಅಲ್ಲಲ್ಲವೆ, ವಿಧಿಗೆ ಸಾರ್ಥಕ್ಯ? ಉದಾಹರಣೆಗೆ "ದರ್ಶಪೂರ್ಣಮಾಸಗಳಿಂದ ಸ್ವರ್ಗಕಾಮನಾದವನು ಯಾಗಮಾಡಬೇಕು" (?) ಎಂಬಿದೇ ಮುಂತಾದ (ವಿಧಿವಾಕ್ಯದಲ್ಲಿ ವಾಕ್ಯಜ್ಞಾನಕ್ಕಿಂತ ಬೇರೆಯಾಗಿ ಪುರುಷಪ್ರವೃತ್ತಿಯಿದೆ) ಹೇಗೆಂದರೆ ದರ್ಶಪೂರ್ಣಮಾಸವಿಧಿವಾಕ್ಯದಿಂದುಂಟಾಗುವ

---

1. **ಆತ್ಮಜ್ಞಾನಸ್ಮೃತಿಸಂತತಿ, ಅಥವಾ ಚಿತ್ತವೃತ್ತಿನಿರೋಧ– ಇವನ್ನು ಮಾಡತಕ್ಕದ್ದು ಉಳಿದಿರುತ್ತದೆ ಎಂಬ ಎರಡು ಪೂರ್ವಪಕ್ಷಗಳನ್ನೂ ಇಷ್ಟರಲ್ಲಿಯೇ ಖಂಡಿಸಲಾಗುವದು.**

ವಿಜ್ಞಾನವೇ ದರ್ಶಪೂರ್ಣಮಾಸದ ಅನುಷ್ಠಾನವಲ್ಲ. ಆ (ಅನುಷ್ಠಾನವು) ಅಧಿಕಾರವೇ ಮುಂತಾದವುಗಳನ್ನು ಅನುಸರಿಸಿ ಆಗತಕ್ಕದ್ದಾಗಿದೆ.[1] ಆದರೆ **'ಇದಲ್ಲ ಇದಲ್ಲ' (೨-೩-೬) ಮುಂತಾದ ಆತ್ಮಪ್ರತಿಪಾದಕವಾಕ್ಯ ದಿಂದುಂಟಾದ ವಿಜ್ಞಾನಕ್ಕಿಂತ ಬೇರೆಯಾಗಿ ದರ್ಶಪೂರ್ಣಮಾಸವೇ ಮುಂತಾದ (ವಾಕ್ಯಗಳ ವಿಷಯದಲ್ಲಿರು)ವಂತೆ ಪುರುಷವ್ಯಾಪಾರವು ಆಗುವ ಹಾಗಿಲ್ಲ. ಏಕೆಂದರೆ ಆ ವಾಕ್ಯದಿಂದುಂಟಾಗುವ ವಿಜ್ಞಾನವು ಎಲ್ಲಾ ಬಗೆಯ ವ್ಯಾಪಾರಗಳ ನಾಶಕ್ಕೆ ಕಾರಣವಾಗಿರುತ್ತದೆ.**[2] ಉದಾಸೀನವಿಜ್ಞಾನವು ಪ್ರವೃತ್ತಿಯನ್ನುಂಟುಮಾಡಲಾರದಷ್ಟೆ? "ತನಗೆರಡನೆಯದಿಲ್ಲದ ಒಂದೇ" (ಛಾಂ. ೬-೨-೧), "ಅದು ನೀನಾಗಿರುವೆ" (ಛಾಂ. ೬-೮-೭) ಎಂಬಿದೇ ಮುಂತಾದ ವಾಕ್ಯಗಳು ಅಬ್ರಹ್ಮ, ಅನಾತ್ಮ ಎಂಬ ವಿಜ್ಞಾನವನ್ನು[3] ತೊಲಗಿಸುವವಾಗಿರುವ ದರಿಂದಲೂ (ಹೀಗೆ), ಆ (ವಿಜ್ಞಾನವು) ತೊಲಗಿದರೆ ಪ್ರವೃತ್ತಿಯೆಂಬುದು ಹೊಂದುವದೂ ಇಲ್ಲ. ಏಕೆಂದರೆ (ಇವೆರಡಕ್ಕೂ) ವಿರೋಧವಿದೆ.[4]

(ಆಕ್ಷೇಪ):— ವಾಕ್ಯದಿಂದುಂಟಾದ ಬರಿಯ ಜ್ಞಾನದಿಂದ ಅಬ್ರಹ್ಮ, ಅನಾತ್ಮ- ಇವುಗಳ ವಿಜ್ಞಾನವು ತೊಲಗುವದೇ ಇಲ್ಲವಲ್ಲ.[5] !

(ಪರಿಹಾರ):— ಹಾಗಲ್ಲ. ಏಕೆಂದರೆ "ಅದೇ ನೀನಾಗಿರುವೆ" (ಛಾಂ. ೬-೮-೭) "ಇದಲ್ಲ, ಇದಲ್ಲ" (೨-೩-೬), "ಇದು ಆತ್ಮನೇ" (ಛಾಂ. ೭-೨೫-೨) "ಒಂದೇ ಎರಡನೆಯದಿಲ್ಲದ್ದು" (ಛಾಂ. ೬-೨-೧), "ಇದು ಅಮೃತವಾದ ಬ್ರಹ್ಮವೇ" (೨-೨-೧೧), "ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ" (೩-೮-೧೧)

---

1. ಕರ್ಮವಾಕ್ಯಜ್ಞಾನವು ಯಾರಿಗಾದರೂ ಆಗುವದು. ಆದರೆ ಆಯಾ ವರ್ಣವೇ ಮುಂತಾದ ಅಧಿಕಾರಕಾರಣವಿದ್ದವರು ಮಾತ್ರ ಆಯಾ ಕರ್ಮವನ್ನು ಮಾಡುವರು.

2. ತಾನು ಕರ್ತೃವಲ್ಲ, ಭೋಕ್ತೃವಲ್ಲ- ಎಂಬ ಅರಿವು ಯಾವ ವ್ಯಾಪಾರದಲ್ಲಿಯೂ ತೊಡಗಿಸುವದಿಲ್ಲ, ಎಲ್ಲಾ ವ್ಯಾಪಾರಗಳನ್ನೂ ಬಿಡಿಸುವದು. ಗೀ. ಭಾ. ೨-೨೧ (ಭಾ.ಭಾ. ೪೯)ನ್ನು ನೋಡಿ.

3. ನಾನು ಬ್ರಹ್ಮವಲ್ಲ, ನಾನು ಆತ್ಮನಲ್ಲ, ದೇಹಾದಿಸ್ವರೂಪನೇ ನಾನು ಎಂಬ ಅರಿವನ್ನು.

4. ಆತ್ಮೈಕತ್ವವಿಜ್ಞಾನಕ್ಕೂ ಪ್ರವೃತ್ತಿಗೂ ವಿರೋಧವಿರುತ್ತದೆ; ಪ್ರವೃತ್ತಿಗೆ ನಾನು ಕರ್ತೃ, ಭೋಕ್ತೃ- ಎಂಬ ಜ್ಞಾನವೇ ಬೇಕು.

5. ವಾಕ್ಯಜ್ಞಾನವಲ್ಲವೆ ಮತ್ತೊಂದು ಜ್ಞಾನವು ಬೇಕೆಂಬ ಅಭಿಪ್ರಾಯದಿಂದ ಪೂರ್ವ ಪಕ್ಷಿ ಹೀಗೆಂದಿರುತ್ತಾನೆ.

" ಅದೇ ಬ್ರಹ್ಮವೆಂದು ನೀನು ತಿಳಿ " (ಕೇ. ೧-೪-೧) ಮುಂತಾದ ವಾಕ್ಯಗಳು ಅದನ್ನು ಹೇಳುತ್ತವೆ.[1]

(ಆಕ್ಷೇಪ):—ಈ ವಾಕ್ಯಗಳು (ಆತ್ಮನನ್ನು) ಕಂಡುಕೊಳ್ಳಬೇಕು- ಎಂಬ ವಿಧಿಗೆ ವಿಷಯವಾದ (ಆತ್ಮನನ್ನು) ತಿಳಿಸಿಕೊಡುತ್ತವೆಯಲ್ಲವೆ ?[2]

(ಪರಿಹಾರ)—ಹಾಗಲ್ಲ. ಏಕೆಂದರೆ (ಮಾಡತಕ್ಕದ್ದು) ಮತ್ತೊಂದಿಲ್ಲ ಎಂದು (ಇದಕ್ಕೆ) ಆಗಲೆ ಉತ್ತರವನ್ನು ಹೇಳಿದ್ದಾಗಿದೆ. " ಅದೇ ನೀನಾಗಿರುವೆ " (ಛಾಂ. ೬-೮-೭) ಮುಂತಾದ ಆತ್ಮವಸ್ತುಸ್ವರೂಪವನ್ನು ತಿಳಿಸುವ ವಾಕ್ಯಗಳಿಂದಲೇ ಶ್ರವಣಕಾಲದಲ್ಲಿಯೇ ಆ (ಆತ್ಮನ) ದರ್ಶನವು ಆಗಿಬಿಟ್ಟಿರುವದರಿಂದ ದ್ರಷ್ಟವ್ಯ ವಿಧಿಯ (ಕಾರಣ)ದಿಂದ ಮತ್ತೇನೂ ಮಾಡತಕ್ಕದ್ದು ಇರುವದಿಲ್ಲ- ಎಂದು ಇದಕ್ಕೆ ಆಗಲೆ ಉತ್ತರವನ್ನು ಹೇಳಿದ್ದಾಗಿದೆ.

(ಆಕ್ಷೇಪ):—ಆತ್ಮಸ್ವರೂಪವನ್ನು ಅನುವಾದಮಾಡಿದ ಮಾತ್ರದಿಂದಲೇ ಆತ್ಮವಿಜ್ಞಾನಕ್ಕಾಗಿ (ಮತ್ತೆ ಯಾವ) ವಿಧಿಯೂ ಇಲ್ಲದೆ (ಯಾರೂ) ಪ್ರವರ್ತಿಸುವ ದಿಲ್ಲವಲ್ಲ ![3]

(ಪರಿಹಾರ):—ಆತ್ಮನನ್ನು ತಿಳಿಸುವ ವಾಕ್ಯವನ್ನು ಶ್ರವಣಮಾಡಿದ್ದರಿಂದ ಆತ್ಮವಿಜ್ಞಾನವು ಉಂಟಾಗಿಬಿಟ್ಟಿರುವದರಿಂದ, ಏತಕ್ಕಯ್ಯ, ಮಾಡಿದ್ದನ್ನೇ (ಮತ್ತೆ) ಮಾಡತಕ್ಕದ್ದು ?[4]

(ಆಕ್ಷೇಪ):—ಆ (ವಾಕ್ಯ)ಶ್ರವಣದಲ್ಲಿಯೂ (ವಿಧಿಯಿಲ್ಲದಿದ್ದರೆ) ತೊಡಗ ಲಾರದಲ್ಲ[5] !

---

1. ನೀನು ಅಬ್ರಹ್ಮವಲ್ಲ, ಅನಾತ್ಮವಲ್ಲ, ಬ್ರಹ್ಮವೇ, ಆತ್ಮನೇ- ಎಂದು ಹೇಳುತ್ತವೆ ಎಂದರ್ಥ, ವಾಕ್ಯಶ್ರವಣಮಾತ್ರದಿಂದ ಜ್ಞಾನವಾಗುವದಿಲ್ಲವೆಂಬುದನ್ನು ಸೂ. ೧-೧-೪, ೪-೧-೨ರಲ್ಲಿಯೂ ತಿರಸ್ಕರಿಸಿದೆ.

2. ಇಲ್ಲಿಂದ ಮುಂದಕ್ಕೆ ಪೂರ್ವಪಕ್ಷಯುಕ್ತಿಗಳನ್ನು ಅನುವಾದಮಾಡಿಕೊಂಡು ಸಿದ್ಧಾಂತವನ್ನು ತಿಳಿಸಲಾಗುವದು.

3. ಈ ಪೂರ್ವಪಕ್ಷವನ್ನು ಹಿಂದೆ ಭಾ.ಭಾ. ೧೩೪ರಲ್ಲಿ ಮಾಡಿತ್ತು.

4. ಜ್ಞಾನವೆಂಬುದು ಪುರುಷಪ್ರಯತ್ನದಿಂದ ಆಗತಕ್ಕದ್ದಲ್ಲ, ಶ್ರವಣಮಾತ್ರದಿಂದ ಆಗುವ ವಸ್ತುಜ್ಞಾನವದು ಎಂದು ಭಾವ.

5. ವಿಧಿಯಿಲ್ಲದೆ ಯಾವ ವೈದಿಕಕ್ರಿಯೆಯೂ ಆಗಲಾರವೆಂದು ಭಾವ.

(ಪರಿಹಾರ):—ಹಾಗಲ್ಲ. ಏಕೆಂದರೆ (ಆಗ) ಅನವಸ್ಥೆಯಾದೀತು. ಹೇಗೆ ಆತ್ಮನನ್ನು ತಿಳಿಸುವ ವಾಕ್ಯದರ್ಥವನ್ನು ಶ್ರವಣಮಾಡುವದಕ್ಕೆ ವಿಧಿಯಿಲ್ಲದೆ ತೊಡಗಲಾರ(ನೆನ್ನುವಿರೋ) ಹಾಗೆಯೇ (ಆ) ವಿಧಿವಾಕ್ಯದರ್ಥವನ್ನು ಶ್ರವಣ ಮಾಡುವದಕ್ಕೂ (ಮತ್ತೊಂದು) ವಿಧಿಯಿಲ್ಲದೆ ತೊಡಗಲಾರನಾದ್ದರಿಂದ (ಅದಕ್ಕಾಗಿ) ಮತ್ತೊಂದು ವಿಧಿಯು ಬೇಕಾಗುವದು, ಹಾಗೆಯೇ ಅದರ ಅರ್ಥವನ್ನು ಶ್ರವಣಮಾಡುವದಕ್ಕೂ ತೊಡಗಲಾರನು. ಹೀಗೆ ಅನವಸ್ಥೆಯುಂಟಾದೀತು.[1]

## ಜ್ಞಾನಸ್ಮೃತಿಸಂತಾನವನ್ನು ವಿಧಿಸಿದೆ ಎಂಬುದೂ ಸರಿಯಲ್ಲ

(ಭಾಷ್ಯ)

೧೩೮. ವಾಕ್ಯಜನಿತಾತ್ಮವಿಜ್ಞಾನಸ್ಮೃತಿಸಂತತೇಃ ಶ್ರವಣವಿಜ್ಞಾನಮಾತ್ರಾತ್ ಅರ್ಥಾನ್ತರತ್ವಮ್ ಇತಿ ಚೇತ್ । ನ । ಅರ್ಥಪ್ರಾಪ್ತತ್ವಾತ್ । ಯದೈವ ಆತ್ಮಪ್ರತಿಪಾದಕವಾಕ್ಯಶ್ರವಣಾತ್ ಆತ್ಮವಿಷಯಂ ವಿಜ್ಞಾನಮ್ ಉತ್ಪದ್ಯತೇ ತದೈವ ತದುತ್ಪದ್ಯಮಾನಂ ತದ್ವಿಷಯಂ ಮಿಥ್ಯಾಜ್ಞಾನಂ ನಿವರ್ತಯದೇವ ಉತ್ಪದ್ಯತೇ । ಆತ್ಮವಿಷಯಮಿಥ್ಯಾಜ್ಞಾನನಿವೃತ್ತೌ ಚ ತತ್ಪ್ರಭವಾಃ ಸ್ಮೃತಯೋ ನ ಭವನ್ತಿ ಸ್ವಾಭಾವಿಕ್ಯೋಽನಾತ್ಮವಸ್ತುಭೇದವಿಷಯಾಃ । ಅನರ್ಥತ್ವಾವಗತೇಶ್ಚ । ಆತ್ಮಾವಗತೌ ಹಿ ಸತ್ಯಾಮ್ ಅನ್ಯದ್ವಸ್ತು ಅನರ್ಥತ್ವೇನ ಅವಗಮ್ಯತೇ । ಅನಿತ್ಯದುಃಖಾಶುದ್ಧ್ಯಾದಿಬಹುದೋಷವತ್ತ್ವಾತ್, ಆತ್ಮವಸ್ತುನಶ್ಚ ತದ್ವಿಲಕ್ಷಣತ್ವಾತ್ । ತಸ್ಮಾತ್ ಅನಾತ್ಮವಿಜ್ಞಾನಸ್ಮೃತೀನಾಮ್ ಆತ್ಮಾವಗತೇರಭಾವಪ್ರಾಪ್ತಿಃ । ಪಾರಿಶೇಷ್ಯಾತ್ ಆತ್ಮೈಕತ್ವವಿಜ್ಞಾನಸ್ಮೃತಿಸನ್ತತೇರರ್ಥತ ಏವ ಭಾವಾತ್ ನ ವಿಧೇಯತ್ವಮ್ । ಶೋಕಮೋಹಭಯಾಯಾಸಾದಿದುಃಖದೋಷನಿವರ್ತಕತ್ವಾಚ್ಚ ತತ್ಸ್ಮೃತೇಃ । ವಿಪರೀತಜ್ಞಾನಪ್ರಭವೋ ಹಿ ಶೋಕಮೋಹಾದಿರ್ದೋಷಃ । ತಥಾ ಚ "ತತ್ರ ಕೋ ಮೋಹಃ"(ಈ. ೭), "ವಿದ್ವಾನ್ ನ ಬಿಭೇತಿ ಕುತಶ್ಚನ" (ತೈ.೨-೯), "ಅಭಯಂ ವೈ ಜನಕ ಪ್ರಾಪ್ತೋಽಸಿ" (೪-೨-೪), "ಭಿದ್ಯತೇ ಹೃದಯಗ್ರನ್ಥಿಃ" (ಮುಂ. ೨-೨-೮) ಇತ್ಯಾದಿಶ್ರುತಯಃ ॥

---

1. "ಸ್ವಾಧ್ಯಾಯೋಽಧ್ಯೇತವ್ಯಃ" ವೇದವನ್ನು ಅಧ್ಯಯನಮಾಡಬೇಕು ಎಂಬ ವಿಧಿಯಿಂದ ಕರ್ಮವಿಧಿವಾಕ್ಯವನ್ನು ಶ್ರವಣಮಾಡುವಂತೆ ಆತ್ಮವಾಕ್ಯವನ್ನೂ ಶ್ರವಣಮಾಡಬಹುದಾಗಿದೆ. ಇದಕ್ಕೂ ಬೇರೆ ವಿಧಿ ಬೇಕೆಂದರೆ ಇಲ್ಲಿ ಹೇಳಿರುವ ಅನವಸ್ಥೆ ಬರುವದು ಎಂದು ಭಾವ. ವೇದಾಂತವಾಕ್ಯಕ್ಕೆ ಬೇರೊಂದು ವಿಧಿ ಬೇಕೆಂಬ ವ್ಯಾಖ್ಯಾನಪ್ರಸ್ಥಾನದ ಮತವು ಈ ಭಾಷ್ಯಕ್ಕೆ ವಿರುದ್ಧ.

(ಭಾಷ್ಯಾರ್ಥ)

(ಆಕ್ಷೇಪ):—ವಾಕ್ಯದಿಂದುಂಟಾದ ಜ್ಞಾನದ ಸ್ಮೃತಿಯ ಸಂತಾನವು ಬರಿಯ ಶ್ರವಣದಿಂದಾದ ವಿಜ್ಞಾನಕ್ಕಿಂತ ಮತ್ತೊಂದು (ಮಾಡತಕ್ಕ) ಅರ್ಥವು (ಎನ್ನಬಹುದಲ್ಲ) ![1]

(ಪರಿಹಾರ):—ಹಾಗಲ್ಲ. ಏಕೆಂದರೆ ಅರ್ಥಪ್ರಾಪ್ತವಾಗಿದೆ.[2] (ಇದರ ವಿವರ): **ಯಾವಾಗ ಆತ್ಮನನ್ನು ತಿಳಿಸುವ ವಾಕ್ಯಶ್ರವಣದಿಂದ ಆತ್ಮವಿಷಯದಲ್ಲಿ ವಿಜ್ಞಾನವುಂಟಾಗುವದೋ ಆಗಲೇ ಅದು ಹುಟ್ಟುವಾಗಲೇ ಆ (ಆತ್ಮನ) ವಿಷಯವಾದ ಮಿಥ್ಯಾಜ್ಞಾನವನ್ನು ತೊಲಗಿಸಿಕೊಂಡೇ ಹುಟ್ಟುತ್ತದೆ. ಆತ್ಮವಿಷಯಕವಾದ ಮಿಥ್ಯಾಜ್ಞಾನವು ತೊಲಗಿದರೆ ಅದರಿಂದಾಗುವ ಸ್ಮೃತಿಗಳು, ಅಂದರೆ ಬೇರೆಬೇರೆಯ ಅನಾತ್ಮವಸ್ತುಗಳ ವಿಷಯದಲ್ಲಿ (ಅವಿದ್ಯಾ)ಸ್ವಭಾವದಿಂದ ಆಗುವ ಸ್ಮೃತಿಗಳು, ಉಂಟಾಗುವದೇ ಇಲ್ಲ.** ಅನರ್ಥವೆಂದು ತಿಳಿಯಬರುವದರಿಂದಲೂ (ಅವು ಉಂಟಾಗುವದಿಲ್ಲ). ಹೇಗೆಂದರೆ ಆತ್ಮನ ಅರಿವು ಉಂಟಾದರೆ ಮಿಕ್ಕ ವಸ್ತುವೆಲ್ಲ ಅನಿತ್ಯತ್ವ, ದುಃಖ, ಅಶುದ್ಧಿ-ಮುಂತಾದ ಬಹುದೋಷಗಳಿಂದ ಒಡಗೂಡಿರುವದರಿಂದಲೂ ಆತ್ಮವಸ್ತುವು ಅದಕ್ಕಿಂತ ವಿಲಕ್ಷಣವಾಗಿರುವದರಿಂದಲೂ ಅನರ್ಥವೆಂದು ನಿಶ್ಚಯವಾಗುತ್ತದೆ. ಆದ್ದರಿಂದ ಅನಾತ್ಮವಿಜ್ಞಾನದ ಸ್ಮೃತಿಗಳು ಆತ್ಮನಿಶ್ಚಯದಿಂದ ಇಲ್ಲವಾಗುವವು. ಪರಿಶೇಷನ್ಯಾಯದಿಂದ **ಆತ್ಮೈಕತ್ವವಿಜ್ಞಾನಸ್ಮೃತಿಯ ಸಂತಾನವು ತಾನೇ ಉಂಟಾಗುವದರಿಂದ ಅದನ್ನು ವಿಧಿಸಬೇಕಾದದ್ದಿರುವದಿಲ್ಲ.** ಈ ಆತ್ಮ(ವಿಜ್ಞಾನ)ಸ್ಮೃತಿಯು ಶೋಕ, ಮೋಹ, ಭಯ, ಆಯಾಸ- ಮುಂತಾದ ದುಃಖಗಳನ್ನು ತೊಲಗಿಸುವದರಿಂದಲೂ (ಅದನ್ನು ವಿಧಿಸಬೇಕಾದದ್ದಿಲ್ಲ). ವಿಪರೀತಜ್ಞಾನದಿಂದಾಗುವದಲ್ಲವೆ, (ಆ) ಶೋಕಮೋಹಾದಿದೋಷವು ? ಆದ್ದರಿಂದಲೇ

---

1. ವಾಕ್ಯಜನ್ಯಜ್ಞಾನದಿಂದ ಅಜ್ಞಾನವು ಬಾಧಿತವಾದರೂ ಅದರ ಸ್ಮೃತಿಯು ಪ್ರಬಲವಾಗಿರುತ್ತದೆ; ಆದ್ದರಿಂದ ಜ್ಞಾನದ ಸ್ಮೃತಿಯನ್ನು ಅಭ್ಯಾಸಮಾಡುತ್ತಿರಬೇಕು—ಎಂದು ಹೇಳುತ್ತಿದ್ದ ಪ್ರಸಂಖ್ಯಾನವಾದಿಗಳೇ ಮುಂತಾದವರ ಮತವಿದು. ವಾಕ್ಯಜನ್ಯಜ್ಞಾನವಾದಮೇಲೂ ಅವಿದ್ಯಾವಾಸನೆಯು ಇದ್ದೇ ಇರುವದೆಂಬ ಅಭಿಪ್ರಾಯವು ಈಗಲೂ **ಭಾಮತೀ**ವ್ಯಾಖ್ಯಾನಪ್ರಸ್ಥಾನದಲ್ಲಿ ಅಂಗೀಕೃತವಾಗಿದೆ.

2. ಇದೇ ಜ್ಞಾನನಿಷ್ಠೆಯು. ಗೀ. ಭಾ. ೧೮-೫೫ನ್ನು ನೋಡಿ. ಜೀವನ್ಮುಕ್ತಿಯ ಆನಂದಕ್ಕಾಗಿ ಜ್ಞಾನಿಯೂ ಮಾಡತಕ್ಕದ್ದು ಬೇರೆ ಉಂಟು ಎಂಬ ಈಚಿನ ಕೆಲವರು ವೇದಾಂತಿಗಳ ಪಕ್ಷವು ಈ ಭಾಷ್ಯಕ್ಕೆ ವಿರುದ್ಧ.

"ಅಲ್ಲಿ ಯಾವ ಮೋಹವು ?" (ಈ. ೭), "ಅರಿತವನು ಏತಕ್ಕೂ ಅಂಜುವದಿಲ್ಲ" (ತೈ. ೨-೯), "ಜನಕನೆ, ಅಭಯುವನ್ನು ಹೊಂದಿರುವೆ" (೪-೨-೪), "ಹೃದಯ ಗ್ರಂಥಿಯು ನಾಶವಾಗುತ್ತದೆ" (ಮುಂ. ೨-೨-೮)-ಮುಂತಾದ ಶ್ರುತಿಗಳಿಂದ (ಜ್ಞಾನಕ್ಕೆ ಶೋಕಾದಿನಿವರ್ತಕತ್ವವು ಸಿದ್ಧವಾಗಿರುತ್ತದೆ).

## ಜ್ಞಾನಿಗೆ ಚಿತ್ತವೃತ್ತಿನಿರೋಧವು ವಿಹಿತವಾಗಿಲ್ಲ

(ಭಾಷ್ಯ)

೧೩೯. ನಿರೋಧಸ್ತರ್ಹಿ ಅರ್ಥಾನ್ತರಮ್ ಇತಿ ಚೇತ್ | ಅಥಾಪಿ ಸ್ಯಾತ್ ಚಿತ್ತವೃತ್ತಿನಿರೋಧಸ್ಯ ವೇದವಾಕ್ಯಜನಿತಾತ್ಮವಿಜ್ಞಾನಾತ್ ಅರ್ಥಾನ್ತರತ್ವಾತ್, ತನ್ತ್ರಾನ್ತರೇಷು ಚ ಕರ್ತವ್ಯತಯಾ ಅವಗತತ್ವಾತ್ ವಿಧೇಯತ್ವಮ್ ಇತಿ ಚೇತ್ | ನ| ಮೋಕ್ಷಸಾಧನತ್ವೇನ ಅನವಗಮಾತ್ | ನ ಹಿ ವೇದಾನ್ತೇಷು ಬ್ರಹ್ಮಾತ್ಮವಿಜ್ಞಾನಾತ್ ಅನ್ಯತ್ ಪರಮಪುರುಷಾರ್ಥಸಾಧನತ್ವೇನ ಅವಗಮ್ಯತೇ| "ಆತ್ಮಾನಮೇವಾವೇತ್ ತಸ್ಮಾತ್ ತತ್ಸರ್ವಮಭವತ್" (೧-೪-೧೦) "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧), "ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯), "ಆಚಾರ್ಯವಾನ್ ಪುರುಷೋ ವೇದ .... ತಸ್ಯ ತಾವದೇವ ಚಿರಮ್" (ಛಾಂ. ೬-೧೪-೨), "ಅಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ" (೪-೪ ೨೫) ಇತ್ಯೇವಮಾದಿಶ್ರುತಿಶತೇಭ್ಯಃ| ಅನನ್ಯಸಾಧನತ್ವಾಚ್ಚ ನಿರೋಧಸ್ಯ | ನ ಹಿ ಆತ್ಮವಿಜ್ಞಾನತತ್ಸ್ಮೃತಿಸಂತಾನವ್ಯತಿರೇಕೇಣ ಚಿತ್ತವೃತ್ತಿನಿರೋಧಸ್ಯ ಸಾಧನಮಸ್ತಿ | ಅಭ್ಯುಪಗಮ್ಯೇದಮುಕ್ತಮ್ | ನ ತು ಬ್ರಹ್ಮವಿಜ್ಞಾನವ್ಯತಿರೇಕೇಣ ಅನ್ಯನ್ಮೋಕ್ಷಸಾಧನಮ್ ಅವಗಮ್ಯತೇ ||

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ನಿರೋಧವು (ವಾಕ್ಯಜ್ಞಾನವಾದ ಬಳಿಕ) ಮಾಡತಕ್ಕದ್ದು ಮತ್ತೊಂದು (ಸಾಧನವು) ಎಂದರೆ? (ಇದರ ವಿವರ): ಒಂದುವೇಳೆ (ಪೂರ್ವಪಕ್ಷಿಯ ಅಭಿಪ್ರಾಯವು) ಹೀಗೂ ಇರಬಹುದು. ಚಿತ್ತವೃತ್ತಿನಿರೋಧವು ವೇದವಾಕ್ಯದಿಂದುಂಟಾದ ವಿಜ್ಞಾನಕ್ಕಿಂತ ಬೇರೊಂದು (ಸಾಧನ)ವಾಗಿರುವದರಿಂದಲೂ ಬೇರೆಯ ತಂತ್ರಗಳಲ್ಲಿ[1] (ಮೋಕ್ಷಕ್ಕಾಗಿ) ಮಾಡತಕ್ಕದ್ದೆಂದು ನಿಶ್ಚಿತವಾಗಿರುವದರಿಂದಲೂ (ಇಲ್ಲಿ ಅದನ್ನು) ವಿಧಿಸಿದೆ.

(ಸಿದ್ಧಾಂತ):—ಹಾಗಲ್ಲ. ಏಕೆಂದರೆ (ಅದು) ಮೋಕ್ಷಸಾಧನವೆಂದು ನಿಶ್ಚಿತವಾಗಿರುವದಿಲ್ಲ. (ಇದರ ವಿವರ): ವೇದಾಂತಗಳಲ್ಲಿ[2] ಬ್ರಹ್ಮಾತ್ಮವಿಜ್ಞಾನಕ್ಕಿಂತ ಬೇರೆಯಾದದ್ದು ಪರಮಪುರುಷಾರ್ಥಕ್ಕೆ ಸಾಧನವೆಂದು ನಿಶ್ಚಿತವಾಗಿರು

---

1. ಯೋಗಶಾಸ್ತ್ರಗಳಲ್ಲಿ. 2. ಉಪನಿಷತ್ತುಗಳಲ್ಲಿ.

ವದೇ ಇಲ್ಲ. "ತನ್ನನ್ನೇ ಅರಿತುಕೊಂಡಿತು; ಅದರಿಂದ ಅದು ಎಲ್ಲವೂ ಆಯಿತು" (೧ ೪-೧೦) "ಬ್ರಹ್ಮವನ್ನು ಅರಿತುಕೊಂಡವನು ಪರವು(ಪುರುಷಾರ್ಥವನ್ನು) ಪಡೆದುಕೊಳ್ಳುತ್ತಾನೆ" (ತೈ. ೨-೧), "ಯಾವನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುತ್ತಾನೋ-(ಅವನು)ಬ್ರಹ್ಮವೇ ಆಗುತ್ತಾನೆ"(ಮುಂ. ೩-೨-೯) "ಆಚಾರ್ಯವಂತನಾದ ಪುರುಷನು ಅರಿತುಕೊಳ್ಳುತ್ತಾನೆ....ಅವನಿಗೆ ಅಲ್ಲಿಯವರೆಗೇ ತಡ...." (ಛಾಂ. ೬-೧೪-೨), "ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಅಭಯವಾಗಿರುವ ಬ್ರಹ್ಮವೇ ಆಗುತ್ತಾನೆ" (೪-೪-೨೫) ಎಂಬಿವೇ ಮುಂತಾದ ನೂರಾರು ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ).[1]

ನಿರೋಧಕ್ಕೆ ಮತ್ತೊಂದು ಸಾಧನವಿಲ್ಲದ್ದರಿಂದಲೂ (ಅದನ್ನು ಇಲ್ಲಿ ವಿಧಿಸತಕ್ಕದ್ದಿಲ್ಲವೆನ್ನಬೇಕು. (ಇದರ ವಿವರ): **ಆತ್ಮವಿಜ್ಞಾನ ಅದರ ಸ್ಮೃತಿಗಳ ಸಂತಾನ-ಇವುಗಳನ್ನು ಬಿಟ್ಟರೆ ಚಿತ್ತವೃತ್ತಿನಿರೋಧಕ್ಕೆ (ಬೇರೊಂದು) ಸಾಧನವೇ ಇರುವದಿಲ್ಲ.[2] (ನಿರೋಧವು ಮೋಕ್ಷಸಾಧನ)ವೆಂದೊಪ್ಪಿ ಈ ಮಾತನ್ನು ಆಡಿದೆವು; ಆದರೆ ಬ್ರಹ್ಮವಿಜ್ಞಾನಕ್ಕಿಂತ ಬೇರೆಯಾಗಿ ಮೋಕ್ಷಸಾಧನವು ಇರುವದೇ ಇಲ್ಲ.[3]**

## ಕರ್ಮವಿಧಿಯಂತೆ ಜ್ಞಾನವಾಕ್ಯದಲ್ಲಿ ಆಕಾಂಕ್ಷೆಯಿರುವದಿಲ್ಲ

(ಭಾಷ್ಯ)

೧೪೦. ಆಕಾಙ್ಕ್ಷಾಭಾವಾಚ್ಚ ಭಾವನಾಭಾವಃ। ಯದುಕ್ತಮ್ ಯಜೇತ ಇತ್ಯಾದೌ ಕಿಮ್? ಕೇನ? ಕಥಮ್ ? ಇತಿ ಭಾವನಾಕಾಙ್ಕ್ಷಾಯಾಂ ಫಲಸಾಧನೇತಿಕರ್ತವ್ಯತಾಭಿಃ ಆಕಾಙ್ಕ್ಷಾಪನಯನಂ ಯಥಾ, ತದ್ವತ್ ಇಹಾಪಿ ಆತ್ಮವಿಜ್ಞಾನ ವಿಧಾವಪಿ ಉಪಪದ್ಯತೇ ಇತಿ। ತದಸತ್। "ಏಕಮೇವಾದ್ವಿತೀಯಮ್" (ಛಾಂ. ೬-೨-೧), "ತತ್ತ್ವಮಸಿ" (ಛಾಂ. ೬-೮-೭),"ನೇತಿ ನೇತಿ" (೨-೩-೬), "ಅನನ್ತರಮಬಾಹ್ಯಮ್" (೨-೮-೮), "ಅಯಮಾತ್ಮಾ ಬ್ರಹ್ಮ" (೨-೫-೧೯) ಇತ್ಯಾದಿವಾಕ್ಯಾರ್ಥವಿಜ್ಞಾನಸಮಕಾಲಮೇವ ಸರ್ವಾಕಾಙ್ಕ್ಷಾವಿನಿವೃತ್ತೇಃ। ನ ಚ ವಾಕ್ಯಾರ್ಥವಿಜ್ಞಾನೇ ವಿಧಿಪ್ರಯುಕ್ತಃ ಪ್ರವರ್ತತೇ। ವಿಧ್ಯನ್ತರಪ್ರಯುಕ್ತೌ ಚ ಅನವಸ್ಥಾ ದೋಷಮವೋಚಾಮ। ನ ಚ 'ಏಕಮೇವಾದ್ವಿತೀಯಂ ಬ್ರಹ್ಮ' ಇತ್ಯಾದಿ ವಾಕ್ಯೇಷು ವಿಧಿರವಗಮ್ಯತೇ। ಆತ್ಮಸ್ವರೂಪಾನ್ವಾಖ್ಯಾನೇನೈವ ಅವಸಿತತ್ವಾತ್ ||

(ಭಾಷ್ಯಾರ್ಥ)

ಆಕಾಂಕ್ಷೆಯಿಲ್ಲದ್ದರಿಂದ ಭಾವನೆಯೂ ಇರುವದಿಲ್ಲ. (ಇದರ ವಿವರ): 'ಯಾಗಮಾಡಬೇಕು' ಮುಂತಾದ ವಾಕ್ಯದಲ್ಲಿ ಏನನ್ನು? ಏತರಿಂದ? ಹೇಗೆ?-

1. ಈ ಶ್ರುತಿಗಳೆಲ್ಲ ಬ್ರಹ್ಮಾತ್ಮಜ್ಞಾನವೇ ಮೋಕ್ಷಸಾಧನವೆಂದು ಹೇಳುತ್ತವೆ.
2. ಆದ್ದರಿಂದ ಆತ್ಮಜ್ಞಾನವುಂಟಾದರೆ ಚಿತ್ತವೃತ್ತಿನಿರೋಧವು ತಾನೇ ಆಗುತ್ತದೆ.
3. ಹಾಗೆಂದೇ ಶ್ರುತಿಗಳು ಹೇಳುತ್ತವೆ.

ಎಂಬ ಭಾವನಾಕಾಂಕ್ಷೆಯಾಗಲಾಗಿ ಫಲ, ಸಾಧನ, ಇತಿಕರ್ತವ್ಯತೆ- ಎಂಬಿವುಗಳಿಂದ ಹೇಗೆ ಆಕಾಂಕ್ಷೆಯು ತೊಲಗುವದೋ ಹಾಗೆ ಇಲ್ಲಿರುವ ಆತ್ಮವಿಜ್ಞಾನವಿಧಿಯಲ್ಲಿಯೂ (ಆಗುವದೆಂಬುದು) ಯುಕ್ತವಾಗಿದೆ ಎಂದು (ಪೂರ್ವಪಕ್ಷದಲ್ಲಿ ಭಾ. ಭಾ. ೧೩೪ರಲ್ಲಿ) ಹೇಳಿತ್ತಷ್ಟೆ. ಅದು ಸರಿಯಲ್ಲ. ಏಕೆಂದರೆ 'ಎರಡನೆಯದಿಲ್ಲದ ಒಂದೇ' (ಛಾಂ. ೬-೨-೧), "ಅದೇ ನೀನಾಗಿರುವೆ" (ಛಾಂ. ೬-೮-೭), "ಇದಲ್ಲ, ಇದಲ್ಲ" (೨-೩-೬), "ಒಳಗಿಲ್ಲದ್ದು, ಹೊರಗಿಲ್ಲದ್ದು" (೨-೮-೮), "ಈ ಆತ್ಮನು ಬ್ರಹ್ಮವು" (೨-೫-೧೯)-ಮುಂತಾದ **ವಾಕ್ಯಗಳ ಅರ್ಥವನ್ನು ಅರಿತುಕೊಂಡ ಸಮಕಾಲದಲ್ಲಿಯೇ ಎಲ್ಲಾ ಆಕಾಂಕ್ಷೆಗಳೂ ತೊಲಗುವವು.**[1] ವಾಕ್ಯಾರ್ಥವನ್ನು ಅರಿತುಕೊಳ್ಳುವದಕ್ಕೆ ವಿಧಿಪ್ರೇರಿತನಾಗಿ ಪ್ರವರ್ತಿಸುವದೂ ಇಲ್ಲ; ಮತ್ತೊಂದು ವಿಧಿಯಿಂದ ಪ್ರೇರಿತನಾಗುತ್ತಾನೆ ಎಂದರೆ ಅನವಸ್ಥೆಯಾಗುತ್ತದೆ ಎಂದು (ಆಗಲೆ ಭಾ.ಭಾ. ೧೩೬ರಲ್ಲಿ) ಹೇಳಿಯೂ ಇರುತ್ತೇವೆ. "ಬ್ರಹ್ಮವು ತನಗೆರಡನೆಯದಿಲ್ಲದ ಒಂದು" (ಛಾಂ. ೬-೨-೧) ಮುಂತಾದ ವಾಕ್ಯಗಳಲ್ಲಿ ವಿಧಿಯಿದೆ ಎಂದು ನಿಶ್ಚಿತವಾಗಿಯೂ ಇರುವದಿಲ್ಲ; ಏಕೆಂದರೆ ಆತ್ಮಸ್ವರೂಪವನ್ನು ತಿಳಿಸುವದರಲ್ಲಿಯೇ (ಅವು) ಮುಗಿದಿವೆ.

## ಆತ್ಮಸ್ವರೂಪವನ್ನು ತಿಳಿಸುವ ಶ್ರುತಿಗೆ ಅಭಿಪ್ರಾಯ

(ಭಾಷ್ಯ)

೧೪೧. ವಸ್ತುಸ್ವರೂಪಾನ್ವಾಖ್ಯಾನಮಾತ್ರತ್ವಾತ್ ಅಪ್ರಾಮಾಣ್ಯಮ್ ಇತಿ ಚೇತ್। ಅಥಾಪಿ ಸ್ಯಾತ್ ಯಥಾ 'ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಮ್' (ತೈ. ಸಂ. ೧-೫-೧-೧) ಇತ್ಯೇವಮಾದೌ ವಸ್ತುಸ್ವರೂಪಾನ್ವಾಖ್ಯಾನಮಾತ್ರತ್ವಾತ್ ಅಪ್ರಾಮಾಣ್ಯಮ್, ಏವಮ್ ಆತ್ಮಾರ್ಥವಾಕ್ಯಾನಾಮಪಿ ಇತಿ ಚೇತ್। ನ। ವಿಶೇಷಾತ್। ನ ವಾಕ್ಯಸ್ಯ ವಸ್ತ್ವನ್ವಾಖ್ಯಾನಂ ಕ್ರಿಯಾನ್ವಾಖ್ಯಾನಂ ವಾ ಪ್ರಾಮಾಣ್ಯಾಪ್ರಾಮಾಣ್ಯಕಾರಣಮ್, ಕಿಂ ತರ್ಹಿ ನಿಶ್ಚಿತಫಲವದ್ವಿಜ್ಞಾನೋತ್ಪಾದಕತ್ವಮ್। ತದ್ಯತ್ರಾಸ್ತಿ ತತ್ ಪ್ರಮಾಣಂ ವಾಕ್ಯಮ್, ಯತ್ರ ನಾಸ್ತಿ ತದಪ್ರಮಾಣಮ್। ಕಿಂಚ ಭೋಃ ಪೃಚ್ಛಾಮಸ್ತ್ವಾಮ್ ಆತ್ಮಸ್ವರೂಪಾನ್ವಾಖ್ಯಾನಪರೇಷು ವಾಕ್ಯೇಷು ಫಲವನ್ನಿಶ್ಚಿತಂ ಚ ವಿಜ್ಞಾನಮ್ ಉತ್ಪದ್ಯತೇ ನ ವಾ? ಉತ್ಪದ್ಯತೇ ಚೇತ್ ಕಥಮಪ್ರಾಮಾಣ್ಯಮಿತಿ? ಕಿಂ ವಾ ನ ಪಶ್ಯಸಿ ಅವಿದ್ಯಾಶೋಕಮೋಹಭಯಾದಿಸಂಸಾರಬೀಜದೋಷನಿವೃತ್ತಿಂ ವಿಜ್ಞಾನಫಲಮ್? ನ ಶೃಣೋಷಿ ವಾ ಕಿಂ "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭),

---

1. ಸೂ. ಭಾ. ೨-೧-೧೪ (ಭಾ. ಭಾ. ೪೩೭)ರಲ್ಲಿ ಹೇಳಿರುವ ಅಂತ್ಯಪ್ರಮಾಣವಿಚಾರವನ್ನು ನೋಡಿರಿ.

"ಮನ್ತ್ರವಿದೇವಾಸ್ಮಿ ನಾತ್ಮವಿತ್ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತು" (ಛಾಂ. ೭-೧-೩) ಇತ್ಯೇವಮಾದ್ಯುಪನಿಷದ್ವಾಕ್ಯಶತಾನಿ? ಏವಂ ವಿದ್ಯತೇ ಕಿಂ 'ಸೋಽರೋದೀತ್' ಇತ್ಯಾದಿಷು ನಿಶ್ಚಿತಂ ಫಲವಚ್ಚ ವಿಜ್ಞಾನಮ್? ನ ಚೇದ್ವಿದ್ಯತೇ ಅಸ್ತ್ವಪ್ರಾಮಾಣ್ಯಮ್। ತದಪ್ರಾಮಾಣ್ಯೇ ಫಲವನ್ನಿಶ್ಚಿತವಿಜ್ಞಾನೋತ್ಪಾದಕಸ್ಯ ಕಿಮಿತ್ಯಪ್ರಾಮಾಣ್ಯಂ ಸ್ಯಾತ್। ತದಪ್ರಾಮಾಣ್ಯೇ ಚ ದರ್ಶಪೂರ್ಣಮಾಸಾದಿವಾಕ್ಯೇಷು ಕೋ ವಿಶ್ರಂಭಃ? ನನು ದರ್ಶಪೂರ್ಣಮಾಸಾದಿವಾಕ್ಯಾನಾಂ ಪುರುಷಪ್ರವೃತ್ತಿವಿಜ್ಞಾನೋತ್ಪಾದಕತ್ವಾತ್ ಪ್ರಾಮಾಣ್ಯಮ್ ಆತ್ಮವಿಜ್ಞಾನವಾಕ್ಯೇಷು ತನ್ನಾಸ್ತೀತಿ। ಸತ್ಯಮೇವಮ್। ನೈಷ ದೋಷಃ। ಪ್ರಾಮಾಣ್ಯಕಾರಣೋಪಪತ್ತೇಃ। ಪ್ರಾಮಾಣ್ಯಕಾರಣಂ ಚ ಯಥೋಕ್ತಮೇವ ನಾನ್ಯತ್। ಅಲಂಕಾರಶ್ಚಾಯಂ ಯತ್ಸರ್ವಪ್ರವೃತ್ತಿಬೀಜನಿರೋಧಫಲವದ್ವಿಜ್ಞಾನೋತ್ಪಾದಕತ್ವಮ್ ಆತ್ಮಪ್ರತಿಪಾದಕವಾಕ್ಯಾನಾಮ್, ನಾಪ್ರಾಮಾಣ್ಯಕಾರಣಮ್ ||

(ಭಾಷ್ಯಾರ್ಥ)

(ಪೂರ್ವಪಕ್ಷ):—(ಶ್ರುತಿಯು) ವಸ್ತುಸ್ವರೂಪವನ್ನು ಸುಮ್ಮನೆ ಅನುವಾದ ಮಾಡುವದರಿಂದ ಅದಕ್ಕೆ ಪ್ರಾಮಾಣ್ಯವಿಲ್ಲದೆಹೋಗುವದಲ್ಲ![1] (ಇದರ ವಿವರ): ಹೇಗೆ "ಅವನು ಅತ್ತನು (ಅರೋದೀತ್); ಅತ್ತನಲ್ಲ, ಅದೇ ರುದ್ರನ ರುದ್ರತ್ವವು" (ತೈ. ಸಂ. ೧-೫-೧-೧) ಎಂಬಿದೇ ಮುಂತಾದ (ವಾಕ್ಯದಲ್ಲಿ) ವಸ್ತುರೂಪವನ್ನು ಸುಮ್ಮನೆ ಅನುವಾದಮಾಡುವದರಿಂದ (ವಾಕ್ಯಕ್ಕೆ) ಪ್ರಾಮಾಣ್ಯವಿಲ್ಲವೋ, ಇದರಂತೆಯೇ ಆತ್ಮವೆಂಬ ವಸ್ತುವನ್ನು ಹೇಳುವ ವಾಕ್ಯಗಳಿಗೂ (ಪ್ರಾಮಾಣ್ಯವಿಲ್ಲ).

(ಸಿದ್ಧಾಂತ):—ಹಾಗಲ್ಲ. ಏಕೆಂದರೆ (ಇಲ್ಲಿ) ವಿಶೇಷವಿದೆ. ವಾಕ್ಯವು ವಸ್ತುವನ್ನು ಹೇಳುವದು ಅಥವಾ ಕ್ರಿಯೆಯನ್ನು ಹೇಳುವದು ಪ್ರಾಮಾಣ್ಯಕ್ಕೆ ಅಥವಾ ಅಪ್ರಾಮಾಣ್ಯಕ್ಕೆ ಕಾರಣ(ವಾಗುವ)ದಿಲ್ಲ; ಮತ್ತೇನೆಂದರೆ ನಿಶ್ಚಿತವಾದ ಫಲವುಳ್ಳ ವಿಜ್ಞಾನವನ್ನು ಉಂಟುಮಾಡುವದೇ (ಕಾರಣವು). ಅದು ಎಲ್ಲಿದೆಯೋ ಆ ವಾಕ್ಯವು ಪ್ರಮಾಣವು, ಎಲ್ಲಿಲ್ಲವೋ ಅದು ಅಪ್ರಮಾಣವು.

ಮತ್ತು, ಏನಯ್ಯ, ನಿನ್ನನ್ನು (ಒಂದು ಪ್ರಶ್ನೆಯನ್ನು) ಕೇಳುತ್ತೇವೆ. ಆತ್ಮಸ್ವರೂಪವನ್ನು ಹೇಳುವ ವಾಕ್ಯಗಳಲ್ಲಿ ಫಲವುಳ್ಳದ್ದೂ ನಿಶ್ಚಿತವೂ ಆದ ವಿಜ್ಞಾನವು ಉಂಟಾಗುತ್ತದೆಯೊ, ಇಲ್ಲವೊ? ಉಂಟಾಗುತ್ತದೆಯೆಂದರೆ (ಅದು) ಅಪ್ರ

---

1. ವಸ್ತುಸ್ವರೂಪವನ್ನು ತಿಳಿಸಿದಮಾತ್ರದಿಂದ ಪ್ರವೃತ್ತಿಯುಂಟಾಗಲಾರದು ಎಂದು (ಭಾ.ಭಾ. ೧೩೪) ಹಿಂದೆ ಹೇಳಿದ್ದಕ್ಕೆ ಸಮಾಧಾನವನ್ನು ಹೇಳುವದಕ್ಕಾಗಿ ಈಗ ಅನುವಾದ ಮಾಡಿಕೊಂಡಿದೆ.

**ಮಾಣವೆಂಬುದು ಹೇಗೆ? ಅವಿದ್ಯೆ, ಶೋಕ, ಮೋಹ, ಭಯ- ಮುಂತಾದ ಸಂಸಾರಬೀಜವಾಗಿರುವ ದೋಷಗಳು ತೊಲಗುವವೆಂಬ ವಿಜ್ಞಾನಫಲ ವನ್ನು ಕಂಡಿದೀಯೊ ಇಲ್ಲವೊ ?**[1] ಅಥವಾ "ಏಕತ್ವವನ್ನು ಕಂಡುಕೊಂಡಿರುವವ ನಿಗೆ ಅಲ್ಲಿ ಯಾವ ಮೋಹವು, ಯಾವ ಶೋಕವು ?" (ಈ. ೭), "ಮಂತ್ರವನ್ನು ಬಲ್ಲವನಾಗಿರುವೆನೇ ಹೊರತು ಆತ್ಮನನ್ನು ಬಲ್ಲವನಲ್ಲ, ಆ ನಾನು ಶೋಕಿಸು ತ್ತಿದ್ದೇನೆ; ಆ ನನ್ನನ್ನು ಪೂಜ್ಯರಾದ (ತಾವು) ಶೋಕದ ದಡವನ್ನು ದಾಟಿಸಿ (ಮುಟ್ಟಿಸ)ಬೇಕು" (ಛಾಂ. ೭-೧-೩)-ಎಂಬಿವೇ ಮುಂತಾದ ನೂರಾರು ಉಪ ನಿಷದ್ವಾಕ್ಯಗಳನ್ನು (ನೀನು) ಕೇಳಿಲ್ಲವೆ? ಹೀಗೆ "ಅವನು ಅತ್ತನು" (ತೈ. ೧-೫-೧-೧) ಮುಂತಾದ (ವಾಕ್ಯಗಳಲ್ಲಿ) ನಿಶ್ಚಿತವೂ ಫಲವುಳ್ಳದ್ದೂ ಆದ ವಿಜ್ಞಾನವು ಇದೆಯೇನು? ಇಲ್ಲದಿದ್ದರೆ (ಅದಕ್ಕೆ) ಅಪ್ರಾಮಾಣ್ಯವುಂಟಾಗಲಿ. (ಆದರೆ) ಅಪ್ರಾ ಮಾಣ್ಯವು (ಆದ ಮಾತ್ರಕ್ಕೆ) ಫಲವುಳ್ಳ ನಿಶ್ಚಿತವಾದ ವಿಜ್ಞಾನವನ್ನುಂಟು ಮಾಡುತ್ತಿರುವ (ವಾಕ್ಯಕ್ಕೆ) ಏತಕ್ಕೆ ಅಪ್ರಾಮಾಣ್ಯವುಂಟಾದೀತು? ಅದಕ್ಕೆ ಅಪ್ರಾಮಾಣ್ಯವುಂಟಾದರೆ ದರ್ಶಪೂರ್ಣಮಾಸಾದಿವಾಕ್ಯಗಳಲ್ಲಿ(ಯಾದರೂ) ಯಾವ ವಿಶ್ವಾಸವುಂಟಾದೀತು ?[2]

(ಪೂರ್ವಪಕ್ಷ):—ದರ್ಶಪೂರ್ಣಮಾಸಾದಿವಾಕ್ಯಗಳು ಪುರುಷಪ್ರವೃತ್ತಿಗೆ ತಕ್ಕ ವಿಜ್ಞಾನವನ್ನುಂಟುಮಾಡುವದರಿಂದ (ಅವಕ್ಕೆ) ಪ್ರಾಮಾಣ್ಯ(ವುಂಟು). ಆದರೆ ಆತ್ಮವಿಜ್ಞಾನವ(ನ್ನುಂಟುಮಾಡುವ) ವಾಕ್ಯಗಳಲ್ಲಿ ಅದಿಲ್ಲವಲ್ಲ ![3]

(ಸಿದ್ಧಾಂತ):—ಇದು ನಿಜ. (ಆದರೆ) ಇದೇನೂ ದೋಷವಲ್ಲ, ಏಕೆಂದರೆ (ಇಲ್ಲಿಯೂ) ಪ್ರಾಮಾಣ್ಯಕ್ಕೆ ಕಾರಣವು ಇರಬಹುದಾಗಿದೆ. ಪ್ರಾಮಾಣ್ಯಕಾರಣವು (ನಾವು) ಮೇಲೆ ಹೇಳಿರುವದೇ ಹೊರತು ಬೇರೆಯಲ್ಲ,[4] ಆತ್ಮಪ್ರತಿಪಾದಕವಾಕ್ಯ

---

1. ವಾಕ್ಯದಿಂದ ಜ್ಞಾನವುಂಟಾಗುವದು, ಸಂಶಯವಾಗಲಿ ಭ್ರಾಂತಿಯಾಗಲಿ ಉಂಟಾಗ ದಿರುವದು- ಎಂಬ ಪ್ರಾಮಾಣ್ಯಕಾರಣವಿರುವದಲ್ಲದೆ ಅವಿದ್ಯೆಯೇ ಮುಂತಾದ ಅನರ್ಥಗಳನ್ನು ಕಳೆಯುವದೆಂಬ ಫಲವೂ ಅನುಭವದಲ್ಲಿರುವಾಗ ಅಪ್ರಮಾಣವೆಂದು ಹೇಗೆ ಹೇಳುವದು? ಎಂದು ಪ್ರಶ್ನೆಯ ಅಭಿಪ್ರಾಯ.

2. ಗೀ. ಭಾ. ೨-೨೧ (ಭಾ. ಭಾ. ೪೦)ನ್ನು ನೋಡಿ.

3. ಈ ಪೂರ್ವಪಕ್ಷವನ್ನು ಸೂ. ಭಾ. ೧-೧-೪ರಲ್ಲಿಯೂ ಅನುವಾದಮಾಡಿಕೊಂಡು (ಭಾ. ಭಾ. ೩೪ರಲ್ಲಿ) ಖಂಡಿಸಿದೆ.

4. ಫಲವುಳ್ಳ ನಿಶ್ಚಿತಜ್ಞಾನವನ್ನುಂಟುಮಾಡುವ ವಾಕ್ಯವು ಪ್ರಮಾಣವು, ಪ್ರವೃತ್ತಿ ಯನ್ನುಂಟುಮಾಡುವದು ಅಥವಾ ಮಾಡದಿರುವದು ಪ್ರಾಮಾಣ್ಯಕ್ಕೆ ಕಾರಣವಲ್ಲ.

ಗಳು ಪ್ರವೃತ್ತಿಬೀಜಗಳನ್ನೆಲ್ಲ[1] ನಾಶಮಾಡುವವೆಂಬ ಫಲವುಳ್ಳ ವಿಜ್ಞಾನವನ್ನುಂಟುಮಾಡುವದೆಂಬುದು ಅಲಂಕಾರವೇ ಹೊರತು ಅಪ್ರಾಮಾಣ್ಯಕ್ಕೆ ಕಾರಣವಲ್ಲ.[2]

## ವಿಜ್ಞಾಯ ಪ್ರಜ್ಞಾಂ ಕುರ್ವೀತ ಮುಂತಾದ ವಾಕ್ಯಗಳ ಗತಿ

(ಭಾಷ್ಯ)

೧೪೨. ಯತ್ತೂಕ್ತಮ್ "ವಿಜ್ಞಾಯ ಪ್ರಜ್ಞಾಂ ಕುರ್ವೀತ" (೪-೪-೨೧) ಇತ್ಯಾದಿವಚನಾನಾಂ ವಾಕ್ಯಾರ್ಥವಿಜ್ಞಾನವ್ಯತಿರೇಕೇಣ ಉಪಾಸನಾರ್ಥತ್ವಮ್ ಇತಿ। ಸತ್ಯಮೇತತ್। ಕಿಂ ತು ನಾಪೂರ್ವವಿಧ್ಯರ್ಥತಾ ಪಕ್ಷೇ ಪ್ರಾಪ್ತಸ್ಯ ನಿಯಮಾರ್ಥತೈವ। ಕಥಂ ಪುನರುಪಾಸನಸ್ಯ ಪಕ್ಷಪ್ರಾಪ್ತಿಃ? ಯಾವತಾ ಪಾರಿಶೇಷ್ಯಾತ್ ಆತ್ಮವಿಜ್ಞಾನಸ್ಮೃತಿಸನ್ತತಿರ್ನಿತ್ಯೈವೇತಿ ಅಭಿಹಿತಮ್। ಬಾಢಮ್। ಯದ್ಯಪ್ಯೇವಮ್, ಶರೀರಾರಮ್ಭಕಸ್ಯ ಕರ್ಮಣೋ ನಿಯತಫಲತ್ವಾತ್ ಸಮ್ಯಗ್ಜ್ಞಾನಪ್ರಾಪ್ತಾವಪಿ ಅವಶ್ಯಂಭಾವಿನೀ ಪ್ರವೃತ್ತಿರ್ವಾಙ್ಮನಃಕಾಯಾನಾಮ್। ಲಬ್ಧವೃತ್ತೇಃ ಕರ್ಮಣೋ ಬಲೀಯಸ್ತ್ವಾತ್। ಮುಕ್ತೇಷ್ವಾದಿಪ್ರವೃತ್ತಿವತ್। ತೇನ ಪಕ್ಷೇ ಪ್ರಾಪ್ತಂ ಜ್ಞಾನಪ್ರವೃತ್ತಿದೌರ್ಬಲ್ಯಮ್। ತಸ್ಮಾತ್ ತ್ಯಾಗವೈರಾಗ್ಯಾದಿಸಾಧನಬಲಾವಲಮ್ಬೇನ ಆತ್ಮವಿಜ್ಞಾನಸ್ಮೃತಿಸಂತತಿರ್ನಿಯನ್ತವ್ಯಾ ಭವತಿ ನ ತ್ವಪೂರ್ವಾ ಕರ್ತವ್ಯಾ ಪ್ರಾಪ್ತತ್ವಾತ್ ಇತ್ಯವೋಚಾಮ। ತಸ್ಮಾತ್ ಪ್ರಾಪ್ತವಿಜ್ಞಾನಸ್ಮೃತಿಸಂತಾನನಿಯಮವಿಧ್ಯರ್ಥಾನಿ "ವಿಜ್ಞಾಯ ಪ್ರಜ್ಞಾಂ ಕುರ್ವೀತ" ಇತ್ಯಾದಿವಾಕ್ಯಾನಿ ಅನ್ಯಾರ್ಥಾಸಂಭವಾತ್॥

(ಭಾಷ್ಯಾರ್ಥ)

ಇನ್ನು "ವಿಜ್ಞಾಯ ಪ್ರಜ್ಞಾಂ ಕುರ್ವೀತ" (೪-೪-೨೧) ಮುಂತಾದ ವಾಕ್ಯಗಳಲ್ಲಿ ವಾಕ್ಯಾರ್ಥಕ್ಕಿಂತ ಬೇರೆಯಾಗಿ (ಮಾಡತಕ್ಕ) ಉಪಾಸನೆಯನ್ನು ಹೇಳಿದೆ ಎಂದು (ಪೂರ್ವಪಕ್ಷಿ) ಹೇಳಿದ್ದನಲ್ಲ, ಇದು ನಿಜವೇ. ಆದರೆ (ಇವು) ಅಪೂರ್ವವಿಧಿಯನ್ನು ಹೇಳುವದಕ್ಕೆ ಬಂದಿಲ್ಲ; (ಒಂದು) ಪಕ್ಷದಲ್ಲಿ ಪ್ರಾಪ್ತವಾದದ್ದನ್ನು ನಿಯಮಮಾಡುವದಕ್ಕೇ ಬಂದಿವೆ.

---

1. ಅವಿದ್ಯಾದಿಗಳನ್ನು.

2. ಏಕೆಂದರೆ ಪ್ರಮಾಣವಾಕ್ಯದ ಕೆಲಸವನ್ನು ಆ ವಾಕ್ಯಗಳು ಮಾಡುತ್ತಿವೆ ಎಂಬುದು ಅನುಭವದಲ್ಲಿದೆ. ಸೂ. ಭಾ. ೧-೪-೧೪ರ ಕೊನೆಯ ವಾಕ್ಯವನ್ನು ನೋಡಿ.

(ಆಕ್ಷೇಪ):—ಉಪಾಸನವು (ಒಂದು) ಪಕ್ಷದಲ್ಲಿ ಪ್ರಾಪ್ತವಾಗಿದೆ ಎಂಬುದಾದರೂ ಹೇಗೆ? ಪರಿಶೇಷನ್ಯಾಯದಿಂದ ಆತ್ಮವಿಜ್ಞಾನಸ್ಮೃತಿಸಂತತಿಯು ನಿತ್ಯವೇ ಎಂದು ನೀವೇ ಹೇಳಿದ್ದೀರಲ್ಲ![1]

(ಪರಿಹಾರ):—ನಿಜ. ಹೀಗೆಯೇ (ಸರಿ). ಆದರೂ ಶರೀರವನ್ನುಂಟುಮಾಡಿರುವ (ಪ್ರಾರಬ್ಧ)ಕರ್ಮವು ನಿಯತವಾಗಿ ಫಲವನ್ನುಂಟುಮಾಡುವದರಿಂದ ಸಮ್ಯಗ್ಜ್ಞಾನವುಂಟಾದರೂ ವಾಙ್ಮನಃಕಾಯಗಳ ಪ್ರವೃತ್ತಿಯು ಅವಶ್ಯವಾಗಿ ಆಗಿಯೇತೀರುತ್ತದೆ. ಏಕೆಂದರೆ ಬಿಟ್ಟ ಬಾಣವೇ ಮುಂತಾದದ್ದರ ಪ್ರವೃತ್ತಿಯಂತೆ ವೃತ್ತಿಯನ್ನು ಪಡೆದುಕೊಂಡಿರುವ ಕರ್ಮವು ಹೆಚ್ಚು ಪ್ರಬಲವಾಗಿರುತ್ತವೆ. ಆದ್ದರಿಂದ (ಈ) ಪಕ್ಷದಲ್ಲಿ ಜ್ಞಾನಪ್ರವೃತ್ತಿಗೆ ದೌರ್ಬಲ್ಯವು ಪ್ರಾಪ್ತವಾಯಿತು.[2] ಆದ್ದರಿಂದ ತ್ಯಾಗ, ವೈರಾಗ್ಯ- ಮುಂತಾದ ಸಾಧನದ ಬಲವನ್ನು ಅವಲಂಬಿಸುವದರಿಂದ ಆತ್ಮವಿಜ್ಞಾನಸ್ಮೃತಿಯ ಸಂತಾನವನ್ನು ಒತ್ತಿ ನಿಲ್ಲಿಸಿಕೊಳ್ಳಬೇಕೇ ಹೊರತು, ಹೊಸದಾಗಿ ಮಾಡಿಕೊಳ್ಳಬೇಕಾಗಿರುವದಿಲ್ಲ; ಏಕೆಂದರೆ (ಅದು) ಪ್ರಾಪ್ತವೇ ಆಗಿರುತ್ತದೆ ಎಂದು (ಹಿಂದೆಯೇ) ಹೇಳಿರುತ್ತೇವೆ. ಆದ್ದರಿಂದ ಪ್ರಾಪ್ತವೇ ಆಗಿರುವ ವಿಜ್ಞಾನಸ್ಮೃತಿಗಳ ಸಂತಾನವನ್ನು (ನಿಲ್ಲಿಸಿಕೊಳ್ಳಬೇಕೆಂಬ) ನಿಯಮವಿಧಿಗಾಗಿ[3] "ವಿಜ್ಞಾಯ ಪ್ರಜ್ಞಾಂ ಕುರ್ವೀತ" (ಅರಿತು ಪ್ರಜ್ಞೆಯನ್ನುಂಟುಮಾಡಿಕೊಳ್ಳಬೇಕು) ಮುಂತಾದ ವಾಕ್ಯಗಳು ಬಂದಿವೆ (ಎಂದು ತಿಳಿಯಬೇಕಾಗಿದೆ). ಏಕೆಂದರೆ ಮತ್ತೊಂದು ಅರ್ಥವು ಅವಕ್ಕೆ ಹೊಂದುವದಿಲ್ಲ.[4]

---

1. ಭಾ. ಭಾ. ೧೩೪ರಲ್ಲಿ ಹೀಗೆಂದು ಹೇಳಿವೆ.

2. ಜ್ಞಾನವನ್ನು ಕರ್ಮವು ಹೊಡೆಯಬಹುದೆಂದು ಒಪ್ಪಿ ಈ ವಾಕ್ಯವನ್ನು ಬರೆದಿವೆ ಎಂಬುದು ಸ್ಪಷ್ಟ. ಮುಂದೆ ಭಾ.ಭಾ. ೧೭೩ರಲ್ಲಿ ಜ್ಞಾನಿಗೆ ವಿಪರೀತಪ್ರತ್ಯಯವುಂಟಾಗಲಾರದೆಂಬುದನ್ನು ಆಚಾರ್ಯರೇ ಸ್ಪಷ್ಟಪಡಿಸಿರುತ್ತಾರೆ.

3. ಇಲ್ಲಿ ನಿಯಮವಿಧಿಯನ್ನು ಹೇಳಿರುವದು ಅಪೂರ್ವವಿಧಿಯಾದದನ್ನು ಸಡಿಲಿಸುವದಕ್ಕೇ ಹೊರತು ತಾತ್ಪರ್ಯದಿಂದಲ್ಲ ಎಂದು **ವಾರ್ತಿಕಕಾರರು** ಬರೆದಿರುತ್ತಾರೆ. ನಿಯಮವಿಧಿಯು ಅದೃಷ್ಟಾರ್ಥವಾಗಿ ಎಂದು ತಿಳಿಯಬಾರದೆಂದು ಅದರ ತಾತ್ಪರ್ಯ. ಜ್ಞಾನವು ಮಿಥ್ಯಾಜ್ಞಾನವನ್ನು ಬಾಧಿಸುವ ಮೂಲಕ ಕರ್ಮವನ್ನು ಬಾಧಿಸುತ್ತದೆ ಎಂದು ಸೂ. ಭಾ. ೪-೧-೧೫ (ಭಾ. ಭಾ. ೫೩೨) ರಲ್ಲಿ ಬರೆದಿರುವದು ಇದಕ್ಕೆ ಪೋಷಕವಾಗಿರುತ್ತದೆ. ಆರಬ್ಧಕರ್ಮದ ಫಲಗಳಿಂದ ಜ್ಞಾನಭೋಗಗಳಿಗೆ ವಿರೋಧವಿಲ್ಲ ಎಂದು ಉ.ಸಾ. ಪದ್ಯ ೪-೪ರಲ್ಲಿ ಹೇಳಿದೆ. ಆದ್ದರಿಂದ ಜ್ಞಾನಿಗೆ ಸ್ಮೃತಿಸಂತಾನವು ನಿತ್ಯಪ್ರಾಪ್ತವೆಂಬುದೇ ಭಾಷ್ಯಕಾರರ ಹೃದಯವೆಂಬುದಕ್ಕೆ ಈ ವಾಕ್ಯವೂ ಒಂದು ಗಮಕ.

4. ಅರಿತುಕೊಂಡ ಬಳಿಕ ಪ್ರಜ್ಞೆಯನ್ನು ಮಾಡಿಕೊಳ್ಳಬೇಕು ಎಂದರೆ ಸಾಕ್ಷಾತ್ಕಾರರೂಪವಾದ ಮತ್ತೊಂದು ಜ್ಞಾನವನ್ನುಂಟುಮಾಡಿಕೊಳ್ಳುವದಕ್ಕಾಗಿ ಜ್ಞಾನಾಭ್ಯಾಸವನ್ನು ಮಾಡಬೇಕು ಎಂದು ಕೆಲವರು ಅರ್ಥವನ್ನು ಮಾಡಿದ್ದರು. ವಾಕ್ಯದಿಂದಲೇ ಸಾಕ್ಷಾಜ್ಜ್ಞಾನವಾಗಿಬಿಡುವದರಿಂದ ಆ ಅರ್ಥವು ಹೊಂದುವದಿಲ್ಲ.

## ಆತ್ಮೇತಿ ಎಂಬಲ್ಲಿ ಇತಿಶಬ್ದದ ಅರ್ಥ

(ಭಾಷ್ಯ)

೧೪೩. ನನು ಅನಾತ್ಮೋಪಾಸನಮಿದಮ್। ಇತಿ ಶಬ್ದಪ್ರಯೋಗಾತ್। ಯಥಾ "ಪ್ರಿಯಮಿತ್ಯೇತದುಪಾಸೀತ" (೪-೧-೩) ಇತ್ಯಾದೌ ನ ಪ್ರಿಯಾದಿ ಗುಣ ಏವ ಉಪಾಸ್ಯಃ, ಕಿಂ ತರ್ಹಿ, ಪ್ರಿಯಾದಿಗುಣವತ್ಪ್ರಾಣಾದ್ಯೇವ ಉಪಾಸ್ಯಮ್। ತಥಾ ಇಹಾಪಿ ಇತಿ ಪರಾತ್ಮಶಬ್ದಪ್ರಯೋಗಾತ್ ಆತ್ಮಗುಣವದನಾತ್ಮವಸ್ತು ಉಪಾಸ್ಯಮ್ ಇತಿ ಗಮ್ಯತೇ। ಆತ್ಮೋಪಾಸ್ಯತ್ವವಾಕ್ಯವೈಲಕ್ಷಣ್ಯಾಚ್ಚ। ಪರೇಣ ಚ ವಕ್ಷ್ಯತಿ "ಆತ್ಮಾನಮೇವ ಲೋಕಮುಪಾಸೀತ" (೧-೪-೧೫) ಇತಿ। ತತ್ರ ಚ ವಾಕ್ಯೇ ಆತ್ಮೈವ ಉಪಾಸ್ಯತ್ವೇನ ಅಭಿಪ್ರೇತಃ। ದ್ವಿತೀಯಾಶ್ರವಣಾತ್ ಆತ್ಮಾನಮೇವ ಇತಿ। ಇಹ ತು ನ ದ್ವಿತೀಯಾ ಶ್ರೂಯತೇ, ಇತಿಪರಶ್ಚ ಆತ್ಮಶಬ್ದಃ "ಆತ್ಮೇತ್ಯೇವೋಪಾಸೀತ" ಇತಿ। ಅತೋ ನಾತ್ಮಾ ಉಪಾಸ್ಯಃ, ಆತ್ಮಗುಣಶ್ಚಾನ್ಯಃ ಇತಿ ತು ಅವಗಮ್ಯತೇ। ನ। ವಾಕ್ಯಶೇಷೇ ಆತ್ಮನ ಉಪಾಸ್ಯತ್ವೇನಾವಗಮಾತ್। ಅಸ್ಯೈವ ವಾಕ್ಯಸ್ಯ ಶೇಷೇ ಆತ್ಮೈವ ಉಪಾಸ್ಯತ್ವೇನ ಅವಗಮ್ಯತೇ। "ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾ". "ಅನ್ತರತರಂ ಯದಯಮಾತ್ಮಾ" (೧-೪-೮), "ಆತ್ಮಾನಮೇವಾವೇತ್" (೧-೪-೧೦) ಇತಿ। ಪ್ರವಿಷ್ಟಸ್ಯ ದರ್ಶನ ಪ್ರತಿಷೇಧಾತ್ ಅನುಪಾಸ್ಯತ್ವಮ್ ಇತಿ ಚೇತ್। ಯಸ್ಯಾತ್ಮನಃ ಪ್ರವೇಶ ಉಕ್ತಃ ತಸ್ಯೈವ ದರ್ಶನಂ ವಾರ್ಯತೇ "ತಂ ನ ಪಶ್ಯನ್ತಿ" ಇತಿ ಪ್ರಕೃತೋಪಾದಾನಾತ್। ತಸ್ಮಾತ್ ಆತ್ಮನೋಽನುಪಾಸ್ಯತ್ವಮೇವ ಇತಿ ಚೇತ್। ನ। ಅಕೃತ್ಸ್ನತ್ವ ದೋಷಾತ್। ದರ್ಶನಪ್ರತಿಷೇಧೋಽಕೃತ್ಸ್ನತ್ವದೋಷಾಭಿಪ್ರಾಯೇಣ ನಾತ್ಮೋಪಾಸ್ಯತ್ವಪ್ರತಿಷೇಧಾಯ। ಪ್ರಾಣನಾದಿಕ್ರಿಯಾವಿಶಿಷ್ಟತ್ವೇನ ವಿಶೇಷಣಾತ್। ಆತ್ಮನಶ್ಚೇತ್ ಉಪಾಸ್ಯತ್ವಮ್ ಅನಭಿಪ್ರೇತಮ್, ಪ್ರಾಣನಾದ್ಯೇಕೈಕಕ್ರಿಯಾ ವಿಶಿಷ್ಟಸ್ಯ ಆತ್ಮನೋಽಕೃತ್ಸ್ನತ್ವವಚನಮ್ ಅನರ್ಥಕಂ ಸ್ಯಾತ್ "ಅಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತಿ" ಇತಿ। ಅತಃ ಅನೇಕೈಕವಿಶಿಷ್ಟಸ್ತ್ವಾತ್ಮಾ ಕೃತ್ಸ್ನತ್ವಾತ್ ಉಪಾಸ್ಯ ಏವ ಇತಿ ಸಿದ್ಧಮ್। ಯಸ್ತು ಆತ್ಮಶಬ್ದಸ್ಯ ಇತಿಪರಃ ಪ್ರಯೋಗಃ ಸ[1] ಆತ್ಮಶಬ್ದಪ್ರತ್ಯಯಯೋರಾತ್ಮತತ್ತ್ವಸ್ಯ ಪರಮಾರ್ಥತೋಽ ವಿಷಯತ್ವಜ್ಞಾಪನಾರ್ಥಃ।[2] ಅನ್ಯಥಾ 'ಆತ್ಮಾನಮ್ ಉಪಾಸೀತ' ಇತ್ಯವಕ್ಷ್ಯತ್। ತಥಾ ಚ ಅರ್ಥಾತ್ ಆತ್ಮನಿ ಶಬ್ದಪ್ರತ್ಯಯಾವನುಜ್ಞಾತೌ ಸ್ಯಾತಾಮ್। ತಚ್ಚ ಅನಿಷ್ಟಮ್। "ನೇತಿ ನೇತಿ" (೨-೩-೬), "ವಿಜ್ಞಾತಾರಮರೇ ಕೇನ

---

1. ಸ ಎಂಬ ಮಾತಿರುವ ಪಾಠವೇ ಉತ್ತಮ.

2. ಜ್ಞಾಪನಾರ್ಥಮ್ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ವಿಜಾನೀಯಾತ್" (೨-೪-೧೪, ೪೫-೧೫), "ಅವಿಜ್ಞಾತಂ ವಿಜ್ಞಾತೃ" (೩-೮-೧೧), "ಯತೋ ವಾಚೋ ನಿವರ್ತನ್ತೇ। ಅಪ್ರಾಪ್ಯ ಮನಸಾ ಸಹ" (ತೈ. ೨-೯-೧೧)- ಇತ್ಯಾದಿಶ್ರುತಿಭ್ಯಃ। ಯಸ್ತು "ಆತ್ಮಾನಮೇವ ಲೋಕಮುಪಾಸೀತ" (೧-೪-೧೫) ಇತಿ ತತ್ ಅನಾತ್ಮೋಪಾಸನಪ್ರಸಙ್ಗನಿವೃತ್ತಿಪರತ್ವಾತ್ ನ ವಾಕ್ಯಾನ್ತರಮ್ ॥

(ಭಾಷ್ಯಾರ್ಥ)

(ಪೂರ್ವಪಕ್ಷ):—ಇದು ಅನಾತ್ಮದ ಉಪಾಸನೆ; ಏಕೆಂದರೆ ಇತಿ ಎಂಬ ಮಾತು (ಆತ್ಮಶಬ್ದದ) ಮುಂದೆ ಇದೆ. (ಇದರ ವಿವರ): ಹೇಗೆ "ಇದನ್ನು ಪ್ರಿಯವೆಂದು ಉಪಾಸನೆಮಾಡಬೇಕು" (೪-೧-೩), ಮುಂತಾದ (ವಾಕ್ಯದಲ್ಲಿ) ಪ್ರಿಯವೇ ಮುಂತಾದ ಗುಣವನ್ನೇ ಉಪಾಸನೆಮಾಡಬೇಕು (ಎಂದು ಹೇಳಿರುವ)ದಿಲ್ಲವೋ, ಮತ್ತೇನೆಂದರೆ ಪ್ರಿಯಾದಿಗುಣಗಳಿಂದ ಕೂಡಿರುವ ಪ್ರಾಣವೇ ಮುಂತಾದದ್ದನ್ನೇ ಉಪಾಸನೆಮಾಡಬೇಕೆಂದು ಹೇಳಿರುತ್ತದೆಯೋ ಹಾಗೆಯೇ ಇಲ್ಲಿಯೂ (ಆತ್ಮೇತಿ ಎಂಬಲ್ಲಿ) ಇತಿ ಎಂಬುದು ಮುಂದೆ ಇರುವ ಆತ್ಮಶಬ್ದವನ್ನು ಪ್ರಯೋಗಿಸಿರುವದರಿಂದ ಆತ್ಮಗುಣವುಳ್ಳ ಅನಾತ್ಮವನ್ನೇ ಉಪಾಸನೆಮಾಡಬೇಕು (ಎಂದಿದೆ) ಎಂದು ನಿಶ್ಚಯವಾಗುತ್ತದೆ.

ಆತ್ಮನೇ ಉಪಾಸ್ಯನೆಂದು (ಹೇಳುವ) ವಾಕ್ಯಕ್ಕೂ (ಇದಕ್ಕೂ) ವೈಲಕ್ಷಣ್ಯವಿರುವದರಿಂದಲೂ (ಹೀಗೆಂದು ತಿಳಿಯಬೇಕು). ಮುಂದೆ "ಆತ್ಮಾನಮೇವ ಲೋಕಮುಪಾಸೀತ" ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು. (೧-೪-೧೫) ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಆ ವಾಕ್ಯದಲ್ಲಂತೂ ಆತ್ಮನನ್ನೇ ಉಪಾಸನೆಮಾಡಬೇಕೆಂದು ಅಭಿಪ್ರೇತವಾಗಿರುತ್ತದೆ; ಏಕೆಂದರೆ 'ಆತ್ಮನನ್ನೇ' (ಆತ್ಮಾನಮೇವ) ಎಂದು (ಅಲ್ಲಿ) ದ್ವಿತೀಯಾ(ವಿಭಕ್ತಿಯನ್ನು) ಶ್ರುತಿಯಲ್ಲಿ ಉಪಯೋಗಿಸಿದೆ. ಆದರೆ ಇಲ್ಲಿ ದ್ವಿತೀಯಾ(ವಿಭಕ್ತಿಯು) ಶ್ರುತಿಯಲ್ಲಿಲ್ಲ, 'ಆತ್ಮೇತ್ಯೇವೋಪಾಸೀತ' ಎಂದು ಇತಿಪರವಾಗಿಯೂ ಇದೆ. ಆದ್ದರಿಂದ (ಇಲ್ಲಿ) ಆತ್ಮನು ಉಪಾಸ್ಯನಲ್ಲ; ಮತ್ತೇನೆಂದರೆ ಆತ್ಮಗುಣವುಳ್ಳ ಮತ್ತೊಂದೇ (ಉಪಾಸ್ಯವು) ಎಂದು ನಿಶ್ಚಯವಾಗುತ್ತದೆ.

(ಸಿದ್ಧಾಂತ):—ಹಾಗಲ್ಲ. ಏಕೆಂದರೆ ವಾಕ್ಯಶೇಷದಲ್ಲಿ ಆತ್ಮನೇ ಉಪಾಸ್ಯನೆಂದು ನಿಶ್ಚಯವಾಗುತ್ತಿದೆ. (ಇದರ ವಿವರ): ಇದೇ ವಾಕ್ಯದ ಶೇಷದಲ್ಲಿ "ಈ ಆತ್ಮನೆಂಬವನಿದಾನಲ್ಲ, ಆ ಇದೇ ಪದನೀಯವು", "(ಮಿಕ್ಕೆಲ್ಲಕ್ಕಿಂತಲೂ) ಒಳಗಿರುವ ಈ ಆತ್ಮನೆಂಬುದೇ (ಪ್ರಿಯವಾದದ್ದು)" (೧-೪-೮),[1] "ತನ್ನನ್ನೇ ಅರಿತುಕೊಂಡಿತು" (೧-೪-೧೦)-ಎಂದು ಆತ್ಮನೇ ಉಪಾಸ್ಯನೆಂದು ನಿಶ್ಚಿತವಾಗಿರುತ್ತದೆ.

---

1. ಈ ವಾಕ್ಯದಲ್ಲಿ ಆತ್ಮನನ್ನು ಉಪಾಸನೆಮಾಡಬೇಕೆಂದು ಹೇಳಿಲ್ಲವಾದರೂ ಆತ್ಮನನ್ನೇ ಉಪಾಸನೆಮಾಡಬೇಕೆಂಬುದಕ್ಕೆ ಕಾರಣವನ್ನು ಹೇಳಿದೆ.

(ಪೂರ್ವಪಕ್ಷ):—ಪ್ರವೇಶಮಾಡಿದ (ಆತ್ಮನನ್ನು) ಕಾಣದೆ ಇರುವದು ಎಂದಿರುವದರಿಂದ (ಅವನು) ಉಪಾಸ್ಯನಲ್ಲ. (ಇದರ ವಿವರ): ಯಾವ ಆತ್ಮನಿಗೆ ಪ್ರವೇಶವನ್ನು ಹೇಳಿದೆಯೋ ಅವನನ್ನೇ ಕಾಣದಿರುವರೆಂದು (ಇಲ್ಲಿ) ಹೇಳಿರುತ್ತದೆ. "ಅವನನ್ನು ಕಾಣದೆ ಇರುವರು" ಎಂದು ಪ್ರಕೃತನಾದ (ಆತ್ಮನನ್ನೇ ಸರ್ವನಾಮದಿಂದ ಪರಾಮರ್ಶಿಸಿ) ತೆಗೆದುಕೊಂಡಿರುವದರಿಂದ (ಹೀಗೆಂದು ನಿಶ್ಚಯಿಸಬೇಕಾಗಿದೆ). ಆದ್ದರಿಂದ ಉಪಾಸ್ಯನಲ್ಲವೆಂಬುದೇ (ಸರಿ).

(ಸಿದ್ಧಾಂತ):—ಹಾಗಲ್ಲ, ಏಕೆಂದರೆ ಅಕೃತ್ಸ್ನತ್ವವೆಂಬ ದೋಷವನ್ನು (ಹೇಳಿರುತ್ತದೆ. ಕಾಣದಿರುವರೆಂದು) ದರ್ಶನವನ್ನು ಅಲ್ಲಗಳೆದಿರುವದು (ಇದರಲ್ಲಿ) ಅಕೃತ್ಸ್ನತ್ವವೆಂಬ ದೋಷವಿದೆ ಎಂಬ) ಅಭಿಪ್ರಾಯದಿಂದಲೇ ಹೊರತು ಆತ್ಮನು ಉಪಾಸ್ಯನಲ್ಲವೆನ್ನುವದಕ್ಕೋಸ್ಕರ (ಹೇಳಿ)ದ್ದಲ್ಲ. ಏಕೆಂದರೆ (ಇಲ್ಲಿ) ಪ್ರಾಣನವೇ ಮುಂತಾದ ಕ್ರಿಯಾವಿಶಿಷ್ಟನೆಂದು ವಿಶೇಷಣವನ್ನು(ಕೊಟ್ಟಿದೆ). ಆತ್ಮನು ಉಪಾಸ್ಯನೆಂಬುದು ಅಭಿಪ್ರೇತವಲ್ಲದೆ ಇದ್ದರೆ ಪ್ರಾಣನವೇ ಮುಂತಾದ ಒಂದೊಂದು ಕ್ರಿಯೆಯಿಂದೊಡಗೂಡಿದ ಆತ್ಮನು ಅಕೃತ್ಸ್ನನು ಎಂದು "ಇವನು ಅಕೃತ್ಸ್ನನೇ ಈ ಒಂದೊಂದರಿಂದ (ಕೂಡಿದವನಾಗಿರುತ್ತಾನೆ" ಎಂಬ (ವಾಕ್ಯದಿಂದ) ಹೇಳಿರುವದು ವ್ಯರ್ಥವಾಗುವದು. ಆದ್ದರಿಂದ (ಇದರಲ್ಲಿ) ಒಂದೊಂದರಿಂದಲೇ ಕೂಡಿರುವನಲ್ಲದ ಆತ್ಮನಾದರೆ ಕೃತ್ಸ್ನವಾಗಿರುವದರಿಂದ ಉಪಾಸ್ಯನೇ ಎಂದು ಸಿದ್ಧವಾಯಿತು.[1]

ಇನ್ನು ಆತ್ಮಶಬ್ದವನ್ನು ಇತಿಪರವಾಗಿ ಪ್ರಯೋಗಿಸಿದೆಯಲ್ಲ, ಅದು ಆತ್ಮ ಎಂಬ ಶಬ್ದಪ್ರತ್ಯಯಗಳಿಗೆ ಆತ್ಮತತ್ತ್ವವು ನಿಜವಾಗಿ ವಿಷಯವಲ್ಲ ಎಂದು ತಿಳಿಸುವದಕ್ಕಾಗಿ (ಬಂದಿರುತ್ತದೆ)[2]; ಹಾಗಿಲ್ಲದಿದ್ದರೆ "ಆತ್ಮನನ್ನು ಉಪಾಸನೆಮಾಡಬೇಕು" ಎಂದೀ ಪ್ರಕಾರವಾಗಿಯೇ (ಶ್ರುತಿಯು) ಹೇಳುತ್ತಿತ್ತು. ಹಾಗೆ ಮಾಡಿದ್ದರೆ ಆತ್ಮ (ವಿಷಯದಲ್ಲಿ) ಶಬ್ದಪ್ರತ್ಯಯಗಳೂ (ಉಂಟೆಂದು) ಒಪ್ಪಿದಂತೆ ಆಗುತ್ತಿತ್ತು. ಆದರೆ ಅದು ಇಷ್ಟವಲ್ಲ. "ಹೀಗಲ್ಲ, ಹೀಗಲ್ಲ" (೨-೩-೬), "ಎಲೆ, ವಿಜ್ಞಾತೃವನ್ನು ಏತರಿಂದ ಅರಿತುಕೊಂಡಾನು ?" (೨-೪-೧೪, ೪ ೫-೧೫) "ಅವಿಜ್ಞಾತವು ವಿಜ್ಞಾತೃ" (೩-೮-೧೧), "ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಪಡೆಯದೆ ಹಿಂದಿರುಗುವವೋ" (ತೈ. ೨-೯-೧೧)—ಮುಂತಾದ ಶ್ರುತಿಗಳಿಂದ ಇದು ಸಿದ್ಧವಾಗುತ್ತದೆ. ಇನ್ನು "ಆತ್ಮಾನಮೇವ ಲೋಕಮುಪಾ

---

1. ವಾಕ್ಯಶೇಷದಿಂದ ಆತ್ಮನು ಉಪಾಸ್ಯನೇ ಎಂದು ಸಿದ್ಧವಾಗುವದರಿಂದ ಇದಕ್ಕೆ ಹೊಂದುವಂತೆಯೇ ಇತಿಶಬ್ದಕ್ಕೆ ಅರ್ಥವನ್ನು ಹೇಳಬೇಕು ಎಂದು ಭಾವ.

2. ಆತ್ಮನು ಆತ್ಮಶಬ್ದವಾಚ್ಯನೂ ಅಲ್ಲ, ಆತ್ಮಶಬ್ದಪ್ರತ್ಯಯಗೋಚರನೂ ಅಲ್ಲ. ಛಾಂ. ಭಾ. ೭-೧-೩ನ್ನು ನೋಡಿ.

ಸೀತ" (೧-೪-೧೫) (ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು) ಎಂಬ ವಾಕ್ಯವಿದೆಯಲ್ಲ, ಅದು ಅನಾತ್ಮವನ್ನು ಉಪಾಸನೆಮಾಡಬಹುದೆಂಬ ಪ್ರಸಕ್ತಿಯನ್ನು, ನಿವೃತ್ತಿಮಾಡುವದರಲ್ಲಿ ತಾತ್ಪರ್ಯವುಳ್ಳದ್ದಾದ್ದರಿಂದ ಮತ್ತೊಂದು ವಾಕ್ಯವಲ್ಲ.[1]

## ಆತ್ಮನನ್ನೇ ಏಕೆ ಅರಿತುಕೊಳ್ಳಬೇಕು ?

(ಭಾಷ್ಯ)

೧೪೪. ಅವಿಜ್ಞಾತತತ್ತ್ವಸಾಮಾನ್ಯಾತ್ ಆತ್ಮಾ ಜ್ಞಾತವ್ಯಃ, ಅನಾತ್ಮಾ ಚ । ತತ್ರ ಕಸ್ಮಾತ್ ಆತ್ಮೋಪಾಸನೇ ಏವ ಯತ್ನ ಆಸ್ಥೀಯತೇ ಆತ್ಮೇತ್ಯೇವೋಪಾಸೀತ ಇತಿ, ನೇತರವಿಜ್ಞಾನೇ ಇತಿ? ಅತ್ರೋಚ್ಯತೇ । ತದೇತದೇವ ಪ್ರಕೃತಂ ಪದನೀಯಂ ಗಮನೀಯಂ ನಾನ್ಯತ್ । 'ಅಸ್ಯ ಸರ್ವಸ್ಯ' ಇತಿ ನಿರ್ಧಾರಣಾರ್ಥಾ ಷಷ್ಠೀ ಅಸ್ಮಿನ್ ಸರ್ವಸ್ಮಿನ್ ಇತ್ಯರ್ಥಃ । ಯದಯಮಾತ್ಮಾ ಯದೇತತ್ ಆತ್ಮತತ್ತ್ವಮ್ । ಕಿಂ ನ ವಿಜ್ಞಾತವ್ಯಮೇವ ಅನ್ಯತ್ ? ನ ಕಿಂ ತರ್ಹಿ ಜ್ಞಾತವ್ಯತ್ವೇಽಪಿ ನ ಪೃಥಗ್ಜ್ಞಾನಾನ್ತರಮ್ ಅಪೇಕ್ಷತೇ ಆತ್ಮಜ್ಞಾನಾತ್ । ಕಸ್ಮಾತ್ ? ಅನೇನ ಆತ್ಮನಾ ಜ್ಞಾತೇನ ಹಿ ಯಸ್ಮಾತ್ ಏತತ್ ಸರ್ವಮ್ ಅನಾತ್ಮಜಾತಮ್ ಅನ್ಯದ್ಯತ್ ತತ್ಸರ್ವಂ ಸಮಸ್ತಂ ವೇದ ಜಾನಾತಿ । ನನ್ವನ್ಯಜ್ಞಾನೇನ ಅನ್ಯತ್ ನ ಜ್ಞಾಯತ ಇತಿ ? ಅಸ್ಯ ಪರಿಹಾರಂ ದುನ್ದುಭ್ಯಾದಿಗ್ರನ್ಥೇನ ವಕ್ಷ್ಯಾಮಃ ॥

(ಭಾಷ್ಯಾರ್ಥ)

ನಿಶ್ಶೇಷವಾಗಿ ಅರಿತುಕೊಳ್ಳದಿರುವದು ಸಮಾನವಾಗಿರುವದರಿಂದ ಆತ್ಮನನ್ನೂ ಅರಿತುಕೊಳ್ಳಬೇಕು, ಅನಾತ್ಮವನ್ನೂ ಅರಿತುಕೊಳ್ಳಬೇಕು. ಹೀಗಿರುವಲ್ಲಿ "ಆತ್ಮನೆಂದೇ ಉಪಾಸನೆಮಾಡಬೇಕು" ಎಂದು ಆತ್ಮೋಪಾಸನೆಯಲ್ಲಿಯೇ (ಶ್ರುತಿಯಲ್ಲಿ) ಯತ್ನವನ್ನು ಮಾಡಿರುವದೇಕೆ? ಇನ್ನೊಂದರ ಅರಿವಿನಲ್ಲಿ ಏಕೆ (ಮಾಡಿ)ಲ್ಲ?, ಎಂದರೆ ಅದಕ್ಕೆ (ಶ್ರುತಿ) ಹೇಳುತ್ತದೆ: ಪ್ರಕೃತವಾದ ಆ ಇದೇ[2] ಪದನೀಯವು,(ಹೋಗಿ) ಸೇರತಕ್ಕದ್ದು, ಮತ್ತೊಂದಲ್ಲ. 'ಅಸ್ಯ ಸರ್ವಸ್ಯ' ಎಂಬುದು

---

1. ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು ಎಂದರೆ ಅನಾತ್ಮಲೋಕವನ್ನು ಉಪಾಸನೆಮಾಡತಕ್ಕದ್ದಲ್ಲ ಎಂದೇ ಅರ್ಥ. ಅಲ್ಲಿ ಆತ್ಮನ ವಿಷಯಕ್ಕೆ ಹೊಸದೇನನ್ನೂ ಹೇಳಿಲ್ಲ ಮುಂದೆ ಆ ಶ್ರುತಿಯ ಭಾಷ್ಯವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

2. ಈ "ಆತ್ಮನೆಂಬುದಿದೆಯಲ್ಲ, ಆ ಇದೇ" ಎಂದು ಅನ್ವಯ ; ಸರ್ವನಾಮದಿಂದ ಪ್ರಕೃತನಾದ ಆತ್ಮನನ್ನು ಪರಾಮರ್ಶಿಸಿದೆ ಎಂದು ಭಾವ.

ನಿರ್ಧಾರಣಾರ್ಥದಲ್ಲಿ[1] (ಬಂದಿರುವ) ಷಷ್ಠಿಯು, ಇದರಲ್ಲೆಲ್ಲ ಎಂದರ್ಥ. ಈ ಆತ್ಮನಿದಾನಲ್ಲ, ಈ ಆತ್ಮತತ್ತ್ವವಿದೆಯಲ್ಲ (ಇದೇ ಪದನೀಯವು, ಅರಿತುಕೊಳ್ಳ ತಕ್ಕದ್ದು).

(ಆಕ್ಷೇಪ):—ಹಾಗಾದರೆ ಮತ್ತೊಂದು ಅರಿತುಕೊಳ್ಳದ್ದೇ ಅಲ್ಲವೇನು ?

(ಪರಿಹಾರ):—(ಹಾಗೇನೂ) ಅಲ್ಲ; ಮತ್ತೇನೆಂದರೆ (ಅದೂ) ಅರಿಯ ತಕ್ಕದ್ದೇ ಆದರೂ (ಅದನ್ನು ಅರಿಯುವದಕ್ಕೆ) ಆತ್ಮಜ್ಞಾನಕ್ಕಿಂತ ಬೇರೆಯ ಜ್ಞಾನವು ಬೇಕಿರುವದಿಲ್ಲ.

(ಪ್ರಶ್ನೆ):—ಏಕೆ ?

(ಉತ್ತರ):—ಏಕೆಂದರೆ (ಈ) ಆತ್ಮನನ್ನು ಅರಿತುಕೊಂಡದ್ದರಿಂದಲೇ ಇದೆಲ್ಲ ವನ್ನೂ (ಈ) ಅನಾತ್ಮಜ್ಞಾನವನ್ನೆಲ್ಲ, ಸಮಸ್ತವನ್ನೂ ಅರಿತುಕೊಳ್ಳುತ್ತಾನೆ.

(ಆಕ್ಷೇಪ):—ಒಂದರ ಜ್ಞಾನದಿಂದ ಮತ್ತೊಂದನ್ನು ಅರಿತುಕೊಳ್ಳುಸದು ಆಗಲಾರದಲ್ಲ !

(ಪರಿಹಾರ):—ಇದಕ್ಕೆ ಪರಿಹಾರವನ್ನು ದುಂದುಭ್ಯಾದಿಗ್ರಂಥ (೨-೪-೭ ವ್ಯಾಖ್ಯಾನ)ದಲ್ಲಿ ಹೇಳುವೆವು.

## ಆತ್ಮನನ್ನು ಹೇಗೆ ಅರಿತುಕೊಳ್ಳಬೇಕು ?

(ಭಾಷ್ಯ)

೧೪೫. ಕಥಂ ಪುನರೇತತ್ ಪದನೀಯಮ್ ಇತಿ? ಉಚ್ಯತೇ| ಯಥಾ ಹ ವೈ ಲೋಕೇ ಪದೇನ| ಗವಾದಿಖುರಾಙ್ಕಿತೋ ದೇಶಃ ಪದಮಿತ್ಯುಚ್ಯತೇ | ತೇನ ಪದೇನ ನಷ್ಟಂ ವಿವಿತ್ಸಿತಂ ಪಶುಂ ಪದೇನ ಅನ್ವೇಷಮಾಣಃ ಅನುವಿನ್ದೇತ್ ಲಭೇತ| ಏವಮ್ ಆತ್ಮನಿ ಲಬ್ಧೇ ಸರ್ವಮ್ ಅನುಲಭತೇ ಇತ್ಯರ್ಥಃ| ನನು ಆತ್ಮನಿ ಜ್ಞಾತೇ ಸರ್ವಮನ್ಯತ್ ಜ್ಞಾಯತೇ ಇತಿ ಜ್ಞಾನೇ ಪ್ರಕೃತೇ ಕಥಂ ಲಾಭೋಽಪ್ರಕೃತಃ ಉಚ್ಯತ ಇತಿ? ನ| ಜ್ಞಾನಲಾಭಯೋರೇಕಾರ್ಥತ್ವಸ್ಯ ವಿವಕ್ಷಿತತ್ವಾತ್| ಆತ್ಮನೋ ಹಿ ಅಲಾಭೋಽಜ್ಞಾನಮೇವ| ತಸ್ಮಾತ್ ಜ್ಞಾನಮೇವ ಆತ್ಮನೋ ಲಾಭಃ, ನಾನಾತ್ಮಲಾಭವತ್ ಅಪ್ರಾಪ್ತಪ್ರಾಪ್ತಿಲಕ್ಷಣ ಆತ್ಮಲಾಭಃ| ಲಬ್ಧಲಬ್ಧವ್ಯಯೋರ್ಭೇದಾಭಾವಾತ್|ಯತ್ರ ಹಿ ಆತ್ಮನೋಽನಾತ್ಮಾ ಲಬ್ಧವ್ಯೋ ಭವತಿತತ್ರ ಆತ್ಮಾ ಲಬ್ಧಾ, ಲಬ್ಧವ್ಯೋಽನಾತ್ಮಾ| ಸ ಚ ಅಪ್ರಾಪ್ತಃ ಉತ್ಪಾದ್ಯಕ್ರಿಯಾ

1. ಇದು ಸಂಬಂಧವನ್ನು ತಿಳಿಸುವ ಶೇಷಷಷ್ಠೀವಿಭಕ್ತಿ ಎಂಬ ಮತವನ್ನು ಶಂಕಿಸಿ ಆತ್ಮಾನಾತ್ಮಗಳಿಗೆ ಯಾವ ನಿಜವಾದ ಸಂಬಂಧವೂ ಇಲ್ಲವೆಂಬ ಯುಕ್ತಿಯಿಂದ ವಾರ್ತಿಕದಲ್ಲಿ ಪರಿಹರಿಸಿದೆ. ಈ ಮತವೂ ವಾರ್ತಿಕಸಮ್ಮತವೆಂಬ ಟೀಕಾಕಾರರ ವ್ಯಾಖ್ಯಾನವು ಸರಿಯಲ್ಲ.

ವ್ಯವಹಿತಃ[1] ಕಾರಕವಿಶೇಷೋಪಾದಾನೇನ ಕ್ರಿಯಾವಿಶೇಷಮ್ ಉತ್ಪಾದ್ಯ ಲಬ್ಧವ್ಯಃ। ಸ ತು ಅಪ್ರಾಪ್ತಿಲಕ್ಷಣೋಽನಿತ್ಯಃ। ಮಿಥ್ಯಾಜ್ಞಾನಜನಿತಕಾಮಕ್ರಿಯಾ ಪ್ರಭವತ್ವಾತ್ ಸ್ವಪ್ನೇ ಪುತ್ರಾದಿಲಾಭವತ್। ಅಯಂ ತು ತದ್ವಿಪರೀತ ಆತ್ಮಾ। ಆತ್ಮತ್ವಾದೇವ ನೋತ್ಪಾದ್ಯಕ್ರಿಯಾವ್ಯವಹಿತಃ। ನಿತ್ಯಲಬ್ಧಸ್ವರೂಪತ್ವೇಽಪಿ ಸತಿ ಅವಿದ್ಯಾಮಾತ್ರಂ ವ್ಯವಧಾನಮ್। ಯಥಾ ಗೃಹ್ಯಮಾಣಾಯಾ ಅಪಿ ಶುಕ್ತಿಕಾಯಾ ವಿಪರ್ಯಯೇಣ ರಜತಾಭಾಸಾಯಾ ಅಗ್ರಹಣಂ ವಿಪರೀತಜ್ಞಾನವ್ಯವಧಾನಮಾತ್ರಮ್ ತಥಾ ಗ್ರಹಣಂ ಜ್ಞಾನಮಾತ್ರಮೇವ। ವಿಪರೀತಜ್ಞಾನವ್ಯವಧಾನಾಪೋಹಾರ್ಥತ್ವಾತ್ ಜ್ಞಾನಸ್ಯ। ಏವಮಿಹಾಪಿ ಆತ್ಮನೋಽಲಾಭೋಽವಿದ್ಯಾಮಾತ್ರವ್ಯವಧಾನಮ್। ತಸ್ಮಾತ್ ವಿದ್ಯಯಾ ತದಪೋಹನಮೇವ ಲಾಭಃ ನಾನ್ಯಃ ಕದಾಚಿದಪ್ಯುಪಪದ್ಯತೇ। ತಸ್ಮಾತ್ ಆತ್ಮಲಾಭೇ ಜ್ಞಾನಾತ್ ಅರ್ಥಾನ್ತರಸಾಧನಸ್ಯ ಆನರ್ಥಕ್ಯಂ ವಕ್ಷ್ಯಾಮಃ। ತಸ್ಮಾತ್ ನಿರಾಶಙ್ಕಮೇವ ಜ್ಞಾನಲಾಭಯೋರೇಕಾರ್ಥತ್ವಂ ವಿವಕ್ಷನ್ ಆಹ ಜ್ಞಾನಂ ಪ್ರಕೃತ್ಯ, 'ಅನುವಿನ್ದೇತ್' ಇತಿ। ವಿನ್ದತೇರ್ಲಾಭಾರ್ಥತ್ವಾತ್ ॥

(ಭಾಷ್ಯಾರ್ಥ)

ಇನ್ನು ಇದು ಪದನೀಯವೆಂದರೆ ಹೇಗೆ ?–ಎಂದರೆ (ಶ್ರುತಿ) ಹೇಳುತ್ತದೆ. ಲೋಕದಲ್ಲಿ ಹೇಗೆ ಪದದಿಂದ– ಹಸು ಮುಂತಾದ ಗೊರಸಿನ ಗುರುತುಳ್ಳ ನೆಲವನ್ನೇ ಇಲ್ಲಿ ಪದವೆಂದು ಕರೆದಿದೆ– ಆ ಪದದಿಂದ-ಕಳೆದುಕೊಂಡಿರುವ, ಪಡೆಯಬೇಕಾಗಿರುವ ಪಶುವನ್ನು ಹೆಜ್ಜೆಯ ಗುರುತಿನಿಂದ ಹುಡುಕುತ್ತಾ (ಅನುವಿನ್ದೇತ್) ಆಮೇಲೆ ಪಡೆದುಕೊಳ್ಳುತ್ತಾರೋ ದೊರಕಿಸಿಕೊಳ್ಳುತ್ತಾರೋ, ಹೀಗೆ ಆತ್ಮನನ್ನು ದೊರಕಿಸಿಕೊಂಡರೆ ಎಲ್ಲವನ್ನೂ (ಅದರ) ಹಿಂದೆಯೇ ದೊರಕಿಸಿಕೊಳ್ಳುತ್ತಾನೆ ಎಂದರ್ಥ.

(ಆಕ್ಷೇಪ):—ಆತ್ಮನನ್ನು ಅರಿತುಕೊಂಡರೆ ಮಿಕ್ಕದ್ದೆಲ್ಲವೂ ಜ್ಞಾತವಾಗುವದು ಎಂದು ಜ್ಞಾನವು ಪ್ರಕೃತವಾಗಿರುವಲ್ಲಿ, ಅವು ಅಪ್ರಕೃತವಾಗಿ ಲಾಭವನ್ನು[2] ಹೇಳಿದ್ದು ಹೇಗೆ (ಸರಿ) ?

(ಪರಿಹಾರ):—ಹಾಗಲ್ಲ, ಏಕೆಂದರೆ ಜ್ಞಾನಲಾಭಗಳೆರಡಕ್ಕೂ ಒಂದೇ ಅರ್ಥವೆಂದು ಇಲ್ಲಿ ವಿವಕ್ಷಿತವಾಗಿರುತ್ತದೆ. (ಇದರ ವಿವರ): ಆತ್ಮನನ್ನು ಪಡೆದುಕೊಳ್ಳದಿರುವದೆಂದರೆ ಅಜ್ಞಾನವೇ. ಆದ್ದರಿಂದ ಜ್ಞಾನವೇ ಆತ್ಮನ ಲಾಭವೇ ಹೊರತು ಅನಾತ್ಮಲಾಭದಂತೆ ಆತ್ಮಲಾಭವು ಪಡೆಯದೆ ಇದ್ದದ್ದನ್ನು ಪಡೆದು

1. 'ಉತ್ಪಾದ್ಯಾದಿಕ್ರಿಯಾವ್ಯವಹಿತಂ' ಎಂಬ ಪಾಠದಲ್ಲಿ ಅದಿ ಹೆಚ್ಚು.

2. ಜ್ಞಾನಮಾತ್ರದಿಂದ ವಸ್ತುಪ್ರಾಪ್ತಿಯಾಗಲಾರದಷ್ಟೆ ? ಹಿಂದೆ "ಇದರಿಂದ ಎಲ್ಲವನ್ನೂ ಅರಿತುಕೊಳ್ಳುತ್ತಾನೆ" ಎಂದು ಪ್ರಕೃತವಾಗಿರುವದಕ್ಕೆ ಈ ಉಪಸಂಹಾರವು ಅನನುಗುಣವೂ ಆಯಿತಲ್ಲ !– ಎಂದು ಭಾವ.

ಕೊಳ್ಳುವ ರೂಪದ್ದಲ್ಲ. ಏಕೆಂದರೆ (ಇಲ್ಲಿ) ಲಬ್ಧೃ, ಲಬ್ಧವ್ಯ-(ಈ ಎರಡಕ್ಕೂ) ಭೇದವಿರುವದಿಲ್ಲ. ಎಲ್ಲಿ ಆತ್ಮನಿಗೆ ಅನಾತ್ಮವು ಲಬ್ಧವ್ಯವಾಗಿರುವದೋ ಅಲ್ಲಿ ಆತ್ಮನು ಲಬ್ಧೃ, ಅನಾತ್ಮವು ಲಬ್ಧವ್ಯವು. ಆ (ಅನಾತ್ಮವು) ಅಪ್ರಾಪ್ತವಾಗಿದ್ದು ಉತ್ಪಾದ್ಯವಾದ ಕ್ರಿಯೆಯಿಂದ ಮರೆಯಾಗಿದ್ದು ಗೊತ್ತಾದ ಕಾರಕಗಳನ್ನು ತೆಗೆದುಕೊಂಡು ಆಯಾ ಕ್ರಿಯೆಯನ್ನುಂಟುಮಾಡಿ ಪಡೆದುಕೊಳ್ಳತಕ್ಕದ್ದಾಗಿರುತ್ತದೆ. ಆದರೆ ಅಪ್ರಾಪ್ತಪ್ರಾಪ್ತಿರೂಪವಾದ ಆ ಲಾಭವು ಮಿಥ್ಯಾಜ್ಞಾನದಿಂದುಂಟಾದ ಕಾಮಕ್ರಿಯೆಗಳಿಂದ ಉಂಟಾಗತಕ್ಕದ್ದಾಗಿರುವದರಿಂದ ಕನಸಿನಲ್ಲಾಗುವ ಪುತ್ರಾದಿಲಾಭದಂತೆ ಅನಿತ್ಯವಾಗಿರುತ್ತದೆ. ಆದರೆ ಈ ಆತ್ಮನು ಅದಕ್ಕೆ ವಿಪರೀತನಾಗಿರುತ್ತಾನೆ.[1] (ಅವನು) ಆತ್ಮನಾಗಿರುವದರಿಂದಲೇ ಉತ್ಪಾದ್ಯಕ್ರಿಯೆಯಿಂದ ವ್ಯವಹಿತನಾಗಿರುವದಿಲ್ಲ. (ಹೀಗೆ) ನಿತ್ಯಪ್ರಾಪ್ತನಾಗಿದ್ದರೂ ಅವಿದ್ಯೆಯೊಂದೇ (ಇಲ್ಲಿ) ವ್ಯವಧಾನವು. ಹೇಗೆ ಕಪ್ಪೆಯಚಿಪ್ಪನ್ನು ಗ್ರಹಿಸುತ್ತಿದ್ದರೂ ವಿಪರೀತವಾಗಿ ರಜತರೂಪದಿಂದ ತೋರುತ್ತಿರುವಲ್ಲಿ (ಅದನ್ನು) ಗ್ರಹಿಸುವದಿಲ್ಲವೆಂಬುದಕ್ಕೆ ವಿಪರೀತಜ್ಞಾನವೊಂದೇ ಮರೆಯಾಗಿರುತ್ತದೆಯೋ, ಮತ್ತು (ಅದನ್ನು) ಗ್ರಹಿಸುವದೆಂಬುದು ಬರಿಯ ಜ್ಞಾನವೇ (ಆಗಿರುತ್ತದೆಯೋ), ಏಕೆಂದರೆ ವಿಪರೀತಜ್ಞಾನವೆಂಬ ಮರೆಯನ್ನು ತೆಗೆದುಹಾಕುವದಕ್ಕಾಗಿಯೇ ಜ್ಞಾನವು (ಬೇಕಾಗಿರುತ್ತದೆ)– ಹಾಗೆಯೇ ಇಲ್ಲಿಯೂ ಆತ್ಮನ ಅಲಾಭವೆಂದರೆ ಅವಿದ್ಯಾಮಾತ್ರ(ರೂಪವಾದ) ವ್ಯವಧಾನವು. ಆದ್ದರಿಂದ ವಿದ್ಯೆಯಿಂದ ಆ (ಅವಿದ್ಯೆ)ಯನ್ನು ತೆಗೆದುಹಾಕುವದೇ ಲಾಭವೇ ಹೊರತು ಮತ್ತೆ ಬೇರೆಯ ಲಾಭವು ಎಂದಿಗೂ ಹೊಂದುವದಿಲ್ಲ. ಆದ್ದರಿಂದ ಆತ್ಮಲಾಭದ (ವಿಷಯ)ದಲ್ಲಿ ಜ್ಞಾನವೊಂದು ಹೊರತು ಮಿಕ್ಕ ಯಾವ ಸಾಧನವಾದರೂ ವ್ಯರ್ಥವೆಂದು ಮುಂದೆ[2] ತಿಳಿಸುವೆವು. ಆದ್ದರಿಂದ ಯಾವ ಶಂಕೆಯೂ ಇಲ್ಲದೆ ಜ್ಞಾನಲಾಭಗಳೆರಡಕ್ಕೂ ಒಂದೇ ಅರ್ಥವನ್ನು ಹೇಳಬೇಕೆಂದು (ಶ್ರುತಿಯು) ಜ್ಞಾನವು ಪ್ರಕೃತವಾಗಿದ್ದರೂ 'ಪಡೆದುಕೊಳ್ಳುತ್ತಾನೆ ಎಂದು ಹೇಳಿರುತ್ತದೆ. ಏಕೆಂದರೆ (ಇಲ್ಲಿ) ವಿದ್‌ಧಾತುವಿಗೆ ಲಾಭವೆಂದು ಅರ್ಥ.

## ಗುಣವಿಜ್ಞಾನಗಳ ಫಲವು

(ಭಾಷ್ಯ)

೧೪೬. ಗುಣವಿಜ್ಞಾನಫಲಮಿದಮುಚ್ಯತೇ| ಯಥಾ ಅಯಮಾತ್ಮಾ ನಾಮರೂಪಾನುಪ್ರವೇಶೇನ ಖ್ಯಾತಿಂ ಗತಃ ಆತ್ಮಾ ಇತ್ಯಾದಿನಾಮರೂಪಾಭ್ಯಾಮ್ ಪ್ರಾಣಾದಿಸಂಹತಿಂ ಚ ಶ್ಲೋಕಂ ಪ್ರಾಪ್ತವಾನ್ ಇತ್ಯೇವಂ ಯೋ ವೇದ

---

1. ಅಪ್ರಾಪ್ತನಲ್ಲವಾದ್ದರಿಂದ ಕ್ರಿಯಾಕಾರಕಗಳೆಂಬ ಸಾಧನದಿಂದ ಪಡೆದುಕೊಳ್ಳತಕ್ಕವನೂ ಅಲ್ಲ; ಆದ್ದರಿಂದ ಅವನ ಪ್ರಾಪ್ತಿಯು ಅನಿತ್ಯವೂ ಅಲ್ಲ.

2. ೪-೨-೧೧ರಲ್ಲಿ.

ಸ ಕೀರ್ತಿಂ ಖ್ಯಾತಿಂ ಶ್ಲೋಕಂ ಚ ಸಂಘಾತವಮ್ ಇಷ್ಟೈಃ ಸಹ ವಿನ್ದತೇ ಲಭತೇ। ಯದ್ವಾ ಯಥೋಕ್ತಂ ವಸ್ತು ಯೋ ವೇದ ಮುಮುಕ್ಷೂಣಾಮ್ ಅಪೇಕ್ಷಿತಂ ಕೀರ್ತಿಶಬ್ದಿತಮ್ ಐಕ್ಯಜ್ಞಾನಂ ತತ್ಫಲಂ ಶ್ಲೋಕಶಬ್ದಿತಾಂ ಮುಕ್ತಿಮ್ ಆಪ್ನೋತಿ ಇತಿ ಮುಖ್ಯಮೇವ ಫಲಮ್॥

(ಭಾಷ್ಯಾರ್ಥ)

ಗುಣವಿಜ್ಞಾನಕ್ಕೆ[1] ಈ ಫಲವನ್ನು ಹೇಳುತ್ತಾರೆ: ಹೇಗೆ ಈ ಆತ್ಮನು ನಾಮರೂಪಗಳನ್ನು ಒಳಹೊಕ್ಕು ಆತ್ಮನೇ ಮುಂತಾದ ನಾಮರೂಪಗಳಿಂದ ಖ್ಯಾತಿಯನ್ನು ಹೊಂದಿದನೋ[2] ಮತ್ತು ಪ್ರಾಣಾದಿಗಳೊಡನೆ ಸೇರಿಕೊಳ್ಳುವದೆಂಬ ಶ್ಲೋಕವನ್ನು (ಹೊಂದಿದನೋ ಹಾಗೆ) ಯಾವನು ಹೀಗೆಂದು ಅರಿತುಕೊಳ್ಳುವನೋ[3] ಅವನು ಕೀರ್ತಿಯನ್ನೂ ಖ್ಯಾತಿಯನ್ನೂ ಶ್ಲೋಕವನ್ನೂ ಎಂದರೆ ಇಷ್ಟರೊಡನೆ ಸೇರುವೆಯನ್ನೂ ಪಡೆದುಕೊಳ್ಳುತ್ತಾನೆ.[4]

ಅಥವಾ ಮೇಲೆ ಹೇಳಿದ (ಆತ್ಮ)ವಸ್ತುವನ್ನು ಯಾವನು ಅರಿತುಕೊಳ್ಳುವನೋ ಅವನು ಮುಮುಕ್ಷುಗಳಿಗೆ ಬೇಕಾಗಿರುವ ಕೀರ್ತಿಶಬ್ದವಾಚ್ಯವಾದ ಐಕ್ಯಜ್ಞಾನವನ್ನೂ ಅದರ ಫಲವಾದ ಶ್ಲೋಕಶಬ್ದವಾಚ್ಯವಾದ ಮುಕ್ತಿಯನ್ನೂ ಪಡೆದುಕೊಳ್ಳುತ್ತಾನೆ ಎಂದು ಮುಖ್ಯಫಲವನ್ನೇ ಇಲ್ಲಿ ಹೇಳಿದೆ[5] (ಎಂದು ವ್ಯಾಖ್ಯಾನಮಾಡಬಹುದು).

## ಆತ್ಮನು ನಿರತಿಶಯಪ್ರಿಯನೆಂಬ ಜ್ಞಾನ

(ಉಪನಿಷತ್ತು)

**ತದೇತತ್ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದನ್ತರತರಂ ಯದಯಮಾತ್ಮಾ। ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ ಪ್ರಿಯಗ್ಂ ರೋತ್ಸ್ಯತೀತೀಶ್ವರೋ ಹ ತಥೈವ ಸ್ಯಾದಾತ್ಮಾನ**

1. ಅಂಗವಿಜ್ಞಾನಕ್ಕೆ, ಆತ್ಮನ ನಾಮರೂಪಗಳಿಂದ ತೋರುವಿಕೆ ಮುಂತಾದದ್ದನ್ನು ಉಪಾಸನೆಮಾಡಿಕೊಂಡದ್ದಕ್ಕೆ.

2. ಆತ್ಮನು ಅವ್ಯಾಕೃತಸ್ಥಿತಿಯಲ್ಲಿ ತಿಳಿಯುವದಕ್ಕೆ ಬರುತ್ತಿರಲಿಲ್ಲ, ವ್ಯಾಕೃತಸ್ಥಿತಿಯಲ್ಲಿ ಆತ್ಮಾದಿನಾಮರೂಪಗಳಿಂದ ತಿಳಿಯುವದಕ್ಕೆ ಬಂದನು.

3. ಉಪಾಸನೆಮಾಡುವನೋ ಎಂದರ್ಥ.

4. ಇದು ಉಪಾಸಕನಿಗೆ ಆಗುವ ಫಲವು. ಏಕೆಂದರೆ ಮುಮುಕ್ಷುಗಳಿಗೆ ಇದೇನೂ ಬೇಕಿರುವದಿಲ್ಲ. ಪ್ರಕೃತವಾಗಿರುವ ಜ್ಞಾನವನ್ನು ಹೊಗಳುವದಕ್ಕೆ ಇದನ್ನು ಅರ್ಥವಾದನಾಗಿ ಉಪಯೋಗಿಸಿರುತ್ತದೆ.

5. ಇದು ಪ್ರಕೃತಜ್ಞಾನದ ಫಲವಾದ್ದರಿಂದ ಮುಖ್ಯಫಲವು. ಆತ್ಮನೇ ಕೃತ್ಸ್ನವು, ಅವನನ್ನು ಅರಿತರೇ ಎಲ್ಲವನ್ನೂ ಅರಿತಂತೆ ಎಂಬ ಜ್ಞಾನವೇ ಪರಮಾರ್ಥಜ್ಞಾನವು. ಅದರ ಫಲವನ್ನೇ ಇಲ್ಲಿ ಹೇಳಿದೆ.

**ಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯ ಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ ॥೮॥**

೮. ಆ ಇದು ಮಗನಿಗಿಂತ ಪ್ರೇಯಸ್ಸು, ವಿತ್ತಕ್ಕಿಂತ ಪ್ರೇಯಸ್ಸು, ಮಿಕ್ಕ ಎಲ್ಲಕ್ಕಿಂತಲೂ ಪ್ರೇಯಸ್ಸು ; ಮಿಕ್ಕೆಲ್ಲಕ್ಕಿಂತ ಒಳಗಿನದು, ಈ ಆತ್ಮವೆಂಬುದಿದೆಯಲ್ಲ (ಇದು). ಯಾವನು ಆತ್ಮನಿಗಿಂತ ಬೇರೆಯಾದದ್ದನ್ನು ಪ್ರಿಯವೆನ್ನುವವನನ್ನು (ಕುರಿತು) 'ಪ್ರಿಯವು ರೋಧಿಸುವದು' ಎಂದು ಹೇಳುವನೋ ಅವನು ಈಶ್ವರನೇ, ಹಾಗೆಯೇ ಆಗುವದು. ಆತ್ಮನನ್ನೇ ಪ್ರಿಯವೆಂದು ಉಪಾಸನೆಮಾಡಬೇಕು. ಯಾವನು ಆತ್ಮನನ್ನೇ ಪ್ರಿಯವೆಂದು ಉಪಾಸನೆಮಾಡುತ್ತಿರುವನೋ ಅವನಿಗೆ ಪ್ರಿಯವು ಪ್ರಮಾಯುಕವಾಗಿರುವದಿಲ್ಲ.

## ಆತ್ಮನು ಪ್ರಿಯತಮನಾದ್ದರಿಂದ ಅವನನ್ನೇ ಅರಿಯಬೇಕು

(ಭಾಷ್ಯ)

೧೪೭. ಕುತಶ್ಚ ಆತ್ಮತತ್ತ್ವಮೇವ ಜ್ಞೇಯಮ್ ಅನಾದೃತ್ಯಾನ್ಯತ್ ಇತಿ ? ಆಹ । ತದೇತತ್ ಆತ್ಮತತ್ತ್ವಂ ಪ್ರೇಯಃ ಪ್ರಿಯತರಂ ಪುತ್ರಾತ್ । ಪುತ್ರೋ ಹಿ ಲೋಕೇ ಪ್ರಿಯಃ ಪ್ರಸಿದ್ಧಃ । ತಸ್ಮಾದಪಿ ಪ್ರಿಯತರಮ್ ಇತಿ ನಿರತಿಶಯಪ್ರಿಯತ್ವಂ ದರ್ಶಯತಿ । ತಥಾ ವಿತ್ತಾತ್ ಹಿರಣ್ಯರತ್ನಾದೇಃ ತಥಾ ಅನ್ಯಸ್ಮಾತ್ ಯದ್ಯಲ್ಲೋಕೇ ಪ್ರಿಯತ್ವೇನ ಪ್ರಸಿದ್ಧಂ ತಸ್ಮಾತ್ ಸರ್ವಸ್ಮಾತ್ ಇತ್ಯರ್ಥಃ । ತತ್ ಕಸ್ಮಾತ್ ಆತ್ಮತತ್ತ್ವಮೇವ ಪ್ರಿಯತರಂ ನ ಪ್ರಾಣಾದಿ ಇತಿ ? ಉಚ್ಯತೇ । ಅನ್ತರತರಮ್ । ಬಾಹ್ಯಾತ್ ಪುತ್ರವಿತ್ತಾದೇಃ। ಪ್ರಾಣಪಿಣ್ಡಸಮುದಾಯೋ ಹಿ ಅನ್ತರೋಽಭ್ಯನ್ತರಃ ಸಂನಿಕೃಷ್ಟ ಆತ್ಮನಃ । ತಸ್ಮಾದಪಿ ಅನ್ತರಾತ್ ಅನ್ತರತರಂ ಯದಯಮಾತ್ಮಾ ಯದೇತದಾತ್ಮತತ್ತ್ವಮ್ । ಯೋ ಹಿ ಲೋಕೇ ನಿರತಿಶಯಪ್ರಿಯಃ ಸ ಸರ್ವಪ್ರಯತ್ನೇನ ಲಬ್ಧವ್ಯೋ ಭವತಿ । ತಥಾ ಅಯಮಾತ್ಮಾ ಸರ್ವಲೌಕಿಕಪ್ರಿಯೇಭ್ಯಃ ಪ್ರಿಯತಮಃ । ತಸ್ಮಾತ್ ತಲ್ಲಾಭೇ ಮಹಾನ್ ಯತ್ನಃ ಆಸ್ಥೇಯಃ ಇತ್ಯರ್ಥಃ । ಕರ್ತವ್ಯತಾಪ್ರಾಪ್ತಮಪಿ ಅನ್ಯಪ್ರಿಯಲಾಭೇ ಯತ್ನಮ್ ಉಜ್ಝಿತ್ವಾ ॥

(ಭಾಷ್ಯಾರ್ಥ)

ಮಿಕ್ಕದ್ದನ್ನು ಅನಾದರಮಾಡಿ ಆತ್ಮತತ್ತ್ವವನ್ನೇ ಅರಿತುಕೊಳ್ಳಬೇಕೆಂಬುದು ಮತ್ತೂ ಏತರಿಂದ? ಎಂದರೆ (ಅದಕ್ಕೆ ಶ್ರುತಿ) ಹೇಳುತ್ತದೆ.[1] ಆ ಈ

1. ಇಲ್ಲಿ ಸೃಷ್ಟಿಯನ್ನು ಹೇಳಿರುವದು ಆತ್ಮಜ್ಞಾನಕ್ಕಾಗಿ ; ನಾಮರೂಪಗಳಲ್ಲಿರುವ ಆಸಕ್ತಿಯೇ ಜ್ಞಾನಕ್ಕೆ ಅಡ್ಡಿಯಾಗಿರುವದರಿಂದ ಅದರಿಂದ ಹಿಂತಿರುಗಿಸಿ ಆತ್ಮನಲ್ಲಿ ಪ್ರೀತಿಯನ್ನುಂಟುಮಾಡುವದಕ್ಕಾಗಿ ಮುಂದಿನ ಗ್ರಂಥವು ಬಂದಿದೆ ಎಂದು ಭರ್ತೃಪ್ರಪಂಚರ ಅವತರಣಿಕೆ. ವಾರ್ತಿಕದಲ್ಲಿ ಅದನ್ನೂ ಅಂಗೀಕರಿಸಿದೆ.

ಆತ್ಮತತ್ತ್ವವು ಮಗನಿಗಿಂತಲೂ ಪ್ರೇಯಸ್ಸು ಹೆಚ್ಚು ಪ್ರಿಯವಾದದ್ದು. ಲೋಕದಲ್ಲಿ ಮಗನು ಪ್ರಿಯನೆಂಬುದು ಪ್ರಸಿದ್ಧವು; ಅದಕ್ಕಿಂತಲೂ ಹೆಚ್ಚು ಪ್ರಿಯವಾದದ್ದು ಎಂದು (ಇದು) ಮಿಗಿಲಿಲ್ಲದಷ್ಟು ಪ್ರಿಯವೆಂಬುದನ್ನು ತಿಳಿಸಿರುತ್ತದೆ. ಇದರಂತೆ ವಿತ್ತಕ್ಕಿಂತ ಹಿರಣ್ಯರತ್ನಾದಿಗಳಿಗಿಂತ (ಪ್ರಿಯತರವಾದದ್ದು), ಮಿಕ್ಕ (ಎಲ್ಲಕ್ಕಿಂತಲೂ) ಯಾವಯಾವದು ಲೋಕದಲ್ಲಿ ಪ್ರಿಯವೆಂದು ಪ್ರಸಿದ್ಧವಾಗಿರುವದೋ ಅದೆಲ್ಲಕ್ಕಿಂತಲೂ (ಪ್ರಿಯತರವಾದದ್ದು) ಎಂದರ್ಥ.

ಈ ಆತ್ಮತತ್ತ್ವವೇ ಪ್ರಿಯತರವಾದದ್ದು, ಪ್ರಾಣಾದಿಗಳಲ್ಲ ಎಂಬುದು ಏತರಿಂದ? ಎಂದರೆ (ಶ್ರುತಿ) ಹೇಳುತ್ತದೆ. ಅಂತರತರವು– ಹೊರಗಿನ ಪುತ್ರವಿತ್ತಾದಿಗಳಿಗಿಂತಲೂ ಪ್ರಾಣಪಿಂಡಸಮುದಾಯವು[1] ಒಳಗಿನದು, ಒಳಗಿರುತ್ತದೆ, ಆತ್ಮನಿಗೆ ಸಮೀಪವಾಗಿರುತ್ತದೆ. ಒಳಗಿರುವ ಅದಕ್ಕಿಂತಲೂ– ಈ ಆತ್ಮನೆಂಬುದು, ಈ ಆತ್ಮತತ್ತ್ವವೆಂಬುದು, ಅಂತರತರವಾಗಿರುತ್ತದೆ.[2] ಲೋಕದಲ್ಲಿ ಯಾವದು ಇನ್ನಿಲ್ಲವೆನ್ನುವಷ್ಟು ಪ್ರಿಯವಾಗಿರುವದೋ ಅದು ಸರ್ವಪ್ರಯತ್ನದಿಂದಲೂ ಪಡೆಯತಕ್ಕದ್ದಾಗಿರುತ್ತದೆ. ಇದರಂತೆ ಈ ಆತ್ಮನು ಲೌಕಿಕಪ್ರಿಯಗಳೆಲ್ಲಕ್ಕಿಂತಲೂ ಪ್ರಿಯತಮನಾಗಿರುತ್ತಾನೆ ಆದ್ದರಿಂದ ಅವನ ಲಾಭಕ್ಕಾಗಿ ಬೇರೊಂದು ಪ್ರಿಯ(ವಸ್ತುವಿನ) ಲಾಭಕ್ಕಾಗಿ ಯತ್ನವನ್ನು ಮಾಡಬೇಕೆಂದು ಒದಗಿದ್ದರೂ (ಅದನ್ನು) ಬಿಟ್ಟು ಹೆಚ್ಚಿನ ಯತ್ನವನ್ನು ಮಾಡಬೇಕು ಎಂದರ್ಥ.

## ಅನಾತ್ಮವು ನಿಜವಾಗಿ ಪ್ರಿಯವಲ್ಲ

(ಭಾಷ್ಯ)

೧೪೮. ಕಸ್ಮಾತ್ ಪುನಃ ಆತ್ಮಾನಾತ್ಮಪ್ರಿಯಯೋಃ ಅನ್ಯತರಪ್ರಿಯಹಾನೇನ ಇತರಪ್ರಿಯೋಪಾದಾನಪ್ರಾಪ್ತೌ ಆತ್ಮಪ್ರಿಯೋಪಾದಾನೇನೈವ ಇತರಹಾನಂ ಕ್ರಿಯತೇ, ನ ವಿಪರ್ಯಯಃ ಇತಿ? ಉಚ್ಯತೇ । ಸ ಯಃ ಕಶ್ಚಿತ್ ಅನ್ಯಮ್ ಅನಾತ್ಮವಿಶೇಷಮ್, ಪುತ್ರಾದಿಕಂ ಪ್ರಿಯತರಮ್ ಆತ್ಮನಃ ಸಕಾಶಾದ್ ಬ್ರುವಾಣಂ ಬ್ರೂಯಾತ್ ಆತ್ಮಪ್ರಿಯವಾದೀ । ಕಿಮ್? ಪ್ರಿಯಂ ತವಾಭಿಮತಂ ಪುತ್ರಾದಿಲಕ್ಷಣಂ ರೋತ್ಸ್ಯತಿ ಆವರಣಂ ಪ್ರಾಣಸಂರೋಧಂ ಪ್ರಾಪ್ಸ್ಯತಿ

---

1. ಶರೀರೇಂದ್ರಿಯಗಳ ಸಮೂಹವು ಎಂದರ್ಥ. ವಿತ್ತಕ್ಕಿಂತ ಪುತ್ರ, ಪುತ್ರನಿಗಿಂತ ದೇಹ, ದೇಹಕ್ಕಿಂತ ಇಂದ್ರಿಯ, ಇಂದ್ರಿಯಗಳಿಗಿಂತ ಪ್ರಾಣ, ಪ್ರಾಣಕ್ಕಿಂತ ಆತ್ಮ–ಹೀಗೆ ಒಂದಕ್ಕಿಂತ ಒಂದು ಅಂತರ, ಪ್ರಿಯ. ಆತ್ಮನು ಎಲ್ಲಕ್ಕಿಂತಲೂ ಪ್ರಿಯ. ಬೃ. ವಾ.

2. ಆತ್ಮತತ್ತ್ವವು ಎಲ್ಲಕ್ಕಿಂತಲೂ ಅಂತರತರವೆಂಬುದನ್ನು ಅಕ್ಷರಬ್ರಾಹ್ಮಣದಲ್ಲಿ ಹೇಳಿದೆ. ಬೃ. ವಾ.

ವಿನಙ್ಕ್ಷ್ಯತಿ ಇತಿ । ಸ ಕಸ್ಮಾದೇವಂ ಬ್ರವೀತಿ ? ಯಸ್ಮಾತ್ ಈಶ್ವರಃ ಸಮರ್ಥಃ ಪರ್ಯಾಪ್ತಃ ಅಸೌ ಏವಂ ವಕ್ತುಂ ಹ ಯಸ್ಮಾತ್, ತಸ್ಮಾತ್ ತಥೈವ ಸ್ಯಾತ್ ಯತ್ ತೇನೋಕ್ತಮ್ । ಪ್ರಾಣಸಂರೋಧಂ ಪ್ರಾಪ್ಸ್ಯತಿ । ಯಥಾಭೂತ ವಾದೀ ಹಿ ಸಃ । ತಸ್ಮಾತ್ ಸ ಈಶ್ವರೋ ವಕ್ತುಮ್ । ಈಶ್ವರಶಬ್ದಃ ಕ್ಷಿಪ್ರ ವಾಚೀ ಇತಿ ಕೇಚಿತ್ । ಭವೇದ್ ಯದಿ ಪ್ರಸಿದ್ಧಿಃ ಸ್ಯಾತ್ । ತಸ್ಮಾತ್ ಉಜ್ಝಿತ್ವಾ ಅನ್ಯತ್ ಪ್ರಿಯಮ್ ಆತ್ಮಾನಮೇವ ಪ್ರಿಯಮುಪಾಸೀತ । ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ಆತ್ಮೈವ ಪ್ರಿಯೋ ನಾನ್ಯೋಽಸ್ತಿ ಇತಿ ಪ್ರತಿಪದ್ಯತೇ ಅನ್ಯತ್ ಲೌಕಿಕಂ ಪ್ರಿಯಮಪಿ ಅಪ್ರಿಯಮೇವೇತಿ ನಿಶ್ಚಿತ್ಯ ಉಪಾಸ್ತೇ ಚಿನ್ತಯತಿ ನ ಹಾಸ್ಯ ಏವಂವಿದಃ ಪ್ರಿಯಂ ಪ್ರಮಾಯುಕಂ ಪ್ರಮರಣಶೀಲಂ ಭವತಿ । ನಿತ್ಯಾನುವಾದಮಾತ್ರಮೇತತ್ । ಆತ್ಮವಿದೋಽನ್ಯಸ್ಯ ಪ್ರಿಯಸ್ಯ ಅಪ್ರಿಯಸ್ಯ ಚ ಅಭಾವಾತ್ । ಆತ್ಮಪ್ರಿಯಗ್ರಹಣಸ್ತುತ್ಯರ್ಥಂ ವಾ । ಪ್ರಿಯಗುಣಫಲವಿಧಾನಾರ್ಥಂ ವಾ ಮನ್ದಾತ್ಮದರ್ಶಿನಃ । ತಾಚ್ಛೀಲ್ಯಪ್ರತ್ಯಯೋ ಪಾದಾನಾತ್ ॥

(ಭಾಷ್ಯಾರ್ಥ)

ಹಾಗಾದರೆ ಆತ್ಮ, ಅನಾತ್ಮ - ಎಂಬ (ಎರಡು) ಪ್ರಿಯಗಳಲ್ಲಿ ಒಂದು ಪ್ರಿಯವನ್ನು ಬಿಟ್ಟು ಇನ್ನೊಂದು ಪ್ರಿಯವನ್ನು ತೆಗೆದುಕೊಳ್ಳಬೇಕಾಗಿ ಬಂದಿರುವಾಗ ಆತ್ಮನೆಂಬ ಪ್ರಿಯವನ್ನು ತೆಗೆದುಕೊಳ್ಳುವದರಿಂದಲೇ ಇನ್ನೊಂದು (ಪ್ರಿಯವನ್ನು) ತ್ಯಾಗಮಾಡುವದೇಕೆ ? (ಇದಕ್ಕೆ) ವಿಪರೀತ (ವಾಗಿ ಮಾಡುವದಿಲ್ಲವೇಕೆ) ? ಎಂದರೆ (ಶ್ರುತಿ) ಹೇಳುತ್ತದೆ. ಬೇರೊಂದು ಅನಾತ್ಮವಿಶೇಷವಾದ ಪುತ್ರನೇ ಮುಂತಾದದ್ದನ್ನು ಆತ್ಮನಿಗಿಂತ ಪ್ರಿಯತರ ವೆಂದು ಹೇಳುವವನಿಗೆ ಯಾವನೋ ಒಬ್ಬ ಆತ್ಮಪ್ರಿಯವಾದಿಯು ಹೇಳುವನೋ ಏನೆಂದು ? 'ನಿನಗೆ ಅಭಿಮತವಾದ ಪುತ್ರಾದಿರೂಪವಾದ ಪ್ರಿಯವು ರೋಧಿಸು ವದು, ಆವರಣವನ್ನು, ಪ್ರಾಣಸಂರೋಧವನ್ನು ಪಡೆಯುವದು, ನಾಶವಾಗು ವದು ಎಂದು, ಅವನು ಏತಕ್ಕೆ ಹೀಗೆ ಹೇಳುವನು ? ಏಕೆಂದರೆ (ಅವನು) ಈಶ್ವರ ನು, ಸಮರ್ಥನು. ಹೀಗೆಂದು ಹೇಳುವದಕ್ಕೆ ಶಕ್ತನೇ. ಹೀಗಿರುವದಲ್ಲ, ಆದ್ದರಿಂದ ಪ್ರಾಣಸಂರೋಧವನ್ನು ಪಡೆಯುವದು ಎಂದು ಅವನು ಹೇಳಿದ್ದನಷ್ಟೆ, ಹಾಗೆಯೇ ಆಗುವದು. ಏಕೆಂದರೆ ಅವನು ಇದ್ದದ್ದು ಇದ್ದಂತೆ ಹೇಳುವವನು. ಆದ್ದರಿಂದ (ಹಾಗೆಂದು) ಹೇಳುವದಕ್ಕೆ ಈಶ್ವರನು. ಇಲ್ಲಿರುವ ಈಶ್ವರಶಬ್ದವು ಕ್ಷಿಪ್ರವೆಂಬುದನ್ನು ಹೇಳುತ್ತದೆ ಎಂದು ಕೆಲವರು[1] (ಅಭಿಪ್ರಾಯಪಟ್ಟಿರುತ್ತಾರೆ. ಆ ಅರ್ಥವಾಚಕತ್ವವು) ಪ್ರಸಿದ್ಧವಾಗಿದ್ದರೆ (ಹಾಗೂ) ಆಗಬಹುದಿತ್ತು. ಆದ್ದ

1. ಇವರು ಯಾರೆಂಬುದನ್ನು ವ್ಯಾಖ್ಯಾನಕಾರರೂ ತಿಳಿಸಿಲ್ಲ.

ರಿಂದ ಮತ್ತೊಂದು ಪ್ರಿಯವನ್ನು ಬಿಟ್ಟು ಆತ್ಮನೆಂಬ ಪ್ರಿಯವನ್ನೇ ಉಪಾಸನೆ ಮಾಡಬೇಕು.

ಯಾವನು ಆತ್ಮನೆಂಬ ಪ್ರಿಯವನ್ನೇ ಉಪಾಸನೆಮಾಡುತ್ತಾನೋ, ಆತ್ಮನೇ ಪ್ರಿಯನು, ಪುತ್ರೊಂದಲ್ಲ, ಬೇರೆಯಾದ ಲೌಕಿಕ(ವಸ್ತು) ಪ್ರಿಯವಾಗಿದ್ದರೂ (ಅದು ನಿಜವಾಗಿ) ಅಪ್ರಿಯವೇ ಎಂದು ನಿಶ್ಚಯಿಸಿ ಉಪಾಸನೆ ಮಾಡುತ್ತಾನೋ ಚಿಂತಿಸುತ್ತಿರುವನೋ, ಅವನಿಗೆ ಹೀಗೆಂದು ಅರಿತಿರುವವನಿಗೆ ಪ್ರಿಯವು ಪ್ರಮಾಯುಕವಾಗಿರುವದಿಲ್ಲ, ಸಾಯುವ ಸ್ವಭಾವದ್ದಾಗಿರುವದಿಲ್ಲ, ಇದು ನಿತ್ಯಾನುವಾದವೇ; ಏಕೆಂದರೆ ಆತ್ಮಜ್ಞಾನಿಗೆ ಮತ್ತೊಂದು ಪ್ರಿಯವಾಗಲಿ ಅಪ್ರಿಯವಾಗಲಿ ಇರುವದಿಲ್ಲ[1]. ಅಥವಾ ಆತ್ಮನೇ ಪ್ರಿಯನೆಂದು ಅರಿತದ್ದರ ಸ್ತುತ್ಯರ್ಥವಾಗಿ (ಹೇಳಿದ್ದು ಎಂದೂ ಹೇಳಬಹುದು)[2]. ಅಲ್ಪಜ್ಞನಾದ ಆತ್ಮದರ್ಶಿಗೆ(ಆತ್ಮನಲ್ಲಿ) ಪ್ರಿಯನೆಂದು (ತಿಳಿದು) ಗುಣವನ್ನು (ಉಪಾಸನೆ ಮಾಡಿದ್ದರ) ಫಲವಿಧಾನಕ್ಕಾಗಿ (ಬಂದಿದೆ) ಎಂದಾದರೂ ಹೇಳಬಹುದು. ಏಕೆಂದರೆ ಇಲ್ಲಿ (ಉಕ ಎಂಬ) ತಾಚ್ಛೀಲ್ಯಪ್ರತ್ಯಯವನ್ನು ಉಪಯೋಗಿಸಿರುತ್ತದೆ[3].

## ಬ್ರಹ್ಮವು ಸರ್ವಾತ್ಮಕವಾದದ್ದು ಏತರಿಂದ ?

(ಉಪನಿಷತ್ತು)

**ತದಾಹುರ್ಯದ್ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯನ್ತೋ ಮನುಷ್ಯಾ ಮನ್ಯನ್ತೇ । ಕಿಮು ತದ್ಬ್ರಹ್ಮಾವೇದ್ ಯಸ್ಮಾತ್ ತತ್ಸರ್ವಮಭವದಿತಿ ॥ ೯ ॥**

1. ಆತ್ಮಜ್ಞಾನಿಯ ದೃಷ್ಟಿಯಲ್ಲಿ ಆತ್ಮನಿಗಿಂತ ಬೇರೊಂದು ವಸ್ತುವೇ ಇಲ್ಲದ್ದರಿಂದ ಅವನಿಗೆ ಸಾಯತಕ್ಕ ಪ್ರಿಯವು ಇರುವದಿಲ್ಲವೆಂದು ತಾನೇ ಸಿದ್ಧವಾಗಿರುತ್ತದೆ; ಅದನ್ನು ಹೊಸದಾಗಿ ಹೇಳಬೇಕಾದದ್ದೇನೂ ಇರುವದಿಲ್ಲ, ಪ್ರಿಯಾಪ್ರಿಯಗಳೆರಡೂ ಆತ್ಮನಲ್ಲಿ ಕಲ್ಪಿತವಾಗಿರುತ್ತವೆ.

2. ಇದು ಜ್ಞಾನಸ್ತುತಿಗಾಗಿ ಬಂದಿರುವ ಅರ್ಥವಾದವೆಂದು ಭಾವ. ಆತ್ಮನೇ ಪ್ರಿಯನು, ಅನಾತ್ಮವು ಅಪ್ರಿಯವು ಎಂದು ತಿಳಿದವನಿಗೆ ಸಾಯುವ ಪ್ರಿಯವಿರುವದಿಲ್ಲ ಎಂದರ್ಥ.

3. ಆತ್ಮನು ಪ್ರಿಯನು ಎಂದು ಉಪಾಸನೆಮಾಡಿದವನಿಗೆ ಪ್ರಿಯವಾದದ್ದು ಬಹುಕಾಲ ನಾಶವಾಗದೆ ಇರುತ್ತದೆ ಎಂದರ್ಥ. ಪ್ರಮಾಯುಕವೆಂಬುದು ಸಾಯುವ ಸ್ವಭಾವವುಳ್ಳದ್ದು ಎಂಬರ್ಥದಲ್ಲಿ ಉಪಯೋಗಿಸತಕ್ಕ ಶಬ್ದವು. ಆತ್ಮನೇ ಪ್ರಿಯವೆಂಬ ಪಕ್ಷದಲ್ಲಿ ಇದು ಹೊಂದಿಯೇಹೊಂದುತ್ತದೆಯಾದ್ದರಿಂದ ಉಪಾಸನೆಯಿಂದ ದೊರೆಯತಕ್ಕ ಫಲವನ್ನು ಹೇಳುವದಕ್ಕಾಗಿ ಸಾಯುವ ಸ್ವಭಾವದ ಪ್ರಾಣಾದಿಗಳೂ ಬಹುಕಾಲವಿರುತ್ತವೆ ಎಂಬರ್ಥವನ್ನು ಮಾಡಬೇಕಾಗುವದು ಎಂದರ್ಥ.

೯. ಇದನ್ನು ಹೇಳುವರು. ಬ್ರಹ್ಮವಿದ್ಯೆಯಿಂದ ಎಲ್ಲವೂ ಆಗುವೆವೆಂದು ಮನುಷ್ಯರು ತಿಳಿದುಕೊಂಡಿರುವರಲ್ಲ, ಆ ಬ್ರಹ್ಮವು ಏನು ಅರಿತುಕೊಂಡಿತು ? ಯಾವದರಿಂದ ಅದು ಎಲ್ಲವೂ ಆಯಿತೋ (ಅದು ಯಾವದು) ?

## ಬ್ರಹ್ಮವಿದ್ಯಾಪ್ರಯೋಜನಕ್ಕೆ ಅವತರಣಿಕೆ

(ಭಾಷ್ಯ)

೧೪೯. ಸೂತ್ರಿತಾ ಬ್ರಹ್ಮವಿದ್ಯಾ ಆತ್ಮೇತ್ಯೇವೋಪಾಸೀತ ಇತಿ। ಯದರ್ಥಾ ಉಪನಿಷತ್ ಕೃತ್ಸ್ನಾಪಿ। ತಸ್ಯೈತಸ್ಯ ಸೂತ್ರಸ್ಯ ವ್ಯಾಚಿಖ್ಯಾಸುಃ ಪ್ರಯೋಜನಾಭಿಧಿತ್ಸಯಾ ಉಪೋದ್ಘಾತಂ ಕರೋತಿ। ತದಿತಿ ವಕ್ಷ್ಯಮಾಣಮ್ ಅನನ್ತರವಾಕ್ಯೇ ಅವದ್ಯೋತ್ಯಂ ವಸ್ತು ಆಹುಃ ಬ್ರಾಹ್ಮಣಾ ಬ್ರಹ್ಮವಿವಿದಿಷವಃ, ಜನ್ಮಜರಾಮರಣಪ್ರಬನ್ಧಚಕ್ರಭ್ರಮಣಕೃತಾಯಾಸದುಃಖೋದಕಾಪಾರ ಮಹೋದಧಿಪ್ಲವಭೂತಂ ಗುರುಮ್ ಆಸಾದ್ಯ ತತ್ತೀರಮ್ ಉತ್ತಿತೀರ್ಷವಃ, ಧರ್ಮಾಧರ್ಮಸಾಧನತತ್ಫಲಲಕ್ಷಣಾತ್ ಸಾಧ್ಯಸಾಧನರೂಪಾತ್ ನಿರ್ವಿಣ್ಣಾಃ, ತದ್ವಿಲಕ್ಷಣನಿತ್ಯನಿರತಿಶಯಶ್ರೇಯಃಪ್ರತಿಪಿತ್ಸವಃ। ಕಿಮಾಹುರಿತಿ ? ಆಹ। ಯದ್ಬ್ರಹ್ಮವಿದ್ಯಯಾ। ಬ್ರಹ್ಮ ಪರಮಾತ್ಮಾ ತತ್ ಯಯಾ ವೇದ್ಯತೇ ಸಾ ಬ್ರಹ್ಮವಿದ್ಯಾ। ತಯಾ ಬ್ರಹ್ಮವಿದ್ಯಯಾ ಸರ್ವಂ ನಿರವಶೇಷಂ ಭವಿಷ್ಯನ್ತೋ ಭವಿಷ್ಯಾಮಃ ಇತ್ಯೇವಂ ಮನುಷ್ಯಾಃ ಯತ್ ಮನ್ಯನ್ತೇ। ಮನುಷ್ಯಗ್ರಹಣಂ ವಿಶೇಷತೋಽಧಿಕಾರಜ್ಞಾಪನಾರ್ಥಮ್। ಮನುಷ್ಯಾ ಏವ ಹಿ ವಿಶೇಷತೋಽಭ್ಯುದಯನಿಃಶ್ರೇಯಸಸಾಧನೇ ಅಧಿಕೃತಾಃ ಇತ್ಯಭಿಪ್ರಾಯಃ। ಯಥಾ ಕರ್ಮವಿಷಯೇ ಫಲಪ್ರಾಪ್ತಿಂ ಧ್ರುವಾಂ ಕರ್ಮಭ್ಯೋ ಮನ್ಯನ್ತೇ ತಥಾ ಬ್ರಹ್ಮವಿದ್ಯಾಯಾಃ ಸರ್ವಾತ್ಮಭಾವಫಲಪ್ರಾಪ್ತಿಂ ಧ್ರುವಾಮೇವ ಮನ್ಯನ್ತೇ। ವೇದಪ್ರಾಮಾಣ್ಯಸ್ಯ ಉಭಯತ್ರ ಅವಿಶೇಷಾತ್। ತತ್ರ ವಿಪ್ರತಿಷಿದ್ಧಂ ವಸ್ತು ಲಕ್ಷ್ಯತೇ, ಅತಃ ಪೃಚ್ಛಾಮಃ। ಕಿಮು ತದ್ ಬ್ರಹ್ಮ ಯಸ್ಯ ವಿಜ್ಞಾನಾತ್ ಸರ್ವಂ ಭವಿಷ್ಯನ್ತೋ ಮನುಷ್ಯಾ ಮನ್ಯನ್ತೇ ತತ್ ಕಿಮ್ ಅವೇದ್ ಯಸ್ಮಾತ್ ವಿಜ್ಞಾನಾತ್ ತದ್ ಬ್ರಹ್ಮ ಸರ್ವಮಭವತ್। ಬ್ರಹ್ಮ ಚ ಸರ್ವಮ್ ಇತಿ ಶ್ರೂಯತೇ। ತದ್ ಯದಿ ಅವಿಜ್ಞಾಯ ಕಿಂಚಿತ್ ಸರ್ವಮ್ ಅಭವತ್ ತಥಾ ಅನ್ಯೇಷಾಮಪ್ಯಸ್ತು ಕಿಂ ಬ್ರಹ್ಮವಿದ್ಯಯಾ ? ಅಥ ವಿಜ್ಞಾಯ ಸರ್ವಮ್ ಅಭವತ್ ವಿಜ್ಞಾನಸಾಧ್ಯತ್ವಾತ್ ಕರ್ಮಫಲೇನ ತುಲ್ಯಮೇವ ಇತಿ ಅನಿತ್ಯತ್ವಪ್ರಸಙ್ಗಃ ಸರ್ವಭಾವಸ್ಯ ಬ್ರಹ್ಮವಿದ್ಯಾಫಲಸ್ಯ। ಅನವಸ್ಥಾದೋಷಶ್ಚ। ತದಪಿ ಅನ್ಯದ್ ವಿಜ್ಞಾಯ ಸರ್ವಮಭವತ್, ತತಃ ಪೂರ್ವಮಪಿ ಅನ್ಯದ್ ವಿಜ್ಞಾಯ ಇತಿ। ನ ತಾವದವಿಜ್ಞಾಯ ಸರ್ವಮಭವತ್। ಶಾಸ್ತ್ರಾರ್ಥವೈರೂಪ್ಯ

ದೋಷಾತ್ । ಫಲಾನಿತ್ಯತ್ವದೋಷಸ್ತರ್ಹಿ । ನೈಕೋಽಪಿ ದೋಷಃ । ಅರ್ಥ ವಿಶೇಷೋಪಪತ್ತೇಃ ॥

(ಭಾಷ್ಯಾರ್ಥ)

"ಆತ್ಮನೆಂದೇ ಉಪಾಸನೆಮಾಡಬೇಕು" ಎಂಬ ಬ್ರಹ್ಮವಿದ್ಯೆಯನ್ನು ಸೂತ್ರ(ರೂಪ)ವಾಗಿ ಹೇಳಿದ್ದಾಯಿತು. ಆ (ಬ್ರಹ್ಮವಿದ್ಯೆಯನ್ನು ತಿಳಿಸು)ವದಕ್ಕಾಗಿಯೇ (ಈ) ಉಪನಿಷತ್ತೆಲ್ಲವೂ (ಬಂದಿರುತ್ತದೆ). ಈ ಸೂತ್ರವನ್ನು[1] ವ್ಯಾಖ್ಯಾನಮಾಡಬೇಕೆಂದು (ಬ್ರಹ್ಮವಿದ್ಯೆಯ) ಪ್ರಯೋಜನವನ್ನು[2] ಹೇಳುವ ಇಚ್ಛೆಯಿಂದ (ವೇದವು ಅದಕ್ಕೆ) ಉಪೋದ್ಘಾತವನ್ನು ಹೇಳುವದಕ್ಕೆ ಹೊರಟಿದೆ.

ಇಲ್ಲಿ 'ಇವನ್ನು' ಎಂದರೆ ಮುಂದಿನ ವಾಕ್ಯದಲ್ಲಿ ತಿಳಿಸುವ ವಸ್ತುವನ್ನು ; ಬ್ರಹ್ಮವನ್ನು ಅರಿತುಕೊಳ್ಳಲೆಳಸಿರುವ ಬ್ರಾಹ್ಮಣರು, ಹುಟ್ಟು, ಮುಪ್ಪು, ಸಾವು -ಇವುಗಳು ಒಂದರ ಹಿಂದೊಂದು ಬರುವ ಚಕ್ರದ ಸುತ್ತಿನಿಂದಾಗುವ ಆಯಾಸ ನೆಂಬ ದುಃಖೋದಕ(ದಿಂದ ತುಂಬಿದ) ಅಪಾರವಾದ ಸಾಗರಕ್ಕೆ ದೋಣಿ ಯಂತಿರುವ ಗುರುವನ್ನು ಹೊಂದಿ ಅದರ ದಡವನ್ನು ಪಾರುಗಾಣಬೇಕೆಂಬ ಇಚ್ಛೆಯುಳ್ಳವರಾಗಿ ಧರ್ಮಾಧರ್ಮಗಳೆಂಬ ಸಾಧನ ಮತ್ತು ಅದರ ಫಲ ಎಂಬ ಸಾಧ್ಯಸಾಧನರೂಪವಾಗಿರುವ (ಸಂಸಾರಕ್ಕೆ) ಬೇಸತ್ತು ಅದಕ್ಕಿಂತ ವಿಲಕ್ಷಣ ವಾಗಿರುವ ನಿತ್ಯವೂ ನಿರತಿಶಯವೂ ಆದ ಶ್ರೇಯಸ್ಸನ್ನು ಪಡೆದುಕೊಳ್ಳ ಬೇಕೆಂಬ ಇಚ್ಛೆಯಿಂದ ಹೇಳುತ್ತಾರೆ[3].

ಏನೆಂದು ಹೇಳುತ್ತಾರೆ ? ಎಂದರೆ (ಶ್ರುತಿ) ಹೇಳುತ್ತದೆ. ಬ್ರಹ್ಮವಿದ್ಯೆ ಯಿಂದ ಬ್ರಹ್ಮವೆಂದರೆ ಪರಮಾತ್ಮನು ; ಆ (ಬ್ರಹ್ಮವು) ಯಾವದರಿಂದ ತಿಳಿಯ ಬರುತ್ತದೆಯೋ ಅದು ಬ್ರಹ್ಮವಿದ್ಯೆ, ಆ ಬ್ರಹ್ಮವಿದ್ಯೆಯಿಂದ -ಎಲ್ಲವೂ ಒಂದೂ

---

1. ಇಲ್ಲಿ "ತದ್ಧ" (೧-೪-೭) ಎಂಬುದೂ 'ತದೇತತ್' (೧-೪-೮) ಎಂಬುದೂ ಸೂತ್ರವು, ಆರಣ್ಯಕದ ತೃತೀಯಾಧ್ಯಾಯವೆಲ್ಲ ಅದರ ವಿವರವು; ಅಥವಾ ಮೂರನೆಯ ನಾಲ್ಕನೆಯ ಅಧ್ಯಾಯಗಳೆರಡೂ ಸೂತ್ರವು, ಮಿಕ್ಕದ್ದೆಲ್ಲ ಅದರ ವಿವರ -ಎಂದು ವಾರ್ತಿಕಕಾರರು (೧೦೬೪) ತಮ್ಮ ಅಭಿಪ್ರಾಯವನ್ನು ಕೊಟ್ಟಿರುತ್ತಾರೆ. ಅವ್ಯಾಕೃತವ್ಯಾಕರಣ, ಪ್ರವೇಶ, ಆತ್ಮನ್ನೇ ತಿಳಿಯಬೇಕು, ಅದೇ ಪದನೀಯ, ಅದೇ ಪ್ರಿಯತಮ -ಎಂದು ಐದು ಸೂತ್ರಗಳು ಎಂಬ ಭರ್ತೃಪ್ರಪಂಚರ ಮತವನ್ನೂ ಒಪ್ಪಿರುತ್ತಾರೆ (೧೦೬೬). ಆದರೆ ಭಾಷ್ಯಕಾರರ ಮತವು ಉಪನಿಷತ್ತಿಗೆಲ್ಲ ಹೊಂದುವ ಸೂತ್ರವನ್ನು ಕೊಟ್ಟಿರುತ್ತದೆಯೆಂದು ತೋರುತ್ತದೆ.

2. ಸರ್ವಾತ್ಮಭಾವವನ್ನು.

3. ಮುಮುಕ್ಷುಗಳಾದವರು ತತ್ತ್ವದರ್ಶಿಗಳಾದ ಗುರುಗಳನ್ನು ಹೀಗೆ ಕೇಳಬೇಕೆಂದು ಸೂಚಿಸುವದಕ್ಕಾಗಿ ಇಲ್ಲಿ ವಿಶೇಷಣಗಳನ್ನು ಪ್ರಯೋಗಿಸಿದೆ. ಗೀ. ಭಾ. ೪-೩೪ ನೋಡಿ.

ಉಳಿಯದಂತೆ (ಎಲ್ಲವೂ) ಆಗುವವರಾಗಿ, ಆಗುವೆವೆಂದು ಎಂಬೀ ಪರಿಯಲ್ಲಿ ಮನುಷ್ಯರು ತಿಳಿದುಕೊಂಡಿರುವರಲ್ಲ (ಎಂದರ್ಥ). ಇಲ್ಲಿ ಮನುಷ್ಯರೆಂಬ (ಮಾತನ್ನು) ಉಪಯೋಗಿಸಿರುವದು ವಿಶೇಷವಾದ ಅಧಿಕಾರವನ್ನು ತಿಳಿಸುವದಕ್ಕಾಗಿ. **ಮನುಷ್ಯರೇ ಅಲ್ಲವೆ, ವಿಶೇಷವಾಗಿ ಅಭ್ಯುದಯನಿಃಶ್ರೇಯಸಸಾಧನಗಳಿಗೆ ಅಧಿಕಾರಿಗಳು[1]?** ಎಂದು ಅಭಿಪ್ರಾಯ. **ಹೇಗೆ ಕರ್ಮವಿಷಯದಲ್ಲಿ ಕರ್ಮಗಳಿಂದ ಫಲಪ್ರಾಪ್ತಿಯು ಅವಶ್ಯವಾಗಿ ಆಗುವದೆಂದು ತಿಳಿದುಕೊಂಡಿರುವರೋ ಹಾಗೆಯೇ ಬ್ರಹ್ಮವಿದ್ಯೆಯಿಂದ ಸರ್ವಾತ್ಮಭಾವವೆಂಬ ಫಲಪ್ರಾಪ್ತಿಯು ಅವಶ್ಯವಾಗಿ ಆಗುವದೆಂದೇ ತಿಳಿದುಕೊಂಡಿರುತ್ತಾರೆ. ಏಕೆಂದರೆ ವೇದಪ್ರಾಮಾಣ್ಯವು ಎರಡಕ್ಕೂ ಸಮಾನವಾಗಿರುತ್ತದೆ[2].**

(ಹೀಗೆಂದು ಮನುಷ್ಯರು ತಿಳಿದುಕೊಂಡಿರುವರಲ್ಲ), ಅಲ್ಲಿ ವಸ್ತು ವಿರುದ್ಧವಾಗಿ ಕಾಣುತ್ತದೆ. ಆದ್ದರಿಂದ (ತಮ್ಮನ್ನು) ಕೇಳುತ್ತಿದೇವೆ. ಆ ಬ್ರಹ್ಮವು ಯಾವ (ಬ್ರಹ್ಮದ) ವಿಜ್ಞಾನದಿಂದ ಎಲ್ಲವೂ ಆಗುವೆವೆಂದು ಮನುಷ್ಯರು ತಿಳಿದುಕೊಂಡಿದ್ದಾರೋ ಅದು ಯಾವದನ್ನು ಅರಿತುಕೊಂಡಿತು ? ಯಾವ ವಿಜ್ಞಾನದಿಂದ ಆ ಬ್ರಹ್ಮವು ಎಲ್ಲವೂ ಆಯಿತು ? ಬ್ರಹ್ಮವೇ ಎಲ್ಲವೂ ಎಂದು ಶ್ರುತಿಯಲ್ಲಿದೆ. ಅದು ಏನನ್ನೂ ಅರಿಯದೆ ಎಲ್ಲವೂ ಆಯಿತಾದರೆ, ಹಾಗೆಯೇ ಮಿಕ್ಕವರಿಗೂ ಆಗಲಿ, ಬ್ರಹ್ಮವಿದ್ಯೆಯಿಂದೇನು[3]? ಹಾಗಿಲ್ಲದೆ (ಏನನ್ನಾದರೂ) ಅರಿತುಕೊಂಡೇ ಎಲ್ಲವೂ ಆಯಿತೆಂದರೆ (ಆಗ ಆ) ಬ್ರಹ್ಮವಿದ್ಯೆಯ ಫಲವಾದ ಸರ್ವಾತ್ಮಭಾವವು ವಿಜ್ಞಾನದಿಂದ (ಹೊಸದಾಗಿ) ಆಗತಕ್ಕದ್ದಾದ್ದರಿಂದ ಕರ್ಮಫಲಕ್ಕೆ ಸಮಾನವೇ ಎಂದಾಯಿತಾದ್ದರಿಂದ[4] (ಅದು) ಅನಿತ್ಯವೆಂದಾಗುವದು. ಇದಲ್ಲದೆ ಅದೂ ಮತ್ತೊಂದನ್ನು ಅರಿತುಕೊಂಡು ಎಲ್ಲವೂ ಆಯಿತು. ಅದಕ್ಕಿಂತ ಹಿಂದಿನದೂ ಮತ್ತೊಂದನ್ನು ಅರಿತುಕೊಂಡು (ಎಲ್ಲವೂ ಆಯಿತು) ಎಂದು (ಈ ಪಕ್ಷದಲ್ಲಿ) ಅನವಸ್ಥಾದೋಷವೂ (ಉಂಟಾದೀತು).

---

1. ಜೈ. ಸೂ. ೬-೧-೫, ತೈ. ಭಾ ೨-೧ (ಭಾ. ಭಾ. ೧೧೬), ಸೂ. ಭಾ. ೧-೩-೨೫ನ್ನು ನೋಡಿ. ಅಗ್ನಿಹೋತ್ರಾದಿಕರ್ಮಕ್ಕೆ ಇರುವ ವಿಶೇಷಾಧಿಕಾರವು ಜ್ಞಾನಕ್ಕೆ ಬೇಕಿಲ್ಲ ; ಶೋಕಾದಿನಾಶವನ್ನು ಬಯಸುವವರೆಲ್ಲರೂ ಅಧಿಕಾರಿಗಳು ಎಂಬುದನ್ನು ಮನುಷ್ಯಶಬ್ದವು ಸೂಚಿಸುತ್ತದೆ ಎಂಬ ಅಭಿಪ್ರಾಯವನ್ನೂ ವಾರ್ತಿಕದಲ್ಲಿ ತೆಗೆದಿದೆ.

2. ಗೀ.ಭಾ. ೨-೨೧.

3. ಬ್ರಹ್ಮವು ಸರ್ವಭಾವವನ್ನು ಪಡೆದುಕೊಂಡದ್ದಕ್ಕೆ ಯಾವ ಜ್ಞಾನವೂ ಬೇಕಾಗಲಿಲ್ಲ ; ನಮ್ಮಂಗಳಿಗೆ ಮಾತ್ರ ಬ್ರಹ್ಮಜ್ಞಾನದಿಂದ ಸರ್ವಭಾವವು ದೊರಕುತ್ತದೆ ಎನ್ನುವದಕ್ಕಿಲ್ಲವಷ್ಟೆ?

4. ಸ್ವರ್ಗಾದಿಗಳು ಕರ್ಮಸಾಧ್ಯವಾಗಿರುವಂತೆ ಜ್ಞಾನವೆಂಬ ಸಾಧನದಿಂದ ಸಾಧ್ಯವು ಎಂದಾಯಿತಾದ್ದರಿಂದ ಎಂದರ್ಥ.

(ಪರಿಹಾರ):- ಮೊದಲನೆಯದಾಗಿ (ಏನನ್ನೂ) ಅರಿತುಕೊಳ್ಳದೆ (ಬ್ರಹ್ಮವು) ಎಲ್ಲವೂ ಆಗಲಿಲ್ಲ. ಏಕೆಂದರೆ (ಹಾಗೆಂದರೆ) ಶಾಸ್ತ್ರಾರ್ಥದಲ್ಲಿ ವೈರೂಪ್ಯವೆಂಬ ದೋಷವುಂಟಾಗುತ್ತದೆ[1].

(ಆಕ್ಷೇಪ) :- ಹಾಗಾದರೆ ಫಲವು ಅನಿತ್ಯವೆಂಬ ದೋಷವು (ಆಗುವದು).

(ಪರಿಹಾರ) :- ಯಾವದೊಂದು ದೋಷವೂ (ಆಗು)ವದಿಲ್ಲ ; ಏಕೆಂದರೆ (ಇಲ್ಲಿ ಬಂದಾನೊಂದು) ಬೇರೆಯ ಅರ್ಥವಿದೆ[2].

## ನಾನು ಬ್ರಹ್ಮವಾಗಿರುವೆನು ಎಂಬ ಜ್ಞಾನದಿಂದ ಸರ್ವಾತ್ಮತ್ವ

(ಉಪನಿಷತ್ತು)

**ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇತ್ । ಅಹಂ ಬ್ರಹ್ಮಾಸ್ಮೀತಿ । ತಸ್ಮಾತ್ತತ್ಸರ್ವಮಭವತ್ ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವ ತ್ತಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ ಪಶ್ಯನ್ನೃಷಿ ರ್ವಾಮದೇವಃ ಪ್ರತಿಪೇದೇಽಹಂ ಮನುರಭವಗ್ಂ ಸೂರ್ಯ ಶ್ಚೇತಿ । ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಗ್ಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾ ಹ್ಯೇಷಾಗ್ಂ ಸ ಭವತಿ ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಗ್ಂ ಸ ದೇವಾನಾಮ್ । ಯಥಾ ಹ ವೈ ಬಹವಃ ಪಶವೋ ಮನುಷ್ಯಂ ಭುಞ್ಜ್ಯುರೇವಮೇಕೈಕಃ ಪುರುಷೋ ದೇವಾನ್ ಭುನಕ್ತ್ಯೇಕಸ್ಮಿನ್ನೇವ ಪಶಾವಾದೀಯ ಮಾನೇಽಪ್ರಿಯಂ ಭವತಿ ಕಿಮು ಬಹುಷು ತಸ್ಮಾದೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ ॥ ೧೦ ॥**

೧೦. ಇದು ಮೊದಲು ಬ್ರಹ್ಮವೇ ಆಗಿತ್ತು. ಅದು ತನ್ನನ್ನೇ ನಾನು ಬ್ರಹ್ಮವಾಗಿರುವೆನು ಎಂದು ಅರಿತುಕೊಂಡಿತು, ಅದರಿಂದ ಅದು ಎಲ್ಲವೂ ಆಯಿತು. ಅಲ್ಲಿ ದೇವತೆಗಳಲ್ಲಿ ಯಾವಯಾವನು

---

1. ಬ್ರಹ್ಮಕ್ಕೆ ಜ್ಞಾನವು ಬೇಕಿಲ್ಲದೆ ಫಲ, ನಮಗೆ ಮಾತ್ರ ಜ್ಞಾನವು ಬೇಕು ಎಂದರೆ ಈ ದೋಷ

2. ವಿದ್ಯಾವಿದ್ಯೆಗಳ ದೃಷ್ಟಿಯಿಂದ ಅಸರ್ವತ್ವವನ್ನೂ ಸರ್ವತ್ವವನ್ನೂ ಹೇಳಿದೆ. ಸರ್ವತ್ವವು ಜ್ಞಾನದಿಂದ ಹೊಸದಾಗಿ ಉಂಟಾಗತಕ್ಕದ್ದಲ್ಲ ಎಂಬ ಬೇರೊಂದು ಅರ್ಥವಿದೆ ಎಂದು ಅಭಿಪ್ರಾಯ. ಇದು ಮುಂದಿನ ಕಂಡಿಕೆಗೆ ಅವತರಣಿಕೆ.

ಅರಿತುಕೊಂಡನೋ ಅವನೇ ಅದಾದನು ; ಋಷಿಗಳಲ್ಲಿಯೂ ಹಾಗೆಯೇ, ಮನುಷ್ಯರಲ್ಲಿಯೂ ಹಾಗೆಯೇ. ಆ ಇದನ್ನು ಕಂಡುಕೊಂಡು ಋಷಿಯಾದ ವಾಮದೇವನು "ನಾನು ಮನುವಾಗಿರುತ್ತೇನೆ. ಸೂರ್ಯನೂ (ಆಗಿದ್ದೇನೆ)'' ಎಂದು ಅರಿತುಕೊಂಡನು. ಆದ್ದರಿಂದ ಈಗಲೂ ಯಾವನು 'ನಾನು ಬ್ರಹ್ಮವಾಗಿರುತ್ತೇನೆ' ಎಂದು ಅರಿತುಕೊಳ್ಳುವನೋ ಅವನು ಇದೆಲ್ಲವೂ ಆಗುತ್ತಾನೆ. ಅವನಿಗೆ ದೇವತೆಗಳೂ (ಹಾಗೆ) ಆಗದಿರುವದಕ್ಕೆ ಸಮರ್ಥರಾಗಿರುವದಿಲ್ಲ ; ಏಕೆಂದರೆ ಅವನು ಅವರಿಗೆ ಆತ್ಮನೇ ಆಗಿರುತ್ತಾನೆ. ಇನ್ನು ಯಾವನು "ಇದು ಬೇರೆ, ನಾನು ಬೇರೆಯಾಗಿರುವೆನು'' ಎಂದು ಅನ್ಯದೇವತೆಯನ್ನು ಉಪಾಸನೆ ಮಾಡುತ್ತಾನೋ ಅವನು ಅರಿಯನು. ಅವನು ದೇವತೆಗಳಿಗೆ ಪಶುವು ಹೇಗೋ ಹಾಗೆ. ಹೇಗೆ ಬಹಳ ಪಶುಗಳು ಮನುಷ್ಯನನ್ನು ಭೋಗಪಡಿಸುವವೋ ಹಾಗೆ ಒಬ್ಬೊಬ್ಬ ಮನುಷ್ಯನು ದೇವತೆಗಳನ್ನು ಭೋಗಪಡಿಸುತ್ತಾನೆ. ಒಂದೇ ಪಶುವನ್ನು ತೆಗೆದುಕೊಂಡುಹೋದರೂ ಅಪ್ರಿಯವಾಗುತ್ತದೆ ; ಬಹಳ (ಪಶುಗಳನ್ನು ಕೊಂಡೊಯ್ದರೆ) ಹೇಳತಕ್ಕದ್ದೇನು ! ಆದ್ದರಿಂದ ಮನುಷ್ಯರು ಅರಿತುಕೊಳ್ಳುವರು ಎಂಬುದಿದೆಯಲ್ಲ, ಅದು ಇವರಿಗೆ ಪ್ರಿಯವಲ್ಲ.

## ಬ್ರಹ್ಮವಿದ್ಯೆಯ ವಿಷಯದಲ್ಲಿ ಚರ್ಚೆ

### ಭರ್ತೃಪ್ರಪಂಚರ ಅಭಿಪ್ರಾಯ

(ಭಾಷ್ಯ)

೧೫೦. ಯದಿ ಕಿಮಪಿ ವಿಜ್ಞಾಯೈವ ತದ್ ಬ್ರಹ್ಮ ಸರ್ವಮಭವತ್ ಪೃಚ್ಛಾಮಃ ಕಿಮು ತದ್ಬ್ರಹ್ಮ ಅವೇತ್ ಯಸ್ಮಾತ್ ತತ್ಸರ್ವಮಭವತ್ ಇತಿ ? ಏವಂ ಚೋದಿತೇ ಸರ್ವದೋಷಾನಾಗಸ್ಥಿತಂ ಪ್ರತಿವಚನಮಾಹ । ಬ್ರಹ್ಮ ಅಪರಮ್ । ಸರ್ವಭಾವಸ್ಯ ಸಾಧ್ಯತ್ವೋಪಪತ್ತೇಃ । ನ ಹಿ ಪರಸ್ಯ ಬ್ರಹ್ಮಣಃ ಸರ್ವಭಾವಾಪತ್ತಿಃ ವಿಜ್ಞಾನಸಾಧ್ಯಾ । ವಿಜ್ಞಾನಸಾಧ್ಯಾಂ ಚ ಸರ್ವಭಾವಾಪತ್ತಿಮಾಹ 'ತಸ್ಮಾತ್ ತತ್ಸರ್ವಮಭವತ್' ಇತಿ । ತಸ್ಮಾತ್ 'ಬ್ರಹ್ಮ ವಾ ಇದಮಗ್ರ ಆಸೀತ್' ಇತಿ ಅಪರಂ ಬ್ರಹ್ಮೇಹ ಭವಿತುಮರ್ಹತಿ । ಮನುಷ್ಯಾಧಿಕಾರಾದ್ವಾ ತದ್ಭಾವೀ ಬ್ರಾಹ್ಮಣಃ ಸ್ಯಾತ್ । ಸರ್ವಂ ಭವಿಷ್ಯನ್ತೋ ಮನುಷ್ಯಾ ಮನ್ಯನ್ತೇ ಇತಿ ಹಿ ಮನುಷ್ಯಾಃ ಪ್ರಕೃತಾಃ । ತೇಷಾಂ ಚ ಅಭ್ಯುದಯ

ನಿಃಶ್ರೇಯಸಸಾಧನೇ ವಿಶೇಷತೋಽಧಿಕಾರಃ ಇತ್ಯುಕ್ತಮ್ । ನ ಪರಸ್ಯ ಬ್ರಹ್ಮಣಃ । ನಾಪ್ಯಪರಸ್ಯ ಪ್ರಜಾಪತೇಃ । ಅತೋ ದ್ವೈತೈಕತ್ವಾಪರಬ್ರಹ್ಮವಿದ್ಯಯಾ ಕರ್ಮಸಹಿತಯಾ ಅಪರಬ್ರಹ್ಮಭಾವಮ್ ಉಪಸಂಪನ್ನೋ ಭೋಜ್ಯಾತ್ ಅಪ್ಯಾವೃತ್ತಃ ಸರ್ವಪ್ರಾಪ್ತ್ಯಾ ಉಚ್ಛಿನ್ನಕಾಮಕರ್ಮಬನ್ಧನಃ ಪರಬ್ರಹ್ಮಭಾವೀ ಬ್ರಹ್ಮವಿದ್ಯಾಹೇತೋಃ ಬ್ರಹ್ಮೇತಿ ಅಭಿಧೀಯತೇ । ದೃಷ್ಟಶ್ಚ ಲೋಕೇ ಭಾವಿನೀಂ ವೃತ್ತಿಮಾಶ್ರಿತ್ಯ ಶಬ್ದಪ್ರಯೋಗಃ ಯಥಾ ಓದನಂ ಪಚತೀತಿ । ಶಾಸ್ತ್ರೇ ಚ "ಪರಿವ್ರಾಜಕಃ ಸರ್ವಭೂತಾಭಯದಕ್ಷಿಣಾಮ್ ....." ಇತ್ಯಾದಿ । ತಥೇಹೇತಿ ಕೇಚಿತ್, ಬ್ರಹ್ಮ ಬ್ರಹ್ಮಭಾವೀ ಪುರುಷಃ, ಬ್ರಾಹ್ಮಣಃ ಇತಿ ವ್ಯಾಚಕ್ಷತೇ ॥

(ಭಾಷ್ಯಾರ್ಥ)

ಯಾವದನ್ನಾದರೂ ಅರಿತೇ ಆ ಬ್ರಹ್ಮವು ಎಲ್ಲವೂ ಆಯಿತು ಎನ್ನುವದಾದರೆ, 'ಆ ಬ್ರಹ್ಮವು ಏನನ್ನು ಅರಿತುಕೊಂಡು ಅದರಿಂದ ಎಲ್ಲವೂ ಆಯಿತು?' ಎಂದು ಕೇಳುತ್ತೇವೆ- ಎಂದು (ಶಿಷ್ಯರು) ಆಕ್ಷೇಪಿಸಲಾಗಿ ಯಾವ ದೋಷದ ವಾಸನೆಯೂ ಇಲ್ಲದ ಉತ್ತರವನ್ನು (ಗುರುವು) ಹೇಳುತ್ತಾನೆ[1].

(ಬ್ರಹ್ಮ ವಾ ಎಂಬಲ್ಲಿ) ಬ್ರಹ್ಮ ಎಂದರೆ ಅಪರ(ಬ್ರಹ್ಮವು). ಏಕೆಂದರೆ ಸರ್ವಭಾವವು (ಹೊಸದಾಗಿ) ಸಾಧಿಸಿಕೊಳ್ಳತಕ್ಕದ್ದೆಂಬುದು (ಆ ಪಕ್ಷದಲ್ಲಿ) ಹೊಂದುತ್ತದೆ. ಪರಬ್ರಹ್ಮಕ್ಕೆ ಸರ್ವಭಾವವನ್ನು ಹೊಂದುವದೆಂಬುದು ವಿಜ್ಞಾನದಿಂದ ಸಾಧಿಸಿಕೊಳ್ಳತಕ್ಕದ್ದಲ್ಲವಷ್ಟೆ[2]. ಆದರೆ ಸರ್ವಭಾವವನ್ನು ಹೊಂದುವದೆಂಬುದು ವಿಜ್ಞಾನಸಾಧ್ಯವೆಂದು "ಅದರಿಂದ ಅದು ಎಲ್ಲವೂ ಆಯಿತು" ಎಂದು (ಇಲ್ಲಿ) ಹೇಳಿರುತ್ತದೆ. ಆದ್ದರಿಂದ "ಇದು ಮೊದಲು ಬ್ರಹ್ಮವೇ ಆಗಿತ್ತು" ಎಂದು ಇಲ್ಲಿ ಹೇಳಿರುವದು ಅಪರಬ್ರಹ್ಮವೇ ಆಗಿರಬೇಕು- (ಎಂದು ಹೇಳಬಹುದು)[3].

ಅಥವಾ ಮನುಷ್ಯಾಧಿಕಾರ(ವಿರುವದ)ರಿಂದ ಆ (ಬ್ರಹ್ಮ)ವಾಗಲಿರುವ ಬ್ರಾಹ್ಮಣನೇ (ಬ್ರಹ್ಮವು) ಎಂದಾಗಬೇಕು. (ಇದರ ವಿವರ): "ಎಲ್ಲವೂ ಆಗಲಿರುವ ಮನುಷ್ಯರು (ಹೀಗೆಂದು) ತಿಳಿದುಕೊಂಡಿರುವರು" ಎಂದು (ಹಿಂದಿನ ಮಂತ್ರದಲ್ಲಿ) ಮನುಷ್ಯರಲ್ಲವೆ, ಪ್ರಕೃತರಾಗಿರುತ್ತಾರೆ? ಅವರಿಗೇ ಅಭ್ಯುದಯ ನಿಃಶ್ರೇಯಸಗಳ ಸಾಧನ(ಗಳನ್ನು ಮಾಡುವವರಲ್ಲಿ) ವಿಶೇಷವಾದ ಅಧಿಕಾರ

1. ಉಪೋದ್ಘಾತಶ್ರುತಿಯ ಭಾಷ್ಯವಿದು. ಈ ಶ್ರುತಿಭಾಗಕ್ಕೆ ವಾರ್ತಿಕದಲ್ಲಿ ಭರ್ತೃಪ್ರಪಂಚರ ವ್ಯಾಖ್ಯಾನವನ್ನು ಕೊಟ್ಟು ಅದನ್ನೂ ಅಂಗೀಕರಿಸಿದೆ.

2. ಏಕೆಂದರೆ ಅದಕ್ಕೆ ಸರ್ವಭಾವವು ಸ್ವತಃಸಿದ್ಧವಾಗಿರುತ್ತದೆ.

3. ಇದು ವೃತ್ತಿಕಾರರ ಮತವೆಂದು ಟೀಕೆಯಲ್ಲಿದೆ. ವಾರ್ತಿಕದಲ್ಲಿ ಈ ಮತವು ಯಾರದ್ದೆಂದು ಹೇಳಿರುವದಿಲ್ಲ.

ವಿರುವದೆಂದು ಹೇಳಿದ್ದಾಗಿದೆ. ಇದು ಪರ(ಬ್ರಹ್ಮ)ಕ್ಕಾಗಲಿ, ಅಪರಬ್ರಹ್ಮವಾದ ಪ್ರಜಾಪತಿಗಾಗಲಿ (ಇರುವ)ದಿಲ್ಲ[1]. ಆದ್ದರಿಂದ ಕರ್ಮಸಹಿತವಾದ ದ್ವೈತೈಕತ್ವ (ಭಾವನಾರೂಪವಾದ)[2] ಅಪರಬ್ರಹ್ಮವಿದ್ಯೆಯಿಂದ ಅಪರಬ್ರಹ್ಮಭಾವವನ್ನು ಪಡೆದುಕೊಂಡು ಭೋಜ್ಯದಿಂದ ಹಿಂತಿರುಗಿ[3] ಎಲ್ಲವನ್ನೂ ಪಡೆದುಕೊಂಡದ್ದರಿಂದ ಕಾಮಕರ್ಮಗಳ ಬಂಧನವನ್ನು ನಾಶಗೊಳಿಸಿಕೊಂಡು ಬ್ರಹ್ಮವಿದ್ಯೆ ಎಂಬ ಹೇತುವಿನಿಂದ ಪರಬ್ರಹ್ಮವಾಗಲಿರುವ (ಪುರುಷನನ್ನು ಇಲ್ಲಿ) ಬ್ರಹ್ಮ ಎಂದು ಕರೆದಿದೆ[4]. ಲೋಕದಲ್ಲಿ "ಅನ್ನವನ್ನು ಮಾಡುತ್ತಾನೆ" ಎಂಬಂತೆ ಭವಿಷ್ಯದ್ವೃತ್ತಿಯನ್ನು ಅವಲಂಬಿಸಿ ಶಬ್ದವನ್ನು ಪ್ರಯೋಗಿಸುವದು ಕಂಡೂ ಇದೆ, "ಪರಿವ್ರಾಜಕನು ಸರ್ವಭೂತಗಳಿಗೂ ಅಭಯದಕ್ಷಿಣೆಯನ್ನು (ಕೊಟ್ಟು......)" (ವಾ. ೧೦?) ಎಂದುಮುಂತಾಗಿ ಶಾಸ್ತ್ರದಲ್ಲಿಯೂ (ಕಂಡಿದೆ)[5]. ಹಾಗೆಯೇ ಇಲ್ಲಿಯೂ ಬ್ರಹ್ಮ ಎಂದರೆ ಬ್ರಹ್ಮಭಾವಿಯಾದ ಮನುಷ್ಯನು, ಬ್ರಾಹ್ಮಣನು ಎಂದು **ಕೆಲವರು** ವ್ಯಾಖ್ಯಾನಮಾಡಿರುತ್ತಾರೆ[6].

## ಭರ್ತೃಪ್ರಪಂಚಮತದ ಖಂಡನೆ

(ಭಾಷ್ಯ)

೧೫೧. ತನ್ನ । ಸರ್ವಭಾವಾಪತ್ತೇರನಿತ್ಯತ್ವದೋಷಾತ್ । ನ ಹಿ ಸೋಽಸ್ತಿ ಲೋಕೇ ಪರಮಾರ್ಥತಃ ಯೋ ನಿಮಿತ್ತವಶಾತ್ ಭಾವಾನ್ತರಮ್ ಆಪದ್ಯತೇ ನಿತ್ಯಶ್ಚ ಇತಿ । ತಥಾ ಬ್ರಹ್ಮವಿಜ್ಞಾನನಿಮಿತ್ತಕೃತಾ ಚೇತ್ ಸರ್ವಭಾವಾಪತ್ತಿಃ ನಿತ್ಯಾ ಚೇತಿ ವಿರುದ್ಧಮ್ । ಅನಿತ್ಯತ್ವೇ ಚ ಕರ್ಮಫಲತುಲ್ಯತಾ ಇತ್ಯುಕ್ತೋ ದೋಷಃ । ಅವಿದ್ಯಾಕೃತಾಸರ್ವತ್ವನಿವೃತ್ತಿಂ ಚೇತ್ ಸರ್ವಭಾವಾಪತ್ತಿಂ ಬ್ರಹ್ಮವಿದ್ಯಾಫಲಂ ಮನ್ಯಸೇ ಬ್ರಹ್ಮಭಾವಿಪುರುಷಕಲ್ಪನಾ ವ್ಯರ್ಥಾ ಸ್ಯಾತ್ । ಪ್ರಾಗ್ ಬ್ರಹ್ಮವಿಜ್ಞಾನಾದಪಿ ಸರ್ವೋ ಜನ್ತುಃ ಬ್ರಹ್ಮತ್ವಾತ್ ನಿತ್ಯ

---

1. ಏಕೆಂದರೆ ಪರಬ್ರಹ್ಮಕ್ಕೆ ಪಡೆಯತಕ್ಕದ್ದೇ ಇಲ್ಲ, ಅಪರಬ್ರಹ್ಮಕ್ಕೆ ಎಂದರೆ ಹಿರಣ್ಯಗರ್ಭನಿಗೆ ಉಪದೇಶವಿಲ್ಲದೆ ಬ್ರಹ್ಮಜ್ಞಾನವಾಗುವದೆಂದು ಸ್ಮೃತಿಯಲ್ಲಿದೆ.

2. ಸರ್ವಜಗದಾತ್ಮನಾದ ಹಿರಣ್ಯಗರ್ಭನೇ ನಾನು ಎಂದು ಭಾವಿಸುವ.

3. ಹಿರಣ್ಯಗರ್ಭಸ್ಥಾನದಲ್ಲಿ ಅನುಭವಿಸುವ ಭೋಗದಲ್ಲಿಯೂ ವಿರಕ್ತನಾಗಿ.

4. ಬ್ರಹ್ಮ ಎಂದರೆ ಬ್ರಾಹ್ಮಣನು ಎಂದಾಗಲಿ, ಮುಂದೆ ಬ್ರಹ್ಮವಾಗಲಿರುವ ಸಾಧಕನು ಎಂದಾಗಲಿ ಅರ್ಥವನ್ನು ಮಾಡಿದರೆ ಪ್ರಕೃತವಾಗಿರುವ ಮನುಷ್ಯಾಧಿಕಾರ ಶ್ರುತಿಗೆ ಅನುಗುಣವಾಗುತ್ತದೆ ಎಂದು ಭಾವ.

5. ಅನ್ನವಾಗಲಿರುವ ಅಕ್ಕಿಯನ್ನು ಅನ್ನವೆಂದೂ ಸಂನ್ಯಾಸಿಯಾಗಲಿರುವವನನ್ನು ಪರಿವ್ರಾಜಕನೆಂದೂ ಕರೆದಿರುವದು ಭವಿಷ್ಯದ್ವೃತ್ತಿಯಿಂದ.

6. ಈ ಮತವು ಭರ್ತೃಪ್ರಪಂಚರಿಗೂ ಸಮ್ಮತವಲ್ಲವೆಂಬಂತೆ ವಾರ್ತಿಕದಲ್ಲಿ (೧೧-೪-೩೦ವ ೧೧೬೪) ವಿವರಣೆಯಿದೆ.

ಮೇವ ಸರ್ವಭಾವಾಪನ್ನಃ ಪರಮಾರ್ಥತೋಽವಿದ್ಯಯಾ ತ್ವಬ್ರಹ್ಮತ್ವಮ್ ಅಸರ್ವತ್ವಂ ಚ ಅಧ್ಯಾರೋಪಿತೇ । ಯಥಾ ಶುಕ್ತಿಕಾಯಾಂ ರಜತಂ ವ್ಯೋಮ್ನಿ ವಾ ತಲಮಲವತ್ತ್ವಾದಿ ತಥಾ ಇಹ ಬ್ರಹ್ಮಣಿ ಅಧ್ಯಾರೋಪಿತಮ್ ಅವಿದ್ಯಯಾ ಅಬ್ರಹ್ಮತ್ವಮ್ ಅಸರ್ವತ್ವಂ ಚ ಬ್ರಹ್ಮವಿದ್ಯಯಾ ನಿವರ್ತ್ಯತೇ ಇತಿ ಮನ್ಯಸೇ ಯದಿ ತದಾ ಯುಕ್ತಂ ಯತ್ ಪರಮಾರ್ಥತ ಆಸೀತ್ ಪರಂ ಬ್ರಹ್ಮ ಬ್ರಹ್ಮಶಬ್ದಸ್ಯ ಮುಖ್ಯಾರ್ಥಭೂತಂ 'ಬ್ರಹ್ಮ ವಾ ಇದಮಗ್ರ ಆಸೀತ್' ಇತ್ಯಸ್ಮಿನ್ ವಾಕ್ಯೇ ಉಚ್ಯತೇ ಇತಿ ವಕ್ತುಮ್ । ಯಥಾಭೂತಾರ್ಥವಾದಿತ್ವಾತ್ ವೇದಸ್ಯ । ನ ತ್ವಿಯಂ ಕಲ್ಪನಾ ಯುಕ್ತಾ ಬ್ರಹ್ಮಶಬ್ದಾರ್ಥವಿಪರೀತಃ ಬ್ರಹ್ಮಭಾವೀ ಪುರುಷಃ ಬ್ರಹ್ಮೇತ್ಯುಚ್ಯತ ಇತಿ । ಶ್ರುತಹಾನ್ಯಶ್ರುತಕಲ್ಪನಾಯಾ ಅನ್ಯಾಯ್ಯತ್ವಾತ್ ಮಹತ್ತರೇ ಪ್ರಯೋಜನಾನ್ತರೇ ಅಸತಿ । ಅವಿದ್ಯಾಕೃತವ್ಯತಿರೇಕೇಣ ಅಬ್ರಹ್ಮತ್ವಮ್ ಅಸರ್ವತ್ವಂ ಚ ವಿದ್ಯತ ಏವೇತಿ ಚೇತ್ । ನ । ತಸ್ಯ ಬ್ರಹ್ಮವಿದ್ಯಯಾ ಅಪೋಹಾನುಪಪತ್ತೇಃ । ನ ಹಿ ಕ್ವಚಿತ್ ಸಾಕ್ಷಾದ್ವಸ್ತುಧರ್ಮಸ್ಯ ಅಪೋಢ್ರೀ ದೃಷ್ಟಾ ಕರ್ತ್ರೀ ವಾ ವಿದ್ಯಾ[1] । ಅವಿದ್ಯಾಯಾಸ್ತು ಸರ್ವತ್ರೈವ ನಿವರ್ತಿಕಾ ದೃಶ್ಯತೇ। ತಥಾ ಇಹಾಪಿ ಅಬ್ರಹ್ಮತ್ವಮ್ ಅಸರ್ವತ್ವಂ ಚ ಅವಿದ್ಯಾಕೃತಮೇವ ನಿವರ್ತ್ಯತಾಮ್ ಬ್ರಹ್ಮವಿದ್ಯಯಾ। ನ ತು ಪಾರಮಾರ್ಥಿಕಂ ವಸ್ತು ಕರ್ತುಂ ನಿವರ್ತಯಿತುಂ ವಾ ಅರ್ಹತಿ ಬ್ರಹ್ಮವಿದ್ಯಾ। ತಸ್ಮಾತ್ ವ್ಯರ್ಥೈವ ಶ್ರುತಹಾನ್ಯಶ್ರುತಕಲ್ಪನಾ ॥

(ಭಾಷ್ಯಾರ್ಥ)

ಅದು ಸರಿಯಲ್ಲ. ಏಕೆಂದರೆ (ಹೀಗಾದರೆ) ಸರ್ವಭಾವವನ್ನು ಹೊಂದುವದೆಂಬುದು ಅನಿತ್ಯವಾಗುವದು. ನಿಜವಾಗಿಯೂ (ಒಂದು) ನಿಮಿತ್ತವಶದಿಂದ ರೂಪಾಂತರವನ್ನು ಹೊಂದಿ ನಿತ್ಯವೂ ಆಗಿರುತ್ತದೆ ಎಂಬ (ಪದಾರ್ಥವು) ಲೋಕದಲ್ಲಿ (ಯಾವದೂ) ಇರುವದೇ ಇಲ್ಲ. ಹಾಗೆ ಬ್ರಹ್ಮವಿಜ್ಞಾನನಿಮಿತ್ತದಿಂದ ಸರ್ವಭಾವಪ್ರಾಪ್ತಿಯಾಗುವದಾದರೆ (ಅದು) ನಿತ್ಯವೂ ಆಗಿದೆ ಎಂಬುದು ವಿರುದ್ಧವು. ಅನಿತ್ಯವೇ ಆದರೆ ಕರ್ಮಫಲಕ್ಕೆ ಸಮಾನವಾಗಿಯೇ ಇರುತ್ತದೆ ಎಂದು (ಉಪೋದ್ಘಾತದ ಭಾಷ್ಯದಲ್ಲಿ) ದೋಷವನ್ನು ಹೇಳಿದ್ದಾಗಿದೆ. ಅವಿದ್ಯೆಯಿಂದಾಗಿರುವ ಅಸರ್ವತ್ವದ ನಿವೃತ್ತಿಯೇ ಸರ್ವಭಾವಾಪತ್ತಿ ಎಂಬ ಬ್ರಹ್ಮವಿದ್ಯಾಫಲವೆಂದು (ನಿನ್ನ) ಮತವಾದರೆ[2] ಬ್ರಹ್ಮವಾಗಲಿರುವ ಪುರುಷನೆಂದು ಕಲ್ಪಿಸಿರುವದು ವ್ಯರ್ಥವಾಗುವದು. (ಇದರ ವಿವರ): ಬ್ರಹ್ಮವನ್ನು ಅರಿತು

---

1. 'ಬ್ರಹ್ಮವಿದ್ಯಾ' ಎಂಬ ಅಚ್ಚಿನ ಪಾಠದಲ್ಲಿ 'ಬ್ರಹ್ಮ' ಹೆಚ್ಚೆಂದು ಬಿಟ್ಟುಬಿಟ್ಟಿದೆ.

2. 'ಆ ಪಕ್ಷದಲ್ಲಿ ಯಾವಾಗಲೂ ಎಲ್ಲರೂ ಬ್ರಹ್ಮವೇ ಆಗಿರುವದರಿಂದ' ಎಂದು ಸೇರಿಸಿಕೊಳ್ಳಬೇಕು. ಈ ಅಭಿಪ್ರಾಯವು ಆನಂದಜ್ಞಾನರು ಉದಾಹರಿಸಿರುವ ಭರ್ತೃಪ್ರಪಂಚವಾಕ್ಯದಲ್ಲಿ ಕಾಣಬರುತ್ತದೆ. ಪೀಠಿಕೆಯನ್ನು ನೋಡಿ.

ಕೊಳ್ಳುವ ಮೊದಲೂ ಪ್ರತಿಯೊಬ್ಬ ಜೀವನೂ ಬ್ರಹ್ಮವಾಗಿರುವದರಿಂದ ಪರಮಾರ್ಥವಾಗಿ ಯಾವಾಗಲೂ ಸರ್ವಭಾವವನ್ನು ಪಡೆದುಕೊಂಡೇ ಇರುತ್ತಾನೆ. ಆದರೆ ಅವಿದ್ಯೆಯಿಂದ ಅಬ್ರಹ್ಮತ್ವವೂ ಅಸರ್ವತ್ವವೂ ಅಧ್ಯಾರೋಪಿತವಾಗಿರುತ್ತದೆ. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯೂ ಆಕಾಶದಲ್ಲಿ ತಲಮಲವತ್ತ್ವವೇ ಮುಂತಾದದ್ದು ಹೇಗೆ ಅಧ್ಯಾರೋಪಿತವಾಗಿರುವದೋ ಹಾಗೆ ಬ್ರಹ್ಮದಲ್ಲಿ ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವ ಅಬ್ರಹ್ಮತ್ವವನ್ನೂ ಅಸರ್ವತ್ವವನ್ನೂ ಬ್ರಹ್ಮವಿದ್ಯೆಯಿಂದ ತೊಲಗಿಸಿಕೊಳ್ಳಲಾಗುತ್ತದೆ ಎಂಬುದು ನಿನ್ನ ಅಭಿಪ್ರಾಯವಾದರೆ ಆಗ ಯಾವದು ಪರಮಾರ್ಥವಾಗಿ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವಾದ ಪರಬ್ರಹ್ಮವೇ ಆಗಿದೆಯೋ (ಅದನ್ನೇ) "ಇದು ಮೊದಲು ಬ್ರಹ್ಮವೇ ಆಗಿತ್ತು" ಎಂಬ ವಾಕ್ಯದಲ್ಲಿ ಹೇಳಿರುತ್ತದೆ ಎಂದು ಹೇಳುವದು ಯುಕ್ತವು. ಏಕೆಂದರೆ **ವೇದವು ಇದ್ದದ್ದನ್ನು ಇದ್ದಂತೆ ಹೇಳತಕ್ಕದ್ದಾಗಿರುತ್ತದೆ.** ಆದರೆ ಬ್ರಹ್ಮಶಬ್ದಾರ್ಥಕ್ಕೆ ವಿಪರೀತವಾದ ಬ್ರಹ್ಮವಾಗಲಿರುವ ಪುರುಷನನ್ನು ಬ್ರಹ್ಮ ಎಂದು ಕರೆದಿದೆ ಎಂಬ ಕಲ್ಪನೆಯು ಯುಕ್ತವಾಗುವದಿಲ್ಲ. ಏಕೆಂದರೆ ಮಹತ್ತರವಾದ ಮತ್ತೊಂದು ಪ್ರಯೋಜನವಿದ್ದಹೊರತು ಶ್ರುತವಾದದ್ದನ್ನು ಬಿಟ್ಟು ಅಶ್ರುತವಾದದ್ದನ್ನು ಕಲ್ಪಿಸುವದು ನ್ಯಾಯವಾಗುವದಿಲ್ಲ.[1]

(ಆಕ್ಷೇಪ) :– ಅವಿದ್ಯಾಕೃತವಾಗಿರುವದಲ್ಲದೆ ಬೇರೆಯಾಗಿಯೇ ಅಬ್ರಹ್ಮತ್ವವೂ ಅಸರ್ವತ್ವವೂ ಇದ್ದೇ ಇದೆ.

(ಪರಿಹಾರ) :- ಹಾಗಲ್ಲ. ಏಕೆಂದರೆ ಅದು ಬ್ರಹ್ಮವಿದ್ಯೆಯಿಂದ ಹೋಗುವದೆಂಬುದು ಯುಕ್ತವಾಗುವದಿಲ್ಲ. **ನೇರಾಗಿ ವಸ್ತುಧರ್ಮವೇ ಆಗಿರುವದನ್ನು ವಿದ್ಯೆಯು ತೊಲಗಿಸುವದನ್ನಾಗಲಿ ಉಂಟುಮಾಡುವದನ್ನಾಗಲಿ (ಯಾರೂ) ಎಲ್ಲಿಯೂ ಕಂಡಿಲ್ಲ. ಅವಿದ್ಯೆಯನ್ನಾದರೆ (ವಿದ್ಯೆಯು) ನಿವೃತ್ತಿಮಾಡುವದು ಎಲ್ಲೆಲ್ಲಿಯೂ ಕಂಡಿದೆ. ಹಾಗೆಯೇ ಇಲ್ಲಿಯೂ ಅವಿದ್ಯಾಕೃತವಾದ ಅಬ್ರಹ್ಮತ್ವವನ್ನೂ ಅಸರ್ವತ್ವವನ್ನೂ ಬ್ರಹ್ಮವಿದ್ಯೆಯು ತೊಲಗಿಸಲಿ ; ಇಷ್ಟೇ ಹೊರತು ಪರಮಾರ್ಥವಸ್ತುವನ್ನು ಉಂಟುಮಾಡುವದಾಗಲಿ ತೊಲಗಿಸುವದಾಗಲಿ ಬ್ರಹ್ಮವಿದ್ಯೆಗೆ ತಕ್ಕದ್ದಲ್ಲ.**[2] ಆದ್ದರಿಂದ ಶ್ರುತವಾದದ್ದನ್ನು ಬಿಟ್ಟು ಅಶ್ರುತವಾದದ್ದನ್ನು ಕಲ್ಪಿಸುವದು ವ್ಯರ್ಥವೇ.

---

1. ಬ್ರಹ್ಮಶಬ್ದದ ವಾಚ್ಯಾರ್ಥವನ್ನು ಬಿಡುವವಕ್ಕೆ ಕಾರಣವಿಲ್ಲ.

2. ಬ್ರಹ್ಮವಿದ್ಯೆ, ಬ್ರಹ್ಮಾವಿದ್ಯೆ– ಇವೆರಡು ಲೌಕಿಕವಿದ್ಯಾವಿದ್ಯೆಗಳಂತೆ ವಿರುದ್ಧವಾಗಿವೆ. ಲೋಕದಲ್ಲಿ ವಿದ್ಯೆಯು ನಿಜವಾದ ವಸ್ತುಧರ್ಮವನ್ನುಂಟುಮಾಡುವದೂ ಇಲ್ಲ, ತೊಲಗಿಸುವದೂ ಇಲ್ಲ; ಬ್ರಹ್ಮವಿದ್ಯೆಯು ಮಾತ್ರ ಆ ಕೆಲಸವನ್ನು ಮಾಡಬಲ್ಲದು ಎಂದರೆ ವಿದ್ಯಾಶಬ್ದಕ್ಕೆ ಅಲೌಕಿಕಾರ್ಥವನ್ನು ಕಲ್ಪಿಸಿದಂತೆ ಆಗುತ್ತದೆ; ಇದು ಯುಕ್ತವಲ್ಲ ಎಂದು ಭಾವ.

## ಬ್ರಹ್ಮವೇ ಅವಿದ್ಯೆಗೆ ವಿಷಯವು

(ಭಾಷ್ಯ)

೧೫೨. ಬ್ರಹ್ಮಣ್ಯವಿದ್ಯಾನುಪಪತ್ತಿಃ ಇತಿ ಚೇತ್। ನ। ಬ್ರಹ್ಮಣಿ ವಿದ್ಯಾವಿಧಾನಾತ್। ನ ಹಿ ಶುಕ್ತಿಕಾಯಾಂ ರಜತಾಧ್ಯಾರೋಪಣೇ ಅಸತಿ ಶುಕ್ತಿಕಾತ್ವಂ ಜ್ಞಾಪ್ಯತೇ ಚಕ್ಷುರ್ಗೋಚರಾಪನ್ನಾಯಾಮ್ 'ಇಯಂ ಶುಕ್ತಿಕಾ ನ ರಜತಮ್' ಇತಿ। ತಥಾ "ಸದೇವೇದಂ ಸರ್ವಮ್" (ಛಾಂ. ೬-೮-೭ ?), "ಬ್ರಹ್ಮೈವೇದಂ ಸರ್ವಮ್" (?), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ನೇದಂ ದ್ವೈತಮಸ್ತ್ಯಬ್ರಹ್ಮ" (?)[1] - ಇತಿ ಬ್ರಹ್ಮಣಿ ಏಕತ್ವವಿಜ್ಞಾನಂ ನ ವಿಧಾತವ್ಯಂ ಬ್ರಹ್ಮಣಿ ಅವಿದ್ಯಾಧ್ಯಾರೋಪಣಾಯಾಮ್ ಅಸತ್ಯಾಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಬ್ರಹ್ಮದ (ವಿಷಯ)ದಲ್ಲಿ ಅವಿದ್ಯೆಯಿರುವದೆನ್ನುವದು ಹೊಂದುವದಿಲ್ಲವಲ್ಲ[2] ?

(ಪರಿಹಾರ) :- ಹಾಗಲ್ಲ. ಏಕೆಂದರೆ ಬ್ರಹ್ಮ(ದ ವಿಷಯ)ದಲ್ಲಿ ವಿದ್ಯೆಯನ್ನು (ಮಾಡಿಕೊಳ್ಳಬೇಕೆಂದು) ಹೇಳಿದೆ. ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿಯನ್ನು ಅಧ್ಯಾರೋಪಣೆಮಾಡದಿದ್ದರೆ (ಅದು) ಕಣ್ಣಿಗೆ ಗೋಚರವಾಗಿರುವಾಗಲೇ 'ಇದು ಕಪ್ಪೆಯಚಿಪ್ಪು, ಬೆಳ್ಳಿಯಲ್ಲ' ಎಂದು (ಯಾರೂ ಅದು) ಕಪ್ಪೆಯಚಿಪ್ಪೆಂದು ತಿಳಿಸುವದಿಲ್ಲವಷ್ಟೆ ? ಬ್ರಹ್ಮದಲ್ಲಿ ಅವಿದ್ಯಾಧ್ಯಾರೋಪಣೆಯು ಇಲ್ಲದಿದ್ದರೆ "ಇದೆಲ್ಲವೂ ಸತ್ತೇ" (?), "ಇದೆಲ್ಲವೂ ಬ್ರಹ್ಮವೇ" (?), "ಇದೆಲ್ಲವೂ ಆತ್ಮನೇ" (ಆ) "ಅಬ್ರಹ್ಮವಾದ (ಈ ದ್ವೈತವಿಲ್ಲ)" ಎಂದು ಬ್ರಹ್ಮದಲ್ಲಿ ಏಕತ್ವವಿಜ್ಞಾನವನ್ನು ಹೇಳಬೇಕಾದದ್ದೇ ಇರಲಿಲ್ಲ.[3]

## ಬ್ರಹ್ಮವೇ ಅವಿದ್ಯೆಗೆ ಆಶ್ರಯ

(ಭಾಷ್ಯ)

೧೫೩. ನ ಬ್ರೂಮಃ ಶುಕ್ತಿಕಾಯಾಮಿವ ಬ್ರಹ್ಮಣಿ ಅತದ್ಧರ್ಮಾಧ್ಯಾರೋಪಣಾ ನಾಸ್ತೀತಿ, ಕಿಂ ತರ್ಹಿ ನ ಬ್ರಹ್ಮ ಸ್ವಾತ್ಮನಿ ಅತದ್ಧರ್ಮಾಧ್ಯಾರೋಪಣನಿಮಿತ್ತಮ್ ಅವಿದ್ಯಾಕರ್ತೃ ಚೇತಿ। ಭವತ್ವೇವಂ ನಾವಿದ್ಯಾಕರ್ತೃ

1. ಇಲ್ಲಿ ಕೊಟ್ಟಿರುವ ವಾಕ್ಯಗಳೆಲ್ಲ ಬಲುಮಟ್ಟಿಗೆ ಶ್ರುತ್ಯರ್ಥಗಳು. 'ಬ್ರಹ್ಮೈವೇದಂ ಸರ್ವಮ್' ಎಂಬ ವಾಕ್ಯವನ್ನು ಮಾತ್ರ ಇದೇ ರೀತಿಯಲ್ಲಿ ಸೂ. ಭಾ., ಗೀ. ಭಾ. ತೈ. ಭಾ. -ಇವುಗಳಲ್ಲಿ ಉದಾಹರಿಸಿರುವದು ಕಂಡುಬರುತ್ತದೆ.

2. ಬ್ರಹ್ಮವು ಸ್ವಪ್ರಕಾಶವಾದ್ದರಿಂದ ಅದರ ವಿಷಯಕ್ಕೆ ಅವಿದ್ಯೆಯಿರುವದು ಹೊಂದಲಾರದು ಎಂಬ ಭಾವವಿರಬಹುದು.

3. ಆದರೆ ಅದನ್ನು ಶ್ರುತಿಯಲ್ಲಿ ಹೇಳಿದೆ.

ಭ್ರಾನ್ತಂ ಚ ಬ್ರಹ್ಮ। ಕಿಂ ತು ನೈವಾಬ್ರಹ್ಮ ಅವಿದ್ಯಾಕರ್ತಾ ಚೇತನೋ ಭ್ರಾನ್ತ ಅನ್ಯ ಇಷ್ಯತೇ। "ನಾನ್ಯೋಽತೋಽಸ್ತಿ ವಿಜ್ಞಾತಾ" (೩–೭–೩), "ನಾನ್ಯದತೋಽಸ್ತಿ ವಿಜ್ಞಾತೃ" (೩–೮–೧೧), "ತತ್ತ್ವಮಸಿ" (ಛಾಂ. ೬–೮–೭) "ಆತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮೀತಿ"[1] (೧–೪–೧೦), "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (೧–೪–೧೦), ಇತ್ಯಾದಿಶ್ರುತಿಭ್ಯಃ। ಸ್ಮೃತಿಭ್ಯಶ್ಚ। "ಸಮಂ ಸರ್ವೇಷು ಭೂತೇಷು" (ಗೀ. ೧೩–೨೭), "ಅಹಮಾತ್ಮಾ ಗುಡಾಕೇಶ" (ಗೀ. ೧೦–೨೦), "ಶುನಿ ಚೈವ ಶ್ವಪಾಕೇ ಚ" (ಗೀ. ೫–೧೮) ಇತಿ, "ಯಸ್ತು ಸರ್ವಾಣಿ ಭೂತಾನಿ" (ಈ. ೬), "ಯಸ್ಮಿನ್ ಸರ್ವಾಣಿ ಭೂತಾನಿ" (ಈ. ೭), ಇತಿ (ಚ ?) ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಕಪ್ಪೆಯಚಿಪ್ಪಿನಲ್ಲಿ (ಬೆಳ್ಳಿ)ಯಂತೆ ಬ್ರಹ್ಮದಲ್ಲಿ ಅದರಲ್ಲಿಲ್ಲದ ಧರ್ಮದ ಅಧ್ಯಾರೋಪಣೆಯು ಆಗಿಲ್ಲವೆಂದೇನೂ (ನಾವು) ಹೇಳುತ್ತಿಲ್ಲ, ಮತ್ತೇನೆಂದರೆ ಬ್ರಹ್ಮವು ತನ್ನಲ್ಲಿ ತನ್ನದಲ್ಲದ ಧರ್ಮವನ್ನು ಅಧ್ಯಾರೋಪಿಸಿಕೊಂಡಿರುವದಕ್ಕೆ ನಿಮಿತ್ತವಲ್ಲ, ಅವಿದ್ಯಾಕರ್ತೃವೂ ಅಲ್ಲ (ಎನ್ನುತ್ತೇವೆ).[2]

(ಪರಿಹಾರ) :– ಬ್ರಹ್ಮವು ಹೀಗೆ ಅವಿದ್ಯಾಕರ್ತೃವಲ್ಲ, ಭ್ರಾಂತವಾಗಿಲ್ಲ ಎಂದೇ ಆಗಲಿ. ಆದರೆ ಬ್ರಹ್ಮವಲ್ಲದ ಅವಿದ್ಯಾಕರ್ತೃವಾದ ಭ್ರಾಂತನಾದ ಚೇತನನು ಮತ್ತೊಬ್ಬನು ಇದಾನೆಂದು (ನಾವು) ಒಪ್ಪುವದಿಲ್ಲ.[3] ಇವನಿಗಿಂತ ಬೇರೊಬ್ಬ ವಿಜ್ಞಾತೃವಿರುವದಿಲ್ಲ" (೩–೭–೩), "ಇದಕ್ಕಿಂತ ಬೇರೆ ವಿಜ್ಞಾತೃವಿಲ್ಲ" (೩–೮–೧೧), "ಅದೇ ನೀನಾಗಿರುವೆ" (ಛಾಂ. ೬–೮–೭......), "ನಾನೇ ಬ್ರಹ್ಮವೆಂದು (ಅದು) ತನ್ನನ್ನೇ ಅರಿತುಕೊಂಡಿತು" (೧–೪–೧೦), "ಈ (ದೇವತೆ) ಬೇರೆ, ನಾನು ಬೇರೆ ಎಂದು (ಉಪಾಸನೆಮಾಡುತ್ತಾನಲ್ಲ) ಅವನು ಅರಿಯನು" (೧–೪–೧೦)– ಮುಂತಾದ ಶ್ರುತಿಗಳಿಂದಲೂ "ಸರ್ವಭೂತಗಳಲ್ಲಿಯೂ ಸಮನಾಗಿರುವ" (ಗೀ. ೧–೩–೨೭), "ಗುಡಾಕೇಶನೆ, ನಾನು (ಎಲ್ಲಾ ಭೂತಗಳ ಅಂತಃಕರಣದಲ್ಲಿರುವ) ಆತ್ಮನು" (ಗೀ. ೧೦–೨೦), "ನಾಯಿಯಲ್ಲಿಯೂ ಚಂಡಾಲನಲ್ಲಿಯೂ (ಪಂಡಿತರು ಸಮದರ್ಶಿಗಳಾಗಿರುವರು)" (ಗೀ. ೫–೧೮), "(ಯಾವನು ಎಲ್ಲಾ ಭೂತಗಳನ್ನೂ) ತನ್ನಲ್ಲಿಯೇ ಕಾಣುವನೋ" (ಈ. ೬),

---

1. ಇಲ್ಲೊಂದು ಇತಿಯು ಬೇಕೆಂದು ಸೇರಿಸಿಕೊಂಡಿದೆ.

2. ಬ್ರಹ್ಮವು ಅವಿದ್ಯಾವಿಷಯವಾಗಬಹುದು, ಅವಿದ್ಯೆಗೆ ಆಶ್ರಯವಾಗಲಾರದು ಎಂದಭಿಪ್ರಾಯ.

3. ಅವಿದ್ಯೆಗೆ ಬ್ರಹ್ಮವು ವಿಷಯವೂ ಆಶ್ರಯವೂ ಆಗಿದೆ ಎಂಬುದು ವ್ಯಾವಹಾರಿಕ ದೃಷ್ಟಿ ; ಪರಮಾರ್ಥವಾಗಿ ಬ್ರಹ್ಮವು ಅವಿದ್ಯಾಶ್ರಯವಿಷಯವಲ್ಲ ಎಂಬುದು ಸಿದ್ಧಾಂತ.

"ಎಲ್ಲಿ ಎಲ್ಲಾ ಭೂತಗಳೂ (ಆತ್ಮನೇ ಆಯಿತೋ)" (ಈ. ೭) ಎಂಬ ಮಂತ್ರ ವರ್ಣದಿಂದಲೂ (ಹೀಗೆಂದು ಸಿದ್ಧವಾಗುತ್ತದೆ).[1]

## ಶಾಸ್ತ್ರೋಪದೇಶವು ವ್ಯರ್ಥವಲ್ಲ

(ಭಾಷ್ಯ)

೧೫೪. ನನ್ವೇವಂ ಶಾಸ್ತ್ರೋಪದೇಶಾನರ್ಥಕ್ಯಮ್ ಇತಿ । ಬಾಢಮ್ । ಏವಮವಗತೇ ಅಸ್ತ್ವೇವ ಅನರ್ಥಕ್ಯಮ್ । ಅವಗಮಾನರ್ಥಕ್ಯಮಪಿ ಇತಿ ಚೇತ್ । ನ । ಅನವಗಮನಿವೃತ್ತೇರ್ದರ್ಶನಾತ್ । ತನ್ನಿವೃತ್ತೇರಪ್ಯನುಪಪತ್ತಿರೇಕತ್ವೇ ಇತಿ ಚೇತ್ । ನ । ದೃಷ್ಟವಿರೋಧಾತ್ । ದೃಶ್ಯತೇ ಹಿ ಏಕತ್ವವಿಜ್ಞಾನಾದೇವ ಅನವಗಮನಿವೃತ್ತಿಃ । ದೃಶ್ಯಮಾನಮಪಿ ಅನುಪಪನ್ನಮಿತಿ ಬ್ರುವತೋ ದೃಷ್ಟವಿರೋಧಃ ಸ್ಯಾತ್ । ನ ಚ ದೃಷ್ಟವಿರೋಧಃ ಕೇನಚಿತ್ ಅಭ್ಯುಪಗಮ್ಯತೇ । ನ ಚ ದೃಷ್ಟೇ ಅನುಪಪನ್ನಂ ನಾಮ । ದೃಷ್ಟತ್ವಾದೇವ । ದರ್ಶನಾನುಪಪತ್ತಿಃ ಇತಿ ಚೇತ್ । ತತ್ರಾಪ್ಯೇಷೈವ ಯುಕ್ತಿಃ ॥

(ಭಾಷ್ಯಾರ್ಥ)

(ಆಕ್ಷೇಪ) :- ಹೀಗಾದರೆ ಶಾಸ್ತ್ರೋಪದೇಶವು ವ್ಯರ್ಥವಲ್ಲವೆ ?[2]

(ಪರಿಹಾರ) :- ನಿಜ. ಹೀಗೆಂದು ಅರಿತುಕೊಂಡರೆ (ಉಪದೇಶವು) ವ್ಯರ್ಥವೆಂದೇ ಆಗಲಿ ![3]

(ಆಕ್ಷೇಪ) :- ಅರಿತುಕೊಳ್ಳುವದೂ ವ್ಯರ್ಥವೆಂದಾಗಲಿ ![4]

(ಪರಿಹಾರ) :- ಹಾಗಲ್ಲ. ಏಕೆಂದರೆ ಅರಿಯದೆ ಇದ್ದದ್ದನ್ನು ಕಳೆಯುವದು ಕಂಡುಬಂದಿದೆ.

(ಆಕ್ಷೇಪ) :- (ಎಲ್ಲವೂ) ಒಂದಾಗಿರುವಲ್ಲಿ ಆ (ಅಜ್ಞಾನವು) ತೊಲಗುವದೆಂಬುದೂ ಹೊಂದುವದಿಲ್ಲವಲ್ಲ ![5]

(ಪರಿಹಾರ) :- ಹಾಗಲ್ಲ. (ಹಾಗೆಂದರೆ) ಕಂಡಿರುವದಕ್ಕೆ ವಿರೋಧವಾಗುತ್ತದೆ. ಏಕತ್ವವನ್ನು ಅರಿತುಕೊಂಡದ್ದರಿಂದಲೇ ಅರಿಯದಿರುವದೆಂಬುದು

1. ಈ ಶ್ರುತಿಸ್ಮೃತಿಗಳೆಲ್ಲ ಆತ್ಮೈಕತ್ವವನ್ನೇ ಹೇಳುತ್ತವೆ; ಆದ್ದರಿಂದ ಬ್ರಹ್ಮಕ್ಕಿಂತ ಬೇರೊಬ್ಬ ಅವಿದ್ಯಾವಂತನಿಲ್ಲವೆಂದಾಯಿತು ಎಂದು ಅಭಿಪ್ರಾಯ.

2. ಸರ್ವಜ್ಞನಾದ ಬ್ರಹ್ಮಕ್ಕೆ ಉಪದೇಶವೇತಕ್ಕೆ ?

3. ಸರ್ವಜ್ಞನಾದ ಬ್ರಹ್ಮವೊಂದೇ ಎಂಬ ಜ್ಞಾನವಾದಾಗ ವ್ಯರ್ಥವಾಗಲಿ; ಫಲವಾದ ಮೇಲೆ ಉಪಾಯವು ವ್ಯರ್ಥವೇ.

4. ಅರಿತುಕೊಂಡದ್ದರಿಂದಾಗಬೇಕಾದ ಪ್ರಯೋಜನವೂ ಬ್ರಹ್ಮಕ್ಕಿಲ್ಲವಲ್ಲ !

5. ಬ್ರಹ್ಮಕ್ಕಿಂತ ಬೇರೆಯಾಗಿ ಅಜ್ಞಾನವಿದ್ದರಲ್ಲವೆ, ಅದನ್ನು ತೊಲಗಿಸುವ ಜ್ಞಾನವು ಬೇಕು ?

ಕಂಡುಬರುತ್ತದೆಯಷ್ಟೆ. ಕಂಡುಬಂದರೂ ಹೊಂದುವದಿಲ್ಲ ಎಂದು ಹೇಳುವವನ (ಮತದಲ್ಲಿ) ಕಂಡುಬಂದದ್ದಕ್ಕೇ ವಿರೋಧವಾಗುವದು. ಆದರೆ ಹೀಗೆ ದೃಷ್ಟವಿರೋಧವನ್ನು ಯಾವ (ವಾದಿಯೂ) ಒಪ್ಪುವದಿಲ್ಲ. ಇದಲ್ಲದೆ ದೃಷ್ಟದಲ್ಲಿ ಅನುಪಪನ್ನವೆಂಬುದೇ ಇಲ್ಲ; ಏಕೆಂದರೆ (ಅದು) ದೃಷ್ಟವಾಗಿಯೇ ಇರುತ್ತದೆ.[1] ದರ್ಶನವೂ ಹೊಂದುವದಿಲ್ಲವಲ್ಲ, ಎಂದರೆ ಅಲ್ಲಿಯೂ ಇದೇ ಯುಕ್ತಿ.[2]

## ಪೂರ್ವಪಕ್ಷಕ್ಕೆ ಯುಕ್ತಿಗಳು

(ಭಾಷ್ಯ)

೧೫೫. "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ" (೩-೨-೧೩) "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" (೪-೪-೨), "ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ" (ಪ್ರ. ೪-೯), - ಇತ್ಯೇವಮಾದಿಶ್ರುತಿಸ್ಮೃತಿನ್ಯಾಯೇಭ್ಯಃ ಪರಸ್ಮಾತ್ ವಿಲಕ್ಷಣೋಽನ್ಯಃ ಸಂಸಾರೀ ಅವಗಮ್ಯತೇ । ತದ್ವಿಲಕ್ಷಣಶ್ಚ ಪರಃ। "ಸ ಏಷ ನೇತಿ ನೇತಿ" (೩-೪-೨೬), "ಅಶನಾಯಾದ್ಯತ್ಯೇತಿ" (೩-೫-೧), "ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ" (ಛಾಂ. ೮-೭-೧೩), "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ...." (೩-೮-೯) ಇತ್ಯಾದಿಶ್ರುತಿಭ್ಯಃ । ಕಣಾದಾಕ್ಷಪಾದಾದಿತರ್ಕಶಾಸ್ತ್ರೇಷು ಚ ಸಂಸಾರಿವಿಲಕ್ಷಣ ಈಶ್ವರಃ ಉಪಪತ್ತಿತಃ ಸಾಧ್ಯತೇ। ಸಂಸಾರದುಃಖಾಪನಯಾರ್ಥಿತ್ವಪ್ರವೃತ್ತಿದರ್ಶನಾತ್ ಸ್ಫುಟಮನ್ಯತ್ವಮ್ ಈಶ್ವರಾತ್ ಸಂಸಾರಿಣೋಽವಗಮ್ಯತೇ । "ಅವಾಕ್ಯನಾದರಃ" (ಛಾಂ. ೩-೧೪-೨), "ನ ಮೇ ಪಾರ್ಥಾಸ್ತಿ'' (ಗೀ. ೩-೨೨), ಇತಿ ಶ್ರುತಿಸ್ಮೃತಿಭ್ಯಃ। "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ.೮-೭-೧), "ತಂ ವಿದಿತ್ವಾ ನ ಲಿಪ್ಯತೇ" (೪-೪-೨೩), "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧), ''ಏಕಧೈವಾನುದ್ರಷ್ಟವ್ಯಮ್'' (೪-೪-೨೦), "ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾ" (೩-೮-೧೦), "ತಮೇವ ಧೀರೋ ವಿಜ್ಞಾಯ" (೪-೪-೨೧), "ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ" (ಮುಂ.೨-೨-೪), ಇತ್ಯಾದಿಕರ್ಮಕರ್ತೃನಿರ್ದೇಶಾಚ್ಚ। ಮುಮುಕ್ಷೋಶ್ಚ ಗತಿಮಾರ್ಗವಿಶೇಷೋಪದೇಶಾತ್ । ಅಸತಿ ಭೇದೇ ಕಸ್ಯ ಕುತೋ ಗತಿಃ ಸ್ಯಾತ್ ? ತದಭಾವೇ ಚ

1. ಯಾವದಾದರೂ ಅಯುಕ್ತವೆನ್ನುವದಕ್ಕೆ ದೃಷ್ಟವೇ ಆಧಾರ; ದೃಷ್ಟವಾದದ್ದು ಅಯುಕ್ತವೆನ್ನುವದಕ್ಕೆ ಯಾವ ಆಧಾರವೂ ಇಲ್ಲ. ಇಲ್ಲಿ ಅಜ್ಞಾನವು ನಿವೃತ್ತಿಯಾಗುವದು ಕಂಡುಬಂದಿರುವಲ್ಲಿ ಅದು ಅಯುಕ್ತವೆಂಬುದು ಸರಿಯಲ್ಲ ಎಂದು ಅಭಿಪ್ರಾಯ. ಅವಿದ್ಯಾನಿವೃತ್ತಿಯು ವ್ಯವಹಾರದಲ್ಲಿ, ಅವಿದ್ಯಾರಹಿತಬ್ರಹ್ಮವೆಂಬುದು ಪರಮಾರ್ಥ- ಎಂಬಿದನ್ನು ಇಲ್ಲಿ ಲಕ್ಷ್ಯವಲ್ಲಿಡಬೇಕು.

2. ದರ್ಶನವಾಗುವದು ಅನುಭವಸಿದ್ಧವಾಗಿರುವಲ್ಲಿ ಅದು ಹೊಂದುವದಿಲ್ಲ ಎಂಬುದು ಸರಿಯಾಗಲಾರದು ಎಂಬುದೇ ಯುಕ್ತಿ.

ದಕ್ಷಿಣೋತ್ತರಮಾರ್ಗವಿಶೇಷಾನುಪಪತ್ತಿಃ, ಗನ್ತ್ರವ್ಯದೇಶಾನುಪಪತ್ತಿಶ್ಚೇತಿ । ಭಿನ್ನಸ್ಯ ತು ಪರಸ್ಮಾತ್ ಆತ್ಮನಃ ಸರ್ವಮೇತತ್ ಉಪಪನ್ನಮ್। ಕರ್ಮಜ್ಞಾನ ಸಾಧನೋಪದೇಶಾಚ್ಚ . ಭಿನ್ನಶ್ಚೇತ್ ಬ್ರಹ್ಮಣಃ ಸಂಸಾರೀ ಸ್ಯಾತ್ ಯುಕ್ತಸ್ತಂ ಪ್ರತಿ ಅಭ್ಯುದಯನಿಃಶ್ರೇಯಸಸಾಧನಯೋಃ ಕರ್ಮಜ್ಞಾನಯೋರುಪದೇಶಃ । ನೇಶ್ವರಸ್ಯ। ಆಪ್ತಕಾಮತ್ವಾತ್। ತಸ್ಮಾತ್ ಯುಕ್ತಂ ಬ್ರಹ್ಮೇತಿ ಬ್ರಹ್ಮ ಭಾವೀ ಪುರುಷ ಉಚ್ಯತ ಇತಿ (ಇತಿ) ಚೇತ್ ॥

(ಭಾಷ್ಯಾರ್ಥ)

"ಪುಣ್ಯಕರ್ಮದಿಂದ ಒಳ್ಳೆಯವನೇ ಆಗುವನು" (೩-೨-೧೩), "ಅವನನ್ನು ವಿದ್ಯೆಯೂ ಕರ್ಮವೂ (ಪೂರ್ವಪ್ರಜ್ಞೆಯೂ) ಹಿಂಬಾಲಿಸಿಕೊಂಡೇ ಬರುವವು" (೪-೪-೨), "ಮಂತೃವೂ ಬೋದ್ಧೃವೂ ಕರ್ತೃವೂ ಆದ ವಿಜ್ಞಾನಾತ್ಮಪುರುಷ (ನಿದಾನಲ್ಲ....) (ಪ್ರ. ೪-೯)- ಮುಂತಾದ ಶ್ರುತಿಸ್ಮೃತಿನ್ಯಾಯಗಳಿಂದ[1] ಪರ(ಮಾತ್ಮ)ನಿಗಿಂತಲೂ ವಿಲಕ್ಷಣನಾದ ಮತ್ತೊಬ್ಬ ಸಂಸಾರಿ(ಯುಂಟೆಂದು) ನಿಶ್ಚಯವಾಗುತ್ತದೆ. ಮತ್ತು ಅವನಿಗಿಂತ ವಿಲಕ್ಷಣವಾಗಿರುವ ಪರ(ಮಾತ್ಮನು ಇದಾನೆಂದು) "ಆ ಇವನೇ 'ಹೀಗಲ್ಲ, ಹೀಗಲ್ಲ' ಎಂದು ಹೇಳಿದ (ಆತ್ಮನು)" (೩-೪-೨೬), "ಹಸಿವು ಮುಂತಾದವುಗಳನ್ನು ಮೀರಿರುತ್ತಾನೆ" (೩-೫-೧ರ ಅರ್ಥ), "ಅಪಹತಪಾಪ್ಮನೂ ಮುಪ್ಪಿಲ್ಲದವನೂ ಸಾವಿಲ್ಲದವನೂ ಆಗಿರುವ ಆತ್ಮನಿದಾನಲ್ಲ...." (ಛಾಂ. ೮-೭-೧೩), "ಇದೇ ಅಕ್ಷರದ ಪ್ರಶಾಸನದಲ್ಲಿ...." (೩-೮-೯)- ಮುಂತಾದ ಶ್ರುತಿಗಳಿಂದ (ನಿಶ್ಚಯವಾಗುತ್ತದೆ). ಕಣಾದ, ಅಕ್ಷಪಾದ- ಮುಂತಾದವರ ತರ್ಕಶಾಸ್ತ್ರಗಳಲ್ಲಿ ಸಂಸಾರಿಗಿಂತ ವಿಲಕ್ಷಣನಾದ ಈಶ್ವರನನ್ನು ಯುಕ್ತಿಯಿಂದ ಸಾಧಿಸಿರುತ್ತದೆ. ಸಂಸಾರದುಃಖವನ್ನು ತೊಲಗಿಸಿ ಕೊಳ್ಳಬೇಕೆಂಬ ಇಚ್ಛೆಯೂ (ಅದರಲ್ಲಿ) ಪ್ರವೃತ್ತಿಯೂ ಕಂಡುಬರುತ್ತಿರುವದ ರಿಂದ ಈಶ್ವರನಿಗಿಂತ ಸಂಸಾರಿಯು ಬೇರೆ ಎಂದು ನಿಶ್ಚಯವಾಗುತ್ತದೆ. "ಅವಾಕಿಯೂ ಅನಾದರನೂ (ಆಗಿರುವ ಆತ್ಮನು)" (೩-೪-೨), "ಪಾರ್ಥನೆ, ನನಗೆ (ಮೂರು ಲೋಕಗಳಲ್ಲಿಯೂ ಕರ್ತವ್ಯ)ವಿರುವದಿಲ್ಲ" (೩-೩೨)- ಎಂಬ ಶ್ರುತಿಸ್ಮೃತಿಗಳಿಂದಲೂ (ಇದು ಸ್ಫುಟವಾಗುತ್ತದೆ).[2] ಅವನನ್ನು ಹುಡುಕ

1. 'ಸ್ಮೃತಿನ್ಯಾಯೇಭ್ಯಃ' ಎಂಬ ಮಾತು ಮೂಲದಲ್ಲಿತ್ತೋ ಲೇಖಕರು ಹೆಚ್ಚಾಗಿ ಸೇರಿಸಿಕೊಂಡಿದಾರೋ ತಿಳಿಯದು. ಕುರು ಕರ್ಮೈವ ತಸ್ಮಾತ್ತ್ವಮ್ ಮುಂತಾದ ಸ್ಮೃತಿ, ಪರಸ್ಪರವಿರುದ್ಧರಾದವರಿಗೆ ಏಕತ್ವವು ಹೊಂದುವದಿಲ್ಲವೆಂಬ ನ್ಯಾಯ- ಎಂದು ಟೀಕೆಯಲ್ಲಿದೆ.

2. ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಹೇಳಿರುವ ಈ ಧರ್ಮಗಳು ಜೀವನಿಗೆ ಹೊಂದುವದೇ ಇಲ್ಲ. ಆದ್ದರಿಂದ ಜೀವೇಶ್ವರಭೇದವೇ ಶ್ರುತಿಸ್ಮೃತಿಸಮ್ಮತವೆಂದು ಸ್ಫುಟವಾಗುತ್ತದೆ.

ತಕ್ಕದ್ದು, ಅವನನ್ನೇ ಅರಿತುಕೊಳ್ಳತಕ್ಕದ್ದು (ಛಾಂ. ೮-೭-೧), "ಅದನ್ನು ಅರಿತುಕೊಂಡರೆ (ಪಾಪಕರ್ಮದಿಂದ) ಲಿಪ್ತನಾಗುವದಿಲ್ಲ" (೪-೪-೨೩), "ಬ್ರಹ್ಮವನ್ನು ಅರಿತುಕೊಂಡವನು ಪರವನ್ನು ಪಡೆದುಕೊಳ್ಳುತ್ತಾನೆ" (ತೈ. ೨-೧). "ಇದನ್ನು ಒಂದೇ ಪ್ರಕಾರವೆಂದು ಕಂಡುಕೊಳ್ಳಬೇಕು" (೪-೪-೨೦), "ಗಾರ್ಗಿಯೆ, ಯಾವನೇ ಆಗಿರಲಿ ಈ ಅಕ್ಷರವನ್ನು ಅರಿಯದೆ ...." (೩-೮-೧೦), "ಧೀರನು ಆತನನ್ನೇ ಅರಿತುಕೊಂಡು" (೪-೪-೨೧), "ಪ್ರಣವವು ಬಿಲ್ಲು, ಆತ್ಮನು ಬಾಣ, ಆ ಬ್ರಹ್ಮವೇ ಲಕ್ಷ್ಯವೆನಿಸುತ್ತದೆ" (ಮು. ೨-೨-೪) ಎಂದು ಮುಂತಾದ ಕರ್ಮಕರ್ತೃನಿರ್ದೇಶದಿಂದಲೂ (ಸಂಸಾರಿಯೂ ಈಶ್ವರನೂ ಬೇರೆ ಬೇರೆ ಎಂದಾಗುತ್ತದೆ). ಇದಲ್ಲದೆ ಮುಮುಕ್ಷುವಿಗೆ ಗತಿಯನ್ನೂ ಮಾರ್ಗ ವಿಶೇಷಗಳನ್ನೂ ಹೇಳಿರುವದರಿಂದಲೂ (ಹೀಗೆಂದು ತಿಳಿಯಬೇಕು). ಭೇದವೇ ಇಲ್ಲದಿದ್ದರೆ ಯಾವನಿಗೆ ಎತ್ತ ಗತಿಯಾಗಬೇಕು? ಅದಿಲ್ಲದಿದ್ದರೆ ದಕ್ಷಿಣೋತ್ತರ ವೆಂಬ ಬೇರೆಬೇರೆಯ ಮಾರ್ಗಗಳನ್ನು (ಹೇಳಿರುವದೂ) ಹೊಂದುವದಿಲ್ಲ; ಹೋಗಿ ಸೇರಬೇಕಾದ ದೇಶವನ್ನು (ಹೇಳಿರುವದೂ) ಹೊಂದುವದಿಲ್ಲ. ಪರ ಮಾತ್ಮನಿಗಿಂತ ಬೇರೆಯಾಗಿರುವ (ಜೀವನಿಗಾದರೆ) ಇದೆಲ್ಲವೂ ಹೊಂದುತ್ತದೆ. ಕರ್ಮ, ಜ್ಞಾನ- ಎಂಬ ಸಾಧನಗಳನ್ನುಪದೇಶಿಸಿರುವದೂ (ಹೊಂದುತ್ತದೆ. ಹೇಗೆಂದರೆ) ಬ್ರಹ್ಮಕ್ಕಿಂತ ಸಂಸಾರಿಯು ಬೇರೆಯಾಗಿದ್ದರೆ ಅವನಿಗಾಗಿ ಅಭ್ಯುದ ಯಕ್ಕೂ ನಿಃಶ್ರೇಯಸಕ್ಕೂ ಸಾಧನವಾಗಿರುವ ಕರ್ಮಜ್ಞಾನಗಳನ್ನು ಉಪದೇಶಿ ಸಿರುವದು (ಸರಿಯಾಗುತ್ತದೆ); ಈಶ್ವರನಿಗೆ (ಅದು ಸರಿಯಾಗು)ವದಿಲ್ಲ. ಏಕೆಂದರೆ ಅವನು ಆಪ್ತಕಾಮನಾಗಿರುತ್ತಾನೆ. ಆದ್ದರಿಂದ (ಇಲ್ಲಿ) ಬ್ರಹ್ಮ ಎಂದರೆ ಬ್ರಹ್ಮನಾಗಲಿರುವ ಪುರುಷನನ್ನೇ ಹೇಳಿದೆ ಎಂಬುದು ಯುಕ್ತ.

## ಸಿದ್ಧಾಂತ : ಪೂರ್ವಪಕ್ಷದಲ್ಲಿ ಬ್ರಹ್ಮೋಪದೇಶಾನರ್ಥಕ್ಯ

(ಭಾಷ್ಯ)

೧೫೬. ನ। ಬ್ರಹ್ಮೋಪದೇಶಾನರ್ಥಕ್ಯಪ್ರಸಙ್ಗಾತ್ । ಸಂಸಾರೀ ಚೇತ್ ಬ್ರಹ್ಮಭಾವೀ ಅಬ್ರಹ್ಮ ಸನ್ ವಿದಿತ್ವಾ ಆತ್ಮಾನಮೇವಾಹಂ ಬ್ರಹ್ಮಾಸ್ಮೀತಿ ಸರ್ವಮಭವತ್ ತಸ್ಯ ಸಂಸಾರ್ಯಾತ್ಮವಿಜ್ಞಾನಾದೇವ ಸರ್ವಾತ್ಮಭಾವಸ್ಯ ಫಲಸ್ಯ ಸಿದ್ಧತ್ವಾತ್ ಪರಬ್ರಹ್ಮೋಪದೇಶಸ್ಯ ಧ್ರುವಮ್ ಆನರ್ಥಕ್ಯಂ ಪ್ರಾಪ್ತ ಮ್ । ತದ್ವಿಜ್ಞಾನಸ್ಯ ಕ್ವಚಿತ್ ಪುರುಷಾರ್ಥಸಾಧನೇ ಅವಿನಿಯೋಗಾತ್ । ಸಂಸಾರಿಣ ಏವ 'ಅಹಂ ಬ್ರಹ್ಮಾಸ್ಮಿ' ಇತಿ ಬ್ರಹ್ಮತ್ವಸಂಪಾದನಾರ್ಥ ಉಪದೇಶಃ ಇತಿ ಚೇತ್ । ಅನಿರ್ಜ್ಞಾತೇ ಹಿ ಬ್ರಹ್ಮಸ್ವರೂಪೇ ಕಿಂ ಸಂಪಾದಯೇತ್ ಅಹಂ ಬ್ರಹ್ಮಾಸ್ಮಿ ಇತಿ? ನಿರ್ಜ್ಞಾತಲಕ್ಷಣೇ ಹಿ ಬ್ರಹ್ಮಣಿ ಶಕ್ಯಾ ಸಂಪತ್ ಕರ್ತುಮ್। ನ "ಅಯಮಾತ್ಮಾ ಬ್ರಹ್ಮ" (೨-೫-೧೯), "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ

ಯ ಆತ್ಮಾ" (೩-೪-೧), "ತತ್ಸತ್ಯಂ ಸ ಆತ್ಮಾ" (ಛಾಂ. ೬-೮-೭), "ಬ್ರಹ್ಮ ವಿದಾಪ್ನೋತಿ ಪರಮ್" (ತೈ. ೨-೧) ಇತಿ ಪ್ರಕೃತ್ಯ "ತಸ್ಮಾದ್ವಾ ಏತಸ್ಮಾದಾತ್ಮನಃ" (ತೈ. ೨-೧) ಇತಿ ಸಹಸ್ರಶೋ ಬ್ರಹ್ಮಾತ್ಮಶಬ್ದಯೋಃ ಸಾಮಾನಾಧಿಕರಣ್ಯಾತ್ ಏಕಾರ್ಥತ್ವಮೇವೇತ್ಯವಗಮ್ಯತೇ। ಅನ್ಯಸ್ಯ ಹಿ ಅನ್ಯತ್ವೇ ಸಂಪತ್ ಕ್ರಿಯತೇ ನೈಕತ್ವೇ। "ಇದಂ ಸರ್ವಂ ಯದಯಮಾತ್ಮಾ" (೨-೪-೬) ಇತಿ ಚ ಪ್ರಕೃತಸ್ಯೈವ ದ್ರಷ್ಟವ್ಯಸ್ಯ ಆತ್ಮನ ಏಕತ್ವಂ ದರ್ಶಯತಿ। ತಸ್ಮಾತ್ ನಾತ್ಮನೋ ಬ್ರಹ್ಮತ್ವಸಂಪದುಪಪತ್ತಿಃ। ನ ಚಾಪ್ಯನ್ಯತ್ ಪ್ರಯೋಜನಂ ಬ್ರಹ್ಮೋಪದೇಶಸ್ಯ ಗಮ್ಯತೇ। "ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ.೩-೨-೯) "ಅಭಯಂ ವೈ ಜನಕ ಪ್ರಾಪ್ತೋಽಸಿ" (೪-೨-೪), "ಅಭಯಂ ಹಿ ವೈ ಬ್ರಹ್ಮ ಭವತಿ" (೪-೪-೨೫) ಇತಿ ಚ ತದಾಪತ್ತಿಶ್ರವಣಾತ್। ಸಂಪತ್ತಿಶ್ಚೇತ್ ತದಾಪತ್ತಿರ್ನ ಸ್ಯಾತ್। ನ ಹಿ ಅನ್ಯಸ್ಯ ಅನ್ಯಭಾವ ಉಪಪದ್ಯತೇ। ವಚನಾತ್ ಸಂಪತ್ತೇರಪಿ ತದ್ಭಾವಾಪತ್ತಿಃ ಸ್ಯಾತ್ ಇತಿ ಚೇತ್। ನ। ಸಂಪತ್ತೇಃ ಪ್ರತ್ಯಯಮಾತ್ರತ್ವಾತ್। ವಿಜ್ಞಾನಸ್ಯ ಚ ಮಿಥ್ಯಾಜ್ಞಾನನಿವರ್ತಕತ್ವವ್ಯತಿರೇಕೇಣ ಅಕಾರಕತ್ವಮ್ ಇತ್ಯವೋಚಾಮ। ನ ಚ ವಚನಂ ವಸ್ತುನಃ ಸಾಮರ್ಥ್ಯಜನಕಮ್। ಜ್ಞಾಪಕಂ ಹಿ ಶಾಸ್ತ್ರಂ ನ ಕಾರಕಮ್ ಇತಿ ಸ್ಥಿತಿಃ। "ಸ ಏಷ ಇಹ ಪ್ರವಿಷ್ಟಃ" (೧-೪-೭) ಇತ್ಯಾದಿವಾಕ್ಯೇಷು ಚ ಪರಸ್ಯೈವ ಪ್ರವೇಶಃ ಇತಿ ಸ್ಥಿತಮ್. ತಸ್ಮಾತ್ ಬ್ರಹ್ಮೇತಿ ನ ಬ್ರಹ್ಮಭಾವಿಪುರುಷಕಲ್ಪನಾ ಸಾಧ್ವೀ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಬ್ರಹ್ಮೋಪದೇಶವು ವ್ಯರ್ಥವಾಗುವದು. (ಈಗ) ಅಬ್ರಹ್ಮವಾಗಿದ್ದು (ಮುಂದೆ) ಬ್ರಹ್ಮವಾಗಲಿರುವ ಸಂಸಾರಿಯೇ ತನ್ನನ್ನೇ 'ನಾನು ಬ್ರಹ್ಮವಾಗಿರುತ್ತೇನೆ' ಎಂದು ತಿಳಿದುಕೊಂಡು ಎಲ್ಲವೂ ಆದನು ಎಂದಾದರೆ, ಅವನಿಗೆ ಸಂಸಾರ್ಯಾತ್ಮವಿಜ್ಞಾನದಿಂದಲೇ ಸರ್ವಾತ್ಮಭಾವವೆಂಬ ಫಲವು ಸಿದ್ಧವಾಗಿರುವದರಿಂದ ಪರಬ್ರಹ್ಮವನ್ನು ಉಪದೇಶಿಸಿರುವದು ಅವಶ್ಯವಾಗಿ ವ್ಯರ್ಥವೇ ಆಗಬೇಕಾಗುವದು; ಏಕೆಂದರೆ ಆ (ಬ್ರಹ್ಮ)ವಿಜ್ಞಾನವನ್ನು ಯಾವ ಪುರುಷಾರ್ಥಕ್ಕೂ ವಿನಿಯೋಗಿಸಿದಂತೆ ಆಗುವದಿಲ್ಲ.[1]

(ಪೂರ್ವಪಕ್ಷ) :- ಸಂಸಾರಿಗೆ 'ನಾನು ಬ್ರಹ್ಮವಾಗಿರುವೆನು' ಎಂದು ಬ್ರಹ್ಮತ್ವಸಂಪಾದನೆಮಾಡಲೆಂದು[2] (ಬ್ರಹ್ಮವನ್ನು) ಉಪದೇಶಿಸಿದೆ ಎಂದರೊ? ಬ್ರಹ್ಮಸ್ವರೂಪವು ತಿಳಿಯದೆ ಇರುವಲ್ಲಿ 'ನಾನು ಬ್ರಹ್ಮವಾಗಿರುವೆನು' ಎಂದು

---

1. ಈ ಜ್ಞಾನವು ಏತಕ್ಕೂ ವಿನಿಯೋಗವಾಗದಿದ್ದರೆ ವ್ಯರ್ಥವೇ ಆಗುವದು.

2. ಬ್ರಹ್ಮವೆಂದು ಉಪಾಸನೆಮಾಡಬೇಕು. ಸಂಪತ್ತೆಂಬ ಉಪಾಸನೆಯ ವಿಷಯಕ್ಕೆ ಸೂ. ಭಾ. ೧-೧-೪ (ಭಾ. ಭಾ. ೪೬) ನೋಡಿ. ಕರ್ಮದಲ್ಲಿ ಸಂಪತ್ತನ್ನು ಮಾಡಿಕೊಳ್ಳುವ ಬಗೆಯನ್ನು ಮುಂದೆ ೩-೧-೬ರಲ್ಲಿ ಹೇಳಿದೆ.

ಏನನ್ನು ಸಂಪಾದನೆಮಾಡಿಯಾನು ? ಬ್ರಹ್ಮದ ಲಕ್ಷಣವನ್ನು ತಿಳಿದುಕೊಂಡಿದ್ದ ರಲ್ಲವೆ, ಸಂಪತ್ತನ್ನು ಮಾಡುವದಕ್ಕಾಗುತ್ತದೆ ?

(ಸಿದ್ಧಾಂತಿ) :- ಹಾಗಲ್ಲ[1] "ಈ ಆತ್ಮನು ಬ್ರಹ್ಮವು" (೨-೫-೯) "ಯಾವನು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ ಯಾವನು ಆತ್ಮನೋ....." (೩-೪-೧), "ಅದು ಸತ್ಯವು, ಅದೇ ಆತ್ಮನು" (ಛಾಂ. ೬-೮-೭....), ಬ್ರಹ್ಮವನ್ನು ಬಲ್ಲವನು ಪರ(ಮಪುರುಷಾರ್ಥ)ವನ್ನು ಪಡೆದುಕೊಳ್ಳು ತ್ತಾನೆ" (ತೈ. ೨-೧) ಎಂದು ಪ್ರಾರಂಭಿಸಿ "ಆ ಈ ಆತ್ಮನಿಂದ....." (ತೈ. ೨-೧) ಎಂದು ಸಾವಿರಗಟ್ಟಲೆಯ (ಶ್ರುತಿಗಳಲ್ಲಿ) ಬ್ರಹ್ಮ, ಆತ್ಮ- ಎಂಬ ಶಬ್ದಗಳಿಗೆ ಸಾಮಾನಾಧಿಕರಣ್ಯವು ಕಂಡುಬರುವದರಿಂದ (ಅವೆರಡಕ್ಕೂ) ಒಂದೇ ಅರ್ಥ ಎಂದು ನಿಶ್ಚಯವಾಗುತ್ತದೆ. ಒಂದು ಇನ್ನೊಂದಂದೇ ಸಂಪತ್ತನ್ನು ಮಾಡು ತ್ತಾರೆ, ಒಂದೇ ಎಂದು (ಮಾಡು)ವದಿಲ್ಲ. ಅಲ್ಲವೆ ? "ಇದೆಲ್ಲವೂ ಈ ಆತ್ಮ ನೆಂಬುದೇ" (೨-೪-೬) ಎಂದು ಪ್ರಕೃತನೇ ಆಗಿರುವ ದ್ರಷ್ಟವ್ಯನಾದ ಆತ್ಮನಿಗೂ (ಬ್ರಹ್ಮಕ್ಕೂ) ಏಕತ್ವವನ್ನು (ಶ್ರುತಿಯಲ್ಲಿ) ತಿಳಿಸಿರುತ್ತದೆ. ಆದ್ದರಿಂದ ಆತ್ಮನಿಗೆ ಬ್ರಹ್ಮತ್ವವನ್ನು ಸಂಪಾದನೆ(ಮಾಡುವದಕ್ಕಾಗಿ ಉಪದೇಶವು ಎಂಬುದು) ಹೊಂದುವದಿಲ್ಲ.

ಬ್ರಹ್ಮೋಪದೇಶಕ್ಕೆ ಮತ್ತೆ ಯಾವ ಪ್ರಯೋಜನವೂ (ಇರುವಂತೆ) ತಿಳಿಯ ಬರುವದೂ ಇಲ್ಲ. ಏಕೆಂದರೆ "ಬ್ರಹ್ಮವನ್ನು ಅರಿತನೆಂದರೆ ಬ್ರಹ್ಮವೇ ಆಗು ತ್ತಾನೆ" (ಮುಂ. ೩-೨-೯) "ಜನಕನೆ, ಅಭಯವನ್ನೇ ಪಡೆದುಕೊಂಡಿರು ತ್ತೀಯೆ," (೪-೨-೪), "ಅಭಯವಾದ ಬ್ರಹ್ಮವೇ ಆಗುತ್ತಾನೆ" (೪-೪-೨೫) ಎಂದು ಅದೇ (ಬ್ರಹ್ಮ)ವಾಗುವ (ಫಲವನ್ನು) ಶ್ರುತಿಯಲ್ಲಿ ಹೇಳಿರುತ್ತದೆ.[2] (ಇದು) ಸಂಪತ್ತಿಯಾದರೆ ಆ ಬ್ರಹ್ಮಭಾವವನ್ನು ಪಡೆದುಕೊಳ್ಳುವದು ಆಗ ಲಾರದು ; ಒಂದು ಮತ್ತೊಂದರ ಸ್ವರೂಪವನ್ನು ಪಡೆಯುವದು ಆಗಲಾರದು.[3]

(ಆಕ್ಷೇಪ) :- ವಚನಪ್ರಾಮಾಣ್ಯದಿಂದ ಸಂಪತ್ತಿಯಿಂದಲೂ ಅದರ ಸ್ವರೂಪವನ್ನು ಪಡೆಯುವದಾಗಬಹುದಲ್ಲ !

---

1. ಬ್ರಹ್ಮವೂ ಆತ್ಮನೂ ಒಂದೇ ಎಂದು ಶ್ರುತಿಸಿದ್ಧವಾಗಿರುವಲ್ಲಿ, ಆತ್ಮನಲ್ಲಿ ಬ್ರಹ್ಮತ್ವ ವನ್ನು ಸಂಪಾದನೆಮಾಡುವದಕ್ಕಾಗಿ ಬ್ರಹ್ಮವನ್ನುಪದೇಶಿಸಿದೆ ಎಂಬ ಪೂರ್ವಪಕ್ಷವು ನಿಲ್ಲು ವದಿಲ್ಲ.

2. ಆದ್ದರಿಂದ ತಾನು ಬ್ರಹ್ಮವೇ ಆಗಿದ್ದು ಅಜ್ಞಾನದಿಂದ ಅದನ್ನು ಅರಿಯದೆ ಇರುತ್ತಾನೆ.

3 ಸೂ. ಭಾ. ೧-೧-೪ ಸಂಪದಾದಿರೂಪದ ಉಪಾಸನೆಯನ್ನು 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' ಮುಂತಾದ ವಾಕ್ಯಗಳಲ್ಲಿ ಹೇಳಿಲ್ಲನೆಂಬುದಕ್ಕೆ ತದ್ಭಾವಾಪತ್ತಿವಚನವು ಸಾಧಕವೆಂದು (ಭಾ. ಭಾ. ೪೬) ಹೇಳಿದೆ.

(ಪರಿಹಾರ) :- ಹಾಗಲ್ಲ. ಏಕೆಂದರೆ ಸಂಪತ್ತಿ ಎಂದರೆ ಬರಿಯ ಒಂದು ಪ್ರತ್ಯಯವೇ. ವಿಜ್ಞಾನವು ಮಿಥ್ಯಾಜ್ಞಾನವನ್ನು ಕಳೆಯುವದಲ್ಲದೆ (ಹೊಸದಾಗಿ) ಏನೂ ಮಾಡುವದಿಲ್ಲ[1] ಎಂದು (ಆಗಲೆ) ಹೇಳಿರುತ್ತೇವೆ. ವಚನವು ವಸ್ತುವಿಗೆ (ಇಲ್ಲದಿದ್ದ) ಸಾಮರ್ಥ್ಯವನ್ನುಂಟುಮಾಡುವದಲ್ಲ. **ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲ**[2] ಎಂಬುದು (ವಸ್ತು)ಸ್ಥಿತಿಯು. "ಆ ಇವನು ಇಲ್ಲಿ ಒಳಹೊಕ್ಕನು" (೧-೪-೭) ಮುಂತಾದ ವಾಕ್ಯಗಳಲ್ಲಿ ಪರಮಾತ್ಮನೇ (ಸೃಷ್ಟಿಯಲ್ಲಿ) ಒಳಹೊಕ್ಕಿರುತ್ತಾನೆ ಎಂದು ಇರುತ್ತದೆ. ಆದ್ದರಿಂದ ಬ್ರಹ್ಮ ಎಂದರೆ ಬ್ರಹ್ಮವಾಗಿರುವ ಪುರುಷನೆಂದು ಕಲ್ಪಿಸುವದು ನ್ಯಾಯವಲ್ಲ.

## ಪೂರ್ವಪಕ್ಷದಲ್ಲಿ ಸಿದ್ಧಾಂತಹಾನಿ

(ಭಾಷ್ಯ)

೧೫೭. ಇಷ್ಟಾರ್ಥಬಾಧನಾಚ್ಚ। ಸೈನ್ಧವಘನವತ್ ಅನನ್ತರಮ್ ಅಬಾಹ್ಯಮ್ ಏಕರಸಂ ಬ್ರಹ್ಮ ಇತಿ ವಿಜ್ಞಾನಂ ಸರ್ವಸ್ಯಾಮ್ ಉಪನಿಷದಿ ಪ್ರತಿಪಿಪಾದಯಿಷಿತೋಽರ್ಥಃ ಕಾಣ್ಡದ್ವಯೇಽಪಿ ಅನ್ತೇಽವಧಾರಣಾತ್ ಅವಗಮ್ಯತೇ "ಇತ್ಯನುಶಾಸನಮ್" (೨-೫-೧೯) "ಏತಾವದರೇ ಖಲ್ವಮೃತತ್ವಮ್" (೪-೫-೧೫) ಇತಿ। ತಥಾ ಸರ್ವಶಾಖೋಪನಿಷತ್ಸು ಚ ಬ್ರಹ್ಮೈಕತ್ವವಿಜ್ಞಾನಂ ನಿಶ್ಚಿತೋಽರ್ಥಃ। ತತ್ರ ಯದಿ ಸಂಸಾರೀ ಬ್ರಹ್ಮಣೋಽನ್ಯಃ ಆತ್ಮಾನಮೇವಾವೇತ್ ಇತಿ ಕಲ್ಪ್ಯೇತ। ಇಷ್ಟಸ್ಯಾರ್ಥಸ್ಯ ಬಾಧನಂ ಸ್ಯಾತ್। ತಥಾ ಚ ಶಾಸ್ತ್ರಮ್ ಉಪಕ್ರಮೋಪಸಂಹಾರಯೋರ್ವಿರೋಧಾತ್ ಅಸಮಞ್ಜಸಂ ಕಲ್ಪಿತಂ ಸ್ಯಾತ್ ॥

(ಭಾಷ್ಯಾರ್ಥ)

ಇಷ್ಟವಾದ ಅರ್ಥವು ಬಾಧಿತವಾಗುವದರಿಂದಲೂ (ಈ ಪೂರ್ವಪಕ್ಷವು ಸರಿಯಲ್ಲ. ಹೇಗೆಂದರೆ), ಉಪ್ಪಿನ ಹರಳಿನಂತೆ, ಒಳಗಿಲ್ಲದೆ ಹೊರಗಿಲ್ಲದೆ ಏಕರಸವಾಗಿರುವದು, ಬ್ರಹ್ಮವು ಎಂಬೀ ವಿಜ್ಞಾನವೇ (ಈ) ಉಪನಿಷತ್ತಿನಲ್ಲೆಲ್ಲ

---

1. ಉಪಾಸನೆಯು ರೂಪವಾದ ಪ್ರತ್ಯಯವಾದರೆ ವಸ್ತುವಿನ ಸ್ವರೂಪವು ಹೇಗಿದ್ದರೂ ವಚನಪ್ರಾಮಾಣ್ಯದಿಂದ ಭಾವಿಸುವದು ಮಾತ್ರವಾಗುತ್ತದೆ. ವಸ್ತುತಂತ್ರವಾದ ಪ್ರತ್ಯಯವಾದರೆ ಅದು ಇದ್ದದ್ದನ್ನು ಮಾತ್ರ ಹೇಳಬಲ್ಲದು, ಹೊಸದಾಗಿ ಉಂಟುಮಾಡಲಾರದು. ಇದನ್ನು ಹಿಂದೆ ಹೇಳಿದ್ದರೂ ಅಭಿಪ್ರಾಯವನ್ನು ವಿಶದಗೊಳಿಸುವದಕ್ಕಾಗಿ ಮತ್ತೆ ಪ್ರಸ್ತಾಪಿಸಿದೆ.

2. ಪುರುಷಾರ್ಥಕ್ಕೆ ಉಪಾಯವನ್ನು ತಿಳಿಸುವದು ಶಾಸ್ತ್ರವು ; ಅದಕ್ಕೆ ವಸ್ತುವನ್ನು ಮಾರ್ಪಡಿಸುವ ಶಕ್ತಿಯಿಲ್ಲ. ತೈ. ಭಾ. ೨-೧೧ (ಭಾ. ಭಾ. ೭೩), ಪ್ರ. ಭಾ. ೬-೨ (ಭಾ. ಭಾ. ೯೭), ಗೀ. ಭಾ. ೩-೧ (ಭಾ ಭಾ. ೧೪೨).

ತಿಳಿಸಬೇಕಾಗಿರುವ ಅರ್ಥವು ಎಂಬುದು ಎರಡು ಕಾಂಡಗಳಲ್ಲಿಯೂ[1] "ಹೀಗೆಂಬುದು ಅನುಶಾಸನವು" (೨-೫-೧೯), "ಎಲೆ, ಅಮೃತತ್ವವು ಇಷ್ಟೇ" (೪-೫-೧೫) ಎಂದು ಒತ್ತಿಹೇಳಿರುವದರಿಂದ ಗೊತ್ತಾಗುತ್ತದೆ. ಇದರಂತೆ ಎಲ್ಲಾ ಶಾಖೆಗಳ ಉಪನಿಷತ್ತುಗಳಲ್ಲಿಯೂ ಬ್ರಹ್ಮೈಕತ್ವವಿಜ್ಞಾನವೇ ನಿಶ್ಚಿತವಾಗಿರುವ ಅರ್ಥವು. ಹೀಗಿರುವಲ್ಲಿ ಬ್ರಹ್ಮಕ್ಕಿಂತ ಬೇರೆಯಾಗಿರುವ ಸಂಸಾರಿಯು ತನ್ನನ್ನೇ ಅರಿತುಕೊಂಡನು ಎಂದು ಕಲ್ಪಿಸುವದಾದರೆ ಇಷ್ಟವಾದ ಅರ್ಥವನ್ನೇ ಬಾಧಿಸಿದಂತೆ ಆಗುತ್ತದೆ.[2] ಹಾಗಾದರೆ ಉಪಕ್ರಮೋಪಸಂಹಾರಗಳಿಗೆ ವಿರೋಧವಿರುವದರಿಂದ ಶಾಸ್ತ್ರವು ಅಸಮಂಜಸವೆಂದು ಕಲ್ಪಿಸಿದಂತೆ ಆಗುವದು.[3]

## ಪೂರ್ವಪಕ್ಷದಲ್ಲಿ ಬ್ರಹ್ಮವಿದ್ಯೆ ಎಂಬ ಹೆಸರೂ ಸಲ್ಲದು

(ಭಾಷ್ಯ)

೧೫೮. ವ್ಯಪದೇಶಾನುಪಪತ್ತೇಶ್ಚ। ಯದಿ ಚ 'ಆತ್ಮಾನಮೇವಾವೇತ್' ಇತಿ ಸಂಸಾರೀ ಕಲ್ಪ್ಯೇತ ಬ್ರಹ್ಮವಿದ್ಯಾ ಇತಿ ವ್ಯಪದೇಶೋ ನ ಸ್ಯಾತ್। ಆತ್ಮಾನಮೇವಾವೇದಿತಿ ಸಂಸಾರಿಣ ಏವ ವೇದ್ಯತ್ವೋಪಪತ್ತೇಃ। ಆತ್ಮೇತಿ ವೇದಿತುರನ್ಯದುಚ್ಯತ ಇತಿ ಚೇತ್। ನ। ಅಹಂ ಬ್ರಹ್ಮಾಸ್ಮೀತಿ ವಿಶೇಷಣಾತ್। ಅನ್ಯಶ್ಚೇದ್ ವೇದ್ಯಃ ಸ್ಯಾತ್ 'ಅಯಮ್ ಅಸೌ' ಇತಿ ವಾ ವಿಶೇಷ್ಯೇತ ನ ತು 'ಅಹಮಸ್ಮಿ' ಇತಿ। ಅಹಮಸ್ಮಿ ಇತಿ ವಿಶೇಷಣಾತ್ ಆತ್ಮಾನಮೇವಾವೇತ್ ಇತಿಚಾವಧಾರಣಾತ್ ನಿಶ್ಚಿತಮ್ ಆತ್ಮೈವ ಬ್ರಹ್ಮ ಇತ್ಯವಗಮ್ಯತೇ। ತಥಾ ಚ ಸತಿ ಉಪಪನ್ನೋ ಬ್ರಹ್ಮವಿದ್ಯಾವ್ಯಪದೇಶೋ ನಾನ್ಯಥಾ। ಸಂಸಾರಿವಿದ್ಯಾ ಹಿ ಅನ್ಯಥಾ ಸ್ಯಾತ್। ನ ಚ ಬ್ರಹ್ಮತ್ವಾಬ್ರಹ್ಮತ್ವೇ ಹ್ಯೇಕಸ್ಯೋಪಪನ್ನೇ ಪರಮಾರ್ಥತಃ। ತಮಃಪ್ರಕಾಶಾವಿವ ಭಾನೋರ್ವಿರುದ್ಧತ್ವಾತ್। ನ ಚೋಭಯನಿಮಿತ್ತತ್ವೇ ಬ್ರಹ್ಮವಿದ್ಯಾ ಇತಿ ನಿಶ್ಚಿತೋ ವ್ಯಪದೇಶೋ ಯುಕ್ತಃ। ತದಾ ಬ್ರಹ್ಮವಿದ್ಯಾ ಸಂಸಾರಿವಿದ್ಯಾ ಚ ಸ್ಯಾತ್। ನ ಚ ವಸ್ತುನೋಽರ್ಧಜರತೀಯತ್ವಂ ಕಲ್ಪಯಿತುಂ ಯುಕ್ತಮ್ ತತ್ತ್ವಜ್ಞಾನವಿವಕ್ಷಾಯಾಮ್। ಶ್ರೋತುಃ ಸಂಶಯೋ ಹಿ ತಥಾ ಸ್ಯಾತ್। ನಿಶ್ಚಿತಂ ಚ ಜ್ಞಾನಂ ಪುರುಷಾರ್ಥಸಾಧನಮ್ ಇಷ್ಯತೇ। "ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ" (ಛಾಂ. ೩-೧೪-೪),

---

1. ಮಧುಕಾಂಡಯಾಜ್ಞವಲ್ಕೀಯಕಾಂಡಗಳೆರಡರಲ್ಲಿಯೂ ಬ್ರಹ್ಮವಿದ್ಯೆಯನ್ನು ಹೇಳಿದೆ ಎಂಬುದು ಪೂರ್ವಪಕ್ಷಿಗೂ ಇಷ್ಟ.

2. ಬ್ರಹ್ಮವಿದ್ಯೆಯೇ ಉಪನಿಷತ್ತುಗಳಿಗೆಲ್ಲ ವಿಷಯವೆಂಬುದೂ ಇಷ್ಟ.

3. ಶಾಸ್ತ್ರವು ಪ್ರಮಾಣವೆಂಬುದೂ ಇಷ್ಟ. ಇದುವರೆಗೆ ಹೇಳಿದ ಇಷ್ಟಾರ್ಥವನ್ನೆಲ್ಲ, ಜೀವನು ತನ್ನನ್ನೇ ಅರಿತುಕೊಂಡು ಸರ್ವವೂ ಆದನು ಎಂದು ಕಲ್ಪಿಸಿದರೆ, ಬಾಧಿಸಿದಂತೆ ಆಗುತ್ತವೆ ಎಂದು ಅಭಿಪ್ರಾಯ.

"ಸಂಶಯಾತ್ಮಾ ವಿನಶ್ಯತಿ" (ಗೀ. ೪-೪೦) ಇತಿ ಶ್ರುತಿಸ್ಮೃತಿಭ್ಯಾಮ್ । ಅತೋ ನ ಸಂಶಯಿತೋ ವಾಕ್ಯಾರ್ಥೋ ವಾಚ್ಯಃ ಪರಹಿತಾರ್ಥಿನಾ ॥

(ಭಾಷ್ಯಾರ್ಥ)

ಹೆಸರು ಹೊಂದುವದಿಲ್ಲವಾದ್ದರಿಂದಲೂ (ಪೂರ್ವಪಕ್ಷವು ಸರಿಯಲ್ಲ. ಇದರ ವಿವರ) : 'ತನ್ನನ್ನೇ ಅರಿತುಕೊಂಡಿತು' ಎಂಬಿದು ಸಂಸಾರಿಯೇ ಎಂದು ಕಲ್ಪಿಸಿದರೆ 'ಬ್ರಹ್ಮವಿದ್ಯೆ' ಎಂದು ಹೆಸರು ಬರಲಾರದು; ಏಕೆಂದರೆ ತನ್ನನ್ನೇ ಅರಿತುಕೊಂಡನೆಂದು (ಹೇಳಿರು)ವದರಿಂದ ಸಂಸಾರಿಯೇ ವೇದ್ಯನೆಂದಾಗುತ್ತದೆ.

(ಪೂರ್ವಪಕ್ಷ):- (ಆತ್ಮನನ್ನು ಎಂಬಲ್ಲಿ) ಆತ್ಮನೆಂದರೆ ಅರಿಯುವಾತನಿಗೀತ ಬೇರೆಯಾದ (ಬ್ರಹ್ಮ)ವನ್ನೇ ಹೇಳಿದೆ ಎಂದರೊ ?

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ 'ನಾನು ಬ್ರಹ್ಮವಾಗಿರುತ್ತೇನೆ' ಎಂದು ವಿಶೇಷವನ್ನು ಕೊಟ್ಟಿರುತ್ತದೆ. ವೇದ್ಯನಾದವನು ಬೇರೊಬ್ಬನಾಗಿದ್ದರೆ 'ಇವನು' (ಎಂದೋ) 'ಅವನು' ಎಂದೋ ವಿಶೇಷಣವನ್ನು ಕೊಡಬೇಕೇ ಹೊರತು 'ನಾನು ಆಗಿರುತ್ತೇನೆ' ಎಂದು ವಿಶೇಷಣವನ್ನು ಕೊಡಬಾರದು. 'ನಾನಾಗಿರುವೆನು' ಎಂದು ವಿಶೇಷಣಗಳನ್ನು ಕೊಟ್ಟಿರವದರಿಂದಲೂ 'ತನ್ನನ್ನೇ ಅರಿತುಕೊಂಡಿತು' ಎಂದು ಅವಧಾರಣೆ(ಮಾಡಿ ಹೇಳಿರು)ವದರಿಂದಲೂ ಆತ್ಮನೇ ಬ್ರಹ್ಮವು ಎಂದು ನಿಶ್ಚಿತವಾಗಿ ಗೊತ್ತಾಗುತ್ತದೆ. ಮತ್ತು ಹಾಗಾದರೆ 'ಬ್ರಹ್ಮವಿದ್ಯೆ' ಎಂಬ ಹೆಸರು ಹೊಂದೀತೇ ಹೊರತು ಬೇರೊಂದು ಪ್ರಕಾರದಲ್ಲಿ ಹೊಂದುವದಿಲ್ಲ. ಏಕೆಂದರೆ ಹಾಗಿಲ್ಲದಿದ್ದರೆ (ಇದು) ಸಂಸಾರಿವಿದ್ಯೆಯೇ ಆಗಿ ಬಿಟ್ಟೀತು.

ಬ್ರಹ್ಮತ್ವ, ಅಬ್ರಹ್ಮತ್ವ- (ಈ ಎರಡೂ) ಒಬ್ಬನಿಗೇ ಪರಮಾರ್ಥವಾಗಿ ಹೊಂದಲಾರವು.[1] (ಒಬ್ಬ) ಸೂರ್ಯನಿಗೇ ಕತ್ತಲೆಬೆಳಕು(ಗಳೆರಡೂ) ಹೇಗೆ ಹೊಂದಲಾರವೋ) ಹಾಗೆ(ಯೇ ಇದು). ಏಕೆಂದರೆ (ಅವೆರಡೂ ಒಂದಕ್ಕೊಂದು) ವಿರುದ್ಧವಾಗಿವೆ. (ಈ) ಎರಡೂ ನಿಮಿತ್ತವಾಗಿದ್ದರೆ ಬ್ರಹ್ಮವಿದ್ಯೆ ಎಂಬ ನಿಶ್ಚಿತವಾದ ಹೆಸರು ಯುಕ್ತವೂ ಆಗುವದಿಲ್ಲ. ಆಗ ಬ್ರಹ್ಮವಿದ್ಯೆಯೂ ಸಂಸಾರಿವಿದ್ಯೆ

1. ಜೀವನು ಬ್ರಹ್ಮಕ್ಕಿಂತ ಭಿನ್ನನಾದರೆ ತನ್ನನ್ನೇ ಅರಿತುಕೊಂಡು ಸರ್ವಾತ್ಮನಾದನೆಂದಾಗಿ ಇದು ಸಂಸಾರಿವಿದ್ಯೆಯಾಗುವದು; ಬ್ರಹ್ಮವನ್ನೇ ಅರಿತುಕೊಂಡು ಸರ್ವವಾದನು ಎಂದು ಅರ್ಥವನ್ನು ಮಾಡಿದರೂ 'ನಾನು ಬ್ರಹ್ಮವು' ಎಂಬ ವಾಕ್ಯಕ್ಕೆ ವಿರೋಧವಾಗುವದು ಎಂದು ಹೇಳಿದ್ದಾಯಿತು. ಜೀವನು ಬ್ರಹ್ಮಕ್ಕಿಂತ ಭಿನ್ನಾಭಿನ್ನ : ಭಿನ್ನಾಭಿನ್ನವಾಗಿರುವ ಬ್ರಹ್ಮವನ್ನು ಅರಿತು ಅಭಿನ್ನವಾದ ಬ್ರಹ್ಮರೂಪದಿಂದ ಸರ್ವವೂ ಆಗುತ್ತಾನೆ- ಎಂದರೆ ಅದು ವ್ಯಾಹತ, ಮತ್ತು ಆ ಪಕ್ಷದಲ್ಲಿ ಬ್ರಹ್ಮವಿದ್ಯೆ ಎಂದು ನಿಯತವಾದ ಹೆಸರೂ ಬರುವದಕ್ಕೆ ಕಾರಣವಿಲ್ಲ, ಅದರ ಜ್ಞಾನವು ಪುರುಷಾರ್ಥಕ್ಕೂ ಕಾರಣವಾಗಲಾರದು ಎಂದು ಈಗ ಹೇಳುತ್ತಾರೆ.

ಯೂ (ಆ ಒಂದೇ) ಆಗುತ್ತದೆ. ತತ್ತ್ವಜ್ಞಾನವನ್ನು ಹೇಳಬೇಕೆಂದಿರುವಲ್ಲಿ ವಸ್ತುವಿಗೆ ಅರ್ಧಜರತೀಯತ್ವವನ್ನು[1] ಕಲ್ಪಿಸುವದು ಯುಕ್ತವಲ್ಲ; ಏಕೆಂದರೆ ಹಾಗಾದರೆ ಶ್ರೋತೃವಾದವನಿಗೆ ಸಂಶಯವೇ ಉಂಟಾದೀತು. ನಿಶ್ಚಿತವಾದ ಜ್ಞಾನವೇ ಪುರುಷಾರ್ಥಸಾಧನವೆಂದು (ಎಲ್ಲರೂ) ಒಪ್ಪಿರುತ್ತಾರೆ. "ಯಾವನಿಗೆ ಸ್ಪಷ್ಟವಾಗಿ (ಅರಿವು) ಇರುವದೋ ಸಂಶಯವಿಲ್ಲವೋ..... (ಅವನಿಗೆ ಬ್ರಹ್ಮ ಪ್ರಾಪ್ತಿಯಾಗುತ್ತದೆ)" (ಛಾಂ. ೩-೧೪-೪), "ಸಂಶಯಾತ್ಮನು ವಿನಾಶವಾಗುವನು" (ಗೀ. ೪-೪೦) ಎಂಬ ಶ್ರುತಿಸ್ಮೃತಿಗಳಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದ ಮತ್ತೊಬ್ಬರಿಗೆ ಹಿತವನ್ನು ಬಯಸುವನಾದರೆ ಸಂಶಯಿತವಾಗಿ ವಾಕ್ಯಾರ್ಥವನ್ನು ಹೇಳಬಾರದು.

## ಬ್ರಹ್ಮವು ಸಾಧಕವೆಂದರೆ ದೋಷವಿಲ್ಲ

(ಭಾಷ್ಯ)

೧೫೯. ಬ್ರಹ್ಮಣಿ ಸಾಧಕತ್ವಕಲ್ಪನಾ ಅಸ್ಮದಾದಿಷ್ವಿವ ಅಪೇಶಲಾ ತದಾತ್ಮಾನಮೇವಾವೇತ್ತಸ್ಮಾತ್ತತ್ಸರ್ವಮಭವತ್ ಇತಿ (ಇತಿ) ಚೇತ್। ನ। ಶಾಸ್ತ್ರೋಪಾಲಮ್ಭಾತ್। ನ ಹಿ ಅಸ್ಮತ್ಕಲ್ಪನೇಯಮ್ ಶಾಸ್ತ್ರಕೃತಾ ತು ತಸ್ಮಾತ್ ಶಾಸ್ತ್ರಸ್ಯಾಯಮ್ ಉಪಾಲಮ್ಭಃ। ನ ಚ ಬ್ರಹ್ಮಣಃ ಇಷ್ಟಂ ಚಿಕೀರ್ಷುಣಾ ಶಾಸ್ತ್ರಾರ್ಥವಿಪರೀತಕಲ್ಪನಯಾ ಸ್ವಾರ್ಥಪರಿತ್ಯಾಗಃ ಕಾರ್ಯಃ। ನ ಚ ಏತಾವತ್ಯೇವ ಅಕ್ಷಮಾ ಯುಕ್ತಾ ಭವತಃ। ಸರ್ವಂ ಹಿ ನಾನಾತ್ವಂ ಬ್ರಹ್ಮಣಿ ಕಲ್ಪಿತಮೇವ। "ಏಕಧೈವಾನುದ್ರಷ್ಟವ್ಯಮ್" (೪-೪-೨೦), "ನೇಹ ನಾನಾಸ್ತಿ ಕಿಂಚನ" (೪-೪-೧೯), "ಯತ್ರ ಹಿ ದ್ವೈತಮಿವ ಭವತಿ" (೪-೫-೧೫), "ಏಕಮೇವಾದ್ವಿತೀಯಮ್" (ಛಾಂ. ೬-೨-೧) -ಇತ್ಯಾದಿವಾಕ್ಯಶತೇಭ್ಯಃ। ಸರ್ವೋ ಹಿ ಲೋಕವ್ಯವಹಾರೋ ಬ್ರಹ್ಮಣ್ಯೇವ ಕಲ್ಪಿತಃ, ನ ಪರಮಾರ್ಥಸನ್[2] ಇತಿ ಅತ್ಯಲ್ಪಮಿದಮುಚ್ಯತೇ .ಇಯಮೇವ ಕಲ್ಪನಾ ಅಪೇಶಲಾ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :- "ಅದು ತನ್ನನ್ನೇ ಅರಿತುಕೊಂಡಿತು, ಅದರಿಂದ ಎಲ್ಲವೂ ಆಯಿತು" ಎಂದು ಬ್ರಹ್ಮದಲ್ಲಿಯೂ ನಮ್ಮಂಥವರಲ್ಲಿರುವಂತೆ ಸಾಧಕತ್ವವನ್ನು ಕಲ್ಪಿಸುವದು ಚೆನ್ನಾಗಿರುವದಿಲ್ಲವಲ್ಲ!

---

1. ಕೋಳಿಯನ್ನು ಅಡಿಗೆಗೂ ಉಪಯೋಗಿಸಬಹುದು. ಮೊಟ್ಟೆಯನ್ನಿಡುವದಕ್ಕೂ ಸಾಕಬಹುದು ಎಂಬಂತೆ ಹಾಗೂ ಇರಲಿ ಹೀಗೂ ಇರಲಿ ಎಂಬ ಪ್ರಕಾರವು ಅರ್ಧಜರತೀಯವು.

2. 'ಪರಮಾರ್ಥಃ ಸನ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಪರಿಹಾರ) :– ಹಾಗಲ್ಲ. ಏಕೆಂದರೆ (ಇದು) ಶಾಸ್ತ್ರವನ್ನೇ ದೂಷಿಸಿದಂತೆ. (ಇದರ ವಿವರ) : ಇದು ನಮ್ಮ ಕಲ್ಪನೆಯೇನೂ ಅಲ್ಲ, ಶಾಸ್ತ್ರದಿಂದಾದದ್ದು. ಆದ್ದರಿಂದ ಈ ದೂಷಣೆಯು ಶಾಸ್ತ್ರಕ್ಕೇ (ಆಗುವದು). ಬ್ರಹ್ಮಕ್ಕೆ ಇಷ್ಟವಾದದ್ದನ್ನು ಮಾಡಬೇಕೆನ್ನುವವನು ಶಾಸ್ತ್ರಾರ್ಥವನ್ನು ವಿಪರೀತವಾಗಿ ಕಲ್ಪಿಸಿ ಅದರ (ನಿಜವಾದ) ಅರ್ಥವನ್ನು ಬಿಡುವದು ತಕ್ಕದ್ದಲ್ಲ.[1] ಇದಲ್ಲದೆ ನೀನು ಇಷ್ಟುಮಾತ್ರ ಅಸಹನೆಯನ್ನು (ತೋರುವದೂ) ಸರಿಯಲ್ಲ. ಏಕೆಂದರೆ ಎಲ್ಲಾ ನಾನಾತ್ವವೂ ಬ್ರಹ್ಮದಲ್ಲಿ ಕಲ್ಪಿತವಾಗಿಯೇ (ಇರುತ್ತದೆ). "ಒಂದೇ ಪ್ರಕಾರವಾಗಿ ಕಂಡುಕೊಳ್ಳಬೇಕು" (೪-೪-೨೦), "ಇಲ್ಲಿ ಒಂದಿಷ್ಟೂ ನಾನಾ ಇಲ್ಲ" (೪-೪-೧೯), "ಎಲ್ಲಿ ದ್ವೈತವಿರುವಂತಿರುವದೋ (ಅಲ್ಲಲ್ಲವೆ, ಒಬ್ಬನು ಇನ್ನೊಬ್ಬನನ್ನು ಕಾಣುವನು) ?" (೪-೫-೧೫), "ಎರಡನೆಯದಿಲ್ಲದ ಒಂದೇ'' (ಛಾಂ. ೬-೨-೧) ಮುಂತಾದ ನೂರಾರು ವಾಕ್ಯಗಳಿಂದ (ಇದು ಸಿದ್ಧವಾಗಿರುತ್ತದೆ). ಲೋಕವ್ಯವಹಾರವೆಲ್ಲವೂ ಬ್ರಹ್ಮದಲ್ಲಿಯೇ ಕಲ್ಪಿತವಾಗಿರುತ್ತದೆಯೇ ಹೊರತು ನಿಜವಾಗಿರುವದಿಲ್ಲ[2] ; ಆದ್ದರಿಂದ ಇದೊಂದೇ ಕಲ್ಪನೆಯು ಚೆನ್ನಾಗಿರುವದಿಲ್ಲವೆಂದು ಹೇಳಿದ್ದಿದು ಅತ್ಯಲ್ಪವು.

## ತನ್ನನ್ನೇ ಅರಿತುಕೊಂಡಿತು ಎಂಬುದರ ಅರ್ಥ

(ಭಾಷ್ಯ)

೧೬೦. ತಸ್ಮಾತ್ ಯತ್ ಪ್ರವಿಷ್ಟಂ ಸ್ರಷ್ಟೃ ಬ್ರಹ್ಮ ತದ್ ಬ್ರಹ್ಮ। ವೈಶಬ್ದೋಽವಧಾರಣಾರ್ಥಃ। ಇದಂ ಶರೀರಸ್ಥಂ ಯತ್ ಗೃಹ್ಯತೇ ಅಗ್ರೇ ಪ್ರಾಕ್ ಪ್ರತಿಬೋಧಾದಪಿ ಬ್ರಹ್ಮೈವ ಆಸೀತ್ ಸರ್ವಂ ಚೇದಮ್। ಕಿಂ ತು ಅಪ್ರತಿಬೋಧಾತ್ ಅಬ್ರಹ್ಮಾಸ್ಮಿ ಅಸರ್ವಂ ಚ ಇತಿ ಆತ್ಮನಿ ಅಧ್ಯಾರೋಪಾತ್ ಕರ್ತಾಹಮ್ ಕ್ರಿಯಾವಾನ್ ಫಲಾನಾಂ ಚ ಭೋಕ್ತಾ ಸುಖೀ ದುಃಖೀ ಸಂಸಾರೀ ಇತಿ ಚ ಅಧ್ಯಾರೋಪಯತಿ। ಪರಮಾರ್ಥತಸ್ತು ಬ್ರಹ್ಮೈವ ತದ್ವಿಲಕ್ಷಣಮ್, ಸರ್ವಂ ಚ। ತತ್ ಕಥಂಚಿತ್ ಆಚಾರ್ಯೇಣ ದಯಾಲುನಾ ಪ್ರತಿಬೋಧಿತಂ ನಾಸಿ ಸಂಸಾರೀತಿ ಆತ್ಮಾನಮೇವ ಅವೇತ್ ಸ್ವಾಭಾವಿಕಮ್ ಅವಿದ್ಯಾಧ್ಯಾರೋಪಿತವಿಶೇಷವರ್ಜಿತಮ್ ಇತ್ಯೇವಶಬ್ದಸ್ಯ ಅರ್ಥಃ ॥

---

1. ಶಾಸ್ತ್ರವೇ ಬ್ರಹ್ಮವನ್ನು ತಿಳಿಸಿಕೊಡತಕ್ಕದ್ದು. ಅದನ್ನೇ ಬಿಡುವವನು 'ಇದು ಹೊಂದುತ್ತದೆ, ಅದು ಹೊಂದುವದಿಲ್ಲ' ಎಂದು ಹೇಗೆ ತಾನೆ ನಿರ್ಣಯಿಸಬಲ್ಲನು ? ಬ್ರಹ್ಮವು ಸಾಧಕನೆಂದು ಕಲ್ಪಿಸಿರುವದೂ ಶಾಸ್ತ್ರವೇ. ಆದ್ದರಿಂದ ಯಾವ ದೋಷವೂ ಇಲ್ಲಿಲ್ಲ ಎಂದರ್ಥ. ಶಾಸ್ತ್ರವು ಅಧ್ಯಾರೋಪಾಪವಾದನ್ಯಾಯದಿಂದ ಈ ಸಾಧಕತ್ವವನ್ನು ಕಲ್ಪಿಸಿದೆ ಎಂದು ಭಾವ.

2. ಎಲ್ಲಾ ವ್ಯವಹಾರವೂ ಕಲ್ಪನೆಯೇ, ಅವಿದ್ಯಾವಿಷಯವೇ ; ಆದ್ದರಿಂದ ಯಾವ ದೋಷವೂ ಬ್ರಹ್ಮಕ್ಕೆ ಉಂಟಾಗುವದಿಲ್ಲ. ಸೂ.ಭಾ. ೩-೨-೧೫ ; ೨-೬೯.

(ಭಾಷ್ಯಾರ್ಥ)

ಆದ್ದರಿಂದ ಸೃಷ್ಟಿಮಾಡಿದ ಯಾವ ಬ್ರಹ್ಮವು (ಇಲ್ಲಿ) ಒಳಹೊಕ್ಕಿತೋ ಅದೇ (ಇಲ್ಲಿ) ಬ್ರಹ್ಮವು. ವೈ ಎಂಬ ಮಾತು (ಬ್ರಹ್ಮವೇ ಎಂದು) ಒತ್ತಿ ಹೇಳುವದಕ್ಕಾಗಿ (ಬಂದಿದೆ). ಇದು ಎಂದರೆ ಶರೀರದಲ್ಲಿದ್ದುಕೊಂಡು ತಿಳಿಯುಬರುತ್ತಿದೆಯಲ್ಲ, ಅದು, ಮೊದಲು ತತ್ತ್ವವನ್ನು ಅರಿತುಕೊಳ್ಳುವ ಮುಂಚೆಯೂ ಬ್ರಹ್ಮವೇ ಆಗಿತ್ತು, ಮತ್ತು ಇದೆಲ್ಲವೂ (ಬ್ರಹ್ಮವೇ ಆಗಿತ್ತು).[1] ಆದರೆ ಅರಿತುಕೊಳ್ಳದೆ ಇರುವದರಿಂದ ಅಬ್ರಹ್ಮವಾಗಿರುವೆನು, ಅಸರ್ವನೂ ಆಗಿರುವೆನು ಎಂದು ತನ್ನಲ್ಲಿ ಅಧ್ಯಾರೋಪಿಸಿಕೊಂಡಿರುವದರಿಂದ ನಾನು ಕರ್ತೃ, ಕ್ರಿಯೆಗಳುಳ್ಳವನೂ, ಫಲಗಳನ್ನು ಅನುಭವಿಸುವವನೂ (ಆಗಿರುವದರಿಂದ) ಸುಖಿಯು, ದುಃಖಿಯು, ಸಂಸಾರಿಯು ಎಂದು ಅಧ್ಯಾರೋಪಿಸಿಕೊಂಡಿತ್ತು; ನಿಜವಾಗಿಯಾದರೋ ಇದಕ್ಕೆ ವಿಲಕ್ಷಣವಾದ ಬ್ರಹ್ಮವೇ ಮತ್ತು ಸರ್ವವೇ (ಆಗಿತ್ತು).[2] ಅದು ಹೇಗೋ ದಯಾಲುವಾದ ಆಚಾರ್ಯನು ನೀನು ಸಂಸಾರಿಯಾಗಿಲ್ಲ, ಎಂದು ತಿಳಿಸಿಕೊಡಲು ಸ್ವಾಭಾವಿಕವಾದ[3] ತನ್ನನ್ನೇ, ಅವಿದ್ಯೆಯಿಂದ ಅಧ್ಯಾರೋಪಿತವಾದ ವಿಶೇಷಗಳಿಲ್ಲದ[4] (ತನ್ನನ್ನೇ) ಅರಿತುಕೊಂಡಿತು ಎಂಬುದು ಏವಶಬ್ದದ ಅರ್ಥವು.[5]

## ಚರ್ಚೆ: ಆತ್ಮನ ಸ್ವರೂಪ

(ಭಾಷ್ಯ)

೧೬೧. ಬ್ರೂಹಿ ಕೋಽಸೌ ಆತ್ಮಾ ಸ್ವಾಭಾವಿಕಃ, ಯಮಾತ್ಮಾನಂ ವಿದಿತವದ್ ಬ್ರಹ್ಮ। ನನು ನ ಸ್ಮರಸ್ಯಾತ್ಮಾನಮ್? ದರ್ಶಿತೋ ಹ್ಯಸೌ ಯ ಇಹ ಪ್ರವಿಶ್ಯ ಪ್ರಾಣಿತಿ ಅಪಾನಿತಿ ವ್ಯಾನಿತಿ ಉದಾನಿತಿ ಸಮಾನಿತೀತಿ। ನನ್ವಸೌ

---

1. ಈ ಪ್ರಪಂಚವೆಲ್ಲವೂ ಸಾಧಕನಾದ ಜೀವನನ್ನು ಕೂಡಿಕೊಂಡು ಬ್ರಹ್ಮವೇ ಆಗಿತ್ತು.

2. ಬ್ರಹ್ಮವೇ ಆಗಿದ್ದರೆ ಮತ್ತೆ ಉಪದೇಶವೇಕೆ?- ಎಂಬ ಆಕ್ಷೇಪದ ಪರಿಹಾರಕ್ಕಾಗಿ ನಿಜವಾಗಿರುವ ಈ ಸ್ವರೂಪವನ್ನು ತಿಳಿದುಕೊಳ್ಳುವದಕ್ಕಾಗಿ ಎಂಬ ಉತ್ತರವನ್ನು ಹೇಳಿದೆ.

3. ತನ್ನ ಸ್ವರೂಪವಾದ.

4. ಪ್ರಾಣ (ಉಸಿರಾಡುವವನು), ವಾಕ್ಕು (ಮಾತಾಡುವವನು), ಚಕ್ಷುಃ (ನೋಡುವವನು), ಶ್ರೋತ್ರ (ಕೇಳುವವನು) -ಮುಂತಾದ ವಿಶೇಷರೂಪಗಳಿಲ್ಲದ.

5. ಹೀಗೆ ಸಂಸಾರಿತ್ವವು ಅಧ್ಯಾರೋಪಿತ ಎಂದದ್ದರಿಂದ ತನ್ನನ್ನೇ ಅರಿತುಕೊಂಡರೆ ಸಂಸಾರಿತ್ವ ಎಂದಾದೀತು ಎಂಬ ದೋಷವನ್ನು ತಪ್ಪಿಸಿಕೊಂಡಂತೆ ಆಯಿತು.

ಗೌಃ, ಅಸಾವಶ್ವಃ ಇತ್ಯೇವಮಸೌ ವ್ಯಪದಿಶ್ಯತೇ ಭವತಾ, ನಾತ್ಮಾನಂ ಪ್ರತ್ಯಕ್ಷಂ ದರ್ಶಯಸಿ। ಏವಂ ತರ್ಹಿ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ ಸ ಆತ್ಮಾ ಇತಿ। ನನ್ವತ್ರಾಪಿ ದರ್ಶನಾದಿಕ್ರಿಯಾಕರ್ತುಃ ಸ್ವರೂಪಂ ನ ಪ್ರತ್ಯಕ್ಷಂ ದರ್ಶಯಸಿ। ನ ಹಿ ಗಮಿರೇವ ಗನ್ತುಃ ಸ್ವರೂಪಮ್ ಛಿದಿರ್ವಾ ಛೇತ್ತುಃ। ಏವಂ ತರ್ಹಿ ದೃಷ್ಟೇರ್ದ್ರಷ್ಟಾ ಶ್ರುತೇಃ ಶ್ರೋತಾ ಮತೇರ್ಮನ್ತಾ ವಿಜ್ಞಾತೇರ್ವಿಜ್ಞಾತಾ ಸ ಆತ್ಮೇತಿ। ನನ್ವತ್ರ ಕೋ ವಿಶೇಷೋ ದ್ರಷ್ಟರಿ? ಯದಿ ದೃಷ್ಟೇರ್ದ್ರಷ್ಟಾ ಯದಿ ವಾ ಘಟಸ್ಯ ದ್ರಷ್ಟಾ ಸರ್ವಥಾಪಿ ದ್ರಷ್ಟೈವ। ದ್ರಷ್ಟವ್ಯೇ ಏವ ತು ಭವಾನ್ ವಿಶೇಷಮಾಹ ದೃಷ್ಟೇರ್ದ್ರಷ್ಟಾ ಇತಿ। ದ್ರಷ್ಟಾ ತು ಯದಿ ದೃಷ್ಟೇಃ ಯದಿ ವಾ ಘಟಸ್ಯ ದ್ರಷ್ಟಾ ದ್ರಷ್ಟೈವ। ನ। ವಿಶೇಷೋಪಪತ್ತೇಃ। ಅಸ್ತ್ಯತ್ರ ವಿಶೇಷಃ। ಯೋ ದೃಷ್ಟೇರ್ದ್ರಷ್ಟಾ ಸ ದೃಷ್ಟಿಶ್ಚೇದ್ ಭವತಿ ನಿತ್ಯಮೇವ ಪಶ್ಯತಿ ದೃಷ್ಟಿಮ್, ನ ಕದಾಚಿದಪಿ ದೃಷ್ಟಿರ್ನ ದೃಶ್ಯತೇ ದ್ರಷ್ಟ್ರಾ। ತತ್ರ ದ್ರಷ್ಟುರ್ದೃಷ್ಟ್ಯಾ ನಿತ್ಯಯಾ ಭವಿತವ್ಯಮ್। ಅನಿತ್ಯಾ ಚೇತ್ ದ್ರಷ್ಟುರ್ದೃಷ್ಟಿಃ ತತ್ರ ದೃಶ್ಯಾ ಯಾ ದೃಷ್ಟಿಃ ಸಾ ಕದಾಚಿತ್ ನ ದೃಶ್ಯೇತಾಪಿ। ಯಥಾ ಅನಿತ್ಯಯಾ ದೃಷ್ಟ್ಯಾ ಘಟಾದಿವಸ್ತು। ನ ಚ ತದ್ವತ್ ದೃಷ್ಟೇರ್ದ್ರಷ್ಟಾ ಕದಾಚಿದಪಿ ನ ಪಶ್ಯತಿ ದೃಷ್ಟಿಮ್। ಕಿಂ ದ್ವೇ ದೃಷ್ಟೀ ದ್ರಷ್ಟುರ್ನಿತ್ಯಾ ಅದೃಶ್ಯಾ, ಅನ್ಯಾ ಅನಿತ್ಯಾ ದೃಶ್ಯೇತಿ? ಬಾಢಮ್। ಪ್ರಸಿದ್ಧಾ ತಾವತ್ ಅನಿತ್ಯಾ ದೃಷ್ಟಿಃ ಅನ್ಧಾನನ್ಧತ್ವದರ್ಶನಾತ್। ನಿತ್ಯೈವ ಚೇತ್ ಸರ್ವೋಽನನ್ಧ ಏವ ಸ್ಯಾತ್। ದ್ರಷ್ಟುಸ್ತು ನಿತ್ಯಾ ದೃಷ್ಟಿಃ। "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (೪-೩-೨೩) ಇತಿ ಶ್ರುತೇಃ। ಅನುಮಾನಾಚ್ಚ। ಅನ್ಧಸ್ಯಾಪಿ ಘಟಾದ್ಯಾಭಾಸವಿಷಯಾ ಸ್ವಪ್ನೇ ದೃಷ್ಟಿರುಪಲಭ್ಯತೇ। ಸಾ ತರ್ಹಿ ಇತರದೃಷ್ಟಿನಾಶೇ ನ ನಶ್ಯತಿ। ಸಾ ದ್ರಷ್ಟುರ್ದೃಷ್ಟಿಃ। ತಯಾ ಅವಿಪರಿಲುಪ್ತಯಾ ನಿತ್ಯಯಾ ದೃಷ್ಟ್ಯಾ ಸ್ವರೂಪಭೂತಯಾ ಸ್ವಯಂಜ್ಯೋತಿಃಸಮಾಖ್ಯಯಾ ಇತರಾಮ್ ಅನಿತ್ಯಾಂ ದೃಷ್ಟಿಂ ಸ್ವಪ್ನಬುದ್ಧಾನ್ತಯೋರ್ವಾಸನಾಪ್ರತ್ಯಯರೂಪಾಂ ನಿತ್ಯಮೇವ ಪಶ್ಯನ್ ದೃಷ್ಟೇರ್ದ್ರಷ್ಟಾ ಭವತಿ। ಏವಂ ಚ ಸತಿ ದೃಷ್ಟಿರೇವ ಸ್ವರೂಪಮಸ್ಯ ಅಗ್ನ್ಯೌಷ್ಣ್ಯವತ್, ನ ಕಾಣಾದಾನಾಮಿವ ದೃಷ್ಟಿವ್ಯತಿರಿಕ್ತೋಽನ್ಯಶ್ಚೇತನೋ ದ್ರಷ್ಟಾ ॥

(ಭಾಷ್ಯಾರ್ಥ)

(ಪ್ರಶ್ನೆ) :- ಯಾವ ತನ್ನನ್ನು ಬ್ರಹ್ಮವು ಅರಿತುಕೊಂಡಿತೋ ಆ ಸ್ವಾಭಾವಿಕವಾದ ಆತ್ಮನು ಯಾವು? ಹೇಳು.

(ಉತ್ತರ) :- (ಅ) ಆತ್ಮನ ನೆನಪಿಲ್ಲವೆ? ಯಾವನು ಇಲ್ಲಿ ಪ್ರವೇಶಿಸಿ ಪ್ರಾಣನವನ್ನು ಮಾಡುತ್ತಾನೋ ಅಪಾನಕ್ರಿಯೆಯನ್ನು ಮಾಡುತ್ತಾನೋ ವ್ಯಾನಕ್ರಿಯೆಯನ್ನು ಮಾಡುತ್ತಾನೋ ಉದಾನಕ್ರಿಯೆಯನ್ನು ಮಾಡುತ್ತಾನೋ,

ಸಮಾನಕ್ರಿಯೆಯನ್ನು ಮಾಡುತ್ತಾನೋ (ಅವನು) –ಎಂದು ತಿಳಿಸಿಕೊಟ್ಟಿದೆ ಯಲ್ಲ[1] !

(ಆಕ್ಷೇಪ):– 'ಇಂಥದ್ದು ಎತ್ತು', 'ಇಂಥದ್ದು ಕುದುರೆ' ಎಂಬಂತೆ ನೀನು ಇವನನ್ನು ಹೇಳಿದ್ದೀಯೇ ಹೊರತು ಆತ್ಮನನ್ನು ಪ್ರತ್ಯಕ್ಷವಾಗಿ ನೀನು ತಿಳಿಸಿಲ್ಲ ವಲ್ಲ[2] ?

(ಸಿದ್ಧಾಂತಿ) :– ಹಾಗಾದರೆ ದ್ರಷ್ಟೃವೂ ಶ್ರೋತೃವೂ ಮಂತೃವೂ ವಿಜ್ಞಾತೃವೂ (ಆಗಿರುವವನೇ) ಆ ಆತ್ಮನು.[3]

(ಆಕ್ಷೇಪಕ) :– ಇಲ್ಲಿಯೂ ದರ್ಶನಾದಿಕ್ರಿಯೆಗಳ ಕರ್ತೃವಿನ ಸ್ವರೂಪ ವನ್ನು ನೀನು ತಿಳಿಸಿದ್ದೀಯೇ ಹೊರತು ಪ್ರತ್ಯಕ್ಷದಿಂದ ತಿಳಿಸಲಿಲ್ಲವಲ್ಲ ! ಗಮನ ಕ್ರಿಯೆಯೇ ಗಂತೃವಿನ ಸ್ವರೂಪವಲ್ಲವಷ್ಟೆ, ಕಡಿಯುವದೆಂಬ ಕ್ರಿಯೆಯೇ ಕಡಿಯುವವನ ಸ್ವರೂಪವಲ್ಲವಷ್ಟೆ[4] ?

(ಸಿದ್ಧಾಂತಿ) :– ಹಾಗಾದರೆ ದೃಷ್ಟಿಯ ದ್ರಷ್ಟೃವೂ ಶ್ರುತಿಯ ಶ್ರೋತೃವೂ ಮತಿಯ ಮಂತೃವೂ ವಿಜ್ಞಾತಿಯ ವಿಜ್ಞಾತೃವೂ (ಆಗಿರುವವನೇ) ಆ ಆತ್ಮನು.[5]

---

1. ಹಿಂದೆ ಹೀಗೆಂದು ಸ್ಪಷ್ಟವಾಗಿ ಹೇಳಿಲ್ಲ. ಆದರೂ ಪ್ರಾಣನ್ನೇವ ಪ್ರಾಣೋ ನಾಮ ಭವತಿ –ಎಂದು ಸಂಕ್ಷೇಪವಾಗಿ ಹೇಳಿದೆ. ಪ್ರ. ೩-೨ರಲ್ಲಿ ವರ್ಣಿಸಿರುವಂತೆ ಪ್ರಾಣವು ಆತ್ಮನಿಂದಲೇ ಉತ್ಪತ್ತಿಯಾಗಿ ಈ ಕೃತ್ಯಗಳನ್ನು ಮಾಡುತ್ತಿರುವದು ; ಇವೆಲ್ಲವೂ ಆತ್ಮನ ಕ್ರಿಯೆಯೇ ಎಂದು ಭಾವ. ಪ್ರಾಣಾಪಾನಾದಿಗಳ ವ್ಯಾಪಾರವು ಆತ್ಮನವೇ ಎಂಬುದಕ್ಕೆ ಕ. ಭಾ. ೨-೨-೫ (ಭಾ. ಭಾ. ೧೩೮) ನೋಡಿ.

2. ಇಂಥ ಪ್ರಾಣಿಯು ಎತ್ತು ಅಥವಾ ಕುದುರೆ ಎಂದಮಾತ್ರದಿಂದ ಆ ಪ್ರಾಣಿ ವಿಶೇಷದ ಪ್ರತ್ಯಕ್ಷಜ್ಞಾನವಾಗುವದಿಲ್ಲ. ಅದರ ಪರೋಕ್ಷಜ್ಞಾನವು ಮಾತ್ರ ಆಗುತ್ತದೆ. ಹೀಗೆಯೇ ಪ್ರಾಣನಾದಿಕ್ರಿಯೆಗಳಿಂದ ಆತ್ಮನನ್ನು ಪರೋಕ್ಷವಾಗಿ ಮಾತ್ರ ಅರಿತುಕೊಳ್ಳ ಬಹುದು– ಎಂದು ಭಾವ.

3. ಪ್ರಾಣನಾದಿಕ್ರಿಯೆಗಳಿಂದ ಕರ್ತೃವಿನ ಸ್ವರೂಪವು ಸ್ಫುಟವಾಗದಿದ್ದರೂ ದ್ರಷ್ಟೃವೇ ಮುಂತಾದ ರೂಪಗಳಿಂದ ಅವನು ಚೈತನ್ಯರೂಪನೆಂದು ಗೊತ್ತಾಗುತ್ತದೆ ಎಂದು ಅಭಿಪ್ರಾಯ.

4 ದರ್ಶನಾದಿಗಳೂ ಕ್ರಿಯೆಗಳೇ ಆಗಿರುವದರಿಂದ ಆತ್ಮನ ಸ್ವರೂಪದಲ್ಲಿ ಸೇರಿಲ್ಲ ವೆಂದು ಭಾವ.

5. ದೃಷ್ಟಿಯ ದ್ರಷ್ಟೃವೆಂದರೆ ದೃಷ್ಟಿಗೆ ನೋಡುವ ಶಕ್ತಿಯನ್ನುಂಟುಮಾಡಿರುವ ಚೈತನ್ಯಸ್ವರೂಪನಾದ ಆತ್ಮನು ; ಚೈತನ್ಯಗುಣವುಳ್ಳವನಲ್ಲ ಎಂಬ ಅಭಿಪ್ರಾಯವು ಇದರಲ್ಲಿ ಅಡಕವಾಗಿದೆ. ಸಿದ್ಧಾಂತಿಯ ಈ ಅಭಿಪ್ರಾಯವನ್ನು ತಿಳಿದುಕೊಳ್ಳಲಾರದೆ ಪೂರ್ವಪಕ್ಷಿಯು ಬೇರೆಬೇರೆಯ ಆಕ್ಷೇಪಗಳನ್ನು ತೆಗೆದಿದ್ದಾನೆ. ಕೊನೆಯ ಆಕ್ಷೇಪಕ್ಕೆ ಹೇಳಿದ ಈ ಪರಿ ಹಾರದಲ್ಲಿ ಸಿದ್ಧಾಂತಿಯ ಪರಮಾಭಿಪ್ರಾಯವು ಸ್ಪಷ್ಟವಾಗಿರುತ್ತದೆ.

(ಆಕ್ಷೇಪ) :- ಇಲ್ಲಿ ದ್ರಷ್ಟೃವಿನಲ್ಲಿ ಯಾವ ವಿಶೇಷ(ವಾದಂತಾಯಿತು) ? ದೃಷ್ಟಿಯ ದ್ರಷ್ಟೃವೇ ಆಗಲಿ, ಘಟದ ದ್ರಷ್ಟೃವೇ ಆಗಲಿ, ಹೇಗಾದರೂ (ಅವನು) ದ್ರಷ್ಟೃವೇ. ನೀನು ದ್ರಷ್ಟವ್ಯ (ವಸ್ತುವಿನಲ್ಲಿ) ಮಾತ್ರ ವಿಶೇಷವನ್ನು ದೃಷ್ಟಿಯ ದ್ರಷ್ಟೃ (ಎಂಬ) (ಮಾತಿನಿಂದ) ಹೇಳಿರುತ್ತೀಯೆ ; ದ್ರಷ್ಟೃವೋ ಎಂದರೆ ದೃಷ್ಟಿಯ ದ್ರಷ್ಟೃವಾದರೂ ಘಟಕ್ಕೇ (ದ್ರಷ್ಟೃ)ವಾದರೂ ದ್ರಷ್ಟೃವೇ (ಅಲ್ಲವೆ)[1] ?

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ (ಇವೆರಡಕ್ಕೂ) ವಿಶೇಷವಿರಬಹುದಾಗಿದೆ. ಇಲ್ಲಿ (ಒಂದು) ವಿಶೇಷವಿದೆ. ಯಾವನು ದೃಷ್ಟಿಯ ದ್ರಷ್ಟೃವೋ ಅವನು ದೃಷ್ಟಿಯು (ಮಾತ್ರ) ಇದ್ದರೆ, ಯಾವಾಗಲೂ ದೃಷ್ಟಿಯನ್ನು ನೋಡುತ್ತಿರುತ್ತಾನೆ ; ದ್ರಷ್ಟೃವಿಗೆ ದೃಷ್ಟಿಯು ಕಾಣಿಸುವದಿಲ್ಲವೆಂಬುದು ಯಾವಾಗಲೂ ಇರುವದಿಲ್ಲ. ಆಗ ದ್ರಷ್ಟೃವಿನ ದೃಷ್ಟಿಯು ನಿತ್ಯವಾಗಿರಬೇಕಾಗುವದು. ದ್ರಷ್ಟೃವಿನ ದೃಷ್ಟಿಯು ಅನಿತ್ಯವಾದರೆ, ಆಗ ದೃಶ್ಯವಾದ ದೃಷ್ಟಿಯಿದೆಯಲ್ಲ, ಅದು ಒಂದೊಂದುವೇಳೆ ಕಾಣದೆಯೂ ಇರಬಹುದಾಗುವದು. ಅನಿತ್ಯವಾದ ದೃಷ್ಟಿಗೆ ಘಟವೇ ಮುಂತಾದ ವಸ್ತು ಹೇಗೆ (ಒಂದೊಂದುವೇಳೆ ಕಾಣಿಸದೆಯೂ ಇರುವದೋ ಹಾಗೆ). ಆದರೆ ದೃಷ್ಟಿಯ ದ್ರಷ್ಟೃವು ಹಾಗೆ ದೃಷ್ಟಿಯನ್ನು ನೋಡುವದಿಲ್ಲವೆಂಬುದು ಯಾವಾಗಲೂ ಇಲ್ಲ.[2]

(ಪ್ರಶ್ನೆ) :- (ಹಾಗಾದರೆ) ದ್ರಷ್ಟೃವಿನ ನಿತ್ಯವಾದ ಅದೃಶ್ಯವಾದದ್ದು ದೃಷ್ಟಿ (ಒಂದು), ಅನಿತ್ಯವಾದ ದೃಶ್ಯವಾದ (ದೃಷ್ಟಿಯು) ಒಂದು -ಎಂದು ಎರಡು ದೃಷ್ಟಿಗಳೇನು ?

(ಉತ್ತರ) :- ಹೌದು. ಮೊದಲನೆಯದಾಗಿ ಅನಿತ್ಯವಾದ ದೃಷ್ಟಿಯಂತೂ ಪ್ರಸಿದ್ಧವೇ (ಆಗಿರುತ್ತದೆ); ಏಕೆಂದರೆ ಕುರುಡರು, ಕುರುಡರಲ್ಲದವರು ಎಂಬ (ಭೇದವು) ಕಂಡುಬರುತ್ತದೆ. (ಈ ದೃಷ್ಟಿಯು) ನಿತ್ಯವೇ ಆಗಿದ್ದರೆ ಪ್ರತಿಯೊಬ್ಬನೂ ಕುರುಡನಲ್ಲದವನೇ ಆಗಿರಬೇಕಾಗಿತ್ತು. ಆದರೆ ದ್ರಷ್ಟೃವಿನ ದೃಷ್ಟಿಯು ನಿತ್ಯವಾದದ್ದು ; "ದ್ರಷ್ಟೃವಿನ ದೃಷ್ಟಿಗೆ ವಿಪರಿಲೋಪವಿರುವದಿಲ್ಲ" (೪-೩-೨೩)

---

1. ದೃಷ್ಟಿಯ ದ್ರಷ್ಟೃ ಎಂದರೂ ದೃಷ್ಟಿಕ್ರಿಯೆಯುಳ್ಳವನು ಎಂದಂತೆಯೇ ಆಯಿತು ಎಂದು ಪೂರ್ವಪಕ್ಷಿ ಭ್ರಮಿಸಿರುತ್ತಾನೆ.

2. ಕಾಣುವದಕ್ಕೆ ತಕ್ಕ ಗಡಿಗೆಯಿದ್ದರೆ ಸಾಕು, ಅದು ಯಾವಾಗಲೂ ಕಾಣಲೇಬೇಕು ಎಂಬ ನಿಯಮವಿಲ್ಲ: ಏಕೆಂದರೆ ಕುರುಡರಿಗೆ ಅದು ಕಾಣಿಸುವದಿಲ್ಲ. ಕುರುಡರಲ್ಲದವರಿಗೂ ನಿದ್ರೆಯಲ್ಲಿ ಅದು ಕಾಣಿಸುವದಿಲ್ಲ. ಆದರೆ ದೃಶ್ಯವಾದ ದೃಷ್ಟಿಯು ಎಂದರೆ ನೋಟದ ರೂಪವಾದ ವೃತ್ತಿಯು ಇದ್ದರೆ ಸಾಕು, ಅದು ಆತ್ಮನ ದೃಷ್ಟಿಗೆ ಗೋಚರವಾಗಿಯೇ ತೀರುತ್ತದೆ. ಆದ್ದರಿಂದ ಆತ್ಮನ ದೃಷ್ಟಿಯು ನಿತ್ಯವೆಂದಾಯಿತು ಎಂದು ಅಭಿಪ್ರಾಯ.

ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಅನುಮಾನದಿಂದಲೂ[1] (ಇದು ಸಿದ್ಧವಾಗುತ್ತದೆ). ಹೇಗೆಂದರೆ, ಕುರುಡನಿಗೆ ಕೂಡ ಗಡಿಗೆಯೇ ಮುಂತಾದದ್ದರ ಆಭಾಸವನ್ನು [2]ವಿಷಯವಾಗಿಸಿಕೊಳ್ಳುವ ದೃಷ್ಟಿಯು ಸ್ವಪ್ನದಲ್ಲಿ ತೋರುತ್ತದೆ. ಹಾಗಾದಮೇಲೆ ಆ (ದೃಷ್ಟಿಯು) ಇನ್ನೊಂದಾದ (ಅನಿತ್ಯ) ದೃಷ್ಟಿಯು ನಾಶವಾದರೂ ನಾಶವಾಗುವದಿಲ್ಲ(ವೆಂದಾಯಿತು). ಅದೇ ದ್ರಷ್ಟೃವಿನ ದೃಷ್ಟಿಯು. ಅವಿಪರಿಲುಪ್ತವಾದ (ತನ್ನ) ಸ್ವರೂಪವೇ ಆಗಿರುವ ಸ್ವಯಂಜ್ಯೋತಿ ಎಂಬ ಹೆಸರಿನ ಆ ನಿತ್ಯದೃಷ್ಟಿಯಿಂದ ಕನಸುಎಚ್ಚರಗಳಲ್ಲಿ ವಾಸನೆ, ಪ್ರತ್ಯಯ- (ಇವುಗಳ) ರೂಪದಲ್ಲಿರುವ ಅನಿತ್ಯವಾದ ಇನ್ನೊಂದು ದೃಷ್ಟಿಯನ್ನು ಯಾವಾಗಲೂ ಕಾಣುತ್ತಿರುವದರಿಂದ ದೃಷ್ಟಿಯ ದ್ರಷ್ಟೃವೆನಿಸುತ್ತಾನೆ. ಮತ್ತು ಹೀಗಾದರೆ ಬೆಂಕಿಯು ಬಿಸಿಯಾಗಿರುವ (ಈ) ದೃಷ್ಟಿಯೇ ಇವನ ಸ್ವರೂಪವು; ಕಾಣಾದರ (ಮತದಲ್ಲಿ ಒಪ್ಪಿರುವಂತೆ) ದೃಷ್ಟಿಗಿಂತ ಬೇರೆಯಾಗಿರುವ ಚೇತನನು ದ್ರಷ್ಟೃ ಎಂಬುದಿಲ್ಲ (ಎಂದಾಗುವದು)."

## ಬ್ರಹ್ಮವು ತನ್ನನ್ನೇ ಅರಿತುಕೊಂಡಿತೆಂದರೆ ಹೇಗೆ?

(ಭಾಷ್ಯ)

೧೬೨. ತದ್ ಬ್ರಹ್ಮ ಆತ್ಮಾನಮೇವ ನಿತ್ಯದೃಗ್ರೂಪಮ್ ಅಧ್ಯಾರೋಪಿತಾನಿತ್ಯದೃಷ್ಟ್ಯಾದಿವರ್ಜಿತಮೇವ ಅವೇತ್ ವಿದಿತವತ್। ನನು ವಿಪ್ರತಿಷಿದ್ಧಮ್ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ (೩-೪-೨) ಇತಿ ಶ್ರುತೇರ್ವಿಜ್ಞಾತುರ್ವಿಜ್ಞಾನಮ್। ನ। ಏವಂ ವಿಜ್ಞಾನಾನ್ನ ವಿಪ್ರತಿಷೇಧಃ। ಏವಂ ದೃಷ್ಟೇರ್ದ್ರಷ್ಟಾ ಇತಿ ವಿಜ್ಞಾಯತ ಏವ। ಅನ್ಯಜ್ಞಾನಸಾಪೇಕ್ಷತ್ವಾಚ್ಚ। ನ ಚ ದ್ರಷ್ಟುರ್ನಿತ್ಯೈವ ದೃಷ್ಟಿಃ ಇತ್ಯೇವಂ ವಿಜ್ಞಾತೇ ದ್ರಷ್ಟೃವಿಷಯಾಂ ದೃಷ್ಟಿಮ್ ಅನ್ಯಾಮ್ ಆಕಾಙ್ಕ್ಷತೇ। ನಿವರ್ತತೇ ಹಿ ದ್ರಷ್ಟೃವಿಷಯದೃಷ್ಟ್ಯಾಕಾಙ್ಕ್ಷಾ। ತದಸಂಭವಾದೇವ। ನ ಹಿ ಅವಿದ್ಯಮಾನೇ ವಿಷಯೇ ಆಕಾಙ್ಕ್ಷಾ ಕಸ್ಯಚಿತ್ ಉಪಜಾಯತೇ। ನ ಚ ದೃಶ್ಯಾ ದೃಷ್ಟಿರ್ದ್ರಷ್ಟಾರಂ ವಿಷಯೀಕರ್ತುಮ್ ಉತ್ಸಹತೇ ಯತಸ್ತಾಮಾಕಾಙ್ಕ್ಷೇತ। ನ ಚ ಸ್ವರೂಪ

---

1. ಇಲ್ಲಿ ಅನುಮಾನವೆಂಬ ಮಾತು ಯುಕ್ತಿಮಾತ್ರವನ್ನು ತಿಳಿಸುತ್ತದೆ; ಅನುಮಾನಪ್ರಮಾಣಕ್ಕೆ ಸಾಕ್ಷಿಯು ವಿಷಯವೆಂದೇನೂ ಅಭಿಪ್ರಾಯವಿಲ್ಲ.

2. ಗಡಿಗೆಯ ಹಾಗೆ ಕಾಣುವ ವಾಸನಾರೂಪವನ್ನು.

3. 'ದೃಷ್ಟೇರ್ದ್ರಷ್ಟಾ' (ದೃಷ್ಟಿಯ ದ್ರಷ್ಟೃವು) ಎಂಬುದರಿಂದ ಹಿಡಿದು ಇಲ್ಲಿಯವರೆಗಿನ ಭಾಷ್ಯದಲ್ಲಿ ನಿತ್ಯಚೈತನ್ಯಸ್ವರೂಪನಾಗಿರುವ ಸಾಕ್ಷಿಯನ್ನು ತಿಳಿಸಿಕೊಟ್ಟಿದೆ. ಐ. ಭಾ. ದಲ್ಲಿಯೂ (ಭಾ.ಭಾ. ೩೩ರಿಂದ ೬೧ರವರೆಗೆ) ಇದೇ ಸರಣಿಯು ವಾದವಿದೆ. ಅಲ್ಲಿಯೂ ನಿತ್ಯಾನಿತ್ಯದೃಷ್ಟಿಗಳ ವಿಭಾಗವನ್ನು ಹೀಗೆಯೇ ಮಾಡಿರುತ್ತದೆ.

ವಿಷಯಾಕಾಙ್ಕ್ಷಾ ಸ್ವಸ್ಯೈವ । ತಸ್ಮಾತ್ ಅಜ್ಞಾನಾಧ್ಯಾರೋಪಣನಿವೃತ್ತಿರೇವ ಆತ್ಮಾನಮೇವಾವೇತ್ ಇತ್ಯುಕ್ತಂ ನಾತ್ಮನೋ ವಿಷಯೀಕರಣಮ್ ॥

(ಭಾಷ್ಯಾರ್ಥ)

ಆ ಬ್ರಹ್ಮವು ತನ್ನನ್ನೇ ಎಂದರೆ ಅಧ್ಯಾರೋಪಿತವಾದ ಅನಿತ್ಯವಾದ ದೃಷ್ಟ್ಯಾದಿಗಳಿಲ್ಲದ (ಈ) ನಿತ್ಯದೃಗ್ರೂಪವನ್ನೇ ಅರಿತುಕೊಂಡಿತು, ಅರಿತುಕೊಂಡದ್ದಾಯಿತು.

(ಆಕ್ಷೇಪ) :- "ವಿಜ್ಞಾತಿಯ ವಿಜ್ಞಾತೃವನ್ನು ಅರಿತುಕೊಳ್ಳಲಾರೆ" (೩-೪-೨) ಎಂದು ಶ್ರುತಿಯು (ಹೇಳಿರುವದರಿಂದ) ವಿಜ್ಞಾತೃವನ್ನು ಅರಿತುಕೊಳ್ಳುವದೆಂಬುದು (ಶ್ರುತಿ)ವಿರುದ್ಧವಲ್ಲವೆ[1] ?

(ಪರಿಹಾರ) :- ಹಾಗಲ್ಲ. ಹೀಗೆ ಅರಿತುಕೊಂಡರೆ ವಿರೋಧವಿಲ್ಲ. ಹೀಗೆ ದೃಷ್ಟಿಯ ದ್ರಷ್ಟೃ ಎಂದು ಅರಿತುಕೊಳ್ಳಲೇಬಹುದು[2] ಮತ್ತೊಂದು ಜ್ಞಾನದ ಅಪೇಕ್ಷೆಯಿಲ್ಲದಿರುವದರಿಂದಲೂ (ಹೀಗೆ ಅರಿತುಕೊಳ್ಳಬಹುದು. ಹೇಗೆಂದರೆ), ದ್ರಷ್ಟೃವಿನ ದೃಷ್ಟಿಯು ನಿತ್ಯವೇ ಎಂದೀ ಪರಿಯಲ್ಲಿ ಅರಿತುಕೊಂಡರೆ ದ್ರಷ್ಟೃವಿಷಯಕವಾದ ಮತ್ತೊಂದು ದೃಷ್ಟಿಯನ್ನೇನೂ ಬಯಸುವದಿಲ್ಲ. ಏಕೆಂದರೆ ದ್ರಷ್ಟೃವಿಷಯದ ದೃಷ್ಟಿಯ ಅಪೇಕ್ಷೆಯು, ಅದು ಆಗುವಂತಿಲ್ಲವಾದ್ದರಿಂದಲೇ[3], ತೊಲಗುತ್ತದೆ. ವಿಷಯವಿಲ್ಲದಿದ್ದರೆ ಯಾರಿಗೂ ಆಕಾಂಕ್ಷೆಯುಂಟಾಗುವದಿಲ್ಲವಷ್ಟೆ. ದೃಶ್ಯವಾದ ದೃಷ್ಟಿಯಿಂದ ದ್ರಷ್ಟೃವನ್ನು ವಿಷಯೀಕರಿಸುವದಕ್ಕೆ ಆಗಲೇ ಆರದು; (ಆಗುವ)ಹಾಗಿದ್ದರೆ ಆ (ದೃಷ್ಟಿಯನ್ನು) ಬಯಸಬಹುದಾಗಿತ್ತು. ಇನ್ನು ತನಗೇ ತನ್ನ ಸ್ವರೂಪದ ಅಪೇಕ್ಷೆಯು (ಉಂಟಾಗುವಂತೆಯೂ ಇಲ್ಲ).[4] **ಆದ್ದರಿಂದ ಅಜ್ಞಾನಾಧ್ಯಾರೋಪಣೆಯ**

---

1. ಆದ್ದರಿಂದ ಆತ್ಮಾನಮೇವಾವೇತ್ ಎಂದರೆ "ತನಗಿಂತ ಭಿನ್ನನಾದ ಪರಮಾತ್ಮನನ್ನು ಅರಿತುಕೊಂಡಿತು" ಎಂದು ಅರ್ಥಮಾಡುವದೇ ಮೇಲಲ್ಲವೆ ?- ಎಂದು ಆಕ್ಷೇಪಕನ ಭಾವ.

2. ದೃಷ್ಟಿಯ ದ್ರಷ್ಟೃ- ಎಂದು ಅರಿತುಕೊಂಡರೆ ಅರಿವು ದ್ರಷ್ಟೃವನ್ನು ವಿಷಯೀಕರಿಸಿಕೊಂಡಂತೆ ಆಗುವದಿಲ್ಲ ; ವಿಷಯೀಕರಿಸುವದನ್ನೇ ಶ್ರುತಿಯು ನಿರಾಕರಿಸಿದೆ ಎಂಬು ಭಾವ.

3. ದೃಷ್ಟಿಯ ದ್ರಷ್ಟೃ ಎಂದು ಅರಿತುಕೊಳ್ಳುವದಕ್ಕೆ ತನಗಿಂತ ಬೇರೆಯಾದ ಅರಿವು ಬೇಡ, ತನ್ನ ಅರಿವೂ ಬೇಡ : ಏಕೆಂದರೆ ದ್ರಷ್ಟೃವು ಯಾವ ಅರಿವಿಗೂ ವಿಷಯನೇ ಅಲ್ಲ.

4. ಏಕೆಂದರೆ ತನಗೆ ತಾನು ಸಿದ್ಧವಾಗಿಯೇ ಇರುತ್ತಾನೆ. ಬೌದ್ಧರು ವಿಜ್ಞಾನವು ತನ್ನನ್ನೇ ತಾನು ಅರಿಯುವದೆನ್ನುವರು ; ಆದರೆ ಮೊದಲೇ ಸಿದ್ಧವಾಗಿರುವ ಅರಿವು ತನಗೆ ತಾನು ವಿಷಯವೆಂಬ ಮಾತಿಗೆ ಅರ್ಥವಿಲ್ಲ. ಅರಿವಾಗಿರುವದರಿಂದಲೇ ಅದನ್ನು ಮತ್ತೆ ಅರಿಯುವದು ಬೇಡ. ತನ್ನನ್ನು ತಾನು ವಿಷಯೀಕರಿಸುವದೆಂಬ ಆತ್ಮಾಶ್ರಯದೋಷವೂ ಈ ಪಕ್ಷದಲ್ಲಿರುವದಿಲ್ಲ.

**ನಿವೃತ್ತಿಯನ್ನೇ 'ತನ್ನನ್ನೇ ಅರಿತುಕೊಂಡಿತು' ಎಂದು ಹೇಳಿದೆಯೇ ಹೊರತು ಆತ್ಮನನ್ನು ವಿಷಯೀಕರಿಸುವದನ್ನಲ್ಲ.**[1]

## ಹೇಗೆ ಅರಿತುಕೊಂಡದ್ದರಿಂದ ಸರ್ವಭಾವಪ್ರಾಪ್ತಿ ?

(ಭಾಷ್ಯ)

೧೯೩. ತತ್ ಕಥಮವೇತ್ ಇತಿ? ಆಹ। ಅಹಂ ದೃಷ್ಟೇರ್ದ್ರಷ್ಟಾ ಆತ್ಮಾ ಬ್ರಹ್ಮಾಸ್ಮಿ ಭವಾಮಿ ಇತಿ। ಬ್ರಹ್ಮ ಇತಿ ಯತ್ ಸಾಕ್ಷಾದಪರೋಕ್ಷಾತ್ ಸರ್ವಾನ್ತರ ಆತ್ಮಾ ಅಶನಾಯಾದ್ಯತೀತೋ ನೇತಿ ನೇತಿ ಅಸ್ಥೂಲಮನಣು ಇತ್ಯೇವಮಾದಿಲಕ್ಷಣಮ್ ತದೇವಾಹಮಸ್ಮಿ ನಾನ್ಯಃ ಸಂಸಾರೀ ಯಥಾ ಭವಾನ್ ಆಹ ಇತಿ। ತಸ್ಮಾತ್ ಏವಂ ವಿಜ್ಞಾನಾತ್ ತದ್ಬ್ರಹ್ಮ ಸರ್ವಮಭವತ್। ಅಬ್ರಹ್ಮಾಧ್ಯಾರೋಪಣಾಪಗಮಾತ್ ತತ್ಕಾರ್ಯಸ್ಯ ಅಸರ್ವತ್ವಸ್ಯ ನಿವೃತ್ತ್ಯಾ ಸರ್ವಮಭವತ್। ತಸ್ಮಾತ್ ಯುಕ್ತಮೇವ ಮನುಷ್ಯಾ ಮನ್ಯನ್ತೇ ಯದ್ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಾಮ ಇತಿ। ಯದ್ ಪೃಷ್ಟಂ ಕಿಮು ತದ್ಬ್ರಹ್ಮ ಅವೇತ್ ಯಸ್ಮಾತ್ ತತ್ಸರ್ವಮಭವತ್ ಇತಿ ತನ್ನಿರ್ಣೀತಮ್ "ಬ್ರಹ್ಮ ವಾ ಇದಮಗ್ರ ಆಸೀತ್ ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ ತತ್ಸರ್ವಮಭವತ್" ಇತಿ ॥

(ಭಾಷ್ಯಾರ್ಥ)

ಅದು ಹೇಗೆ ಅರಿತುಕೊಂಡಿತು ? ಎಂದರೆ (ಶ್ರುತಿ) ಹೇಳುತ್ತದೆ: ನಾನು ಎಂದರೆ ದೃಷ್ಟಿಯ ದ್ರಷ್ಟೃವಾದ ಆತ್ಮನು,[2] ಬ್ರಹ್ಮವಾಗಿರುತ್ತೇನೆ, ಆಗಿರುವೆನು, ಬ್ರಹ್ಮವು ಎಂದರೆ ಯಾವದು ಸಾಕ್ಷಾತ್ತಾಗಿ ಅಪರೋಕ್ಷನಾಗಿರುವದೋ, ಹಸಿವು ಮುಂತಾದವುಗಳನ್ನು ಮೀರಿರುವ, 'ಇದಲ್ಲ, ಇದಲ್ಲ', ಎಲ್ಲಕ್ಕೂ ಒಳಗಿನ ಆತ್ಮನು, 'ಸ್ಥೂಲವಲ್ಲ, ಅಣುವಲ್ಲ' ಎಂದುಮುಂತಾಗಿರುವ ಸ್ವರೂಪವುಳ್ಳದೆಯಲ್ಲ,[3] ಅದೇ ನಾನಾಗಿರುವೆನು, ನೀನು ಹೇಳುವಂತೆ[4] ಬೇರೆಯ ಸಂಸಾರಿಯಲ್ಲ ಎಂದು

---

1. ಅಜ್ಞಾನವೂ ಅದರ ಕಾರ್ಯವಾದ ಪ್ರಾಣಾದಿಗಳೂ ಆತ್ಮನಲ್ಲಿ ಅಧ್ಯಾರೋಪಿತವಾಗಿದ್ದವು; ವಿದ್ಯೆಯಿಂದ ಅಧ್ಯಾರೋಪವನ್ನು ಕಳೆದುಕೊಂಡಿತು ಎಂಬುದೇ ಪ್ರಕೃತ ವಾಕ್ಯಕ್ಕೆ ಅರ್ಥ. ಪ್ರಮಾಣಜ್ಞಾನವಾದ ವಿದ್ಯೆಯೂ ಅವಿದ್ಯೆಯಂತೆ ಅವಿದ್ಯಾಭೂಮಿಕೆಯಲ್ಲಿಯೇ. 2. ಅಹಂಪದದ ಲಕ್ಷ್ಯಾರ್ಥವಿದು, ವಾಚ್ಯಾರ್ಥವು ಬ್ರಹ್ಮವಲ್ಲ.

3. ಈ ವಿಶೇಷಣಗಳಿಂದ ಬ್ರಹ್ಮಸ್ವರೂಪವನ್ನು ಈ ಉಪನಿಷತ್ತಿನಲ್ಲಿ ಮುಂದೆ ವರ್ಣಿಸಲಾಗುವದು.

4. ಪೂರ್ವಪಕ್ಷಿಯು ಹೇಳಿರುವಂತೆ ಸಂಸಾರಿಸ್ವರೂಪನೆಂದು ಅರಿತುಕೊಳ್ಳಲಿಲ್ಲ; ಹಾಗೆಂದು ಅರಿತುಕೊಂಡಿದ್ದರೆ ಇದು ಬ್ರಹ್ಮವಿದ್ಯೆಯಾಗುತ್ತಿರಲಿಲ್ಲ, ಅದರಿಂದ ಸರ್ವಭಾವವೂ ಉಂಟಾಗುತ್ತಿರಲಿಲ್ಲ ಎಂದು ಅಭಿಪ್ರಾಯ. ಟೀಕಾಕಾರರು "ತಾವು ಹೇಳಿದಂತೆ ನಾನು ಬ್ರಹ್ಮವೇ ಆಗಿರುವೆನು" ಎಂದು ಶಿಷ್ಯನು ಗುರುವಿಗೆ ಹೇಳಿದಂತೆ ಬರೆದಿರುತ್ತಾರೆ. ಅದು ಸರಿಯೆಂದು ತೋರುವದಿಲ್ಲ.

(ಅರಿತುಕೊಂಡಿತು). ಆದರಿಂದ, ಹಾಗೆಂದು ಅರಿತುಕೊಂಡದ್ದರಿಂದ, ಆ ಬ್ರಹ್ಮವು ಎಲ್ಲವೂ ಆಯಿತು; ಅಬ್ರಹ್ಮದ ಅಧ್ಯಾರೋಪಣವು ತೊಲಗಲಾಗಿ ಅದರ ಕಾರ್ಯವಾದ ಅಸರ್ವತ್ವವು ಸೀಗಿ ಎಲ್ಲವೂ ಆಯಿತು. ಆದ್ದರಿಂದ 'ಬ್ರಹ್ಮ ವಿದ್ಯೆಯಿಂದ ಎಲ್ಲವೂ ಆಗುವೆವು' ಎಂದು ಮನುಷ್ಯರು ಎಣಿಸಿಕೊಂಡಿರುವರಲ್ಲ, ಅದು ಸರಿಯೇ.[1]

"ಆ ಬ್ರಹ್ಮವು ಏನನ್ನು ಅರಿತುಕೊಂಡು ಅದರಿಂದ ಎಲ್ಲವೂ ಆಯಿತು?" ಎಂದು (ಶಿಷ್ಯರು) ಕೇಳಿದ್ದರಲ್ಲ, ಅದನ್ನು "ಇದು ಮೊದಲು ಬ್ರಹ್ಮವೇ ಆಗಿತ್ತು, ಅದು 'ನಾನು ಬ್ರಹ್ಮವಾಗಿದೇನೆ' ಎಂದು ತನ್ನನ್ನೇ ಅರಿತುಕೊಂಡಿತು, ಅದರಿಂದ ಅದು ಸರ್ವವೂ ಆಯಿತು"[2] ಎಂದು ನಿರ್ಣಯಿಸಿದ್ದಾಯಿತು.

## ದೇವಾದಿಗಳ ರೂಪದಲ್ಲಿದ್ದ ಬ್ರಹ್ಮಕ್ಕೇ ಬ್ರಹ್ಮಪ್ರಾಪ್ತಿ

(ಭಾಷ್ಯ)

೧೬೪. ತತ್ ತತ್ರ ಯೋ ಯೋ ದೇವಾನಾಂ ಮಧ್ಯೇ ಪ್ರತ್ಯಬುಧ್ಯತ ಪ್ರತಿಬುದ್ಧವಾನ್ ಆತ್ಮಾನಮ್ ಯಥೋಕ್ತೇನ ವಿಧಿನಾ ಸ ಏವ ಪ್ರತಿಬುದ್ಧ ಆತ್ಮಾ ತದ್ ಬ್ರಹ್ಮ ಅಭವತ್ । ತಥರ್ಷೀಣಾಂ ತಥಾ ಮನುಷ್ಯಾಣಾಂ ಚ ಮಧ್ಯೇ । ದೇವಾನಾಮ್ ಇತ್ಯಾದಿ ಲೋಕದೃಷ್ಟ್ಯಪೇಕ್ಷಯಾ । ನ ಬ್ರಹ್ಮತ್ವ ಬುದ್ಧ್ಯಾ ಉಚ್ಯತೇ । "ಪುರಃ ಪುರುಷ ಆವಿಶತ್" (೨-೫-೧೮) ಇತಿ ಸರ್ವತ್ರ ಬ್ರಹ್ಮೈವ ಅನುಪ್ರವಿಷ್ಟಮ್ ಇತ್ಯವೋಚಾಮ । ಅತಃ ಶರೀರಾದ್ಯುಪಾಧಿ ಜನಿತಲೋಕದೃಷ್ಟ್ಯಪೇಕ್ಷಯಾ 'ದೇವಾನಾಮ್' ಇತ್ಯಾದ್ಯುಚ್ಯತೇ । ಪರಮಾರ್ಥ ತಸ್ತು ತತ್ರ ತತ್ರ ಬ್ರಹ್ಮೈವ ಅಗ್ರೇ ಆಸೀತ್ ಪ್ರಾಕ್ ಪ್ರತಿಬೋಧಾತ್ ದೇವಾದಿಶರೀರೇಷು ಅನ್ಯಥೈವ ವಿಭಾವ್ಯಮಾನಮ್ । ತದಾತ್ಮಾನಮೇವಾ ವೇತ್ ತಥೈವ ಚ ಸರ್ವಮಭವತ್ ॥

(ಭಾಷ್ಯಾರ್ಥ)

(ತತ್=ತತ್ರ) ಅಲ್ಲಿ ಯಾವಯಾವನು ದೇವತೆಗಳೊಳಗೆ ಆತ್ಮನನ್ನು ಮೇಲೆ ಹೇಳಿದ ರೀತಿಯಿಂದ[3] ಅರಿತುಕೊಂಡನೋ ಅವನೇ (ಆ) ಅರಿತು

---

1. ಏಕೆಂದರೆ ತನ್ನನ್ನು ಸರ್ವವಾಗಿರುವ ಬ್ರಹ್ಮವೆಂದು ಅರಿತುಕೊಂಡದ್ದರಿಂದ ಸರ್ವಭಾವವುಂಟಾಗುತ್ತದೆ.

2. ಸರ್ವ, ಕೃತ್ಸ್ನ, ಪೂರ್ಣ- ಇವೆಲ್ಲ ಪರ್ಯಾಯವಾಚಕಗಳು; ಬ್ರಹ್ಮವೇ ಅವಿದ್ಯೆಯಿಂದ ಅಬ್ರಹ್ಮವಾಗಿ ಅಪೂರ್ಣವಾಗಿ ಪರಿಚ್ಛಿನ್ನವಾಗಿತ್ತು, ವಿದ್ಯೆಯಿಂದ ಬ್ರಹ್ಮವಾಗಿ ಪೂರ್ಣವಾಯಿತು ಎಂದರ್ಥ.

3. ದೃಷ್ಟಿಯ ದ್ರಷ್ಟೃವಾದ ಆತ್ಮನಾದ ನಾನು ಬ್ರಹ್ಮವಾಗಿರುವೆನು ಎಂದು.

ಕೊಂಡ ಆತ್ಮನೇ ಆ ಬ್ರಹ್ಮವಾದನು. ಹಾಗೆಯೇ ಋಷಿಗಳೊಳಗೆ, ಮತ್ತು ಹಾಗೆಯೇ ಮನುಷ್ಯರೊಳಗೆ (ಅರಿತುಕೊಂಡವನೇ ಅದಾದನು).

'ದೇವತೆಗಳಲ್ಲಿ' ಎಂದು ಮುಂತಾಗಿ (ಇಲ್ಲಿ) ಹೇಳಿರುವದು **ಲೋಕದೃಷ್ಟಿಯ** ಅಪೇಕ್ಷೆಯಿಂದ, ಬ್ರಹ್ಮವೆಂಬ ಬುದ್ಧಿಯಿಂದ ಹೇಳಿದ್ದಲ್ಲ[1]. (ಇದರ ವಿವರ): "ಪುರಗಳನ್ನು ಪುರುಷನು ಹೊಕ್ಕನು" (೨-೫-೧೮) ಎಂಬ (ಶ್ರುತಿಯ ಪ್ರಮಾಣದಿಂದ) ಎಲ್ಲೆಲ್ಲಿಯೂ ಬ್ರಹ್ಮವೇ ಒಳಹೊಕ್ಕಿದೆ ಎಂದು (ಹಿಂದೆ)[2] ಹೇಳಿರುತ್ತೇವೆ. ಆದ್ದರಿಂದ **ಶರೀರವೇ ಮುಂತಾದ ಉಪಾಧಿಗಳಿಂದುಂಟಾದ ಲೋಕದೃಷ್ಟಿಯ ಅಪೇಕ್ಷೆಯಿಂದ 'ದೇವತೆಗಳಲ್ಲಿ' ಎಂದು ಹೇಳಿರುತ್ತದೆ. ಪರಮಾರ್ಥವಾಗಿಯಾದರೋ ಮೊದಲು ಅರಿತುಕೊಳ್ಳುವ ಮುಂಚೆ ದೇವಾದಿಶರೀರಗಳಲ್ಲಿ ಅಲ್ಲಲ್ಲಿ ಬ್ರಹ್ಮವೇ (ತನ್ನ ಸ್ವರೂಪಕ್ಕಿಂತ) ಬೇರೆಯಾಗಿಯೇ ತೋರುತ್ತಾ ಇದ್ದುಕೊಂಡಿತ್ತು. ಅದು ತನ್ನನ್ನೇ ಅರಿತುಕೊಂಡಿತು, ಹಾಗೆಯೇ[3] ಎಲ್ಲವೂ ಆಯಿತು[4].**

## ಬ್ರಹ್ಮವಿದ್ಯೆಯ ಫಲಕ್ಕೆ ಮಂತ್ರಗಳು

(ಭಾಷ್ಯ)

೧೬೫. ಅಸ್ಯಾ ಬ್ರಹ್ಮವಿದ್ಯಾಯಾಃ ಸರ್ವಭಾವಾಪತ್ತಿಃ ಫಲಮ್ ಇತ್ಯೇತಸ್ಯಾರ್ಥಸ್ಯ ದ್ರಢಿಮ್ನೇ ಮನ್ತ್ರಾನ್ ಉದಾಹರತಿ ಶ್ರುತಿಃ । ಕಥಮ್ ? ತದ್ ಬ್ರಹ್ಮ ಏತತ್ ಆತ್ಮಾನಮೇವ ಅಹಮಸ್ಮಿ ಇತಿ ಪಶ್ಯನ್ ಏತಸ್ಮಾದೇವ ಬ್ರಹ್ಮಣೋ ದರ್ಶನಾತ್ ಋಷಿಃ ವಾಮದೇವಾಖ್ಯಃ ಪ್ರತಿಪೇದೇ ಹ ಪ್ರತಿಪನ್ನವಾನ್ ಕಿಲ । ಸ ಏತಸ್ಮಿನ್ ಬ್ರಹ್ಮಾತ್ಮದರ್ಶನೇ ಅವಸ್ಥಿತಃ ಏತಾನ್ ಮನ್ತ್ರಾನ್ ದದರ್ಶ "ಅಹಂ ಮನುರಭವಂ ಸೂರ್ಯಶ್ಚ" (ಋ.ಸಂ.೪-೨೬-೧) ಇತ್ಯಾದೀನ್ । ತದೇತತ್ ಬ್ರಹ್ಮ ಪಶ್ಯನ್ ಇತಿ ಬ್ರಹ್ಮವಿದ್ಯಾ ಪರಾಮೃಶ್ಯತೇ । "ಅಹಂ ಮನುರಭವಂ ಸೂರ್ಯಶ್ಚ" ಇತ್ಯಾದಿನಾ ಸರ್ವಭಾವಾಪತ್ತಿಂ ಬ್ರಹ್ಮವಿದ್ಯಾಫಲಂ ಪರಾಮೃಶತಿ । ಪಶ್ಯನ್ ಸರ್ವಾತ್ಮಭಾವಂ ಫಲಂ ಪ್ರತಿಪೇದೇ

---

1. ಲೋಕದೃಷ್ಟಿಯನ್ನೇ ವ್ಯಾವಹಾರಿಕದೃಷ್ಟಿ, ಸ್ವಾಭಾವಿಕವಾದ ಅವಿದ್ಯಾದೃಷ್ಟಿ-ಎಂದು ಭಾಷ್ಯದಲ್ಲಿ ಅಲ್ಲಲ್ಲಿ ವ್ಯವಹರಿಸಿದೆ. ಇದಕ್ಕೆ ವಿರುದ್ಧವಾದದ್ದು **ಶಾಸ್ತ್ರದೃಷ್ಟಿ, ಅಥವಾ ಪರಮಾರ್ಥದೃಷ್ಟಿ**; ಸೂ.ಭಾ. ೨-೨-೩ನ್ನು (ಭಾ. ಭಾ. ೧೧). ನೋಡಿ.

2. ಭಾ. ಭಾ. ೧೨೨ರಲ್ಲಿ. 3. ಅರಿತುಕೊಂಡದ್ದರಿಂದಲೇ.

4. ಬ್ರಹ್ಮವು ತನ್ನನ್ನು ಅರಿತುಕೊಂಡಿತು ಎಂಬ ವಾಕ್ಯವನ್ನೇ ಲೋಕದೃಷ್ಟಿಯಿಂದ ದೇವಾದಿಗಳು ಅರಿತುಕೊಂಡು ಸರ್ವರಾದರು ಎಂದು ವಿವರಿಸಿದೆ. ದೇವಾದಿಗಳು ತಮಗಿಂತ ಬೇರೆಯಾಗಿರುವ ಬ್ರಹ್ಮವನ್ನು ಅರಿತುಕೊಂಡು ಸರ್ವರಾದರು ಎಂಬ **ಭರ್ತೃಪ್ರಪಂಚಸಮ್ಮತವಾದ** ವ್ಯಾಖ್ಯಾನವನ್ನೇನೂ ಇಲ್ಲಿ ಮಾಡಬೇಕಾಗಿಲ್ಲ ಎಂದು ಭಾವ.

ಇತ್ಯಸ್ಮಾತ್ ಪ್ರಯೋಗಾತ್ ಬ್ರಹ್ಮವಿದ್ಯಾಸಹಾಯಸಾಧನಸಾಧ್ಯಂ ಮೋಕ್ಷಂ ದರ್ಶಯತಿ । ಭುಂಜಾನಸ್ತೃಪ್ಯತಿ ಇತಿ ಯದ್ವತ್ ॥

(ಭಾಷ್ಯಾರ್ಥ)

ಈ ಬ್ರಹ್ಮವಿದ್ಯೆಗೆ ಸರ್ವಭಾವವನ್ನು ಪಡೆದುಕೊಳ್ಳುವದೇ ಫಲವು ಎಂಬೀ ಅರ್ಥವು ಗಟ್ಟಿಯಾಗುವದಕ್ಕಾಗಿ ಶ್ರುತಿಯು ಮಂತ್ರಗಳನ್ನು ಉದಾಹರಿಸುತ್ತದೆ. ಹೇಗೆ ? ಎಂದರೆ ಆ ಈ ಬ್ರಹ್ಮವನ್ನು (ನಾನೇ) ಆದಾಗಿದೇನೆ ಎಂದು ತನ್ನನ್ನೇ ಕಂಡುಕೊಳ್ಳುವವನಾಗಿ, ಈ ಬ್ರಹ್ಮದರ್ಶನದಿಂದಲೇ **ವಾಮದೇವ**ನೆಂಬ ಋಷಿಯು (ಹ=ಕಿಲ)[1] ಅರಿತುಕೊಂಡನಂತೆ, ಅರಿತುಕೊಂಡವನಾದನಂತೆ. ಆತನು ಈ ಬ್ರಹ್ಮಾತ್ಮದರ್ಶನದಲ್ಲಿ ನಿಂತವನಾಗಿ ಈ "ಅಹಂ ಮನುರಭವಂ ಸೂರ್ಯಶ್ಚ" (ನಾನು ಮನುವಾಗಿರುವೆನು, ಸೂರ್ಯನೂ ಆಗಿರುವೆನು,.... ಋ. ೪-೨೬-೧) ಮುಂತಾದ ಮಂತ್ರಗಳನ್ನು ಕಾಡುಕೊಂಡನು. 'ಆ ಈ ಬ್ರಹ್ಮವನ್ನು ಕಂಡುಕೊಂಡು' ಎಂದು ಬ್ರಹ್ಮವಿದ್ಯೆಯನ್ನು ಪರಾಮರ್ಶಿಸಿದೆ ; 'ನಾನು ಮನುವಾಗಿರುವೆನು, ಸೂರ್ಯನೂ (ಆಗಿರುವೆನು)' ಎಂದುಮುಂತಾದದ್ದರಿಂದ ಬ್ರಹ್ಮವಿದ್ಯೆಯ ಫಲವಾಗಿರುವ ಸರ್ವಭಾವಾಪತ್ತಿಯನ್ನು ಪರಾಮರ್ಶಿಸಿದೆ. 'ಕಂಡುಕೊಳ್ಳುವನಾಗಿ' ಸರ್ವಾತ್ಮಭಾವವೆಂಬ ಫಲವನ್ನು ಪಡೆದುಕೊಂಡನು ಎಂಬೀ ಪ್ರಯೋಗದಿಂದ ಬ್ರಹ್ಮವಿದ್ಯೆ ಎಂಬ ಅಸಹಾಯಸಾಧನದಿಂದಲೇ[2] ಮೋಕ್ಷವು ಸಾಧ್ಯವಾಗಿರುತ್ತದೆ ಎಂಬಿದನ್ನು ತಿಳಿಸಿರುತ್ತದೆ. 'ಊಟಮಾಡುವವನಾಗಿ ತೃಪ್ತನಾಗುತ್ತಾನೆ' ಎಂಬ ಪ್ರಯೋಗದಂತೆಯೇ ಇದು[3].

## ಬ್ರಹ್ಮವನ್ನರಿತುಕೊಂಡವರಿಗೆಲ್ಲ ಫಲ

(ಭಾಷ್ಯ)

೧೬೬. ಸೇಯಂ ಬ್ರಹ್ಮವಿದ್ಯಯಾ ಸರ್ವಭಾವಾಪತ್ತಿರಾಸೀತ್ ಮಹತಾಂ ದೇವಾದೀನಾಂ ವೀರ್ಯಾತಿಶಯಾತ್ । ನೇದಾನೀಮ್ । ಐದಂಯುಗೀನಾನಾಂ ವಿಶೇಷತೋ ಮನುಷ್ಯಾಣಾಮ್ ಅಲ್ಪವೀರ್ಯತ್ವಾತ್ ಇತಿ ಸ್ಯಾತ್

---

1. 'ಪ್ರತಿಪೇದೇ ಹ ಪ್ರತಿಪೇದೇ ಕಿಲ' ಎಂಬ ಭಾಷ್ಯದಲ್ಲಿ ಹ ಶಬ್ದವು ಬಹಳ ಹಿಂದಿನ ಕಾಲದಲ್ಲಿ ಇದು ನಡೆಯಿತೆಂಬುದನ್ನು ತಿಳಿಸುತ್ತದೆ.

2. ಬ್ರಹ್ಮಜ್ಞಾನದಿಂದಲೇ ಸರ್ವಭಾವಾಪತ್ತಿಯಾಯಿತು, ಅದಕ್ಕೆ ಮತ್ತೇನೂ ಬೇಕಾಗಲಿಲ್ಲ ಎಂದದ್ದರಿಂದ ವಿದ್ಯೆ ಅಸಹಾಯವು ಎಂದಾಗುತ್ತದೆ.

3. ಪಶ್ಯನ್ ಎಂಬ ವರ್ತಮಾನಕೃದಂತವು ದರ್ಶನವೇ ಸರ್ವಭಾವಾಪತ್ತಿಗೆ ಹೇತುವೆಂಬುದನ್ನು ಹೇಳುತ್ತದೆ ; ಆದ್ದರಿಂದ ದರ್ಶನಕ್ಕೆ ಮತ್ತೆ ಯಾವ ಸಹಾಯವೂ ಬೇಡವೆಂದಾಯಿತು. ಊಟಮಾಡುವ ಕ್ರಿಯೆಯು ಆಗುವಾಗಲೇ ತೃಪ್ತಿಯಾಗುತ್ತದೆ ಎಂಬುದು ಇಲ್ಲಿ ದೃಷ್ಟಾಂತದ ಭಾವ.

ಕಸ್ಯಚಿತ್ ಬುದ್ಧಿಃ। ತದ್ವ್ಯುತ್ಥಾಪನಾಯ ಆಹ। ತದಿದಂ ಪ್ರಕೃತಂ ಬ್ರಹ್ಮ ಯತ್ ಸರ್ವಭೂತಾನುಪ್ರವಿಷ್ಟಂ ದೃಷ್ಟಿಕ್ರಿಯಾದಿಲಿಙ್ಗಮ್ ಏತರ್ಹಿ ಏತಸ್ಮಿನ್ನಪಿ ವರ್ತಮಾನಕಾಲೇ ಯಃ ಕಶ್ಚಿತ್ ವ್ಯಾವೃತ್ತಬಾಹ್ಯೌತ್ಸುಕ್ಯಃ ಆತ್ಮಾನಮೇವ ಏವಂ ವೇದ ಅಹಂ ಬ್ರಹ್ಮಾಸ್ಮಿ ಇತಿ ಅಪೋಹ್ಯ ಉಪಾಧಿಜನಿತಭ್ರಾನ್ತಿವಿಜ್ಞಾನಾಧ್ಯಾರೋಪಿತಾನ್ ವಿಶೇಷಾನ್ ಸಂಸಾರಧರ್ಮಾನಾಗನ್ಧಿತಮ್ ಅನನ್ತರಮಬಾಹ್ಯಂ ಬ್ರಹ್ಮೈವಾಹಮಸ್ಮಿ ಕೇವಲಮ್ ಇತಿ, ಸೋಽವಿದ್ಯಾಕೃತಾಸರ್ವತ್ವನಿವೃತ್ತೇಃ ಬ್ರಹ್ಮವಿಜ್ಞಾನಾತ್ ಇದಂ ಸರ್ವಂ ಭವತಿ! ನ ಹಿ ಮಹಾವೀರ್ಯೇಷು ವಾಮದೇವಾದಿಷು ಹೀನವೀರ್ಯೇಷು ವಾ ವಾರ್ತಮಾನಿಕೇಷು ಮನುಷ್ಯೇಷು ಬ್ರಹ್ಮಣೋ ವಿಶೇಷಃ ತದ್ವಿಜ್ಞಾನಸ್ಯ ವಾ ಅಸ್ತಿ ॥

(ಭಾಷ್ಯಾರ್ಥ)

ಬ್ರಹ್ಮವಿದ್ಯೆಯಿಂದ ಸರ್ವಭಾವವನ್ನು ಪಡೆಯುವದೆಂಬಿದು ದೇವತೆಗಳೇ ಮೊದಲಾದ ದೊಡ್ಡವರಿಗೆ ಹೆಚ್ಚಿನ ವೀರ್ಯವಿದ್ದದ್ದರಿಂದ ಆಯಿತು; ಈ ಯುಗದವರಿಗೆ ಅದರಲ್ಲಿಯೂ ಮನುಷ್ಯರಿಗೆ ಆಗಲಾರದು, ಏಕೆಂದರೆ ಅವರು ಅಲ್ಪವೀರ್ಯರು – ಎಂದು ಯಾವನಿಗಾದರೂ ಬುದ್ಧಿಯುಂಟಾದೀತು. ಅದನ್ನು ತಳ್ಳಿಹಾಕುವದಕ್ಕಾಗಿ (ಶ್ರುತಿಯು ಹೀಗೆಂದು) ಹೇಳುತ್ತಿದೆ : ಸರ್ವಭೂತಗಳಲ್ಲಿಯೂ ಒಳಹೊಕ್ಕಿರುವದಲ್ಲ, ದೃಷ್ಟಿಕ್ರಿಯೆಯೇ ಮುಂತಾದ ಲಿಂಗಗಳಿಂದ[1] (ತಿಳಿಯಬರುತ್ತದೆಯಲ್ಲ), ಆ ಈ ಪ್ರಕೃತವಾದ ಬ್ರಹ್ಮವನ್ನು ಈಗ ಈ ವರ್ತಮಾನಕಾಲದಲ್ಲಿಯೂ ಯಾವನೇ ಆಗಲಿ ಹೊರಗಿನ (ವಿಷಯಗಳಲ್ಲಿ) ಔತ್ಸುಕ್ಯವನ್ನು ಬಿಟ್ಟು ತನ್ನನ್ನೇ 'ನಾನು ಬ್ರಹ್ಮವು' ಎಂದು ಉಪಾಧಿಗಳಿಂದುಂಟಾಗಿರುವ ಭ್ರಾಂತಿವಿಜ್ಞಾನದಿಂದ ಅಧ್ಯಾರೋಪಿತವಾಗಿರುವ[2] ವಿಶೇಷಧರ್ಮಗಳನ್ನು ಬಿಟ್ಟು ಸಂಸಾರಧರ್ಮದ ವಾಸನೆಯೂ ಇಲ್ಲದ ಒಳಗಿಲ್ಲದ ಹೊರಗಿಲ್ಲದ ಕೇವಲ ಬ್ರಹ್ಮವೇ ನಾನಾಗಿರುವೆನು ಎಂದಿಂತು ಅರಿತುಕೊಳ್ಳುತ್ತಾನೋ ಅವನು ಅವಿದ್ಯೆಯಿಂದಾಗಿರುವ ಅಸರ್ವತ್ವವು ತೊಲಗುವ ಬ್ರಹ್ಮವಿಜ್ಞಾನದಿಂದ ಇದೆಲ್ಲವೂ ಆಗುವನು. ಮಹಾವೀರ್ಯರಾದ ವಾಮದೇವಾದಿಗಳಲ್ಲಿಯಾಗಲಿ ಈಗಿನ ಕಾಲದ ಹೀನವೀರ್ಯರಾದ ಮನುಷ್ಯರಲ್ಲಿಯಾಗಲಿ ಬ್ರಹ್ಮಕ್ಕೆ ಅಥವಾ ಅದರ ವಿಜ್ಞಾನಕ್ಕೆ (ಯಾವ) ವಿಶೇಷವೂ ಇರುವದೇ ಇಲ್ಲ.

---

1. ಪ್ರಾಣ, ಚಕ್ಷುಸ್ಸು –ಎಂದು ಮುಂತಾದ ಕರ್ಮನಾಮಗಳನ್ನು ಹೇಳಿರುವದು ಇದಕ್ಕಾಗಿಯೇ ; ಪ್ರಾಣನಾದಿಲಿಂಗಗಳಿಂದ ಅವಕ್ಕೆ ಆಶ್ರಯವಾಗಿರುವ ಆತ್ಮನನ್ನು ಅರಿತುಕೊಂಡು ಅವನ ಪರಮಾರ್ಥಸ್ವರೂಪವನ್ನು ಆ ಬಳಿಕ ಅರಿತುಕೊಳ್ಳಬೇಕು– ಎಂಬುದರಲ್ಲಿ ಅವಕ್ಕೆ ತಾತ್ಪರ್ಯ.

2. ಭ್ರಾಂತಿ ಬೇರೆ, ಅಧ್ಯಾರೋಪವು ಬೇರೆ – ಎಂದಲ್ಲ ; ತಪ್ಪಾಗಿ ತಿಳಿದುಕೊಂಡಿರುವ ಎಂದಿಷ್ಟೇ ಅರ್ಥ.

## ಬ್ರಹ್ಮವಿದ್ಯೆಗೆ ದೇವತೆಗಳೂ ಅಡ್ಡಿಮಾಡಲಾರರು

(ಭಾಷ್ಯ)

೧೬೭. ವಾರ್ತಮಾನಿಕೇಷು ಪುರುಷೇಷು ತು ಬ್ರಹ್ಮವಿದ್ಯಾಫಲೇ ಅನೈಕಾನ್ತಿಕತಾ ಶಙ್ಕ್ಯತೇ ಇತ್ಯತ ಆಹ। ತಸ್ಯ ಹ ಬ್ರಹ್ಮವಿಜ್ಞಾತುಃ ಯಥೋಕ್ತೇನ ವಿಧಿನಾ ದೇವಾ ಮಹಾವೀರ್ಯಾಃ ಚನ ಅಪಿ ಅಭೂತ್ಯೈ ಅಭವನಾಯ ಬ್ರಹ್ಮಸರ್ವಭಾವಸ್ಯ ನೇಶತೇ ನ ಪರ್ಯಾಪ್ತಾ ಕಿಮುತಾನ್ಯೇ ॥

(ಭಾಷ್ಯಾರ್ಥ)

ಆದರೆ ವರ್ತಮಾನಕಾಲದ ಪುರುಷರ (ವಿಷಯ)ದಲ್ಲಿ ಬ್ರಹ್ಮವಿದ್ಯಾಫಲ (ವುಂಟಾಗುವದೆಂಬ)ರಿವು ಅನಿಯತವೆಂಬ ಶಂಕೆಯಾಗಬಹುದಾದ್ದರಿಂದ (ಶ್ರುತಿ ಹೀಗೆಂದು) ಹೇಳುತ್ತದೆ. ಅವನಿಗೆ (ಆ) ಬ್ರಹ್ಮವನ್ನು ಮೇಲೆ ಹೇಳಿರುವ ರೀತಿಯಿಂದ ಅರಿತಿರುವವನಿಗೆ ಮಹಾವೀರ್ಯರಾದ ದೇವತೆಗಳು (ಚನ= ಅಪಿ) ಕೂಡ, ಆಗದಿರುವದಕ್ಕೆ ಬ್ರಹ್ಮವೂ ಸರ್ವವೂ ಆಗದಿರುವದಕ್ಕೆ ಸಮರ್ಥರಾಗಿರುವದಿಲ್ಲ, (ಆಗದಿರುವಂತೆ ಮಾಡಲು) ಶಕ್ತರಾಗಿರುವದಿಲ್ಲ, ಇನ್ನು ಮಿಕ್ಕವರು (ಶಕ್ತರಲ್ಲವೆಂದು ಹೇಳತಕ್ಕ)ದ್ದೇನು ?

## ದೇವತೆಗಳು ಬ್ರಹ್ಮಭಾವಕ್ಕೆ ಅಡ್ಡಿಯಾಗುವ ಶಂಕೆ ಏಕೆ?

(ಭಾಷ್ಯ)

೧೬೮. ಬ್ರಹ್ಮವಿದ್ಯಾಫಲಪ್ರಾಪ್ತೌ ವಿಘ್ನಕರಣೇ ದೇವಾದಯ ಈಶತೇ ಇತಿ ಕಾ ಶಙ್ಕಾ ಇತಿ? ಉಚ್ಯತೇ। ದೇವಾದೀನ್ ಪ್ರತಿ ಋಣವತ್ತ್ವಾತ್ ಮರ್ತ್ಯಾನಾಮ್। "ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ" (ತೈ. ಸಂ. ೬-೩-೧೦) ಇತಿ ಹಿ ಜಾಯಮಾನಮೇವ ಋಣವನ್ತಂ ಪುರುಷಂ ದರ್ಶಯತಿ ಶ್ರುತಿಃ। ಪಶುನಿದರ್ಶನಾಚ್ಚ। ಅಥೋ ಅಯಂ ವಾ" (೧-೪-೧೬) ಇತ್ಯಾದಿ ಲೋಕಶ್ರುತೇಶ್ಚ। ಆತ್ಮನೋ ವೃತ್ತಿಪರಿಪಿಪಾಲಯಿಷಯಾ ಅಧಮರ್ಣಾನಿವ ದೇವಾಃ ಪರತನ್ತ್ರಾನ್ ಮನುಷ್ಯಾನ್ ಪ್ರತಿ ಅಮೃತತ್ವಪ್ರಾಪ್ತಿವಿಘ್ನಂ[1] ಕುರ್ಯುಃ ಇತಿ ನ್ಯಾಯ್ಯೈವ ಏಷಾ ಶಙ್ಕಾ। ಸ್ವಪಶೂನ್ ಸ್ವಶರೀರಾಣೀವ ಚ ರಕ್ಷನ್ತಿ ದೇವಾಃ। ಮಹತ್ತರಾಂ ಹಿ ವೃತ್ತಿಂ ಕರ್ಮಾಧೀನಾಂ ದರ್ಶಯಿಷ್ಯತಿ ದೇವಾದೀನಾಂ ಬಹುಪಶುಸಮತಯಾ ಏಕೈಕಸ್ಯ ಪುರುಷಸ್ಯ। "ತಸ್ಮಾದೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ" ಇತಿ ಹಿ ವಕ್ಷ್ಯತಿ। "ಯಥಾ ಹ ವೈ ಸ್ವಾಯ ಲೋಕಾಯಾರಿಷ್ಟಿಮಿಚ್ಛೇ

1. 'ಅಮೃತತ್ವಪ್ರಾಪ್ತಿಂ ಪ್ರತಿ ವಿಘ್ನಂ' ಎಂಬುದಕ್ಕಿಂತ ಈ ಪಾಠವೇ ಮೇಲು.

ದೇವಂ ಹ್ಯೇವಂವಿದೇ ಸರ್ವಾಣಿ ಭೂತಾನ್ಯರಿಷ್ಟಿಮಿಚ್ಛಂತಿ" (೧-೪-೧೬) ಇತಿ ಚ। ಬ್ರಹ್ಮವಿತ್ತ್ವೇ ಪಾರಾರ್ಥ್ಯನಿವೃತ್ತೇರ್ನ ಸ್ವಲೋಕತ್ವಂ ಪಶುತ್ವಂ ಚ ಇತ್ಯಭಿಪ್ರಾಯಃ ಅಪ್ರಿಯಾರಿಷ್ಟಿವಚನಾಭ್ಯಾಮ್ ಅವಗಮ್ಯತೇ। ತಸ್ಮಾತ್ ಬ್ರಹ್ಮವಿದೋ ಬ್ರಹ್ಮವಿದ್ಯಾಫಲಪ್ರಾಪ್ತಿಂ ಪ್ರತಿ ಕುರ್ಯುರೇವ ವಿಘ್ನಂ ದೇವಾಃ।. ಪ್ರಭಾವವನ್ತಶ್ಚ ಹಿ ತೇ ॥

(ಭಾಷ್ಯಾರ್ಥ)

(ಆಕ್ಷೇಪ) :- ಬ್ರಹ್ಮವಿದ್ಯೆಯ ಫಲದ ಪ್ರಾಪ್ತಿಗೆ ಅಡ್ಡಿಯನ್ನು ಮಾಡುವದಕ್ಕೆ ದೇವಾದಿಗಳು ಸಮರ್ಥರಾಗಿರುತ್ತಾರೆಂಬುವಕ್ಕೆ ಶಂಕೆ(ಯಾದರೂ) ಯಾವದು ?

(ಪರಿಹಾರ) :- ಇದಕ್ಕೆ ಹೇಳುತ್ತೇವೆ. (ಶಂಕೆ ಏತಕ್ಕೆಂದರೆ) ದೇವತೆಗಳೇ ಮೊದಲಾದವರಿಗೆ ಮನುಷ್ಯರು ಸಾಲಗಾರರಾಗಿರುತ್ತಾರೆ. (ಇದರ ವಿವರ) : "(ಹುಟ್ಟಿದಮಾತ್ರದಿಂದ ಬ್ರಾಹ್ಮಣನು) ಬ್ರಹ್ಮಚರ್ಯದ ವಿಷಯಕ್ಕೆ ಋಷಿಗಳಿಗೂ ಯಜ್ಞದ ವಿಷಯಕ್ಕೆ ದೇವತೆಗಳಿಗೂ ಪ್ರಜೆಯ ವಿಷಯಕ್ಕೆ ಪಿತೃಗಳಿಗೂ (ಋಣವಂತನಾಗಿರುತ್ತಾನೆ)" (ತೈ. ಸಂ. ೬-೩-೧೦) ಎಂದಲ್ಲವೆ, ಶ್ರುತಿಯು ಹುಟ್ಟಿದಮಾತ್ರದಿಂದ ಪುರುಷನು ಋಣವಂತನಾಗಿರುತ್ತಾನೆಂದು ತಿಳಿಸುತ್ತದೆ ? (ಈ ಕಂಡಿಕೆಯಲ್ಲಿರುವ) ಪಶುದೃಷ್ಟಾಂತದಿಂದಲೂ "ಇನ್ನು ಈ (ಆತ್ಮ)ನೇ (ಎಲ್ಲಾ ಭೂತಗಳಿಗೂ ಲೋಕವು)" (೧-೪-೧೬) ಎಂದು ಮುಂತಾಗಿ (ಮನುಷ್ಯನು ಎಲ್ಲರಿಗೂ) ಲೋಕ(ವಾಗಿರುತ್ತಾನೆಂದು) ಶ್ರುತಿಯಿರುವದರಿಂದಲೂ ದೇವತೆಗಳು ತಮ್ಮ ವೃತ್ತಿಯನ್ನು ಕಾಪಾಡಿಕೊಳ್ಳುವದಕ್ಕಾಗಿ ಸಾಲಗಾರರಂತೆ ಪರಾಧೀನರಾಗಿರುವ ಮನುಷ್ಯರಿಗೆ ಅಮೃತತ್ವಪ್ರಾಪ್ತಿ(ಯ ವಿಷಯದಲ್ಲಿ) ವಿಘ್ನವನ್ನು ಮಾಡಬಹುದು. ಆದ್ದರಿಂದ ಈ ಶಂಕೆಯು ನ್ಯಾಯವಾಗಿಯೇ ಇರುತ್ತದೆ. ತಮ್ಮ ಪಶುಗಳಾಗಿರುವ (ಮನುಷ್ಯರನ್ನು) ತಮ್ಮ ಶರೀರಗಳಂತೆಯೇ ದೇವತೆಗಳು ಕಾಪಾಡಿಕೊಳ್ಳುತ್ತಾರೆ. ಒಬ್ಬೊಬ್ಬ ಪುರುಷನೇ ಅನೇಕ ಪಶುಗಳಿಗೆ ಸಮನಾಗಿರುವದರಿಂದ ದೇವಾದಿಗಳ ಮಹತ್ತರವಾದ ವೃತ್ತಿಯು ಕರ್ಮಾಧೀನವಾಗಿದೆ ಎಂದು ಶ್ರುತಿಯು ಮುಂದೆ ತಿಳಿಸುವದು. "ಮನುಷ್ಯರು ಅರಿತುಕೊಂಡಾರೆಂಬುದಿದೆಯಲ್ಲ, ಅದು ಈ (ದೇವತೆಗಳಿಗೆ) ಪ್ರಿಯವಲ್ಲ" ಎಂದಲ್ಲವೆ, (ಈ ಕಂಡಿಕೆಯಲ್ಲಿ ಮುಂದೆ) ಹೇಳಿರುತ್ತದೆ ? "ಹೇಗೆ (ಯಾವನಾದರೂ) ತನ್ನ ಲೋಕಕ್ಕೆ ಒಳ್ಳೆಯದನ್ನು ಇಚ್ಛಿಸುವನೋ ಹೀಗೆಯೇ ಹೀಗೆಂದರಿತುಕೊಂಡಿರುವವನಿಗೆ ಸರ್ವಭೂತಗಳೂ ಒಳ್ಳೆಯದನ್ನು ಬಯಸುತ್ತವೆ" (೧-೪-೧೬) ಎಂದೂ (ಮುಂದೆ ಹೇಳಿರುತ್ತದೆ). ಬ್ರಹ್ಮಜ್ಞಾನಿಯಾದರೆ ಮತ್ತೊಬ್ಬರಿಗಾಗಿ (ದುಡಿಯುತ್ತಿರು)ವದು ಹೋಗಿಬಿಡುವದರಿಂದ (ಅವನು

೨೧ಗ) ತಮ್ಮ ಲೋಕವೂ ಅಲ್ಲ, ಪಶುವೂ ಅಲ್ಲ ಎಂಬ ಅಭಿಪ್ರಾಯವು ಅಪ್ರಿಯ (ಬೇಡದ್ದು), ಅರಿಷ್ಟಿ (ಒಳ್ಳೆಯದು) – ಎಂಬೀ ವಚನಗಳಿಂದ ಗೊತ್ತಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನಿಯು ಬ್ರಹ್ಮವಿದ್ಯೆಯ ಫಲವನ್ನು ಪಡೆದುಕೊಳ್ಳುವ (ವಿಷಯ)ದಲ್ಲಿ ದೇವತೆಗಳು ವಿಘ್ನವನ್ನು ಮಾಡಲೇಬಹುದು. ಏಕೆಂದರೆ ಅವರು ಪ್ರಭಾವವುಳ್ಳವರೂ ಆಗಿರುತ್ತಾರೆ.

## ಕರ್ಮಫಲಪ್ರಾಪ್ತಿಗೆ ದೇವಾದಿಗಳು ಅಡ್ಡಿಮಾಡಲಾಪರೆ?

(ಭಾಷ್ಯ)

೧೬೯. ನನ್ವೇವಂ ಸತಿ ಅನ್ಯಾಸ್ವಪಿ ಕರ್ಮಫಲಪ್ರಾಪ್ತಿಷು ದೇವಾನಾಂ ವಿಘ್ನಕರಣಂ ಪ್ರೇಯಪಾನಸಮಮ್ । ಹನ್ತ ತರ್ಹಿ ಅವಿಸ್ರಮ್ಭೋಽಭ್ಯುದಯ ನಿಃಶ್ರೇಯಸಸಾಧನಾನುಷ್ಠಾನೇಷು । ತಥಾ ಈಶ್ವರಸ್ಯ ಅಚಿನ್ತ್ಯಶಕ್ತಿತ್ವಾತ್ ವಿಘ್ನಕರಣೇ ಪ್ರಭುತ್ವಮ್ । ತಥಾ ಕಾಲಕರ್ಮಮನ್ತ್ರೌಷಧಿತಪಸಾಮ್ । ಏಷಾಂ ಹಿ ಫಲಸಂಪತ್ತಿವಿಪತ್ತಿಹೇತುತ್ವಂ ಶಾಸ್ತ್ರೇ ಲೋಕೇ ಚ ಪ್ರಸಿದ್ಧಮ್ । ಅತೋಽಪ್ಯನಾಶ್ವಾಸಃ ಶಾಸ್ತ್ರಾರ್ಥಾನುಷ್ಠಾನೇ । ನ । ಸರ್ವಪದಾರ್ಥಾನಾಂ ನಿಯತನಿಮಿತ್ತೋಪಾದಾನಾತ್ । ಜಗದ್ವೈಚಿತ್ರ್ಯದರ್ಶನಾಚ್ಚ । ಸ್ವಭಾವ ಪಕ್ಷೇ ಚ ತದುಭಯಾನುಪಪತ್ತೇಃ । ಸುಖದುಃಖಾದಿಫಲನಿಮಿತ್ತಂ ಕರ್ಮ ಇತ್ಯೇತಸ್ಮಿನ್ ಪಕ್ಷೇ ಸ್ಥಿತೇ ವೇದಸ್ಮೃತಿನ್ಯಾಯಲೋಕಪರಿಗೃಹೀತೇ ದೇವೇಶ್ವರಕಾಲಾಸ್ತಾವತ್ ನ ಕರ್ಮಫಲವಿಪರ್ಯಾಸಕರ್ತಾರಃ । ಕರ್ಮಣಾಂ ಕಾಙ್ಕ್ಷಿತಕಾರಕತ್ವಾತ್ । ಕರ್ಮ ಹಿ ಶುಭಾಶುಭಂ ಪುರುಷಾಣಾಂ ದೇವಕಾಲೇಶ್ವರಾದಿಕಾರಕಮ್ ಅನಪೇಕ್ಷ್ಯ ನಾತ್ಮಾನಂ ಪ್ರತಿಲಭತೇ । ಲಬ್ಧಾತ್ಮಕಮಪಿ ಫಲದಾನೇ ಅಸಮರ್ಥಮ್ । ಕ್ರಿಯಾಯಾ ಹಿ[1] ಕಾರಕಾದ್ಯನೇಕನಿಮಿತ್ತೋಪಾದಾನಸ್ವಾಭಾವ್ಯಾತ್ । ತಸ್ಮಾತ್ ಕ್ರಿಯಾನುಗುಣಾ ಹಿ ದೇವೇಶ್ವರಾದಯಃ ಇತಿ ಕರ್ಮಸು ತಾವತ್ ನ ಫಲಪ್ರಾಪ್ತಿಂ ಪ್ರತಿ ಅವಿಸ್ರಮ್ಭಃ । ಕರ್ಮಣಾಮಪಿ ಏಷಾಂ ವಶಾನುಗತ್ವಂ ಕ್ವಚಿತ್ । ಸ್ವಸಾಮರ್ಥ್ಯಸ್ಯ ಅಪ್ರಣೋದ್ಯತ್ವಾತ್ । ಕರ್ಮಕಾಲದೈವದ್ರವ್ಯಾದಿಸ್ವಭಾವಾನಾಂ ಗುಣಪ್ರಧಾನಭಾವಸ್ತು ಅನಿಯತಃ ದುರ್ವಿಜ್ಞೇಯಶ್ಚ ಇತಿ ತತ್ಕೃತೋ ಮೋಹೋ ಲೋಕಸ್ಯ । ಕರ್ಮೈವ ಕಾರಕಂ ನಾನ್ಯತ್ ಫಲಪ್ರಾಪ್ತೌ ಇತಿ ಕೇಚಿತ್ । ದೈವಮೇವ ಇತ್ಯಪರೇ । ಕಾಲ ಇತ್ಯೇಕೇ । ದ್ರವ್ಯಾದಿಸ್ವಭಾವಃ ಇತಿ ಕೇಚಿತ್ । ಸರ್ವ ಏತೇ ಸಂಹತಾಃ ಏವ ಇತ್ಯಪರೇ । ತತ್ರ ಕರ್ಮಣಃ ಪ್ರಾಧಾನ್ಯಮ್ ಅಙ್ಗೀಕೃತ್ಯ ವೇದಸ್ಮೃತಿವಾದಾಃ "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ

1. ಇಲ್ಲಿ ಹಿಶಬ್ದವು ಬೇಕಿಲ್ಲವೆಂದು ತೋರುತ್ತದೆ.

ಪಾಪೇನ" (೩-೨-೧೩) ಇತ್ಯಾದಯಃ। ಯದ್ಯಪಿ ಏಷಾಂ ಸ್ವವಿಷಯೇ ಕಸ್ಯ ಚಿತ್ ಪ್ರಾಧಾನ್ಯೋದ್ಭವಃ ಇತರೇಷಾಂ ತತ್ಕಾಲೀನಪ್ರಾಧಾನ್ಯಶಕ್ತಿಸ್ತಿರಭಃ, ತಥಾಪಿ ನ ಕರ್ಮಣಃ ಫಲಪ್ರಾಪ್ತಿಂ ಪ್ರತಿ ಅನೈಕಾನ್ತಿಕತ್ವಮ್। ಶಾಸ್ತ್ರನ್ಯಾಯ ನಿರ್ಧಾರಿತತ್ವಾತ್ ಕರ್ಮಪ್ರಾಧಾನ್ಯಸ್ಯ ॥

(ಭಾಷ್ಯಾರ್ಥ)

(ಆಶಂಕೆ) :- ಹೀಗಾದರೆ ಬೇರೆಯಾದ ಕರ್ಮಫಲಪ್ರಾಪ್ತಿಗಳಲ್ಲಿಯೂ ದೇವತೆಗಳಿಗೆ ಅಡ್ಡಿಯನ್ನು ಮಾಡುವದೆಂಬುದು ನೀರುಕುಡಿದಂತೆ (ಎಂದಾಯಿತಲ್ಲ)! ಸರಿ, ಹಾಗಾದರೆ ಅಭ್ಯುದಯನಿಃಶ್ರೇಯಸಸಾಧನಗಳ ಅನುಷ್ಠಾನಗಳಲ್ಲಿ (ಯಾವ) ವಿಶ್ವಾಸವೂ ಇಲ್ಲದಂತಾಯಿತಲ್ಲ! ಇದರಂತೆ ಈಶ್ವರನೂ ಅಚಿಂತ್ಯಶಕ್ತಿಯುಳ್ಳಾತನಾದ್ದರಿಂದ ವಿಘ್ನವನ್ನು ಮಾಡುವದಕ್ಕೆ ಸ್ವತಂತ್ರನೆಂದಾಗುವದು. ಹೀಗೆಯೇ ಕಾಲ, ಕರ್ಮ, ಮಂತ್ರ, ಔಷಧಿ, ತಪಸ್ಸು- (ಇವುಗಳಿಗೂ ಅಡ್ಡಿಮಾಡುವ ಸಾಮರ್ಥ್ಯವುಂಟೆಂದಾಗುವದು); ಏಕೆಂದರೆ ಇವುಗಳು ಫಲವುಂಟಾಗುವದು, ತಪ್ಪುವದು -(ಈ ಎರಡಕ್ಕೂ) ಹೇತುವಾಗಿರುವವೆಂದು ಶಾಸ್ತ್ರದಲ್ಲಿಯೂ ಲೋಕದಲ್ಲಿಯೂ ಪ್ರಸಿದ್ಧವಾಗಿರುತ್ತದೆ[1]. ಆದ್ದರಿಂದಲೂ ಶಾಸ್ತ್ರಾರ್ಥವನ್ನು ಅನುಷ್ಠಾನಮಾಡುವದರಲ್ಲಿ (ಯಾವ) ವಿಶ್ವಾಸವೂ ಇಲ್ಲದಂತಾಯಿತಲ್ಲ!

(ಪರಿಹಾರ) :- ಹಾಗಲ್ಲ. ಏಕೆಂದರೆ ಎಲ್ಲಾ ಪದಾರ್ಥಗಳಿಗೂ ನಿಯತವಾದ ಕಾರಣವನ್ನು ಸ್ವೀಕರಿಸುತ್ತಾರೆ, ಜಗತ್ತು ವಿಚಿತ್ರವಾಗಿರುವದೆಂದೂ ಕಂಡುಬರುತ್ತಿದೆ[2]. ಆದರೆ ಸ್ವಭಾವಪಕ್ಷದಲ್ಲಿ ಈ ಎರಡೂ ಹೊಂದುವದಿಲ್ಲ[3]. (ಹೇಗೆಂದರೆ) ಸುಖದುಃಖ ಮುಂತಾದ ಫಲಕ್ಕೆ ಕರ್ಮವೇ ನಿಮಿತ್ತ ಎಂಬ ವೇದಸ್ಮೃತಿನ್ಯಾಯಲೋಕಗಳು ಪರಿಗ್ರಹಿಸಿರುವ ಪಕ್ಷವು (ಸಿದ್ಧಾಂತವಾಗಿ) ನಿಂತಿರುವದರಿಂದ ಮೊದಲನೆಯದಾಗಿ ದೇವತೆಗಳು, ಈಶ್ವರ, ಕಾಲ- ಇವು ಕರ್ಮಫಲವನ್ನು ಬೇರೆಯಾಗಿಸಲಾರವು. ಏಕೆಂದರೆ ಕರ್ಮಗಳಿಗೆ ಕಾರಕಗಳು ಬೇಕಾಗಿರುತ್ತವೆ. (ಇದರ ವಿವರ): ಪುರುಷರ ಒಳ್ಳೆಯ ಅಥವಾ ಕೆಟ್ಟ ಕರ್ಮವು ದೇವತೆ

1. ಆದ್ದರಿಂದ ಇವುಗಳೆಲ್ಲ ಕರ್ಮಫಲವನ್ನು ಮಾರ್ಪಡಿಸಬಹುದು.

2. ಇಂಥ ಕಾರ್ಯಕ್ಕೆ ಇಂಥ ಕಾರಣವೇ ಬೇಕೆಂಬುದು ನಿಯತವಾಗಿರುವದರಿಂದ ಕಾರಣವನ್ನು ಸ್ವೀಕರಿಸುವದೆಂಬ ರೂಪದ ಕರ್ಮವು ಫಲಕ್ಕೆ ಮುಖ್ಯವೆಂದಾಯಿತು. ಜಗತ್ತು ವಿಚಿತ್ರವಾಗಿರುವದರಿಂದ ಅದು ವಿಚಿತ್ರಕರ್ಮಗಳ ಫಲವೆಂದು ಏರ್ಪಡುತ್ತದೆ. ಇದನ್ನು ಇನ್ನು ಮುಂದೆ ವಿವರಿಸಲಾಗುವದು.

3. ಏಕೆಂದರೆ ಸ್ವಭಾವವಾದದಂತೆ ಒಂದು ಕಾರ್ಯಕ್ಕೆ ಯಾವದಾದರೂ ಕಾರಣವಾಗಬಹುದು; ಒಂದು ಕಾರಣದಿಂದ ಒಂದು ಗೊತ್ತಾದ ಕಾರ್ಯವಿರಬೇಕೆಂಬ ನಿಯಮವಿಲ್ಲದ್ದರಿಂದ ಒಂದೇ ರೂಪವಾಗಿ ಜಗತ್ತಿರುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

ಗಳು, ಕಾಲ, ಈಶ್ವರ– ಮುಂತಾದ ಕಾರಕಗಳನ್ನು ಬಯಸದೆ ತಾನೇ ಉಂಟಾಗಲಾರದು[1]; ಉಂಟಾದರೂ (ತಾನೇ) ಫಲವನ್ನು ಕೊಡುವದಕ್ಕೆ ಅಸಮರ್ಥವಾಗಿರುತ್ತದೆ. ಏಕೆಂದರೆ ಕ್ರಿಯೆಗೆ ಕಾರಕಗಳೇ ಮುಂತಾದ ಅನೇಕ ನಿಮಿತ್ತಗಳನ್ನು ಸ್ವೀಕರಿಸುವದು ಸ್ವಾಭಾವಿಕವಾಗಿರುತ್ತದೆ. ಆದ್ದರಿಂದ ದೇವತೆಗಳು, ಈಶ್ವರ – ಮುಂತಾದವು ಕ್ರಿಯೆಗೆ ಅನುಗುಣವಾಗಿಯೇ ಇರುವದರಿಂದ ಮೊದಲನೆಯದಾಗಿ ಕರ್ಮಗಳಲ್ಲಿ ಫಲಪ್ರಾಪ್ತಿಯಾಗುವ ವಿಷಯಕ್ಕೆ ಅವಿಶ್ವಾಸವುಂಟಾಗುವಹಾಗಿಲ್ಲ.

ಕರ್ಮಗಳು ಕೂಡ ಕೆಲವು ವೇಳೆಗಳಲ್ಲಿ ಈ (ದೇವತಾದಿಗಳಿಗೆ) ವಶವರ್ತಿಗಳಾಗಿರುತ್ತವೆ; ಏಕೆಂದರೆ (ದೇವಾದಿಗಳ) ಸ್ವಸಾಮರ್ಥ್ಯವನ್ನು ಅಲ್ಲಗಳೆಯುವಹಾಗಿಲ್ಲ[2]. **ಕರ್ಮ, ಕಾಲ, ದೈವ, ದ್ರವ್ಯಾದಿಗಳ ಸ್ವಭಾವ– ಇವುಗಳ ಗುಣಪ್ರಧಾನಭಾವವಾದರೋ ನಿಯತವಾಗಿರುವದಿಲ್ಲ, ಅದನ್ನು ಅರಿತುಕೊಳ್ಳುವದೂ ಕಷ್ಟ[3]; ಆದ್ದರಿಂದ ಆ (ಅನಿಯತವಾದ ಗುಣಪ್ರಭಾವದಿಂದ ಜನರಿಗೆ ಮೋಹವುಂಟಾಗುವದು[4].** (ಹೇಗೆಂದರೆ) ಫಲಪ್ರಾಪ್ತಿಗೆ ಕರ್ಮವೇ ಕಾರಕವು ಮತ್ತೆ ಯಾವದೂ ಇಲ್ಲ ಎಂದು ಒಬ್ಬರು; ದೈವವೇ[5] (ಕಾರಣವು) ಎಂದು ಇನ್ನು ಕೆಲವರು; ಕಾಲವು ಕಾರಣವು ಎಂದು ಕೆಲವರು; ದ್ರವ್ಯಾದಿಗಳ ಸ್ವಭಾವವೇ ಎಂದು ಕೆಲವರು; ಇವೆಲ್ಲ ಸೇರಿಯೇ (ಕಾರಣವಾಗಿರುವವು) ಎಂದು ಮತ್ತೆ ಕೆಲವರು. ಹೀಗಿರುವಲ್ಲಿ **ಕರ್ಮಕ್ಕೆ ಪ್ರಾಧಾನ್ಯವನ್ನು ಒಪ್ಪಿ "ಪುಣ್ಯಕರ್ಮದಿಂದ ಒಳ್ಳೆಯವನೇ ಆಗುತ್ತಾನೆ, ಪಾಪ (ಕರ್ಮ)ದಿಂದ ಕೆಟ್ಟವನೇ (ಆಗುತ್ತಾನೆ)" (೩-೨-೧೩) ಮುಂತಾದ ವೇದವಾದಗಳೂ ಸ್ಮೃತಿವಾದಗಳೂ ಹೊರಟಿರುತ್ತವೆ.** ಇವುಗಳಲ್ಲಿ ಯಾವದೋ ಒಂದಕ್ಕೆ ತಮ್ಮ ವಿಷಯದಲ್ಲಿ ಪ್ರಾಧಾನ್ಯವು ಎದ್ದುಕೊಳ್ಳುವದೂ ಉಳಿದವುಗಳಿಗೆ ಆ ಕಾಲಕ್ಕೆ ಪ್ರಾಧಾನ್ಯಶಕ್ತಿಯು ನಿಂತುಹೋಗುವದೂ (ಉಂಟು); ಆದರೂ ಕರ್ಮವು ಫಲಕ್ಕೆ (ಸಾಧನ)ವೆಂಬುದು ತಪ್ಪುವದಿಲ್ಲ.

---

1. ಅವುಗಳನ್ನು ಬಯಸಿಯೇ ಉಂಟಾಗುವದು.

2. ದೇವಾದಿಗಳಿಗಿರುವ ಸಾಮರ್ಥ್ಯವು ಯಾವಾಗಲೂ ಇದ್ದೇ ಇದೆ; ಆದರೆ ಸಾಮಾನ್ಯವಾಗಿ ಕರ್ಮಕ್ಕೆ ಅದು ಶೇಷವಾಗಿದ್ದುಕೊಂಡಿರುತ್ತದೆ. ಅಷ್ಟೆ.

3. ಯಾವಯಾವದು ಪ್ರಧಾನವಾಗಿರುವದೆಂಬುದು ಎಲ್ಲರಿಗೂ ಸುಲಭವಾಗಿ ತಿಳಿಯುವದಿಲ್ಲ.

4. ಗುಣಪ್ರಧಾನಭಾವವು ಅನಿಯತವಾಗಿರುವದರಿಂದ ನಿಯತವಾಗಿ ಇಂಥದ್ದೊಂದೇ ಕಾರಣವೆಂದು ಜನರು ಭ್ರಾಂತಿಯಿಂದ ಪಟ್ಟುಹಿಡಿಯುತ್ತಾರೆ– ಎಂದರ್ಥ.

5. ಅದೃಷ್ಟವೇ.

ಏಕೆಂದರೆ ಕರ್ಮವೇ ಪ್ರಧಾನವೆಂಬುದು ಶಾಸ್ತ್ರದಿಂದಲೂ ನ್ಯಾಯದಿಂದಲೂ ಗೊತ್ತಾಗಿರುತ್ತದೆ[1].

## ದೇವತೆಗಳು ಜ್ಞಾನಫಲಕ್ಕೆ ಅಡ್ಡಿ ಮಾಡಲಾರರು

(ಭಾಷ್ಯ)

೧೭೦. ನ। ಅವಿದ್ಯಾಪಗಮಮಾತ್ರತ್ವಾತ್ ಬ್ರಹ್ಮಪ್ರಾಪ್ತಿಫಲಸ್ಯ। ಯದುಕ್ತಮ್ ಬ್ರಹ್ಮಪ್ರಾಪ್ತಿಫಲಂ ಪ್ರತಿ ದೇವಾ ವಿಘ್ನಂ ಕುರ್ಯುಃ ಇತಿ ತತ್ರ ನ ದೇವಾನಾಂ ವಿಘ್ನಕರಣೇ ಸಾಮರ್ಥ್ಯಮ್। ಕಸ್ಮಾತ್? ವಿದ್ಯಾಕಾಲಾನನ್ತರಿತತ್ವಾತ್ ಬ್ರಹ್ಮಪ್ರಾಪ್ತಿಫಲಸ್ಯ। ಕಥಮ್? ಯಥಾ ಲೋಕೇ ದ್ರಷ್ಟುಶ್ಚಕ್ಷುಷ ಆಲೋಕೇನ ಸಂಯೋಗೋ ಯತ್ಕಾಲಃ ತತ್ಕಾಲ ಏವ ರೂಪಾಭಿವ್ಯಕ್ತಿಃ। ಏವಮ್ ಆತ್ಮವಿಷಯಂ ವಿಜ್ಞಾನಂ ಯತ್ಕಾಲಮ್, ತತ್ಕಾಲ ಏವ ತದ್ವಿಷಯಾಜ್ಞಾನತಿರೋಭಾವಃ ಸ್ಯಾತ್। ಅತೋ ಬ್ರಹ್ಮವಿದ್ಯಾಯಾಂ ಸತ್ಯಾಮ್ ಅವಿದ್ಯಾಕಾರ್ಯಾನುಪಪತ್ತೇಃ ಪ್ರದೀಪ ಇವ ತಮಃಕಾರ್ಯಸ್ಯ। ತತ್ ಕೇನ ಕಸ್ಯ ವಿಘ್ನಂ ಕುರ್ಯುರ್ದೇವಾಃ ಯತ್ರಾತ್ಮತ್ವಮೇವ ದೇವಾನಾಂ ಬ್ರಹ್ಮವಿದಃ। ತದೇತದಾಹ। ಆತ್ಮಾ ಸ್ವರೂಪಂ ಧ್ಯೇಯಂ ಯತ್ ತತ್ ಸರ್ವಶಾಸ್ತ್ರೈರ್ವಿಜ್ಞೇಯಂ ಬ್ರಹ್ಮ ಹಿ ಯಸ್ಮಾತ್ ಏಷಾಂ ದೇವಾನಾಂ ಸ ಬ್ರಹ್ಮವಿತ್ ಭವತಿ। ಬ್ರಹ್ಮವಿದ್ಯಾಸಮಕಾಲಮೇವ ಅವಿದ್ಯಾಮಾತ್ರವ್ಯವಧಾನಾಪಗಮಾತ್ ಶುಕ್ತಿಕಾಯಾ ಇವ ರಜತಾಭಾಸಾಯಾಃ ಶುಕ್ತಿಕಾತ್ವಮ್ ಇತ್ಯವೋಚಾಮ। ಅತೋ ನಾತ್ಮನಃ ಪ್ರತಿಕೂಲತ್ವೇ ದೇವಾನಾಂ ಪ್ರಯತ್ನಃ ಸಂಭವತಿ। ಯಸ್ಯ ಹಿ ಅನಾತ್ಮಭೂತಂ ಫಲಂ ದೇಶಕಾಲನಿಮಿತ್ತಾನ್ತರಿತಮ್ ತತ್ರ ಅನಾತ್ಮವಿಷಯೇ ಸಫಲಃ ಪ್ರಯತ್ನೋ ವಿಘ್ನಾಚರಣಾಯ ದೇವಾನಾಮ್। ನ ತ್ವಿಹ ವಿದ್ಯಾಸಮಕಾಲೇ ಆತ್ಮಭೂತೇ ದೇಶಕಾಲನಿಮಿತ್ತಾನನ್ತರಿತೇ ಅವಸರಾನುಪಪತ್ತೇಃ॥

(ಭಾಷ್ಯಾರ್ಥ)

ಹಾಗಲ್ಲ[2]. ಏಕೆಂದರೆ ಬ್ರಹ್ಮಪ್ರಾಪ್ತಿಫಲವು ಎಂದರೆ ಅವಿದ್ಯೆಯು ತೊಲಗುವದೇ ಹೊರತು (ಮತ್ತೇನೂ ಅಲ್ಲ. ಇದರ ವಿವರ): ಬ್ರಹ್ಮಪ್ರಾಪ್ತಿ

---

1. 'ಪುಣ್ಯೋ ವೈ ಪುಣ್ಯೇನ' ಮುಂತಾದ ಶಾಸ್ತ್ರದಿಂದ ಇದು ಗೊತ್ತಾಗುತ್ತದೆ; ಮಿಕ್ಕವುಗಳೆಲ್ಲ ಸಹಕಾರಿಗಳಾದ್ದರಿಂದ ಕರ್ಮವಿಲ್ಲದೆ ಅವು ಏನನ್ನೂ ಮಾಡಲಾರವು ಎಂಬ ನ್ಯಾಯದಿಂದಲೂ ಗೊತ್ತಾಗುತ್ತದೆ.

2. ದೇವತೆಗಳಿಗೂ ಹೆಚ್ಚಿನ ಸಾಮರ್ಥ್ಯವಿರುವದರಿಂದ ದೇವತೆಗಳೂ ಅಡ್ಡಿ ಮಾಡಬಹುದು ಎಂಬ ಶಂಕೆಯನ್ನು ತೆಗೆದು ಅದಕ್ಕೆ ಪರಿಹಾರವಾಗಿ ಮುಂದಿನ ಶ್ರುತಿವಾಕ್ಯಕ್ಕೆ ಈ ಅವತರಣಿಕೆಯನ್ನು ಕೊಟ್ಟಿದೆ.

ಎಂಬ ಫಲಕ್ಕೆ ದೇವತೆಗಳು ಅಡ್ಡಿಮಾಡಬಹುದು ಎಂದು (ಭಾ. ಭಾ. ೧೬೪ರಲ್ಲಿ) ಹೇಳಿತ್ತಲ್ಲ, ಅಲ್ಲಿ ದೇವತೆಗಳಿಗೆ ಅಡ್ಡಿಮಾಡುವದಕ್ಕೆ ಸಾಮರ್ಥ್ಯವಿರುವದಿಲ್ಲ. ಏಕೆ? ಎಂದರೆ **ಬ್ರಹ್ಮಪ್ರಾಪ್ತಿ ಎಂಬ ಫಲವು ವಿದ್ಯೆಯುಂಟಾಗುವ ಕಾಲಕ್ಕಿಂತ ಬೇರೆಯ (ಕಾಲದಲ್ಲಾಗುವ)ದಲ್ಲ. ಹೇಗೆಂದರೆ, ಲೋಕದಲ್ಲಿ ನೋಡುವವನ ಕಣ್ಣಿಗೆ ಬೆಳಕಿನ ಸಂಯೋಗವು ಯಾವ ಕಾಲದಲ್ಲಿ ಆಗುವದೋ ಅದೇ ಕಾಲದಲ್ಲಿಯೇ ಹೇಗೆ ರೂಪವು ತೋರಿಕೊಳ್ಳುವದೋ ಅದರಂತೆ ಆತ್ಮವಿಷಯದ ವಿಜ್ಞಾನವು ಯಾವ ಕಾಲದಲ್ಲಾಗುವದೋ ಆ ಕಾಲದಲ್ಲಿಯೇ ಅದರ ವಿಷಯದ ಅಜ್ಞಾನವು ಮರೆಯಾಗಬೇಕು. ಆದ್ದರಿಂದ ಬ್ರಹ್ಮವಿದ್ಯೆಯು ಉಂಟಾದರೆ ಪ್ರದೀಪದಲ್ಲಿ ತಮಸ್ಸಿನ ಕಾರ್ಯ (ಹೇಗೆ ಇರಲಾರದೋ) ಹಾಗೆ ಅವಿದ್ಯೆಯ ಕಾರ್ಯವು ಇರಲಾರದಾದ್ದರಿಂದ (ಆಗ) ಇತರಿಂದ ಯಾರಿಗೆ ದೇವತೆಗಳು ಅಡ್ಡಿಯನ್ನು ಮಾಡಿಯಾರು?** ಅಲ್ಲಿ ದೇವತೆಗಳಿಗೆ ಬ್ರಹ್ಮಜ್ಞಾನಿಯು ಆತ್ಮನೇ ಆಗಿರುತ್ತಾನಲ್ಲ !

ಆ ಇದನ್ನೇ (ಶ್ರುತಿ) ಹೇಳುತ್ತಿದೆ: (ಹಿ= ಯಸ್ಮಾತ್) ಏಕೆಂದರೆ ಅವನು ಬ್ರಹ್ಮಜ್ಞಾನಿಯು. ಇವರಿಗೆ (ಈ) ದೇವತೆಗಳಿಗೆ ಆತ್ಮನೇ, ಎಲ್ಲಾ ಶಾಸ್ತ್ರಗಳಿಂದಲೂ ಅರಿತುಕೊಳ್ಳಬೇಕಾದ ಬ್ರಹ್ಮನೆಂಬ ಸ್ವರೂಪವೇ ಆಗುತ್ತಾನೆ. ಬೆಳ್ಳಿಯ ಹಾಗೆ ಕಾಣುತ್ತಿರುವ ಕಪ್ಪೆಯಚಿಪ್ಪಿಗೆ ಶುಕ್ತಿಕಾತ್ವವು ಹೇಗೆ (ಅದು ಕಪ್ಪೆಯಚಿಪ್ಪೆಂದು ಅರಿತ ಸಮಕಾಲದಲ್ಲಿಯೇ ಆಗಿಬಿಡುವದೋ) ಹಾಗೆ ಬ್ರಹ್ಮವಿದ್ಯೆಯ ಸಮಕಾಲದಲ್ಲಿಯೇ, ಕೇವಲ ಅವಿದ್ಯೆ ಎಂಬ ನಡುವಿನ (ಮರೆಯು) ಹೋಗಿಬಿಡುವದರಿಂದ (ಅವರ ಆತ್ಮನೇ ಆಗಿಬಿಡುತ್ತಾನೆ) ಎಂದು (ಆಗಲೆ) ಹೇಳಿರುತ್ತೇವೆ. ಆದ್ದರಿಂದ (ತಮ್ಮ) ಆತ್ಮಕ್ಕೆ ಪ್ರತಿಕೂಲವಾಗಿರುವದಕ್ಕೆ ದೇವತೆಗಳು ಪ್ರಯತ್ನಿಸುವರೆಂಬುದು ಸಂಭವಿಸುವದಿಲ್ಲ. **ಯಾವ (ಸಾಧನ)ಕ್ಕೆ ದೇಶ, ಕಾಲ, ನಿಮಿತ್ತ – ಇವುಗಳ ವ್ಯವಧಾನವುಳ್ಳ (ಸಾಧಕನ) ಆತ್ಮನಲ್ಲದ ಫಲವು (ಆಗಬೇಕಾಗಿರುವದೋ) ಆ ಅನಾತ್ಮ(ರೂಪವಾದ ಫಲದ) ವಿಷಯದಲ್ಲಿ ದೇವತೆಗಳೇ ಮೊದಲಾದವರು ಅಡ್ಡಿಮಾಡುವದಕ್ಕೆ (ಮಾಡುವ) ಪ್ರಯತ್ನವು ಸಾರ್ಥಕ(ವಾಗಿದ್ದೀತು). ಅವರಿವಿದ್ಯಾಸಮಕಾಲದಲ್ಲಾಗುವ (ಸಾಧಕನ) ಆತ್ಮವೇ ಆಗಿರುವ, ದೇಶಕಾಲನಿಮಿತ್ತಗಳ ಅಂತರವಿಲ್ಲದ (ಫಲ)ದ (ವಿಷಯ)ದಲ್ಲಿ ಹಾಗಾಗಲಾರದು. ಏಕೆಂದರೆ (ಇಲ್ಲಿ) ಅವಕಾಶವೇ ಇರುವದಿಲ್ಲ.**

# ಅವಿದ್ಯಾನಿವೃತ್ತಿಯ ವಿಷಯಕ್ಕೆ ಚರ್ಚೆ

## (೧) ವಿದ್ಯಾಪ್ರತ್ಯಯಸಂತಾನವೇನೂ ಬೇಕಿಲ್ಲ

(ಭಾಷ್ಯ)

೧೭೧. ಏವಂ ತರ್ಹಿ ವಿದ್ಯಾಪ್ರತ್ಯಯಸಂತತ್ಯಭಾವಾತ್ ವಿಪರೀತಪ್ರತ್ಯಯತತ್ಕಾರ್ಯಯೋಶ್ಚ ದರ್ಶನಾತ್ ಅನ್ತ್ಯ ಏವ ಆತ್ಮಪ್ರತ್ಯಯೋಽವಿದ್ಯಾನಿವರ್ತಕಃ। ನ ತು ಪೂರ್ವಃ ಇತಿ। ನ। ಪ್ರಥಮೇನ ಅನೈಕಾನ್ತಿಕತ್ವಾತ್। ಯದಿ ಹಿ ಪ್ರಥಮಃ ಆತ್ಮವಿಷಯಃ ಪ್ರತ್ಯಯಃ ಅವಿದ್ಯಾಂ ನ ನಿವರ್ತಯತಿ ತಥಾ ಅನ್ತ್ಯೋಽಪಿ। ತುಲ್ಯವಿಷಯತ್ವಾತ್। ಏವಂ ತರ್ಹಿ ಸಂತತೋಽವಿದ್ಯಾನಿವರ್ತಕಃ, ನ ವಿಚ್ಛಿನ್ನಃ ಇತಿ। ನ। ಜೀವನಾದೌ ಸತಿ ಸಂತತ್ಯನುಪಪತ್ತೇಃ। ನ ಹಿ ಜೀವನಾದಿಹೇತುಕೇ ಪ್ರತ್ಯಯೇ ಸತಿ ವಿದ್ಯಾಪ್ರತ್ಯಯಸಂತತಿರುಪಪದ್ಯತೇ। ವಿರೋಧಾತ್। ಅಥ ಜೀವನಾದಿಪ್ರತ್ಯಯತಿರಸ್ಕಾರೇಣೈವ ಆಮರಣಾನ್ತಾತ್ ವಿದ್ಯಾಸಂತತಿಃ ಇತಿ ಚೇತ್। ನ। ಪ್ರತ್ಯಯೇಯತ್ತಾಸಂತಾನಾನವಧಾರಣಾತ್ ಶಾಸ್ತ್ರಾರ್ಥಾನವಧಾರಣದೋಷಾತ್। ಇಯತಾಂ ಪ್ರತ್ಯಯಾನಾಂ ಸನ್ತತಿಃ ಅವಿದ್ಯಾಯಾ ನಿವರ್ತಿಕಾ ಇತ್ಯನವಧಾರಣಾತ್ ಶಾಸ್ತ್ರಾರ್ಥೋ ನಾವಧಾರ್ಯೇತ। ತಚ್ಚಾನಿಷ್ಟಮ್। ಸಂತತಿಮಾತ್ರತ್ವೇಽವಧಾರಿತ ಏವ ಇತಿ ಚೇತ್। ನ। ಆದ್ಯನ್ತಯೋರವಿಶೇಷಾತ್। ಪ್ರಥಮಾ ವಿದ್ಯಾಪ್ರತ್ಯಯಸಂತತಿಃ ಮರಣಕಾಲಾನ್ತಾ ವಾ ಇತಿ ವಿಶೇಷಾಭಾವಾತ್ ಆದ್ಯನ್ತಯೋಃ ಪ್ರತ್ಯಯಯೋಃ ಪೂರ್ವೋಕ್ತೌ ದೋಷೌ ಪ್ರಸಜ್ಯೇಯಾತಾಮ್॥

(ಭಾಷ್ಯಾರ್ಥ)

(ಶಂಕೆ):– ಹೀಗಾದರೆ (ಬ್ರಹ್ಮ)ಜ್ಞಾನಪ್ರತ್ಯಯಗಳ ಸಂತಾನವಿಲ್ಲದ್ದರಿಂದಲೂ ವಿಪರೀತಪ್ರತ್ಯಯವೂ ಅದರ ಕಾರ್ಯವೂ ಕಂಡುಬರುತ್ತಿರುವದರಿಂದಲೂ[1] ಕೊನೆಯಲ್ಲಿ ಆಗುವ ಆತ್ಮಪ್ರತ್ಯಯವೇ ಅವಿದ್ಯಾನಿವರ್ತಕ(ವಾಗುವದೇ ಹೊರತು) ಮೊದಲಿನ ಪ್ರತ್ಯಯವಲ್ಲ[2].

(ಪರಿಹಾರ):– ಹಾಗಲ್ಲ. ಏಕೆಂದರೆ ಮೊದಲನೆಯ ಪ್ರತ್ಯಯದಿಂದ (ಹೇತುವು) ಅನೈಕಾಂತಿಕವಾಗಿರುತ್ತದೆ[3]. (ಇದರ ವಿವರ): ಆತ್ಮವಿಷಯದ ಮೊದಲನೆಯ ಪ್ರತ್ಯಯವು ಅವಿದ್ಯೆಯನ್ನು ಕಳೆಯುವದಿಲ್ಲವಾದರೆ ಕೊನೆಯ

---

1. ಅವಿದ್ಯೆಯ ಕಾರ್ಯಗಳಾದ ರಾಗದ್ವೇಷಾದಿಗಳು ವಾಕ್ಯಜ್ಞಾನವಾದವನಿಗೂ ಇದ್ದೇ ಇರುವವು. ಆದ್ದರಿಂದ ವಾಕ್ಯಜ್ಞಾನವನ್ನು ಸಾಯುವವರೆಗೂ ಅಭ್ಯಾಸಮಾಡಬೇಕು; ಸಾಯುವಕಾಲದಲ್ಲಿ ಆಗುವ ಕೊನೆಯ ಪ್ರತ್ಯಯವೇ ಅವಿದ್ಯೆಯನ್ನು ಪೂರ್ಣವಾಗಿ ತೊಲಗಿಸಿ ವಿದೇಹಮುಕ್ತಿಯನ್ನು ಕೊಡುತ್ತದೆ ಎಂದು ಭಾವ. ಈ ಪೂರ್ವಪಕ್ಷದ ರೂಪಾಂತರವನ್ನು ಈಗಿನ ವೇದಾಂತಿಗಳು ಕೆಲವರು ಅವಲಂಬಿಸಿರುತ್ತಾರೆ.

2. ಮೊದಲನೆಯ ಪ್ರತ್ಯಯವನ್ನು ಆವೃತ್ತಿಮಾಡಿ ಸಾಕ್ಷಾತ್ಕಾರವನ್ನು ಪಡೆದುಕೊಂಡ ಮೇಲೆಯೇ ಅವಿದ್ಯೆಯು ತೊಲಗುವದೆಂದು ಭಾವ. 3. ನಿಯತವಲ್ಲದೆ ಹೋಗುತ್ತದೆ.

(ಪ್ರತ್ಯಯಕ್ಕೂ) ಅದೇ ವಿಷಯವಾಗಿರುವದರಿಂದ[1] (ಅದೂ) ಕಳೆಯಲಾರದೆನ್ನ ಬೇಕಾಗುತ್ತದೆ.

(ಪೂರ್ವಪಕ್ಷಿ):- ಹಾಗಾದರೆ ಸಂತತವಾದ ವಿದ್ಯೆಯೇ ಅವಿದ್ಯಾನಿವರ್ತಕವು; ಬಿಟ್ಟುಬಿಟ್ಟು ಉಂಟಾಗುವ (ಆತ್ಮವಿದ್ಯೆಯು ನಿವರ್ತಕ)ವಲ್ಲ (ಎನ್ನೋಣ)[2].

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ ಜೀವನಾದಿಗಳಿರುವಲ್ಲಿ(ಆತ್ಮಜ್ಞಾನ) ಪ್ರತ್ಯಯದ ಸಂತಾನವು (ಇರ)ಲಾರದು. (ಇದರ ವಿವರ): ಬದುಕಿರುವದೇ ಮುಂತಾದ ನಿಮಿತ್ತದ ಪ್ರತ್ಯಯವಿರುವಲ್ಲಿ[3] ವಿದ್ಯಾಪ್ರತ್ಯಯದ ಸಂತಾನವು (ಇರ)ಲೇ ಆರದು; ಏಕೆಂದರೆ (ಇವೆರಡಕ್ಕೂ) ವಿರೋಧವಿರುತ್ತದೆ. ಹಾಗಿಲ್ಲದೆ ಜೀವನಾದಿಪ್ರತ್ಯಯಗಳನ್ನು ಬಿಟ್ಟೇ ಸಾಯುವತನಕವೂ ವಿದ್ಯಾಸಂತಾನವಿರ ಬೇಕು- ಎನ್ನುವದಾದರೆ ಅದೂ ಸರಿಯಲ್ಲ; ಏಕೆಂದರೆ ಪ್ರತ್ಯಯಗಳಿಂತಿಷ್ಟೇ ಸಂತಾನವೆಂಬುದು ಗೊತ್ತಾಗದೆ ಇರುವದರಿಂದ ಶಾಸ್ತ್ರಾರ್ಥವನ್ನು ಗೊತ್ತು ಪಡಿಸದೆ ಇರುವದೆಂಬ ದೋಷ(ವುಂಟಾಗುತ್ತದೆ. ಇದರ ವಿವರ: ಈ ಪಕ್ಷದಲ್ಲಿ) ಇಂತಿಷ್ಟು ಪ್ರತ್ಯಯಗಳ ಸಂತತಿಯು ಅವಿದ್ಯೆಯನ್ನು ತೊಲಗಿಸುತ್ತದೆ ಎಂದು ಗೊತ್ತುಮಾಡದೆ ಇರುವದರಿಂದ ಶಾಸ್ತ್ರಾರ್ಥವನ್ನು ಗೊತ್ತುಮಾಡಿದಂತೆ ಆಗುವದಿಲ್ಲ. ಆದರೆ ಅದು (ಯಾರಿಗೂ) ಇಷ್ಟವಲ್ಲ.[4]

(ಶಂಕೆ):- (ವಿದ್ಯಾಪ್ರತ್ಯಯ)ಸಂತತಿಯು (ಬೇಕು) ಎಂದಿಷ್ಟನ್ನು ಗೊತ್ತುಪಡಿಸಿದಂತೆ ಆಯಿತಲ್ಲ!

(ಪರಿಹಾರ):- ಹಾಗಲ್ಲ. ಏಕೆಂದರೆ ಮೊದಲನೆಯದು, ಕೊನೆಯದು- (ಇವೆರಡಕ್ಕೂ) ಯಾವ ವಿಶೇಷವೂ ಇಲ್ಲದ್ದರಿಂದ ಮೊದಲನೆಯ ಕೊನೆಯ ಪ್ರತ್ಯಯಗಳಿಗೆ ಮೊದಲು (ನಾವು)ಹೇಳಿದ್ದ ದೋಷಗಳು ಪ್ರಸಕ್ತವಾಗುವವು[5].

---

1. ಆ ವಿದ್ಯೆಗೂ ಅವಿದ್ಯೆಯೇ ವಿಷಯ; ಅವಿದ್ಯೆಯನ್ನು ಮೊದಲನೆಯದು ಕಳೆಯುವದಿಲ್ಲವಾದರೆ ಎರಡನೆಯದು ತಾನೆ ಹೇಗೆ ಕಳೆದೀತು? ಎರಡನೆಯದು ಕಳೆಯ ಬಹುದಾದರೆ ಮೊದಲನೆಯದೇಕೆ ಕಳೆಯಬಾರದು? ಎಂದು ಆಕ್ಷೇಪ.

2. ಒಂದು ಪ್ರತ್ಯಯವು ಅವಿದ್ಯೆಯನ್ನು ಕಳೆಯಲಾರದು; ಪ್ರತ್ಯಯಗಳನ್ನು ಪ್ರವಾಹರೂಪವಾಗಿ ಅಭ್ಯಾಸಮಾಡುತ್ತಿದ್ದರೇ ಅವಿದ್ಯೆಯು ಹೋಗುವದು ಎಂದು ಭಾವ.

3. ಬದುಕಿರಬೇಕು, ಹಸಿವನ್ನಡಗಿಸಿಕೊಳ್ಳಬೇಕು- ಮುಂತಾದ ಪ್ರತ್ಯಯಗಳು ಆತ್ಮಪ್ರತ್ಯಯಕ್ಕೆ ಅಡ್ಡಿಬರುತ್ತವೆ. ಆದ್ದರಿಂದ ಪ್ರತ್ಯಯಸಂತತಿಯು ಸಿದ್ಧವಾಗು ವದಿಲ್ಲ ಎಂದು ಅಭಿಪ್ರಾಯ.

4. ಸಂತಾನದಿಂದ ಮೋಕ್ಷ ಎಂಬ ಶಾಸ್ತ್ರದ ಅರ್ಥವು ನಿಶ್ಚಯವಾಗಬೇಕಾದರೆ ಸಂತಾನಸ್ವರೂಪವು ನಿರ್ಧಾರವಾಗುವದು ಅವಶ್ಯ. ಅದು ನಿಶ್ಚಿತವಾಗದೆ ಇದ್ದರೆ ಮುಮುಕ್ಷು ಗಳು ಸಾಧನದಲ್ಲಿ ಪ್ರವೃತ್ತರಾಗಲಾರರು.

5. ಪ್ರತ್ಯಯವು ಅವಿದ್ಯಾನಿವರ್ತಕವೆಂಬುದು ಹೇಗೆ ಅನಿಯತವೆಂದಾಯಿತೋ ಹಾಗೆಯೇ ಪ್ರತ್ಯಯಸಂತಾನವು ನಿವರ್ತಕವೆಂಬುದೂ ಅನಿಯತವೆಂದೇ ಆಗುತ್ತದೆ.

## (೨) ಬ್ರಹ್ಮವಿದ್ಯೆಯು ಅವಿದ್ಯೆಯನ್ನು ನಿಜವಾಗಿ ತೊಲಗಿಸುವದು

(ಭಾಷ್ಯ)

೧೭೨. ಏವಂ ತರ್ಹಿ ಅನಿವರ್ತಕ ಏವ ಇತಿ ಚೇತ್। ನ। "ತಸ್ಮಾತ್ತತ್ಸರ್ವಮಭವತ್" ಇತಿ ಶ್ರುತೇಃ। "ಭಿದ್ಯತೇ ಹೃದಯಗ್ರನ್ಥಿಃ" (ಮುಂ. ೨-೨-೮), "ತತ್ರ ಕೋ ಮೋಹಃ" (ಈ. ೭)- ಇತ್ಯಾದಿಶ್ರುತಿಭ್ಯಶ್ಚ। ಅರ್ಥವಾದಃ ಇತಿ ಚೇತ್। ನ। ಸರ್ವಶಾಖೋಪನಿಷದಾಮ್ ಅರ್ಥವಾದತ್ವಪ್ರಸಙ್ಗಾತ್। ಏತಾವನ್ಮಾತ್ರಾರ್ಥತ್ವೋಪಕ್ಷೀಣಾ ಹಿ ಸರ್ವಶಾಖೋಪನಿಷದಃ। ಪ್ರತ್ಯಕ್ಷಪ್ರಮಿತಾತ್ಮವಿಷಯತ್ವಾತ್ ಅಸ್ತ್ವೇವ[1] ಇತಿ ಚೇತ್। ನ। ಉಕ್ತಪರಿಹಾರತ್ವಾತ್। ಅವಿದ್ಯಾಶೋಕಮೋಹಭಯಾದಿದೋಷನಿವೃತ್ತೇಃ ಪ್ರತ್ಯಕ್ಷತ್ವಾದಿತಿ ಚೋಕ್ತಃ ಪರಿಹಾರಃ। ತಸ್ಮಾತ್ ಆದ್ಯಃ, ಅನ್ತ್ಯಃ, ಸಂತತಃ ಅಸಂತತಶ್ಚ ಇತ್ಯಚೋದ್ಯಮೇತತ್ । ಅವಿದ್ಯಾದಿದೋಷನಿವೃತ್ತಿಫಲಾವಸಾನತ್ವಾತ್ ವಿದ್ಯಾಯಾಃ। ಯ ಏವ ಅವಿದ್ಯಾದಿದೋಷನಿವೃತ್ತಿಫಲಕೃತ್ ಪ್ರತ್ಯಯಃ ಆದ್ಯಃ, ಅನ್ತ್ಯಃ, ಸಂತತಃ, ಅಸಂತತೋ ವಾ ಸ ಏವ ವಿದ್ಯಾ ಇತ್ಯಭ್ಯುಪಗಮಾತ್ ನ ಚೋದ್ಯಸ್ಯ ಅವತಾರಗನ್ಧೋಽಪ್ಯಸ್ತಿ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ):- ಹಾಗಾದರೆ (ಜ್ಞಾನವು ಅವಿದ್ಯೆಯನ್ನು) ತೊಲಗಿಸುವದೇ ಇಲ್ಲ.[2]

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ "ಆದರಿಂದ ಅದು ಸರ್ವವೂ ಆಯಿತು" (೧-೪-೧೦), "ಹೃದಯಗ್ರಂಥಿಯು ಬಿಚ್ಚಿಕೊಳ್ಳುತ್ತದೆ" (ಮುಂ. ೨-೨-೮) "ಅಲ್ಲಿ ಯಾವ ಮೋಹವು?" (ಈ. ೭)- ಮುಂತಾದ ಶ್ರುತಿಗಳ (ಪ್ರಮಾಣ)ದಿಂದ (ಇದು ಸಿದ್ಧವಾಗುತ್ತದೆ).[3]

(ಪೂರ್ವಪಕ್ಷಿ):- (ಈ ಶ್ರುತಿಗಳಲ್ಲಿರುವದು) ಅರ್ಥವಾದವು.[4]

---

1. 'ಅಸ್ತ್ಯೇವ' ಎಂಬ ಪಾಠಕ್ಕಿಂತ ಇದು ಮೇಲು.

2. ಕೊನೆಯ ಪ್ರತ್ಯಯವಾಗಲಿ, ಪ್ರತ್ಯಯಸಂತಾನವಾಗಲಿ ಅವಿದ್ಯಾನಿವರ್ತಕವಲ್ಲ ವೆಂದಾದರೆ ಮೊದಲನೆಯ ಪ್ರತ್ಯಯವುಂಟಾದ ಬಳಿಕವೂ ರಾಗಾದಿದೋಷಗಳು ಇರುವದು ಪ್ರತ್ಯಕ್ಷವಾಗಿರುವದರಿಂದ ಅದು ಅವಿದ್ಯಾನಿವರ್ತಕವಲ್ಲವೆಂದೇ ನಿಶ್ಚಿತವಾಗಿದೆಯಾಗಿ ಯಾವ ಆತ್ಮಜ್ಞಾನವೂ ಅವಿದ್ಯಾನಿವರ್ತಕವಲ್ಲವೆಂಬೇ ಆಯಿತು ಎಂದು ಪೂರ್ವಪಕ್ಷಿಯ ಅಭಿಪ್ರಾಯ. 3. ಶ್ರುತಿಪ್ರಮಾಣಸಿದ್ಧವಾದದ್ದನ್ನು ಅಲ್ಲವೆನ್ನಲಾಗುವದಿಲ್ಲ.

4. ಶ್ರುತಿಯಲ್ಲಿ ಹೇಳಿರುವದೆಲ್ಲ ಪರಮಾರ್ಥವಾಗಿರುವದಿಲ್ಲ; ವಿಧಿಯನ್ನು ಹೊಗಳುವ "ಅವನು ಆತ್ತನು" ಮುಂತಾದ ವಾಕ್ಯಗಳಂತೆ ಇದೂ ಅರ್ಥವಾದವೇ ಎನ್ನುವದಕ್ಕೆ ಅಡ್ಡಿಯಿಲ್ಲ ಎಂದು ಭಾವ.

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ ಎಲ್ಲಾ ಶಾಖೆಗಳ ಉಪನಿಷತ್ತುಗಳೂ ಅರ್ಥವಾದವೆಂದಾಗುತ್ತದೆ[1]. (ಇದರ ವಿವರ): ಎಲ್ಲಾ ಶಾಖೆಗಳ ಉಪನಿಷತ್ತುಗಳೂ ಇಷ್ಟೇ ಅರ್ಥವನ್ನು (ಹೇಳುವದರಿಂದ) ಕೊನೆಗಂಡಿರುತ್ತವೆಯಷ್ಟೆ?

(ಪೂರ್ವಪಕ್ಷಿ):- ಅವು ಪ್ರತ್ಯಕ್ಷಪ್ರಮಾಣಕ್ಕೆ ಗೋಚರನಾಗಿರುವ[2] (ಆತ್ಮನ) ವಿಷಯವಾಗಿ (ಹೇಳುತ್ತಿರು)ವದರಿಂದ (ಅವುಗಳೆಲ್ಲ ಅರ್ಥವಾದವೇ) ಎಂದಾಗಲಿ!

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ(ಇದಕ್ಕೆ) ಪರಿಹಾರವನ್ನು ಹೇಳಿದ್ದಾಗಿದೆ (ಇದರ ವಿವರ): ಅವಿದ್ಯೆ, ಶೋಕ, ಮೋಹ,ಭಯ- ಮುಂತಾದ (ಸಂಸಾರ) ದೋಷಗಳನ್ನು ತೊಲಗಿಸುವದು ಪ್ರತ್ಯಕ್ಷವಾಗಿದೆ ಎಂದು (ಆಗಲೆ) ಪರಿಹಾರವನ್ನು ಹೇಳಿದ್ದಾಗಿದೆ[3].

ಆದ್ದರಿಂದ ಮೊದಲನೆಯ (ಪ್ರತ್ಯಯವು), ಕೊನೆಯ (ಪ್ರತ್ಯಯವು), ಸಂತತ(ಪ್ರತ್ಯಯವು), ಅಥವಾ ಅಸಂತತ(ಪ್ರತ್ಯಯವು ಅವಿದ್ಯೆಯನ್ನು ತೊಲಗಿಸಬೇಕು) ಎಂಬಿದು ಸರಿಯಾದ ಆಕ್ಷೇಪವಲ್ಲ. ಏಕೆಂದರೆ ವಿದ್ಯೆಯು ಅವಿದ್ಯೆಯೇ ಮುಂತಾದ ದೋಷಗಳನ್ನು ಕಳೆಯುವದೆಂಬ ಫಲದಲ್ಲಿ ಕೊನೆಗಾಣತಕ್ಕದ್ದು. ಮೊದಲನೆಯದಾಗಲಿ, ಕೊನೆಯದಾಗಲಿ, ಸಂತತವಾಗಲಿ, **ಯಾವ ಪ್ರತ್ಯಯವು ಅವಿದ್ಯೆಯೇ ಮುಂತಾದ ದೋಷಗಳನ್ನು ತೊಲಗಿಸುವದೋ ಅದೇ ವಿದ್ಯೆ** ಎಂದು (ನಾವು) ಒಪ್ಪುವದರಿಂದ (ಇಲ್ಲಿ) ಆಕ್ಷೇಪವು ಬಂದಿಳಿಯುವ ವಾಸನೆಯೂ ಇಲ್ಲ.

## (೩) ಜ್ಞಾನಿಗೆ ಅವಿದ್ಯಾತತ್ಕಾರ್ಯಗಳು ಇರುವದಿಲ್ಲ

(ಭಾಷ್ಯ)

೧೭೩. ಯತ್ತೂಕ್ತಮ್ ವಿಪರೀತಪ್ರತ್ಯಯತತ್ಕಾರ್ಯಯೋಶ್ಚ ದರ್ಶನಾತ್ ಇತಿ। ನ। ತಚ್ಛೇಷಸ್ಥಿತಿಹೇತುತ್ವಾತ್। ಯೇನ ಕರ್ಮಣಾ ಶರೀರ

---

1. ಎಲ್ಲಾ ಉಪನಿಷತ್ತುಗಳೂ ಏಕವಾಕ್ಯತೆಯಿಂದ ಹೇಳುವದು ಅವಿವಕ್ಷಿತವಾಗಲಾರದು ಎಂದು ಭಾವ.

2. ಅಹಂಪ್ರತ್ಯಯಗಮ್ಯನಾಗಿರುವದರಿಂದ ಆತ್ಮನು ಮಾನಸಪ್ರತ್ಯಕ್ಷಕ್ಕೆ ಗೋಚರನಾಗಿರುತ್ತಾನೆ. ಶ್ರುತಿಗಳು ಈ ಸ್ವರೂಪವನ್ನೇ ಹೇಳಿದರೆ ಅನುವಾದವಾಗುವವು, ತದ್ವಿರುದ್ಧವಾಗಿ ಹೇಳಿದರೆ ಅಪ್ರಮಾಣವೇ ಆಗುವವು. ಆದ್ದರಿಂದ ಅವನ್ನು ಅರ್ಥವಾದವೆಂದು ಹೇಳಬಹುದು ಎಂದು ಅಭಿಪ್ರಾಯ.

3. ಫಲವುಳ್ಳ ವಿಜ್ಞಾನವನ್ನುಂಟುಮಾಡುವದರಿಂದ ಶ್ರುತಿಯು ಪ್ರಮಾಣವೇ ಎಂಬಿದನ್ನು ಭಾ. ಭಾ. ೧೪೧ರಲ್ಲಿ ಆಗಲೆ ಪ್ರತಿಪಾದಿಸಿದ್ದಾಗಿದೆ. ಆತ್ಮನು ಪ್ರತ್ಯಕ್ಷಕ್ಕೆ ಗೋಚರನೂ ಅಲ್ಲ, ಏಕೆಂದರೆ ಅವನು ಸಾಕ್ಷಿರೂಪದಿಂದ ಎಲ್ಲಾ ಪ್ರಮಾಣಗಳನ್ನೂ ಬೆಳಗುವ ವಿಷಯಿಯಾಗಿರುತ್ತಾನೆ- ಎಂದೂ ಸೇರಿಸಿಕೊಳ್ಳಬೇಕು.

ಮಾರಬ್ಧಂ ತದ್ ವಿಪರೀತಪ್ರತ್ಯಯದೋಷನಿಮಿತ್ತತ್ವಾತ್ ತಸ್ಯ ತಥಾಭೂತಸ್ಯೈವ ವಿಪರೀತಪ್ರತ್ಯಯದೋಷಸಂಯುಕ್ತಸ್ಯ ಫಲದಾನೇ ಸಾಮರ್ಥ್ಯಮಿತಿ ಯಾವತ್ ಶರೀರಪಾತಃ ತಾವತ್ ಫಲೋಪಭೋಗಾಙ್ಗತಯಾ ವಿಪರೀತಪ್ರತ್ಯಯಂ ರಾಗಾದಿದೋಷಂ ಚ ತಾವನ್ಮಾತ್ರಮ್ ಆಕ್ಷಿಪತ್ಯೇವ। ಮುಕ್ತೇಷುವತ್ ಪ್ರವೃತ್ತಫಲತ್ವಾತ್ ತದ್ಧೇತುಕಸ್ಯ ಕರ್ಮಣಃ। ತೇನ ನ ತಸ್ಯ ನಿವರ್ತಿಕಾ ವಿದ್ಯಾ ಅವಿರೋಧಾತ್। ಕಿಂ ತರ್ಹಿ ಸ್ವಾಶ್ರಯಾದೇವ ಸ್ವಾತ್ಮವಿರೋಧಿ ಅವಿದ್ಯಾಕಾರ್ಯಂ ಯದುತ್ಪಿತ್ಸು ತನ್ನಿರುಣದ್ಧಿ। ಅನಾಗತತ್ವಾತ್। ಅತೀತಂ ಹಿ ಇತರತ್। ಕಿಂ ಚ ನ ಚ ವಿಪರೀತಪ್ರತ್ಯಯೋ ವಿದ್ಯಾವತ ಉಪಪದ್ಯತೇ। ನಿರ್ವಿಷಯತ್ವಾತ್। ಅನವಧೃತವಿಷಯವಿಶೇಷಸ್ವರೂಪಂ ಹಿ ಸಾಮಾನ್ಯಮಾತ್ರಮ್ ಆಶ್ರಿತ್ಯ ವಿಪರೀತಪ್ರತ್ಯಯ ಉತ್ಪದ್ಯಮಾನ ಉತ್ಪದ್ಯತೇ। ಯಥಾ ಶುಕ್ತಿಕಾಯಾಂ ರಜತಮ್ ಇತಿ। ಸ ಚ ವಿಷಯವಿಶೇಷಾವಧಾರಣವತಃ ಅಶೇಷವಿಪರೀತಪ್ರತ್ಯಯಾಶ್ರಯಸ್ಯ ಉಪಮರ್ದಿತತ್ವಾತ್ ನ ಪೂರ್ವವತ್ ಸಂಭವತಿ। ಶುಕ್ತಿಕಾದೌ ಸಮ್ಯಕ್ಪ್ರತ್ಯಯೋತ್ಪತ್ತೌ ಪುನರದರ್ಶನಾತ್। ಕ್ವಚಿತ್ತು ವಿದ್ಯಾಯಾಃ ಪೂರ್ವೋತ್ಪನ್ನವಿಪರೀತಪ್ರತ್ಯಯಜನಿತಸಂಸ್ಕಾರೇಭ್ಯೋ ವಿಪರೀತಪ್ರತ್ಯಯಾವಭಾಸಾಃ ಸ್ಮೃತಯೋ ಜಾಯಮಾನಾಃ ವಿಪರೀತಪ್ರತ್ಯಯಭ್ರಾನ್ತಿಮ್ ಅಕಸ್ಮಾತ್ ಕುರ್ವನ್ತಿ। ಯಥಾ ವಿಜ್ಞಾತದಿಗ್ವಿಭಾಗಸ್ಯಾಪಿ ಅಕಸ್ಮಾತ್ ದಿಗ್ವಿಪರ್ಯಯವಿಭ್ರಮಃ। ಸಮ್ಯಗ್ಜ್ಞಾನವತೋಽಪಿ ಚೇತ್ ಪೂರ್ವವತ್ ವಿಪರೀತಪ್ರತ್ಯಯ ಉತ್ಪದ್ಯತೇ ಸಮ್ಯಗ್ಜ್ಞಾನೇಽಪ್ಯವಿಸ್ರಮ್ಭಾತ್ ಶಾಸ್ತ್ರಾರ್ಥವಿಜ್ಞಾನಾದೌ ಪ್ರವೃತ್ತಿರಸಮಞ್ಜಸಾ ಸ್ಯಾತ್। ಸರ್ವಂ ಚ ಪ್ರಮಾಣಮ್ ಅಪ್ರಮಾಣಂ ಸಂಪದ್ಯೇತ। ಪ್ರಮಾಣಾಪ್ರಮಾಣಯೋರ್ವಿಶೇಷಾನುಪಪತ್ತೇಃ। ಏತೇನ ಸಮ್ಯಗ್ಜ್ಞಾನಾನನ್ತರಮೇವ ಶರೀರಪಾತಾಭಾವಃ ಕಸ್ಮಾತ್ ಇತ್ಯೇತದ್ ಪರಿಹೃತಮ್॥

(ಭಾಷ್ಯಾರ್ಥ)

ಇನ್ನು ವಿಪರೀತಪ್ರತ್ಯಯವೂ ಅದರ ಕಾರ್ಯವೂ (ಜ್ಞಾನಿಯಲ್ಲಿ) ಕಂಡು ಬರುವದರಿಂದ (ಮೊದಲಿನ ಪ್ರತ್ಯಯವು ಅವಿದ್ಯಾನಿವರ್ತಕವಲ್ಲ) ಎಂದು (ಪೂರ್ವಪಕ್ಷ ಭಾ. ಭಾ. ೧೭೧ರಲ್ಲಿ) ಹೇಳಿತ್ತಷ್ಟೆ, (ಅದು ಸರಿ)ಯಲ್ಲ. ಏಕೆಂದರೆ (ಅದು) ಆ (ಕರ್ಮ)ಶೇಷವು ಇರುವದಕ್ಕೆ ಕಾರಣವಾಗಿರುತ್ತದೆ. (ಇದರ ವಿವರ): **ಯಾವ ಕರ್ಮದಿಂದ (ಈ) ಶರೀರವು ಉಂಟಾಗಿರುತ್ತದೆಯೋ ಅದು ವಿಪರೀತಪ್ರತ್ಯಯ ಮತ್ತು ದೋಷಗಳ ನಿಮಿತ್ತದಿಂದ ಆದದ್ದಾದ್ದರಿಂದ ಅದು ಹಾಗೆಯೇ ವಿಪರೀತಪ್ರತ್ಯಯ ಮತ್ತು ದೋಷದಿಂದ ಸಂಯುಕ್ತವಾಗಿಯೇ (ತನ್ನ) ಫಲವನ್ನು ಕೊಡುವದಕ್ಕೆ ಶಕ್ತವಾಗಿರು**

ವದರಿಂದ[1]- (ಈ) ಶರೀರವು ಬಿದ್ದುಹೋಗುವದಷ್ಟೆ, ಆವರೆಗೂ-ಫಲವನ್ನು ಅನುಭವಿಸುವದಕ್ಕೆ ಅಂಗವಾಗಿ ಅದು[2] ವಿಪರೀತಪ್ರತ್ಯಯವನ್ನೂ ರಾಗವೇ ಮುಂತಾದ ದೋಷವನ್ನೂ ಅಷ್ಟುಮಟ್ಟಿಗೆ[3] ಬಯಸಿಯೇತೀರುತ್ತದೆ. ಏಕೆಂದರೆ ಆ (ವಿಪರೀತಪ್ರತ್ಯಯಗಳ) ನಿಮಿತ್ತದಿಂದಾದ ಕರ್ಮವು ಬಿಟ್ಟಬಾಣದಂತೆ ಫಲವನ್ನು ಕೊಡುವದಕ್ಕೆ ತೊಡಗಿಬಿಟ್ಟಿರುತ್ತದೆ; ಆದ್ದರಿಂದ ಅದನ್ನು ವಿದ್ಯೆಯು ತೊಲಗಿಸಲಾರದು; ಏಕೆಂದರೆ (ಅವೆರಡಕ್ಕೂ) ವಿರೋಧವಿರುವದಿಲ್ಲ. ಮತ್ತೇನೆಂದರೆ ತನ್ನ ಆಶ್ರಯವಾದ (ಪ್ರಮಾತೃವಿನಲ್ಲಿ) ತನ್ನ ಸ್ವರೂಪಕ್ಕೆ ವಿರೋಧಿಯಾಗಿರುವ ಮುಂದೆ ಉಂಟಾಗಬಹುದಾದ ಅವಿದ್ಯಾಕಾರ್ಯವಿದೆಯಲ್ಲ, ಅದನ್ನು ತಡೆಗಟ್ಟುತ್ತದೆ. ಏಕೆಂದರೆ (ಅದು) ಇನ್ನೂ ಬಂದಿರುವದಿಲ್ಲ. ಇನ್ನೊಂದು (ಕರ್ಮವೋ) ಎಂದರೆ ಆಗಿಹೋಗಿಬಿಟ್ಟಿರುತ್ತದೆ[4].

ಮತ್ತು (ಸರಿಯಾಗಿ ನೋಡಿದರೆ) ವಿಪರೀತಪ್ರತ್ಯಯವು ಜ್ಞಾನಿಗೆ ಉಂಟಾಗುವದೂ ಇಲ್ಲ. ಏಕೆಂದರೆ (ವಿಪರೀತಪ್ರತ್ಯಯಕ್ಕೆ ಅಲ್ಲಿ) ವಿಷಯವೇ ಇರುವದಿಲ್ಲ. (ಇದರ ವಿವರ): (ಇಂಥ) ವಿಷಯವೆಂದು ವಿಶೇಷವು ಗೊತ್ತಾಗದೆ ಇರುವಾಗ ಸಾಮಾನ್ಯಮಾತ್ರವನ್ನು ಆಶ್ರಯಿಸಿಯಲ್ಲವೆ, ಹುಟ್ಟಬಹುದಾದ ವಿಪರೀತಪ್ರತ್ಯಯವು ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿ ಎಂಬ (ಪ್ರತ್ಯಯವು ಹುಟ್ಟು) ವಂತೆ ಹುಟ್ಟುತ್ತದೆ[5] ? ಆದರೆ (ಆ ವಿಪರೀತಪ್ರತ್ಯಯವು) ಇಂಥ ವಿಷಯವೆಂದು ನಿಶ್ಚಯವಾಗಿರುವ (ಜ್ಞಾನಿಗೆ) ವಿಪರೀತಪ್ರತ್ಯಯಗಳಿಗೆಲ್ಲ ಆಶ್ರಯವಾದ

---

1. ಕರ್ಮವು ಫಲಪ್ರದವಾಗಬೇಕಾದರೆ ಪ್ರಮಾತೃವಿನಲ್ಲಿ ತಾನು ಕರ್ತೃಭೋಕ್ತೃ ಎಂಬ ವಿಪರೀತಪ್ರತ್ಯಯವೂ ಅದರಿಂದಾದ ರಾಗಾದಿದೋಷಗಳೂ ಇರಬೇಕು.

2. "ತತ್ ವಿಪರೀತಪ್ರತ್ಯಯದೋಷನಿಮಿತ್ತತ್ವಾತ್" ಎಂಬಲ್ಲಿರುವ ತತ್ ಎಂಬುದನ್ನು ಇಲ್ಲಿಗೆ ಅನ್ವಯಿಸಿಕೊಳ್ಳಬೇಕು. ಅದು ಎಂದರೆ ಆ ಕರ್ಮವು ಎಂದರ್ಥ.

3. ತನ್ನ ಫಲವನ್ನು ಕೊಡಬೇಕಾಗುವಷ್ಟುಮಟ್ಟಿಗೆ; ಜನ್ಮಾಂತರವನ್ನು ಕೊಡುವಷ್ಟಕ್ಕೂ ಅಲ್ಲ.

4 ಪ್ರಾರಬ್ಧಕರ್ಮವನ್ನು ವಿದ್ಯೆಯು ತೊಲಗಿಸುವದಿಲ್ಲ ಎಂದರೆ ಅದರ ಫಲವನ್ನು ಕೊಡುವಂತೆ ಮಾಡುವದಿಲ್ಲ ಎಂದರ್ಥ; ಮಿಥ್ಯಾಜ್ಞಾನವನ್ನು ಬಾಧಿಸುವದಿಲ್ಲ ಎಂದೇನೂ ಅರ್ಥವಲ್ಲ. ಸೂ. ಭಾ. ೪-೧-೫ನ್ನು ನೋಡಿ. ವಿಪರೀತಪ್ರತ್ಯಯವನ್ನೂ ರಾಗಾದಿದೋಷಗಳನ್ನೂ ಪ್ರಾರಬ್ಧಕರ್ಮವು ಬಯಸುತ್ತದೆ ಎಂದು ಇಲ್ಲಿ ಹೇಳಿರುವದು ಪ್ರತ್ಯಯಾಭಾಸ ಮತ್ತು ರಾಗಾದ್ಯಾಭಾಸ; ಇದು ಮುಂದಿನ ವಾಕ್ಯದಲ್ಲಿಯೇ ಸ್ಪಷ್ಟವಾಗುವದು.

5. ಇದು ಎಂಬ ಜ್ಞಾನವು ಸಾಮಾನ್ಯ, ಕಪ್ಪೆಯಚಿಪ್ಪು ಎಂಬಿದು ವಿಶೇಷ. ವಿಶೇಷಜ್ಞಾನವಿಲ್ಲದವನಿಗೇ ವಿಪರೀತಪ್ರತ್ಯಯವಾಗುತ್ತದೆ.

(ಕೇವಲ ಸಾಮಾನ್ಯಜ್ಞಾನವು) ನಾಶವಾಗಿಬಿಟ್ಟಿರುವದರಿಂದ[1] ಮೊದಲಿನಂತೆ[2] ಆಗುವದಿಲ್ಲ; ಏಕೆಂದರೆ ಕಪ್ಪೆಯುಚಿಪ್ಪು ಮುಂತಾದದ್ದರಲ್ಲಿ ಸರಿಯಾದ ಜ್ಞಾನವು ಉಂಟಾದಬಳಿಕ (ವಿಪರೀತಜ್ಞಾನವು) ಮತ್ತೆ ಕಾಣುವದಿಲ್ಲ. ಆದರೆ ಒಂದೊಂದು ಕಡೆಯಲ್ಲಿ ಜ್ಞಾನಕ್ಕಿಂತ ಮೊದಲು ಉಂಟಾದದ್ದು ವಿಪರೀತಪ್ರತ್ಯಯದಿಂದುಂಟಾದ ಸಂಸ್ಕಾರಗಳಿಂದ ವಿಪರೀತಪ್ರತ್ಯಯದಂತೆ ಕಾಣುವ ಸ್ಮೃತಿಗಳು ಹುಟ್ಟಿ (ಅದು) ವಿಪರೀತಪ್ರತ್ಯಯವೆಂಬ ಭ್ರಾಂತಿಯನ್ನು ಅಕಸ್ಮಾತ್ತಾಗಿ ಉಂಟುಮಾಡುವನು. ಹೇಗೆಂದರೆ ದಿಗ್ವಿಭಾಗಗಳನ್ನು ಅರಿತುಕೊಂಡಿರುವವನಿಗೂ ಅಕಸ್ಮಾತ್ತಾಗಿ ಬೇರೆ ದಿಕ್ಕೆಂಬ ಭ್ರಮೆಯುಂಟಾಗುತ್ತದೆ[3]. ಸರಿಯಾಗಿ ತಿಳಿದುಕೊಂಡಿರುವವನಿಗೂ ಮೊದಲಿನಂತೆ ವಿಪರೀತಪ್ರತ್ಯಯ(ವುಂಟಾಗುವ)ದಾದರೆ ಸರಿಯಾದ ತಿಳಿವಳಿಕೆಯಲ್ಲಿಯೂ ವಿಶ್ವಾಸವಿಲ್ಲದೆಹೋಗುವದರಿಂದ ಶಾಸ್ತ್ರಾರ್ಥವನ್ನು ಅರಿತುಕೊಳ್ಳುವದೇ ಮುಂತಾದದ್ದರಲ್ಲಿ[4] ತೊಡಗುವದು ಸಮಂಜಸವಲ್ಲವೆಂದಾದೀತು, ಪ್ರತಿಯೊಂದು ಪ್ರಮಾಣವೂ ಅಪ್ರಮಾಣವೇ ಆಗಿಬಿಟ್ಟೀತು![5] ಏಕೆಂದರೆ (ಆಗ) ಪ್ರಮಾಣಕ್ಕೂ ಅಪ್ರಮಾಣಕ್ಕೂ (ಯಾವ) ವಿಶೇಷವೂ ಯುಕ್ತವಾಗುವದಿಲ್ಲ[6].

---

1. ಇಂಥ ವಿಷಯವೆಂಬ ನಿಶ್ಚಯಜ್ಞಾನವೇ ಉಂಟಾಗಿಬಿಟ್ಟಿರುವದರಿಂದ ವಿಶೇಷನಿಶ್ಚಯಜ್ಞಾನರಹಿತಸಾಮಾನ್ಯಜ್ಞಾನವೆಂಬ ಆಶ್ರಯವು ಸಂಪೂರ್ಣವಾಗಿ ಹೋಗಿಬಿಟ್ಟಿರುತ್ತದೆ. ನಿರ್ವಿಶೇಷವಾದ ಆತ್ಮಜ್ಞಾನವು ಆದಾಗ ಆತ್ಮಸ್ವರೂಪವು ಇನ್ನೂ ಗೊತ್ತಾಗಲಿಲ್ಲವೆಂಬುದಿರುವದಿಲ್ಲ.

2. ಮೊದಲು ಇದು ಸತ್ಯವೆಂಬ ಭ್ರಾಂತಿಯಾಗುತ್ತಿದ್ದಂತೆ ಆಗುವದಿಲ್ಲ. ಸೂ. ಭಾ. ೧-೧-೪ (ಭಾ. ಭಾ. ೫೭) ನೋಡಿ. ಮುಂದಿನ ವಾಕ್ಯದಲ್ಲಿ ಇದನ್ನು ವಿವರಿಸಿದೆ.

3. ವಿಪರೀತಪ್ರತ್ಯಯದಿಂದಾಗಿದ್ದ ಸಂಸ್ಕಾರಗಳಿಂದುಂಟಾದ ಸ್ಮೃತಿಗಳು ಹಿಂದಿನ ವಿಪರೀತಪ್ರತ್ಯಯದಂತೆ ತೋರದೆ ಸಮ್ಯಗ್ಜ್ಞಾನದಿಂದ ಬಾಧಿತವಾಗಿಯೇ ತೋರುವದರಿಂದ "ವಿಪರೀತಪ್ರತ್ಯಯದಂತೆ ತೋರುವ" ಎಂದು ವಿಶೇಷಣವನ್ನು ಕೊಟ್ಟಿದೆ. ಈಗಿನ ವೇದಾಂತಿಗಳು ಹೇಳುವಂತೆ ಅವಿದ್ಯಾಲೇಶವಾದಕ್ಕಾಗಲಿ ಅವಿದ್ಯಾಸಂಸ್ಕಾರಗಳನ್ನು ಕಳೆಯುವದಕ್ಕೆ ಸಾಕ್ಷಾತ್ಕಾರಾರ್ಥವಾಗಿ ಜ್ಞಾನಾಭ್ಯಾಸವು ಬೇಕೆಂಬ ವಾದಕ್ಕಾಗಲಿ ಇಲ್ಲಿ ಅವಕಾಶವೇ ಇಲ್ಲ. ಸೂ. ಭಾ. ೪-೧-೧೫, (ಭಾ. ಭಾ. ೫೩೨) ನೋಡಿ.

4. ಮುಂತಾದ ಎಂದರೆ ಅನುಷ್ಠಾನಮಾಡುವದು. ಶಾಸ್ತ್ರದ ಅರ್ಥವನ್ನು ಸರಿಯಾಗಿ ತಿಳಿದುಕೊಂಡಿರುವವನೂ ಭ್ರಾಂತನಾದರೆ ಅವನು ಕರ್ಮಾನುಷ್ಠಾನದಲ್ಲಿ ನಿಶ್ಚಯಬುದ್ಧಿಯಿಂದ ತೊಡಗಲಾರನು.

5. ವಿಪರೀತಪ್ರತ್ಯಯವು ಅಪ್ರಮಾಣ, ಅದಿಲ್ಲದ ಜ್ಞಾನವು ಪ್ರಮಾಣ- ಎಂಬ ವಿಭಾಗವೇ ಇಲ್ಲವಾಗಿಬಿಟ್ಟೀತು.

6. ಎಲ್ಲಾ ಪ್ರತ್ಯಯಗಳೂ ವಿಪರೀತಪ್ರತ್ಯಯಗಳೇ ಆಗಿರುವದರಿಂದ ಪ್ರಮಾಣದಲ್ಲಿ ವಿಶೇಷವೇನೂ ಇರುವದಿಲ್ಲ.

ಇದರಿಂದ ಸಮ್ಯಗ್ಜ್ಞಾನವುಂಟಾದಕೂಡಲೆ ಶರೀರವು ಏತಕ್ಕೆ ಬಿದ್ದು ಹೋಗುವದಿಲ್ಲ ಎಂಬ ಶಂಕೆಗೂ ಉತ್ತರವನ್ನು ಹೇಳಿದಂತೆ ಆಯಿತು[1].

## (೪) ಪ್ರಾರಬ್ಧೇತರಕರ್ಮಗಳೆಲ್ಲವೂ ಜ್ಞಾನದಿಂದ ನಾಶ

(ಭಾಷ್ಯ)

೧೭೪. ಜ್ಞಾನೋತ್ಪತ್ತೇಃ ಪ್ರಾಕ್ ಊರ್ಧ್ವಂ ಚ ತತ್ಕಾಲಜನ್ಮಾಂತರಸಂಚಿತಾನಾಂ ಚ ಕರ್ಮಣಾಮ್ ಅಪ್ರವೃತ್ತಫಲಾನಾಂ ವಿನಾಶಃ ಸಿದ್ಧೋ ಭವತಿ। ಫಲಪ್ರಾಪ್ತಿವಿಘ್ನನಿಷೇಧಶ್ರುತೇರೇವ। "ಕ್ಷೀಯಂತೇ ಚಾಸ್ಯ ಕರ್ಮಾಣಿ" (ಮುಂ.೨-೨-೮), "ತಸ್ಯ ತಾವದೇವ ಚಿರಮ್" (ಛಾಂ.೬-೧೪-೨), "ಸರ್ವೇ ಪಾಪ್ಮಾನಃ ಪ್ರದೂಯಂತೇ" (ಛಾಂ. ೫-೨೪-೩), "ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ" (೪-೪-೨೩), "ಏತಮು ಹೈವೈತೇ ನ ತರತಃ" (೪-೪-೨೨), "ನೈನಂ ಕೃತಾಕೃತೇ ತಪತಃ" (೪-೪-೨೨), "ಏತಂ ಹ ವಾವ ನ ತಪತಿ" (ತೈ. ೨-೯), "ನ ಬಿಭೇತಿ ಕುತಶ್ಚನ" (ತೈ. ೨-೯)- ಇತ್ಯಾದಿ ಶ್ರುತಿಭ್ಯಶ್ಚ। "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ" (ಗೀ.೪-೩೭) ಇತ್ಯಾದಿಸ್ಮೃತಿಭ್ಯಶ್ಚ ॥

(ಭಾಷ್ಯಾರ್ಥ)

ಜ್ಞಾನವುಂಟಾಗುವದಕ್ಕೆ ಮೊದಲು, ಆಮೇಲೆ, ಆ (ಜ್ಞಾನ)ಕಾಲದಲ್ಲಿ, ಮತ್ತು ಜನ್ಮಾಂತರದಲ್ಲಿ ಸಂಚಿತವಾಗಿರುವ, ಫಲವು (ಇನ್ನೂ) ಪ್ರಾರಂಭವಾಗದೆ ಇರುವ, (ಎಲ್ಲಾ) ಕರ್ಮಗಳೂ ವಿನಾಶವಾಗುವವೆಂಬಿದು ಫಲಪ್ರಾಪ್ತಿಗೆ (ದೇವತೆಗಳು) ಅಡ್ಡಿಮಾಡಲಾರರೆಂಬ ಶ್ರುತಿ(ಯ ಪ್ರಾಮಾಣ್ಯದಿಂದ)ಲೇ ಸಿದ್ಧವಾಗುತ್ತದೆ[2]. ಮತ್ತು "ಇವನ ಕರ್ಮಗಳು ನಾಶವಾಗುವವು" (ಮುಂ. ೨-೨-೮), "ಅವನಿಗೆ (ಶರೀರವನ್ನು ಬಿಡುವದಿಲ್ಲವಲ್ಲ) ಅಲ್ಲಿಯವರೆಗೇ ತಡ (ಆಮೇಲೆ ಮುಕ್ತನಾಗುವನು)" (ಛಾಂ. ೬-೧೪-೨), "ಎಲ್ಲಾ ಪಾಪಗಳೂ ಸುಟ್ಟುಹೋಗುವವು" (ಛಾಂ.೫-೨೪-೩), "ಅವನನ್ನು ಅರಿತುಕೊಂಡರೆ ಪಾಪ

1. ಇಲ್ಲಿಯೂ ವಿಪರೀತಪ್ರತ್ಯಯವಿಷಯದಲ್ಲಿ ಹೇಗೋ ಹಾಗೆ ಎರಡು ಉತ್ತರಗಳಿರುತ್ತವೆ. ಶರೀರವು ಪ್ರಾರಬ್ಧಕರ್ಮವಶದಿಂದ ಇದ್ದುಕೊಂಡೇ ಇರುತ್ತದೆ ಎಂಬುದು ವ್ಯಾವಹಾರಿಕದೃಷ್ಟಿಯ ಉತ್ತರ; ಶರೀರವೇ ಮಿಥ್ಯಾಪ್ರತ್ಯಯಕೃತವಾದದ್ದು ಎಂಬುದು ಪಾರಮಾರ್ಥಿಕದೃಷ್ಟಿಯ ಉತ್ತರ. ಸೂ. ಭಾ. ೪-೧-೫, ೧-೧-೪ (ಭಾ. ಭಾ. ೫೮) ಇವನ್ನು ನೋಡಿ.

2. ಕರ್ಮಗಳು ಉಳಿದಿದ್ದರೆ ಜ್ಞಾನಿಗೆ ದೇವತೆಗಳು ಅಡ್ಡಿಮಾಡಲಾರರು ಎಂದು ಹೇಳಿರುವದು ಹೊಂದುವದಿಲ್ಲ; ಏಕೆಂದರೆ ಆಗ ಕರ್ಮಗಳೇ ಅಡ್ಡಿಯಾಗಿರುವವು.

ಕರ್ಮದಿಂದ ಲಿಪ್ತನಾಗುವದಿಲ್ಲ" (೪-೪-೨೩), "ಇವೆರಡೂ ಅವನನ್ನು ದಾಟ ಹಿಡಿಯುವ)ದಿಲ್ಲ" (೪-೪-೨೨), "ಇವನನ್ನು (ಪುಣ್ಯವನ್ನು ಮಾಡಲಿಲ್ಲವಲ್ಲ, ಪಾಪವನ್ನು ಮಾಡಿದೆನಲ್ಲ !- ಎಂಬ ಯೋಚನೆಯು) ಸಂಕಟಗೊಳಿಸುವದಿಲ್ಲ" (ತೈ. ೨-೯), "(ಅವನು) ಏತಕ್ಕೂ ಹೆದರುವದಿಲ್ಲ" (ತೈ. ೨-೯)- ಮುಂತಾದ ಶ್ರುತಿಗಳಿಂದಲೂ "ಜ್ಞಾನಾಗ್ನಿಯು ಎಲ್ಲಾ ಕರ್ಮಗಳನ್ನೂ ಬೂದಿಗೈಯುತ್ತದೆ" (ಗೀ. ೪-೩೭) ಮುಂತಾದ ಸ್ಮೃತಿಗಳಿಂದಲೂ (ಹೀಗೆಂದು ಸಿದ್ಧವಾಗುತ್ತದೆ)[1].

## (೫) ಜ್ಞಾನಿಗೆ ಋಣತ್ರಯದ ಅಡ್ಡಿಯಿರುವದಿಲ್ಲ

(ಭಾಷ್ಯ)

೩೭೫. ಯತ್ತು ಋಣೈಃ ಪ್ರತಿಬಧ್ಯತೇ ಇತಿ। ತನ್ನ। ಅವಿದ್ಯಾವಿಷಯತ್ವಾತ್। ಅವಿದ್ಯಾವಾನ್ ಹಿ ಋಣೀ। ತಸ್ಯ ಕರ್ತೃತ್ವಾದ್ಯುಪಪತ್ತೇಃ। "ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್" (೪-೩-೩೧) ಇತಿ ಹಿ ವಕ್ಷ್ಯತಿ। ಅನನ್ಯತ್ ಸದ್ವಸ್ತು ಆತ್ಮಾಖ್ಯಂ ಯತ್ರ ಅವಿದ್ಯಾಯಾಂ ಸತ್ಯಾಮ್ ಅನ್ಯದಿವ ಸ್ಯಾತ್ ತಿಮಿರಕೃತದ್ವಿತೀಯಚನ್ದ್ರವತ್ ತತ್ರ ಅವಿದ್ಯಾಕೃತಾನೇಕಕಾರಕಾಪೇಕ್ಷಂ ದರ್ಶನಾದಿಕರ್ಮ ತತ್ಕೃತಂ ಫಲಂ ಚ ದರ್ಶಯತಿ "ತತ್ರಾನ್ಯೋಽನ್ಯತ್" ಇತ್ಯಾದಿನಾ। ಯತ್ರ ಪುನರ್ವಿದ್ಯಾಯಾಂ ಸತ್ಯಾಮ್ ಅವಿದ್ಯಾಕೃತಾನೇಕತ್ವಭ್ರಮಪ್ರಹಾಣಂ "ತತ್ಕೇನ ಕಂ ಪಶ್ಯೇತ್" (೪-೩-೩೧) ಇತಿ ಕರ್ಮಾಸಂಭವಮ್ ದರ್ಶಯತಿ। ತಸ್ಮಾತ್ ಅವಿದ್ಯಾವದ್ವಿಷಯ ಏವ ಋಣಿತ್ವಮ್ ಕರ್ಮಸಂಭವಾತ್, ನೇತರತ್ರ। ಏತಚ್ಚ ಉತ್ತರತ್ರ ವ್ಯಾಚಿಖ್ಯಾಸಿಷ್ಯಮಾಣೈರೇವ ವಾಕ್ಯೈಃ ವಿಸ್ತರೇಣ ಪ್ರದರ್ಶಯಿಷ್ಯಾಮಃ ॥

(ಭಾಷ್ಯಾರ್ಥ)

ಇನ್ನು ಋಣಗಳಿಂದ ಅವನಿಗೆ ಅಡ್ಡಿಯಾಗುತ್ತದೆ ಎಂದು (ಭಾ. ಭಾ. ೧೬೮ರಲ್ಲಿ ಶಂಕಾಗ್ರಂಥದಲ್ಲಿ ಹೇಳಿ)ತ್ತಷ್ಟೆ, ಅದೂ ಸರಿಯಲ್ಲ. ಏಕೆಂದರೆ (ಅದು) ಅವಿದ್ಯಾವಿಷಯವಾದದ್ದು. (ಇದರ ವಿವರ): ಅವಿದ್ಯಾವಂತನೇ ಅಲ್ಲವೆ, ಋಣಿಯು ? ಏಕೆಂದರೆ ಅವನಿಗೆ ಕರ್ತೃತ್ವಾದಿಗಳು ಇರಬಹುದಾಗಿವೆ. "ಎಲ್ಲಿ

1. ಈ ಎಲ್ಲಾ ವಚನಗಳಲ್ಲಿಯೂ ಸಂಚಿತ, ಆಗಾಮಿ, ಮತ್ತು ಜ್ಞಾನಸಮಕಾಲಕೃತ- ಎಂಬ ಕರ್ಮಗಳ ನಾಶವನ್ನು ಹೇಳಿರುತ್ತವೆ. ಕರ್ಮಗಳ ನಾಶವೆಂದರೆ ಫಲವನ್ನು ಕೊಡದಂತೆ ನಿರ್ಬೀಜವಾಗುವದು; ಏಕೆಂದರೆ ಕರ್ಮಗಳನ್ನು ಸಾಕ್ಷಾತ್ತಾಗಿಯೇ ಜ್ಞಾನವು ನಾಶಮಾಡುವದಿಲ್ಲ. ಜ್ಞಾನವು ನಾಶಕವಲ್ಲ. ಗೀ. ಭಾ-೪-೩೭ನ್ನು ನೋಡಿ. ಮಿಥ್ಯಾಜ್ಞಾನ ಪ್ರಾರಬ್ಧಕರ್ಮಗಳು ಜ್ಞಾನಬಾಧಿತವಾದರೂ ಸಂಸ್ಕಾರವಶದಿಂದ ಅನುವೃತ್ತವಾಗಿರಬಹುದೆಂಬುದೇ ಇಲ್ಲಿ ಪರಮಸಿದ್ಧಾಂತ.

ಯಾದರೆ ಮತ್ತೊಂದರಂತೆ ಇರುವದೋ ಅಲ್ಲಿ ಒಬ್ಬನು ಮತ್ತೊಂದನ್ನು ಕಂಡಾನು" (೪-೩-೩೧) ಎಂದಲ್ಲವೆ, (ಶ್ರುತಿಯು) ಮುಂದೆ ಹೇಳಿರುತ್ತದೆ? (ತನಗಿಂತ) ಬೇರೆಯಲ್ಲದ ಆತ್ಮನೆಂಬ ಸದ್ವಸ್ತುವು ಎಲ್ಲಿ ಅವಿದ್ಯೆಯಿರುವಲ್ಲಿ, ಕಣ್ಣುಪರೆಯಿಂದಾಗುವ ಎರಡನೆಯ ಚಂದ್ರನಂತೆ, ಮತ್ತೊಂದರಂತೆ ಇರುವದೋ, ಅಲ್ಲಿ ಅವಿದ್ಯೆಯಿಂದಾದ ಅನೇಕಕಾರಕಗಳನ್ನು ಬಯಸುವ ದರ್ಶನಾದಿ ಕರ್ಮವೂ ಅದರಿಂದಾಗುವ ಫಲವೂ (ಇರುವವೆಂದು) "ಅಲ್ಲಿ ಒಬ್ಬನು ಮತ್ತೊಂದನ್ನು ಕಂಡಾನು" ಮುಂತಾದ (ವಾಕ್ಯ)ದಿಂದ (ಆ ಶ್ರುತಿಯು) ತಿಳಿಸಿರುತ್ತದೆ. ಆದರೆ ಎಲ್ಲಿ, ವಿದ್ಯೆಯುಂಟಾಗಿರುವಲ್ಲಿ, ಅವಿದ್ಯೆಯಿಂದಾಗಿದ್ದ ಅನೇಕತ್ವಭ್ರಮೆಯು ನಾಶವಾಗಿರುವದೋ "ಅಲ್ಲಿ ಏತರಿಂದ ಯಾರನ್ನು ಕಂಡಾನು?" (೪-೫-೧೫) ಎಂದು ಕರ್ಮವು ಸಂಭವಿಸುವದಿಲ್ಲವೆಂಬುದನ್ನೇ ತಿಳಿಸಿರುತ್ತದೆ. ಆದ್ದರಿಂದ ಅವಿದ್ಯಾವಿಷಯದಲ್ಲಿ ಕರ್ಮವು ಸಂಭವಿಸುವದರಿಂದ (ಅಲ್ಲಿ)ಯೇ ಋಣಿತ್ವ(ವಿರುವದೇ ಹೊರತು) ಬೇರೆಕಡೆಯಲ್ಲಿರುವದಿಲ್ಲ. ಇದನ್ನು (ನಾವು) ಮುಂದೆ ವ್ಯಾಖ್ಯಾನಮಾಡಲಿರುವ ವಾಕ್ಯಗಳಿಂದಲೇ ವಿಸ್ತಾರವಾಗಿ ತೋರಿಸುತ್ತಾ ಹೋಗುವೆವು.

## ಅವಿದ್ಯಾಸೂತ್ರದ ವಿವರಣೆ

(ಭಾಷ್ಯ)

೧೭೬. ತದ್ಯಥಾ ಇಹೈವ ತಾವತ್ । ಅಥ ಯಃ ಕಶ್ಚಿತ್ ಅಬ್ರಹ್ಮವಿತ್ ಅನ್ಯಾಮ್ ಆತ್ಮನೋ ವ್ಯತಿರಿಕ್ತಾಂ ಯಾಂ ಕಾಂಚಿತ್ ದೇವತಾಮ್ ಉಪಾಸ್ತೇ ಸ್ತುತಿನಮಸ್ಕಾರಯಾಗಬಲ್ಯುಪಹಾರಪ್ರಣಿಧಾನಧ್ಯಾನಾದಿನಾ ಉಪಾಸ್ತೇ ತಸ್ಯಾ ಗುಣಭಾವಮುಪಗಮ್ಯ ಆಸ್ತೇ । ಅನ್ಯೋಽಸೌ ಅನಾತ್ಮಾ ಮತ್ತಃ ಪೃಥಕ್, ಅನ್ಯೋಽಹಮಸ್ಮಿ ಅಧಿಕೃತಃ । ಮಯಾ ಅಸ್ಮೈ ಋಣಿವತ್ ಪ್ರತಿಕರ್ತವ್ಯಮ್ ಇತ್ಯೇವಂಪ್ರತ್ಯಯಃ ಸನ್ ಉಪಾಸ್ತೇ ನ ಸ ಇತ್ಥಂಪ್ರತ್ಯಯಃ, ವೇದ ವಿಜಾನಾತಿ ತತ್ತ್ವಮ್ । ನ ಸ ಕೇವಲಮ್ ಏವಂಭೂತಃ ಅವಿದ್ವಾನ್ ಅವಿದ್ಯಾದೋಷವಾನೇವ, ಕಿಂ ತರ್ಹಿ ಯಥಾ ಪಶುಃ ಗವಾದಿಃ ವಾಹನದೋಹನಾದ್ಯುಪಕಾರೈಃ ಉಪಭುಜ್ಯತೇ ಏವಂ ಸ ಇಜ್ಯಾದ್ಯನೇಕೋಪಕಾರೈಃ ಉಪಭೋಕ್ತವ್ಯತ್ವಾತ್ ಏಕೈಕೇನ ದೇವಾದೀನಾಮ್ । ಅತಃ ಪಶುರಿವ ಸರ್ವಾರ್ಥೇಷು ಕರ್ಮಸು ಅಧಿಕೃತಃ ಇತ್ಯರ್ಥಃ ॥

(ಭಾಷ್ಯಾರ್ಥ)

ಅದು ಹೇಗೆಂದರೆ ಮೊದಲನೆಯದಾಗಿ ಇಲ್ಲಿಯೇ (ಹೇಳಿರುವದನ್ನು ನೋಡಿರಿ): ಇನ್ನು ಬ್ರಹ್ಮವನ್ನರಿಯದ ಯಾವನೇ ಆಗಲಿ (ಯಾವನು) ಅನ್ಯ

ವಾದ ತನಗಿಂತ ಬೇರೆಯಾದ ಯಾವದೋ ಒಂದು ದೇವತೆಯನ್ನು ಉಪಾಸನೆ ಮಾಡುತ್ತಾನೋ ಸ್ತುತಿ, ನಮಸ್ಕಾರ, ಯಾಗ, ಬಲ್ಯುಪಹಾರ, ಪ್ರಣಿಧಾನ, ಧ್ಯಾನ– ಮುಂತಾದದ್ದರಿಂದ ಉಪಾಸನೆಮಾಡುತ್ತಿರುವನೋ[1], ಆ (ದೇವತೆಗೆ) ಗುಣಭಾವವನ್ನು[2] ('ಉಪ') ಅಂಗೀಕರಿಸಿ (ಆಸ್ತೇ) ಇದ್ದುಕೊಂಡಿರುವನೋ ಈ (ದೇವತೆಯು) ಬೇರೆ, ಅನಾತ್ಮವು, ನನಗಿಂತ ಬೇರೆ; ನಾನು (ಅದಕ್ಕಿಂತ) ಬೇರೆಯಾಗಿರುವೆನು, ನಾನು ಅಧಿಕಾರಿಯು, ನಾನು ಈ (ದೇವತೆ)ಗೆ ಸಾಲಗಾರನಂತೆ ಪ್ರತಿಯಾಗಿ ಮಾಡತಕ್ಕದ್ದಿದೆ ಎಂಬಿಥ ಪ್ರತ್ಯಯವುಳ್ಳವನಾಗಿ ಉಪಾಸನೆ ಮಾಡುತ್ತಿರುವನೋ ಅವನು, ಇಂಥ ಪ್ರತ್ಯಯವುಳ್ಳವನು, ಅರಿಯನು, ತತ್ತ್ವವನ್ನು ಅರಿತುಕೊಂಡಿರುವದಿಲ್ಲ. ಹೀಗಿರುವ ಅಜ್ಞನು ಬರಿಯ ಅವಿದ್ಯಾದೋಷವಂತನೆಂಬುದಿಷ್ಟೆ, ಅಲ್ಲ; ಮತ್ತೇನೆಂದರೆ ಹೇಗೆ ಗೋವೇ ಮುಂತಾದ ಪಶುವು ಹತ್ತಿಕೊಳ್ಳುವದು, ಹಾಲುಕರೆದುಕೊಳ್ಳುವದು– ಮುಂತಾದ ಉಪಕಾರಗಳಿಂದ (ಮನುಷ್ಯರಿಗೆ) ಉಪಭೋಗ್ಯವಾಗಿರುವದೋ ಅವನೂ ಯಾಗವೇ ಮುಂತಾದ[3] ಅನೇಕ ಉಪಕಾರಗಳಿಂದ ದೇವಾದಿಗಳಿಗೆ[4] ಒಬ್ಬೊಬ್ಬರಿಗೂ ಉಪಭೋಗ್ಯನಾಗಿರುವದರಿಂದ ಹಾಗೆಯೇ (ಇರುತ್ತಾನೆ). ಆದ್ದರಿಂದ ಪಶುವಿನಂತೆ ಎಲ್ಲರಿಗೋಸ್ಕರವಾಗಿರುವ ಕರ್ಮಗಳಲ್ಲಿ[5] ಅಧಿಕೃತನಾಗಿರುತ್ತಾನೆ ಎಂದರ್ಥ.

## ವಿದ್ಯಾವಿದ್ಯೆಗಳ ವಿವೇಕವೇ ಉಪನಿಷತ್ತಿನ ಗುರಿ

(ಭಾಷ್ಯ)

೧೭೭. ಏತಸ್ಯ ಹಿ ಅವಿದುಷಃ ವರ್ಣಾಶ್ರಮಾದಿಪ್ರವಿಭಾಗವತಃ ಅಧಿಕೃತಸ್ಯ ಕರ್ಮಣಃ ವಿದ್ಯಾಸಹಿತಸ್ಯ ಕೇವಲಸ್ಯ ಚ ಶಾಸ್ತ್ರೋಕ್ತಸ್ಯ ಕಾರ್ಯಂ ಮನುಷ್ಯತ್ವಾದಿಕೋ ಬ್ರಹ್ಮಾನ್ತ ಉತ್ಕರ್ಷಃ। ಶಾಸ್ತ್ರೋಕ್ತವಿಪರೀತಸ್ಯ ಚ ಸ್ವಾಭಾವಿಕಸ್ಯ ಕಾರ್ಯಂ ಮನುಷ್ಯತ್ವಾದಿಕ ಏವ ಸ್ಥಾವರಾನ್ತೋಽಪಕರ್ಷಃ। ಯಥಾ ಚೈತತ್ ತಥಾ "ಅಥ ತ್ರಯೋ ವಾವ ಲೋಕಾಃ" (೧-೫-೧೬) ಇತ್ಯಾ

---

1. ಯಾಗವೆಂದರೆ ಗಂಧಪುಷ್ಪಾದಿಗಳಿಂದ ಪೂಜಿಸುವದು; ಬಲ್ಯುಪಹಾರವೆಂದರೆ ನೈವೇದ್ಯಸಮರ್ಪಣೆ; ಪ್ರಣಿಧಾನವೆಂದರೆ ಐಕಾಗ್ರ್ಯವು; ಧ್ಯಾನವೆಂದರೆ ಅಲ್ಲಿಯೇ ಸಜಾತೀಯಪ್ರತ್ಯಯಪ್ರವಾಹವನ್ನು ಮಾಡಿಕೊಂಡಿರುವದು. 'ಮುಂತಾದದ್ದರಿಂದ' ಎಂದರೆ ಪ್ರದಕ್ಷಿಣೆಯೇ ಮುಂತಾದದ್ದರಿಂದ ಉಪಾಸನೆಮಾಡುತ್ತಿರುವನೋ ಎಂದರೆ ಭಿನ್ನವಾಗಿ ಎಣಿಸಿ ಆರಾಧನೆಮಾಡುತ್ತಿರುವನೋ ಎಂದರ್ಥ. ಅ.ಗಿ.

2. ನಾನು ಉಪಾಸಕನಾಗಿದೇನೆ, ಈ ದೇವತೆಗೆ ಅಡಿಯಾಳು– ಎಂಬ ಭಾವವನ್ನು.

3. 'ಇಜ್ಯಾದಿ' ಎಂದರೆ ಮೇಲೆ ವರ್ಣಿಸಿರುವ ಬಲ್ಯುಪಹಾರಾದಿಗಳೇ.

4. ದೇವತೆಗಳು, ಋಷಿಗಳು, ಪಿತೃಗಳು, ಮನುಷ್ಯರು, ಪಶುಗಳು–ಮುಂತಾದವರಿಗೆ.

5. ದೇವತೆಗಳೇ ಮುಂತಾಗಿ ಎಲ್ಲರಿಗೋಸ್ಕರವಾಗಿರುವ ಎಂದರ್ಥ; ಮುಂದೆ ೧೬ನೆಯ ಕಂಡಿಕೆಯನ್ನು ನೋಡಿ.

ದಿನಾ ವಕ್ಷ್ಯಾಮಃ ಕೃತ್ಸ್ನೇನೈವ ಅಧ್ಯಾಯಶೇಷೇಣ। ವಿದ್ಯಾಯಾಶ್ಚ ಕಾರ್ಯಂ ಸರ್ವಾತ್ಮಭಾವಾಪತ್ತಿಃ ಇತ್ಯೇತತ್ ಸಂಕ್ಷೇಪತೋ ದರ್ಶಿತಮ್। ಸರ್ವಾ ಹಿ ಇಯಮುಪನಿಷತ್ ವಿದ್ಯಾವಿದ್ಯಾವಿಭಾಗಪ್ರದರ್ಶನೇನೈವ ಉಪಕ್ಷೀಣಾ। ಯಥಾ ಚೈಷೋಽರ್ಥಃ ಕೃತ್ಸ್ನಸ್ಯ ಶಾಸ್ತ್ರಸ್ಯ ತಥಾ ಪ್ರದರ್ಶಯಿಷ್ಯಾಮಃ ॥

(ಭಾಷ್ಯಾರ್ಥ)

ವರ್ಣಾಶ್ರಮಾದಿಪ್ರವಿಭಾಗವುಳ್ಳವನೂ ಅಧಿಕಾರಿಯೂ ಆಗಿರುವ ಈ ಅಜ್ಞನ ವಿದ್ಯಾಸಹಿತ(ಕರ್ಮಕ್ಕೂ) ಕೇವಲಶಾಸ್ತ್ರೋಕ್ತಕರ್ಮಕ್ಕೂ ಮನುಷ್ಯತ್ವಾದಿಯಾಗಿ ಬ್ರಹ್ಮಾಂತವಾಗಿರುವ ಹೆಚ್ಚುಗಾರಿಕೆಯು ಕಾರ್ಯವು. ಶಾಸ್ತ್ರೋಕ್ತ(ವಾಗಿರುವ ಕರ್ಮಕ್ಕೆ) ವಿಪರೀತವಾಗಿರುವ ಸ್ವಾಭಾವಿಕವಾದ (ಕರ್ಮಕ್ಕೆ) ಮನುಷ್ಯತ್ವಾದಿಯಾಗಿಯೇ ಸ್ಥಾವರಾಂತವಾಗಿರುವ ಕೀಳು(ಜನ್ಮವು) ಕಾರ್ಯವು[1]. ಇದು ಹೇಗೆಂಬುದನ್ನು "ಇನ್ನುಮುಂದೆ ಲೋಕಗಳು" (೧-೫-೧೬) ಎಂದು ಮುಂತಾಗಿರುವ ಈ ಅಧ್ಯಾಯದ ಶೇಷವೆಲ್ಲದರಿಂದ ತಿಳಿಸಿಕೊಡುವೆವು. ವಿದ್ಯೆಯ ಕಾರ್ಯವು ಸರ್ವಾತ್ಮಭಾವಾಪತ್ತಿಯೇ ಎಂದು ಸಂಕ್ಷೇಪವಾಗಿ ತಿಳಿಸಿದ್ದಾಗಿದೆ. ಈ ಇಡಿಯ ಉಪನಿಷತ್ತು ವಿದ್ಯಾವಿದ್ಯೆಗಳ ವಿಂಗಡವನ್ನು ತಿಳಿಸುವದರಲ್ಲಿಯೇ ಕೊನೆಗಂಡಿರುತ್ತದೆ. (ಈ) ಶಾಸ್ತ್ರಕ್ಕೆಲ್ಲ ಇದೇ ಅರ್ಥವೆಂಬುದು ಹೇಗೆಂಬುದನ್ನು ಮುಂದೆ ತೋರಿಸಿಕೊಡುವೆವು.

## ದೇವತೆಗಳು ಅಜ್ಞನಿಗೆ ವಿಘ್ನವನ್ನು ಮಾಡುತ್ತಾರೆ

(ಭಾಷ್ಯ)

೧೭೮. ಯಸ್ಮಾದೇವಂ ತಸ್ಮಾತ್ ಅವಿದ್ವಾವನ್ತಂ ಪುರುಷಂ ಪ್ರತಿ ದೇವಾ ಈಶತ ಏವ ವಿಘ್ನಂ ಕರ್ತುಮ್, ಅನುಗ್ರಹಂ ಚ ಇತ್ಯೇತದ್ ದರ್ಶಯತಿ। ಯಥಾ ಹ ವೈ ಲೋಕೇ ಬಹವೋ ಗೋಽಶ್ವಾದಯಃ ಪಶವಃ ಮನುಷ್ಯಂ ಸ್ವಾಮಿನಮ್ ಆತ್ಮನೋಽಧಿಷ್ಠಾತಾರಂ ಭುಞ್ಜ್ಯುಃ ಪಾಲಯೇಯುಃ, ಏವಂ ಬಹುಪಶುಸ್ಥಾನೀಯಃ ಏಕೈಕಃ ಅವಿದ್ವಾನ್ ಪುರುಷಃ ದೇವಾನ್[2] ಇತಿ ಪಿತ್ರಾದ್ಯುಪಲಕ್ಷಣಾರ್ಥಮ್ ಭುನಕ್ತಿ ಪಾಲಯತಿ ಇತಿ। ಇಮೇ ಇನ್ದ್ರಾದಯೋಽನ್ಯೇ ಮತ್ತಃ ಮಮೇಶಿತಾರಃ, ಭೃತ್ಯ ಇವ ಅಹಮೇಷಾಂ ಸ್ತುತಿನಮಸ್ಕಾರೇಜ್ಯಾದಿನಾ ಆರಾಧನಂ ಕೃತ್ವಾ ಅಭ್ಯುದಯಂ ನಿಃಶ್ರೇಯಸಂ ಚ

1. ಸೂ. ಭಾ. ೧-೧-೪ (ಭಾ. ಭಾ. ೪೨); ೧-೩-೩೦ (ಭಾ. ಭಾ. ೨೩೪.)

2. ದೇವಾನ್ ಎಂದು ಮತ್ತೊಂದು ಪದವು ಇಲ್ಲಿ ಇಲ್ಲದಿದ್ದರೂ ಸಾಗುತ್ತದೆ; ಆಚಾರ್ಯರ ಶೈಲಿಯಲ್ಲಿ ಹೀಗೆ ಮೂಲಕ್ಕೇ ತಮ್ಮ ಅಭಿಪ್ರಾಯದ ಶಬ್ದಗಳನ್ನು ಹೆಣೆಯುವ ರೂಢಿಯಿದೆ; ಆದ್ದರಿಂದ ನಾವು ಒಂದೇ ಶಬ್ದದ ಪಾಠವನ್ನೇ ಇಟ್ಟುಕೊಂಡಿರುತ್ತೇವೆ.

ತತ್ಪ್ರತ್ತಂ ಫಲಂ ಪ್ರಾಪ್ಸ್ಯಾಮಿ ಇತ್ಯೇವಮಭಿಸಂಧಿಃ । ತತ್ರ ಲೋಕೇ ಬಹುಪಶುಮತೋ ಯಥಾ ಏಕಸ್ಮಿನ್ನೇವ ಪಶೌ ಆದೀಯಮಾನೇ ವ್ಯಾಘ್ರಾದಿನಾ ಅಪಹ್ರಿಯಮಾಣೇ ಮಹತ್ ಅಪ್ರಿಯಂ ಭವತಿ, ತಥಾ ಬಹುಪಶುಸ್ಥಾನೀಯೇ ಏಕಸ್ಮಿನ್ ಪುರುಷೇ ಪಶುಭಾವಾತ್ ವ್ಯುತ್ತಿಷ್ಠತಿ ಅಪ್ರಿಯಂ ಭವತಿ ಇತಿ ಕಿಂ ಚಿತ್ರಂ ದೇವಾನಾಂ ಬಹುಪಶ್ವಪಹರಣೇ ಇವ ಕುಟುಂಬಿನಃ । ತಸ್ಮಾತ್ ಏಷಾಂ ದೇವಾನಾಂ ತನ್ನ ಪ್ರಿಯಮ್ ಕಿಂ ತತ್ ? ಯದೇತತ್ ಬ್ರಹ್ಮಾತ್ಮತತ್ತ್ವಂ ಕಥಂಚನ ಮನುಷ್ಯಾ ವಿದ್ಯುಃ ವಿಜಾನೀಯುಃ । ತಥಾ ಚ ಸ್ಮರಣಮ್ ಅನುಗೀತಾಸು ಭಗವತೋ ವ್ಯಾಸಸ್ಯ । "ಕ್ರಿಯಾವದ್ಭಿರ್ಹಿ ಕೌನ್ತೇಯ ದೇವಲೋಕಃ ಸಮಾವೃತಃ । ನ ಚೈತದಿಷ್ಟಂ ದೇವಾನಾಂ ಮರ್ತ್ಯೈರುಪರಿವರ್ತನಮ್ ।" (ಅಶ್ವ. ೧೯-೬೧)[1] ಇತಿ । ಅತೋ ದೇವಾಃ ಪಶೂನಿವ ವ್ಯಾಘ್ರಾದಿಭ್ಯೋ ಬ್ರಹ್ಮವಿಜ್ಞಾನಾತ್ ವಿಘ್ನಮ್ ಆಚಿಕೀರ್ಷನ್ತಿ 'ಅಸ್ಮದುಪಭೋಗ್ಯತ್ವಾತ್ ಮಾ ವ್ಯುತ್ತಿಷ್ಠೇಯುಃ' ಇತಿ । ಯಂ ತು ಮುಮೋಚಯಿಷನ್ತಿ ತಂ ಶ್ರದ್ಧಾದಿಭಿರ್ಯೋಕ್ಷ್ಯನ್ತಿ ವಿಪರೀತಮ್ ಅಶ್ರದ್ಧಾದಿಭಿಃ । ತಸ್ಮಾತ್ ಮುಮುಕ್ಷುರ್ದೇವಾರಾಧನಪರಃ ಶ್ರದ್ಧಾಭಕ್ತಿಪರಃ ಪ್ರಣೇಯೋಽಪ್ರಮಾದೀ ಸ್ಯಾತ್ ವಿದ್ಯಾಪ್ರಾಪ್ತಿಂ ಪ್ರತಿ ವಿದ್ಯಾಂ ಪ್ರತಿ ಇತಿ ವಾ ಕಾಕ್ವಾ ಏತದ್ದರ್ಶಿತಂ ಭವತಿ ದೇವಾಪ್ರಿಯವಾಕ್ಯೇನ ॥

(ಭಾಷ್ಯಾರ್ಥ)

ಹೀಗಿದೆಯಷ್ಟೆ, ಆದ್ದರಿಂದ ಅವಿದ್ಯಾವಂತನಾದ ಪುರುಷನಿಗೆ ದೇವತೆಗಳು ಅಡ್ಡಿಯನ್ನೂ ಅನುಗ್ರಹವನ್ನೂ ಮಾಡುವದಕ್ಕೆ ಸಮರ್ಥರೇ ಆಗಿರುತ್ತಾರೆ ಎಂಬಿದನ್ನು (ಶ್ರುತಿಯು) ತಿಳಿಸುತ್ತಿದೆ ; ಹೇಗೆ ಲೋಕದಲ್ಲಿ ಎತ್ತು, ಕುದುರೆ-ಮುಂತಾದ ಬಹುಪಶುಗಳು ತಮ್ಮ ಒಡೆಯನೂ ಆಳುವವನೂ ಆದ ಮನುಷ್ಯನನ್ನು ಭೋಗಪಡಿಸುವವೋ ಕಾಪಾಡುವವೋ, ಹಾಗೆ ಬಹುಪಶುಗಳಂತೆ ಇರುವ ಒಬ್ಬೊಬ್ಬ ಅಜ್ಞಮನುಷ್ಯನೂ ದೇವತೆಗಳನ್ನು- ಇದು ಪಿತ್ರಾದಿಗಳಿಗೂ ಉಪಲಕ್ಷಣವಾಗಿ (ಪ್ರಯುಕ್ತವಾಗಿದೆ)[2]- ಭೋಗಪಡಿಸುತ್ತಾನೆ, ಪಾಲನೆ ಮಾಡುತ್ತಾನೆ ಎಂದು (ಶ್ರುತಿ ಹೇಳುತ್ತಿದೆ.[3] ಈ ಇಂದ್ರಾದಿಗಳು ನನಗಿಂತ

---

1. 'ಮರ್ತ್ಯರೂಪನಿವರ್ತನಮ್' ಎಂದು ಬೊಂಬಾಯಿಮುದ್ರಿತಭಾರತದ ಪಾಠ.

2. ೧೬ನೆಯ ಕಂಡಿಕೆಯನ್ನು ನೋಡಿ.

3. ಇತಿ ಎಂಬ ಶಬ್ದವಿರುವ ಪಾಠಕ್ಕೆ ಹೀಗೆ ಅರ್ಥವನ್ನು ಮಾಡಬೇಕು; ಎಂದಿಂತು ದೇವತೆಗಳು ಅವಿದ್ಯಾವಂತನಿಗೆ ಅಡ್ಡಿಯನ್ನೂ ಅನುಗ್ರಹವನ್ನೂ ಮಾಡುವದಕ್ಕೆ ಸಮರ್ಥರೆಂದು ಶ್ರುತಿ ತಿಳಿಸುತ್ತಿದೆ ಎಂದು ಅನ್ವಯ. ಇತಿಶಬ್ದವು ಇಲ್ಲದಿದ್ದರೆ ಮುಂದಿನ ವಾಕ್ಯದಲ್ಲಿರುವ 'ಇತ್ಯೇವಮಭಿಸಂಧಿಃ' ಎಂಬುದಕ್ಕೆ ಹೀಗೆಂಬ ಅಭಿಪ್ರಾಯವುಳ್ಳವನಾಗಿ ಭೋಗಪಡಿಸುತ್ತಾನೆ ಎಂದು ಅನ್ವಯಿಸಬಹುದು.

ಬೇರೆ, ನನ್ನನ್ನು ಆಳುವವರು ; ಭೃತ್ಯನಂತೆ ನಾನು ಇವರಿಗೆ ಸ್ತುತಿ, ನಮಸ್ಕಾರ, ಇಜ್ಯಾ- ಮುಂತಾದವುಗಳಿಂದ ಆರಾಧನೆಮಾಡಿ ಅವರು ಕೊಟ್ಟ ಫಲವಾದ ಅಭ್ಯುದಯವನ್ನೂ ನಿಃಶ್ರೇಯಸವನ್ನೂ ಪಡೆದುಕೊಳ್ಳುವೆನು ಎಂಬುದು (ಆ ಅಜ್ಞೋಪಾಸಕನ) ಅಭಿಪ್ರಾಯವು.

ಇಲ್ಲಿ ಲೋಕದಲ್ಲಿ ಅನೇಕಪಶುಗಳುಳ್ಳವನಿಗೆ ಒಂದೇ ಪಶುವನ್ನು ತೆಗೆದು ಕೊಂಡುಹೋದರೂ ಹುಲಿಯೇ ಮುಂತಾದದ್ದು ಕದ್ದೊಯ್ದರೂ ಹೇಗೆ ಬಹಳ ಅಪ್ರಿಯವಾಗುವದೋ ಹಾಗೆ ಬಹುಪಶುಗಳಂತಿರುವ ಒಬ್ಬ ಮನುಷ್ಯನು ಪಶು ಭಾವವನ್ನು ಬಿಟ್ಟೇಳುವೆನೆಂದರೆ, ಕುಟುಂಬಿಯಾದವನಿಗೆ ಬಹುಪಶುಗಳು ಹೋದರೆ (ಆಗು)ವಂತೆ ದೇವತೆಗಳಿಗೆ ಅಪ್ರಿಯವಾಗುವದೆಂಬುದರಲ್ಲಿ ಆಶ್ಚರ್ಯ ವೇನು? ಆದ್ದರಿಂದ ಈ ದೇವತೆಗಳಿಗೆ ಅಪ್ರಿಯವಾಗುವದೆಂಬುದರಲ್ಲಿ ಆಶ್ಚರ್ಯ ವೇನು? ಆದ್ದರಿಂದ ಈ ದೇವತೆಗಳಿಗೆ ಅದು ಪ್ರಿಯವಲ್ಲ. ಅದು (ಎಂದರೆ) ಯಾವದು ? ಎಂದರೆ ಈ ಬ್ರಹ್ಮಾತ್ಮತ್ವವನ್ನು ಮನುಷ್ಯರು ಹೇಗಾದರೂ ತಿಳಿದುಕೊಂಡಾರು ಅರಿತುಕೊಂಡಾರು ಎಂಬಿದುಂಟಲ್ಲ, ಅದು. ಆದ್ದರಿಂದಲೇ **ಅನುಗೀತೆಗಳಲ್ಲಿ** ಭಗವಾನ್ ವ್ಯಾಸರು (ಹೀಗೆಂದು) ಸ್ಮರಿಸಿ (ಬರೆದಿರುತ್ತಾರೆ): "ಕೌಂತೇಯನೆ, ಕರ್ಮವಂತರು ದೇವಲೋಕದಲ್ಲಿ ತುಂಬಿಕೊಂಡಿರುತ್ತಾರೆ. ಮರ್ತ್ಯರು ಮೇಲೆ ಇರುವರೆಂಬುದಿದೆಯಲ್ಲ,[1] ಅದು ದೇವತೆಗಳಿಗೆ ಇಷ್ಟವಲ್ಲ" (ಅಶ್ವ. ೧೯-೬೧).

ಆದ್ದರಿಂದ ದೇವತೆಗಳು ಪಶುಗಳನ್ನು, (ಜನರು) ಪಶುಗಳನ್ನು ಹುಲಿ ಮುಂತಾದವುಗಳಿಂದ ಕಾಪಾಡಿಕೊಳ್ಳುವಂತೆ, "ನಮಗೆ ಉಪಭೋಗ್ಯರಾಗಿರು ವದನ್ನು (ಇವರು) ಬಿಟ್ಟೇಳಬಾರದು" ಎಂದು (ಮನುಷ್ಯರಿಗೆ) ಬ್ರಹ್ಮವಿದ್ಯೆಯು (ದಕ್ಕುವದಕ್ಕೆ) ಅಡ್ಡಿಯನ್ನು ಮಾಡಲಿಚ್ಛಿಸುತ್ತಾರೆ. ಆದರೆ (ಅದಕ್ಕೆ) ವಿಪರೀತ ವಾಗಿರುವ ಯಾವನನ್ನು ಬಿಡುಗಡೆಮಾಡಬೇಕೆಂದಿಚ್ಛಿಸುವರೋ ಅವನನ್ನು ಶ್ರದ್ಧಾದಿಯುಕ್ತನನ್ನಾಗಿ ಮಾಡುತ್ತಾರೆ.[2] **ಆದ್ದರಿಂದ ಮುಮುಕ್ಷುವಾದ ವನು ದೇವತೆಗಳ ಆರಾಧನೆಯಲ್ಲಿ ತತ್ಪರನಾಗಿ ಶ್ರದ್ಧಾಭಕ್ತಿಪರನಾಗಿ ಯೂ (ದೇವತೆಗಳಿಗೆ) ವಿಧೇಯನಾಗಿಯೂ (ಇದ್ದುಕೊಂಡು) ವಿದ್ಯಾ ಪ್ರಾಪ್ತಿಯ ವಿಷಯಕ್ಕೆ, ಎಚ್ಚರಿಕೆಯಿಂದಿರಬೇಕು -ಎಂಬುದನ್ನು ದೇವಾಪ್ರಿಯವಾಕ್ಯವು ಕಾಕುವಿನಿಂದ[3] ತಿಳಿಸಿದಂತೆ ಆಯಿತು.**

---

1. 'ಮರ್ತ್ಯರೂಪನಿವರ್ತನಮ್' -ಎಂಬ ಅಚ್ಚಿನ ಪಾಠಕ್ಕೆ 'ಮರ್ತ್ಯರೂಪವನ್ನು ತಪ್ಪಿಸಿಕೊಳ್ಳುವದೆಂಬುದಿದೆಯಲ್ಲ' ಎಂದು ಅನುವಾದ.

2. ಯಾರು ಋಣತ್ರಯವನ್ನು ತೀರಿಸಿಕೊಂಡು ಮುಮುಕ್ಷುಗಳಾಗಿರುವರೋ.

3. ಧ್ವನಿಯಿಂದ ; ಅರ್ಥಿಕವಾಗಿ ಎಂದರ್ಥ. ದೇವತೆಗಳಿಗೆ ಅಪ್ರಿಯವಾದ್ದರಿಂದ ಅಜ್ಞನನ್ನು ತತ್ತ್ವವಿಚಾರಕ್ಕೆ ಬಿಡುವದಿಲ್ಲ ; ಆದರೆ ಮುಮುಕ್ಷುವು ಅರ್ಚನಾದಿಗಳಿಂದ ಒಲಿಸಿಕೊಳ್ಳುತ್ತಾನೆ ಎಂದರ್ಥ.

# ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೭೯. ಸೂತ್ರಿತಃ ಶಾಸ್ತ್ರಾರ್ಥಃ "ಆತ್ಮೇತ್ಯೇವೋಪಾಸೀತ" (೧-೪-೭) ಇತಿ। ತಸ್ಯ ಚ ವ್ಯಾಚಿಖ್ಯಾಸಿತಸ್ಯ ಸಾರ್ಥವಾದೇನ "ತದಾಹುರ್ಯದ್ಬ್ರಹ್ಮ ವಿದ್ಯಯಾ" ಇತ್ಯಾದಿನಾ ಸಂಬನ್ಧಪ್ರಯೋಜನೇ ಅಭಿಹಿತೇ। ಅವಿದ್ಯಾಯಾಶ್ಚ ಸಂಸಾರಾಧಿಕಾರಕಾರಣತ್ವಮುಕ್ತಮ್ "ಅಥ ಯೋಽನ್ಯಾಂ ದೇವತಾಮುಪಾಸ್ತೇ" (೧-೪-೧೦) ಇತ್ಯಾದಿನಾ। ತತ್ರ ಅವಿದ್ವಾನ್ ಋಣೀ ಪಶುವದ್ ದೇವಾದಿಕರ್ಮಕರ್ತವ್ಯತಯಾ ಪರತನ್ತ್ರಃ ಇತ್ಯುಕ್ತಮ್। ಕಿಂ ಪುನರ್ದೇವಾದಿ ಕರ್ಮಕರ್ತವ್ಯತ್ವೇ ನಿಮಿತ್ತಮ್ ? ವರ್ಣಾ ಆಶ್ರಮಾಶ್ಚ। ತತ್ರ ಕೇ ವರ್ಣಾಃ ಇತ್ಯತಃ ಇದಮಾರಭ್ಯತೇ। ಯನ್ನಿಮಿತ್ತಸಂಬದ್ಧೇಷು ಕರ್ಮಸು ಅಯಂ ಪರತನ್ತ್ರ ಏವಾಧಿಕೃತಃ ಸಂಸಾರೀ ಇತಿ। ಏತಸ್ಯೈವ ಅರ್ಥಸ್ಯ ಪ್ರದರ್ಶನಾಯ ಅಗ್ನಿ ಸರ್ಗಾನನ್ತರಮ್ ಇನ್ದ್ರಾದಿಸರ್ಗೋ ನೋಕ್ತಃ। ಅಗ್ನೇಸ್ತು ಸರ್ಗಃ ಪ್ರಜಾ ಪತೇಃ ಸೃಷ್ಟಿಪರಿಪೂರಣಾಯ ಪ್ರದರ್ಶಿತಃ। ಅಯಂ ಚ ಇನ್ದ್ರಾದಿಸರ್ಗಃ ತತ್ರೈವ ದ್ರಷ್ಟವ್ಯಃ। ತಚ್ಛೇಷತ್ವಾತ್। ಇಹ ತು ಸ ಏವ ಅಭಿಧೀಯತೇ ಅವಿದುಷಃ ಕರ್ಮಾಧಿಕಾರಹೇತುಪ್ರದರ್ಶನಾಯ ॥

(ಭಾಷ್ಯಾರ್ಥ)

"ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೭) ಎಂದು ಶಾಸ್ತ್ರಾರ್ಥವನ್ನು ಸೂತ್ರಿಸಲಾಯಿತು. ಅದನ್ನು ವ್ಯಾಖ್ಯಾನಮಾಡಬೇಕಾಗಿರುವದರಿಂದ "ಇದನ್ನು ಹೇಳುತ್ತಾನೆ: ಬ್ರಹ್ಮವಿದ್ಯೆಯಿಂದ....." (೧-೪-೯) ಮುಂತಾದ ಅರ್ಥವಾದಸಹಿತವಾದ (ಗ್ರಂಥದಿಂದ) ಸಂಬಂಧಪ್ರಯೋಜನಗಳನ್ನು ಹೇಳಿದ್ದಾಯಿತು.[1] ಅವಿದ್ಯೆಯು ಸಂಸಾರವುಂಟಾಗುವದಕ್ಕೆ ಕಾರಣವೆಂದು "ಇನ್ನು ಯಾವನು ಅನ್ಯವಾದ ದೇವತೆಯನ್ನು ಉಪಾಸನೆಮಾಡುತ್ತಾನೋ"(೧-೪-೧೦) ಎಂದು ಮುಂತಾಗಿ ಹೇಳಿದ್ದಾಯಿತು.[2] ಅದರಲ್ಲಿ ಅಜ್ಞನು ಋಣಿಯಾಗಿ ಪಶುವಿನಂತೆ ದೇವತೆಗಳೇ ಮುಂತಾದವರ ಕರ್ಮವನ್ನು ಮಾಡಬೇಕಾಗಿರುವದ

---

1. "ಇದು ಮೊದಲು ಬ್ರಹ್ಮವೇ ಆಗಿತ್ತು" ಎಂಬ ಹಿಂದಿನ ಕಂಡಿಕೆಯೇ ಅರ್ಥವಾದವು. ಅದರಲ್ಲಿ ಆತ್ಮನನ್ನು ಅರಿತುಕೊಂಡರೆ ಸರ್ವಭಾವಾಪತ್ತಿ ಎಂಬ ಪ್ರಯೋಜನವಾಗುವದು ಎಂದು ಪ್ರಯೋಜನಕ್ಕೂ ಆತ್ಮವಿದ್ಯೆಗೂ ಇರುವ ಸಾಧ್ಯಸಾಧನಸಂಬಂಧವನ್ನು ಹೇಳಿರುವದರಿಂದ ವಿದ್ಯಾಸೂತ್ರಕ್ಕೆ ಸಂಬಂಧಪ್ರಯೋಜನಗಳನ್ನು ಹೇಳಿದಂತೆ ಆಯಿತು.

2. ಆತ್ಮನನ್ನು ಅರಿಯದಿದ್ದರೆ ಅಬ್ರಹ್ಮತ್ವವೂ ಅಸರ್ವತ್ವವೂ ಇದ್ದುಕೊಂಡೇ ಇರುವವೆಂದು ವ್ಯತಿರೇಕದಿಂದ ತಿಳಿಸಿರುವದೂ ಅವಿದ್ಯೆಯನ್ನು ತೊಲಗಿಸುವ ಆತ್ಮವಿದ್ಯೆಯನ್ನು ಸಂಪಾದಿಸಲೆಂದೇ. ಆತ್ಮವಿದ್ಯೆಯೇ ಮುಖ್ಯವಾದ ಶಾಸ್ತ್ರಾರ್ಥವು.

ರಿಂದ ಪರಾಧೀನನಾಗಿರುವನೆಂದು ಹೇಳಿದೆಯಷ್ಟೆ. ದೇವತೆಗಳೇ ಮುಂತಾದವರ ಕರ್ಮವನ್ನು ಮಾಡಬೇಕಾಗಿರುವದಕ್ಕೆ ನಿಮಿತ್ತವೇನು? ಎಂದರೆ ವರ್ಣಗಳೂ ಆಶ್ರಮಗಳೂ. ಇಲ್ಲಿ ವರ್ಣಗಳೆಂದರೆ ಯಾವವು? ಎಂಬುದನ್ನು (ತಿಳಿಸುವದ) ಕ್ಕಾಗಿ ಈ (ಕಂಡಿಕೆಯನ್ನು) ಪ್ರಾರಂಭಿಸಿದೆ. ಆ (ವರ್ಣಗಳೆಂಬ) ನಿಮಿತ್ತಕ್ಕೆ ಸಂಬದ್ಧವಾಗಿರುವ ಕರ್ಮಗಳಲ್ಲಿ ಈ (ಜೀವನು) ಪರಾಧೀನನಾಗಿಯೇ ಅಧಿಕೃತ ನಾಗಿ ಸಂಸಾರಿ(ಯಾಗಿರುತ್ತಾನಾಗಿ[1] ಹೀಗೆ ಪ್ರಾರಂಭಿಸಿದೆ). ಇದೇ ವಿಷಯ ವನ್ನು ತಿಳಿಸುವದಕ್ಕಾಗಿ (೧-೨-೨ರಲ್ಲಿ) ಅಗ್ನಿಸೃಷ್ಟಿಯನ್ನು ಹೇಳಿದ ಬಳಿಕ ಇಂದ್ರಾದಿಗಳ ಸೃಷ್ಟಿಯನ್ನು ಹೇಳಲಿಲ್ಲ; ಅಗ್ನಿಯ ಸೃಷ್ಟಿಯನ್ನು ಮಾತ್ರ ಪ್ರಜಾಪತಿಯ ಸೃಷ್ಟಿಯು ಪರಿಪೂರ್ಣವಾಗಲೆಂದು (ಅಲ್ಲಿ) ತಿಳಿಸಿತ್ತು. ಈ ಇಂದ್ರಾದಿಸೃಷ್ಟಿಯನ್ನೂ ಅಲ್ಲಿಗೇ ಸೇರಿಸಿಕೊಳ್ಳಬೇಕು; ಏಕೆಂದರೆ (ಇದು) ಅದಕ್ಕೆ ಶೇಷವಾಗಿರುತ್ತದೆ[2]. ಇಲ್ಲಿಯಾದರೆ ಅಜ್ಞಾನಿಗೆ ಕರ್ಮಾಧಿಕಾರ ಕಾರಣವನ್ನು ತಿಳಿಸುವದಕ್ಕಾಗಿ (ಮಾತ್ರ) ಅದನ್ನೇ ಹೇಳಿದೆ.

## ಕ್ಷತ್ರಿಯ ಸೃಷ್ಟಿ

(ಉಪನಿಷತ್ತು)

**ಬ್ರಹ್ಮ ವಾ ಇದಮಗ್ರ ಆಸೀದೇಕಮೇವ ತದೇಕಗ್ಂ ಸನ್ನ ವ್ಯಭವತ್ । ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇ ತಾನಿ ದೇವತ್ರಾ ಕ್ಷತ್ರಾಣೀನ್ದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ ಕ್ಷತ್ರಾತ್ ಪರಂ ನಾಸ್ತಿ ತಸ್ಮಾದ್ ಬ್ರಾಹ್ಮಣಃ ಕ್ಷತ್ರಿಯಮಧ ಸ್ತಾದುಪಾಸ್ತೇ ರಾಜಸೂಯೇ ಕ್ಷತ್ರ ಏವ ತದ್ಯಶೋ ದಧಾತಿ ಸೈಷಾ ಕ್ಷತ್ರಸ್ಯ ಯೋನಿರ್ಯದ್ಬ್ರಹ್ಮ । ತಸ್ಮಾದ್ಯದ್ಯಪಿ ರಾಜಾ ಪರಮತಾಂ ಗಚ್ಛತಿ ಬ್ರಹ್ಮೈವಾನ್ತತ ಉಪನಾಶ್ರಯತಿ ಸ್ವಾಂ ಯೋನಿಂ ಯ ಉ ಏನಗ್ಂ ಹಿನಸ್ತಿ ಸ್ವಾಗ್ಂ ಸ ಯೋನಿ ಮೃಚ್ಛತಿ ಸ ಪಾಪೀಯಾನ್ ಭವತಿ ಯಥಾ ಶ್ರೇಯಾಗ್ಂ ಸಗ್ಂ ಹಿಗ್ಂಸಿತ್ವಾ ॥ ೧೧ ॥**

---

1. ವರ್ಣಾಶ್ರಮಗಳ ಅಧ್ಯಾಸವಿಲ್ಲದೆ ಕರ್ಮವನ್ನು ಯಾರೂ ಮಾಡುವದಿಲ್ಲ ಎಂಬಿದನ್ನು ತಿಳಿಸುವದಕ್ಕಾಗಿ ಇಲ್ಲಿ ವರ್ಣಸೃಷ್ಟಿಯನ್ನು ಹೇಳಿದೆ. ಈ ಅಧ್ಯಾಸವನ್ನು ಆತ್ಮವಿದ್ಯೆಯಿಂದ ಕಳೆದುಕೊಳ್ಳಬೇಕು ಎಂದಂತೆ ಆಯಿತು.

2. ಇದೂ ಪ್ರಜಾಪತಿಯ ಸೃಷ್ಟಿಯ ಪ್ರಕರಣಕ್ಕೇ ಸೇರಿದ್ದು; ಇಲ್ಲಿ ಕರ್ಮಾಧಿ ಕಾರಕ್ಕೆ ಕಾರಣವನ್ನು ಹೇಳುವ ಪ್ರಸಂಗದಿಂದ ತಿಳಿಸಿರುತ್ತದೆ- ಎಂದರ್ಥ.

೧೧. ಇದು ಮೊದಲು ಬ್ರಹ್ಮವೊಂದೇ ಆಗಿತ್ತು. ಅದು ಒಂದೇ ಆಗಿದ್ದುಕೊಂಡು ವಿಭುವಾಗಿರಲಿಲ್ಲ. ಅದು ಕ್ಷತ್ರವೆಂಬ ಶ್ರೇಯೋ ರೂಪವನ್ನು ಸೃಜಿಸಿತು. ಇವುಗಳಿವೆಯಲ್ಲ, ದೇವತೆಗಳಲ್ಲಿ ಕ್ಷತ್ರಗಳು: ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶಾನ. ಆದ್ದರಿಂದ ಕ್ಷತ್ರಕ್ಕಿಂತ ಹೆಚ್ಚಿನದು ಇಲ್ಲ. ಆದ್ದರಿಂದ ಬ್ರಾಹ್ಮಣನು ಕ್ಷತ್ರಿಯನನ್ನು ಕೆಳಗಿದ್ದುಕೊಂಡು ರಾಜಸೂಯದಲ್ಲಿ ಉಪಾಸನೆಮಾಡುತ್ತಾನೆ; ಕ್ಷತ್ರದಲ್ಲಿಯೇ ಆ ಯಶಸ್ಸನ್ನು ಇಡುತ್ತಾನೆ. ಈ ಬ್ರಹ್ಮ ಎಂಬುದಿದೆಯಲ್ಲ, ಆ ಇದು ಕ್ಷತ್ರದ ಯೋನಿಯು. ಆದ್ದರಿಂದ ರಾಜನು ಪರಮತ್ವವನ್ನು ಹೊಂದುತ್ತಾನಾದರೂ ಕಡೆಗೆ ತನ್ನ ಯೋನಿಯಾದ ಬ್ರಹ್ಮವನ್ನೇ ಬಳಿಸಾರಿ ಆಶ್ರಯಿಸುತ್ತಾನೆ. ಯಾವನು ಇವನನ್ನು ಹಿಂಸಿಸುತ್ತಾನೋ, ಅವನು ತನ್ನ ಯೋನಿಯನ್ನೇ ತೊಂದರೆಗೊಳಿಸಿಕೊಳ್ಳುತ್ತಾನೆ. ದೊಡ್ಡವನನ್ನು ಹಿಂಸಿಸಿದರೆ ಹೇಗೋ ಹಾಗೆ ಅವನು ಇನ್ನೂ ಕೆಟ್ಟವನಾಗುತ್ತಾನೆ.

## ಬ್ರಾಹ್ಮಣಜಾತಿಯಿಂದ ಕ್ಷತ್ರಿಯಜಾತಿಯ ಸೃಷ್ಟಿ

(ಭಾಷ್ಯ)

೨೮೦. ಬ್ರಹ್ಮ ವಾ ಇದಮಗ್ರ ಆಸೀತ್। ಯದಗ್ನಿಂ ಸೃಷ್ಟ್ವಾ ಅಗ್ನಿರೂಪಾಪನ್ನಂ ಬ್ರಹ್ಮ (ತದ್)ಬ್ರಾಹ್ಮಣಜಾತ್ಯಭಿಮಾನಾತ್ 'ಬ್ರಹ್ಮ'ಇತ್ಯಭಿಧೀಯತೇ। ವೈ ಇದಂ ಕ್ಷತ್ರಾದಿಜಾತಂ ಬ್ರಹ್ಮೈವ ಅಭಿನ್ನಮ್ ಆಸೀತ್ ಏಕಮೇವ। ನಾಸೀತ್ ಕ್ಷತ್ರಾದಿಭೇದಃ। ತದ್ ಬ್ರಹ್ಮ ಏಕಂ ಕ್ಷತ್ರಾದಿಪರಿಪಾಲಯಿತ್ರಾದಿಶೂನ್ಯಂ ಸತ್ ನ ವ್ಯಭವತ್ ನ ವಿಭೂತವತ್। ಕರ್ಮಣೇ ನಾಲಮಾಸೀತ್ ಇತ್ಯರ್ಥಃ। ತತಃ ತದ್ಬ್ರಹ್ಮ ಬ್ರಾಹ್ಮಣೋಽಸ್ಮಿ ಮಮ ಇತ್ಥಂ ಕರ್ತವ್ಯಮ್ ಇತಿ ಬ್ರಾಹ್ಮಣಜಾತಿನಿಮಿತ್ತಂ ಕರ್ಮ ಚಿಕೀರ್ಷು ಆತ್ಮನಃ ಕರ್ಮಕರ್ತೃತ್ವವಿಭೂತ್ಯೈ ಶ್ರೇಯೋರೂಪಂ ಪ್ರಶಸ್ತರೂಪಮ್ ಅತ್ಯಸೃಜತ ಅತಿಶಯೇನ ಅಸೃಜತ ಸೃಷ್ಟವತ್। ಕಿಂ ಪುನಸ್ತತ್ ಯತ್ಸೃಷ್ಟಮ್? ಕ್ಷತ್ರಂ ಕ್ಷತ್ರಿಯಜಾತಿಃ। ತದ್ವ್ಯಕ್ತಿಭೇದೇನ ಪ್ರದರ್ಶಯತಿ। ಯಾನ್ಯೇತಾನಿ ಪ್ರಸಿದ್ಧಾನಿ ಲೋಕೇ ದೇವತ್ರಾ ದೇವೇಷು ಕ್ಷತ್ರಾಣಿ ಇತಿ। ಜಾತ್ಯಾಖ್ಯಾಯಾಂ ಪಕ್ಷೇ ಬಹುವಚನಸ್ಮರಣಾತ್ ವ್ಯಕ್ತಿಬಹುತ್ವಾದ್ವಾ ಭೇದೋಪಚಾರೇಣ ಬಹುವಚನಮ್। ಕಾನಿ ಪುನಸ್ತಾನಿ ಇತಿ? ಆಹ। ತತ್ರ ಅಭಿಷಿಕ್ತಾ ಏವ ವಿಶೇಷತೋ

ನಿರ್ದಿಶ್ಯನ್ತೇ। ಇನ್ದ್ರೋ ದೇವಾನಾಂ ರಾಜಾ। ವರುಣೋ ಯಾದಸಾಮ್। ಸೋಮೋ ಬ್ರಾಹ್ಮಣಾನಾಮ್। ರುದ್ರಃ ಪಶೂನಾಮ್। ಪರ್ಜನ್ಯೋ ವಿದ್ಯುದಾದೀನಾಮ್। ಯಮಃ ಪಿತೄಣಾಮ್। ಮೃತ್ಯುಃ ರೋಗಾದೀನಾಮ್। ಈಶಾನೋ ಭಾಸಾಮ್। ಇತೀಮಾದೀನಿ ದೇವೇಷು ಕ್ಷತ್ರಾಣಿ। ತದನು ಇನ್ದ್ರಾದಿಕ್ಷತ್ರದೇವತಾಧಿಷ್ಠಿತಾನಿ ಮನುಷ್ಯಕ್ಷತ್ರಾಣಿ ಸೋಮಸೂರ್ಯವಂಶ್ಯಾನಿ (ಪುರೂರವಃಪ್ರಭೃತೀನಿ)[1] ಸೃಷ್ಟಾನ್ಯೇವ ದ್ರಷ್ಟವ್ಯಾನಿ। ತದರ್ಥ ಏವ ಹಿ ದೇವಕ್ಷತ್ರಸರ್ಗಃ ಪ್ರಸ್ತುತಃ ॥

(ಭಾಷ್ಯಾರ್ಥ)

"ಇದು ಮೊದಲು ಬ್ರಹ್ಮವೊಂದೇ ಆಗಿತ್ತು....." (ಎಂಬಿದರ ಅರ್ಥವೇನೆಂದರೆ) ಯಾವ ಬ್ರಹ್ಮವು ಅಗ್ನಿಯನ್ನು ಸೃಜಿಸಿ ಅಗ್ನಿರೂಪವನ್ನು ಪಡೆದುಕೊಂಡಿತೋ (ಅದನ್ನು)[2] ಬ್ರಾಹ್ಮಣಜಾತಿಯ ಅಭಿಮಾನದಿಂದ[3] ಬ್ರಹ್ಮವೆಂದು ಕರೆದಿದೆ. ಇದು ಎಂದರೆ (ಈ) ಕ್ಷತ್ರಾದಿಸಮೂಹವು ಅಭಿನ್ನವಾದ ಬ್ರಹ್ಮವೊಂದೇ ಆಗಿತ್ತು; ಕ್ಷತ್ರವೇ ಮುಂತಾದ ಭೇದಗಳಿರಲಿಲ್ಲ. ಆ ಬ್ರಹ್ಮವು ಒಂದೇ (ಆಗಿ) ಕ್ಷತ್ರವೇ ಮುಂತಾದ ಕಾಪಾಡುವವರೇ ಮುಂತಾದವರು ಇಲ್ಲದ್ದರಿಂದ ವಿಭುವಾಗಿರಲಿಲ್ಲ, ವಿಭೂತಿಯುಳ್ಳದ್ದಾಗಿರಲಿಲ್ಲ; ಕರ್ಮಕ್ಕೆ ಸಮರ್ಥವಾಗಿರಲಿಲ್ಲ ಎಂದರ್ಥ.[4] ಆಮೇಲೆ ಆ ಬ್ರಹ್ಮವು 'ನಾನು ಬ್ರಾಹ್ಮಣನಾಗಿರುವೆನು, ನಾನು ಹೀಗೆ ಮಾಡಬೇಕು' ಎಂದು ಬ್ರಾಹ್ಮಣಜಾತಿನಿಮಿತ್ತವಾದ ಕರ್ಮವನ್ನು ಮಾಡಲಿಚ್ಛಿಸಿ ತನಗೆ ಕರ್ಮವನ್ನು ಮಾಡುವ ವಿಭೂತಿ (ಯುಂಟಾಗು)ವದಕ್ಕಾಗಿ ಶ್ರೇಯೋರೂಪವನ್ನು ಒಳ್ಳೆಯ(ದೊಂದು) ರೂಪವನ್ನು ಅತಿಸೃಜಿಸಿತು, ಅತಿಶಯವಾಗಿ ಸೃಜಿಸಿತು, ಸೃಷ್ಟಿಮಾಡಿಕೊಂಡಿತು. (ಹೀಗೆ) ಸೃಷ್ಟವಾಯಿತಲ್ಲ, ಅದು ಯಾವದು ? ಎಂದರೆ ಕ್ಷತ್ರವು, ಕ್ಷತ್ರಿಯಜಾತಿಯು. ಅದನ್ನು (ಶ್ರುತಿಯು) ಬೇರೆಬೇರೆಯ ವ್ಯಕ್ತಿಗಳಾಗಿ ತಿಳಿಸುತ್ತದೆ. ಲೋಕದಲ್ಲಿ ಇವುಗಳಿವೆಯಲ್ಲ, (ಈ) ಪ್ರಸಿದ್ಧವಾಗಿವೆಯಲ್ಲ (ದೇವತ್ರಾ= ದೇವೇಷು) ದೇವತೆಗಳಲ್ಲಿ ಕ್ಷತ್ರಗಳು, (ಇವನ್ನು ಸೃಷ್ಟಿಸಿಕೊಂಡಿತು. ಇಲ್ಲಿ ಕ್ಷತ್ರಾಣಿ ಎಂಬಲ್ಲಿ) ಜಾತಿಯನ್ನು ತಿಳಿಸುವದಕ್ಕೆ (ಒಂದು) ಪಕ್ಷದಲ್ಲಿ ಬಹುವಚನವೂ ಬರಬಹುದು ಎಂದು (ಪಾ. ೧-೨-೫೮) ಸ್ಮೃತಿಯಿರುವದರಿಂದ,

---

1. ಇದು ಮಾ॥ ಪಾಠದಲ್ಲಿ ಹೆಚ್ಚಾಗಿದೆ.
2. ವಿರಾಟ್ಪುರುಷನ ರೂಪವನ್ನು ತಾಳಿದವನಲ್ಲ, ಆ ಹಿರಣ್ಯಗರ್ಭನನ್ನು.
3. ಬ್ರಾಹ್ಮಣಜಾತಿಯ ಅಭಿಮಾನಿದೇವತೆ ಎಂಬ ಕಾರಣದಿಂದ ಎಂದರ್ಥ.
4. ಬ್ರಾಹ್ಮಣ್ಯವು ಸರಿಯಾಗಿ ನಡೆಯುವದಕ್ಕೆ ಕಾಪಾಡುವ ಕ್ಷತ್ರಿಯನು ಬೇಕು ಎಂದು ಅಭಿಪ್ರಾಯ.

ಅಥವಾ ವ್ಯಕ್ತಿಗಳು ಬಹಳವಾಗಿರುವವರಿಂದ, (ಜಾತಿಯನ್ನು) ಭೇದವನ್ನು ಉಪಚಾರಕ್ಕಾಗಿ (ಕಲ್ಪಿಸಿ) ಬಹುವಚನವನ್ನು (ಪ್ರಯೋಗಿಸಿದೆ),

ಇನ್ನು ಅವು ಯಾವವು? ಎಂದರೆ (ಶ್ರುತಿ) ಹೇಳುತ್ತದೆ; ಅವರಲ್ಲಿ ಅಭಿಷಿಕ್ತರಾದವರನ್ನೇ ವಿಶೇಷವಾಗಿ ತಿಳಿಸುತ್ತಿದೆ: ಇಂದ್ರನು, ದೇವತೆಗಳ ರಾಜನು; ವರುಣನು, ಜಲಚರಗಳ (ರಾಜನು); ಸೋಮನು, ಬ್ರಾಹ್ಮಣರ (ರಾಜನು); ರುದ್ರನು ಪಶುಗಳ (ರಾಜನು); ಪರ್ಜನ್ಯನು, ಮಿಂಚು ಮುಂತಾದವುಗಳ (ರಾಜನು); ಯಮನು, ಪಿತೃಗಳ ರಾಜನು, ಮೃತ್ಯುವು ರೋಗಾದಿಗಳ (ರಾಜನು); ಈಶಾನನು ಕಾಂತಿಗಳ (ರಾಜನು) –ಹೀಗೆ ಇವೇ ಮುಂತಾದ ದೇವತೆಗಳಲ್ಲಿ ಕ್ಷತ್ರಗಳಿವೆಯಲ್ಲ (ಅವನ್ನು).[1] ಆ ಬಳಿಕ ಇಂದ್ರನೇ ಮುಂತಾದ ಕ್ಷತ್ರದೇವತೆಗಳಿಂದ ಅಧಿಷ್ಠಿತರಾದ ಸೋಮಸೂರ್ಯರ ವಂಶದಲ್ಲಿ ಜನಿಸಿದ (ಪುರೂರವಸ್ಸೇ ಮುಂತಾದ) ಮನುಷ್ಯಕ್ಷತ್ರಗಳೂ ಸೃಷ್ಟವೇ ಆದವು ಎಂದು ಸೇರಿಸಿಕೊಳ್ಳಬೇಕು. ಅದಕ್ಕಾಗಿಯಲ್ಲವೆ, ದೇವಕ್ಷತ್ರಸೃಷ್ಟಿ(ಯನ್ನು ಹೇಳುವದಕ್ಕೆ) ಪ್ರಾರಂಭಿಸಿರುವದು[2] ?

## ಬ್ರಾಹ್ಮಣಕ್ಷತ್ರಿಯರ ಸಂಬಂಧ

(ಭಾಷ್ಯ)

೧೮೧. ಯಸ್ಮಾತ್ ಬ್ರಹ್ಮಣಾ ಅತಿಶಯೇನ ಸೃಷ್ಟಂ ಕ್ಷತ್ರಮ್ ತಸ್ಮಾತ್ ಕ್ಷತ್ರಾತ್ ಪರಂ ನಾಸ್ತಿ ಬ್ರಾಹ್ಮಣಜಾತೇರಪಿ ನಿಯನ್ತೃ। ತಸ್ಮಾತ್ ಬ್ರಾಹ್ಮಣಃ ಕಾರಣಭೂತೋಽಪಿ ಕ್ಷತ್ರಿಯಸ್ಯ ಕ್ಷತ್ರಿಯಮ್ ಅಧಸ್ತಾತ್ ವ್ಯವಸ್ಥಿತಃ ಸನ್ ಉಪರಿಸ್ಥಿತಮ್ ಉಪಾಸ್ತೇ। ಕ್ವ ? ರಾಜಸೂಯೇ। ಕ್ಷತ್ರೇ ಏವ ತತ್ ಆತ್ಮೀಯಂ ಯಶಃ ಖ್ಯಾತಿರೂಪಂ ಬ್ರಹ್ಮ ಇತಿ ದಧಾತಿ ಸ್ಥಾಪಯತಿ। ರಾಜಸೂಯಾಭಿಷಿಕ್ತೇನ ಆಸನ್ದ್ಯಾಂ ಸ್ಥಿತೇನ ರಾಜ್ಞಾ ಆಮನ್ತ್ರಿತೋ 'ಬ್ರಹ್ಮನ್' ಇತಿ ಋತ್ವಿಕ್ ಪುನಸ್ತಂ ಪ್ರತ್ಯಾಹ 'ತ್ವಂ ರಾಜನ್ ಬ್ರಹ್ಮಾಸಿ' ಇತಿ। ತದೇತದಭಿಧೀಯತೇ 'ಕ್ಷತ್ರ ಏವ ತದ್ಯಶೋ ದಧಾತಿ' ಇತಿ। ಸೈಷಾ ಪ್ರಕೃತಾ ಕ್ಷತ್ರಸ್ಯ ಯೋನಿರೇವ ಯದ್ ಬ್ರಹ್ಮ। ತಸ್ಮಾತ್ ಯದ್ಯಪಿ ರಾಜಾ ಪರಮತಾಂ ರಾಜಸೂಯಾಭಿಷೇಕಗುಣಾಂ ಗಚ್ಛತಿ, ಆಪ್ನೋತಿ ಬ್ರಹ್ಮೈವ

---

1. ದೇವತೆಗಳಲ್ಲಿ ಕ್ಷತ್ರಿಯರೆಂದು ಪ್ರಸಿದ್ಧರಾಗಿರುವ ಇಂದ್ರಾದಿಗಳಿರುವರಲ್ಲ ಆ ಕ್ಷತ್ರಜಾತಿಯನ್ನು ಹಿರಣ್ಯಗರ್ಭನು ಸೃಷ್ಟಿಸಿದನು ಎಂದು ಅನ್ವಯ.

2. ದೇವತಾಸೃಷ್ಟಿಯನ್ನು ಹೇಳಿರುವದು ಅಧಿಷ್ಠೇಯವಾದ ಮನುಷ್ಯಕ್ಷತ್ರಿಯರ ಸೃಷ್ಟಿಯನ್ನು ಹೇಳುವದಕ್ಕಾಗಿ ಹೇಳಿದ ಉಪೋದ್ಘಾತವು ಎಂದು ಭಾವ. ಇಲ್ಲಿ ಬ್ರಹ್ಮಕ್ಷತ್ರಾದಿಸೃಷ್ಟಿಯನ್ನು ಹೇಳಿರುವದು ಕರ್ಮಕ್ಕಾಗಿ; ಆದ್ದರಿಂದ ಮನುಷ್ಯಸೃಷ್ಟಿಯೇ ಪ್ರಕೃತವಾಗಿರುತ್ತದೆ.

ಬ್ರಾಹ್ಮಣಜಾತಿರೇವ ಅನ್ತತಃ ಅನ್ತೇ ಕರ್ಮಪರಿಸಮಾಪ್ತೌ ಉಪನಿಶ್ರಯತಿ ಆಶ್ರಯತಿ ಸ್ವಾಂ ಯೋನಿಮ್ । ಪುರೋಹಿತಂ ಪುರೋ ನಿಧತ್ತೇ ಇತ್ಯರ್ಥಃ । ಯಸ್ತು ಪುನರ್ಬಲಾಭಿಮಾನಾತ್ ಸ್ವಾಂ ಯೋನಿಂ ಬ್ರಾಹ್ಮಣಜಾತಿಂ ಬ್ರಾಹ್ಮಣಂ ಯ ಉ ಏನಂ ಹಿನಸ್ತಿ ಹಿಂಸತಿ ನ್ಯಗ್ಭಾವೇನ ಪಶ್ಯತಿ ಸ್ವಾಮ್ ಆತ್ಮೀಯಾಮೇವ ಸ ಯೋನಿಮ್ ಋಚ್ಛತಿ ಸ್ವಂ ಪ್ರಸವಂ ವಿಚ್ಛಿನತ್ತಿ ವಿನಾಶಯತಿ । ಸ ಏತತ್ ಕೃತ್ವಾ ಪಾಪೀಯಾನ್ ಪಾಪತರೋ ಭವತಿ । ಪೂರ್ವಮಪಿ ಕ್ಷತ್ರಿಯಃ ಪಾಪ ಏವ ಕ್ರೂರತ್ವಾತ್, ಆತ್ಮಪ್ರಸವಹಿಂಸಯಾ ಸುತರಾಮ್ । ಯಥಾ ಲೋಕೇ ಶ್ರೇಯಾಂಸಂ ಪ್ರಶಸ್ತತರಂ ಹಿಂಸಿತ್ವಾ ಪರಿಭೂಯ ಪಾಪತರೋ ಭವತಿ ತದ್ವತ್ ॥

(ಭಾಷ್ಯಾರ್ಥ)

(ಹೀಗೆ) ಬ್ರಹ್ಮವು ಕ್ಷತ್ರವನ್ನು ಅತಿಶಯವಾಗಿ ಸೃಜಿಸಿತಲ್ಲ, ಆದ್ದರಿಂದ ಕ್ಷತ್ರಕ್ಕಿಂತ ಹೆಚ್ಚಿನದು, ಬ್ರಾಹ್ಮಣಜಾತಿಯನ್ನುಕೂಡ ಕಟ್ಟಿನಲ್ಲಿಡತಕ್ಕದ್ದು, (ಮತ್ತೆ ಯಾವದೂ) ಇಲ್ಲ. ಆದ್ದರಿಂದ ಬ್ರಾಹ್ಮಣನು ಕ್ಷತ್ರಿಯನಿಗೆ ಕಾರಣನಾಗಿದ್ದರೂ ಕೆಳಗಿದ್ದುಕೊಂಡು ಮೇಲಿರುವ ಕ್ಷತ್ರಿಯನನ್ನು ಉಪಾಸನೆಮಾಡುತ್ತಾನೆ. ಎಲ್ಲಿ? ಎಂದರೆ **ರಾಜಸೂಯ**ದಲ್ಲಿ. ಕ್ಷತ್ರದಲ್ಲಿಯೇ ಬ್ರಹ್ಮ ಎಂದು (ಪ್ರಸಿದ್ಧವಾಗಿರುವ) ಆ ತನ್ನ ಖ್ಯಾತಿರೂಪವಾದ ಯಶಸ್ಸನ್ನು ಇಡುತ್ತಾನೆ. ರಾಜಸೂಯಾಭಿಷಿಕ್ತನಾಗಿ ಆಸಂದಿಯಲ್ಲಿ[1] ಕುಳಿತಿರುವ ರಾಜನು 'ಬ್ರಹ್ಮನ್' (ಬ್ರಾಹ್ಮಣನೆ) ಎಂದು ಕರೆಯಲು (ಆ) ಋತ್ವಿಜನು, ಮತ್ತೆ 'ರಾಜನೆ, ನೀನು ಬ್ರಹ್ಮವಾಗಿರುವೆ' ಎಂದು ಮಾರುತ್ತರವನ್ನು ಕೊಡುತ್ತಾನೆ. ಆ ಇದನ್ನು 'ಕ್ಷತ್ರದಲ್ಲಿಯೇ ಆ ಯಶಸ್ಸನ್ನಿಡುತ್ತಾನೆ' ಎಂದು (ಇಲ್ಲಿ) ಹೇಳಿರುತ್ತದೆ.

ಪ್ರಕೃತವಾದ ಬ್ರಹ್ಮವಿದೆಯಲ್ಲ, ಆ ಇದು ಕ್ಷತ್ರಕ್ಕೆ ಯೋನಿಯೇ[2]. ಆದ್ದರಿಂದ ರಾಜನು ರಾಜಸೂಯಾಭಿಷೇಕದ ಗುಣವಾದ ಪರಮತ್ವವನ್ನು ಹೊಂದುತ್ತಾನಾದರೂ ಪಡೆದುಕೊಳ್ಳುತ್ತಾನಾದರೂ ಕಡೆಗೆ ಕೊನೆಯಲ್ಲಿ, (ಆ) ಕರ್ಮವು ಮುಗಿದಾಗ, ತನ್ನ ಯೋನಿಯಾದ ಬ್ರಹ್ಮವನ್ನೇ ಬ್ರಾಹ್ಮಣಜಾತಿಯನ್ನೇ ಬಳಿಸಾರಿ ಆಶ್ರಯಿಸುತ್ತಾನೆ; ಪುರೋಹಿತನನ್ನೇ ಮುಂದಿಟ್ಟುಕೊಳ್ಳುತ್ತಾನೆ ಎಂದರ್ಥ. ಆದರೆ ಯಾವನು (ತನ್ನ) ಬಲದ ಅಭಿಮಾನದಿಂದ ತನ್ನ ಯೋನಿಯಾದ ಬ್ರಾಹ್ಮಣಜಾತಿಯನ್ನು ಬ್ರಾಹ್ಮಣನನ್ನು ಯಾವನಾದರೆ ಹಿಂಸಿಸುತ್ತಾನೋ, ಅವನು ತನ್ನದೇ ಆಗಿರುವ ಯೋನಿಯನ್ನು ತೊಂದರೆಗೊಳಿಸು

---

1. ಕುರ್ಚಿಯ ಹಾಗೆ ಉಪಯೋಗಿಸುವ ಉಚ್ಚಾಸನದಲ್ಲಿ.
2. ಮೂಲಕಾರಣವೇ.

ತ್ತಾನೆ, ತನ್ನ ಮೂಲಕಾರಣವನ್ನೇ ಪೀಡೆಗೊಳಿಸಿಕೊಳ್ಳುತ್ತಾನೆ, ವಿನಾಶ ಪಡಿಸಿಕೊಳ್ಳುತ್ತಾನೆ. ಅವನು ಇನ್ನೂ ಕೆಟ್ಟವನಾಗುತ್ತಾನೆ. ಮೊದಲೂ ಕ್ಷತ್ರಿಯನು ಕೆಟ್ಟವನೇ, ಏಕೆಂದರೆ (ಅವನು) ಕ್ರೂರನು; (ಆದರೆ ಹೀಗೆ) ತನ್ನ ಮೂಲದ ಹಿಂಸೆ(ಯನ್ನು ಮಾಡಿಕೊಂಡದ್ದ)ರಿಂದ ಇನ್ನೂ (ಕೆಟ್ಟವನಾಗುತ್ತಾನೆ). ಹೇಗೆ ಲೋಕದಲ್ಲಿ ದೊಡ್ಡವನನ್ನು, ಉತ್ತಮನನ್ನು ಹಿಂಸಿಸಿದರೆ, ತಿರಸ್ಕರಿಸಿದರೆ, ಬಹಳ ಕೆಟ್ಟವನಾಗುತ್ತಾನೋ ಆದರಂತೆ.

## ವೈಶ್ಯವರ್ಣದ ಸೃಷ್ಟಿ

(ಉಪನಿಷತ್ತು)

**ಸ ನೈವ ವ್ಯಭವತ್ ಸ ವಿಶಮಸೃಜತ ಯಾನ್ಯೇತಾನಿ ದೇವ ಜಾತಾನಿ ಗಣಶ ಆಖ್ಯಾಯನ್ತೇ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ ॥ ೧೨ ॥**

೧೨. ಅವನು ವಿಭುವಾಗಲೇ ಇಲ್ಲ: ಅವನು ವೈಶ್ಯಜಾತಿಯನ್ನು ಸೃಜಿಸಿದನು. ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವರು, ಮರುತ್ತುಗಳು- ಎಂದು ಗಣಗಳಾಗಿ ಕರೆಯುವರಲ್ಲ, ಆ ದೇವಜಾತಗಳನ್ನು (ಸೃಜಿಸಿದನು).

(ಭಾಷ್ಯ)

೧೮೨. ಕ್ಷತ್ರೇ ಸೃಷ್ಟೇಽಪಿ ಸ ನೈವ ವ್ಯಭವತ್ ಕರ್ಮಣೇ ಬ್ರಹ್ಮ ತಥಾ ನ ವ್ಯಭವತ್। ವಿತ್ತೋಪಾರ್ಜಯಿತುರಭಾವಾತ್। ಸ ವಿಶಮ್ ಅಸೃಜತ ಕರ್ಮಸಾಧನವಿತ್ತೋಪಾರ್ಜನಾಯ। ಕಃ ಪುನರಸೌ ವಿಟ್? ಯಾನ್ಯೇತಾನಿ ದೇವಜಾತಾನಿ। ಸ್ವಾರ್ಥೇ ನಿಷ್ಠಾ। ಯ ಏತೇ ದೇವಜಾತಿಭೇದಾಃ ಇತ್ಯರ್ಥಃ। ಗಣಶಃ ಗಣಂ ಗಣಮ್ ಆಖ್ಯಾಯನ್ತೇ ಕಥ್ಯನ್ತೇ। ಗಣಪ್ರಾಯಾ ಹಿ ವಿಶಃ। ಪ್ರಾಯೇಣ ಸಂಹತಾ ಹಿ ವಿತ್ತೋಪಾರ್ಜನೇ ಸಮರ್ಥಾ ನೈಕೈಕಶಃ। ವಸವಃ ಅಷ್ಟಸಂಖ್ಯೋ ಗಣಃ। ತಥಾ ಏಕಾದಶರುದ್ರಾಃ। ದ್ವಾದಶಾದಿತ್ಯಾಃ। ವಿಶ್ವೇ ದೇವಾಸ್ತ್ರಯೋದಶ ವಿಶ್ವಾಯಾ ಅಪತ್ಯಾನಿ, ಸರ್ವೇ ವಾ ದೇವಾಃ। ಮರುತಃ ಸಪ್ತ ಸಪ್ತ ಗಣಾಃ ॥

(ಭಾಷ್ಯಾರ್ಥ)

ಕ್ಷತ್ರವನ್ನು ಸೃಜಿಸಿದಮೇಲೂ ಆತನು ವಿಭುವಾಗಲೇ ಇಲ್ಲ; ವಿತ್ತವನ್ನು ಸಂಪಾದಿಸುವವನು ಇಲ್ಲದ್ದರಿಂದ ಕರ್ಮಕ್ಕೆ ಹಾಗೆಯೇ[1] ಶಕ್ತನಾಗಲಿಲ್ಲ.

1. ಕ್ಷತ್ರಿಯಜಾತಿಯ ಸೃಷ್ಟಿಗಿಂತ ಮೊದಲು ಹೇಗೆ ಅಸಮರ್ಥನಾಗಿದ್ದನೋ ಹಾಗೆಯೇ.

ಅವನು ಕರ್ಮಕ್ಕೆ ಸಾಧನವಾದ ವಿತ್ತವನ್ನು ಸಂಪಾದಿಸುವದಕ್ಕೆ ವೈಶ್ಯ(ಜಾತಿ)ಯನ್ನು ಸೃಜಿಸಿದನು. ಈ ವೈಶ್ಯ(ಜಾತಿ)ಯೆಂಬುದು ಯಾವವು ? ಆ ಈ ದೇವಜಾತಗಳಿವೆಯಲ್ಲ– (ಜಾತ ಎಂಬಲ್ಲಿ) ನಿಷ್ಠಾ(ಪ್ರತ್ಯಯವು) ಸ್ವಾರ್ಥದಲ್ಲಿ (ಬಂದಿದೆ)[1] – ಆ ಈ ದೇವಜಾತಿಪ್ರಭೇದಗಳು ಎಂದರ್ಥ. ಗಣಗಳಾಗಿ, ಗುಂಪು ಗುಂಪಾಗಿ, ಕರೆಯುವವರಲ್ಲ, ಹೇಳುವವರಲ್ಲ (ಅವರು). ವೈಶ್ಯರು ಗಣಪ್ರಾಯರಾಗಿರುವರಲ್ಲವೆ ? ಬಲುಮಟ್ಟಿಗೆ ಗುಂಪಾಗಿ ಸೇರಿಕೊಂಡವರೇ ವಿತ್ತವನ್ನು ಸಂಪಾದಿಸುವದಕ್ಕೆ ಸಮರ್ಥರಾಗಿರುವರೇ ಹೊರತು ಒಬ್ಬೊಬ್ಬರಾಗಿ (ಸಮರ್ಥರಾಗಿರು)ವದಿಲ್ಲ[2]. ವಸುಗಳು ಎಂಬುದು ಎಂಟು ಸಂಖ್ಯೆಯ ಗಣವು. ಹೀಗೆಯೇ ಹನ್ನೊಂದು (ಮಂದಿ) ರುದ್ರರು, ಹನ್ನೆರಡು (ಮಂದಿ) ಆದಿತ್ಯರು. ವಿಶ್ವೇದೇವರು, ವಿಶ್ವಾ ಎಂಬಾಕೆಯ ಮಕ್ಕಳು ಹದಿಮೂರು (ಮಂದಿ) ; ಅಥವಾ ಎಲ್ಲಾ ದೇವತೆಗಳನ್ನೂ (ವಿಶ್ವೇದೇವರು ಎಂದಿದೆ). ಮರುತ್ತರು, ಏಳೇಳಾಗಿರುವ (ಏಳು) ಗಣಗಳು.

## ಶೂದ್ರವರ್ಣದ ಸೃಷ್ಟಿ

(ಉಪನಿಷತ್ತು)

**ಸ ನೈವ ವ್ಯಭವತ್ ಸ ಶೌದ್ರಂ ವರ್ಣಮಸೃಜತ ಪೂಷಣಮಿಯಂ ವೈ ಪೂಷೇಯಗ್ಂ ಹೀದಗ್ಂ ಸರ್ವಂ ಪುಷ್ಯತಿ ಯದಿದಂ ಕಿಂಚ ॥ ೧೩ ॥**

೧೩. ಅವನು ವಿಭುವಾಗಲೇ ಇಲ್ಲ. ಅವನು ಶೌದ್ರವರ್ಣವನ್ನು ಪೂಷನನ್ನು ಸೃಜಿಸಿದನು. ಇದೇ ಪೂಷಾ ; ಏಕೆಂದರೆ ಇದು ಏನೇನಿದೆಯೋ ಇದೆಲ್ಲವನ್ನೂ ಇದೇ ಪೋಷಿಸುತ್ತದೆ.

(ಭಾಷ್ಯ)

೧೩. ಸ ಪರಿಚಾರಕಾಭಾವಾತ್ ಪುನರಪಿ ನೈವ ವ್ಯಭವತ್ ಸ ಶೌದ್ರಂ ವರ್ಣಮ್ ಅಸೃಜತ । ಶೂದ್ರ ಏವ ಶೌದ್ರಃ । ಸ್ವಾರ್ಥೇಽಣಿ ವೃದ್ಧಿಃ । ಕಃ ಪುನರಸೌ ಶೌದ್ರೋ ವರ್ಣೋ ಯಃ ಸೃಷ್ಟಃ ? ಪೂಷಣಮ್ । ಪುಷ್ಯತಿ ಇತಿ ಪೂಷಾ । ಕಃ ಪುನರಸೌ ಪೂಷಾ ಇತಿ ? ವಿಶೇಷತಸ್ತಂ ನಿರ್ದಿಶತಿ । ಇಯಂ ಪೃಥಿವೀ ಪೂಷಾ । ಸ್ವಯಮೇವ ನಿರ್ವಚನಮಾಹ । ಇಯಂ ಹಿ ಇದಂ ಸರ್ವಂ ಪುಷ್ಯತಿ ಯದಿದಂ ಕಿಂಚ ॥

---

1. ನಿಷ್ಠಾಪ್ರತ್ಯಯವೆಂದರೆ ಭೂತಕೃದಂತವನ್ನು ಹೇಳುವ ತಕಾರವು ; ಅದಕ್ಕೆ ದೇವತೆಗಳು ಎಂಬದಕ್ಕಿಂತ ಬೇರೆಯಾದ ಅರ್ಥವೇನೂ ಇಲ್ಲ.

2. ಆದ್ದರಿಂದ ವೈಶ್ಯರು ಗಣಪ್ರಾಯರೆಂಬುದು ಪ್ರತ್ಯಕ್ಷಸಿದ್ಧವಾಗಿದೆ.

(ಭಾಷ್ಯಾರ್ಥ)

ಅವನು ಪರಿಚಾರಕನಿಲ್ಲದ್ದರಿಂದ ಇನ್ನೂ ವಿಭುವಾಗಲೇ ಇಲ್ಲ. ಅವನು ಶೌದ್ರವರ್ಣವನ್ನು ಸೃಜಿಸಿದನು ; (ಶೌದ್ರ ಎಂಬಲ್ಲಿ) ಶೂದ್ರನೇ ಶೌದ್ರನು ಎಂದು ಸ್ವಾರ್ಥದಲ್ಲಿ ಅಣ್(ಪ್ರತ್ಯಯವು) ಬಂದು (ಉಕಾರಕ್ಕೆ) ವೃದ್ಧಿಯಾಗಿರುತ್ತದೆ. (ಹೀಗೆ) ಸೃಷ್ಟವಾಯಿತಲ್ಲ, ಆ ಶೌದ್ರವರ್ಣವು ಯಾವದು ? ಎಂದರೆ ವಿಶೇಷ (ರೂಪ)ದಿಂದ ಅದನ್ನು (ಶ್ರುತಿ) ತಿಳಿಸುತ್ತದೆ. ಈ ಪೃಥಿವಿಯೇ[1] ಪೂಷಾ. (ಶ್ರುತಿಯು) ತಾನೇ (ಪೂಷಾ ಎಂಬುದರ) ನಿರ್ವಚನವನ್ನು ಹೇಳುತ್ತಿದೆ. ಈ (ಪೃಥ್ವಿಯು) ಇದು ಏನೇನಿದೆಯೋ ಅದೆಲ್ಲವನ್ನೂ ಪೋಷಿಸುತ್ತಿದೆಯಲ್ಲವೆ ?

## ಧರ್ಮದ ಸೃಷ್ಟಿ

(ಉಪನಿಷತ್ತು)

**ಸ ನೈವ ವ್ಯಭವತ್ ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ ತದೇತತ್ ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ ಪರಂ ನಾಸ್ತ್ಯಥೋ ಅಬಲೀಯಾನ್ ಬಲೀಯಾಗ್ಂಸಮಾಶಗ್ಂಸ ತೇ ಧರ್ಮೇಣ ಯಥಾ ರಾಜ್ಞೈವಂ ಯೋ ವೈ ಸ ಧರ್ಮಃ ಸತ್ಯಂ ವೈ ತತ್ತಸ್ಮಾತ್ ಸತ್ಯಂ ವದನ್ತಮಾಹುರ್ಧರ್ಮಂ ವದ ತೀತಿ ಧರ್ಮಂ ವಾ ವದನ್ತಗ್ಂ ಸತ್ಯಂ ವದತೀತ್ಯೇತದ್ಧ್ಯೇವೈ ತದುಭಯಂ ಭವತಿ ॥ ೧೪ ॥**

೧೪. ಅವನು ವಿಭುವಾಗಲೇ ಇಲ್ಲ. ಆ ಶ್ರೇಯೋರೂಪವನ್ನು, ಧರ್ಮವನ್ನು, ಅತಿಸೃಜಿಸಿದನು. ಧರ್ಮವಿದೆಯಲ್ಲ, ಆ ಇದು ಕ್ಷತ್ರಕ್ಕೂ ಕ್ಷತ್ರವು. ಆದ್ದರಿಂದ ಧರ್ಮಕ್ಕಿಂತ ಹೆಚ್ಚಿನದು ಇಲ್ಲ. (ಆದ್ದರಿಂದ) ಅಬಲನಾದವನುಕೂಡ ಬಲಿಷ್ಠನನ್ನು ಹೆಚ್ಚು ಬಲವುಳ್ಳ ರಾಜನಿಂದ ಹೇಗೋ ಹಾಗೆ ಧರ್ಮದಿಂದ (ಗೆಲ್ಲುವೆನೆಂದು) ಹಾರೈಸುತ್ತಾನೆ. ಆ ಧರ್ಮವಿದೆಯಲ್ಲ, ಅದು ಸತ್ಯವೇ. ಆದ್ದರಿಂದ ಸತ್ಯವನ್ನು ಹೇಳುವವನನ್ನು 'ಧರ್ಮವನ್ನು ಹೇಳುತ್ತಾನೆ' ಎನ್ನುವರು ; ಧರ್ಮವನ್ನು ಹೇಳುವವನನ್ನು 'ಸತ್ಯವನ್ನು ಹೇಳುತ್ತಾನೆ' ಎನ್ನುವರು. ಇದೇ ಈ ಎರಡೂ ಆಗಿರುತ್ತದೆ.

---

1. 'ಇಯಮ್' ಎಂಬ ಮಾತನ್ನು ಈ ಭೂಮಿ ಎಂಬರ್ಥದಲ್ಲಿ ಉಪಯೋಗಿಸುವದು ವೇದದಲ್ಲಿ ಪ್ರಚುರವಾಗಿದೆ.

# ಧರ್ಮದ ಪ್ರಭಾವ

(ಭಾಷ್ಯ)

೧೮೩. ಸ ಚತುರಃ ಸೃಷ್ಟ್ವಾಪಿ ವರ್ಣಾನ್ ನೈವ ವ್ಯಭವತ್ । ಉಗ್ರತ್ವಾತ್ ಕ್ಷತ್ರಸ್ಯ ಅನಿಯತಾಶಙ್ಕಯಾ ತಚ್ಛ್ರೇಯೋರೂಪಮ್ ಅತ್ಯಸೃಜತ । ಕಿಂ ತತ್ ? ಧರ್ಮಮ್ ? ತದೇತತ್ ಶ್ರೇಯೋರೂಪಂ ಸೃಷ್ಟಂ ಕ್ಷತ್ರಸ್ಯ ಕ್ಷತ್ರಂ ಕ್ಷತ್ರಸ್ಯಾಪಿ ನಿಯನ್ತೃ । ಉಗ್ರಾದಪಿ ಉಗ್ರಮ್ । ಯದ್ ಧರ್ಮಃ, ಯೋ ಧರ್ಮಃ । ತಸ್ಮಾತ್ ಕ್ಷತ್ರಸ್ಯಾಪಿ ನಿಯನ್ತೃತ್ವಾತ್ ಧರ್ಮಾತ್ ಪರಂ ನಾಸ್ತಿ । ತೇನ ಹಿ ನಿಯಮ್ಯನ್ತೇ ಸರ್ವೇ । ತತ್ ಕಥಮಿತಿ? ಉಚ್ಯತೇ । ಅಥೋ ಅಪಿ ಅಬಲೀಯಾನ್ ದುರ್ಬಲತರಃ ಬಲೀಯಾಂಸಮ್ ಆತ್ಮನೋ ಬಲವತ್ತರಮಪಿ ಆಶಂಸತೇ ಕಾಮಯತೇ ಜೇತುಂ ಧರ್ಮೇಣ ಬಲೇನ । ಯಥಾ ಲೋಕೇ ರಾಜ್ಞಾ ಸರ್ವಬಲವತ್ತಮೇನಾಪಿ ಕುಟುಮ್ಬಿಕಃ ಏವಮ್ । ತಸ್ಮಾತ್ ಸಿದ್ಧಂ ಧರ್ಮಸ್ಯ ಸರ್ವಬಲವತ್ತರತ್ವಾತ್ ಸರ್ವನಿಯನ್ತೃತ್ವಮ್ ॥

(ಭಾಷ್ಯಾರ್ಥ)

ಅವನು ನಾಲ್ಕು ವರ್ಣಗಳನ್ನು ಸೃಜಿಸಿದರೂ ವಿಭುವಾಗಲೇ ಇಲ್ಲ. ಕ್ಷತ್ರವು ಉಗ್ರವಾಗಿರುವದರಿಂದ (ಅದು) ನಿಯತವಾಗಿರಲಾರದೆಂಬ ಶಂಕೆಯಿಂದ ಆ ಶ್ರೇಯೋರೂಪವನ್ನು ಅತಿಸೃಜಿಸಿದನು. ಅದನ್ನು ಎಂದರೆ ಯಾವದನ್ನು ?- ಎಂದರೆ ಧರ್ಮವನ್ನು[1]. ಹೀಗೆ ಸೃಷ್ಟವಾದ (ಯದ್ ಧರ್ಮಃ= ಯೋ ಧರ್ಮಃ) ಧರ್ಮವಿದೆಯಲ್ಲ, ಆ ಈ ಶ್ರೇಯೋರೂಪವು ಕ್ಷತ್ರಕ್ಕೂ ಕ್ಷತ್ರವು, ಕ್ಷತ್ರ(ಜಾತಿ)ಯನ್ನು ಕಟ್ಟಿನಲ್ಲಿಡತಕ್ಕದ್ದು, ಉಗ್ರಕ್ಕಿಂತಲೂ ಉಗ್ರವು ಆದ್ದರಿಂದ **ಕ್ಷತ್ರವನ್ನು ಕೂಡ ಕಟ್ಟಿನಲ್ಲಿಟ್ಟಿರುವದರಿಂದ ಧರ್ಮಕ್ಕಿಂತ ಹೆಚ್ಚಿನದು ಇಲ್ಲ.** ಏಕೆಂದರೆ ಅದರಿಂದ ಎಲ್ಲರೂ ಕಟ್ಟುವಡೆಯುತ್ತಾರೆ. ಅದು ಹೇಗೆ ಎಂದರೆ (ಶ್ರುತಿ) ಹೇಳುತ್ತದೆ. (ಅಥೋ= ಅಪಿ) ಅಬಲನಾದವನು ಕೂಡ ತೀರ ದುರ್ಬಲನಾದರೂ ಹೆಚ್ಚು ಬಲವುಳ್ಳವನನ್ನು ತನಗಿಂತಲೂ ಬಲವುಳ್ಳವನನ್ನು ಧರ್ಮವೆಂಬ ಬಲದಿಂದ ಗೆಲ್ಲುವೆನೆಂದು ಹಾರೈಸುತ್ತಾನೆ, ಆಶೆಯುಳ್ಳವನಾಗಿರುತ್ತಾನೆ. ಲೋಕವಲ್ಲಿ ಕುಟುಂಬಿಕನಾದವನು ಕೂಡ ಎಲ್ಲರಿಗಿಂತಲೂ ಬಲವುಳ್ಳ ರಾಜನಿಂದ ಹೇಗೆ (ಪ್ರಬಲರಾದವರನ್ನು ಗೆಲ್ಲುವದಕ್ಕೆ

1. ಪ್ರಕೃತಸೃಷ್ಟಿಕ್ರಮದಲ್ಲಿ ದೇವತೆಗಳನ್ನೇ ಹೇಳಿರುವದರಿಂದ ಇಲ್ಲಿಯೂ ಧರ್ಮದೇವತೆಯನ್ನೇ ಹೇಳಿದೆ ಎಂದು ವಾರ್ತಿಕ.

ಹವಣಿಸುತ್ತಾನೋ) ಹಾಗೆ[1]. ಆದ್ದರಿಂದ ಧರ್ಮವು ಎಲ್ಲರಿಗಿಂತಲೂ ಬಲವುಳ್ಳದ್ದಾದ್ದರಿಂದ ಅದು ಎಲ್ಲರನ್ನೂ ಕಟ್ಟಿನಲ್ಲಿರಿಸುವದೆಂದು ಸಿದ್ಧವಾಯಿತು.

## ಧರ್ಮ, ಸತ್ಯ- ಎರಡೂ ಧರ್ಮವೇ

(ಭಾಷ್ಯ)

೧೮೪. ಯೋ ವೈ ಸ ಧರ್ಮಃ ವ್ಯವಹಾರಲಕ್ಷಣಃ ಲೌಕಿಕೈರ್ವ್ಯವಹ್ರಿಯಮಾಣಃ ಸತ್ಯಂ ವೈ ತತ್ । ಸತ್ಯಮಿತಿ ಯಥಾ ಶಾಸ್ತ್ರಾರ್ಥತಾ । ಸ ಏವ ಅನುಷ್ಠೀಯಮಾನೋ ಧರ್ಮನಾಮಾ ಭವತಿ । ಶಾಸ್ತ್ರಾರ್ಥತ್ವೇನ ಜ್ಞಾಯಮಾನಸ್ತು ಸತ್ಯಂ ಭವತಿ । ಯಸ್ಮಾದೇವಂ ತಸ್ಮಾತ್ ಸತ್ಯಂ ಯಥಾಶಾಸ್ತ್ರಂ ವದನ್ತಂ ವ್ಯವಹಾರಕಾಲೇ ಆಹುಃ ಸಮೀಪಸ್ಥಾ ಉಭಯವಿವೇಕಜ್ಞಾಃ 'ಧರ್ಮಂ ವದತಿ' ಇತಿ । ಪ್ರಸಿದ್ಧಂ ಲೌಕಿಕಂ ನ್ಯಾಯಂ ವದತೀತಿ । ತಥಾ ವಿಪರ್ಯಯೇಣ ಧರ್ಮಂ ವಾ ಲೌಕಿಕಂ ವ್ಯವಹಾರಂ ವದನ್ತಮ್ ಆಹುಃ ಸತ್ಯಂ ವದತೀತಿ, ಶಾಸ್ತ್ರಾದನಪೇತಂ ವದತೀತಿ । ಏತದ್ ಯದುಕ್ತಮುಭಯಂ ಜ್ಞಾಯಮಾನಮ್ ಅನುಷ್ಠೀಯಮಾನಂ ಚ ಏತದ್ ಧರ್ಮ ಏವ ಭವತಿ । ತಸ್ಮಾತ್ ಸ ಧರ್ಮಃ ಜ್ಞಾನಾನುಷ್ಠಾನಲಕ್ಷಣಃ ಶಾಸ್ತ್ರಜ್ಞಾನ್ ಇತರಾಂಶ್ಚ ಸರ್ವಾನೇವ ನಿಯಮಯತಿ । ತಸ್ಮಾತ್ ಸ ಕ್ಷತ್ರಸ್ಯಾಪಿ ಕ್ಷತ್ರಮ್ । ಅತಃ ತದಭಿಮಾನೋಽವಿದ್ವಾನ್ । ತದ್ವಿಶೇಷಾನುಷ್ಠಾನಾಯ ಬ್ರಹ್ಮಕ್ಷತ್ರವಿಟ್ ಶೂದ್ರನಿಮಿತ್ತವಿಶೇಷಮ್ ಅಭಿಮನ್ಯತೇ । ತಾನಿ ಚ ನಿಸರ್ಗತ ಏವ ಕರ್ಮಾಧಿಕಾರನಿಮಿತ್ತಾನಿ ॥

(ಭಾಷ್ಯಾರ್ಥ)

ಆ ವ್ಯವಹಾರಲಕ್ಷಣವಾದ, ಲೌಕಿಕರು ವ್ಯವಹರಿಸುತ್ತಿರುವ ಧರ್ಮವೆಂಬುದಿದೆಯಲ್ಲ, ಅದು ಸತ್ಯವೇ. ಸತ್ಯವೆಂದರೆ ಶಾಸ್ತ್ರದಲ್ಲಿರುವ ಅರ್ಥವಾಗಿರುವದು. ಅದೇ ಅನುಷ್ಠಾನಮಾಡಿದಾಗ ಧರ್ಮವೆಂಬ ಹೆಸರುಳ್ಳದ್ದಾಗುವದು ; ಶಾಸ್ತ್ರಾರ್ಥವೆಂದು ತಿಳಿದುಕೊಳ್ಳುವಾಗಲಾದರೋ ಸತ್ಯವಾಗಿರುವದು. ಹೀಗಿದೆಯಷ್ಟೆ. ಆದ್ದರಿಂದ ಸತ್ಯವನ್ನು ಶಾಸ್ತ್ರದಲ್ಲಿರುವಂತೆ ವ್ಯವಹಾರಕಾಲದಲ್ಲಿ ಹೇಳುವವನನ್ನು. (ಈ) ಎರಡರ ವಿವೇಕವನ್ನು ಬಲ್ಲವರು, ಧರ್ಮವನ್ನು ಹೇಳುತ್ತಾನೆ, ಪ್ರಸಿದ್ಧವಾದ ಲೌಕಿಕನ್ಯಾಯವನ್ನೇ ಹೇಳುತ್ತಾನೆ, ಎನ್ನುವರು. ಇದರಂತೆ (ಇದಕ್ಕೆ) ವಿಪರೀತವಾಗಿ ಧರ್ಮವನ್ನು, ಲೌಕಿಕವ್ಯವಹಾರವನ್ನು

---

1. ಉದಾಹರಣೆಗೆ ಎಲ್ಲರಿಗಿಂತಲೂ ಬಲವತ್ತಮನಾದ ರಾಜನೊಡನೆ ಸ್ಪರ್ಧಿಸುವ ದುರ್ಬಲಕುಟುಂಬಿಕನೂ ಧರ್ಮದಿಂದ ಅವನನ್ನು ಗೆಲ್ಲುವೆನೆಂದು ಆಶಿಸುತ್ತಾನೆ ಎಂಬ ಅರ್ಥವನ್ನೂ ವಾರ್ತಿಕದಲ್ಲಿ ತೆಗೆದಿದೆ. "ಯಥಾ ಬಲವತ್ತಮೇನಾಪಿ ರಾಜ್ಞಾ ಸ್ಪರ್ಧಮಾನಃ" ಎಂದು ಅಧ್ಯಾಹಾರಮಾಡಿಕೊಂಡು ಅನ್ವಯಿಸಿದರೆ ಆ ಅರ್ಥವೂ ಬರುವದು.

ಹೇಳುವವನನ್ನು ಸತ್ಯವನ್ನು ಹೇಳುತ್ತಾನೆ, ಶಾಸ್ತ್ರದಲ್ಲಿರುವಂತೆ ಹೇಳುತ್ತಾನೆ ಎನ್ನುವರು[1]. ಈ (ಮೇಲೆ) ಹೇಳಿದ ತಿಳಿದದ್ದು, ಅನುಷ್ಠಾನಮಾಡತಕ್ಕದ್ದು- ಎಂಬೆರಡೂ ಈ ಧರ್ಮವೇ ಆಗಿರುತ್ತದೆ.

ಆದ್ದರಿಂದ ಜ್ಞಾನಾನುಷ್ಠಾನರೂಪವಾದ ಈ ಧರ್ಮವು ಶಾಸ್ತ್ರಜ್ಞರನ್ನೂ ಮಿಕ್ಕವರನ್ನೂ ಕಟ್ಟಿನಲ್ಲಿಟ್ಟಿರುತ್ತದೆ. ಆದ್ದರಿಂದ ಅದು ಕ್ಷತ್ರಕ್ಕೂ ಕ್ಷತ್ರವು. ಆದ್ದರಿಂದ ಅದರ ಅಭಿಮಾನವುಳ್ಳ ಅಜ್ಞನು ಆ (ಧರ್ಮದ) ವಿಶೇಷವನ್ನು ಅನುಷ್ಠಾನಮಾಡುವದಕ್ಕೋಸ್ಕರ ಬ್ರಹ್ಮ, ಕ್ಷತ್ರ, ವಿಟ್, ಶೂದ್ರ- ಎಂಬ ಆಯಾ ನಿಮಿತ್ತದಲ್ಲಿ ಅಭಿಮಾನವುಳ್ಳವನಾಗಿರುತ್ತಾನೆ; ಮತ್ತು ಅವು ಸ್ವಭಾವ ದಿಂದಲೇ ಕರ್ಮಾಧಿಕಾರಕ್ಕೆ ನಿಮಿತ್ತಗಳಾಗಿರುತ್ತವೆ[2].

## ಕರ್ಮಜಿತಲೋಕಕ್ಕೂ ಆತ್ಮಲೋಕಕ್ಕೂ ತಾರತಮ್ಯ

(ಉಪನಿಷತ್ತು)

**ತದೇತತ್ ಬ್ರಹ್ಮ ಕ್ಷತ್ರಂ ವಿಟ್ ಶೂದ್ರಸ್ತದಗ್ನಿನೈವ ದೇವೇಷು ಬ್ರಹ್ಮಾಭವದ್ಬ್ರಾಹ್ಮಣೋ ಮನುಷ್ಯೇಷು ಕ್ಷತ್ರಿಯೇಣ ಕ್ಷತ್ರಿಯೋ ವೈಶ್ಯೇನ ವೈಶ್ಯಃ ಶೂದ್ರೇಣ ಶೂದ್ರಸ್ತಸ್ಮಾದಗ್ನಾವೇವ ದೇವೇಷು ಲೋಕಮಿಚ್ಛನ್ತೇ ಬ್ರಾಹ್ಮಣೇ ಮನುಷ್ಯೇಷ್ವೇತಾಭ್ಯಾಗ್ಂ ಹಿ ರೂಪಾಭ್ಯಾಂ ಬ್ರಹ್ಮಾಭವತ್ । ಅಥ ಯೋ ಹ ವಾ ಅಸ್ಮಾಲ್ಲೋಕಾತ್ ಸ್ವಂ ಲೋಕಮದೃಷ್ಟ್ವಾ ಪ್ರೈತಿ ಸ ಏನಮವಿದಿತೋ ನ ಭುನಕ್ತಿ ಯಥಾ ವೇದೋ ವಾಽನನೂಕ್ತೋಽನ್ಯದ್ವಾ ಕರ್ಮಾಕೃತಂ ಯದಿಹ ವಾ ಅಪ್ಯನೇವಂ ವಿನ್ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾನ್ತತಃ ಕ್ಷೀಯತ ಏವಾತ್ಮಾನಮೇವ ಲೋಕಮುಪಾಸೀತ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ ಅಸ್ಮಾದ್ಧ್ಯೇವಾಽಽತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ ॥ ೧೫ ॥**

೧೫. ಆ ಇದೇ ಬ್ರಹ್ಮ, ಕ್ಷತ್ರ, ವಿಟ್, ಶೂದ್ರ. ಅದು ಅಗ್ನಿಯಾಗಿಯೇ ದೇವತೆಗಳಲ್ಲಿ ಬ್ರಹ್ಮವಾಯಿತು ; ಮನುಷ್ಯರಲ್ಲಿ ಬ್ರಾಹ್ಮ

---

1. ಶಾಸ್ತ್ರದ ಅರ್ಥವನ್ನು ಅನುಷ್ಠಾನದಿಂದ ನಿಶ್ಚಯಿಸುತ್ತಾರೆ ; ಅನುಷ್ಠಾನವನ್ನು ಶಾಸ್ತ್ರಾರ್ಥದಿಂದ ಗೊತ್ತುಮಾಡುತ್ತಾರೆ. ಹೀಗೆ ಧರ್ಮಸತ್ಯಗಳು ಒಂದನ್ನೊಂದು ಅವಲಂಬಿಸಿರುತ್ತವೆ ಎಂದು ವಾರ್ತಿಕ.

2. ಬ್ರಾಹ್ಮಣ್ಯಾದ್ಯಧ್ಯಾಸರೂಪವಾದ ನಿಮಿತ್ತಗಳು ಮತ್ತೆ ಬೇರೆ ನಿಮಿತ್ತಗಳಿಂದಾಗಿರುವದಿಲ್ಲ ; ಅನಾದ್ಯಧ್ಯಾಸದ ಸ್ವಭಾವವೇ ಅದಕ್ಕೆ ಕಾರಣ.

ಣನು, ಕ್ಷತ್ರಿಯನಿಂದ ಕ್ಷತ್ರಿಯನು, ವೈಶ್ಯನಿಂದ ವೈಶ್ಯನೂ ಶೂದ್ರನಿಂದ ಶೂದ್ರನೂ (ಆಯಿತು). ಆದ್ದರಿಂದ ಅಗ್ನಿಯಲ್ಲಿಯೇ ದೇವತೆಗಳಲ್ಲಿನ ಲೋಕವನ್ನು (ಪಡೆಯ)ಲಿಚ್ಛಿಸುತ್ತಾರೆ ; ಬ್ರಾಹ್ಮಣನಲ್ಲಿ ಮನುಷ್ಯರಲ್ಲಿಯ (ಲೋಕವನ್ನು ಇಚ್ಛಿಸುತ್ತಾರೆ). ಈ ಎರಡು ರೂಪಗಳಾಗಿಯಲ್ಲವೆ, ಬ್ರಹ್ಮವು ಆಯಿತು ? ಇನ್ನು ಯಾವನೇ ಈ ಲೋಕದಿಂದ ಸ್ವಲೋಕವನ್ನು ಕಂಡುಕೊಳ್ಳದೆ ಹೊರಟುಹೋಗುವನೋ, ಅದು ಅವಿದಿತವಾದ್ದರಿಂದ ಇವನನ್ನು ಕಾಪಾಡುವದಿಲ್ಲ ; ಅನನೂಕ್ತವಾದ ವೇದ, ಅಥವಾ ಮಾಡದೆ ಇರುವ ಬೇರೆಯ ಕರ್ಮ – ಇವುಗಳು ಹೇಗೋ (ಹಾಗೆ). ಹೀಗೆಂದು ತಿಳಿಯದವನು ಇಲ್ಲಿ ಹೆಚ್ಚಿನ ಪುಣ್ಯಕರ್ಮವನ್ನು ಮಾಡಿರುತ್ತಾನಾದರೂ ಅವನ ಆ (ಕರ್ಮ)ವು ಕೊನೆಯಲ್ಲಿ ಕ್ಷಯವೇ ಆಗುತ್ತದೆ. ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು. ಯಾವನು ಆತ್ಮನೆಂಬ ಲೋಕವನ್ನೇ ಉಪಾಸನೆ ಮಾಡುತ್ತಾನೋ ಅವನ ಕರ್ಮವು ಕ್ಷಯವಾಗುವದಿಲ್ಲ. ಏಕೆಂದರೆ ಇದೇ ಆತ್ಮನಿಂದ, ಏನೇನು ಬಯಸುತ್ತಾನೋ ಅದದನ್ನು ಸೃಜಿಸಿಕೊಳ್ಳುತ್ತಾನೆ.

## ದೇವಾಶ್ರಿತಕರ್ಮದ ಫಲವು ಅಗ್ನಿಯ ಮೂಲಕ

(ಭಾಷ್ಯ)

೧೮೫. ತದೇತತ್ ಚಾತುರ್ವರ್ಣ್ಯಂ ಸೃಷ್ಟಂ ಬ್ರಹ್ಮ, ಕ್ಷತ್ರಮ್, ವಿಟ್, ಶೂದ್ರಃ ಇತಿ ಉತ್ತರಾರ್ಥಃ ಉಪಸಂಹಾರಃ । ಯತ್ ತತ್ ಸ್ರಷ್ಟೃ ಬ್ರಹ್ಮ ತತ್ ಅಗ್ನಿನೈವ ನಾನ್ಯೇನ ರೂಪೇಣ ದೇವೇಷು ಬ್ರಹ್ಮ ಬ್ರಾಹ್ಮಣಜಾತಿಃ ಅಭವತ್ । ಬ್ರಾಹ್ಮಣಃ ಬ್ರಾಹ್ಮಣಸ್ವರೂಪೇಣ ಮನುಷ್ಯೇಷು ಬ್ರಹ್ಮ ಅಭವತ್ । ಇತರೇಷು ವರ್ಣೇಷು ವಿಕಾರಾನ್ತರಂ ಪ್ರಾಪ್ಯ ಕ್ಷತ್ರಿಯೇಣ । ಕ್ಷತ್ರಿಯೋಽಭವತ್ । ಇನ್ದ್ರಾದಿದೇವತಾಧಿಷ್ಠಿತಃ । ವೈಶ್ಯೇನ ವೈಶ್ಯಃ ಶೂದ್ರೇಣ ಶೂದ್ರಃ । ಯಸ್ಮಾತ್ ಕ್ಷತ್ರಾದಿಷು ವಿಕಾರಾಪನ್ನಮ್. ಅಗ್ನೌ ಬ್ರಾಹ್ಮಣ ಏವ ಚ ಅವಿಕೃತಂ ಸ್ರಷ್ಟೃ ಬ್ರಹ್ಮ, ತಸ್ಮಾತ್ ಅಗ್ನಾವೇವ ದೇವೇಷು ದೇವಾನಾಂ ಮಧ್ಯೇ ಲೋಕಂ ಕರ್ಮಫಲಮ್ ಇಚ್ಛನ್ತೇ[1] ಅಗ್ನಿಸಂಬದ್ಧಂ ಕರ್ಮ ಕೃತ್ವಾ ಇತ್ಯರ್ಥಃ ।

---

1. 'ಇಚ್ಛನ್ತಿ' ಎಂಬ ಪಾಠಕ್ಕಿಂತ ಇದೇ ಮೇಲು ; ಏಕೆಂದರೆ ಮೂಲದಲ್ಲಿ ಹೀಗೆಯೇ ಇದೆ.

ತದರ್ಥಮೇವ ಹಿ ತದ್ ಬ್ರಹ್ಮ ಕರ್ಮಾಧಿಕರಣತ್ವೇನ ಅಗ್ನಿರೂಪೇಣ ವ್ಯವಸ್ಥಿತಮ್ । ತಸ್ಮಾತ್ ತಸ್ಮಿನ್ ಅಗ್ನೌ ಕರ್ಮ ಕೃತ್ವಾ ತತ್ಫಲಂ ಪ್ರಾರ್ಥಯನ್ತೇ ಇತ್ಯೇತದುಪಪನ್ನಮ್ ॥

(ಭಾಷ್ಯಾರ್ಥ)

ಆ ಇದೇ ಸೃಷ್ಟವಾದ ಚಾತುರ್ವರ್ಣ್ಯವು ; (ಅದು ಯಾವದೆಂದರೆ) ಬ್ರಹ್ಮ, ಕ್ಷತ್ರ, ವಿಟ್, ಶೂದ್ರ – (ಎಂಬುದು) ಎಂದು ಉಪಸಂಹಾರಮಾಡಿರುವದು ಮುಂದಿನ ಗ್ರಂಥಕ್ಕಾಗಿ[1].

ಆ ಸ್ರಷ್ಟೃವಾದ[2] ಬ್ರಹ್ಮವಿತ್ತಲ್ಲ, ಅದು ಅಗ್ನಿಯಾಗಿಯೇ, ಬೇರೊಂದು ರೂಪದಿಂದಲ್ಲ, ದೇವತೆಗಳಲ್ಲಿನ ಬ್ರಹ್ಮ(ವಾಯಿತು), ಬ್ರಾಹ್ಮಣಜಾತಿಯಾಯಿತು. ಮನುಷ್ಯರಲ್ಲಿ ಬ್ರಾಹ್ಮಣನು, ಎಂದರೆ ಬ್ರಾಹ್ಮಣರೂಪದಿಂದ ಬ್ರಹ್ಮವಾಯಿತು. ಮಿಕ್ಕ ವರ್ಣಗಳಲ್ಲಿ ಮತ್ತೊಂದು ವಿಕಾರವನ್ನು ಪಡೆದು[3] ಕ್ಷತ್ರಿಯನಿಂದ ಕ್ಷತ್ರಿಯನಾಯಿತು, ಇಂದ್ರನೇ ಮುಂತಾದ ದೇವತೆಗಳಿಂದ ಅಧಿಷ್ಠಿತವಾಗಿ (ಕ್ಷತ್ರಿಯನಾಯಿತು)[4]. ವೈಶ್ಯನಿಂದ ವೈಶ್ಯನಾಯಿತು, ಶೂದ್ರನಿಂದ ಶೂದ್ರನಾಯಿತು[5].

ಸ್ರಷ್ಟೃವಾದ ಬ್ರಹ್ಮವು ಕ್ಷತ್ರಾದಿಗಳಲ್ಲಿ ವಿಕಾರವನ್ನು ಪಡೆದು, ಅಗ್ನಿಯಲ್ಲಿಯೂ ಬ್ರಾಹ್ಮಣನಲ್ಲಿಯೂ ಮಾತ್ರ ವಿಕಾರವಿಲ್ಲದೆ (ಸ್ರಷ್ಟೃವಾಯಿತಷ್ಟೆ), ಆದ್ದರಿಂದ ಅಗ್ನಿರೂಪದಿಂದಲೇ ದೇವತೆಗಳಲ್ಲಿ ದೇವತೆಗಳೊಳಗೆ ಲೋಕವನ್ನು ಎಂದರೆ ಕರ್ಮಫಲವನ್ನು ಇಚ್ಛಿಸುತ್ತಾರೆ ; ಅಗ್ನಿಸಂಬದ್ಧವಾದ ಕರ್ಮವನ್ನು ಮಾಡಿಯೇ (ಇಚ್ಛಿಸುತ್ತಾರೆ) ಎಂದರ್ಥ. ಆದಕ್ಕಾಗಿಯೇ ಅಲ್ಲವೆ[6], ಆ ಬ್ರಹ್ಮವು ಕರ್ಮಕ್ಕೆ ಅಧಿಕರಣವಾದ ಅಗ್ನಿರೂಪದಿಂದ ಇದ್ದುಕೊಂಡಿದೆ? ಆದ್ದರಿಂದ ಆ ಅಗ್ನಿಯಲ್ಲಿ ಕರ್ಮವನ್ನು ಮಾಡಿ ಅದರ ಫಲವನ್ನು ಬಯಸುತ್ತಾರೆ ಎಂಬಿದು ಯುಕ್ತವಾಗಿದೆ.

---

1. ಮುಂದಿನ ಗ್ರಂಥಭಾಗದಲ್ಲಿ ಮನುಷ್ಯರಲ್ಲಿ ವರ್ಣವಿಭಾಗವನ್ನು ಹೇಳುವದಕ್ಕಾಗಿ ಎಂದರ್ಥ.

2. ಹಿರಣ್ಯಗರ್ಭನೇ ಬ್ರಹ್ಮವು ಎಂಬುದನ್ನು ಈ ವಿಶೇಷಣವು ಸೂಚಿಸುತ್ತದೆ. ಇದು ಪರಬ್ರಹ್ಮವೇ ಎಂದು ಭರ್ತೃಪ್ರಪಂಚರು ಹೇಳಿದ್ದರೆಂದು ಟೀಕೆ.

3. ಇಂದ್ರಾದಿರೂಪವನ್ನು ಪಡೆದು.

4. ಕ್ಷತ್ರಿಯವರ್ಣಕ್ಕೆ ಇಂದ್ರಾದಿಗಳು ಅಧಿದೇವತೆಗಳು ; ವೈಶ್ಯವರ್ಣಕ್ಕೆ ವಸುರುದ್ರಾದಿಗಳು ಅಧಿದೇವತೆಗಳು ; ಶೂದ್ರವರ್ಣಕ್ಕೆ ಪೃಥಿವಿಯು ಅಧಿದೇವತೆ.

5. ವೈಶ್ಯನಿಂದ ಎಂದರೆ ವೈಶ್ಯಾಧಿದೇವತೆಗಳಿಂದ, ಶೂದ್ರನಿಂದ ಎಂದರೆ ಶೂದ್ರಾಧಿದೇವತೆಯಿಂದ ಅಧಿಷ್ಠಿತವಾಗಿ ಎಂದರ್ಥ.

6. ಅಗ್ನಿಯಮೂಲಕ ಕರ್ಮಫಲವನ್ನು ಪಡೆದುಕೊಳ್ಳಲಿ ಎಂದು.

## ಮನುಷ್ಯಾಶ್ರಿತಕರ್ಮಫಲವು ಬ್ರಾಹ್ಮಣನ ಮೂಲಕ

(ಭಾಷ್ಯ)

೧೮೬. ಬ್ರಾಹ್ಮಣೇ ಮನುಷ್ಯೇಷು । ಮನುಷ್ಯಾಣಾಂ ಪುನಃ ಮಧ್ಯೇ ಕರ್ಮಫಲೇಚ್ಛಾಯಾಂ ನಾಗ್ನ್ಯಾದಿನಿಮಿತ್ತಕ್ರಿಯಾಪೇಕ್ಷಾ । ಕಿಂ ತರ್ಹಿ ಜಾತಿಮಾತ್ರಸ್ವರೂಪಪ್ರತಿಲಮ್ಭೇನೈವ ಪುರುಷಾರ್ಥಸಿದ್ಧಿಃ । ಯತ್ರ ತು ದೇವಾಧೀನಾ ಪುರುಷಾರ್ಥಸಿದ್ಧಿಃ ತತ್ರೈವ ಅಗ್ನ್ಯಾದಿಸಂಬದ್ಧಕ್ರಿಯಾಪೇಕ್ಷಾ । ಸ್ಮೃತೇಶ್ಚ "ಜಪ್ಯೇನೈವ ತು ಸಂಸಿಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ। ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ" (ಮನು ೨-೮೭) ಇತಿ । ಪಾರಿವ್ರಾಜ್ಯದರ್ಶನಾಚ್ಚ । ತಸ್ಮಾತ್ ಬ್ರಾಹ್ಮಣತ್ವೇ ಏವ ಲೋಕಂ ಕರ್ಮಫಲಮ್ ಇಚ್ಛನ್ತಿ [1]। ಯಸ್ಮಾತ್ ಏತಾಭ್ಯಾಂ ಹಿ ಬ್ರಾಹ್ಮಣಾಗ್ನಿರೂಪಾಭ್ಯಾಂ ಕರ್ಮಕರ್ತ್ರಧಿಕರಣರೂಪಾಭ್ಯಾಂ ಯತ್ ಸ್ರಷ್ಟೃ ಬ್ರಹ್ಮ ಸಾಕ್ಷಾದ್ ಅಭವತ್ ॥

(ಭಾಷ್ಯಾರ್ಥ)

ಬ್ರಾಹ್ಮಣನಲ್ಲಿ ಮನುಷ್ಯರಲ್ಲಿನ (ಲೋಕವನ್ನು ಇಚ್ಛಿಸುತ್ತಾರೆ). ಆದರೆ ಮನುಷ್ಯರೊಳಗಿನ ಕರ್ಮಫಲವನ್ನು (ಪಡೆಯುವ) ಇಚ್ಛೆಯಿದ್ದರೆ ಅಗ್ನಿಯೇ ಮುಂತಾದ ನಿಮಿತ್ತಗಳುಳ್ಳ ಕರ್ಮದ ಅಪೇಕ್ಷೆಯಿರುವದಿಲ್ಲ; ಮತ್ತೇನೆಂದರೆ ಜಾತಿಮಾತ್ರಸ್ವರೂಪವನ್ನು ಪಡೆದುಕೊಳ್ಳುವದರಿಂದಲೇ ಪುರುಷಾರ್ಥಸಿದ್ಧಿಯಾಗುವದು[2]. ಆದರೆ ಎಲ್ಲಿ ದೇವತೆಗಳ ಅಧೀನವಾಗಿ ಪುರುಷಾರ್ಥವು ಸಿದ್ಧಿಯಾಗ(ಬೇಕಾಗಿರುವದೋ) ಅಲ್ಲಿಯೇ ಅಗ್ನಿಯೇ ಮುಂತಾದ (ನಿಮಿತ್ತದ) ಕರ್ಮದ ಅಪೇಕ್ಷೆಯಿರುತ್ತದೆ[3]. "ಜಪ್ಯೇನೈವ ತು ಸಂಸಿಧ್ಯೇದ್ ಬ್ರಾಹ್ಮಣೋ ನಾತ್ರ ಸಂಶಯಃ। ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥" (ಮನು· ೨-೮೭) ಬ್ರಾಹ್ಮಣನು ಮತ್ತೊಂದು ಸಾಧನವನ್ನು ಮಾಡಲಿ, ಬಿಡಲಿ[4], ಜಪ್ಯದಿಂದಲೇ[5] ಸಂಸಿದ್ಧಿಯನ್ನು ಹೊಂದುತ್ತಾನೆ, ಇದರಲ್ಲಿ ಸಂಶಯ

---

1. ಮೂಲದ ಇಚ್ಛನ್ತೇ ಎಂಬುದನ್ನೇ ಅನುಕರ್ಷಣೆಮಾಡಿದರೆ ಅದೇ ಪಾಠವೂ ಇರಬಹುದು; ಇದು ಭಾಷ್ಯಕ್ಕೇ ಸೇರಿದ್ದು ಎಂದೆಣಿಸಿದರೆ ಈ ಪಾಠ.

2. ಅಭ್ಯುದಯಪ್ರಾಪ್ತಿಯೂ ಮೋಕ್ಷಪ್ರಾಪ್ತಿಯೂ ಆಗುವದು.

3. ದೇವತೆಗಳು ಕೊಡುವ ಫಲವು ಆಯಾ ದೇವತೆಗಾಗಿ ಅಗ್ನಿಯ ಮೂಲಕವಾಗಿ ಹೋಮಾದಿಗಳನ್ನು ಮಾಡಿಯೇ ಪಡೆಯತಕ್ಕದ್ದಾಗಿದೆ.

4. ಆಶ್ರಮಕರ್ಮವನ್ನು ಮಾಡಲಿ ಬಿಡಲಿ ಎಂದರ್ಥ.

5. ಜಪ, ಉಪವಾಸ, ಈಶ್ವರಾರ್ಚನೆ- ಮುಂತಾದವುಗಳಿಂದಲೇ ಎಂದರ್ಥ· ಸೂ. ಭಾ ೩-೪-೩೮.

ವಿಲ್ಲ. ಮೈತ್ರನೇ[1] ಬ್ರಾಹ್ಮಣನೆನಿಸುತ್ತಾನೆ- ಎಂಬ (ಮನುಸ್ಮೃತಿಯಿಂದಲೂ) ಪಾರಿವ್ರಾಜ್ಯವನ್ನು (ಹೇಳುವ) ಶ್ರುತಿಯಿಂದಲೂ[2] (ಬರಿಯ ಜಾತಿಯಿಂದಲೇ ಮನುಷ್ಯಾಶ್ರಯವಾದ ಕರ್ಮಫಲಪ್ರಾಪ್ತಿಯೆಂದು ಸಿದ್ಧವಾಗುತ್ತದೆ). ಆದ್ದರಿಂದ ಬ್ರಾಹ್ಮಣತ್ವದಿಂದಲೇ ಮನುಷ್ಯರಲ್ಲಿರುವ ಲೋಕವನ್ನು, ಕರ್ಮಫಲವನ್ನು, (ಪಡೆಯಲು) ಇಚ್ಛಿಸುತ್ತಾರೆ. ಏಕೆಂದರೆ ಕರ್ಮಕ್ಕೆ ಕರ್ತೃವೂ ಅಧಿಕರಣವೂ ಆಗಿರುವ ಬ್ರಾಹ್ಮಣ, ಅಗ್ನಿ- ಎಂಬ ರೂಪದಿಂದಲೇ ಸ್ರಷ್ಟೃವಾದ ಬ್ರಹ್ಮವು ನೇರಾಗಿ ಆಯಿತು[3].

## ಅಗ್ನಿಬ್ರಾಹ್ಮಣರಿಂದ ಪರಮಾತ್ಮಪ್ರಾಪ್ತಿ ಎಂಬುದು ಸರಿಯಲ್ಲ

(ಭಾಷ್ಯ)

೧೮೭. ಅತ್ರ ತು ಪರಮಾತ್ಮಲೋಕಮ್ ಅಗ್ನೌ ಬ್ರಾಹ್ಮಣೇ ಚ ಇಚ್ಛನ್ತಿ ಇತಿ ಕೇಚಿತ್ । ತದಸತ್ । ಅವಿದ್ಯಾಧಿಕಾರೇ ಕರ್ಮಾಧಿಕಾರಾರ್ಥಂ ವರ್ಣವಿಭಾಗಸ್ಯ ಪ್ರಸ್ತುತತ್ವಾತ್ । ಪರೇಣ ಚ ವಿಶೇಷಣಾತ್ । ಯದಿ ಹಿ ಅತ್ರ ಲೋಕಶಬ್ದೇನ ಪರ ಏವ ಆತ್ಮಾ ಉಚ್ಯೇತ ಪರೇಣ ವಿಶೇಷಣಮ್ ಅನರ್ಥಕಂ ಸ್ಯಾತ್ ಸ್ವಂ ಲೋಕಮ್ ಅದೃಷ್ಟ್ವಾ ಇತಿ । ಸ್ವಲೋಕವ್ಯತಿರಿಕ್ತಶ್ಚೇತ್ ಅಗ್ನ್ಯಧೀನತಯಾ ಪ್ರಾರ್ಥ್ಯಮಾನಃ ಪ್ರಕೃತೋ ಲೋಕಃ ತತಃ 'ಸ್ವಮ್' ಇತಿ ಯುಕ್ತಂ ವಿಶೇಷಣಮ್ । ಪ್ರಕೃತಪರಲೋಕನಿವೃತ್ತ್ಯರ್ಥತ್ವಾತ್ । ಸ್ವತ್ವೇನ ಚ ಅವ್ಯಭಿಚಾರಾತ್ ಪರಮಾತ್ಮಲೋಕಸ್ಯ । ಅವಿದ್ಯಾಕೃತಾನಾಂ ಚ ಸ್ವತ್ವವ್ಯಭಿಚಾರಾತ್ । ಬ್ರವೀತಿ ಚ ಕರ್ಮಕೃತಾನಾಂ ವ್ಯಭಿಚಾರಂ "ಕ್ಷೀಯತ ಏವ" ಇತಿ ॥

(ಭಾಷ್ಯಾರ್ಥ)

ಆದರೆ ಇಲ್ಲಿ "ಅಗ್ನಿಯಲ್ಲಿಯೂ ಬ್ರಾಹ್ಮಣನಲ್ಲಿಯೂ ಪರಮಾತ್ಮಲೋಕ

---

1. ಎಲ್ಲಾ ಭೂತಗಳಲ್ಲಿಯೂ ಮಿತ್ರಭಾವದಿಂದ ಇರುವವನು ಎಂದು ಟೀಕೆ. 'ಮಿತ್ರ'ದೇವತೆಯುಳ್ಳವನೇ ಎಂದು ಕೆಲವರು.

2. ಅಗ್ನಿಯ ಮೂಲಕವೇ ಪುರುಷಾರ್ಥಪ್ರಾಪ್ತಿಯಾಗಬೇಕೆಂಬ ನಿಯಮವಿದ್ದರೆ ಕರ್ಮತ್ಯಾಗರೂಪವಾದ ಪಾರಿವ್ರಾಜ್ಯವನ್ನು ಶ್ರುತಿಯಲ್ಲಿ ಹೇಳಬಾರದಾಗಿತ್ತು ಎಂದು ಭಾವ. ಇಲ್ಲಿ ಬ್ರಾಹ್ಮಣನಿಗೆ ಮಾತ್ರ ಪಾರಿವ್ರಾಜ್ಯವೆಂಬ ಅಭಿಪ್ರಾಯವನ್ನು ಭಾಷ್ಯಕ್ಕೆ ಕಲ್ಪಿಸಿ ವಾರ್ತಿಕದಲ್ಲಿ ಅದನ್ನು ಖಂಡಿಸಿದೆ. ಆದರೆ ಬ್ರಾಹ್ಮಣನಿಗೆ ವಿಶೇಷಾಧಿಕಾರವೆಂದೇ ಭಾಷ್ಯಕಾರರ ಅಭಿಪ್ರಾಯವಿರಬಹುದು.

3. ಸ್ರಷ್ಟೃವಾದ ಹಿರಣ್ಯಗರ್ಭನು ನೇರಾಗಿ ಅಗ್ನಿಯಾದನು, ಬ್ರಾಹ್ಮಣನೂ ಆದನು. ಅಗ್ನಿಯು ನಿಯಂತೃ, ಬ್ರಾಹ್ಮಣನು ನಿಯಾಮ್ಯನು. ವಿಕಾರವನ್ನು ಹೊಂದಿಯೇ ಇಂದ್ರಾದಿ ರೂಪಗಳನ್ನೂ ತದಧಿಷ್ಠಿತಕ್ಷತ್ರಿಯಾದಿರೂಪಗಳನ್ನು ಪಡೆದನು.

ವನ್ನು (ಪಡೆಯಲು) ಇಚ್ಛಿಸುತ್ತಾರೆ- ಎಂದು ಕೆಲವರು (ವ್ಯಾಖ್ಯಾನಮಾಡಿರುತ್ತಾರೆ)[1]. ಇದು ಸರಿಯಲ್ಲ. ಏಕೆಂದರೆ ಅವಿದ್ಯೆಯ ಪ್ರಕರಣದಲ್ಲಿ ಕರ್ಮಕ್ಕೆ ಅಧಿಕಾರವನ್ನು ತಿಳಿಸುವದಕ್ಕಾಗಿ ವರ್ಣಗಳ ವಿಭಾಗವನ್ನು (ತಿಳಿಸುವದಕ್ಕೆ ಇಲ್ಲಿ) ಉಪಕ್ರಮಿಸಿರುತ್ತದೆ[2]. ಮುಂದೆ ವಿಶೇಷಣವಿರುವದರಿಂದಲೂ ಈ ಮತವು ಸರಿಯಲ್ಲ. (ಇದರ ವಿವರ): ಇಲ್ಲಿ ಲೋಕವೆಂಬ ಮಾತಿನಿಂದ ಪರಮಾತ್ಮನನ್ನೇ ಹೇಳಿದ್ದರೆ ಮುಂದೆ 'ಸ್ವಲೋಕವನ್ನು ಕಾಣದೆ' (ಎಂದು ಹಾಕಿರುವ) ವಿಶೇಷಣವು ವ್ಯರ್ಥವಾಗುವದು. ಅಗ್ನಿಯ ಅಧೀನವೆಂದು ಬಯಸುವ ಪ್ರಕೃತಲೋಕವು ಸ್ವಲೋಕಕ್ಕಿಂತ ಬೇರೆಯಾದರೆ, ಆ (ಪಕ್ಷದಲ್ಲಿ) 'ಸ್ವ' ಎಂಬ ವಿಶೇಷಣವು ಸರಿಯಾಗುತ್ತದೆ ; ಏಕೆಂದರೆ (ಇಲ್ಲಿ) ಪ್ರಕೃತವಾಗಿರುವ ಇನ್ನೊಂದು ಲೋಕವನ್ನು ಅಲ್ಲಗಳೆಯುವದಕ್ಕೆ (ಆ ವಿಶೇಷಣವು ಅಲ್ಲಿ ಬೇಕಾಗುತ್ತದೆ). ಏಕೆಂದರೆ **ಪರಮಾತ್ಮಲೋಕವು ತನ್ನದೆಂಬುದು ಯಾವಾಗಲೂ ಬೇರ್ಪಡುವದಿಲ್ಲ, ಅವಿದ್ಯಾಕೃತವಾಗಿರುವ (ಲೋಕಗಳು) ತನ್ನವೆಂಬುದು ಬೇರ್ಪಡುತ್ತಿರುತ್ತದೆ[3].** ಕರ್ಮದಿಂದಾದ (ಲೋಕಗಳು) ಬೇರ್ಪಡುವವೆಂದು "ಕ್ಷಯವೇ ಆಗುತ್ತದೆ" ಎಂದು (ಶ್ರುತಿಯು) ಹೇಳಿಯೂ ಇದೆ[4].

## ಕರ್ಮಫಲವು ಅನಿತ್ಯ

(ಭಾಷ್ಯ)

೧೮೮. ಬ್ರಹ್ಮಣಾ ಸೃಷ್ಟಾ ವರ್ಣಾಃ ಕರ್ಮಾರ್ಥಮ್ । ತಚ್ಚ ಕರ್ಮ ಧರ್ಮಾಖ್ಯಂ ಸರ್ವಾಣೇವ ಕರ್ತವ್ಯತಯಾ ನಿಯನ್ತೃ ಪುರುಷಾರ್ಥಸಾಧನಂ ಚ । ತಸ್ಮಾತ್ ತೇನೈವ ಚೇತ್ ಕರ್ಮಣಾ ಸ್ವೋ ಲೋಕಃ ಪರಮಾತ್ಮಾಖ್ಯಃ ಅವಿದಿತೋಽಪಿ ಪ್ರಾಪ್ಯತೇ, ಕಿಂ ತಸ್ಯೈವ ಪದನೀಯತ್ವೇನ ಕ್ರಿಯತೇ ಇತಿ ?

---

1. "ಅಗ್ನಿಯಲ್ಲಿ ಹೋಮಮಾಡುವದರಿಂದಲೂ ಬ್ರಾಹ್ಮಣನಿಗೆ ದಾನಮಾಡುವದರಿಂದಲೂ ಪರಮಾತ್ಮನೆಂಬ ಲೋಕವನ್ನು ಪಡೆಯಲಿಚ್ಛಿಸುತ್ತಾರೆ" ಎಂದು ಭರ್ತೃಪ್ರಪಂಚರ ವ್ಯಾಖ್ಯಾನ.

2. ಇದನ್ನು ಭರ್ತೃಪ್ರಪಂಚರೂ ಒಪ್ಪಬೇಕು. ಏಕೆಂದರೆ "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್" ಎಂಬುದು ಅವಿದ್ಯಾಸೂತ್ರವೆಂದೂ "ಅಥ ಯೋಽನ್ಯಾಮ್" ಎಂಬುದು ಅದರ ವ್ಯಾಖ್ಯಾನವೆಂದೂ ಆ ವೃತ್ತಿಕಾರರು ಬರೆದಿರುತ್ತಾರೆ. ವಾರ್ತಿಕ ೧೬೪೬ನ್ನು ನೋಡಿ.

3. ಸ್ವ ಎಂದರೆ ತನ್ನ ಸ್ವರೂಪವು ; ಅಗ್ನ್ಯಾದಿಗಳ ಮೂಲಕವಾಗಿರುವ ಲೋಕವು ಆ ಅರ್ಥದಲ್ಲಿ ತನ್ನದಲ್ಲ. ಆದ್ದರಿಂದ ಅಲ್ಲಿ 'ಸ್ವಮ್' ಎಂಬ ವಿಶೇಷಣವನ್ನು ಹಾಕಿರುವದರಿಂದ ಇಲ್ಲಿ ಹೇಳಿರುವದು ಅನಾತ್ಮಲೋಕವೇ, ಪರಮಾತ್ಮಲೋಕಕ್ಕಿಂತ ಅನ್ಯವೇ ಎಂದಾಯಿತು.

4. ಆದ್ದರಿಂದ ಕರ್ಮಫಲವನ್ನು ಎಂಬರ್ಥವೇ ಸರಿ.

ಅತ ಆಹ । ಅಥ ಇತಿ ಪೂರ್ವಪಕ್ಷನಿವೃತ್ತ್ಯರ್ಥಃ । ಯಃ ಕಶ್ಚಿತ್ ಹ ವೈ ಅಸ್ಮಾತ್ ಸಾಂಸಾರಿಕಾತ್ ಪಿಣ್ಡಗ್ರಹಣಲಕ್ಷಣಾತ್ ಅವಿದ್ಯಾಕಾಮಕರ್ಮ ಹೇತುಕಾತ್ ಅಗ್ನ್ಯಧೀನಕರ್ಮಾಭಿಮಾನತಯಾ ವಾ ಬ್ರಾಹ್ಮಣಜಾತಿಮಾತ್ರ ಕರ್ಮಾಭಿಮಾನತಯಾ ವಾ ಆಗನ್ತುಕಾತ್ ಅಸ್ವಭೂತಾತ್ ಲೋಕಾತ್ ಸ್ವಂ ಲೋಕಮ್ ಆತ್ಮಾಖ್ಯಮ್ ಆತ್ಮತ್ವೇನ ಅವ್ಯಭಿಚಾರಿತ್ವಾತ್ ಅದೃಷ್ಟ್ವಾ 'ಅಹಂ ಬ್ರಹ್ಮಾಸ್ಮಿ' ಇತಿ, ಪ್ರೈತಿ ಮ್ರಿಯತೇ । ಸಃ ಯದ್ಯಪಿ ಸ್ವೋ ಲೋಕಃ, ಅವಿದಿತಃ ಅವಿದ್ಯಯಾ ವ್ಯವಹಿತಃ, ಅಸ್ವ ಇವ ಅಜ್ಞಾತಃ, ಏನಂ ಸಂಖ್ಯಾ ಪೂರಣ ಇವ ಲೌಕಿಕಃ, ಆತ್ಮಾನಂ ನ ಭುನಕ್ತಿ ನ ಪಾಲಯತಿ, ಶೋಕಮೋಹ ಭಯಾದಿದೋಷಾಪನಯೇನ । ಯಥಾ ಚ ಲೋಕೇ ವೇದೋಽನನೂಕ್ತಃ ಅನಧೀತಃ ಕರ್ಮಾದ್ಯವಬೋಧಕತ್ವೇನ ನ ಭುನಕ್ತಿ, ಅನ್ಯದ್ವಾ ಲೌಕಿಕಂ ಕೃಷ್ಯಾದಿಕರ್ಮ ಅಕೃತಂ ಸ್ವಾತ್ಮನಾ ಅನಭಿವ್ಯಞ್ಜಿತಮ್ ಆತ್ಮೀಯಫಲ ಪ್ರದಾನೇನ ನ ಭುನಕ್ತಿ । ಏವಮ್ ಆತ್ಮಾ ಸ್ವೋ ಲೋಕಃ ಸ್ವೇನೈವ ನಿತ್ಯಾತ್ಮ ಸ್ವರೂಪೇಣ ಅನಭಿವ್ಯಞ್ಜಿತಃ ಅವಿದ್ಯಾದಿಪ್ರಹಾಣೇನ ನ ಭುನಕ್ತ್ಯೇವ । ನನು ಕಿಂ ಸ್ವಲೋಕದರ್ಶನನಿಮಿತ್ತಪರಿಪಾಲನೇನ ? ಕರ್ಮಣಃ ಫಲಪ್ರಾಪ್ತಿ ಧ್ರೌವ್ಯಾತ್ ಇಷ್ಟಫಲನಿಮಿತ್ತಸ್ಯ ಚ ಕರ್ಮಣೋ ಬಾಹುಲ್ಯಾತ್ ತನ್ನಿಮಿತ್ತ ಪಾಲನಮ್ ಅಕ್ಷಯಃ ಭವಿಷ್ಯತಿ । ತನ್ನ । ಕೃತಸ್ಯ ಕ್ಷಯವತ್ತ್ವಾತ್ ಇತ್ಯೇತ ದಾಹ । ಯದಿಹ ವೈ ಸಂಸಾರೇ ಅದ್ಭುತವತ್ ಕಶ್ಚಿತ್ ಮಹಾತ್ಮಾ ಅಪಿ ಅನೇವಂವಿತ್ ಸ್ವಂ ಲೋಕಂ ಯಥೋಕ್ತೇನ ವಿಧಿನಾ ಅವಿದ್ವಾನ್ ಮಹತ್ ಬಹು ಅಶ್ವಮೇಧಾದಿ ಪುಣ್ಯಂ ಕರ್ಮ ಇಷ್ಟಫಲಮೇವ ನೈರನ್ತರ್ಯೇಣ ಕರೋತಿ ಅನೇನೈವ ಆನನ್ತ್ಯಂ ಮಮ ಭವಿಷ್ಯತೀತಿ । ತತ್ ಕರ್ಮ ಹ ಅಸ್ಯ ಅವಿದ್ಯಾವತಃ । ಅವಿದ್ಯಾಜನಿತಕಾಮಹೇತುತ್ವಾತ್ ಸ್ವಪ್ನದರ್ಶನವಿಭ್ರಮೋ ದ್ಭೂತವಿಭೂತಿವತ್ ಅನ್ತತಃ ಅನ್ತೇ ಫಲೋಪಭೋಗಸ್ಯ ಕ್ಷೀಯತ ಏವ । ತತ್ಕಾರಣಯೋಃ ಅವಿದ್ಯಾಕಾಮಯೋಶ್ಚಲತ್ವಾತ್ ಕೃತಕ್ಷಯಧ್ರೌವ್ಯೋಪ ಪತ್ತೇಃ । ತಸ್ಮಾತ್ ನ ಪುಣ್ಯಕರ್ಮಫಲಪಾಲನಾನನ್ತ್ಯಾಶಾ ಅಸ್ತ್ಯೇವ ॥

(ಭಾಷ್ಯಾರ್ಥ)

ಬ್ರಹ್ಮದಿಂದ ವರ್ಣಗಳು ಕರ್ಮಕ್ಕಾಗಿ ಸೃಷ್ಟವಾಗಿರುತ್ತವೆ. ಆ ಧರ್ಮ ವೆಂಬ ಕರ್ಮವು (ತನ್ನನ್ನು) ಮಾಡಬೇಕೆಂದು ಎಲ್ಲರನ್ನೂ ಕಟ್ಟುಮಾಡ ತಕ್ಕದ್ದೂ[1] ಪುರುಷಾರ್ಥಸಾಧನವೂ ಆಗಿರುತ್ತದೆ. ಆದ್ದರಿಂದ ಆ ಕರ್ಮದಿಂದಲೇ

---

1. ಎಲ್ಲಾ ವರ್ಣದವರನ್ನೂ ಅನುಷ್ಠಾನದಲ್ಲಿ ತೊಡಗಿಸತಕ್ಕದ್ದು; ವರ್ಣಾಭಿಮಾನ ವುಳ್ಳವರೆಲ್ಲರೂ ಇದನ್ನು ಮಾಡಿ ಇದನ್ನು ಪಡೆದುಕೊಳ್ಳಬೇಕು ಎಂದು ತಪ್ಪದೆ ಪ್ರವರ್ತಿಸು ತ್ತಾರೆ ಎಂದರ್ಥ.

ಪರಮಾತ್ಮನೆಂಬ ಸ್ವಲೋಕವು- (ಅದನ್ನು) ಅರಿತುಕೊಳ್ಳದಿದ್ದರೂ- ಸಿಕ್ಕುವ ದಾದರೆ ಆ (ಲೋಕವೇ) ಪವಸೇಯುವು ಎಂಬುದರಿಂದ ಆಗತಕ್ಕದ್ದೇನು?- ಎಂದರೆ ಅದಕ್ಕೆ (ಶ್ರುತಿ) ಹೇಳುತ್ತಿದೆ.

'ಅಥ' (ಇನ್ನು) ಎಂಬ (ಮಾತು ಈ) ಪೂರ್ವಪಕ್ಷವನ್ನು ತೆಗೆದು ಹಾಕುವದಕ್ಕೆ ಬಂದಿದೆ.[1] **ಯಾವನೇ ಆಗಲಿ, ಈ ಲೋಕದಿಂದ ಎಂದರೆ ಸಂಸಾರಕ್ಕೆ ಸೇರಿರುವ, ಶರೀರಗ್ರಹಣರೂಪವಾದ, ಅವಿದ್ಯಾಕಾಮ ಕರ್ಮಗಳೆಂಬ ಹೇತುಗಳುಳ್ಳ, ಅಗ್ನಿಗೆ ಅಧೀನವಾಗಿರುವ ಕರ್ಮದ ಅಭಿಮಾನದಿಂದಲಾಗಲಿ, ಬ್ರಾಹ್ಮಣಜಾತಿಮಾತ್ರದ ಕರ್ಮದ ಅಭಿಮಾನದಿಂದಲಾಗಲಿ, ನಡುವೆ ಬಂದಿರುವ, ತನ್ನ ಸ್ವರೂಪವಲ್ಲದ[2] (ಈ) ಲೋಕವನ್ನು ಬಿಟ್ಟು ತಾನೆಂಬುದು ಎಂದಿಗೂ ಬೇರ್ಪಡದಿರುವದ ರಿಂದ ಆತ್ಮನೆಂಬ ಹೆಸರುಳ್ಳ ಸ್ವಲೋಕವನ್ನು 'ನಾನು ಬ್ರಹ್ಮನಾಗಿರು ವೆನು' ಎಂದು ಕಂಡುಕೊಳ್ಳದೆ ಹೋಗುವನೋ ಸಾಯುವನೋ[3] (ಅವನಿಗೆ) ಅದು ನಿಜವಾಗಿ ಸ್ವಲೋಕವೇ ಆಗಿದ್ದರೂ ಅವಿದಿತ ವಾಗಿದ್ದರೆ ಅವಿದ್ಯೆಯ ಮರೆಯುಳ್ಳದ್ದಾದರೆ ತನ್ನದಲ್ಲವೊ ಎಂಬಂತೆ ತಿಳಿದುಕೊಳ್ಳದಿರುವ (ಆ) ತನ್ನ ಸ್ವರೂಪವು, ಇವನನ್ನು ಸಂಖ್ಯಾ ಪೂರಣನಾದ ಲೌಕಿಕಾತ್ಮನಂತೆ[4] ಕಾಪಾಡುವದಿಲ್ಲ, ಶೋಕಮೋಹ ಭಯಾದಿದೋಷಗಳನ್ನು ಕಳೆದು ರಕ್ಷಿಸುವದಿಲ್ಲ.** ಮತ್ತೆ ಹೇಗೆ ಲೋಕದಲ್ಲಿ ಅನನೂಕ್ತವಾದ, ಅಧ್ಯಯನಮಾಡದಿರುವ, ವೇದವು ಕರ್ಮಾದಿಗಳನ್ನು ತಿಳಿಸಿ ಕೊಟ್ಟು ಕಾಪಾಡುವದಿಲ್ಲವೋ, ಅಥವಾ ಕೃಷಿಯೇ ಮುಂತಾದ ಲೌಕಿಕಕರ್ಮವು ಮಾಡದೆ ಇರುವಾಗ, ತನ್ನರೂಪದಿಂದ ಹೊರತೋರಿಸಲ್ಪಡದಿರುವಾಗ, ತನ್ನ ಫಲವನ್ನು ಕೊಟ್ಟು ಕಾಪಾಡುವದಿಲ್ಲವೋ ಹಾಗೆಯೇ ಸ್ವಲೋಕವಾದ ಆತ್ಮನು,

---

1. ಕರ್ಮಕ್ಕೆ ಅಗ್ನಿಯೇ ಸ್ವತಂತ್ರ, ಅಗ್ನಿಗೆ ಕರ್ಮವೇ ನಿಯಂತ್ರ, ಅಗ್ನಿಯೇ ಕರ್ಮಿಗೆ ಬ್ರಹ್ಮಪ್ರಾಪ್ತಿಯನ್ನು ಮಾಡಿಸುವನು, ಬ್ರಹ್ಮಜ್ಞಾನವೇನೂ ಬೇಕಿಲ್ಲ - ಎಂಬ ಪೂರ್ವಪಕ್ಷವನ್ನು ತಿರಸ್ಕರಿಸುವದಕ್ಕೆ ಅಥಶಬ್ದವು ಬಂದಿದೆ ಎಂದು ಭರ್ತೃಪ್ರಪಂಚ ವ್ಯಾಖ್ಯಾನ. ಅದನ್ನೂ ವಾರ್ತಿಕದಲ್ಲಿ ಒಪ್ಪಿದೆ. ಭರ್ತೃಪ್ರಪಂಚರು ಒಪ್ಪಿರುವ ಜ್ಞಾನಕರ್ಮ ಸಮುಚ್ಚಯವನ್ನು ಒಪ್ಪಬೇಕಾದ ಅವಶ್ಯಕತೆಯೇನೂ ಇದರಿಂದ ಉಂಟಾಗುವದಿಲ್ಲ.

2. ಹಿರಣ್ಯಗರ್ಭಪ್ರಾಪ್ತಿಯವರೆಗೂ ಪಡೆಯುವ ಯಾವ ಶರೀರವೂ ಸ್ವಲೋಕ ವಲ್ಲ.

3. ಆತ್ಮಜ್ಞಾನವಿಲ್ಲದ್ದರಿಂದ ಸಾಯುತ್ತಿರುವನೋ ಎಂದರ್ಥ.

4. ದಶಮನ ಕಥೆಯಲ್ಲಿ ಹತ್ತನೆಯವನೇ ತಾನಾಗಿದ್ದರೂ 'ಹತ್ತನೆಯವನು ನಾನು' ಎಂಬ ಜ್ಞಾನವಿಲ್ಲದ್ದರಿಂದ ಹೇಗೆ ಶೋಕಾದಿಗಳು ಹೋಗಲಿಲ್ಲವೋ ಹಾಗೆ ಎಂದರ್ಥ. ತನ್ನ ಸ್ವರೂಪವು ಪ್ರಾಪ್ತವೇ ಆಗಿರುವದರಿಂದ ಜ್ಞಾನವೇತಕ್ಕೆ ? -ಎಂಬ ಶಂಕೆಗೆ ಪರಿಹಾರವಿದು,

ತನ್ನದೇ ಆಗಿರುವ ನಿತ್ಯಾತ್ಮಸ್ವರೂಪದಿಂದ ಹೊರತೋರಿಸಲ್ಪಡದೆ ಇದ್ದರೆ,[1] ಅವಿದ್ಯಾದಿಗಳನ್ನು ನಾಶಪಡಿಸಿ ಕಾಪಾಡುವದೇ ಇಲ್ಲ[2].

(ಆಶಂಕೆ):– ಸ್ವಲೋಕವನ್ನು ಕಂಡುಕೊಂಡದ್ದರ ನಿಮಿತ್ತದಿಂದಾಗುವ ರಕ್ಷಣೆಯಿಂದ[3] (ಆಗಬೇಕಾದದ್ದು) ಏನು? ಕರ್ಮಕ್ಕೆ ಫಲವು ದೊರಕಿಯೇ ತೀರುವದರಿಂದಲೂ ಇಷ್ಟಫಲಕ್ಕೆ ನಿಮಿತ್ತವಾಗಿರುವ ಕರ್ಮವು ಬೇಕಾದಷ್ಟು ಇರುವದರಿಂದಲೂ ಅದರಿಂದಾಗುವ ರಕ್ಷಣೆಯೇ ಅಕ್ಷಯವಾಗಿರಬಹುದಲ್ಲ!

(ಪರಿಹಾರ) :– ಇದು ಸರಿಯಲ್ಲ. ಏಕೆಂದರೆ ಮಾಡಿದ (ಕರ್ಮ)ಕ್ಕೆ ಕ್ಷಯವುಂಟು– ಎಂಬಿದನ್ನು ಶ್ರುತಿ ಹೇಳುತ್ತಿದೆ: ಈ ಸಂಸಾರದಲ್ಲಿ ಅದ್ಭುತದ ಹಾಗೆ[4] ಯಾವನೋ ಒಬ್ಬ ಮಹಾತ್ಮನು[5] ಹೀಗೆಂದು ತಿಳಿದುಕೊಳ್ಳುವನಾದರೆ ಸ್ವಲೋಕವನ್ನು ಮೇಲೆ ಹೇಳಿರುವ ಪ್ರಕಾರದಿಂದ ಹೆಚ್ಚಿನ ದೊಡ್ಡದಾದ ಅಶ್ವಮೇಧವೇ ಮುಂತಾದ ಪುಣ್ಯಕರ್ಮವನ್ನು ಇದರಿಂದಲೇ ನನಗೆ ಆನಂತ್ಯವುಂಟಾಗುವದು ಎಂದು ಇಷ್ಟಫಲವುಳ್ಳ (ಕರ್ಮವನ್ನೇ) ಮಾಡಿರುತ್ತಾನಾದರೂ ಅವಿದ್ಯಾವಂತನಾದ ಇವನ ಆ ಕರ್ಮವು ಅವಿದ್ಯೆಯಿಂದಾದ ಕಾಮವೆಂಬ ನಿಮಿತ್ತದಿಂದಾಗಿರುವದರಿಂದ ಸ್ವಪ್ನದರ್ಶನಭ್ರಾಂತಿಯಿಂದುಂಟಾಗಿರುವ ವಿಭೂತಿಯಂತೆ[6] ಕೊನೆಯಲ್ಲಿ ಫಲೋಪಭೋಗವು ಮುಗಿದ ತರುವಾಯ ಕ್ಷಯವೇ ಆಗುತ್ತದೆ. ಏಕೆಂದರೆ ತನಗೆ ಕಾರಣವಾಗಿರುವ ಅವಿದ್ಯಾಕಾಮಗಳು ಚಂಚಲ

---

1. ಜ್ಞಾನದಿಂದ ತಿಳಿಯಬರದೆ ಇದ್ದರೆ ಎಂದರ್ಥ.

2. ವೇದಕ್ಕೆ ಕರ್ಮಪ್ರಕಾಶನಶಕ್ತಿಯಿದ್ದರೂ ಅದನ್ನು ಅಧ್ಯಯನಮಾಡಿದವನಿಗೇ ಕರ್ಮಸ್ವರೂಪವು ತಿಳಿದುಬರುತ್ತದೆ; ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯಿದ್ದರೂ ಅದನ್ನು ಅನುಷ್ಠಾನಮಾಡಿದವನಿಗೇ ಆ ಫಲವಾಗುತ್ತದೆ. ಇದರಂತೆ ಆತ್ಮನು ನಿತ್ಯಪ್ರಾಪ್ತನೇ ಆಗಿದ್ದರೂ ಅವನನ್ನು ಅರಿತುಕೊಂಡರೆ ಮಾತ್ರ ಅವಿದ್ಯಾವಿನಾಶಕ್ಕೆ ಕಾರಣನಾಗುತ್ತಾನೆ, ಇಲ್ಲದಿದ್ದರೆ ಇಲ್ಲ.

3. ಅವಿದ್ಯಾದಿಗಳ ನಾಶದಿಂದ ಎಂದರ್ಥ.

4. "ಹೀಗೆ ತಿಳಿದುಕೊಳ್ಳುವವನು" ಎಂಬುದರಲ್ಲಿ ವಿಶೇಷವೇನು?– ಎಂಬ ಶಂಕೆಗೆ ಪರಿಹಾರ. ಹ, ವೈ– ಎಂಬ ನಿಪಾತಗಳು ಹೀಗೆ ತಿಳಿದುಕೊಳ್ಳುವವನೇ ಅದ್ಭುತಸ್ವರೂಪನು, ಆಶ್ಚರ್ಯಭೂತನು– ಎಂದು ತಿಳಿಸುತ್ತವೆ ಎಂದು ಭಾವ. ಕ. ಭಾ. ೧-೨-೭ (ಭಾ.ಭಾ. ೫೬) ಗೀ.ಭಾ. ೨-೨೯ (ಭಾ.ಭಾ. ೫೮). ಅಥವಾ ಯದಿ ಹ ವೈ ಎಂಬಲ್ಲಿರುವ ನಿಪಾತಗಳು. ಮಹತ್ಪುಣ್ಯವನ್ನು ಮಾಡುವವನು ಅದ್ಭುತದಂತೆ ಇರುವನು ಎಂದು ತಿಳಿಸುತ್ತವೆ ಎಂದೂ ಭಾಷ್ಯಕ್ಕೆ ಅರ್ಥವನ್ನು ಮಾಡಬಹುದು.

5. ಮಹಾತ್ಮಾ ಎಂಬುದರ ಮುಂದೆ ಇರುವ ಅಪಿಶಬ್ದವು ಮುಂದಿರುವ ಕರೋತಿ ಎಂಬುದರೊಡನೆ ಅನ್ವಯಿಸತಕ್ಕದ್ದು.

6. ಸ್ವಪ್ನದಲ್ಲಿ ಕಂಡ ತನ್ನ ಐಶ್ವರ್ಯವು ಎಚ್ಚರವಾಗುತ್ತಲೂ ಇಲ್ಲವಾಗುವಂತೆ.

ವಾಗಿರುವವರಿಂದ ಮಾಡಿದ (ಕರ್ಮವು) ನಾಶವಾಗಿಯೇತೀರುವದೆಂಬುದು ಯುಕ್ತವಾಗಿರುತ್ತದೆ. ಆದ್ದರಿಂದ ಪುಣ್ಯಕರ್ಮದ ಫಲದಿಂದಾದ ರಕ್ಷಣೆಯು ಅನಂತವಾಗಿರುವದೆಂಬ ಆಶೆಯಿಲ್ಲವೇ ಇಲ್ಲ.

## ಆತ್ಮಜ್ಞನಿಗೆ ಕರ್ಮಕ್ಷಯವಿಲ್ಲ

(ಭಾಷ್ಯ)

೧೪೯. ಅತಃ ಆತ್ಮಾನಮೇವ ಸ್ವಂ ಲೋಕಮ್ । ಆತ್ಮಾನಮ್ ಇತಿ ಸ್ವಂ ಲೋಕಮ್ ಇತ್ಯಸ್ಮಿನ್ ಅರ್ಥೇ। ಸ್ವಂ ಲೋಕಮ್ ಇತಿ ಪ್ರಕೃತತ್ವಾತ್। ಇಹ ಚ ಸ್ವಶಬ್ದಸ್ಯ ಅಪ್ರಯೋಗಾತ್ । ಉಪಾಸೀತ । ಸ ಯ ಆತ್ಮಾನಮೇವ ಲೋಕಮ್ ಉಪಾಸ್ತೇ। ತಸ್ಯ ಕಿಮ್ ಇತಿ ? ಉಚ್ಯತೇ। ನ ಹಾಸ್ಯ ಕರ್ಮ ಕ್ಷೀಯತೇ । ಕರ್ಮಾಭಾವಾದೇವ ಇತಿ ನಿತ್ಯಾನುವಾದಃ। ಯಥಾ ಅವಿದುಷಃ ಕರ್ಮಕ್ಷಯಲಕ್ಷಣಂ ಸಂಸಾರದುಃಖಂ ಸನ್ತತಮೇವ, ನ ತಥಾ ತದಸ್ಯ ವಿದ್ಯತೇ ಇತ್ಯರ್ಥಃ। "ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ" (ಮೋ. ಧ. ೧೭೮-೨) ಇತಿ ಯದ್ವತ್ ॥

(ಭಾಷ್ಯಾರ್ಥ)

ಆದ್ದರಿಂದ ಆತ್ಮನೆಂಬ ಸ್ವಲೋಕವನ್ನೇ- (ಇಲ್ಲಿ) ಆತ್ಮನೆಂಬ (ಲೋಕ) ವನ್ನು ಎಂಬ (ಮಾತನ್ನು) ಸ್ವಲೋಕವನ್ನು ಎಂಬರ್ಥದಲ್ಲಿ (ಪ್ರಯೋಗಿಸಿದೆ ಎಂದು ತಿಳಿಯಬೇಕು). ಏಕೆಂದರೆ ಸ್ವಲೋಕವನ್ನು ಎಂದೇ ಉಪಕ್ರಮ ವಾಗಿರುತ್ತದೆ ; ಇಲ್ಲಿ ಸ್ವಶಬ್ದವನ್ನು ಪ್ರಯೋಗಿಸಿಯೂ ಇಲ್ಲ. (ಆದ್ದರಿಂದ ಸ್ವಲೋಕವನ್ನೇ)- ಉಪಾಸನೆಮಾಡಬೇಕು,[1] ಯಾವನು ಆತ್ಮನೆಂಬ ಲೋಕ ವನ್ನೇ ಉಪಾಸನೆಮಾಡುತ್ತಾನೋ- ಅವನಿಗೆ ಏನು ? ಎಂದರೆ (ಶ್ರುತಿ) ಹೇಳು ತ್ತದೆ. ಅವನ ಕರ್ಮವು ಕ್ಷಯವಾಗುವದಿಲ್ಲ. ಏಕೆಂದರೆ (ಅವನಿಗೆ) ಕರ್ಮ ವಿರುವದೇ ಇಲ್ಲವಾದ್ದರಿಂದ ಎಂದು ನಿತ್ಯಾನುವಾದ(ವಾಗಿ ಹೇಳಿದ್ದಿದು)[2]. **ಹೇಗೆ ಅಜ್ಞಾನಿಗೆ ಕರ್ಮಕ್ಷಯರೂಪವಾದ ಸಂಸಾರದುಃಖವು ಸಂತತವಾಗಿ ಯೇ ಇರುತ್ತದೆಯೋ ಹಾಗೆ ಅದು ಈ ಜ್ಞಾನಿಗ ಇರುವದಿಲ್ಲ**

1. ಇಲ್ಲಿ ಅನಾತ್ಮಲೋಕವನ್ನು ವ್ಯಾವೃತ್ತಿಮಾಡುವದಕ್ಕಾಗಿಯೇ ಆತ್ಮಲೋಕ ವನ್ನು ಉಪಾಸನೆಮಾಡಬೇಕು ಎಂದು ಹೇಳಿದೆ ಎಂದು ಭಾ.ಭಾ. ೧೪೭ರಲ್ಲಿ ತಿಳಿಸಿಯೇ ಇದೆ.

2. ಜ್ಞಾನಿಗೆ ಕರ್ಮವಿಲ್ಲದ್ದರಿಂದ ಅದರ ನಾಶದ ಶಂಕೆಯೇ ಇಲ್ಲವೆಂದು ತಿಳಿದಿರು ವದನ್ನೇ ಹೇಳಿದ್ದು.

ಎಂದರ್ಥ. "ಮಿಥಿಲೆಯೇ ಹೊತ್ತಿಕೊಂಡುರಿದರೂ ನನ್ನದೇನೂ ಸುಡುವದಿಲ್ಲ" (ಮೋ. ಧ. ೧೭೮-೨) ಎಂದು ಹೇಗೆ (ಪ್ರಯೋಗಿಸಿದೆಯೋ) ಹಾಗೆಯೇ (ಇದು).[1]

## ಚರ್ಚೆ : ಸ್ವಲೋಕವೆಂದರೆ ಯಾವದು ?
## ಆತ್ಮಜ್ಞಾನಿಗೂ ಕರ್ಮವಿದೆಯೆಂಬ ಭರ್ತೃಪ್ರಪಂಚರ ಮತ

(ಭಾಷ್ಯ)

೧೯೦. ಸ್ವಾತ್ಮಲೋಕೋಪಾಸಕಸ್ಯ ವಿದುಷಃ ವಿದ್ಯಾಸಂಯೋಗಾತ್ ಕರ್ಮೈವ ನ ಕ್ಷೀಯತೇ ಇತ್ಯಪರೇ ವರ್ಣಯನ್ತಿ । ಲೋಕಶಬ್ದಾರ್ಥಂ ಚ ಕರ್ಮಸಮವಾಯಿನಂ ದ್ವಿಧಾ ಪರಿಕಲ್ಪಯನ್ತಿ ಕಿಲ । ಏಕೋ ವ್ಯಾಕೃತಾವಸ್ಥಃ ಕರ್ಮಾಶ್ರಯೋ ಲೋಕಃ ಹಿರಣ್ಯಗರ್ಭಾಖ್ಯಃ । ತಂ ಕರ್ಮಸಮವಾಯಿನಂ ಲೋಕಂ ವ್ಯಾಕೃತಂ ಪರಿಚ್ಛಿನ್ನಂ ಯ ಉಪಾಸ್ತೇ ತಸ್ಯ ಕಿಲ ಪರಿಚ್ಛಿನ್ನ ಕರ್ಮಾತ್ಮದರ್ಶಿನಃ ಕರ್ಮ ಕ್ಷೀಯತೇ । ತಮೇವ ಕರ್ಮಸಮವಾಯಿನಂ ಲೋಕಮ್ ಅವ್ಯಾಕೃತಾವಸ್ಥಂ ಕಾರಣರೂಪಮ್ ಆಪಾದ್ಯ ಯಸ್ತು ಉಪಾಸ್ತೇ ತಸ್ಯ ಅಪರಿಚ್ಛಿನ್ನಕರ್ಮಾತ್ಮದರ್ಶಿತ್ವಾತ್ ತಸ್ಯ ಕರ್ಮ ನ ಕ್ಷೀಯತ ಇತಿ ॥

(ಭಾಷ್ಯಾರ್ಥ)

ಸ್ವಾತ್ಮಲೋಕವನ್ನು ಉಪಾಸನೆಮಾಡುವ ಜ್ಞಾನಿಗೆ ವಿದ್ಯಾಸಮುಚ್ಚಯ ದಿಂದ ಕರ್ಮವೇ ನಾಶವಾಗುವದಿಲ್ಲ ಎಂದು **ಕೆಲವರು**[2] ವಿವರಿಸಿರುತ್ತಾರೆ. ಲೋಕವೆಂಬ ಶಬ್ದದ ಅರ್ಥವು ಕರ್ಮಸಂಬದ್ಧವಾಗಿದ್ದು ಎರಡು ಬಗೆಯಾಗಿದೆ ಎಂದು (ಅವರು) ಕಲ್ಪಿಸಿಕೊಂಡಿರುತ್ತಾರೆ. ಒಂದು ಕರ್ಮಾಶ್ರಯವಾದ ಲೋಕವು ವ್ಯಾಕೃತಾವಸ್ಥೆಯಲ್ಲಿರತಕ್ಕದ್ದು, ಇದಕ್ಕೆ **ಹಿರಣ್ಯಗರ್ಭ**ನೆಂದು ಹೆಸರು. ವ್ಯಾಕೃತವೂ ಪರಿಚ್ಛಿನ್ನವೂ ಆಗಿರುವ ಕರ್ಮಸಂಬದ್ಧವಾದ ಆ ಲೋಕವನ್ನು ಯಾವನು ಉಪಾಸನೆಮಾಡುತ್ತಾನೋ ಆ ಪರಿಚ್ಛಿನ್ನವಾದ ಕರ್ಮಾತ್ಮನನ್ನು ಉಪಾಸನೆಮಾಡುವ ಅವನ ಕರ್ಮವು ಕ್ಷಯವಾಗುತ್ತದೆ ಯಂತೆ.[3] (ಆದರೆ) ಅದೇ ಕರ್ಮಸಂಬದ್ಧವಾದ ಲೋಕವನ್ನು ಅವ್ಯಾಕೃತಾವಸ್ಥೆ

1. ಇಲ್ಲಿ ಜನಕರಾಜನಿಗೆ ತನ್ನದಾಗಿ ಒಂದು ಇದೆಯೆಂದೂ ಅದು ಸುಡುವದಿಲ್ಲ ವೆಂದೂ ವಾಕ್ಯಾರ್ಥವಲ್ಲ ; ಇದರಂತೆ ಜ್ಞಾನಿಗೆ ಕರ್ಮವಿದೆಯೆಂದೂ ಅದು ನಾಶವಾಗು ವದಿಲ್ಲವೆಂದೂ ವಾಕ್ಯಾರ್ಥವಲ್ಲ.

2. ಭರ್ತೃಪ್ರಪಂಚರು. ಇವರ ಮತವನ್ನು ವಿಸ್ತಾರವಾಗಿ ವಾರ್ತಿಕದಲ್ಲಿ ಖಂಡಿಸಿದೆ.

3. ನಾನೇ ಹಿರಣ್ಯಗರ್ಭನು ಎಂದು ಉಪಾಸನೆಮಾಡುವವನ ಕರ್ಮವು ಕ್ಷಯವಾಗುವದು.

ಯ ಕಾರಣರೂಪದ್ದಾಗಿ ಮಾಡಿಕೊಂಡು ಯಾವನು ಉಪಾಸನೆಮಾಡುತ್ತಾನೋ ಅವನು ಅಪರಿಚ್ಛಿನ್ನವಾದ ಕರ್ಮಾತ್ಮನನ್ನು ಉಪಾಸನೆಮಾಡುತ್ತಾನಾದ್ದರಿಂದ ಅವರ ಕರ್ಮವು ಕ್ಷಯವಾಗುವದಿಲ್ಲ(ವಂತೆ).[1]

## ಸಿದ್ಧಾಂತ: ಇಲ್ಲಿ ಕರ್ಮಸಂಬದ್ಧಲೋಕವು ಅಪ್ರಕೃತ

(ಭಾಷ್ಯ)

೧೯೧. ಭವತೀಯಂ ಶೋಭನಾ ಕಲ್ಪನಾ ನ ತು ಶ್ರೌತೀ । ಸ್ವಲೋಕಶಬ್ದೇನ ಪ್ರಕೃತಸ್ಯ ಪರಮಾತ್ಮನೋಽಭಿಹಿತತ್ವಾತ್ । ಸ್ವಂ ಲೋಕಮ್ ಇತಿ ಪ್ರಸ್ತುತ್ಯ ಸ್ವಶಬ್ದಂ ವಿಹಾಯ ಆತ್ಮಶಬ್ದಪ್ರಕ್ಷೇಪೇಣ ಪುನಸ್ತಸ್ಯೈವ ಪ್ರತಿನಿರ್ದೇಶಾತ್ ಆತ್ಮಾನಮೇವ ಲೋಕಮುಪಾಸೀತೇತಿ । ತತ್ರ ಕರ್ಮಸಮವಾಯಿಲೋಕಕಲ್ಪನಾಯಾ ಅನವಸರ ಏವ । ಪರೇಣ ಚ ಕೇವಲವಿದ್ಯಾವಿಷಯೇಣ ವಿಶೇಷಣಾತ್ "ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ" (೪-೪-೨೨) ಇತಿ ಪುತ್ರಕರ್ಮಾಪರವಿದ್ಯಾಕೃತೇಭ್ಯೋ ಹಿ ಲೋಕೇಭ್ಯೋ ವಿಶಿನಷ್ಟಿ 'ಅಯಮಾತ್ಮಾ ನೋ ಲೋಕಃ' ಇತಿ । "ನ ಹಾಸ್ಯ ಕೇನ ಚ ಕರ್ಮಣಾ ಲೋಕೋ ಮೀಯತೇ"[2] (ಕೌ. ೩-೧) "ಏಷೋಽಸ್ಯ ಪರಮೋ ಲೋಕಃ" (೪-೩-೩೨) ಇತಿ ಚ । ತೈಃ ಸವಿಶೇಷಣೈಃ ಅಸ್ಯ ಏಕವಾಕ್ಯತಾ ಯುಕ್ತಾ । ಇಹಾಪಿ ಸ್ವಂ ಲೋಕಮ್ ಇತಿ ವಿಶೇಷಣದರ್ಶನಾತ್ । 'ಅಸ್ಮಾತ್ ಕಾಮಯತೇ' ಇತ್ಯಯುಕ್ತಮ್ ಇತಿ ಚೇತ್ । ಇಹ ಸ್ವೋ ಲೋಕಃ ಪರಮಾತ್ಮಾ, ತದುಪಾಸನಾತ್ ಸ ಏವ ಭವತಿ ಇತಿ ಸ್ಥಿತೇ 'ಯದ್ಯತ್ ಕಾಮಯತೇ ತತ್ತದಾತ್ಮನಃ ಸೃಜತೇ' ಇತಿ ತದಾತ್ಮಪ್ರಾಪ್ತಿವ್ಯತಿರೇಕೇಣ ಫಲವಚನಮ್ ಅಯುಕ್ತಮ್ ಇತಿ ಚೇತ್ । ನ । ಸ್ವಲೋಕೋಪಾಸನಸ್ತುತಿಪರತ್ವಾತ್ । ಸ್ವಸ್ಮಾದೇವ ಲೋಕಾತ್ ಸರ್ವಮ್ ಇಷ್ಟಂ ಸಂಪದ್ಯತೇ ಇತ್ಯರ್ಥಃ, ನಾನ್ಯದತಃ ಪ್ರಾರ್ಥನೀಯಮ್ । ಆಪ್ತಕಾಮತ್ವಾತ್ । "ಆತ್ಮತಃ ಪ್ರಾಣ ಆತ್ಮತ ಆಶಾ" (ಛಾಂ. ೭-೨೬-೧) ಇತ್ಯಾದಿಶ್ರುತ್ಯಂತರೇ ಯಥಾ । ಸರ್ವಾತ್ಮಭಾವಪ್ರದರ್ಶನಾರ್ಥೋ ವಾ ಪೂರ್ವವತ್ । ಯದಿ ಹಿ

1. ಕರ್ಮಸಾಧ್ಯವಾದ ಹಿರಣ್ಯಗರ್ಭಾದಿಲೋಕವೂ ನಿಜವಾಗಿ ಕಾರಣರೂಪವಾದ ಅವ್ಯಾಕೃತವೇ ; ಅದೇ ನಾನು ಎಂದು ಉಪಾಸನೆಮಾಡುವವನು ಅಪರಿಚ್ಛಿನ್ನಕರ್ಮಸಾಧನವಾದ ಆತ್ಮಲೋಕೋಪಾಸಕನು. ಅವನಿಗೆ ಕರ್ಮವೂ ಆತ್ಮನೇ ; ಆದ್ದರಿಂದ ಅದು ನಾಶವಾಗುವದಿಲ್ಲ ಎಂದು ಭರ್ತೃಪ್ರಪಂಚರ ಅಭಿಪ್ರಾಯ.

2. ಈ ಪಾಠವು ಮುದ್ರಿತಪುಸ್ತಕಗಳಲ್ಲಿಲ್ಲ. 'ನಾಸ್ಯ ಕೇನ ಚ' ಎಂದು ನಿ॥ ; 'ನ ಹ ವೈ ತಸ್ಯ ಕೇನ ಚ' ಎಂದು ಅ॥ ಪಾಠ. ಸೂ. ಭಾ. ೧-೧-೨೮ರಲ್ಲಿ ಭಾ. ಭಾ. ೧೩೫ ಮತ್ತು ೧೩೭ರ ಭಾಷ್ಯದ ಟಿಪ್ಪಣಿಗಳನ್ನು ನೋಡಿ.

ಪರ ಏವಾತ್ಮಾ ಸಂಪದ್ಯತೇ ತದಾ ಯುಕ್ತಃ 'ಅಸ್ಮಾದ್ಧ್ಯೇವಾತ್ಮನಃ' ಇತ್ಯಾತ್ಮ ಶಬ್ದಪ್ರಯೋಗಃ, ಸ್ವಸ್ಮಾದೇವ ಪ್ರಕೃತಾದಾತ್ಮನೋ ಲೋಕಾತ್ ಇತ್ಯೇವಮರ್ಥಃ । ಅನ್ಯಥಾ ಅವ್ಯಾಕೃತಾವಸ್ಥಾತ್ ಕರ್ಮಣೋ ಲೋಕಾತ್ ಇತಿ ಸವಿಶೇಷಣಮ್ ಅವಕ್ಷ್ಯತ್ ಪ್ರಕೃತಪರಮಾತ್ಮಲೋಕ ವ್ಯಾ ವೃ ತ್ತ ಯೇ ವ್ಯಾಕೃತಾವಸ್ಥಾವ್ಯಾವೃತ್ತಯೇ ಚ । ನ ಹಿ ಅಸ್ಮಿನ್ ಪ್ರಕೃತೇ ವಿಶೇಷಿತೇ ಅಶ್ರುತಾ ಅನ್ತರಾಲಾವಸ್ಥಾ ಪ್ರತಿಪತ್ತುಂ ಶಕ್ಯತೇ ॥

(ಭಾಷ್ಯಾರ್ಥ)

ಇದು ಒಳ್ಳೆಯ ಕಲ್ಪನೆ(ಯೋಜನೋ) ಆಗುತ್ತದೆ, ಆದರೆ ಶ್ರುತಿಸಮ್ಮತವಾಗುವದಿಲ್ಲ. ಏಕೆಂದರೆ 'ಸ್ವಲೋಕ' ಎಂಬ ಶಬ್ದದಿಂದ ಪ್ರಕೃತನಾದ ಪರಮಾತ್ಮನನ್ನೇ ಹೇಳಿರುತ್ತದೆ; 'ಸ್ವಂ ಲೋಕಮ್' ಎಂದು ಪ್ರಾರಂಭಿಸಿ ಸ್ವಶಬ್ದವನ್ನು ಬಿಟ್ಟು 'ಆತ್ಮಾನಮೇವ ಲೋಕಮುಪಾಸೀತ' ಎಂದು ಆತ್ಮಶಬ್ದವನ್ನು ಹಾಕಿ ಮತ್ತೂ ಆ (ಪರಮಾತ್ಮನನ್ನೇ) ತಿಳಿಸಿರುತ್ತದೆ. ಹೀಗಿರುವಲ್ಲಿ ಕರ್ಮಸಂಬದ್ಧವಾದ ಲೋಕವನ್ನು ಕಲ್ಪಿಸುವದಕ್ಕೆ ಅವಕಾಶವೇ ಇಲ್ಲ. ಮುಂದೆ "(ನಾವು) ಪ್ರಜೆಯಿಂದ ಏನು ಮಾಡಿಕೊಳ್ಳೋಣ ? ಈ ನಮಗೆ ಇವನೇ ಆತ್ಮನು, ಇವನೇ ಲೋಕವು" (೪-೪-೨೨) ಎಂದು ಕೇವಲವಿದ್ಯೆಗೆ ವಿಷಯನೆಂದು ಬೇರ್ಪಡಿಸಿ ಹೇಳಿರುವದರಿಂದಲೂ (ಹೀಗೆ). ಪುತ್ರ, ಕರ್ಮ, ಅಪರವಿದ್ಯೆ –ಇವುಗಳಿಂದಾದ ಲೋಕಗಳಿಂದ (ಈ) ಲೋಕವನ್ನು "ಈ ಆತ್ಮನೇ ನಮ್ಮ ಲೋಕವು" ಎಂದು ಬೇರ್ಪಡಿಸಿದೆಯುಲ್ಲವೆ ? "ಇವನ ಲೋಕವು ಯಾವ ಕರ್ಮದಿಂದಲೂ ನಾಶವಾಗುವದಿಲ್ಲ" (ಕೌ. ೩-೧) "ಇದು ಇವನ ಪರಮ ಲೋಕವು" (೪-೩-೩೨) ಎಂದು (ಬೇರ್ಪಡಿಸಿದೆಯಲ್ಲವೆ)? ಆ ಸವಿಶೇಷಣ (ವಾಕ್ಯಗಳಿಗೂ) ಈ (ವಾಕ್ಯ)ಕ್ಕೂ ಏಕವಾಕ್ಯತೆಯಾಗುವದು ಯುಕ್ತವು.[1] ಏಕೆಂದರೆ ಇಲ್ಲಿಯೂ ಸ್ವಲೋಕವನ್ನು ಎಂದು (ಸ್ವಶಬ್ದದ) ವಿಶೇಷಣವು ಕಂಡು ಬರುತ್ತದೆ.

(ಆಕ್ಷೇಪ) :- ಈ (ಆತ್ಮನಿಂದ) ಕಾಮಿಸುತ್ತಾನೆ ಎಂಬುದು ಸರಿಯಾಗುವದಿಲ್ಲವಲ್ಲ ! (ಇದರ ವಿವರ) : ಇಲ್ಲಿ ಸ್ವಲೋಕವೆಂದರೆ ಪರಮಾತ್ಮನು; ಆ (ಲೋಕದ) ಉಪಾಸನೆಯಿಂದ ಆ (ಪರಮಾತ್ಮನೇ) ಆಗುತ್ತಾನೆ –ಎಂದಾದರೆ 'ಯಾವಯಾವದನ್ನು ಬಯಸುತ್ತಾನೋ ಅದನ್ನು ಈ ಆತ್ಮನಿಂದ ಸೃಜಿಸಿಕೊಳ್ಳುತ್ತಾನೆ' ಎಂದು ಆ ಆತ್ಮಪ್ರಾಪ್ತಿಗಿಂತ ಬೇರೆಯಾಗಿ ಫಲವನ್ನು ಹೇಳಿರುವದು ಅಯುಕ್ತವಾಗುವದಲ್ಲ !

1. ಈ ವಾಕ್ಯಗಳಲ್ಲೆಲ್ಲ ಕರ್ಮಕೃತವಾದ ಲೋಕಗಳಿಗಿಂತ ಬೇರ್ಪಡಿಸಿಯೇ ಪರಮಾತ್ಮನನ್ನು ಲೋಕವೆಂದಿರುತ್ತದೆ. ಅದ್ದರಿಂದ ಪರಮಾತ್ಮಲೋಕವು ಕರ್ಮಕೃತವಲ್ಲ.

(ಪರಿಹಾರ) :- ಹಾಗಲ್ಲ. ಏಕೆಂದರೆ ಅದು ಸ್ವಲೋಕದ ಸ್ತುತಿಯಲ್ಲಿ ತಾತ್ಪರ್ಯವುಳ್ಳದ್ದಾಗಿರುತ್ತದೆ. ತಾನೆಂಬ ಲೋಕದಿಂದಲೇ ಬೇಕಾದದ್ದೆಲ್ಲವೂ ಆಗಿಬಿಡುತ್ತದೆ ಎಂಬರ್ಥವೇ ಹೊರತು ಅವಕ್ಕಿಂತ ಬೇರೆಯಾಗಿ ಬಯಸುವ(ದೊಂದಿದೆ ಎಂದಲ್ಲ). ಏಕೆಂದರೆ (ಜ್ಞಾನಿಯು) ಆಪ್ತಕಾಮನಾಗಿರುತ್ತಾನೆ. "ಆತ್ಮನಿಂದಲೇ ಪ್ರಾಣವು, ಆತ್ಮನಿಂದಲೇ ಆಶೆಯು" (ಛಾ. ೭-೨೬-೧) ಎಂಬ ಶ್ರುತ್ಯಂತರದಲ್ಲಿ ಹೇಗೋ (ಹಾಗೆಯೇ ಇದನ್ನು ತಿಳಿಯಬೇಕು).[1] ಅಥವಾ ಹಿಂದೆ (೧-೪-೧೦ರಲ್ಲಿ) ಹೇಳಿದಂತೆ ಸರ್ವಾತ್ಮಭಾವವನ್ನು ತಿಳಿಸುವದಕ್ಕೆ (ಹೀಗೆಂದಿದೆ ಎಂದಾದರೂ ಅರ್ಥಮಾಡಬಹುದು).[2] ಪರಮಾತ್ಮನೇ ಆಗುತ್ತಾನೆ ಎಂದಾದರೇ ಆಗ 'ಈ ಆತ್ಮನಿಂದಲೇ' ಎಂದು ಆತ್ಮಶಬ್ದವನ್ನು ಪ್ರಯೋಗಿಸಿರುವದು ಯುಕ್ತವಾಗುತ್ತದೆ. 'ತಾನೆಂಬ ಪ್ರಕೃತವಾಗಿರುವ ಆತ್ಮಲೋಕದಿಂದಲೇ' ಎಂದು ಅರ್ಥ.[3] ಹೀಗಲ್ಲದೆ ಇದ್ದರೆ[4] ಪ್ರಕೃತವಾದ ಪರಮಾತ್ಮಲೋಕವನ್ನು ಅಲ್ಲವೆನ್ನುವದಕ್ಕಾಗಿಯೂ ವ್ಯಾಕೃತಾವಸ್ಥೆಯನ್ನು ಅಲ್ಲವೆನ್ನುವದಕ್ಕಾಗಿಯೂ 'ಅವ್ಯಾಕೃತಾವಸ್ಥೆಯ ಕರ್ಮದ ಲೋಕದಿಂದ' ಎಂದು ಸವಿಶೇಷಣವಾಗಿ (ಶ್ರುತಿ) ಹೇಳುತ್ತಿತ್ತು. ಈ ಪ್ರಕೃತವಾದ (ಪರಮಾತ್ಮಲೋಕವನ್ನು) ವಿಶೇಷಣದಿಂದ ಹೇಳಿದ್ದರೆ ಅಶ್ರುತವಾಗಿರುವ ಅಂತರಾಲಾವಸ್ಥೆಯೆಂದು ತಿಳಿದುಕೊಳ್ಳುವದಕ್ಕೆ ಆಗಲಾರದಷ್ಟೆ.[5]

---

1. ಪ್ರಾಣ, ಆಶೆ -ಮುಂತಾದ ನಾಮರೂಪಗಳು ಆತ್ಮನಿಗಿಂತ ಬೇರೆಯಾಗಿರುವಂತೆ ಅಜ್ಞದಶೆಯಲ್ಲಿದ್ದವು; ಈಗ ಅವೆಲ್ಲವೂ ಆತ್ಮನೇ ಆಗಿಬಿಟ್ಟವು ಎಂದು ಆ ವಾಕ್ಯಕ್ಕೆ ಅರ್ಥ. ಹಾಗೆಯೇ ಇಲ್ಲಿಯೂ ಆತ್ಮನೇ ಎಲ್ಲವೂ, ಆತ್ಮನಿಗಿಂತ ಬೇರೆ ಬಯಸತಕ್ಕದ್ದೇನೂ ಇಲ್ಲ-ಎಂಬುದೇ ವಾಕ್ಯದ ಅರ್ಥ.

2. ಎಲ್ಲವೂ ತಾನೇ ಆಗಿದ್ದು ಅಜ್ಞಾನದಶೆಯಲ್ಲಿ ಅಸರ್ವನಾಗಿತ್ತು, ಈಗ ಜ್ಞಾನದಿಂದ ಎಲ್ಲವೂ ಆಗಿದೆ ಎಂದರ್ಥ.

3. ಪರಮಾತ್ಮನೇ ಎಲ್ಲವೂ ಆಗಿರುವದರಿಂದ ಅವನ ಪ್ರಾಪ್ತಿಯಿಂದ ಸರ್ವಪ್ರಾಪ್ತಿಯಾಗುವದು ಯುಕ್ತ.

4. ಭರ್ತೃಪ್ರಪಂಚರು ಹೇಳುವಂತೆ ಕಾರಣಾತ್ಮನಾದ ಅವ್ಯಾಕೃತಾತ್ಮನಿಂದ ಎಂಬ ಅರ್ಥವಾದರೆ.

5. ವ್ಯಾಕೃತಾವಸ್ಥೆ, ಅವ್ಯಾಕೃತಾವಸ್ಥೆ, ಪರಮಾತ್ಮಾವಸ್ಥೆ -ಎಂಬ ಮೂರೂ ಫಲಗಳೆಂಬುದು ಭರ್ತೃಪ್ರಪಂಚರ ಮತವು. ಅವ್ಯಾಕೃತವೆಂಬ ಅಂತರಾಲಾವಸ್ಥೆಯನ್ನು ಇಲ್ಲಿ ಹೇಳಿಲ್ಲ; ಪರಮಾತ್ಮಲೋಕವು ಪ್ರಕೃತವಾಗಿದೆ. 'ಈ ಆತ್ಮನಿಂದ' ಎಂದು ಪ್ರಕೃತವಾಗಿರುವದನ್ನು, ಶ್ರುತಿಯು ಸ್ಪಷ್ಟವಾಗಿ ಹೇಳಿರುವದನ್ನು ಬಿಟ್ಟು ಅಪ್ರಕೃತವಾಗಿ, ಶ್ರುತಿಯು ಹೇಳದೆಯೂ ಇರುವದನ್ನು ಶ್ರೋತೃಗಳು ಹೇಗೆ ತಿಳಿದುಕೊಂಡಾರು ? ಆ ಅಂತರಾಲಾವಸ್ಥೆ (ನಡುವಿನ ಅವಸ್ಥೆ)ಯನ್ನು ಹೇಳುವ ವಿಶೇಷಣಗಳು ಯಾವವೂ ಇಲ್ಲಿಲ್ಲವಲ್ಲ ! -ಎಂದು ಸಿದ್ಧಾಂತಿಯು ಕೇಳಿರುತ್ತಾನೆ.

# ಕರ್ಮಾಧಿಕಾರಿಯು ಎಲ್ಲರಿಗೂ ಉಪಕಾರಕನು

(ಉಪನಿಷತ್ತು)

**ಅಥೋ ಅಯಂ ವಾ ಆತ್ಮಾ ಸರ್ವೇಷಾಂ ಭೂತಾನಾಂ ಲೋಕಃ ಸ ಯಜ್ಜುಹೋತಿ ಯದ್ಯಜತೇ ತೇನ ದೇವಾನಾಂ ಲೋಕೋಽಥ ಯದನುಬ್ರೂತೇ ತೇನ ಋಷೀಣಾಮಥ ಯತ್ಪಿತೃಭ್ಯೋ ನಿಪೃಣಾತಿ ಯತ್ಪ್ರಜಾಮಿಚ್ಛತೇ ತೇನ ಪಿತೃಣಾಮಥ ಯನ್ಮನುಷ್ಯಾನ್ ವಾಸಯತೇ ಯದೇಭ್ಯೋಽಶನಂ ದದಾತಿ ತೇನ ಮನುಷ್ಯಾಣಾಮಥ ಯತ್ಪಶುಭ್ಯಸ್ತೃಣೋದಕಂ ವಿನ್ದತಿ ತೇನ ಪಶೂನಾಂ ಯದಸ್ಯ ಗೃಹೇಷು ಶ್ವಾಪದಾ ವಯಾಗ್ಂಸ್ಯಾ ಪಿಪೀಲಿಕಾಭ್ಯ ಉಪಜೀವನ್ತಿ ತೇನ ತೇಷಾಂ ಲೋಕೋ ಯಥಾ ಹ ವೈ ಸ್ವಾಯ ಲೋಕಾಯಾರಿಷ್ಟಿಮಿಚ್ಛೇದೇವಗ್ಂ ಹೈವಂ ವಿದೇಸರ್ವಾಣಿ ಭೂತಾನ್ಯರಿಷ್ಟಿಮಿಚ್ಛನ್ತಿ ತದ್ವಾ ಏತದ್ವಿದಿತಂ ಮೀಮಾಗ್ಂಸಿತಮ್ ॥ ೧೬ ॥**

೧೬. ಈಗ ಈ ಆತ್ಮನೇ ಸರ್ವಭೂತಗಳಿಗೂ ಲೋಕವು. ಅವನು ಹೋಮಮಾಡುತ್ತಾನಲ್ಲ, ಯಾಗಮಾಡುತ್ತಾನಲ್ಲ, ಅದರಿಂದ ದೇವತೆಗಳ ಲೋಕವು. ಇನ್ನು ಅನುವಚನಮಾಡುತ್ತಾನಲ್ಲ ಅದರಿಂದ ಋಷಿಗಳ (ಲೋಕವು). ಇನ್ನು ಪಿತೃಗಳಿಗೆ ಅರ್ಪಿಸುತ್ತಾನಲ್ಲ, ಪ್ರಜೆಯನ್ನು ಬಯಸುತ್ತಾನಲ್ಲ, ಅದರಿಂದ ಪಿತೃಗಳ (ಲೋಕವು), ಇನ್ನು ಮನುಷ್ಯರನ್ನು (ಮನೆಯಲ್ಲಿ) ವಾಸಕ್ಕೆ ಬಿಡುತ್ತಾನಲ್ಲ, ಅವರಿಗೆ ಅನ್ನವನ್ನು ಕೊಡುತ್ತಾನಲ್ಲ, ಅದರಿಂದ ಮನುಷ್ಯರ (ಲೋಕವು). ಇನ್ನು ಪಶುಗಳಿಗೆ ಹುಲ್ಲುನೀರನ್ನು ದೊರಕಿಸುತ್ತಾನಲ್ಲ, ಅದರಿಂದ ಪಶುಗಳ ಲೋಕವು. ಇವನ ಮನೆಯಲ್ಲಿ ಮೃಗಗಳು, ಪಕ್ಷಿಗಳು, ಇರುವೆಗಳವರೆಗಿನ ಪ್ರಾಣಿಗಳೂ ಉಪಜೀವಿಸಿಕೊಂಡಿರುವವಲ್ಲ, ಅದರಿಂದ ಅವುಗಳ ಲೋಕವು. ಹೇಗೆ (ಯಾವನಾದರೂ) ತನ್ನ ಲೋಕಕ್ಕೆ ಅರಿಷ್ಟಿಯನ್ನು ಇಚ್ಛಿಸುತ್ತಾನೋ, ಹಾಗೆಯೇ ಹೀಗೆಂದು ತಿಳಿದುಕೊಂಡವನಿಗೆ ಎಲ್ಲಾ ಭೂತಗಳೂ ಅರಿಷ್ಟಿಯನ್ನು ಇಚ್ಛಿಸುತ್ತಿರುತ್ತವೆ. ಆ ಇದು ವಿದಿತವಾಗಿದೆ, ಮೀಮಾಂಸಿತವಾಗಿದೆ.

## ಕಂಡಿಕೆಯ ಸಂಬಂಧ

(ಭಾಷ್ಯ)

. ೧೯೨. ಅಥೋ ಅಯಂ ವಾ ಆತ್ಮಾ । ಅತ್ರ ಅವಿದ್ವಾನ್ ವರ್ಣಾಶ್ರಮಾದ್ಯಭಿಮಾನಃ ಧರ್ಮೇಣ ನಿಯಮ್ಯಮಾನಃ ದೇವಾದಿಕರ್ಮಕರ್ತವ್ಯತಯಾ ಪಶುವತ್ ಪರತನ್ತ್ರಃ ಇತ್ಯುಕ್ತಮ್ । ಕಾನಿ ಪುನಸ್ತಾನಿ ಕರ್ಮಾಣಿ ಯತ್ಕರ್ತವ್ಯತಯಾ ಪಶುವತ್ ಪರತನ್ತ್ರೋ ಭವತಿ ? ಕೇ ವಾ ತೇ ದೇವಾದಯಃ ಯೇಷಾಂ ಕರ್ಮಭಿಃ ಪಶುವತ್ ಉಪಕರೋತೀತಿ ? ತದುಭಯಂ ಪ್ರಪಞ್ಚಯತಿ ॥

(ಭಾಷ್ಯಾರ್ಥ)

'ಅಥೋ ಅಯಂ ವಾ ಆತ್ಮಾ' (ಇತ್ಯಾದಿ ಕಂಡಿಕೆಯ ಸಂಬಂಧವೇನೆಂದರೆ), ವರ್ಣಾಶ್ರಮಾದ್ಯಭಿಮಾನವುಳ್ಳ ಅವಿದ್ಯಾವಂತನು ಧರ್ಮದಿಂದ ಕಟ್ಟುವಡೆದು ದೇವಾದಿಗಳ ಕರ್ಮವನ್ನು ಮಾಡಬೇಕಾಗಿರುವದರಿಂದ ಪಶುವಿನಂತೆ ಪರತಂತ್ರನಾಗಿರುವನೆಂದು ಹೇಳಲಾಯಿತು. ಯಾವವನ್ನು ಮಾಡಬೇಕಾಗಿರುವದರಿಂದ ಪಶುವಿನಂತೆ[1] ಪರತಂತ್ರನಾಗಿರುವನೋ ಆ ಕರ್ಮಗಳಾದರೂ ಯಾವವು ? ಯಾರಿಗೆ ಕರ್ಮಗಳಿಂದ ಪಶುವಿನಂತೆ, ಉಪಕಾರವನ್ನು ಮಾಡುತ್ತಿರುವ(ನೆಂದು ಹೇಳಲಾಯಿತೋ) ಆ ದೇವಾದಿಗಳಾದರೂ ಯಾರು ? –ಎಂದರೆ ಈ ಎರಡನ್ನೂ (ಶ್ರುತಿ) ವಿಸ್ತಾರವಾಗಿ ತಿಳಿಸುತ್ತದೆ.

## ಅಜ್ಞನು ಯಾರುಯಾರಿಗೆ ಹೇಗೆಹೇಗೆ ಉಪಕಾರಿ ?

(ಭಾಷ್ಯ)

೧೯೩. ಅಥೋ ಇತ್ಯಯಂ ವಾಕ್ಯೋಪನ್ಯಾಸಾರ್ಥಃ । ಅಯಂ ಯಃ ಪ್ರಕೃತಃ ಗೃಹೀ ಕರ್ಮಾಧಿಕೃತೋಽವಿದ್ವಾನ್ ಶರೀರೇನ್ದ್ರಿಯಸಂಘಾತ[2] ವಿಶಿಷ್ಟಃ ಪಿಣ್ಡಃ ಆತ್ಮಾ ಇತ್ಯುಚ್ಯತೇ । ಸರ್ವೇಷಾಂ ದೇವಾದೀನಾಂ ಪಿಪೀಲಿಕಾನ್ತಾನಾಂ ಭೂತಾನಾಂ ಲೋಕಃ ಭೋಗ್ಯ ಆತ್ಮಾ ಇತ್ಯರ್ಥಃ । ಸರ್ವೇಷಾಂ ವರ್ಣಾಶ್ರಮಾದಿವಿಹಿತೈಃ ಕರ್ಮಭಿರುಪಕಾರಿತ್ವಾತ್ । ಕೈಃ ಪುನಃ ಕರ್ಮವಿಶೇಷೈಃ ಉಪಕುರ್ವನ್ ಕೇಷಾಂ ಭೂತವಿಶೇಷಾಣಾಂ ಲೋಕಃ ಇತಿ ?

---

1. ಹತ್ತನೆಯ ಕಂಡಿಕೆಯಲ್ಲಿ ಅಜ್ಞನು ದೇವತೆಗಳಿಗೆ ಪಶುವಿನಂತೆ ಇರುತ್ತಾನೆ ಎಂದಿದೆಯಷ್ಟೆ, ಅದು ಉಪಲಕ್ಷಣಕ್ಕಾಗಿ ಹೇಳಿದ್ದು ; ದೇವತೆಗಳು, ಪಿತೃಗಳು –ಮುಂತಾದವರೆಲ್ಲರಿಗೂ ಪಶುವಿನಂತೆ ಎಂದೇ ಅದಕ್ಕೆ ಅರ್ಥ. ಅದನ್ನೇ ಇಲ್ಲಿ ವಿವರಿಸಲಾಗುತ್ತದೆ.

2. ಇಲ್ಲಿ ಅಚ್ಚಿನ ಪುಸ್ತಕದಲ್ಲಿ 'ಸಂಘಾತಾದಿ' ಎಂದಿದೆ. 'ಆದಿ' ಅನವಶ್ಯ.

ಉಚ್ಯತೇ । ಸ ಗೃಹೀ ಯತ್ ಜುಹೋತಿ ಯತ್ ಯಜತೇ । ಯಾಗೋ ದೇವತಾಮ್ ಉದ್ದಿಶ್ಯ ಸ್ವತ್ವಪರಿತ್ಯಾಗಃ। ಸ ಏವ ಆಸೇಚನಾಧಿಕೋ[1] ಹೋಮಃ । ತೇನ ಹೋಮಯಾಗಲಕ್ಷಣೇನ ಕರ್ಮಣಾ ಅವಶ್ಯಕರ್ತವ್ಯತ್ವೇನ ದೇವಾನಾಂ ಪಶುವತ್ ಪರತನ್ತ್ರತ್ವೇನ ಪ್ರತಿಬದ್ಧಃ ಇತಿ ಲೋಕಃ । ಅಥ ಯತ್ ಅನುಬ್ರೂತೇ ಸ್ವಾಧ್ಯಾಯಮ್ ಅಧೀತೇ ಅಹರಹಃ, ತೇನ ಋಷೀಣಾಂ ಲೋಕಃ । ಅಥ ಯತ್ ಪಿತೃಭ್ಯೋ ನಿಪೃಣಾತಿ ಪ್ರಯಚ್ಛತಿ ಪಿಣ್ಡೋದಕಾದಿ, ಯಚ್ಚ ಪ್ರಜಾಮ್ ಇಚ್ಛತೇ, ಪ್ರಜಾರ್ಥಮ್ ಉದ್ಯಮಂ ಕರೋತಿ। ಇಚ್ಛಾ ಚ ಉತ್ಪತ್ತ್ಯುಪಲಕ್ಷಣಾರ್ಥಾ ಪ್ರಜಾಂ ಚ ಉತ್ಪಾದಯತಿ ಇತ್ಯರ್ಥಃ । ತೇನ ಕರ್ಮಣಾ ಅವಶ್ಯಕರ್ತವ್ಯತ್ವೇನ ಪಿತೃಣಾಂ ಲೋಕಃ, ಪಿತ್ರ್ಯಾಣಾಂ[2] ಭೋಗ್ಯತ್ವೇನ ಪರತನ್ತ್ರೋ ಲೋಕಃ । ಅಥ ಯತ್ ಮನುಷ್ಯಾನ್ ವಾಸಯತೇ ಭೂಮ್ಯುದಕಾದಿದಾನೇನ ಗೃಹೇ ಯಚ್ಚ ತೇಭ್ಯೋ ವಸದ್ಭ್ಯಃ ಅವಸದ್ಭ್ಯೋ ವಾ ಅರ್ಥಿಭ್ಯಃ ಅಶನಂ ದದಾತಿ ತೇನ ಮನುಷ್ಯಾಣಾಮ್, ಅಥ ಯತ್ ಪಶುಭ್ಯಃ ತೃಣೋದಕಂ ವಿನ್ದತಿ ಲಮ್ಭಯತಿ ತೇನ ಪಶೂನಾಮ್ । ಯದಸ್ಯ ಗೃಹೇಷು ಶ್ವಾಪದಾ ವಯಾಂಸಿ ಚ ಪಿಪೀಲಿಕಾದಿಭಿಃ ಸಹ ಕಣಬಲಿಭಾಣ್ಡಕ್ಷಾಲನಾದ್ಯುಪಜೀವನ್ತಿ ತೇನ ತೇಷಾಂ ಲೋಕಃ। ಯಸ್ಮಾತ್ ಅಯಮೇತಾನಿ ಕರ್ಮಾಣಿ ಕುರ್ವನ್ ಉಪಕರೋತಿ ದೇವಾದಿಭ್ಯಃ ತಸ್ಮಾತ್ ಯಥಾ ಹ ವೈ ಲೋಕೇ ಸ್ವಾಯ ಲೋಕಾಯ ಸ್ವಸ್ಮೈ ದೇಹಾಯ ಅರಿಷ್ಟಿಮ್ ಅವಿನಾಶಂ ಸ್ವತ್ವಭಾವಾಪ್ರಚ್ಯುತಿಮ್ ಇಚ್ಛೇತ್ ಸ್ವತ್ವಭಾವಪ್ರಚ್ಯುತಿಭಯಾತ್ ಪೋಷಣರಕ್ಷಣಾದಿಭಿಃ ಸರ್ವತಃ ಪರಿಪಾಲಯೇತ್ ಏವಂ ಹ ಏವಂವಿದೇ ಸರ್ವಭೂತಭೋಗ್ಯೋಽಹಮ್, ಅನೇನ ಪ್ರಕಾರೇಣ ಮಯಾ ಅವಶ್ಯಮ್ ಋಣಿವತ್ ಪ್ರತಿಕರ್ತವ್ಯಮ್ ಇತ್ಯೇವಮ್ ಆತ್ಮಾನಂ ಪರಿಕಲ್ಪಿತವತೇ ಸರ್ವಾಣಿ ಭೂತಾನಿ ದೇವಾದೀನಿ ಯಥೋಕ್ತಾನಿ ಅರಿಷ್ಟಿಮ್ ಅವಿನಾಶಮ್ ಇಚ್ಛನ್ತಿ ಸ್ವತ್ವಾಪ್ರಚ್ಯುತ್ಯೈ ಸರ್ವತಃ ಸಂರಕ್ಷನ್ತಿ ಕುಟುಮ್ಬಿನ ಇವ ಪಶೂನ್। "ತಸ್ಮಾದೇಷಾಂ ತನ್ನ ಪ್ರಿಯಮ್" (೧-೪-೧೦) ಇತ್ಯುಕ್ತಮ್ । ತದ್ವಾ ಏತತ್ ಯಥೋಕ್ತಾನಾಂ ಕರ್ಮಣಾಮ್ ಋಣಿವತ್ ಅವಶ್ಯಕರ್ತವ್ಯತ್ವಂ ಪಞ್ಚಮಹಾಯಜ್ಞಪ್ರಕರಣೇ ವಿದಿತಮ್, ಕರ್ತವ್ಯತಯಾ ಮೀಮಾಂಸಿತಂ ವಿಚಾರಿತಂ ಚ ಅವದಾನಪ್ರಕರಣೇ ॥

---

1. 'ಅವಧಿಕೋ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಮೂಲದ 'ಪಿತೃಣಾಂ' ಎಂಬುವಕ್ಕೂ 'ಪಿತ್ರ್ಯಾಣಾಂ' ಎಂಬ ಪಾಠಾಂತರವುಂಟು.

(ಭಾಷ್ಯಾರ್ಥ)

(ಇಲ್ಲಿ) ಅಥೋ (ಈಗ) ಎಂಬ ಮಾತು ವಾಕ್ಯೋಪನ್ಯಾಸಕ್ಕಾಗಿ (ಹೇಳಿದ್ದು)[1] ಈ (ಆತ್ಮನೇ) ಪ್ರಕೃತನಾಗಿರುವ ಗೃಹಸ್ಥನು, ಕರ್ಮಾಧಿಕಾರಿ ಯಾದ ಅವಿದ್ಯಾವಂತನಾದ, ಶರೀರೇಂದ್ರಿಯಸಂಘಾತದಿಂದ ಕೂಡಿರುವ ಒಟ್ಟನ್ನು[2] (ಇಲ್ಲಿ) 'ಆತ್ಮ' ಎಂದಿದೆ. ದೇವತೆಗಳು ಮೊದಲಾಗಿ ಇರುವೆಗಳ ವರೆಗಿನ ಎಲ್ಲಾ ಭೂತಗಳಿಗೂ (ಈ) ಆತ್ಮನೇ ಲೋಕವು ಭೋಗ್ಯನು ಎಂದರ್ಥ. ಏಕೆಂದರೆ (ಇವನು) ವರ್ಣಾಶ್ರಮಾದಿಗಳಿಗೆ ವಿಹಿತವಾಗಿರುವ ಕರ್ಮಗಳಿಂದ ಎಲ್ಲರಿಗೂ ಉಪಕಾರಿಯಾಗಿರುತ್ತಾನೆ.

(ಪ್ರಶ್ನೆ);- ಹಾಗಾದರೆ, ಯಾವ ಕರ್ಮವಿಶೇಷಗಳಿಂದ ಉಪಕಾರವನ್ನು ಮಾಡುತ್ತಿರುವದರಿಂದ ಯಾವ ಭೂತವಿಶೇಷಗಳಿಗೆ (ಇವನು) ಲೋಕವು ?

(ಉತ್ತರ):- (ಇದಕ್ಕೆ ಶ್ರುತಿ ಉತ್ತರವನ್ನು) ಹೇಳುತ್ತದೆ. ಆ ಗೃಹಿಯು ಹೋಮಮಾಡುತ್ತಾನಲ್ಲ, ಯಾಗಮಾಡುತ್ತಾನಲ್ಲ- ಯಾಗವೆಂದರೆ ದೇವತೆಗಾಗಿ ಸ್ವತ್ವವನ್ನು ಬಿಟ್ಟುಕೊಡುವದು ; ಆಸೇಚನವೂ ಹೆಚ್ಚಾಗಿ (ಆದರೆ ಆ ತ್ಯಾಗವು) ಹೋಮ(ವೆನಿಸುವದು).[3] ಆ ಹೋಮಯಾಗಸ್ವರೂಪವಾದ ಕರ್ಮದಿಂದ (ಅದನ್ನು ಅವಶ್ಯವಾಗಿ ಮಾಡಲೇಬೇಕಾಗಿರುವದರಿಂದ ಪಶುವಿನಂತೆ) ದೇವತೆ ಗಳಿಗೆ ಕಟ್ಟುಬಿದ್ದಿರುವದರಿಂದ (ಅವರ) ಲೋಕವು. ಇನ್ನು ಅನುವಚನ ಮಾಡುತ್ತಾನಲ್ಲ, ದಿನದಿನವೂ ಸ್ವಾಧ್ಯಾಯವನ್ನು ಅಧ್ಯಯನಮಾಡುತ್ತಿರುವನಲ್ಲ, ಅದರಿಂದ ಋಷಿಗಳ ಲೋಕವು. ಇನ್ನು ಪಿತೃಗಳಿಗೆ ಅರ್ಪಿಸುತ್ತಾನಲ್ಲ, ಪಿಂಡೋದಕಾದಿಗಳನ್ನು ಕೊಡುತ್ತಾನಲ್ಲ, ಮತ್ತು ಪ್ರಜೆಯನ್ನು ಬಯಸುತ್ತಾ ನಲ್ಲ, ಪ್ರಜಾರ್ಥವಾಗಿ ಪ್ರಯತ್ನಮಾಡುತ್ತಾನಲ್ಲ — (ಇಲ್ಲಿ) ಬಯಕೆ ಎಂಬುದು ಉತ್ಪತ್ತಿಗೆ ಉಪಲಕ್ಷಣವಾಗಿ (ಹೇಳಿದ್ದು), ಪ್ರಜೆಯನ್ನು ಉತ್ಪತ್ತಿಮಾಡಿಕೊಳ್ಳು ತ್ತಾನಲ್ಲ, ಎಂದರ್ಥ ; ಆ ಕರ್ಮದಿಂದ (ಅದನ್ನು) ಅವಶ್ಯವಾಗಿ ಮಾಡಬೇಕಾ ಗಿರುವದರಿಂದ ಪಿತೃಗಳ ಲೋಕವು, ಪಿತೃಗಳಿಗೆ ಭೋಗ್ಯವಾಗಿ ಪರತಂತ್ರ (ನಾಗಿರುವದರಿಂದ) ಲೋಕವು. ಇನ್ನು ಮನುಷ್ಯರನ್ನು (ಮನೆಯಲ್ಲಿ) ವಾಸಕ್ಕೆ ಬಿಡುತ್ತಾನಲ್ಲ, ಸ್ಥಲ, ನೀರು -ಮುಂತಾದದ್ದನ್ನು ಕೊಟ್ಟು ಮನೆಯಲ್ಲಿ (ವಾಸ

---

1. ಅಪಿ (ಕೂಡ) ಎಂಬರ್ಥದಲ್ಲಿ ಉಪಯೋಗಿಸಿದ್ದಲ್ಲ.

2. ಪಿಂಡವೆಂದರೆ ಒಟ್ಟು. ಶರೀರಾದಿಗಳಿಂದ ಕೂಡಿದ ಒಟ್ಟಿನ ಅಭಿಮಾನಿಯಾದ ಆತ್ಮನು ಪಿಂಡಾತ್ಮನು, ಅಂಡಕ್ಕೆಲ್ಲ ಅಭಿಮಾನಿಯಾದ ಆತ್ಮನು ವಿರಾಡಾತ್ಮನು ಎಂದು ವೇದಾಂತಗಳಲ್ಲಿ ಹೇಳುವದುಂಟು. ಪಾಂ. ಭಾ. ೩ನ್ನು ನೋಡಿ.

3. ಅಗ್ನಿಯಲ್ಲಿ ತುಪ್ಪವೇ ಮುಂತಾದ ದ್ರವ್ಯವನ್ನು ದೇವತೆಗಳ ಉದ್ದಿಶ್ಯವಾಗಿ ಮಂತ್ರಪೂರ್ವಕವಾಗಿ ಸುರಿಯುವ ಕರ್ಮವು ಹೋಮವು.

ವನ್ನು ಕೊಡುತ್ತಾನಲ್ಲ), ಮತ್ತು ವಾಸಮಾಡುತ್ತಿರುವಾಗ ಅಥವಾ ವಾಸ ಮಾಡದೆ ಇರುವಾಗ, ಬಯಸಿದವರಿಗೆ ಅನ್ನವನ್ನು ಕೊಡುತ್ತಾನಲ್ಲ, ಆದರಿಂದ ಮನುಷ್ಯರ (ಲೋಕವು). ಇನ್ನು ಪಶುಗಳಿಗೆ ಹುಲ್ಲುನೀರನ್ನು ದೊರಕಿಸುತ್ತಾನಲ್ಲ, ಸಿಕ್ಕುವಂತೆ ಮಾಡುತ್ತಾನಲ್ಲ, ಆದರಿಂದ ಪಶುಗಳ ಲೋಕವು. ಇವನ ಮನೆಯಲ್ಲಿ ಮೃಗಗಳೂ ಪಕ್ಷಿಗಳೂ ಇರುವೆಗಳೊಡನೆ (ಅನ್ನದ) ಅಗುಳು, ಬಲಿ, ಪಾತ್ರೆಯನ್ನು ತೊಳೆದ (ಅನ್ನ) -ಮುಂತಾದದ್ದನ್ನು ಉಪಜೀವಿಸಿಕೊಂಡಿರುವವಲ್ಲ, ಆದರಿಂದ ಅವುಗಳ ಲೋಕವು.

(ಹೀಗೆ) ಇವನು ಈ ಕರ್ಮಗಳನ್ನು ಮಾಡುವದರಿಂದ ದೇವಾದಿಗಳಿಗೆ ಉಪಕಾರವನ್ನು ಮಾಡುತ್ತಿರುವನಷ್ಟೆ. ಆದ್ದರಿಂದ ಹೇಗೆ ಲೋಕವಲ್ಲಿ (ಯಾವನಾದರೂ) ತನ್ನ ಲೋಕಕ್ಕೆ (ಎಂದರೆ) ತನ್ನ ದೇಹಕ್ಕೆ ಅರಿಷ್ಟಿಯನ್ನು ಅವಿನಾಶವನ್ನು, ತನ್ನದಾಗಿರುವ (ಸ್ಥಿತಿ)ಯಿಂದ ತಪ್ಪಿಹೋಗದಿರುವಿಕೆಯನ್ನು ಇಚ್ಛಿಸುತ್ತಾನೋ, ತನ್ನದಾಗಿರುವ (ಸ್ಥಿತಿಯು) ತಪ್ಪೀತಲ್ಲ ಎಂಬ ಅಂಜಿಕೆಯಿಂದ ಪೋಷಿಸುವದು, ಕಾಪಾಡುವದು- ಮುಂತಾದ ಎಲ್ಲಾ ಪ್ರಕಾರಗಳಿಂದಲೂ ಕಾಪಾಡಿಕೊಳ್ಳುವನೋ, ಹಾಗೆ ಹೀಗೆಂದು ತಿಳಿದುಕೊಂಡಿರುವವನಿಗೆ -ಎಲ್ಲಾ ಭೂತಗಳಿಗೂ ಭೋಗ್ಯನಾಗಿರುವನು ನಾನು, ಈ ಪ್ರಕಾರದಿಂದ ನಾನು ಅವಶ್ಯವಾಗಿ ಸಾಲಗಾರನಂತೆ ಇವರಿಗೆಲ್ಲ ಪ್ರತ್ಯುಪಕಾರವನ್ನು ಮಾಡುತ್ತಿರಬೇಕು ಎಂದು ತನ್ನನ್ನು ಪರಿಕಲ್ಪಿಸಿಕೊಂಡಿರುವವನಿಗೆ- ದೇವತೆಗಳೇ ಮುಂತಾದ ಮೇಲೆ ಹೇಳಿರುವ ಸರ್ವಭೂತಗಳೂ ಅರಿಷ್ಟಿಯನ್ನು ಅವಿನಾಶವನ್ನು ಇಚ್ಛಿಸುತ್ತಾರೆ. ಸ್ವತ್ವದಿಂದ ತಪ್ಪಿಹೋಗದಿರುವದಕ್ಕಾಗಿ ಎಲ್ಲಾ ಬಗೆಯಿಂದಲೂ, ಕುಟುಂಬಿಗಳು, ಪಶುಗಳನ್ನು (ಕಾಪಾಡಿಕೊಳ್ಳು)ವಂತೆ ಕಾಪಾಡಿಕೊಳ್ಳುತ್ತಾರೆ. "ಆದ್ದರಿಂದ ಇವರಿಗೆ ಅದು ಪ್ರಿಯವಲ್ಲ" (೧-೪-೧೦) ಎಂದು (ಹಿಂದೆಯೇ) ಹೇಳಿರುತ್ತದೆ.

ಆ ಇದನ್ನು ಮೇಲೆ ಹೇಳಿದ ಕರ್ಮಗಳನ್ನು ಸಾಲ(ವನ್ನು ತೀರಿಸು)ವಂತೆ ಅವಶ್ಯವಾಗಿ ಮಾಡತಕ್ಕದ್ದೆಂಬುದನ್ನು **ಪಂಚಮಹಾಯಜ್ಞ**[1] **ಪ್ರಕರಣದಲ್ಲಿ** (ಶತ.ಬ್ರಾ. ೧-೭-೨-೬) ಕರ್ತವ್ಯವೆಂದು ವಿದಿತವಾಗಿದೆ, ಮತ್ತು **ಅವದಾನ**[2] **ಪ್ರಕರಣದಲ್ಲಿ** (ಶತ. ಬ್ರಾ. ೧-೭-೨-೧) **ಮೀಮಾಂಸಿತನಾಗಿದೆ,** ವಿಚಾರ ಮಾಡಿದ್ದೂ ಆಗಿದೆ.

---

1. ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ, ದೇವಯಜ್ಞ, ಬ್ರಹ್ಮಯಜ್ಞ- ಎಂಬಿವೇ ಪಂಚಮಹಾಯಜ್ಞಗಳು.

2. ದೇವತೆಗಳಿಗಾಗಿ ಯಾಗವನ್ನೂ ಹೋಮವನ್ನೂ ಮಾಡುವದು ಅವದಾನವು ಎಂದು ಅವದಾನವನ್ನು ವಿಧಿಸಿ ಆ ವಿಧಿಗೆ ಶೇಷವಾಗಿ ಈ ಯಜ್ಞಾದಿಗಳನ್ನು ಋಣವನ್ನು ತೀರಿಸುವಂತೆ ಅವಶ್ಯವಾಗಿ ಮಾಡಬೇಕು ಎಂದು ಅರ್ಥವಾದದಲ್ಲಿ ಹೇಳಿರುತ್ತದೆ.

## ಪ್ರವೃತ್ತಿಗೆ ಕಾರಣವಾಗಿರುವ ಕಾಮ

(ಉಪನಿಷತ್ತು)

**ಆತ್ಮೈವೇದಮಗ್ರ ಆಸೀದೇಕ ಏವ ಸೋಽಕಾಮಯತ ಜಾಯಾ ಮೇ ಸ್ಯಾದಥ ಪ್ರಜಾಯೇಯಾಥ ವಿತ್ತಂ ಮೇ ಸ್ಯಾದಥ ಕರ್ಮ ಕುರ್ವೀಯೇತ್ಯೇತಾವಾನ್ ವೈ ಕಾಮೋ ನೇಚ್ಛಗ್ಂಶ್ಚನಾತೋ ಭೂಯೋ ವಿನ್ದೇತ್ ತಸ್ಮಾದಪ್ಯೇತರ್ಹ್ಯೇಕಾಕೀ ಕಾಮಯತೇ ಜಾಯಾ ಮೇ ಸ್ಯಾದಥ ಪ್ರಜಾಯೇಯಾಥ ವಿತ್ತಂ ಮೇ ಸ್ಯಾದಥ ಕರ್ಮ ಕುರ್ವೀಯೇತಿ ಸ ಯಾವದಪ್ಯೇತೇಷಾಮೇಕೈಕಂ ನ ಪ್ರಾಪ್ನೋತ್ಯಕೃತ್ಸ್ನ ಏವ ತಾವನ್ಮನ್ಯತೇ ತಸ್ಯೋ ಕೃತ್ಸ್ನತಾ ಮನ ಏವಾಸ್ಯಾತ್ಮಾ ವಾಗ್ಜಾಯಾ ಪ್ರಾಣಃ ಪ್ರಜಾ ಚಕ್ಷುರ್ಮಾನುಷಂ ವಿತ್ತಂ ಚಕ್ಷುಷಾ ಹಿ ತದ್ವಿನ್ದತೇ ಶ್ರೋತ್ರಂ ದೈವಗ್ಂ ಶ್ರೋತ್ರೇಣ ಹಿ ತಚ್ಛೃಣೋತ್ಯಾತ್ಮೈವಾಸ್ಯ ಕರ್ಮಾಽಽತ್ಮನಾ ಹಿ ಕರ್ಮ ಕರೋತಿ ಸ ಏಷ ಪಾಙ್ಕ್ತೋ ಯಜ್ಞಃ ಪಾಙ್ಕ್ತಃ ಪಶುಃ ಪಾಙ್ಕ್ತಃ ಪುರುಷಃ ಪಾಙ್ಕ್ತಮಿದಗ್ಂ ಸರ್ವಂ ಯದಿದಂ ಕಿಂಚ ತದಿದಗ್ಂ ಸರ್ವಮಾಪ್ನೋತಿ ಯ ಏವಂ ವೇದ ॥ ೧೭ ॥**

೧೭. ಇದು ಮೊದಲು ಆತ್ಮನೇ ಆಗಿತ್ತು, (ಆತ್ಮ)ನೊಬ್ಬನೇ (ಆಗಿತ್ತು). ಅವನು ಕಾಮಿಸಿದನೇನೆಂದರೆ "ನನಗೆ ಹೆಂಡತಿಯಾಗಬೇಕು, ಆಗ ಪ್ರಜೆಯಾಗುವೆನು : ಇನ್ನು ನನಗೆ ವಿತ್ತವಾಗಬೇಕು, ಆಗ ಕರ್ಮವನ್ನು ಮಾಡುವೆನು''. ಇಷ್ಟೇ ಕಾಮವು, ಇಚ್ಛಿಸಿದರೂ ಇದಕ್ಕಿಂತ ಹೆಚ್ಚಾಗಿ ಪಡೆದುಕೊಳ್ಳಲಾರನು. ಆದ್ದರಿಂದ ಈಗಲೂ ಕೂಡ ಒಬ್ಬನೇ ಆಗಿದ್ದರೆ "ನನಗೆ ಹೆಂಡತಿಯಾಗಬೇಕು, ಆಗ ಹುಟ್ಟುವೆನು ; ಇನ್ನು ನನಗೆ ವಿತ್ತವಾಗಬೇಕು, ಆಗ ಕರ್ಮವನ್ನು ಮಾಡುವೆನು'' ಎಂದು ಕಾಮಿಸುತ್ತಾನೆ. ಅವನು ಎಲ್ಲಿಯವರೆಗೆ ಇವುಗಳಲ್ಲಿ ಒಂದೊಂದನ್ನು ಪಡೆದುಕೊಳ್ಳುವದಿಲ್ಲವೋ ಅಲ್ಲಿಯವರೆಗೆ (ತಾನು) ಅಪೂರ್ಣನೆಂದೇ ತಿಳಿದುಕೊಳ್ಳುತ್ತಾನೆ. ಅವನ ಪೂರ್ಣತ್ವವು (ಹೀಗೆ): ಅವನಿಗೆ ಮನಸ್ಸೇ ಆತ್ಮವು, ವಾಕ್ಕೇ ಹೆಂಡತಿಯು, ಪ್ರಾಣವೇ ಪ್ರಜೆ ; ಚಕ್ಷುಸ್ಸು ಮಾನುಷವಿತ್ತವು, ಏಕೆಂದರೆ ಚಕ್ಷುಸ್ಸಿನಿಂದಲೇ ಅದನ್ನು ಪಡೆದುಕೊಳ್ಳುತ್ತಾನೆ ; ಶ್ರೋತ್ರವು ದೈವ(ವಿತ್ತವು), ಏಕೆಂ

ದರೆ ಶ್ರೋತ್ರದಿಂದಲೇ ಅದನ್ನು ಕೇಳುತ್ತಾನೆ; ಆತ್ಮವೇ ಅವನಿಗೆ ಕರ್ಮವು, ಏಕೆಂದರೆ ಆತ್ಮದಿಂದಲೇ ಕರ್ಮವನ್ನು ಮಾಡುತ್ತಾನೆ. ಆ ಈ ಪಾಙ್ಕ್ತವು ಯಜ್ಞವು ಪಶುವು ಪಾಙ್ಕ್ತವು, ಪುರುಷನು ಪಾಙ್ಕ್ತವು, ಈ ಏನೇನಿದೆಯೋ ಇದೆಲ್ಲವೂ ಪಾಙ್ಕ್ತವು, ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಆ ಇದೆಲ್ಲವನ್ನೂ ಪಡೆದು ಕೊಳ್ಳುತ್ತಾನೆ.

## ಕಂಡಿಕೆಯ ಸಂಬಂಧ

(ಭಾಷ್ಯ)

೧೯೪. ಆತ್ಮೈವೇದಮಗ್ರ ಆಸೀತ್ । ಬ್ರಹ್ಮ ವಿದ್ವಾಂಶ್ಚೇತ್ ತಸ್ಮಾತ್ ಪಶುಭಾವಾತ್ ಕರ್ತವ್ಯತಾಬನ್ಧನರೂಪಾತ್ ಪ್ರತಿಮುಚ್ಯತೇ। ಕೇನಾಯಂ ಕಾರಿತಃ ಕರ್ಮಬನ್ಧನಾಧಿಕಾರೇ ಅವಶ ಇವ ಪ್ರವರ್ತತೇ ನ ಪುನಃ ತದ್ವಿಮೋಕ್ಷಣೋಪಾಯೇ ವಿದ್ಯಾಧಿಕಾರೇ ಇತಿ? ನನೂಕ್ತಂ ದೇವಾ ರಕ್ಷನ್ತೀತಿ। ಬಾಢಮ್। ಕರ್ಮಾಧಿಕಾರಸ್ಥಗೋಚರಾರೂಢಾನೇವ ತೇಽಪಿ ರಕ್ಷನ್ತಿ। ಅನ್ಯಥಾ ಅಕೃತಾಭ್ಯಾಗಮಕೃತನಾಶಪ್ರಸಙ್ಗಾತ್। ನ ತು ಸಾಮಾನ್ಯಂ ಪುರುಷಮಾತ್ರಂ ವಿಶಿಷ್ಟಾಧಿಕಾರಾನಾರೂಢಮ್। ತಸ್ಮಾತ್ ಭವಿತವ್ಯಂ ತೇನ ಯೇನ ಪ್ರೇರಿತಃ ಅವಶ ಏವ ಬಹಿರ್ಮುಖೀ ಭವತಿ ಸ್ವಸ್ಮಾಲ್ಲೋಕಾತ್। ನನು ಅವಿದ್ಯಾ ಸಾ। ಅವಿದ್ಯಾವಾನ್ ಹಿ ಬಹಿರ್ಮುಖೀಭೂತಃ ಪ್ರವರ್ತತೇ। ಸಾಪಿ ನೈವ ಪ್ರವರ್ತಿಕಾ। ವಸ್ತುಸ್ವರೂಪಾವರಣಾತ್ಮಿಕಾ ಹಿ ಸಾ। ಪ್ರವರ್ತಕಬೀಜತ್ವಂ ತು ಪ್ರತಿಪದ್ಯತೇ। ಅನ್ಧತ್ವಮಿವ ಗರ್ತಾದಿಪತನಪ್ರವೃತ್ತಿಹೇತುಃ। ಏವಂ ತರ್ಹಿ ಉಚ್ಯತಾಂ ಕಿಂ ತತ್ ಯತ್ಪ್ರವೃತ್ತಿಹೇತುರಿತಿ। ತದಿಹ ಅಭಿಧೀಯತೇ । ಏಷಣಾ ಕಾಮಃ ಸಃ। 'ಸ್ವಾಭಾವಿಕ್ಯಾಮ್ ಅವಿದ್ಯಾಯಾಂ ವರ್ತಮಾನಾಃ ಬಾಲಾಃ ಪರಾಚಃ ಕಾಮಾನನುಯನ್ತಿ' (ಕ. ೨-೧-೨) ಇತಿ ಹಿ ಕಾಠಕಶ್ರುತೌ। ಸ್ಮೃತೌ ಚ 'ಕಾಮ ಏಷ ಕ್ರೋಧ ಏಷಃ" (ಗೀ. ೩-೩೭) ಇತ್ಯಾದಿ। ಮಾನವೇ ಚ ಸರ್ವಾ ಪ್ರವೃತ್ತಿಃ ಕಾಮಹೈತುಕ್ಯೇವ ಇತಿ। ಸ ಏಷೋಽರ್ಥ ಸವಿಸ್ತರಃ ಪ್ರದರ್ಶ್ಯತ ಇಹ ಆ ಅಧ್ಯಾಯಪರಿಸಮಾಪ್ತೇಃ ॥

(ಭಾಷ್ಯಾರ್ಥ)

'ಆತ್ಮೈವೇದಮಗ್ರ ಆಸೀತ್' (ಎಂಬ ಕಂಡಿಕೆಯ ಸಂಬಂಧವೇನೆಂದರೆ) ಬ್ರಹ್ಮವನ್ನು ಅರಿತುಕೊಂಡರೆ ಕರ್ತವ್ಯತಾಬಂಧರೂಪವಾದ ಆ ಪಶುಭಾವದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಈ (ಜೀವನು) ಪರತಂತ್ರನಂತೆ ಕರ್ಮ

ಬಂಧನವ ಅಧಿಕಾರದಲ್ಲಿ ತೊಡಗುತ್ತಾನೆಯೋ ಹೊರತು ಅದರಿಂದ ಬಿಡುಗಡೆಯಾಗುವ ಉಪಾಯವಾದ ವಿದ್ಯಾಧಿಕಾರದಲ್ಲಿ (ತೊಡಗುವದಿಲ್ಲವಲ್ಲ), ಏತರಿಂದ ಪ್ರೇರಿತನಾಗಿ (ಹಾಗೆ ಮಾಡುತ್ತಾನೆ) ?

(ಶಂಕೆ) :- ದೇವತೆಗಳು (ವಿದ್ಯೆಗೆ ಹೋಗದಂತೆ) ಕಾಪಾಡುತ್ತಾರೆ (೧-೪-೧೬) ಎಂದು ಹೇಳಿತ್ತಲ್ಲ !

(ಪರಿಹಾರ) :- ನಿಜ. (ಹೇಳಿದೆ. ಆದರೆ) ಕರ್ಮಾಧಿಕಾರದಿಂದ ತಮಗೆ ವಿಷಯರಾದವರನ್ನೇ ಆ (ದೇವತೆ)ಗಳೂ ಕಾಪಾಡುತ್ತಾರೆ; ಹೀಗಲ್ಲದಿದ್ದರೆ ಮಾಡದಿದ್ದ (ಕರ್ಮದ) ಫಲವು ಬರುವದು, ಮಾಡಿದ್ದರ (ಫಲವು) ನಾಶವಾಗುವದು ಎಂದಾದೀತು. (ಅಷ್ಟೇ ಹೊರತು) ಅಸಾಧಾರಣವಾದ ಅಧಿಕಾರವನ್ನು ಪಡೆದುಕೊಳ್ಳದಿರುವ ಸಾಮಾನ್ಯಪುರುಷಮಾತ್ರನನ್ನು (ಹಾಗೆ ಕಾಪಾಡು)ವದಿಲ್ಲ. ಆದ್ದರಿಂದ ಯಾವದರಿಂದ ಪ್ರೇರಿತನಾಗಿ ಪರಾಧೀನನೇ ಆಗಿ ಸ್ವಲೋಕವನ್ನು ಬಿಟ್ಟು ಬಹಿರ್ಮುಖನಾಗುತ್ತಾನೆಯೋ ಅಂಥದ್ದೊಂದು ಇರಬೇಕು.

(ಶಂಕೆ) :- **ಅವಿದ್ಯೆಯೋ ಅದಲ್ಲವೆ? ಅವಿದ್ಯಾವಂತನಲ್ಲವೆ, ಬಹಿರ್ಮುಖನಾಗಿ ಪ್ರವರ್ತಿಸುತ್ತಾನೆ ?**

(ಪರಿಹಾರ) :- **ಅದೂ ಪ್ರವರ್ತಕವಲ್ಲವೇ ಅಲ್ಲ. ಏಕೆಂದರೆ ಅದು ವಸ್ತುಸ್ವರೂಪವನ್ನು ಮುಚ್ಚುವ ಸ್ವಭಾವದ್ದು.**[1] ಕುರುಡು ಹೇಗೆ ಗುಂಡಿಯೇ ಮುಂತಾದವುಗಳಲ್ಲಿ ಬೀಳುವದಕ್ಕೆ ಕಾರಣವಾಗಿರುತ್ತದೆಯೋ ಹಾಗೆ (ಅದು) ಪ್ರವರ್ತಕಬೀಜವೇನೋ ಆಗಬಹುದು.[2]

(ಪ್ರಶ್ನೆ) :- ಹಾಗಾದರೆ ಪ್ರವೃತ್ತಿಗೆ ಹೇತುವಾಗಿರುವದಲ್ಲ, ಅದು ಯಾವದು? ಹೇಳಿರಿ.

(ಉತ್ತರ) :- ಅದನ್ನು ಇಲ್ಲಿ (ಶ್ರುತಿಯಲ್ಲಿ) ಹೇಳಿರುತ್ತದೆ. ಅದೇ **ಏಷಣೆ, ಕಾಮ**. "ಸ್ವಾಭಾವಿಕವಾದ ಅವಿದ್ಯೆಯಲ್ಲಿರುವ ಬಾಲರು ಹೊರಗಿನ ಕಾಮಗಳನ್ನು ಹಿಂಬಾಲಿಸಿಕೊಂಡು ಹೋಗುತ್ತಾರೆ" (ಕ. ೨-೧-೨ರ ಅರ್ಥ) ಎಂದಲ್ಲವೆ, ಕಾಠಕಶ್ರುತಿಯಲ್ಲಿದೆ? "ಇದೇ ಕಾಮವು, ಇದೇ ಕ್ರೋಧವು" (ಗೀ. ೩-೩೭) ಎಂದು ಮುಂತಾಗಿ ಸ್ಮೃತಿಯಲ್ಲಿಯೂ ಇದೆ. **ಮಾನವಸ್ಮೃತಿ**ಯಲ್ಲಿಯೂ "ಪ್ರವೃತ್ತಿಯೆಲ್ಲವೂ ಕಾಮಹೇತುವೇ" (ಮನು. ೨-೪ರ ಅರ್ಥ)[3]

---

1. ಅವಿದ್ಯೆಯು ತತ್ತ್ವವನ್ನು ತಿಳಿಯದಂತೆ ಅಡ್ಡಿಯಾಗಿರುವದರಿಂದ ಅದನ್ನು ಆವರಣಾತ್ಮಕವೆಂದಿದೆ. ಜ್ಞಾನಕ್ಕೆ ಯಾವದೋ ಒಂದು ನಿಜವಾದ ಮುಸುಕೇ ಇದೆ ಎಂದು ಶಂಕಿಸುವ ಮೂಲಾವಿದ್ಯಾವಾದಕ್ಕೆ ಇಲ್ಲಿ ಅವಕಾಶವಿಲ್ಲ.

2. ಅವಿದ್ಯೆಯು ತಪ್ಪುತಿಳಿವಳಿಕೆಯಾದ್ದರಿಂದ ತತ್ತ್ವವನ್ನು ಮರೆಮಾಡಿ ಅತತ್ತ್ವದಲ್ಲಿ ಪ್ರದರ್ಶಿಸುವದಕ್ಕೆ ಕಾರಣವೂ ಆಗಬಹುದು.

3. 'ಯದ್ಯದ್ಧಿ ಕುರುತೇ ಜನ್ತುಸ್ತತ್ತತ್ಕಾಮಸ್ಯ ಚೇಷ್ಟಿತಮ್' -ಜೀವನು ಯಾವ ಯಾವುದನ್ನು ಮಾಡುತ್ತಾನೋ ಅದೆಲ್ಲವೂ ಕಾಮದ ವ್ಯಾಪಾರವು-ಎಂದು ಮನುವಾಕ್ಯ.

ಎಂದು (ಹೇಳಿದೆ). ಆ ಈ ಅರ್ಥವನ್ನು (ಈ) ಅಧ್ಯಾಯವು ಮುಗಿಯುವವರೆಗೂ ಸವಿಸ್ತರವಾಗಿ ಇಲ್ಲಿ ತಿಳಿಸಲಾಗುತ್ತದೆ.

## ಬ್ರಹ್ಮಚಾರಿಯ ಬಯಕೆ

(ಭಾಷ್ಯ)

೧೯೪. ಆತ್ಮೈವೇದಮಗ್ರ ಆಸೀತ್। ಆತ್ಮೈವ ಸ್ವಾಭಾವಿಕೋಽವಿದ್ವಾನ್ ಕಾರ್ಯಕರಣಸಂಘಾತಲಕ್ಷಣೋ ವರ್ಣೀ ಅಗ್ರೇ ಪ್ರಾಗ್ದಾರಸಂಬನ್ಧಾತ್ ಆತ್ಮಾ ಇತ್ಯಭಿಧೀಯತೇ। ತಸ್ಮಾತ್ ಆತ್ಮನಃ ಪೃಥಗ್ಭೂತಂ ಕಾಮ್ಯಮಾನಂ ಜಾಯಾದಿಭೇದರೂಪಂ ನಾಸೀತ್। ಸ ಏವೈಕ ಆಸೀತ್ ಜಾಯಾದ್ಯೇಷಣಾಬೀಜಭೂತಾವಿದ್ಯಾವಾನ್ ಏಕ ಏವ ಆಸೀತ್। ಸ್ವಾಭಾವಿಕ್ಯಾಸ್ವಾತ್ಮನಿ ಕರ್ತ್ರಾದಿಕಾರಕಕ್ರಿಯಾಫಲಾತ್ಮಕತಾಧ್ಯಾರೋಪಲಕ್ಷಣಯಾ ಅವಿದ್ಯಾವಾಸನಯಾ ವಾಸಿತಃ। ಸೋಽಕಾಮಯತ ಕಾಮಿತವಾನ್। ಕಥಮ್? ಜಾಯಾ ಕರ್ಮಾಧಿಕಾರಹೇತುಭೂತಾ ಮೇ ಮಮ ಕರ್ತುಃ ಸ್ಯಾತ್। ತಯಾ ವಿನಾ ಅಹಮ್ ಅನಧಿಕೃತ ಏವ ಕರ್ಮಣಿ। ಅತಃ ಕರ್ಮಾಧಿಕಾರಸಂಪತ್ತಯೇ ಭವೇತ್ ಜಾಯಾ। ಅಥ ಅಹಂ ಪ್ರಜಾಯೇಯ ಪ್ರಜಾರೂಪೇಣ ಅಹಮೇವ ಉತ್ಪದ್ಯೇಯ। ಅಥ ವಿತ್ತಂ ಮೇ ಸ್ಯಾತ್ ಕರ್ಮಸಾಧನಂ ಗವಾದಿಲಕ್ಷಣಮ್। ಅಥ ಅಹಮ್ ಅಭ್ಯುದಯನಿಃಶ್ರೇಯಸಸಾಧನಂ ಕರ್ಮ ಕುರ್ವೀಯ। ಯೇನಾಹಮ್ ಅನೃಣೀ ಭೂತ್ವಾ ದೇವಾದೀನಾಂ ಲೋಕಾನ್ ಪ್ರಾಪ್ನುಯಾಮ್, ತತ್ ಕರ್ಮ ಕುರ್ವೀಯ। ಕಾಮ್ಯಾನಿ ಚ ಪುತ್ರವಿತ್ತಸ್ವರ್ಗಾದಿಸಾಧನಾನಿ ॥

(ಭಾಷ್ಯಾರ್ಥ)

'ಆತ್ಮೈವೇದಮಗ್ರ ಆಸೀತ್' 'ಇದು ಮೊದಲು ಆತ್ಮನೇ ಆಗಿತ್ತು' (ಎಂಬ ಕಂಡಿಕೆಯ ಅರ್ಥವೇನೆಂದರೆ) 'ಆತ್ಮನೇ' (ಎಂಬಲ್ಲಿ) ಸ್ವಾಭಾವಿಕವಾಗಿರುವ ಅವಿದ್ಯಾವಂತನಾದ ಕಾರ್ಯಕರಣಸಂಘಾತರೂಪನಾದ ಬ್ರಹ್ಮಚಾರಿಯನ್ನು ಮೊದಲು ಎಂದರೆ ಹೆಂಡತಿಯ ಸಂಬಂಧಕ್ಕಿಂತ ಮುಂಚಿನ ಆತ್ಮನೆಂದು ಕರೆದಿದೆ.[1] ಆ ಆತ್ಮನಿಗಿಂತ ಬೇರೆಯಾಗಿದ್ದು ಕಾಮಿಸಬಹುದಾದ ಹೆಂಡತಿಯೇ ಮುಂತಾದ ಭೇದರೂಪವು ಇರಲಿಲ್ಲ, ಆ (ಆತ್ಮ)ನೊಬ್ಬನೇ ಇದ್ದನು; ಹೆಂಡತಿಯೇ ಮುಂತಾದ ಏಷಣೆಗೆ ಬೀಜವಾಗಿರುವ ಅವಿದ್ಯೆಯುಳ್ಳವನಾಗಿ (ಅವ)ನೊಬ್ಬನೇ ಇದ್ದನು. **ಸ್ವಾಭಾವಿಕವಾದ ತನ್ನ ಸ್ವರೂಪದಲ್ಲಿ ಕರ್ತ್ರಾದಿ**

---

1. ಶ್ರುತಿಯಲ್ಲಿ 'ಆತ್ಮನೊಬ್ಬನೇ ಇದ್ದನು' ಎಂದಿರುವ ವಾಕ್ಯಕ್ಕೆ ಶರೀರೇಂದ್ರಿಯಗಳ ಅಭಿಮಾನಿಯಾದ ಬ್ರಹ್ಮಚಾರಿಯೊಬ್ಬನೇ ಇದ್ದನು ಎಂದರ್ಥವೆಂದು ಭಾವ.

**ಕಾರಕಗಳ, ಕ್ರಿಯೆಗಳ, ಫಲಗಳ ಸ್ವರೂಪವನ್ನು ಅಧ್ಯಾರೋಪಣೆ ಮಾಡಿಕೊಳ್ಳುವದೆಂಬ ಅವಿದ್ಯೆಯ ವಾಸನೆಯಿಂದ ವಾಸಿತನಾದ ಆ (ಬ್ರಹ್ಮಚಾರಿಯು)**[1] ಕಾಮಿಸಿದನು, ಬಯಸಿದನು, ಹೇಗೆ ಬಯಸಿದನು ? ಎಂದರೆ (ಮೇ= ಮಮ) ಕರ್ತೃವಾದ ನನಗೆ ಕರ್ಮಾಧಿಕಾರಕ್ಕೆ ಕಾರಣಳಾಗಿರುವ ಹೆಂಡತಿಯು ಆಗಬೇಕು ; ಆಕೆಯಿಲ್ಲದಿದ್ದರೆ ನಾನು ಕರ್ಮಕ್ಕೆ ಅಧಿಕಾರಿಯೇ ಅಲ್ಲ. ಆದ್ದರಿಂದ ಕರ್ಮಾಧಿಕಾರವುಂಟಾಗುವದಕ್ಕಾಗಿ ಹೆಂಡತಿಯಾಗಬೇಕು. ಆಗ ನಾನು ಪ್ರಜೆಯಾಗುವೆನು, ಪ್ರಜಾರೂಪದಿಂದ ನಾನೇ ಹುಟ್ಟುವೆನು. ಇನ್ನು ನನಗೆ ಕರ್ಮಕ್ಕೆ ಸಾಧನವಾಗಿರುವ ಗವಾದಿಸ್ವರೂಪವಾದ ವಿತ್ತವಾಗಬೇಕು, ಆಗ ನಾನು ಅಭ್ಯುದಯಕ್ಕೂ ನಿಃಶ್ರೇಯಸಕ್ಕೂ ಸಾಧನವಾಗಿರುವ ಕರ್ಮವನ್ನು ಮಾಡುವೆನು. ಯಾವದರಿಂದ ನಾನು ಋಣವಿಲ್ಲದವನಾಗಿ ದೇವಾದಿಗಳ ಲೋಕಗಳನ್ನು ಪಡೆದುಕೊಳ್ಳಬಹುದೋ ಆ ಕರ್ಮವನ್ನು ಮಾಡುವೆನು; ಪುತ್ರ, ವಿತ್ತ, ಸ್ವರ್ಗ –ಮುಂತಾದವುಕ್ಕೆ ಸಾಧನವಾಗಿರುವ ಕಾಮ್ಯ(ಕರ್ಮ)ಗಳನ್ನೂ ಮಾಡುವೆನು.

## ಸಾಧ್ಯಸಾಧನವೆಲ್ಲವೂ ಕಾಮವೇ

(ಭಾಷ್ಯ)

೧೯೬. ಏತಾವಾನ್ ವೈ ಕಾಮಃ ಏತಾವದ್ವಿಷಯಪರಿಚ್ಛಿನ್ನಃ ಇತ್ಯರ್ಥಃ। ಏತಾವಾನೇವ ಹಿ ಕಾಮಯಿತವ್ಯೋ ವಿಷಯಃ ಯದುತ ಜಾಯಾಪುತ್ರವಿತ್ತಕರ್ಮಾಣಿ ಸಾಧನಲಕ್ಷಣಾ ಏಷಣಾ। ಲೋಕಾಶ್ಚ ತ್ರಯಃ ಮನುಷ್ಯಲೋಕೋ ಪಿತೃಲೋಕೋ ದೇವಲೋಕಃ ಇತಿ ಫಲಭೂತಾಃ[2] ಸಾಧ್ಯೈಷಣಾಯಾಶ್ಚ ಅಸ್ಯಾಃ। ತದರ್ಥಾ ಹಿ ಜಾಯಾಪುತ್ರವಿತ್ತಕರ್ಮಲಕ್ಷಣಾ ಸಾಧನೈಷಣಾ। ತಸ್ಮಾತ್ ಸೈವ ಏಕಾ ಏಷಣಾ ಯಾ ಲೋಕೈಷಣಾ। ಸಾ ಏಕೈವ[3] ಸತೀ ಏಷಣಾ ಸಾಧನಾಪೇಕ್ಷಾ ಇತಿ ದ್ವಿಧಾ। ಅತೋಽವಧಾರಯಿಷ್ಯತಿ 'ಉಭೇ ಹ್ಯೇತೇ ಏಷಣೇ ಏವ' (೩-೫-೧) ಇತಿ। ಫಲಾರ್ಥತ್ವಾತ್ ಸರ್ವಾರಮ್ಭಸ್ಯ ಲೋಕೈಷಣಾ ಅರ್ಥಪ್ರಾಪ್ತಾ ಉಕ್ತೈವ ಇತಿ ಏತಾವಾನ್ ವೈ ಏತಾವಾನೇವ ಕಾಮಃ ಇತ್ಯವಧ್ರಿಯತೇ। ಭೋಜನೇ ಅಭಿಹಿತೇ ತೃಪ್ತಿರ್ನ ಹಿ ಪೃಥಗ್

---

1. ಬ್ರಹ್ಮಚಾರಿಯ ಚಿತ್ತದಲ್ಲಿ ಅನಾದಿಯಾದ ಅವಿದ್ಯಾವಾಸನೆಯು ಇರುವದರಿಂದಲೇ ಹೀಗೆ ಬಯಸುತ್ತಾನೆ; ಆ ವಾಸನೆಯಿಲ್ಲದವನು ಪಾರಿವ್ರಾಜ್ಯವನ್ನೇ ಸ್ವೀಕರಿಸುತ್ತಾನೆ ಎಂದು ಭಾವ.

2. 'ಫಲಭೂತಾಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. 'ಸೈವ' ಎಂಬ ಪಾಠಕ್ಕಿಂತ ಇದೇ ಮೇಲು.

ಅಭಿಧೇಯಾ। ತದರ್ಥತ್ವಾತ್ ಭೋಜನಸ್ಯ। ತೇ ಏತೇ ಏಷಣೇ ಸಾಧ್ಯಸಾಧನ ಲಕ್ಷಣೇ ಕಾಮಃ ಯೇನ ಪ್ರಯುಕ್ತೋ ಅವಿದ್ವಾನ್ ಅವಶ ಏವ ಕೋಶಕಾರ ವತ್ ಆತ್ಮಾನಂ ವೇಷ್ಟಯತಿ. ಕರ್ಮಮಾರ್ಗೇ ಏವ ಆತ್ಮಾನಂ ಪ್ರಣಿದಧತ್ ಬಹಿರ್ಮುಖೀಭೂತೋ ನ ಸ್ವಂ ಲೋಕಂ ಪ್ರತಿಜಾನಾತಿ। ತಥಾ ಚ ತೈತ್ತಿರೀ ಯಕೇ "ಅಗ್ನಿಮುಗ್ಧೋ ಹೈವ ಧೂಮತಾನ್ತಃ ಸ್ವಂ ಲೋಕಂ ನ ಪ್ರತಿಜಾನಾತಿ" (ತೈ. ಬ್ರಾ. ३-೧೦-೧೧) ಇತಿ। ಕಥಂ ಪುನರೇತಾವತ್ತ್ವಮ್ ಅವಧಾರ್ಯತೇ ಕಾಮಾನಾಮ್ ಅನನ್ತತ್ವಾತ್ ? ಅನನ್ತಾ ಹಿ ಕಾಮಾಃ। ಇತ್ಯೇತದಾಶಙ್ಕ್ಯ ಹೇತುಮಾಹ। ಯಸ್ಮಾತ್ ನೇಚ್ಛಂಶ್ಚನ ನೇಚ್ಛನ್ನಪಿ ಅತೋಽಸ್ಮಾತ್ ಫಲ ಸಾಧನಲಕ್ಷಣಾಭ್ಯಃ ಭೂಯಃ ಅಧಿಕತರಂ ನ ವಿನ್ದೇತ್ ನ ಲಭೇತ। ನ ಹಿ ಲೋಕೇ ಫಲಸಾಧನವ್ಯತಿರಿಕ್ತಂ ದೃಷ್ಟಮ್ ಅದೃಷ್ಟಂ ವಾ ಲಬ್ಧವ್ಯಮಸ್ತಿ। ಲಬ್ಧವ್ಯವಿಷಯೋ ಹಿ ಕಾಮಃ। ತಸ್ಯ ಚ ಏತದ್ವ್ಯತಿರೇಕೇಣ ಅಭಾವಾತ್ ಯುಕ್ತಂ ವಕ್ತುಮ್ 'ಏತಾವಾನ್ವೈ ಕಾಮಃ' ಇತಿ। ಏತದುಕ್ತಂ ಭವತಿ। ದೃಷ್ಟಾ ರ್ಥಮ್ ಅದೃಷ್ಟಾರ್ಥಂ ವಾ ಸಾಧ್ಯಸಾಧನಲಕ್ಷಣಮ್ ಅವಿದ್ಯಾವತ್ಪುರುಷಾಧಿ ಕಾರವಿಷಯಮ್ ಏಷಣಾದ್ವಯಂ ಕಾಮಃ। ಅತೋಽಸ್ಮಾತ್ ವಿದುಷಾ ವ್ಯುತ್ಥಾತವ್ಯಮ್ ಇತಿ ॥

(ಭಾಷ್ಯಾರ್ಥ)

(ಇಗೋ) ಇಷ್ಟೇ ಕಾಮವು; (ಇಷ್ಟೇ) ಎಂದರೆ ಇಷ್ಟೇ ವಿಷಯಗಳಿಂದ ಪರಿಚ್ಛಿನ್ನವಾಗಿರುತ್ತದೆ ಎಂದರ್ಥ. ಹೆಂಡತಿ, ಮಗ, ವಿತ್ತ, ಕರ್ಮ-ಎಂಬ ಸಾಧ ನೈಷಣೆ, ಮನುಷ್ಯಲೋಕ, ಪಿತೃಲೋಕ. ದೇವಲೋಕ -ಎಂದು ಮೂರು ಲೋಕ ಗಳಾಗಿ ಈ ಸಾಧನೈಷಣೆಗೆ ಫಲವಾಗಿರುವ (ಏಷಣೆ)-ಎಂಬ ಇಷ್ಟೇ (ಅಲ್ಲವೆ), ಕಾಮಿಸಬಹುದಾದ ವಿಷಯವು ? ಆ (ಫಲರೂಪವಾದ ಏಷಣೆಗಾಗಿಯಲ್ಲವೆ, ಹೆಂಡತಿ, ಮಗ, ವಿತ್ತ, ಕರ್ಮ- ಎಂಬ ಸಾಧನೈಷಣೆ ? ಆದ್ದರಿಂದ ಲೋಕೈಷಣೆ ಎಂಬುದಿದೆಯಲ್ಲ; ಅದೊಂದೇ (ನಿಜವಾಗಿ) ಏಷಣೆಯು. **ಅದೊಂದೇ ಏಷಣೆ ಯಾಗಿದ್ದರೂ ಸಾಧನವನ್ನೂ ಬಯಸುತ್ತದೆಯಾದ್ದರಿಂದ ಎರಡು ಬಗೆಯಾಗಿದೆ.**[1] ಆದ್ದರಿಂದಲೇ ಮುಂದೆ 'ಇವೆರಡೂ ಏಷಣೆಗಳೇ' (३-೫-೧ ೪-೪-೨೨) ಎಂದು ಹೇಳಲಾಗುವದು. ಯಾವದನ್ನು ಮಾಡುವದೂ ಫಲ ಕೋಸ್ಕರವಾದ್ದರಿಂದ ಲೋಕೈಷಣೆಯು ಅರ್ಥಪ್ರಾಪ್ತವಾಗಿರುವದರಿಂದ ಹೇಳಿ ದಂತೆಯೇ ಆಯಿತು ಎಂದು (ಇಲ್ಲಿ ಏತಾವಾನ್ ವೈ ಏತಾವಾನೇವ) 'ಇಷ್ಟೇ

---

1. ಹೆಂಡತಿ ಮುಂತಾದವರು ಕರ್ಮಕ್ಕೆ ಸಾಧನವಾಗಿ, ಕರ್ಮವು ಲೋಕಕ್ಕಾಗಿ ಬೇಕು; ಆದ್ದರಿಂದ ಲೋಕವೊಂದೇ ಕಾಮವು. ಆದ್ದರಿಂದ ಲೋಕರೂಪವಾದ ಕಾಮ ವನ್ನೊಳಗೊಂಡ ಸಾಧನಸಹಿತಕರ್ಮವನ್ನೇ ಇಲ್ಲಿ ಹೇಳಿದೆ ಎಂದು ಭಾವ.

ಕಾಮವು' ಎಂದು ಅವಧಾರಣೆಮಾಡಿರುತ್ತದೆ. ಊಟವನ್ನು ಹೇಳಿದರೆ ತೃಪ್ತಿಯನ್ನು ಬೇರೆಯಾಗಿ ಹೇಳಬೇಕಾದದ್ದಿಲ್ಲ[1] ? ಏಕೆಂದರೆ ಊಟವು ಅದಕ್ಕಾಗಿಯೇ ಅಲ್ಲವೆ ?

ಆ ಈ ಸಾಧ್ಯಸಾಧನರೂಪವಾಗಿರುವ ಏಷಣೆಗಳೇ ಕಾಮವು. ಇದರಿಂದ ಪ್ರೇರಿತನಾಗಿ ಅವಿದ್ಯಾವಂತನು ಪರವಶನಾಗಿಯೇ ರೇಷ್ಮೆಯ ಹುಳುವಿನಂತೆ ತನ್ನ ಸುತ್ತಲೂ ಸುತ್ತಿಸಿಕೊಳ್ಳುತ್ತಾನೆ, ಕರ್ಮಮಾರ್ಗದಲ್ಲಿಯೇ ಮನಸ್ಸನ್ನಿಟ್ಟು ಬಹಿರ್ಮುಖಿಯಾಗಿ ತನ್ನ ಲೋಕವನ್ನು ಅರಿತುಕೊಳ್ಳದೆ ಇರುತ್ತಾನೆ. ಆದ್ದರಿಂದಲೇ ತೈತ್ತಿರೀಯಕದಲ್ಲಿ "ಅಗ್ನಿಮುಗ್ಧನಾಗಿ ಧೂಮತಾಂತನಾಗಿ[2] ತನ್ನ ಲೋಕವನ್ನು ಅರಿತುಕೊಳ್ಳದೆ ಇರುವನು" (ತೈ. ಬ್ರಾ. ೩-೧೦-೧೧) ಎಂದು (ಹೇಳಿದೆ).

ಕಾಮಗಳು ಅನಂತವಾಗಿರುವಲ್ಲಿ ಇಷ್ಟೇ ಕಾಮವು ಎಂದು ಅವಧಾರಣೆ ಮಾಡಿದ್ದು ಹೇಗೆ (ಸರಿ) ? ಕಾಮಗಳು ಅನಂತವಲ್ಲವೆ ? ಎಂಬಿವನ್ನು ಶಂಕಿಸಿ (ಶ್ರುತಿಯು) ಇದಕ್ಕೆ ಕಾರಣವನ್ನು ಹೇಳುತ್ತದೆ : ಏಕೆಂದರೆ (ನೇಚ್ಛಂಶ್ಚನ= ನೇಚ್ಛನ್ನಪಿ) ಬಯಸಿದರೂ ಇಲ್ಲ ; ಇದಕ್ಕಿಂತ ಈ ಫಲಸಾಧನರೂಪವಾಗಿರುವದಕ್ಕಿಂತ ಹೆಚ್ಚಾಗಿ ಇನ್ನೂ ಅಧಿಕವಾಗಿ ಪಡೆದುಕೊಳ್ಳಲಾರೆನು. ಲೋಕದಲ್ಲಿ ಫಲಸಾಧನಗಳಿಗಿಂತ ಬೇರೆಯಾಗಿ ದೊರಕಿಸಿಕೊಳ್ಳತಕ್ಕದ್ದು, ದೃಷ್ಟವಾಗಲಿ ಅದೃಷ್ಟವಾಗಲಿ, ಇರುವದಿಲ್ಲವಲ್ಲವೆ[3] ? ದೊರಕಿಸಿಕೊಳ್ಳತಕ್ಕದ್ದರ ವಿಷಯದಲ್ಲಿಯೇ ಅಷ್ಟೆ, ಕಾಮವು ? ಆ (ವಿಷಯವು) ಇದಕ್ಕಿಂತ ಬೇರೆಯಾಗಿಲ್ಲದ್ದರಿಂದ 'ಇಷ್ಟೇ ಕಾಮವು' ಎಂದು ಹೇಳುವದು ಸರಿ. (ಇಲ್ಲಿ) ಇಷ್ಟನ್ನು **ಹೇಳಿದಂತಾಗಿದೆ. ದೃಷ್ಟಾರ್ಥವಾದ ಅಥವಾ ಅದೃಷ್ಟಾರ್ಥವಾದ, ಸಾಧ್ಯಸಾಧನರೂಪವಾದ, ಅವಿದ್ಯಾವಂತನಾಗಿರುವ ಪುರುಷನ ಅಧಿಕಾರಕ್ಕೆ ವಿಷಯುವಾಗಿರುವ, ಏಷಣಾದ್ವಯವು ಕಾಮವೇ ; ಜ್ಞಾನಿಯಾದವನು ಇದನ್ನು ಬಿಟ್ಟಿದ್ದು (ಸಂನ್ಯಾಸವನ್ನು) ಮಾಡಬೇಕು.**

---

1. ಸಾಧನವನ್ನು ಹೇಳಿದರೆ ಫಲವು ತಾನೇ ಸೇರಿಕೊಂಡಿರುವದರಿಂದ ಮಾತಿನಿಂದ ಅದನ್ನು ಬೇರೆ ಹೇಳಬೇಕಾದದ್ದಿಲ್ಲ.

2. ಅಗ್ನಿಪ್ರಯುಕ್ತವಾದ ಕರ್ಮಗಳಲ್ಲಿದ್ದುಕೊಂಡಿರುವ ಮೋಹದ ಕಾರಣದಿಂದ ಧೂಮತ್ವವೇ ಕೊನೆ ಎಂದು ಭಾವಿಸಿದವನಾಗಿ ಎಂದರ್ಥ. ಕರ್ಮಿಗಳು ಧೂಮಮಾರ್ಗದಿಂದ ಹೋಗುವದರಿಂದ ಆತ್ಮಲೋಕವನ್ನು ಅರಿಯರು ಎಂದು ಭಾವ.

3. ಸಾಧ್ಯಸಾಧನಗಳೆರಡನ್ನು ಬಿಟ್ಟರೆ ದೊರಕಿಸಿಕೊಳ್ಳುವದು ಮತ್ತೇನೂ ಇರುವದಕ್ಕೆ ಅವಕಾಶವೇ ಇಲ್ಲ.

# ಅವಿದ್ಯಾವಂತನಿಗೆ ಅಸಂಪೂರ್ಣತ್ವಭಾವನೆ

(ಭಾಷ್ಯ)

೧೯೭. ಯಸ್ಮಾತ್ ಏವಮ್ ಅವಿದ್ವಾನ್ ಆತ್ಮಾ[1] ಕಾಮೀ ಪೂರ್ವಂ[2] ಕಾಮಯಾಮಾಸ ತಥಾ ಪೂರ್ವತರೋಽಪಿ। ಏಷಾ ಲೋಕಾ ಸ್ಥಿತಿಃ। ಪ್ರಜಾಪತೇಶ್ಚ ಏವಮೇವ ಸರ್ಗ ಆಸೀತ್। ಸೋಽಬಿಭೇತ್ ಅವಿದ್ಯಯಾ, ತತಃ ಕಾಮಪ್ರಯುಕ್ತ ಏಕಾಕೀ ಅರಮಮಾಣಃ, ಅರತ್ಯಪಘಾತಾಯ ಸ್ತ್ರಿಯಮ್ ಐಚ್ಛತ್ ತಾಂ ಸಮಭವತ್, ತತಃ ಸರ್ಗೋಽಯಮ್ ಆಸೀತ್ ಇತಿ ಹಿ ಉಕ್ತಮ್। ತಸ್ಮಾತ್ ತತ್ಸೃಷ್ಟೌ 'ಏತರ್ಹಿ ಏತಸ್ಮಿನ್ನಪಿ ಕಾಲೇ ಏಕಾಕೀ ಸನ್ ಪ್ರಾಗ್‌ದಾರಕ್ರಿಯಾತಃ ಕಾಮಯತೇ ಜಾಯಾ ಮೇ ಸ್ಯಾತ್ ಅಥ ಪ್ರಜಾಯೇಯ ಅಥ ವಿತ್ತಂ ಮೇ ಸ್ಯಾತ್ ಅಥ ಕರ್ಮ ಕುರ್ವೀಯ' ಇತ್ಯುಕ್ತಾರ್ಥಂ ವಾಕ್ಯಮ್। ಸ ಏವಂ ಕಾಮಯಮಾನಃ ಸಂಪಾದಯಂಶ್ಚ ಜಾಯಾದೀನ್ ಯಾವತ್ (ಸಮಸ್ತಾನ್) ಸ ಏತೇಷಾಂ ಯಥೋಕ್ತಾನಾಂ ಜಾಯಾದೀನಾಮ್ ಏಕೈಕಮಪಿ ನ ಪ್ರಾಪ್ನೋತಿ ಅಕೃತ್ಸ್ನಃ ಅಸಂಪೂರ್ಣಃ ಅಹಮ್ ಇತ್ಯೇವ ತಾವತ್ ಆತ್ಮಾನಂ ಮನ್ಯತೇ। ಪಾರಿಶೇಷ್ಯಾತ್ ಸಮಸ್ತಾನೇವ ಏತಾನ್ ಸಂಪಾದಯತಿ ಯದಾ ತದಾ ತಸ್ಯ ಕೃತ್ಸ್ನತಾ॥

(ಭಾಷ್ಯಾರ್ಥ)

ಅವಿದ್ಯಾವಂತನಾದ ಆತ್ಮನು, ಕಾಮಿಯು, ಹಿಂದೆ ಹೀಗೆ ಕಾಮಿಸಿದನಲ್ಲ, ಹಾಗೆಯೇ (ಅವನಿಗಿಂತ) ಹಿಂದಿನವನೂ (ಕಾಮಿಸಿದನಲ್ಲ), ಇದೇ ಲೋಕಸ್ಥಿತಿಯು ಪ್ರಜಾಪತಿಯಿಂದಲೂ ಹೀಗೆಯೇ ಈ ಸೃಷ್ಟಿಯಾಯಿತು. 'ಅವನು ಅವಿದ್ಯೆಯಿಂದ ಭಯಪಟ್ಟನು' (೧-೪-೨), 'ಆಬಳಿಕ ಕಾಮದಿಂದ ಪ್ರೇರಿತನಾಗಿ ಒಬ್ಬನೇ ಇದ್ದುದ್ದರಿಂದ ಬೇಸರಗೊಂಡು (ಆ) ಬೇಸರವನ್ನು ಕಳೆದುಕೊಳ್ಳುವದಕ್ಕಾಗಿ ಸ್ತ್ರೀಯನ್ನು ಬಯಸಿದನು' (೧-೪-೩), 'ಆಕೆಯೊಡನೆ ಬೆರೆತನು, ಅದರಿಂದ ಸರ್ಗವಾಯಿತು' (೧-೪-೩, ೪)-ಎಂದಲ್ಲವೆ, ಹಿಂದೆ ಹೇಳಿದೆ ?

(ಲೋಕಸ್ಥಿತಿಯು ಹೀಗಿರುವದಷ್ಟೆ), ಆ ಕಾರಣದಿಂದ ಆ (ಪ್ರಜಾಪತಿಯ) ಸೃಷ್ಟಿಯಲ್ಲಿ ಈಗಲೂ ಈ ಕಾಲದಲ್ಲಿಯೂ ಕೂಡ ಹೆಂಡತಿಯನ್ನು ಸ್ವೀಕಾರ ಮಾಡುವ ಮುಂಚೆ ಒಬ್ಬನೇ ಆಗಿದ್ದರೆ 'ನನಗೆ ಹೆಂಡತಿಯಾಗಬೇಕು, ಆಗ ಹುಟ್ಟುವೆನು', ಇನ್ನು ನನಗೆ ವಿತ್ತವಾಗಬೇಕು, ಆಗ ಕರ್ಮವನ್ನು ಮಾಡುವೆನು' (ಎಂದು ಕಾಮಿಸುತ್ತಾನೆ). (ಈ) ವಾಕ್ಯಕ್ಕೆ ಅರ್ಥವನ್ನು (ಆಗಲೆ) ಹೇಳಿದ್ದಾಗಿದೆ. ಅವನು ಹೀಗೆಂದು ಕಾಮಿಸಿ ಹೆಂಡತಿಯೇ ಮುಂತಾದವರನ್ನು ಸಂಪಾದಿಸಿ

1. "ಅನಾತ್ಮಕಾಮೀ" ಎಂಬ ಪಾ॥ ಪಾಠವು ಅನವಶ್ಯ.
2. "ಪೂರ್ವಃ" ಎಂದು ಪಾ॥

ಕೊಳ್ಳುತ್ತಿರುವಲ್ಲಿ ಎಲ್ಲಿಯವರೆಗೆ ಈ ಮೇಲೆ ಹೇಳಿದ ಹೆಂಡತಿಯೇ ಮುಂತಾದ ವರಲ್ಲಿ ಒಂದೊಂದನ್ನು ಕೂಡ ಪಡೆದುಕೊಳ್ಳದೆ ಇರುವನೋ, ಅಲ್ಲಿಯವರೆಗೆ 'ನಾನು ಅಕೃತ್ಸ್ನನು, ಅಸಂಪೂರ್ಣನು'– ಎಂದೇ ತನ್ನನ್ನು (ತಾನು) ತಿಳಿದು ಕೊಂಡಿರುತ್ತಾನೆ. (ಇದರಿಂದ) ಪಾರಿಶೇಷ್ಯದಿಂದ (ಸಿದ್ಧವಾಗುವದೇನೆಂದರೆ) ಯಾವಾಗ ಇವೆಲ್ಲವನ್ನೂ ಸಂಪಾದಿಸಿಕೊಳ್ಳುತ್ತಾನೋ ಆಗ ಅವನಿಗೆ ಕೃತ್ಸ್ನತ್ವ (ವುಂಟಾಗುತ್ತದೆ).

## ಸಂಪೂರ್ಣತ್ವವನ್ನು ಸಂಪಾದಿಸಿಕೊಳ್ಳಲಾರದವನು ಮಾಡತಕ್ಕದ್ದು

(ಭಾಷ್ಯ)

೧೯೮. ಯದಾ ತು ನ ಶಕ್ನೋತಿ ಕೃತ್ಸ್ನತಾಂ ಸಂಪಾದಯಿತುಮ್ ತದಾ ಅಸ್ಯ ಕೃತ್ಸ್ನತ್ವಸಂಪಾದನಾಯ ಆಹ। ತಸ್ಯ ಉ ತಸ್ಯ ಅಕೃತ್ಸ್ನತ್ವಾಭಿ ಮಾನಿನಃ ಕೃತ್ಸ್ನತಾ ಇಯಮ್ ಏವಂ ಭವತಿ। ಕಥಮ್? ಅಯಂ ಕಾರ್ಯ ಕರಣಸಂಘಾತಃ ಪ್ರವಿಭಜ್ಯತೇ। ತತ್ರ ಮನೋಽನುವೃತ್ತಿ ಹಿ ಇತರತ್ ಸರ್ವಂ ಕಾರ್ಯಕರಣಜಾತಮ್ ಇತಿ ಮನಃಪ್ರಧಾನತ್ವಾತ್ ಆತ್ಮೇವ ಆತ್ಮಾ। ಯಥಾ ಜಾಯಾದೀನಾಂ ಕುಟುಂಬಪತಿಃ ಆತ್ಮೇವ। ತದನುಕಾರಿತ್ವಾತ್ ಜಾಯಾದಿಚತುಷ್ಟಯಸ್ಯ, ಏವಮ್ ಇಹಾಪಿ ಮನ ಆತ್ಮಾ ಪರಿಕಲ್ಪ್ಯತೇ ಕೃತ್ಸ್ನತಾಯೈ। ತಥಾ ವಾಕ್ ಜಾಯಾ। ಮನೋಽನುವೃತ್ತಿತ್ವಸಾಮಾನ್ಯಾತ್ ವಾಚಃ। ವಾಕ್ ಇತಿ ಶಬ್ದಃ ಚೋದನಾದಿಲಕ್ಷಣಃ ಮನಸಾ ಶ್ರೋತ್ರದ್ವಾರೇಣ ಗೃಹ್ಯತೇ, ಅವಧಾರ್ಯತೇ, ಪ್ರಯುಜ್ಯತೇ ಚ ಇತಿ ಮನಸೋ ಜಾಯೇವ ವಾಕ್। ತಾಭ್ಯಾಂ ಚ ವಾಙ್ಮನಸಾಭ್ಯಾಂ ಜಾಯಾಪತಿಸ್ಥಾನೀಯಾಭ್ಯಾಂ ಪ್ರಸೂ ಯತೇ ಪ್ರಾಣಃ ಕರ್ಮಾರ್ಥಮ್ ಇತಿ ಪ್ರಾಣಃ ಪ್ರಜೇವ। ತತ್ರ ಪ್ರಾಣಚೇಷ್ಟಾದಿ ಲಕ್ಷಣಂ ಕರ್ಮ ಚಕ್ಷುರ್ದೃಷ್ಟವಿತ್ತಸಾಧ್ಯಂ ಭವತಿ ಇತಿ ಚಕ್ಷುರ್ಮಾನುಷಂ ವಿತ್ತಮ್। ತದ್ ದ್ವಿವಿಧಂ ವಿತ್ತಮ್ ಮಾನುಷಮ್ ಇತರಚ್ಚ। ಅತೋ ವಿಶಿನಷ್ಟಿ ಇತರವಿತ್ತನಿವೃತ್ತ್ಯರ್ಥಂ 'ಮಾನುಷಮ್' ಇತಿ। ಗವಾದಿ ಹಿ ಮನುಷ್ಯ ಸಂಬನ್ಧಿವಿತ್ತಂ ಚಕ್ಷುರ್ಗ್ರಾಹ್ಯಂ ಕರ್ಮಸಾಧನಮ್। ತಸ್ಮಾತ್ ತತ್ಸ್ಥಾನೀ ಯಮ್। ತೇನ ಸಂಬನ್ಧಾತ್ ಚಕ್ಷುರ್ಮಾನುಷಂ ವಿತ್ತಮ್। ಚಕ್ಷುಷಾ ಹಿ ಯಸ್ಮಾತ್ ತನ್ಮಾನುಷಂ ವಿತ್ತಂ ವಿನ್ದತೇ ಗವಾದ್ಯುಪಲಭತೇ ಇತ್ಯರ್ಥಃ। ಕಿಂ ಪುನರಿತರದ್ ವಿತ್ತಮ್? ಶ್ರೋತ್ರಂ ದೈವಮ್। ದೇವವಿಷಯತ್ವಾತ್ ವಿಜ್ಞಾನಸ್ಯ। ವಿಜ್ಞಾನಂ ದೈವಂ ವಿತ್ತಮ್। ತದಿಹ ಶ್ರೋತ್ರಮೇವ ಸಂಪತ್ತಿ ವಿಷಯಮ್। ಕಸ್ಮಾತ್? ಶ್ರೋತ್ರೇಣ ಹಿ ಯಸ್ಮಾತ್ ತದ್ದೈವಂ ವಿತ್ತಂ ವಿಜ್ಞಾನಂ ಶೃಣೋತಿ। ಅತಃ ಶ್ರೋತ್ರಾಧೀನತ್ವಾತ್ ವಿಜ್ಞಾನಸ್ಯ ಶ್ರೋತ್ರಮೇವ

ತತ್ ಇತಿ। ಕಿಂ ಪುನರೇತ್ಯೈಃ ಆತ್ಮಾದಿವಿತ್ತಾಂತೈಃ ಇಹ ನಿರ್ವರ್ತ್ಯಂ ಕರ್ಮ ಇತಿ? ಉಚ್ಯತೇ। ಆತ್ಮೈವ। ಆತ್ಮಾ ಇತಿ ಶರೀರಮ್ ಉಚ್ಯತೇ। ಕಥಂ ಪುನರಾತ್ಮಾ ಕರ್ಮಸ್ಥಾನೀಯೋಽಸ್ಯ? ಕರ್ಮಹೇತುತ್ವಾತ್। ಕಥಂ ಕರ್ಮಹೇತುತ್ವಮ್? ಆತ್ಮನಾ ಹಿ ಶರೀರೇಣ ಯತಃ ಕರ್ಮ ಕರೋತಿ। ತಸ್ಯ ಅಕೃತ್ಸ್ನತ್ವಾಭಿಮಾನಿನಃ ಏವಂ ಕೃತ್ಸ್ನತಾ ಸಂಪನ್ನಾ। ಯಥಾ ಬಾಹ್ಯ ಜಾಯಾದಿಲಕ್ಷಣಾ ಏವಮ್॥

(ಭಾಷ್ಯಾರ್ಥ)

ಆದರೆ ಯಾವಾಗ ಕೃತ್ಸ್ನತ್ವವನ್ನು ಸಂಪಾದಿಸಿಕೊಳ್ಳುವದಕ್ಕೆ (ಅವನಿಗೆ) (ಆಗದೆ) ಇರುವದೋ ಆಗ ಅವನು ಕೃತ್ಸ್ನತ್ವವನ್ನು ಸಂಪಾದಿಸಿಕೊಳ್ಳುವದಕ್ಕೆ (ಉಪಾಯವನ್ನು ಶ್ರುತಿ) ಹೇಳುತ್ತದೆ. ಮತ್ತು ಕೃತ್ಸ್ನನಲ್ಲವೆಂದೆಣಿಸಿಕೊಂಡಿರುವ ಅವನಿಗೆ ಈ ಕೃತ್ಸ್ನತೆಯು ಹೀಗೆ ಆಗುತ್ತದೆ. ಹೇಗೆ? ಎಂದರೆ ಈ ಕಾರ್ಯಕರಣಸಂಘಾತವನ್ನು ವಿಭಾಗಿಸಲಾಗುತ್ತದೆ. ಇಲ್ಲಿ ಉಳಿದ ಎಲ್ಲಾ ಕಾರ್ಯಕರಣಸಮೂಹವೂ ಮನಸ್ಸನ್ನು ಅನುಸರಿಸಿಕೊಂಡಿರುತ್ತದೆಯಲ್ಲವೆ, ಆದ್ದರಿಂದ **ಮನಸ್ಸು** ಪ್ರಧಾನವಾಗಿರುವದರಿಂದ ಆತ್ಮನು, ಆತ್ಮನಂತೆ (ಇರುವದು). ಹೇಗೆ ಹೆಂಡತಿ ಮೊದಲಾದವರಿಗೆ ಕುಟುಂಬದ ಯಜಮಾನನು, ಹೆಂಡತಿಯೇ ಮುಂತಾದ ನಾಲ್ಕೂ ಅವನನ್ನು ಅನುಸರಿಸಿ ನಡೆಯುತ್ತಿರುವದರಿಂದ ಆತ್ಮನೇ ಆಗಿರುತ್ತಾನೋ, ಹಾಗೆ ಇಲ್ಲಿಯೂ ಕೃತ್ಸ್ನತೆಗಾಗಿ ಮನಸ್ಸನ್ನು ಆತ್ಮನೆಂದು ಪರಿಕಲ್ಪಿಸಿರುತ್ತದೆ.

ಇದರಂತೆ **ವಾಕ್ಕು** ಹೆಂಡತಿಯು, ಏಕೆಂದರೆ ವಾಕ್ಕಿಗೆ ಮನಸ್ಸನ್ನು ಅನುಸರಿಸಿಕೊಂಡಿರುವದೆಂಬ (ಹೆಂಡತಿಯ) ಹೋಲಿಕೆಯು ಇರುತ್ತದೆ. ವಾಕ್ಕು ಎಂದರೆ ಚೋದನಾದಿರೂಪವಾದ ಶಬ್ದವು; (ಅದನ್ನು) ಶ್ರೋತ್ರದ್ವಾರದಿಂದ ಮನಸ್ಸು ಗ್ರಹಿಸುತ್ತದೆ, ನಿಶ್ಚಯಿಸುತ್ತದೆ, ಮತ್ತು ಪ್ರಯೋಗಿಸುತ್ತದೆ. ಆದ್ದರಿಂದ ವಾಕ್ಕು ಮನಸ್ಸಿಗೆ ಹೆಂಡತಿಯಂತೆ ಇದೆ.

ಹೆಂಡತಿಗಂಡರಂತೆ ಇರುವ ಈ ವಾಙ್ಮನಸ್ಸುಗಳು ಪ್ರಾಣವನ್ನು ಕರ್ಮಕ್ಕಾಗಿ ಉಂಟುಮಾಡುತ್ತವೆ; ಆದ್ದರಿಂದ **ಪ್ರಾಣವು** ಪ್ರಜೆಯಂತೆ. ಇದರಲ್ಲಿ ಪ್ರಾಣದ ವ್ಯಾಪಾರವೇ ಮುಂತಾದ ಕರ್ಮವು, ಚಕ್ಷುಸ್ಸು ನೋಡಿದ ವಿತ್ತದಿಂದ ಆಗತಕ್ಕದ್ದಾದ್ದರಿಂದ ಚಕ್ಷುಸ್ಸು ಮಾನುಷವಿತ್ತವು. ಆ ವಿತ್ತವು ಮಾನುಷವೆಂದೂ ಮತ್ತೊಂದೆಂದೂ ಎರಡು ಬಗೆಯಾಗಿರುತ್ತದೆ; ಆದ್ದರಿಂದ ಇನ್ನೊಂದು (ವಿತ್ತವನ್ನು) ಅಲ್ಲವೆನ್ನುವದಕ್ಕಾಗಿ 'ಮಾನುಷ'ವೆಂಬ ವಿಶೇಷಣವನ್ನು ಕೊಟ್ಟಿರುತ್ತದೆ. ಮನುಷ್ಯಸಂಬಂಧಿಯಾದ ಕರ್ಮಸಾಧನವಾದ ಗವಾದಿವಿತ್ತವು ಚಕ್ಷುರಿಂದ್ರಿಯಕ್ಕೆ ತಿಳಿಯಬರತಕ್ಕದ್ದಾಗಿಯೇ ಕರ್ಮಸಾಧನವಾಗಿರುತ್ತದೆ; ಆದ್ದ

ರಿಂದ (ಚಕ್ಷುಸ್ಸು) ಆ (ವಿತ್ತದ) ಸ್ಥಾನದಲ್ಲಿರುತ್ತದೆ. ಆ ಸಂಬಂಧವಿರುವದರಿಂದ ಚಕ್ಷುಸ್ಸು ಮಾನುಷವಿತ್ತವು. (ಹಿ= ಯಸ್ಮಾತ್) ಏಕೆಂದರೆ (ಚಕ್ಷುಸ್ಸಿನಿಂದಲೇ ಆ ಮಾನುಷವಿತ್ತವನ್ನು ಪಡೆದುಕೊಳ್ಳುತ್ತಾನೆ. ಗವಾದಿಗಳನ್ನು ಕಂಡು ಕೊಳ್ಳುತ್ತಾನೆ ಎಂದರ್ಥ.

ಹಾಗಾದರೆ ಇನ್ನೊಂದು ವಿತ್ತವು ಯಾವದು? ಎಂದರೆ ಶ್ರೋತ್ರವು ದೈವ (ವಿತ್ತವು). ಏಕೆಂದರೆ ವಿಜ್ಞಾನವು ದೇವತೆಗಳ ಸಂಬಂಧವಾದದ್ದು. ವಿಜ್ಞಾನವು ದೈವವಿತ್ತವು, ಅದು ಇಲ್ಲಿ ಸಂಪತ್ತಿವಿಷಯವಾದ ಶ್ರೋತ್ರವೇ; ಏಕೆ? ಎಂದರೆ ಶ್ರೋತ್ರದಿಂದಲೇ ಅಲ್ಲವೆ, ಆ ದೈವವಿತ್ತವಾದ ವಿಜ್ಞಾನವನ್ನು ಶ್ರವಣಮಾಡು ತ್ತಾನೆ? ಆದ್ದರಿಂದ ವಿಜ್ಞಾನವು ಶ್ರೋತ್ರಕ್ಕೆ ಅಧೀನವಾಗಿರುತ್ತದೆಯಾದ್ದರಿಂದ ಶ್ರೋತ್ರವೇ ಅದು.

ಆತ್ಮನನ್ನು ಮೊದಲುಗೊಂಡು ವಿತ್ತದವರೆಗಿನ ಈ (ಸಾಧನ)ಗಳಿಂದ ಮಾಡತಕ್ಕ ಕರ್ಮವು ಯಾವದು? ಆತ್ಮನೇ. ಇಲ್ಲಿ ಶರೀರವನ್ನು ಆತ್ಮನೆಂದು ಕರೆದಿರುತ್ತದೆ. ಆತ್ಮವು ಕರ್ಮಸ್ಥಾನದಲ್ಲಿದೆ ಎಂಬುದು ಹೇಗೆ? ಎಂದರೆ ಅದು ಕರ್ಮಕ್ಕೆ ಕಾರಣವಾಗಿರುವದರಿಂದ. ಆದ್ದರಿಂದ ಶರೀರದಿಂದಲೇ ಕರ್ಮವನ್ನು ಮಾಡುತ್ತಾನೆ.

(ತಾನು) ಅಕೃತ್ಸ್ನನೆಂದು ತಿಳಿದುಕೊಂಡಿರುವನಲ್ಲ, ಅವನಿಗೆ ಹೀಗೆ[1] ಕೃತ್ಸ್ನತ್ವವು ಉಂಟಾಗುತ್ತದೆ. ಹೇಗೆ ಹೊರಗೆ ಹೆಂಡತಿ ಮುಂತಾದವರಿಂದ (ಕೃತ್ಸ್ನತೆಯುಂಟಾಗುವದೋ) ಹಾಗೆ.

## ಮನಆದಿದರ್ಶನವು ಪಾಙ್ಕ್ತವು

(ಭಾಷ್ಯ)

೧೯೯. ತಸ್ಮಾತ್ ಸ ಏಷ ಪಾಙ್ಕ್ತಃ ಪಙ್ಕ್ತಿಭಿರ್ನಿರ್ವೃತ್ತಃ ಪಾಙ್ಕ್ತೋ ಯಜ್ಞಃ ದರ್ಶನಮಾತ್ರನಿರ್ವೃತ್ತೋಽಕರ್ಮಿಣೋಽಪಿ। ಕಥಂ ಪುನರಸ್ಯ ಪಙ್ಕ್ತಿತ್ವಸಂಪತ್ತಿಮಾತ್ರೇಣ ಯಜ್ಞತ್ವಮ್? ಉಚ್ಯತೇ। ಯಸ್ಮಾತ್ ಬಾಹ್ಯೋಽಪಿ ಯಜ್ಞಃ ಪಶುಪುರುಷಸಾಧ್ಯಃ। ಸ ಚ ಪಶುಃ ಪುರುಷಶ್ಚ ಪಾಙ್ಕ್ತ ಏವ। ಯಥೋಕ್ತ ಮನಆದಿಪಙ್ಕ್ತಿತ್ವಯೋಗಾತ್। ತದಾಹ। ಪಾಙ್ಕ್ತಃ ಪಶುರ್ಗವಾದಿಃ। ಪಾಙ್ಕ್ತಃ ಪುರುಷಃ। ಪಶುತ್ವೇಽಪಿ ಅಧಿಕೃತತ್ವೇನ ಅಸ್ಯ ವಿಶೇಷಃ ಪುರುಷಸ್ಯ ಇತಿ ಪೃಥಕ್ ಪುರುಷಗ್ರಹಣಮ್। ಕಿಂ ಬಹುನಾ? ಪಾಙ್ಕ್ತಮಿದಂ ಸರ್ವಂ ಕರ್ಮಸಾಧನಂ ಫಲಂ ಚ ಯದಿದಂ ಕಿಂಚ ಯತ್ಕಿಂಚಿದಿದಂ ಸರ್ವಮ್। ಏವಂ ಪಾಙ್ಕ್ತಂ ಯಜ್ಞಮ್ ಆತ್ಮಾನಂ ಯಃ ಸಂಪಾದಯತಿ ತದಿದಂ ಸರ್ವಂ ಜಗದಾತ್ಮತ್ವೇನ ಆಪ್ನೋತಿ ಯ ಏವಂ ವೇದ॥

---

1. ಮನಆದಿಗಳ ಸಂಪತ್ತಿಯಿಂದ.

(ಭಾಷ್ಯಾರ್ಥ)

ಆದ್ದರಿಂದ ಆ ಇದು ಪಾಙ್ಕ್ತವು; ಐದರಿಂದ ಆಗಿರುವದರಿಂದ ಪಾಙ್ಕ್ತವು, ಯಜ್ಞವು. ಅಕರ್ಮಿಗೂ ದರ್ಶನಮಾತ್ರದಿಂದಲೇ ಆಗಿರುವ (ಪಾಙ್ಕ್ತವಿದು). ಇದಕ್ಕೆ ಐದು ಎಂಬ (ಸಂಖ್ಯೆಯ) ಸಂಪತ್ತಿಮಾತ್ರದಿಂದಲೇ ಯಜ್ಞತ್ವ ಹೇಗೆ (ಬಂದಿತು)? ಹೇಗೆಂದರೆ ಹೊರಗಿನ ಯಜ್ಞವೂ ಪಶುಪುರುಷರಿಂದ ಆಗತಕ್ಕದ್ದು. ಆ ಪಶುವೂ ಪುರುಷನೂ ಪಾಙ್ಕ್ತವೇ; ಏಕೆಂದರೆ (ಅವುಗಳಲ್ಲಿ) ಮೇಲೆ ಹೇಳಿದ ಮನಸ್ಸೇ ಮುಂತಾದ ಪಂಚತ್ವದ ಸಂಬಂಧವು ಇರುತ್ತದೆ. ಅದನ್ನೇ (ಶ್ರುತಿ) ಹೇಳುತ್ತಿದೆ: ಗವಾದಿಪಶುವು ಪಾಙ್ಕ್ತವು; ಪುರುಷನೂ ಪಾಙ್ಕ್ತವು. ಪುರುಷನೂ ಪಶುವೇ ಆಗಿರುತ್ತಾನಾದರೂ (ಇವನು) ಕರ್ಮದಲ್ಲಿ ಅಧಿಕೃತನಾಗಿರುತ್ತಾನೆಂಬುದೇ (ಇವನಲ್ಲಿ) ವಿಶೇಷವು. ಆದ್ದರಿಂದ ಪುರುಷನು ಎಂದು ಬೇರೆಯಾಗಿ ಹೇಳಿದೆ. ಹೆಚ್ಚು ಹೇಳಿದ್ದರಿಂದೇನು? ಇದೆಲ್ಲವೂ, ಕರ್ಮಸಾಧನವೂ (ಕರ್ಮ)ಫಲವೂ (ಇಲ್ಲಿ) ಏನೇನಿದೆಯೋ ಇದೆಲ್ಲವೂ, ಪಾಙ್ಕ್ತವೇ[1]. ಹೀಗೆ ಯಾವನು ತಾನು ಪಾಙ್ಕ್ತವೆಂದು ಯಜ್ಞವೆಂದು ಸಂಪಾದನೆಮಾಡಿಕೊಳ್ಳುತ್ತಾನೋ, ಯಾವನು ಹೀಗೆಂದು ಉಪಾಸನೆಮಾಡುತ್ತಾನೋ ಅವನು ಆ ಇದೆಲ್ಲವನ್ನೂ ಹೀಗೆಂದು ಜಗದಾತ್ಮನಾಗಿ[2] ಪಡೆದುಕೊಳ್ಳುತ್ತಾನೆ.

---

1. ಯಜ್ಞವು ಪಾಙ್ಕ್ತಕರ್ಮದಿಂದಾದದ್ದು, ಜಗತ್ತು ಯಜ್ಞದ ಕಾರ್ಯವು; ಆದ್ದರಿಂದ ಜಗತ್ತೆಲ್ಲವೂ ಪಾಙ್ಕ್ತವೇ– ಎಂದು ವಾರ್ತಿಕ. 2. ಹಿರಣ್ಯಗರ್ಭನಾಗಿ.

# ನಾಲ್ಕನೆಯ ಬ್ರಾಹ್ಮಣದ ಸಾರ

೧-೬. ಮೊದಲು ಈ ಸಂಸಾರವೆಲ್ಲವೂ ಶರೀರಾದಿಗಳುಳ್ಳ ವಿರಾಟ್ಪುರುಷನಾಗಿತ್ತು. ಅವನು ತನ್ನನ್ನು 'ನಾನು' ಎಂದುಕೊಂಡನು; ಆದರಿಂದ ಅವನಿಗೆ 'ನಾನು' ಎಂಬ ಹೆಸರಾಯಿತು. ಆದ್ದರಿಂದ ಈಗಿನವರೂ ತಮ್ಮ ಹೆಸರನ್ನು ಹೇಳಿಕೊಳ್ಳುವ ಮುಂಚೆ 'ನಾನು' ಎಂದುಕೊಳ್ಳುತ್ತಾರೆ. ವಿರಾಟ್ಪುರುಷನು ಮಿಕ್ಕವರೆಲ್ಲರಿಗಿಂತಲೂ ಮೊದಲು (ಪೂರ್ವಂ) ಪಾಪಗಳನ್ನು ಸುಟ್ಟುಕೊಂಡನು (ಔಷತ್); ಆದ್ದರಿಂದ ಅವನು ಪುರುಷನೆನಿಸಿದನು. ಹೀಗೆಂದು ಉಪಾಸನೆಮಾಡಿದವನು ಮಿಕ್ಕವರೆಲ್ಲರಿಗಿಂತಲೂ ಮೊದಲು ವಿರಾಟ್ಪುರುಷನಾಗುವನು.

ಆ ವಿರಾಟ್ಪುರುಷನು ಒಂಟಿಯಾಗಿದ್ದದ್ದರಿಂದ ಅವನಿಗೆ ಭಯವಾಯಿತು; ಆದರೆ ತನಗೆ ಎರಡನೆಯ ವಸ್ತುವೇ ಇಲ್ಲವಲ್ಲ ಎಂಬ ಆತ್ಮೈಕ್ಯಜ್ಞಾನದಿಂದ ಭಯವೆಲ್ಲವೂ ಹೋಯಿತು. ಆದ್ದರಿಂದ ಈಗಿನವರಿಗೂ ಹೀಗೆಯೇ ಆಗುತ್ತದೆ. ಆ ವಿರಾಜನು ಅರತಿಯಿಂದ ಜೊತೆಗಾತಿಯಾದ ಪತ್ನಿಯನ್ನು ಬಯಸಿದನು; ಸಂಕಲ್ಪಮಾತ್ರದಿಂದ ಸ್ತ್ರೀಪುರುಷನಾದನು. ಆ ಪುರುಷನಿಗೆ ಮನುವೆಂದೂ ಸ್ತ್ರೀಗೆ ಶತರೂಪೆಯೆಂದೂ ಹೆಸರು. ಶತರೂಪೆಯು ಮನುಷ್ಯರಿಂದ ಇರುವೆಗಳವರೆಗೂ ಬೇರೆಬೇರೆಯ ಜಾತಿಯ ರೂಪವನ್ನು ಧರಿಸಲು ಮನುವೂ ಆಯಾ ಜಾತಿಯ ಪುಂವ್ಯಕ್ತಿಯಾದನು. ಅವರಿಬ್ಬರ ಕೂಟದಿಂದ ಆಯಾ ಜಾತಿಯ ಪ್ರಾಣಿಗಳು ಹುಟ್ಟಿದವು. ಬಳಿಕ ವಿರಾಟ್ಪುರುಷನು "ನಾನೇ ಇದೆಲ್ಲವನ್ನೂ ಸೃಜಿಸಿರುವೆನು, ನಾನೇ ಸೃಷ್ಟಿಯು" ಎಂದು ಅರಿತುಕೊಂಡದ್ದರಿಂದ 'ಸೃಷ್ಟಿ' ಎನಿಸಿದನು. ಈ ಸೃಷ್ಟಜಗತ್ತಿನಲ್ಲಿ ಯಾವನು ಹೀಗೆಂದು ಉಪಾಸಿಸುವನೋ ಅವನೂ 'ಸೃಷ್ಟಿ'ಯಾಗುವನು.

ಆ ಪ್ರಜಾಪತಿಯು ಮುಖದಿಂದಲೂ ಕೈಗಳಿಂದಲೂ ಕಡೆದು ಅಗ್ನಿಯನ್ನು ಸೃಜಿಸಿದನು. ಆ ಪ್ರಜಾಪತಿಯೇ ಸಕಲದೇವತೆಗಳೂ ಆಗಿರುವನು. ಅಗ್ನೀಷೋಮಾತ್ಮಕವಾಗಿರುವ ಈ ಜಗತ್ತೆಲ್ಲವೂ ಅವನ ಸೃಷ್ಟಿಯೇ. ಪ್ರಜಾಪತಿಯು ಪೂರ್ವಜನ್ಮದಲ್ಲಿ ಮರ್ತ್ಯನೇ ಆಗಿದ್ದರೂ ಹೀಗೆ ತನಗಿಂತ ಹೆಚ್ಚಿನ ಅಮೃತರೂಪರಾದ ದೇವತೆಗಳನ್ನು ಸೃಜಿಸಿದನಷ್ಟೆ; ಹೀಗೆಂದು ಉಪಾಸನೆಮಾಡಿದವನೂ ಹೀಗೆಯೇ ಅತಿಸೃಷ್ಟಿಯನ್ನು ಮಾಡುವ ಶಕ್ತಿಯನ್ನು ಸಂಪಾದಿಸಿಕೊಳ್ಳುವನು.

೭-೧೦. ಈ ಜಗತ್ತೆಲ್ಲವೂ ಹುಟ್ಟುವ ಮುಂಚೆ ಅವ್ಯಾಕೃತವಾಗಿತ್ತು. ಅದು ನಾಮರೂಪಗಳಾಗಿ ವ್ಯಾಕೃತವಾಗಿರುತ್ತದೆ. ಅವ್ಯಾಕೃತರೂಪದಲ್ಲಿದ್ದ ಪರಮಾತ್ಮನು ಈ ಶರೀರದಲ್ಲಿ ಒಳಹೊಕ್ಕು ಸಾಮಾನ್ಯರೂಪದಿಂದಲೂ ವಿಶೇಷರೂಪದಿಂದಲೂ ಇರುತ್ತಾನೆ. ಯಾರು ಇಲ್ಲಿ ಉಸಿರಾಡುವವನು, ಮಾತಾಡುವವನು, ನೋಡುವವನು, ಕೇಳುವವನು, ಮನನಮಾಡುವವನು - ಎಂದು ಕರ್ಮವಿಶೇಷಗಳಿಂದಾಗಿರುವ ವಿಶೇಷರೂಪಗಳಲ್ಲಿ ಒಂದೊಂದನ್ನೇ ಆತ್ಮನೆಂದು ಅರಿತುಕೊಳ್ಳುವನೋ ಅವನು ನಿಜವನ್ನು ಅರಿಯನು; ಏಕೆಂದರೆ ಹಾಗೆ ಅರಿತರೆ ಆ ಒಂದೊಂದು ರೂಪದಿಂದಲೂ ಅಸಂಪೂರ್ಣನಾಗಿರುತ್ತಾನೆ. ಆದ್ದರಿಂದ ಆತ್ಮನೆಂದೇ ಅರಿಯಬೇಕು. ಏಕೆಂದರೆ ಆ ರೂಪದಲ್ಲಿ ಈ ವಿಶೇಷರೂಪಗಳೆಲ್ಲ ಒಂದಾಗಿರುತ್ತವೆ. ಇವುಗಳೆಲ್ಲೆಲ್ಲ ಈ ಸ್ವರೂಪದ ಆತ್ಮನನ್ನೇ ಹುಡುಕಿ ಅರಿತುಕೊಳ್ಳ

ತಕ್ಕದ್ದು; ಏಕೆಂದರೆ ಅದನ್ನು ಅರಿತುಕೊಂಡರೆ ಇವೆಲ್ಲವನ್ನೂ ಅರಿತಂತೆ ಆಗುವದು. ಹೀಗೆಂದು ಉಪಾಸನೆಮಾಡಿದವನಿಗೆ ಕೀರ್ತಿಯೂ ಇಷ್ಟಜನರ ಸಂಗತಿಯೂ ದೊರೆಯುವವು.

ಈ ಆತ್ಮನು ಎಲ್ಲಕ್ಕಿಂತಲೂ ಒಳಗಿರುವದರಿಂದ ಪುತ್ರವಿತ್ತಾದಿಗಳೆಲ್ಲಕ್ಕಿಂತಲೂ ಪ್ರಿಯನಾದವನು. ಆತ್ಮನಿಗಿಂತ ಬೇರೆಯಾವದನ್ನು ಪ್ರಿಯವೆಂದೆಣಿಸುವವನ ಪ್ರಿಯವು ನಾಶವಾಗತಕ್ಕದ್ದಾಗಿದೆ. ಆದ್ದರಿಂದ ಆತ್ಮನನ್ನೇ ಪ್ರಿಯನೆಂದು ಅರಿಯಬೇಕು. ಆತ್ಮನನ್ನೇ ಪ್ರಿಯನೆಂದು ಅರಿಯುವವನ ಪ್ರಿಯವು ನಾಶವಾಗುವದಿಲ್ಲ.

ಬ್ರಹ್ಮಜ್ಞಾನವಾಗುವ ಮುಂಚೆಯೂ ಎಲ್ಲರೂ ಬ್ರಹ್ಮವೇ ಆಗಿದ್ದರು. ಆದರೆ ಹಾಗೆಂಬ ಜ್ಞಾನವಿರಲಿಲ್ಲ. ಅಷ್ಟೆ. ಈ ಬ್ರಹ್ಮವು ತನ್ನನ್ನೇ "ನಾನು ಬ್ರಹ್ಮವಾಗಿರುವೆನು" ಎಂದು ಅರಿತುಕೊಂಡದ್ದರಿಂದ ಇವೆಲ್ಲವೂ ಆಯಿತು. ದೇವತೆಗಳಲ್ಲಿ ಯಾರುಯಾರು, ಋಷಿಗಳಲ್ಲಿ ಯಾರುಯಾರು, ಮನುಷ್ಯರಲ್ಲಿ ಯಾರುಯಾರು "ನಾನು ಬ್ರಹ್ಮವಾಗಿರುವೆನು" ಎಂದು ಅರಿತುಕೊಂಡರೋ ಅವರವರು ಸರ್ವಾತ್ಮಭಾವವನ್ನು ಪಡೆದುಕೊಂಡರು. ವಾಮದೇವನೆಂಬ ಋಷಿಯು ಈ ಜ್ಞಾನವನ್ನು ಪಡೆದುಕೊಂಡೇ "ಅಹಂ ಮನುರಭವಂ ಸೂರ್ಯಶ್ಚ" (ನಾನೇ ಮನು, ಸೂರ್ಯ) ಎಂದುಮುಂತಾಗಿರುವ ಮಂತ್ರಗಳ ದ್ರಷ್ಟೃವಾದನು. ಈಗಲೂ ಯಾವನು "ನಾನು ಬ್ರಹ್ಮವಾಗಿರುವೆನು" ಎಂದು ಅರಿತುಕೊಳ್ಳುವನೋ ಅವನು ಸರ್ವವೂ ಆಗುತ್ತಾನೆ.

ಆದರೆ ಯಾವನು "ನಾನು ಬೇರೆ, ಈ ದೇವತೆ ಬೇರೆ" ಎಂಬ ಭೇದಬುದ್ಧಿಯಿಂದ ಯಾವದಾದರೂ ದೇವತೆಯನ್ನು ಉಪಾಸನೆಮಾಡುತ್ತಾನೋ ಅವನಿಗೆ ತತ್ತ್ವವು ತಿಳಿಯದು. ಅವನು ದೇವತೆಗಳಿಗೆ ಪಶುವಿನಂತೆ ಕರ್ಮಾದಿಗಳಿಂದ ಉಪಕಾರಮಾಡುತ್ತಿರುವನು; ಆದ್ದರಿಂದಲೇ ದೇವತೆಗಳು ಸಾಮಾನ್ಯವಾಗಿ ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕೆ ಮನುಷ್ಯನನ್ನು ಬಿಡುವದಿಲ್ಲ.

೧೧-೧೫. ಈ ಕ್ಷತ್ರಿಯಾದಿಭೇದಗಳೆಲ್ಲವೂ ಮೊದಲು ಬ್ರಹ್ಮವೇ, ಬ್ರಾಹ್ಮಣನೇ, ಅಗ್ನಿರೂಪನಾದ ಪ್ರಜಾಪತಿಯೇ ಆಗಿತ್ತು. ಆ ಬ್ರಹ್ಮವು ಒಂದೇ ಇದ್ದದ್ದರಿಂದ ಕರ್ಮಕ್ಕೆ ಸಮರ್ಥವಾಗಿರಲಿಲ್ಲ. ಆದ್ದರಿಂದ ಅದು ಕ್ಷತ್ರಿಯ, ವೈಶ್ಯ, ಶೂದ್ರ- ಎಂಬ ವರ್ಣಾಭಿಮಾನಿಗಳಾದ ಇಂದ್ರಾದಿದೇವತೆಗಳನ್ನೂ ಅವರಿಂದ ಅನುಗ್ರಾಹ್ಯವಾದ ಬೇರೆಬೇರೆಯ ವರ್ಣದ ಮನುಷ್ಯರನ್ನೂ ಸೃಜಿಸಿತು. ಅವರನ್ನೆಲ್ಲ ಆಳುವದಕ್ಕೆ ಬೇಕಾದ ಧರ್ಮವನ್ನೂ ಸೃಜಿಸಿತು. ಅದು ದೇವತೆಗಳಲ್ಲಿ ಅಗ್ನಿರೂಪದ ಬ್ರಾಹ್ಮಣನೂ ಮನುಷ್ಯರಲ್ಲಿ ಬ್ರಾಹ್ಮಣರೂಪದ ಬ್ರಾಹ್ಮಣನೂ ಆಗಿರುವದರಿಂದ ದೇವಾಧೀನಕರ್ಮವು ಅಗ್ನಿಯ ದ್ವಾರದಿಂದಲೂ ಮನುಷ್ಯಸಂಬದ್ಧಕರ್ಮವು ಬ್ರಾಹ್ಮಣನ ದ್ವಾರದಿಂದಲೂ ಫಲವನ್ನು ಕೊಡುತ್ತದೆ. ಶಾಸ್ತ್ರೋಕ್ತವಾದ ಕರ್ಮದ ತಿಳಿವಳಿಕೆಯು ಸತ್ಯವೆಂದೂ ಅದರ ಅನುಷ್ಠಾನವು ಧರ್ಮವೆಂದೂ ಪ್ರಸಿದ್ಧವಾಗಿದೆ; ಆದರೆ ಇವೆರಡೂ ನಿಜವಾಗಿ ಧರ್ಮವೇ. ಅಂತೂ ವರ್ಣಾಶ್ರಮವಿಹಿತಕರ್ಮವು ಈ ಧರ್ಮದ ದ್ವಾರದಿಂದ ತನ್ನ ಫಲವಾದ ಲೋಕಗಳನ್ನು ಕೊಡುತ್ತದೆ.

ಆದರೆ ಕರ್ಮಫಲವಾದ ಲೋಕಗಳಿಗಿಂತಲೂ ನಮ್ಮ ಸ್ವರೂಪವೇ ಆಗಿರುವ ಲೋಕವೊಂದುಂಟು. ಇದೇ ಆತ್ಮಲೋಕವು. ಈ ಸ್ವಲೋಕವನ್ನು ಕರ್ಮಿಗಳು ಅರಿತುಕೊಳ್ಳದೆ ಇರುತ್ತಾರೆ. ಇದು ನಮ್ಮ ಸ್ವರೂಪವೇ ಆಗಿದ್ದರೂ ಇದನ್ನು ಅರಿತು

ಕೊಳ್ಳದೆ ಸಾಯುವವನಿಗೆ ಇದರಿಂದ ಆಗಬೇಕಾದ ಫಲವಾಗುವದಿಲ್ಲ. ಇದನ್ನು ಅರಿಯದವನು ಎಷ್ಟು ಹೆಚ್ಚಿನ ಪುಣ್ಯವನ್ನು ಮಾಡಿದ್ದರೂ ಅದು ಕ್ಷಯವಾಗಿಯೇತೀರುತ್ತದೆ. ಈ ಆತ್ಮಲೋಕವನ್ನು ಅರಿತುಕೊಂಡವನಿಗೆ ಅಕ್ಷಯವಾದ ಸರ್ವಾತ್ಮಭಾವವೆಂಬ ಫಲವಾಗುವದು.

೧೬-೧೭. ಅಜ್ಞನಾದವನು ಪಶುವಿನಂತೆ ದೇವತೆಗಳು, ಋಷಿಗಳು, ಪಿತೃಗಳು, ಮನುಷ್ಯರು, ಪಶುಗಳು, ಮನೆಯಲ್ಲಿರುವ ಮೃಗಗಳು, ಹಕ್ಕಿಗಳು, ಕೊನೆಗೆ ಇರುವೆಗಳು ಸಹ - ಇವೆಲ್ಲಕ್ಕೂ ವರ್ಣಾಶ್ರಮಕರ್ಮವನ್ನು ಮಾಡುವ ಮೂಲಕ ಉಪಭೋಗ್ಯನಾಗಿರುತ್ತಾನೆ. ತಾನು ಹೀಗೆ ದೇವಾದಿಗಳಿಗೆ ಉಪಕಾರಕನೆಂದು ಎಣಿಸಿಕೊಂಡಿರುವ ಅಜ್ಞನನ್ನು ಆ ದೇವಾದಿಗಳು - ಕುಟುಂಬಿಯು ತನ್ನ ಪಶುವಿಗೆ ಅಪಾಯವಾಗದಂತೆ ನೋಡಿಕೊಳ್ಳುವ ಹಾಗೆ - ಬ್ರಹ್ಮಜ್ಞಾನದ ಕಡೆಗೆ ಹೊರಳಿ ತಮ್ಮಿಂದ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುವರು. ಆದ್ದರಿಂದ ಅಜ್ಞರು ಋಣಿಗಳಂತೆ ಕರ್ತವ್ಯವನ್ನು ಮಾಡಿಕೊಂಡೇ ಹೋಗಬೇಕು - ಎಂಬುದನ್ನು ಪಂಚಮಹಾಯಜ್ಞಪ್ರಕರಣದಲ್ಲಿಯೂ ಅವದಾನಪ್ರಕರಣದಲ್ಲಿಯೂ ತಿಳಿಸಿಕೊಟ್ಟಿರುತ್ತದೆ.

ಅಜ್ಞನಾದವನಿಗೆ ಬ್ರಹ್ಮಚರ್ಯಾಶ್ರಮದಲ್ಲಿಯೇ ಅವಿದ್ಯಾವಾಸನೆಯಿಂದ ಹೆಂಡತಿಯನ್ನು ಮಾಡಿಕೊಂಡು ಮಕ್ಕಳನ್ನು ಹಡೆಯಬೇಕೆಂಬ, ಮತ್ತು ವಿತ್ತವನ್ನು ಸಂಪಾದಿಸಿಕೊಂಡು ಕರ್ಮವನ್ನು ಮಾಡಬೇಕೆಂಬ, ಕಾಮವು ಇದ್ದುಕೊಂಡಿರುವದು. ಇದು ಪ್ರಜಾಪತಿಯಿಂದ ಹಿಡಿದು ಈಗಿನವರವರೆಗೂ ನಡೆದುಕೊಂಡುಬಂದಿರುತ್ತದೆ. ಹೆಂಡತಿಯೇ ಮುಂತಾದವುಗಳಲ್ಲಿ ತನಗೆ ಯಾವದೊಂದು ದೊರೆಯದಿದ್ದರೂ ಮನುಷ್ಯನು ಪೂರ್ಣನಲ್ಲವೆಂದೇ ಭಾವಿಸಿಕೊಳ್ಳುತ್ತಾನೆ. ಯಾವ ಅಜ್ಞನಿಗೆ ಇಂಥ ಅಸಂಪೂರ್ಣತೆಯಿರುವದೋ ಅವನು ಮನಸ್ಸೇ ತನ್ನ ಆತ್ಮನು, ವಾಕ್ಕು ಹೆಂಡತಿ, ಪ್ರಾಣವು ಪ್ರಜೆ, ಚಕ್ಷುಸ್ಸು ಮಾನುಷವಿತ್ತವು, ಶ್ರೋತ್ರವು ದೈವವಿತ್ತವು, ಶರೀರವೇ ಕರ್ಮವು ಎಂದು ಉಪಾಸನೆಮಾಡಬೇಕು, ಇದು ಪಾಙ್ಕ್ತಯಜ್ಞವಾಗುವದು. ಹೊರಗಿನ ಯಜ್ಞಕ್ಕೆ ಬೇಕಾದ ಪಶುವೂ ಪುರುಷನೂ ಪಾಙ್ಕ್ತವೇ ಆಗಿರುತ್ತದೆ ; ಎಲ್ಲವೂ ಪಾಙ್ಕ್ತವೇ ನಾನೂ, ಪಾಙ್ಕ್ತವೇ - ಎಂದು ಉಪಾಸನೆಮಾಡುವವನಿಗೆ ಪಾಙ್ಕ್ತಾತ್ಮಕನಾದ ಪ್ರಜಾಪತಿಯ ಪ್ರಾಪ್ತಿಯಾಗುವದು.

---

# ಒಂದನೆಯ ಅಧ್ಯಾಯ- ಐದನೆಯ ಬ್ರಾಹ್ಮಣ

## (ಸಪ್ತಾನ್ನಗಳು)

## ಬ್ರಾಹ್ಮಣದ ಮತ್ತು ಮಂತ್ರಗಳ ಸಂಬಂಧ

(ಭಾಷ್ಯ)

೨೦೦. ಯತ್ಸಪ್ತಾನ್ನಾನಿ ಮೇಧಯಾ। ಅವಿದ್ಯಾ ಪ್ರಸ್ತುತಾ। ತತ್ರ ಅವಿದ್ವಾನ್ 'ಅನ್ಯಾಂ ದೇವತಾಮ್ ಉಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ' (ಇತಿ)। ಸ ವರ್ಣಾಶ್ರಮಾಭಿಮಾನಃ ಕರ್ಮಕರ್ತವ್ಯತಯಾ ನಿಯತೋ ಜುಹೋತ್ಯಾದಿಕರ್ಮಭಿಃ ಕಾಮಪ್ರಯುಕ್ತೈಃ ದೇವಾದೀನಾಮ್ ಉಪಕುರ್ವನ್ ಸರ್ವೇಷಾಂ ಭೂತಾನಾಂ ಲೋಕಃ ಇತ್ಯುಕ್ತಮ್। ಯಥಾ ಚ ಸ್ವಕರ್ಮಭಿಃ ಏಕೈಕೇನ ಸರ್ವೈರ್ಭೂತೈಃ ಅಸೌ ಲೋಕೋ ಭೋಜ್ಯತ್ವೇನ ಸೃಷ್ಟಃ, ಏವಮ್ ಅಸಾವಪಿ ಜುಹೋತ್ಯಾದಿಪಾಙ್ಕ್ತಕರ್ಮಭಿಃ ಸರ್ವಾಣಿ ಭೂತಾನಿ ಸರ್ವಂ ಚ ಜಗತ್ ಆತ್ಮಭೋಜ್ಯತ್ವೇನ ಅಸೃಜತ। ಏವಮ್ ಏಕೈಕಃ ಸ್ವಕರ್ಮವಿದ್ಯಾನುರೂಪ್ಯೇಣ ಸರ್ವಸ್ಯ ಜಗತೋ ಭೋಕ್ತಾ ಭೋಜ್ಯಂ ಚ ಸರ್ವಸ್ಯ ಸರ್ವಃ ಕರ್ತಾ ಕಾರ್ಯಂ ಚ ಇತ್ಯರ್ಥಃ। ಏತದೇವ ಚ ವಿದ್ಯಾಪ್ರಕರಣೇ ಮಧುವಿದ್ಯಾಯಾಂ ವಕ್ಷ್ಯಾಮಃ ಸರ್ವಂ ಸರ್ವಸ್ಯ ಕಾರ್ಯಂ ಮಧು ಇತಿ ಆತ್ಮೈಕತ್ವವಿಜ್ಞಾನಾರ್ಥಮ್। ಯದಸೌ ಜುಹೋತ್ಯಾದಿನಾ[1] ಪಾಙ್ಕ್ತೇನ ಕಾಮ್ಯೇನ ಕರ್ಮಣಾ ಆತ್ಮಭೋಜ್ಯತ್ವೇನ ಜಗತ್ ಅಸೃಜತ ವಿಜ್ಞಾನೇನ ಚ, ತಜ್ಜಗತ್ ಸರ್ವಂ ಸಪ್ತಧಾ ಪ್ರವಿಭಜ್ಯಮಾನಂ ಕಾರ್ಯಕಾರಣತ್ವೇನ ಸಪ್ತಾನ್ನಾನ್ಯುಚ್ಯನ್ತೇ। ಭೋಜ್ಯತ್ವಾತ್। ತೇನಾಸೌ ಪಿತಾ ತೇಷಾಮ್ ಅನ್ನಾನಾಮ್। ಏತೇಷಾಮ್ ಅನ್ನಾನಾಂ ಸವಿನಿಯೋಗಾನಾಂ ಸೂತ್ರಭೂತಾಃ ಸಂಕ್ಷೇಪತಃ ಪ್ರಕಾಶಕತ್ವಾತ್ ಇಮೇ ಮನ್ತ್ರಾಃ॥

(ಭಾಷ್ಯಾರ್ಥ)

'ಯತ್ಸಪ್ತಾನ್ನಾನಿ ಮೇಧಯಾ' (ಎಂದು ಮುಂತಾಗಿರುವ ಬ್ರಾಹ್ಮಣದ ಸಂಬಂಧವೇನೆಂದರೆ), ಅವಿದ್ಯೆಯನ್ನು (ವಿವರಿಸುವದಕ್ಕೆ) ಪ್ರಾರಂಭಿಸಿದೆ. ಇಲ್ಲಿ ಅವಿದ್ಯಾವಂತನು 'ಇದು ಬೇರೆ, ನಾನು ಬೇರೆಯಾಗಿರುವೆನು' ಎಂದು ಅನ್ಯದೇವತೆಯನ್ನು ಉಪಾಸನೆಮಾಡುತ್ತಾನೆ; ವರ್ಣಾಶ್ರಮಾಭಿಮಾನಗಳಿಂದೊಡಗೂಡಿದವನಾಗಿ ಕರ್ಮವನ್ನು ಮಾಡಲೇಬೇಕೆಂಬ ಕಟ್ಟಿಗೆ ಸಿಕ್ಕಿ ಹೋಮವೇ

1 'ಜುಹೋತೀತ್ಯಾದಿನಾ' ಎಂಬ ಪಾಠವು ಸರಿಯಲ್ಲ.

ಮುಂತಾದ ಕರ್ಮಗಳಿಂದ ಕಾಮಪ್ರೇರಿತನಾಗಿ ದೇವಾದಿಗಳಿಗೆ ಸೇವೆಯನ್ನು ಮಾಡುತ್ತಾ ಎಲ್ಲಾ ಭೂತಗಳಿಗೂ ಲೋಕ(ವಾಗಿರುತ್ತಾನೆ) ಎಂದು ಹೇಳಿದ್ದಾಯಿತು. ಹೇಗೆ ತನ್ನತನ್ನ ಕರ್ಮಗಳಿಂದ ಎಲ್ಲಾ ಭೂತಗಳೂ ಒಂದೊಂದೂ ಈ ಲೋಕವನ್ನು[1] ಭೋಜ್ಯವಾಗಿ ಸೃಷ್ಟಿಮಾಡಿಕೊಂಡಿರುತ್ತವೆಯೋ ಇದರಂತೆ ಇವನೂ ಹೋಮವೇ ಮುಂತಾದ ಪಾಙ್ಕ್ತಕರ್ಮಗಳಿಂದ ಎಲ್ಲಾ ಭೂತಗಳನ್ನೂ ಎಲ್ಲಾ ಜಗತ್ತನ್ನೂ ತನಗೆ ಭೋಜ್ಯವಾಗಿ ಸೃಷ್ಟಿಮಾಡಿಕೊಂಡಿರುತ್ತಾನೆ. ಹೀಗೆ ಒಬ್ಬೊಬ್ಬನೂ ತನ್ನತನ್ನ ಕರ್ಮ. ವಿದ್ಯೆ- ಇವುಗಳಿಗೆ ಅನುರೂಪವಾಗಿ ಇಡಿಯ ಜಗತ್ತಿಗೆ ಭೋಕ್ತೃವೂ ಭೋಜ್ಯವೂ ಆಗಿರುತ್ತಾನೆ, ಪ್ರತಿಯೊಬ್ಬನೂ ಪ್ರತಿಯೊಂದಕ್ಕೂ ಕರ್ತೃವೂ ಕಾರ್ಯವೂ ಎಂದರ್ಥ[2]. ಇದನ್ನೇ (ಮುಂದೆ) ವಿದ್ಯಾಪ್ರಕರಣದ ಮಧುವಿದ್ಯೆಯಲ್ಲಿ ಎಲ್ಲವೂ ಎಲ್ಲಕ್ಕೂ ಕಾರ್ಯವಾಗಿರುವ ಮಧು[3] ಎಂದು ಆತ್ಮೈಕತ್ವವಿಜ್ಞಾನಕ್ಕಾಗಿ ಹೇಳುವೆವು.

ಈ (ಅಜ್ಞನು) ಹೋಮವೇ ಮುಂತಾದ ಪಾಙ್ಕ್ತವಾದ ಕಾಮ್ಯಕರ್ಮದಿಂದಲೂ ವಿಜ್ಞಾನದಿಂದಲೂ ತನಗೆ ಭೋಜ್ಯವಾಗಿ ಜಗತ್ತನ್ನು ಸೃಜಿಸಿಕೊಂಡಿರುವನಷ್ಟೆ, ಈ ಜಗತ್ತೆಲ್ಲವನ್ನೂ ಏಳು ಬಗೆಯಾಗಿ ಕಾರ್ಯಕಾರಣಭಾವದಿಂದ ವಿಭಾಗಿಸಿಕೊಂಡು **ಸಪ್ತಾನ್ನಗಳು** ಎಂದು ಕರೆದಿದೆ, ಏಕೆಂದರೆ ಅವು ಭೋಜ್ಯವಾಗಿರುತ್ತವೆ ಆದ್ದರಿಂದ ಇವನು ಆ ಅನ್ನಗಳಿಗೆ ತಂದೆ. ಈ ಅನ್ನಗಳನ್ನು ವಿನಿಯೋಗಸಹಿತವಾಗಿ ಸಂಕ್ಷೇಪವಾಗಿ ತಿಳಿಸಿಕೊಡುವದರಿಂದ (ಅದಕ್ಕೆ) ಸೂತ್ರಭೂತವಾಗಿರುವವು ಈ ಮಂತ್ರಗಳು.

## ಸಪ್ತಾನ್ನದ ಸೃಷ್ಟಿಯೂ ವಿನಿಯೋಗವೂ

(ಉಪನಿಷತ್ತು)

**ಯತ್ಸಪ್ತಾನ್ನಾನಿ ಮೇಧಯಾ ತಪಸಾಽಜನಯತ್ ಪಿತಾ । ಏಕಮಸ್ಯ ಸಾಧಾರಣಂ ದ್ವೇ ದೇವಾನಭಾಜಯತ್ । ತ್ರೀಣ್ಯಾತ್ಮನೇಽಕುರುತ ಪಶುಭ್ಯ ಏಕಂ ಪ್ರಾಯಚ್ಛತ್ । ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ । ಕಸ್ಮಾತ್ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದಾ । ಯೋ ವೈತಾಮಕ್ಷಿತಿಂ ವೇದ ಸೋಽನ್ನಮತ್ತಿ ಪ್ರತೀಕೇನ । ಸ ದೇವಾನಪಿ ಗಚ್ಛತಿ ಸ ಊರ್ಜಮುಪಜೀವತೀತಿ ಶ್ಲೋಕಾಃ ॥ ೧ ॥**

---

1. ಈ ಕರ್ಮವನ್ನು. 2. 'ಇತ್ಯರ್ಥಃ' ಎಂಬ ಮಾತು ಮೂಲದಲ್ಲಿತ್ತೋ ಇಲ್ಲವೋ ಹೇಳುವದಕ್ಕೆ ಬರುವದಿಲ್ಲ; ಅದಿಲ್ಲದಿದ್ದರೇ ಚೆನ್ನಾಗಿರುತ್ತದೆ.

3. ಪ್ರತಿಯೊಂದೂ ಮಿಕ್ಕೆಲ್ಲದರ ಕಾರ್ಯವು -ಎಂಬುದನ್ನು 'ಮಧು' ಎಂಬ ಶಬ್ದವು ತಿಳಿಸುತ್ತದೆ.

೧. ತಂದೆಯು ಸಪ್ತಾನ್ನಗಳನ್ನು ಮೇಧೆಯಿಂದಲೂ ತಪಸ್ಸಿನಿಂದಲೂ ಹುಟ್ಟಿಸಿದನಲ್ಲ, (ಅವನ್ನು ಹೇಳಲಾಗುತ್ತದೆ). ಇವನ ಒಂದು (ಅನ್ನವು) ಸಾಧಾರಣ(ವಾದದ್ದು); ಎರಡನ್ನು ದೇವತೆಗಳಿಗೆ ವಿಭಾಗಿಸಿಕೊಟ್ಟನು; ಮೂರನ್ನು ತನಗೆ ಮಾಡಿಕೊಂಡನು, ಪಶುಗಳಿಗೆ ಒಂದನ್ನು ಕೊಟ್ಟನು. ಯಾವದು ಬದುಕಿದೆಯೋ ಯಾವದು (ಬದು) ಕಿಲ್ಲವೋ ಅದೆಲ್ಲವೂ ಅದರಲ್ಲಿ ಪ್ರತಿಷ್ಠಿತ(ವಾಗಿರುತ್ತದೆ). ಯಾವಾಗಲೂ ತಿನ್ನಲ್ಪಡುತ್ತಿದ್ದರೂ ಅವು ಏತಕ್ಕೆ ಕ್ಷಯವಾಗದೆ ಇವೆ? ಯಾವನು ಈ ಅಕ್ಷಿತಿಯನ್ನು ಅರಿತುಕೊಳ್ಳುವನೋ ಅವನು ಅನ್ನವನ್ನು ಪ್ರತೀಕದಿಂದ ತಿನ್ನುವನು. ಅವನು ದೇವತೆಗಳಲ್ಲಿ ಸೇರಿಹೋಗುವನು, ಅವನು ಅಮೃತವನ್ನು ತಿಂದು ಜೀವಿಸುವನು.

## ಮಂತ್ರಗಳ ವಿವರಣೆಯ ಪ್ರಾರಂಭ

(ಭಾಷ್ಯ)

೨೦೧. ಯತ್ಸಪ್ತಾನ್ನಾನಿ । ಯತ್ ಅಜನಯತ್ ಇತಿ ಕ್ರಿಯಾವಿಶೇಷಣಮ್ । ಮೇಧಯಾ ಪ್ರಜ್ಞಯಾ ವಿಜ್ಞಾನೇನ ತಪಸಾ ಚ ಕರ್ಮಣಾ । ಜ್ಞಾನಕರ್ಮಣೀ ಏವ ಹಿ ಮೇಧಾತಪಃಶಬ್ದವಾಚ್ಯೇ । ತಯೋಃ ಪ್ರಕೃತತ್ವಾತ್ । ನೇತರೇ ಮೇಧಾತಪಸೀ । ಅಪ್ರಕರಣಾತ್ । ಪಾಙ್ಕ್ತಂ ಹಿ ಕರ್ಮ ಜಾಯಾದಿಸಾಧನಮ್, 'ಯ ಏವಂ ವೇದ' ಇತಿ ಚ ಅನನ್ತರಮೇವ ಜ್ಞಾನಂ ಪ್ರಕೃತಮ್, ತಸ್ಮಾತ್ ನ ಪ್ರಸಿದ್ಧಯೋರ್ಮೇಧಾತಪಸೋಃ ಆಶಙ್ಕಾ ಕಾರ್ಯಾ । ಅತೋ ಯಾನಿ ಸಪ್ತಾನ್ನಾನಿ ಜ್ಞಾನಕರ್ಮಭ್ಯಾಂ ಜನಿತವಾನ್ ಪಿತಾ ತಾನಿ ಪ್ರಕಾಶಯಿಷ್ಯಾಮಃ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

'ಯತ್ಸಪ್ತಾನ್ನಾನಿ' ಎಂಬಲ್ಲಿ (ಯತ್ ಎಂಬ ಶಬ್ದವು) ಯತ್ ಅಜನಯತ್ (ಹುಟ್ಟಿಸಿದನಷ್ಟೆ) ಎಂದು ಕ್ರಿಯಾವಿಶೇಷಣವು. ಮೇಧೆಯಿಂದಲೂ ಎಂದರೆ ಪ್ರಜ್ಞೆಯಿಂದಲೂ ವಿಜ್ಞಾನದಿಂದಲೂ ಎಂದರ್ಥ ; ತಪಸ್ಸಿನಿಂದಲೂ ಎಂದರೆ ಕರ್ಮದಿಂದಲೂ (ಎಂದರ್ಥ. ಇಲ್ಲಿ) ಮೇಧಾತಪಶ್ಶಬ್ದಗಳಿಂದ ಹೇಳಿರುವದು ಜ್ಞಾನಕರ್ಮಗಳೇ[1]; ಏಕೆಂದರೆ ಅವೇ ಪ್ರಕೃತವಾಗಿರುವತ್ತವೆ. ಬೇರೆಯ ಮೇಧಾತಪಸ್ಸುಗಳಲ್ಲ[2]; ಏಕೆಂದರೆ ಅವು ಪ್ರಕೃತವಾಗಿರುವದಿಲ್ಲ.

---

1. ಉಪಾಸನೆ ಮತ್ತು ಕರ್ಮ ಇವೇ. 2. ಗ್ರಂಥಧಾರಣಶಕ್ತಿ, ಕೃಚ್ಛ್ರ ಚಾಂದ್ರಾಯಣಗಳು ಎಂಬ ಮೇಧಾತಪಸ್ಸುಗಳು ಇಲ್ಲಿ ಪ್ರಕೃತವಾಗಿಲ್ಲ. ಪ್ರಕರಣಕ್ಕೆ ಅನುಗುಣವಾಗಿಯೇ ಅರ್ಥಮಾಡುವದು ಉಚಿತ.

ಹೇಗೆಂದರೆ ಹೆಂಡತಿ ಮುಂತಾದ ಸಾಧನಗಳುಳ್ಳ ಪಾಙ್ಕ್ತಕರ್ಮವೂ, 'ಯಾವನು ಹೀಗೆಂದು ಅರಿತುಕೊಳ್ಳುವನೋ' ಎಂದು ಜ್ಞಾನವೂ(ಇದರ) ಹಿಂದುಗಡೆಯಲ್ಲಿಯೇ ಪ್ರಕೃತವಾಗಿವೆ. ಆದ್ದರಿಂದ ಪ್ರಸಿದ್ಧವಾದ ಮೇಧಾತಪಸ್ಸುಗಳು (ಇಲ್ಲಿ ವಿವಕ್ಷಿತವೆಂಬ) ಆಶಂಕೆಯನ್ನು ಮಾಡಬಾರದು. ಆದ್ದರಿಂದ ಯಾವ ಸಪ್ತಾನ್ನಗಳನ್ನು ಜ್ಞಾನಕರ್ಮಗಳಿಂದ ತಂದೆಯು ಹುಟ್ಟಿಸಿದನೋ 'ಅವುಗಳನ್ನು ತಿಳಿಯಪಡಿಸುವೆವು' ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

## ಸಪ್ತಾನ್ನಮಂತ್ರಗಳ ವ್ಯಾಖ್ಯಾನ

(ಉಪನಿಷತ್ತು)

**ಯತ್ಸಪ್ತಾನ್ನಾನಿ ಮೇಧಯಾ ತಪಸಾಽಜನಯತ್ ಪಿತೇತಿ। ಮೇಧಯಾ ಹಿ ತಪಸಾಽಜನಯತ್ ಪಿತಾ। ಏಕಮಸ್ಯ ಸಾಧಾರಣಮಿತೀದಮೇವಾಸ್ಯ ತತ್ಸಾಧಾರಣಮನ್ನಂ ಯದಿದಮದ್ಯತೇ। ಸ ಯ ಏತದುಪಾಸ್ತೇ ನ ಸ ಪಾಪ್ಮನೋ ವ್ಯಾವರ್ತತೇ ಮಿಶ್ರಗ್‌ಂ ಹ್ಯೇತತ್। ದ್ವೇ ದೇವಾನಭಾಜಯದಿತಿ ಹುತಂ ಚ ಪ್ರಹುತಂ ಚ ತಸ್ಮಾದ್ದೇವೇಭ್ಯೋ ಜುಹ್ವತಿ ಚ ಪ್ರ ಚ ಜುಹ್ವತ್ಯಥೋ ಆಹುರ್ದರ್ಶಪೂರ್ಣಮಾಸಾವಿತಿ। ತಸ್ಮಾನ್ನೇಷ್ಟಿಯಾಜುಕಃ ಸ್ಯಾತ್। ಪಶುಭ್ಯ ಏಕಂ ಪ್ರಾಯಚ್ಛದಿತಿ ತತ್ ಪಯಃ। ಪಯೋ ಹ್ಯೇವಾಗ್ರೇ ಮನುಷ್ಯಾಶ್ಚ ಪಶವಶ್ಚೋಪಜೀವನ್ತಿ ತಸ್ಮಾತ್ ಕುಮಾರಂ ಜಾತಂ ಘೃತಂ ವೈವಾಗ್ರೇ ಪ್ರತಿಲೇಹಯನ್ತಿ ಸ್ತನಂ ವಾಽನುಧಾಪಯನ್ತ್ಯಥ ವತ್ಸಂ ಜಾತಮಾಹುರತೃಣಾದ ಇತಿ। ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನೇತಿ ಪಯಸಿ ಹೀದಗ್‌ಂ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ। ತದ್ಯದಿದಮಾಹುಃ ಸಂವತ್ಸರಂ ಪಯಸಾ ಜುಹ್ವದಪ ಪುನರ್ಮೃತ್ಯುಂ ಜಯತೀತಿ ನ ತಥಾ ವಿದ್ಯಾದ್ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮಪಜಯತ್ಯೇವಂ ವಿದ್ವಾನ್ ಸರ್ವಗ್‌ಂ ಹಿ ದೇವೇಭ್ಯೋಽನ್ನಾದ್ಯಂ ಪ್ರಯಚ್ಛತಿ। ಕಸ್ಮಾತ್ತಾನಿ ನ ಕ್ಷೀಯನ್ತೇಽದ್ಯಮಾನಾನಿ ಸರ್ವದೇತಿ ಪುರುಷೋ ವಾ ಅಕ್ಷಿತಿಃ ಸ ಹೀದಮನ್ನಂ ಪುನಃಪುನರ್ಜನಯತೇ। ಯೋ ವೈತಾಮಕ್ಷಿತಿಂ ವೇದೇತಿ ಪುರುಷೋ ವಾ ಅಕ್ಷಿತಿಃ ಸ ಹೀದಮನ್ನಂ ಧಿಯಾಧಿಯಾ ಜನಯತೇ ಕರ್ಮಭಿರ್ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ ಸೋಽನ್ನಮತ್ತಿ ಪ್ರತೀಕೇನೇತಿ ಮುಖಂ ಪ್ರತೀಕಂ ಮುಖೇನೇತ್ಯೇತತ್। ಸ ದೇವಾನಪಿ ಗಚ್ಛತಿ ಸ ಊರ್ಜಮುಪಜೀವತೀತಿ ಪ್ರಶಗ್‌ಂಸಾ ॥ ೨ ॥**

೨. ಸಪ್ತಾನ್ನಗಳನ್ನು ತಂದೆಯು ಮೇಧೆಯಿಂದಲೂ ತಪಸ್ಸಿನಿಂದಲೂ ಹುಟ್ಟಿಸಿದನಲ್ಲವೆ, ಎಂದು (ಮಂತ್ರವು). ಮೇಧೆಯಿಂದಲೂ ತಪಸ್ಸಿನಿಂದಲೂ ಅಲ್ಲವೆ, ತಂದೆಯು ಹುಟ್ಟಿಸಿದನು ? ಇವನ ಒಂದು ಅನ್ನವು ಸಾಧಾರಣವಾದದ್ದು ಎಂದು (ಮಂತ್ರವು) ; ಇಗೋ ಈ ತಿನ್ನುತ್ತಾರಲ್ಲ, ಇದೇ ಇವನ ಸಾಧಾರಣವಾದ ಅನ್ನವು. ಯಾವನು ಇದನ್ನು ಉಪಾಸಿಸುತ್ತಾನೋ ಅವನು ಪಾಪದಿಂದ ಬಿಡುಗಡೆಯಾಗುವದಿಲ್ಲ, ಏಕೆಂದರೆ ಇದು ಮಿಶ್ರವಾಗಿರುತ್ತದೆ. 'ಎರಡನ್ನು ದೇವತೆಗಳಿಗೆ ವಿಭಾಗಿಸಿಕೊಟ್ಟನು' ಎಂದು (ಮಂತ್ರವು) ; ಹುತವೂ ಪ್ರಹುತವೂ (ಆ ಎರಡು). ಆದ್ದರಿಂದ ದೇವತೆಗಳಿಗೆ ಹುತವನ್ನೂ ಪ್ರಹುತವನ್ನೂ ಮಾಡುತ್ತಾರೆ. ದರ್ಶಪೂರ್ಣಮಾಸಗಳೆಂದೂ (ಕೆಲವರು) ಹೇಳುತ್ತಾರೆ; ಆದ್ದರಿಂದ ಇಷ್ಟಿಯಾಜಕನಾಗಬಾರದು. 'ಪಶುಗಳಿಗೆ ಒಂದನ್ನು ಕೊಟ್ಟನು' ಎಂದು (ಮಂತ್ರವು) : ಅದೇ ಹಾಲು. ಏಕೆಂದರೆ ಮನುಷ್ಯರೂ ಪಶುಗಳೂ ಮೊದಲು ಹಾಲನ್ನೇ ಉಪಜೀವಿಸಿಕೊಂಡಿರುತ್ತಾರೆ. ಆದ್ದರಿಂದ ಹುಟ್ಟಿದ ಮಗುವಿಗೆ ತುಪ್ಪವನ್ನಾದರೂ ಮೊದಲು ನೆಕ್ಕಿಸುತ್ತಾರೆ, ಸ್ತನವನ್ನಾದರೂ ಅನುಧಾಪನ ಮಾಡಿಸುತ್ತಾರೆ. ಇನ್ನು ಹುಟ್ಟಿದ ಕರುವನ್ನು ಅತೃಣಾದ ಎನ್ನುತ್ತಾರೆ. 'ಯಾವದು ಬದುಕಿದೆಯೋ ಯಾವದು (ಬದು)ಕಿಲ್ಲವೋ ಅದೆಲ್ಲವೂ ಅದರಲ್ಲಿ ಪ್ರತಿಷ್ಠಿತವಾಗಿದೆ' ಎಂದು (ಮಂತ್ರವು). ಹಾಲಿನಲ್ಲಿಯೇ ಅಲ್ಲವೆ, ಯಾವದು ಬದುಕಿದೆಯೋ ಯಾವದು (ಬದು)ಕಿಲ್ಲವೋ ಇದೆಲ್ಲವೂ ಪ್ರತಿಷ್ಠಿತವಾಗಿದೆ ? ಸಂವತ್ಸರದವರೆಗ ಹಾಲಿನಿಂದ ಹೋಮಮಾಡಿದರೆ ಪುನರ್ಮೃತ್ಯುವನ್ನು ಗೆಲ್ಲುತ್ತಾನೆ- ಎಂದಿದನ್ನು ಹೇಳುತ್ತಾರಲ್ಲ, ಹಾಗೆಂದು ತಿಳಿಯಬಾರದು; ಹೀಗೆಂದರಿತವನು ಯಾವ ದಿನದಲ್ಲಿ ಹೋಮಮಾಡುತ್ತಾನೋ ಆ ದಿನವೇ ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ, ಏಕೆಂದರೆ ದೇವತೆಗಳಿಗೆ ಸರ್ವ ಅನ್ನಾದ್ಯವನ್ನೂ ಕೊಟ್ಟವನಾಗುತ್ತಾನೆ. 'ಯಾವಾಗಲೂ ತಿನ್ನಲ್ಪಡುತ್ತಿದ್ದರೂ ಅವು ಏತಕ್ಕೆ ಕ್ಷಯವಾಗದೆ ಇವೆ?' ಎಂದು (ಮಂತ್ರ). ಪುರುಷನೇ ಅಕ್ಷಿತಿಯು ; ಅವನೇ ಅಲ್ಲವೆ, ಈ ಅನ್ನವನ್ನು ಮತ್ತೆ ಮತ್ತೆ ಹುಟ್ಟಿಸುತ್ತಾನೆ ? 'ಯಾವನೇ ಆಗಲಿ ಈ ಅಕ್ಷಿತಿಯನ್ನು ಅರಿತು

ಕೊಂಡರೆ' ಎಂದು (ಮಂತ್ರವು) ; ಪುರುಷನೇ ಅಕ್ಷಿತಿಯು ; ಅವನೇ ಅಲ್ಲವೆ, ಈ ಅನ್ನವನ್ನು ಧೀಯಿಂದ ಧೀಯಿಂದ ಕರ್ಮಗಳಿಂದ ಹುಟ್ಟಿಸುತ್ತಾನೆ ? ಇದನ್ನು ಹೀಗೆ ಮಾಡದೆ ಇದ್ದಿದ್ದರೆ ಕ್ಷಯವಾಗಿ ಬಿಡುತ್ತಿತ್ತು. 'ಅವನು ಅನ್ನವನ್ನು ಪ್ರತೀಕದಿಂದ ತಿನ್ನುತ್ತಾನೆ' ಎಂದು (ಮಂತ್ರವು). ಮುಖವೇ ಪ್ರತೀಕವು ; ಮುಖದಿಂದ (ತಿನ್ನುತ್ತಾನೆ)-ಎಂದು ಅಭಿಪ್ರಾಯ. 'ಅವನು ದೇವತೆಗಳಲ್ಲಿ ಸೇರಿಹೋಗುವನು, ಅಮೃತವನ್ನು ತಿಂದು ಜೀವಿಸುವನು' ಎಂಬಿದು ಪ್ರಶಂಸೆಯು.

## ಒಂದನೆಯ ಮಂತ್ರಕ್ಕೆ ಬ್ರಾಹ್ಮಣದ ವ್ಯಾಖ್ಯಾನ

(ಭಾಷ್ಯ)

೨೦೨. ತತ್ರ ಮನ್ತ್ರಾಣಾಮರ್ಥಃ ತಿರೋಹಿತತ್ವಾತ್ ಪ್ರಾಯೇಣ ದುರ್ವಿಜ್ಞೇಯೋ ಭವತಿ ಇತಿ ತದರ್ಥವ್ಯಾಖ್ಯಾನಾಯ ಬ್ರಾಹ್ಮಣಂ ಪ್ರವರ್ತತೇ। ತತ್ರ 'ಯತ್ಸಪ್ತಾನ್ನಾನಿ ಮೇಧಯಾ ತಪಸಾಽಜನಯತ್ ಪಿತಾ' ಇತ್ಯಸ್ಯ ಕೋಽರ್ಥ ಉಚ್ಯತ ಇತಿ ಹಿಶಬ್ದೇನೈವ ವ್ಯಾಚಷ್ಟೇ ಪ್ರಸಿದ್ಧಾರ್ಥಾವದ್ಯೋತಕೇನ। ಪ್ರಸಿದ್ಧೋ ಹ್ಯಸ್ಯ ಮನ್ತ್ರಸ್ಯಾರ್ಥಃ ಇತ್ಯರ್ಥಃ। ಯದಜನಯತ್ ಇತಿ ಚ ಅನುವಾದಸ್ವರೂಪೇಣ ಮನ್ತ್ರೇಣ ಪ್ರಸಿದ್ಧಾರ್ಥತ್ವೈವ ಪ್ರಕಾಶಿತಾ। ಅತೋ ಬ್ರಾಹ್ಮಣಮ್ ಅವಿಶಙ್ಕ್ಯೈವ ಆಹ ಮೇಧಯಾ ಹಿ ತಪಸಾಽಜನಯತ್ ಪಿತಾ ಇತಿ। ನನು ಕಥಂ ಪ್ರಸಿದ್ಧಾರ್ಥತಾ ಅಸ್ಯಾರ್ಥಸ್ಯ ಇತಿ ? ಉಚ್ಯತೇ। ಜಾಯಾದಿಕರ್ಮಾನ್ತಾನಾಂ ಲೋಕಫಲಸಾಧನಾನಾಂ ಪಿತೃತ್ವಂ ತಾವತ್ ಪ್ರತ್ಯಕ್ಷಮೇವ। ಅಭಿಹಿತಂ ಚ 'ಜಾಯಾ ಮೇ ಸ್ಯಾತ್' ಇತ್ಯಾದಿನಾ। ತತ್ರ ಚ ದೈವಂ ವಿತ್ತಂ ವಿದ್ಯಾ ಕರ್ಮ ಪುತ್ರಶ್ಚ ಫಲಭೂತಾನಾಂ ಲೋಕಾನಾಂ ಸಾಧನಂ ಸ್ರಷ್ಟೃತ್ವಂ ಪ್ರತಿ ಇತ್ಯಭಿಹಿತಮ್। ವಕ್ಷ್ಯಮಾಣಂ ಚ ಪ್ರಸಿದ್ಧಮೇವ। ತಸ್ಮಾತ್ ಯುಕ್ತಂ ವಕ್ತುಂ 'ಮೇಧಯಾ' ಇತ್ಯಾದಿ। ಏಷಣಾ ಹಿ ಫಲವಿಷಯಾ ಪ್ರಸಿದ್ಧೈವ ಚ ಲೋಕೇ। ಏಷಣಾ ಚ ಜಾಯಾದಿ ಇತ್ಯುಕ್ತಮ್ 'ಏತಾವಾನ್ ವೈ ಕಾಮಃ' ಇತ್ಯನೇನ। ಬ್ರಹ್ಮವಿದ್ಯಾವಿಷಯೇ ಚ ಸರ್ವೈಕತ್ವಾತ್ ಕಾಮಾನುಪಪತ್ತೇಃ। ಏತೇನ ಅಶಾಸ್ತ್ರೀಯಪ್ರಜ್ಞಾತಪೋಭ್ಯಾಂ ಸ್ವಾಭಾವಿಕಾಭ್ಯಾಂ ಜಗತ್ಸ್ರಷ್ಟೃತ್ವಮ್ ಉಕ್ತಮೇವ ಭವತಿ। ಸ್ಥಾವರಾನ್ತಸ್ಯ ಚ ಅನಿಷ್ಟಫಲಸ್ಯ ಕರ್ಮವಿಜ್ಞಾನನಿಮಿತ್ತತ್ವಾತ್। ವಿವಕ್ಷಿತಸ್ತು ಶಾಸ್ತ್ರೀಯ ಏವ ಸಾಧ್ಯಸಾಧನಭಾವಃ। ಬ್ರಹ್ಮವಿದ್ಯಾವಿಧಿತ್ಸಯಾ ತದ್ವೈರಾಗ್ಯಸ್ಯ ವಿವಕ್ಷಿತತ್ವಾತ್। ಸರ್ವೋ ಹ್ಯಯಂ ವ್ಯಕ್ತಾವ್ಯಕ್ತಲಕ್ಷಣಃ ಸಂಸಾರಃ, ಅಶುದ್ಧೋಽನಿತ್ಯಃ ಸಾಧ್ಯಸಾಧನರೂಪೋ ದುಃಖೋಽವಿದ್ಯಾವಿಷಯಃ ಇತ್ಯೇತಸ್ಮಾತ್ ವಿರಕ್ತಸ್ಯ ಬ್ರಹ್ಮವಿದ್ಯಾ ಆರಬ್ಧವ್ಯೇತಿ ॥

(ಭಾಷ್ಯಾರ್ಥ)

ಇಲ್ಲಿ ಮಂತ್ರಗಳ ಅರ್ಥವು ಮರೆಯಾಗಿರುವದರಿಂದ ಬಲುಮಟ್ಟಿಗೆ ತಿಳಿಯುವದು ಕಷ್ಟವಾಗಿರುತ್ತದೆಯಾಗಿ ಅವುಗಳ ಅರ್ಥವನ್ನು ವ್ಯಾಖ್ಯಾನ ಮಾಡುವದಕ್ಕೆ ಬ್ರಾಹ್ಮಣವು ಹೊರಟಿರುತ್ತದೆ. ಅಲ್ಲಿ 'ತಂದೆಯು ಮೇಧೆಯಿಂದಲೂ ತಪಸ್ಸಿನಿಂದಲೂ ಸಪ್ತಾನ್ನಗಳನ್ನು ಹುಟ್ಟಿಸಿದನಲ್ಲ' ಎಂಬೀ ಮಂತ್ರಕ್ಕೆ ಅರ್ಥವೇನು? ಎಂದರೆ ಹೇಳುತ್ತೇವೆ- ಎಂದು ಶಬ್ದಪ್ರಸಿದ್ಧವಾದದ್ದನ್ನು ತಿಳಿಸುವ ಹಿಶಬ್ದದಿಂದಲೇ ವ್ಯಾಖ್ಯಾನಮಾಡಿರುತ್ತದೆ. ಈ ಮಂತ್ರದ ಅರ್ಥವು ಪ್ರಸಿದ್ಧವೇ ಆಗಿರುತ್ತದೆ ಎಂದರ್ಥ. 'ಹುಟ್ಟಿಸಿದನಲ್ಲ' ಎಂಬ ಅನುವಾದಸ್ವರೂಪ ವಾಗಿರುವ ಮಂತ್ರವೂ (ಈ) ಅರ್ಥವು ಪ್ರಸಿದ್ಧವೇ ಆಗಿರುತ್ತದೆಯೆಂದೇ ತಿಳಿಸಿರುತ್ತದೆ. ಆದ್ದರಿಂದ ಬ್ರಾಹ್ಮಣವು "ತಂದೆಯು ಮೇಧೆಯಿಂದಲೂ ತಪಸ್ಸಿನಿಂದಲೂ ಹುಟ್ಟಿಸಿದನಲ್ಲವೆ? ಎಂದು ಯಾವ ಶಂಕೆಯೂ ಇಲ್ಲದೆ ಹೇಳಿರುತ್ತದೆ.

(ಪ್ರಶ್ನೆ) :- ಈ ಅರ್ಥವು ಪ್ರಸಿದ್ಧವಾಗಿದೆ ಎಂಬುದು ಹೇಗೆ ?

(ಉತ್ತರ) :- ಹೇಳುತ್ತೇವೆ. ಮೊದಲನೆಯದಾಗಿ ಹೆಂಡತಿಯಿಂದ ಹಿಡಿದು ಕರ್ಮವವರೆಗಿನವು ಲೋಕಗಳೆಂಬ ಫಲಕ್ಕೆ ಸಾಧನವಾಗಿರುವವಲ್ಲ, (ಅವಕ್ಕೆ ಇವನು) ತಂದೆ ಎಂಬುದು ಪ್ರಸಿದ್ಧವೇ ಆಗಿರುತ್ತದೆ. "ನನಗೆ ಹೆಂಡತಿಯಾಗಬೇಕು" (೧-೪-೧೭) ಎಂದು ಮುಂತಾಗಿರುವ (ವಾಕ್ಯದಿಂದ ಇದನ್ನು) ಹೇಳಿಯೂ ಇರುತ್ತದೆ. ಅಲ್ಲಿ ದೈವವಿತ್ತವಾದ ವಿದ್ಯೆಯೂ ಕರ್ಮವೂ ಪುತ್ರನೂ ಫಲವಾಗಿರುವ ಲೋಕಗಳನ್ನು ಸೃಷ್ಟಿಸುವದಕ್ಕೆ ಸಾಧನವೆಂದು ಹೇಳಿರುತ್ತದೆ ; ಮುಂದೆಯೂ (೧-೫-೧೬) ಹೇಳಲಾಗುತ್ತದೆ. (ಇದೂ) ಪ್ರಸಿದ್ಧವೇ ಆಗಿರುತ್ತದೆ. ಆದ್ದರಿಂದ 'ಮೇಧೆಯಿಂದಲೂ' ಎಂದು ಮುಂತಾಗಿ (ಬ್ರಾಹ್ಮಣದಲ್ಲಿ) ಹೇಳಿರುವದು ಯುಕ್ತವೇ.

ಇದಲ್ಲದೆ ಏಷಣೆಯು ಫಲವಿಷಯವಾಗಿರುತ್ತದೆ ಎಂಬುದು ಲೋಕಪ್ರಸಿದ್ಧವೇ (ಆಗಿರುತ್ತದೆ). ಹೆಂಡತಿ ಮುಂತಾದದ್ದು ಏಷಣೆಯೇ ಎಂದು "ಇಷ್ಟೇ ಕಾಮವು" (೧-೪-೧೭) ಎಂಬ ವಾಕ್ಯದಿಂದ ಹೇಳಿರುತ್ತದೆ. ಬ್ರಹ್ಮವಿದ್ಯೆಯ ವಿಷಯದಲ್ಲಿ ಎಲ್ಲವೂ ಒಂದೇ ಆಗಿರುವದರಿಂದ ಕಾಮವು ಹೊಂದುವದಿಲ್ಲವಾದ್ದರಿಂದಲೂ (ಹೀಗೆಂದು ಸಿದ್ಧವಾಗುತ್ತದೆ).

ಇದರಿಂದ ಅಶಾಸ್ತ್ರೀಯವಾದ ಸ್ವಾಭಾವಿಕವಾದ ಜ್ಞಾನತಪಸ್ಸುಗಳಿಂದ ಜಗತ್ತನ್ನು ಸೃಜಿಸುತ್ತಾನೆಂಬುದನ್ನು ಹೇಳಿದಂತೆಯೇ ಆಯಿತು. ಏಕೆಂದರೆ ಸ್ಥಾವರಾಂತವಾದ ಅನಿಷ್ಟಫಲವು ಕರ್ಮಜ್ಞಾನಗಳ ನಿಮಿತ್ತದಿಂದಲೇ (ಆಗಿರುತ್ತದೆ). ಆದರೆ **ಇಲ್ಲಿ ವಿವಕ್ಷಿತವಾಗಿರುವದು ಶಾಸ್ತ್ರೀಯವಾದ ಸಾಧ್ಯಸಾಧನಭಾವವೇ ; ಏಕೆಂದರೆ ಬ್ರಹ್ಮವಿದ್ಯೆಯನ್ನು ವಿಧಾನಮಾಡುವದ**

**ಕ್ಕೋಸ್ಕರ ಆದರಲ್ಲಿ ವೈರಾಗ್ಯವುಂಟಾಗಲೆಂದು ಹೇಳಬೇಕೆಂಬುದು ಇಷ್ಟವಾಗಿರುತ್ತದೆ. ವ್ಯಕ್ತಾವ್ಯಕ್ತವಾಗಿ ತೋರುವ ಈ ಸಾಧ್ಯಸಾಧನ ರೂಪದ ಸಂಸಾರವೆಲ್ಲವೂ ಅಶುದ್ಧವೂ ಅನಿತ್ಯವೂ ದುಃಖವೂ (ಆಗಿದ್ದು) ಅವಿದ್ಯಾವಿಷಯವಾಗಿರುವದರಿಂದ ಇದರಲ್ಲಿ ವಿರಕ್ತ ನಾದವನಿಗೆ ಬ್ರಹ್ಮವಿದ್ಯೆಯನ್ನು (ತಿಳಿಸುವದಕ್ಕೆ) ಪ್ರಾರಂಭಿಸಬೇಕಾ ಗಿರುತ್ತದೆ.**

## ಅನ್ನಗಳ ವಿನಿಯೋಗ: ಸಾಧಾರಣಾನ್ನ

(ಭಾಷ್ಯ)

೨೦೩. ತತ್ರ ಅನ್ನಾನಾಂ ವಿಭಾಗೇನ ವಿನಿಯೋಗ ಉಚ್ಯತೇ । ಏಕ ಮಸ್ಯ ಸಾಧಾರಣಮ್ ಇತಿ ಮನ್ತ್ರಪದಮ್ । ತಸ್ಯ ವ್ಯಾಖ್ಯಾನಮ್ ಇದಮೇ ವಾಸ್ಯ ತತ್ಸಾಧಾರಣಮನ್ನಮ್ ಇತ್ಯುಕ್ತಮ್ । ಅಸ್ಯ ಭೋಕ್ತೃಸಮುದಾ ಯಸ್ಯ । ಕಿಂ ತತ್ ? ಯದಿದಮದ್ಯತೇ ಭುಜ್ಯತೇ ಸರ್ವೈಃ ಪ್ರಾಣಿಭಿಃ ಅಹನ್ಯ ಹನಿ। ತತ್ ಸಾಧಾರಣಂ ಸರ್ವಭೋಕ್ತ್ರರ್ಥಮ್ ಅಕಲ್ಪಯತ್ ಪಿತಾ ಸೃಷ್ಟ್ವೈವ ಅನ್ನಮ್ । ಸ ಯ ಏತತ್ ಸಾಧಾರಣಂ ಸರ್ವಪ್ರಾಣಭೃತ್ಸ್ಥಿತಿಕರಂ ಭುಜ್ಯ ಮಾನಮನ್ನಮ್ ಉಪಾಸ್ತೇ, ತತ್ಪರೋ ಭವತಿ ಇತ್ಯರ್ಥಃ । ಉಪಾಸನಂ ಹಿ ನಾಮ ತಾತ್ಪರ್ಯಂ ದೃಷ್ಟಂ ಲೋಕೇ 'ಗುರುಮುಪಾಸ್ತೇ', 'ರಾಜಾನ ಮುಪಾಸ್ತೇ', ಇತ್ಯಾದೌ । ತಸ್ಮಾತ್ ಶರೀರಸ್ಥಿತ್ಯರ್ಥಾನ್ನೋಪಭೋಗಪ್ರಧಾನಃ, ನಾದೃಷ್ಟಾರ್ಥಕರ್ಮಪ್ರಧಾನಃ ಇತ್ಯರ್ಥಃ । ಸ ಏವಂಭೂತೋ ನ ಪಾಪ್ಮನಃ ಅಧರ್ಮಾತ್ ವ್ಯಾವರ್ತತೇ, ನ ವಿಮುಚ್ಯತೇ ಇತ್ಯೇತತ್ । ತಥಾ ಚ ಮನ್ತ್ರ ವರ್ಣಃ "ಮೋಘಮನ್ನಂ ವಿನ್ದತೇ" (ಋ. ೧೦-೧೧೭-೬) ಇತ್ಯಾದಿಃ । ಸ್ಮೃತಿ ರಪಿ "ನಾತ್ಮಾರ್ಥಂ ಪಾಚಯೇದನ್ನಮ್"[1] (ಮೋ.ಧ. ೨೪೩-೫), "ಅಪ್ರ ದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ" (ಗೀ. ೩-೧೨), "ಅನ್ನಾದೇ ಭ್ರೂಣಹಾ ಮಾರ್ಷ್ಟಿ" (ಮನು. ೮-೩೧೭) ಇತ್ಯಾದಿಃ । ಕಸ್ಮಾತ್ ಪುನಃ ಪಾಪ್ಮನೋ ನ ವ್ಯಾವರ್ತತೇ ? ಮಿಶ್ರಂ ಹ್ಯೇತತ್ । ಸರ್ವೇಷಾಂ ಹಿ ಸ್ವಂ ತದಪ್ರವಿಭಕ್ತಂ ಯತ್ ಪ್ರಾಣಿಭಿರ್ಭುಜ್ಯತೇ । ಸರ್ವಭೋಜ್ಯತ್ವಾದೇವ ಯೋ ಮುಖೇ ಪ್ರಕ್ಷಿಪ್ಯಮಾಣೋಽಪಿ ಗ್ರಾಸಃ ಪರಸ್ಯ ಪೀಡಾಕರೋ ದೃಶ್ಯತೇ 'ಮಮೇದಂ ಸ್ಯಾತ್' ಇತಿ ಹಿ ಸರ್ವೇಷಾಂ ತತ್ರ ಆಶಾ ಪ್ರತಿಬದ್ಧಾ । ತಸ್ಮಾತ್ ನ ಪರಮ್ ಅಪೀಡಯಿತ್ವಾ ಗ್ರಸಿತುಮಪಿ ಶಕ್ಯತೇ। "ದುಷ್ಕೃತಂ ಹಿ ಮನುಷ್ಯಾ ಣಾಮ್" (?) ಇತ್ಯಾದಿಸ್ಮರಣಾಚ್ಚ ॥

---

1 "ನಾತ್ಮಾರ್ಥೇ" ಎಂದು ಅಚ್ಚಿನ ಭಾರತದ ಪಾಠ.

(ಭಾಷ್ಯಾರ್ಥ)

ಈಗ ಅನ್ನಗಳನ್ನು ವಿಂಗಡಿಸಿ ವಿನಿಯೋಗವನ್ನು ಹೇಳಲಾಗುತ್ತದೆ. 'ಇವನ ಒಂದು ಅನ್ನವು ಸಾಧಾರಣವಾದದ್ದು' ಎಂಬುದು ಮಂತ್ರಪದವು. ಅದರ ವ್ಯಾಖ್ಯಾನವಾಗಿ "ಇದೇ ಇವನ ಸಾಧಾರಣವಾದ ಅನ್ನವು" ಎಂದು ಹೇಳಿದೆ. ಇವನ ಎಂದರೆ (ಈ) ಭೋಕ್ತೃಸಮುದಾಯಕ್ಕೆ (ಎಂದರ್ಥ). ಅದು ಯಾವದು? ಎಂದರೆ ಎಲ್ಲಾ ಪ್ರಾಣಿಗಳೂ ದಿನದಿನವೂ ತಿನ್ನುತ್ತಾರಲ್ಲ, ಉಣ್ಣುತ್ತಾರಲ್ಲ, (ಅದು) ಸಾಧಾರಣ(ವಾದ ಅನ್ನವು). ಆ (ಅನ್ನವನ್ನು) ಸೃಜಿಸಿ ಸಾಧಾರಣವಾಗಿ ಎಲ್ಲಾ ಭೋಕ್ತೃಗಳಿಗೆಂದು ತಂದೆಯು ಕಲ್ಪಿಸಿರುತ್ತಾನೆ. ಯಾವನು ಈ ಸಾಧಾರಣವಾದ ಎಲ್ಲಾ ಪ್ರಾಣಧಾರಿಗಳಿಗೂ ಸ್ಥಿತಿಯನ್ನುಂಟುಮಾಡುವ, ಉಣ್ಣುವ ಅನ್ನವನ್ನು ಉಪಾಸಿಸುತ್ತಾನೋ, (ಅದರಲ್ಲಿ) ತತ್ಪರನಾಗಿರುತ್ತಾನೋ ಎಂದರ್ಥ. ಉಪಾಸನೆ ಎಂದರೆ ತತ್ಪರನಾಗಿರುವದೇ ಎಂದು ಲೋಕದಲ್ಲಿ 'ಗುರುವನ್ನು ಉಪಾಸಿಸುತ್ತಾನೆ', 'ರಾಜನನ್ನು ಉಪಾಸನೆ ಮಾಡುತ್ತಿದಾನೆ' –ಮುಂತಾದ (ಪ್ರಯೋಗ)ಗಳಲ್ಲಿ ಕಂಡುಬಂದಿರುತ್ತದೆ. ಆದ್ದರಿಂದ ಶರೀರಸ್ಥಿತಿಗೆ (ಬೇಕಾಗಿರುವ) ಅನ್ನದ ಉಪಭೋಗವೇ ಪ್ರಧಾನವಾಗಿರುವವನು, ಎಂದರೆ ಅದೃಷ್ಟಫಲವುಳ್ಳ ಕರ್ಮಪ್ರಧಾನನಲ್ಲದವನು ಎಂದರ್ಥ. ಅವನು, ಹೀಗಿರುವವನು, ಪಾಪದಿಂದ ಅಧರ್ಮದಿಂದ ಬಿಡುಗಡೆಯಾಗುವದಿಲ್ಲ, ವಿಮುಕ್ತನಾಗುವದಿಲ್ಲ ಎಂದು ಅಭಿಪ್ರಾಯ. ಆದ್ದರಿಂದಲೇ "(ಅವಿವೇಕಿಯಾದವನು) ವ್ಯರ್ಥವಾದ[1] ಅನ್ನವನ್ನು ಪಡೆದುಕೊಂಡರೆ (ಅದು ನಿಜವಾಗಿ ಅವನ ವಧೆಯೇ)" (ಋ. ೧೦-೯೭-೬) ಎಂದು ಮುಂತಾಗಿ ಮಂತ್ರವರ್ಣವು (ಹೇಳುತ್ತದೆ). "ತನಗಾಗಿ ಅನ್ನವನ್ನು ಅಡಬಾರದು" (ಮೋ ಧ. ೨೪೩-೫), "ಆ ದೇವತೆಗಳಿಗೆ ಕೊಡದೆ ತಿಂದವನು ಕಳ್ಳನೇ" (ಗೀ.೩-೧೨), "ಭ್ರೂಣಹತ್ಯೆಯನ್ನು[2] (ತನ್ನ) ಅನ್ನವನ್ನು ಉಣ್ಣುವಾತನಲ್ಲಿ (ಪಾಪವನ್ನು) ತೊಳೆದುಕೊಳ್ಳುತ್ತಾನೆ" (ಮನು. ೮-೩೧೭) ಇದೇ ಮುಂತಾದ ಸ್ಮೃತಿಯೂ (ಹೀಗೆಂದು ಹೇಳುತ್ತದೆ).

ಪಾಪದಿಂದ ಬಿಡುಗಡೆಯಾಗುವದಿಲ್ಲವೆಂಬುದು ಏತಕ್ಕೆ? ಎಂದರೆ, ಏಕೆಂದರೆ ಇದು ಮಿಶ್ರವಾದದ್ದು, (ಮತ್ತೊಬ್ಬರಿಗೆ) ಹಂಚದೆ ಪ್ರಾಣಿಗಳು ತಿನ್ನುತ್ತಾರಲ್ಲ, ಅದು ಎಲ್ಲರ ಸ್ವತ್ತಾಗಿರುತ್ತದೆ. ಅದು ಎಲ್ಲರಿಗೂ ಭೋಜ್ಯವಾಗಿರುವದರಿಂದಲೇ ತುತ್ತನ್ನು ಮುಖದಲ್ಲಿ ಹಾಕಿಕೊಂಡಮಾತ್ರದಿಂದ ಮತ್ತೊಬ್ಬರಿಗೆ ಪೀಡಾಕರವಾಗಿಯೇ ಕಾಣಿಸುತ್ತದೆ. 'ಇದು ನನಗೆ ಆಗಲಿ!'

---

1. ದೇವಾದಿಗಳಿಗೆ ವಿನಿಯೋಗಿಸದ ಎಂದರ್ಥ.

2. ಭ್ರೂಣಹತ್ಯೆ ಎಂದರೆ ಶ್ರೇಷ್ಠಬ್ರಾಹ್ಮಣನನ್ನು ಕೊಂದದ್ದು ಎಂದು ವಾರ್ತಿಕದಲ್ಲಿದೆ. ಎಲ್ಲಕ್ಕೂ ಹೆಚ್ಚಿನ ಪಾಪವು ಅನ್ನದಾನದಿಂದ ಹೋಗುವದು ಎಂದರ್ಥ. ಭ್ರೂಣ (ಗರ್ಭ)ವನ್ನು ಕೊಂದದ್ದಕ್ಕಿಂತಲೂ ಶ್ರೇಷ್ಠಬ್ರಾಹ್ಮಣನ ಕೊಲೆಯು ಹೆಚ್ಚಿನ ಪಾಪವು.

ಎಂದಲ್ಲವೆ, ಅದರಲ್ಲಿ ಎಲ್ಲರಿಗೂ ಆಶೆಯು ಸೇರಿಕೊಂಡಿರುತ್ತದೆ ? ಆದ್ದರಿಂದ ಮತ್ತೊಬ್ಬರನ್ನು ಸಂಕಟಗೊಳಿಸದೆ (ಒಂದು) ತುತ್ತನ್ನು ನುಂಗುವದು ಕೂಡ ಆಗುವಹಾಗಿಲ್ಲ. "ಮನುಷ್ಯರ ದುಷ್ಕೃತವು (ಅನ್ನವನ್ನಾಶ್ರಯಿಸಿಕೊಂಡಲ್ಲವೆ, ಇರುತ್ತದೆ)[1]" (?) ಎಂದು ಮುಂತಾಗಿ ಸ್ಮೃತಿಯಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ).

## ಭರ್ತೃಪ್ರಪಂಚವ್ಯಾಖ್ಯಾನದ ವಿಮರ್ಶೆ

(ಭಾಷ್ಯ)

೨೦೪. ಗೃಹಿಣಾ ವೈಶ್ವದೇವಾಖ್ಯಮನ್ನಂ ಯದಹನ್ಯಹನಿ ನಿರುಪ್ಯತೇ ಇತಿ ಕೇಚಿತ್ । ತನ್ನ । ಸರ್ವಭೋಕ್ತೃಸಾಧಾರಣತ್ವಂ ವೈಶ್ವದೇವಾಖ್ಯಸ್ಯ ಅನ್ನಸ್ಯ ನ ಸರ್ವಪ್ರಾಣಭೃದ್ಭುಜ್ಯಮಾನಾನ್ನವತ್ ಪ್ರತ್ಯಕ್ಷಮ್ । ನಾಪಿ 'ಯದಿದಮದ್ಯತೇ' ಇತಿ ತದ್ವಿಷಯಂ ವಚನಮ್ ಅನುಕೂಲಮ್ । ಸರ್ವಪ್ರಾಣಭೃದ್ಭುಜ್ಯಮಾನಾನ್ನಾನ್ತಃಪಾತಿತ್ವಾಚ್ಚ ವೈಶ್ವದೇವಾಖ್ಯಸ್ಯ ಯುಕ್ತಂ ಶ್ವಚಾಣ್ಡಾಲಾದ್ಯಾದ್ಯಸ್ಯ ಅನ್ನಸ್ಯ ಗ್ರಹಣಮ್ । ವೈಶ್ವದೇವವ್ಯತಿರೇಕೇಣಾಪಿ ಶ್ವಚಾಣ್ಡಾಲಾದ್ಯಾದ್ಯಾನ್ನದರ್ಶನಾತ್ ತತ್ರ ಯುಕ್ತಂ 'ಯದಿದಮದ್ಯತೇ' ಇತಿ ವಚನಮ್ । ಯದಿ ಹಿ ತನ್ನ ಗೃಹ್ಯೇತ ಸಾಧಾರಣಶಬ್ದೇನ ಪಿತ್ರಾ ಅಸೃಷ್ಟತ್ವಾವಿನಿಯುಕ್ತತ್ವೇ ತಸ್ಯ ಪ್ರಸಜ್ಯೇಯಾತಾಮ್ । ಇಷ್ಯತೇ ಹಿ ತತ್ಸೃಷ್ಟತ್ವಂ ತದ್ವಿನಿಯುಕ್ತತ್ವಂ ಚ ಸರ್ವಸ್ಯಾನ್ನಜಾತಸ್ಯ। ನ ಚ ವೈಶ್ವದೇವಾಖ್ಯಂ ಶಾಸ್ತ್ರೋಕ್ತಂ ಕರ್ಮ ಕುರ್ವತಃ ಪಾಪ್ಮನೋಽವಿನಿವೃತ್ತಿರ್ಯುಕ್ತಾ । ನ ಚ ತಸ್ಯ ಪ್ರತಿಷೇಧೋಽಸ್ತಿ । ನ ಚ ಮತ್ಸ್ಯಬನ್ಧನಾದಿಕರ್ಮವತ್ ಸ್ವಭಾವಜುಗುಪ್ಸಿತಮೇತತ್ ಶಿಷ್ಟನಿರ್ವರ್ತ್ಯತ್ವಾತ್ । ಅಕರಣೇ ಚ ಪ್ರತ್ಯವಾಯಶ್ರವಣಾತ್ । ಇತರತ್ರ ಚ ಪ್ರತ್ಯವಾಯೋಪಪತ್ತೇಃ। "ಅಹಮನ್ನಮನ್ನಮದನ್ತಮದ್ಮಿ" (ತೈ. ೩-೧೦-೬) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಗೃಹಸ್ಥನು ದಿನದಿನವೂ (ಅಗ್ನಿಯಲ್ಲಿ) ಕೊಡುವ **ವೈಶ್ವದೇವವೆಂಬ** ಅನ್ನವಿದೆಯಲ್ಲ, (ಅದು) ಎಂದು ಕೆಲವರು[2] (ವ್ಯಾಖ್ಯಾನಮಾಡಿರುತ್ತಾರೆ). ಅದು ಸರಿಯಲ್ಲ; ಏಕೆಂದರೆ ಎಲ್ಲಾ ಪ್ರಾಣಿಗಳೂ ಉಣ್ಣುವ ಅನ್ನದಂತೆ ವೈಶ್ವದೇವವೆಂಬ ಅನ್ನವು ಎಲ್ಲಾ ಭೋಕ್ತೃಗಳಿಗೂ ಸಾಧಾರಣವಾಗಿರುವದು

---

1. ಇದು ಯಾವ ಸ್ಮೃತಿ ಎಂಬುದು ತಿಳಿಯಲಿಲ್ಲ. "ದುಷ್ಕೃತಂ ಹಿ ಮನುಷ್ಯಾಣಾಮನ್ನಮಾಶ್ರಿತ್ಯ ತಿಷ್ಠತಿ । ಯೋ ಹಿ ಯಸ್ಯಾನ್ನಮಶ್ನಾತಿ ಸ ತಸ್ಯಾಶ್ನಾತಿ ಕಿಲ್ಬಿಷಮ್" ಎಂದು ಪೂರ್ಣವಾಕ್ಯವೆಂದು ತಿಳಿಯಬಂದಿದೆ. ಮಹಾಭಾರತದಲ್ಲಿಯೇ ಈ ವಚನವಿದ್ದರೂ ಇರಬಹುದು.
2. ಭರ್ತೃಪ್ರಪಂಚರು.

ಪ್ರತ್ಯಕ್ಷ(ವಾಗಿರು)ವದಿಲ್ಲ. "ಇಗೋ, ಈ ತಿನ್ನುತ್ತಾರಲ್ಲ" ಎಂಬ ವಚನವೂ ಅದರ ವಿಷಯದಲ್ಲಿ ಅನುಕೂಲವಾಗಿರುವದಿಲ್ಲ. ವೈಶ್ವದೇವ(ವೆಂಬ ಅನ್ನವು) ಎಲ್ಲಾ ಪ್ರಾಣಿಗಳೂ ಉಣ್ಣುವ ಅನ್ನದಲ್ಲಿಯೇ ಸೇರಿರುವದರಿಂದಲೂ ನಾಯಿ, ಚಾಂಡಾಲ- ಮುಂತಾದವರು ತಿನ್ನುವ ಅನ್ನವನ್ನೇ (ಇಲ್ಲಿ) ತೆಗೆದುಕೊಳ್ಳುವದು ಯುಕ್ತವು. ವೈಶ್ವದೇವವಲ್ಲದೆಯೂ ಶ್ವಚಾಂಡಾಲಾದಿಗಳು ತಿನ್ನುವ ಅನ್ನವೂ ಕಂಡುಬರುತ್ತಿರುವದರಿಂದ ಅದರ(ವಿಷಯ)ದಲ್ಲಿ 'ಈ ತಿನ್ನುತ್ತಾರಲ್ಲ' ಎಂಬ ವಚನವು ಯುಕ್ತವಾಗಿರುತ್ತದೆ. ಏಕೆಂದರೆ ಸಾಧಾರಣಶಬ್ದದಿಂದ ಅದನ್ನು ತೆಗೆದುಕೊಳ್ಳದೆ ಇದ್ದರೆ ತಂದೆಯು ಅವನ್ನು ಸೃಷ್ಟಿಮಾಡಿಲ್ಲವೆಂದೂ ಅವು ಏತರಲ್ಲಿಯೂ ವಿನಿಯುಕ್ತವಾಗಿಲ್ಲವೆಂದೂ ಆಗುವದು. (ಆದರೆ) ಎಲ್ಲಾ ಅನ್ನಸಮೂಹವೂ ಆ (ತಂದೆ) ಸೃಷ್ಟಿಸಿದ್ದು, ಅವನೇ ವಿನಿಯೋಗಿಸಿದ್ದು ಎಂಬುದೇ (ನಮ್ಮಿಬ್ಬರಿಗೂ) ಇಷ್ಟವಲ್ಲವೆ? ಇದಲ್ಲದೆ ವೈಶ್ವದೇವವೆಂಬ ಶಾಸ್ತ್ರೋಕ್ತಕರ್ಮವನ್ನು ಮಾಡುವವನಿಗೆ ಪಾಪದಿಂದ ಬಿಡುಗಡೆಯಿಲ್ಲವೆಂಬುದೂ ಯುಕ್ತವಲ್ಲ. ಅದನ್ನು ಮಾಡಬಾರದೆಂದೂ (ಶಾಸ್ತ್ರದಲ್ಲಿ) ಹೇಳಿಲ್ಲ. ಮೀನುಹಿಡಿಯುವದೇ ಮುಂತಾದ ಕರ್ಮದಂತೆ ಇದು ಸ್ವಭಾವದಿಂದಲೇ ಅಸಹ್ಯವಾಗಿರುವದೂ ಅಲ್ಲ; ಏಕೆಂದರೆ ಶಿಷ್ಯರು (ಇದನ್ನು) ಮಾಡುತ್ತಾರೆ, ಮಾಡದೆ ಇದ್ದರೆ ಪ್ರತ್ಯವಾಯವುಂಟೆಂದೂ ಹೇಳಿದೆ[1]. ಇನ್ನೊಂದರಲ್ಲಿ[2] ಪ್ರತ್ಯವಾಯ(ವಾಗುವದೆಂಬುದೂ) ಯುಕ್ತವಾಗಿರುತ್ತದೆ; ಏಕೆಂದರೆ "ಅನ್ನವನ್ನು ತಿನ್ನುವಾತನನ್ನು ಅನ್ನವಾದ ನಾನು ತಿನ್ನುತ್ತೇನೆ" (ತೈ. ೩-೧೦-೬) ಎಂದು ಮಂತ್ರವರ್ಣವಿದೆ.

## ದೇವತೆಗಳಿಗೆ ವಿನಿಯುಕ್ತವಾಗಿರುವ ಅನ್ನಗಳು

(ಭಾಷ್ಯ)

೨೦೫. ದ್ವೇ ದೇವಾನ್ ಅಭಾಜಯತ್ ಇತಿ ಮನ್ತ್ರಪದಮ್। ಯೇ ದ್ವೇ ಅನ್ನೇ ಸೃಷ್ಟ್ವಾ ದೇವಾನ್ ಅಭಾಜಯತ್, ಕೇ ತೇ ದ್ವೇ ಇತಿ ? ಉಚ್ಯತೇ। ಹುತಂ ಚ ಪ್ರಹುತಂ ಚ। ಹುತಮ್ ಇತಿ ಅಗ್ನೌ ಹವನಮ್। ಪ್ರಹುತಂ ಹುತ್ವಾ ಬಲಿಹರಣಮ್। ಯಸ್ಮಾತ್ ದ್ವೇ ಏತೇ ಅನ್ನೇ ಹುತಪ್ರಹುತೇ ದೇವಾನ್ ಅಭಾಜಯತ್ ಪಿತಾ ತಸ್ಮಾತ್ ಏತರ್ಹ್ಯಪಿ ಗೃಹಿಣಃ ಕಾಲೇ ದೇವೇಭ್ಯೋ ಜುಹ್ವತಿ ದೇವೇಭ್ಯ ಇದಮನ್ನಮ್ ಅಸ್ಮಾಭಿರ್ದೀಯಮಾನಮ್ ಇತಿ ಮನ್ವಾನಾ ಜುಹ್ವತಿ ಚ। ಪ್ರಜುಹ್ವತಿ ಚ ಹುತ್ವಾ ಬಲಿ

1. ವೈಶ್ವದೇವವನ್ನು ಮಾಡದಿರುವವನಿಗೆ ತಿರ್ಯಗ್ಜನ್ಮವುಂಟಾಗುವದೆಂದು ಸ್ಮೃತಿ.
2. ಸಾಧಾರಣಾನ್ನವಿಷಯದಲ್ಲಿ.

ಹರಣಂ ಚ ಕುರ್ವತೇ ಇತ್ಯರ್ಥಃ। ಅಥೋ ಅಪಿ ಅನ್ಯೇ ಆಹುಃ ದ್ವೇ ಅನ್ನೇ ಪಿತ್ರಾ ದೇವೇಭ್ಯಃ ಪ್ರತ್ತೇ ನ ಹುತಪ್ರಹುತೇ, ಕಿಂ ತರ್ಹಿ ದರ್ಶಪೂರ್ಣಮಾಸೌ ಇತಿ। ದ್ವಿತ್ವಶ್ರವಣಾವಿಶೇಷಾತ್ ಅತ್ಯನ್ತಪ್ರಸಿದ್ಧತ್ವಾಚ್ಚ ಹುತಪ್ರಹುತೇ ಇತಿ ಪ್ರಥಮಃ ಪಕ್ಷಃ। ಯದ್ಯಪಿ ದ್ವಿತ್ವಂ ಹುತಪ್ರಹುತಯೋಃ ಸಂಭವತಿ ತಥಾಪಿ ಶ್ರೌತಯೋರೇವ ತು ದರ್ಶಪೂರ್ಣಮಾಸಯೋಃ ದೇವಾನ್ನತ್ವಂ ಪ್ರಸಿದ್ಧತರಂ ಮನ್ತ್ರಪ್ರಕಾಶಿತತ್ವಾತ್। ಗುಣಪ್ರಧಾನಪ್ರಾಪ್ತೌ ಚ ಪ್ರಧಾನೇ ಪ್ರಥಮತರಾ ಅವಗತಿಃ। ದರ್ಶಪೂರ್ಣಮಾಸಯೋಶ್ಚ ಪ್ರಾಧಾನ್ಯಂ ಹುತಪ್ರಹುತಾಪೇಕ್ಷಯಾ। ತಸ್ಮಾತ್ ತಯೋರೇವ ಗ್ರಹಣಂ ಯುಕ್ತಂ "ದ್ವೇ ದೇವಾನಭಾಜಯತ್" ಇತಿ। ಯಸ್ಮಾತ್ ದೇವಾರ್ಥಮ್ ಏತೇ ಪಿತ್ರಾ ಪ್ರಕ್ಲೃಪ್ತೇ ದರ್ಶಪೂರ್ಣಮಾಸಾಖ್ಯೇ ಅನ್ನೇ ತಸ್ಮಾತ್ ತಯೋರ್ದೇವಾರ್ಥತ್ವಾವಿಘಾತಾಯ ನೇಷ್ಟಿಯಾಜುಕಃ ಇಷ್ಟಿಯಜನಶೀಲಃ। ಇಷ್ಟಿಶಬ್ದೇನ ಕಿಲ ಕಾಮ್ಯಾ ಇಷ್ಟಯಃ। ಶಾತಪಥೀ ಇಯಂ ಪ್ರಸಿದ್ಧಿಃ। ತಾಚ್ಛೀಲ್ಯಪ್ರತ್ಯಯಪ್ರಯೋಗಾತ್ ಕಾಮ್ಯೇಷ್ಟಿಯಜನಪ್ರಧಾನೋ ನ ಸ್ಯಾತ್ ಇತ್ಯರ್ಥಃ ॥

(ಭಾಷ್ಯಾರ್ಥ)

'ಎರಡನ್ನು ದೇವತೆಗಳಿಗಾಗಿ ವಿಭಾಗಿಸಿಕೊಟ್ಟನು' ಎಂಬುದು ಮಂತ್ರಪದವು. ಎರಡು ಅನ್ನಗಳನ್ನು ಸೃಷ್ಟಿಸಿ ದೇವತೆಗಳಿಗೆ ವಿಂಗಡಿಸಿಕೊಟ್ಟ (ನೆಂದಿದೆ)ಯಲ್ಲ, ಆ ಎರಡು ಯಾವವು? ಎಂದರೆ (ಬ್ರಾಹ್ಮಣವು) ಹೇಳುತ್ತದೆ: ಹುತವೂ ಪ್ರಹುತವೂ (ಆ ಎರಡು). ಹುತವೆಂದರೆ ಅಗ್ನಿಯಲ್ಲಿ ಹೋಮ ಮಾಡುವದು; ಪ್ರಹುತವೆಂದರೆ ಹೋಮಮಾಡಿದ ಬಳಿಕ (ಮಾಡುವ) ಬಲಿಹರಣವು. ತಂದೆಯು ಈ ಹುತ, ಪ್ರಹುತ- ಎಂಬ ಎರಡನ್ನಗಳನ್ನು ದೇವತೆಗಳಿಗೆ ವಿಭಾಗಿಸಿಕೊಟ್ಟನಷ್ಟೆ, ಆದ್ದರಿಂದ ಈಗಲೂ ಗೃಹಸ್ಥರು (ಸರಿಯಾದ) ಕಾಲದಲ್ಲಿ ದೇವತೆಗಳಿಗೆ ಹುತವನ್ನು ಮಾಡುತ್ತಾರೆ; ಈ ನಾವು ಕೊಡುತ್ತಿರುವ ಅನ್ನವು ದೇವತೆಗಳಿಗೆ ಎಂದು ಭಾವಿಸಿಕೊಂಡು ಹೋಮಮಾಡುತ್ತಾರೆ. ಪ್ರಹುತವನ್ನು ಮಾಡುತ್ತಾರೆ, ಹೋಮವನ್ನು ಮಾಡಿ ಬಲಿಹರಣವನ್ನು ಮಾಡುತ್ತಾರೆ ಎಂದರ್ಥ.

ಮತ್ತೆ ಕೆಲವರು ಹೇಳುವದೇನೆಂದರೆ ತಂದೆಯು ದೇವತೆಗಳಿಗೆ ಕೊಟ್ಟ ಎರಡು ಅನ್ನಗಳು ಅಂದರೆ ಹುತಪ್ರಹುತಗಳಲ್ಲ, ಮತ್ತೇನೆಂದರೆ ದರ್ಶಪೂರ್ಣಮಾಸಗಳು. ಎರಡೆಂದು ಹೇಳಿರುವದು ಸಮಾನವಾಗಿರುವದರಿಂದಲೂ ಅತ್ಯಂತ ಪ್ರಸಿದ್ಧವಾಗಿರುವದರಿಂದಲೂ ಹುತಪ್ರಹುತಗಳೇ (ಈ ಅನ್ನಗಳು) ಎಂದು ಮೊದಲನೆಯ ಪಕ್ಷ(ದವರ ಅಭಿಪ್ರಾಯ). ಹುತಪ್ರಹುತಗಳಲ್ಲಿ ದ್ವಿತ್ವವೇನೋ ಆಗುವಂತಿದೆ; ಆದರೂ ಶ್ರೌತವಾದ ದರ್ಶಪೂರ್ಣಮಾಸಗಳು

ದೇವಾನ್ನವೆಂಬುದು ಇನ್ನೂ ಪ್ರಸಿದ್ಧವಾಗಿರುತ್ತದೆ, ಏಕೆಂದರೆ ಮಂತ್ರಗಳಲ್ಲಿ ಹಾಗೆಂದು ಪ್ರಕಾಶಪಡಿಸಿರುತ್ತದೆ[1]. ಗೌಣಮುಖ್ಯಗಳೆರಡೂ ಪ್ರಾಪ್ತವಾದಾಗ ಮುಖ್ಯದಲ್ಲಿ ಪ್ರಥಮತರವಾಗಿ ಅರಿವಾಗುತ್ತದೆ; ದರ್ಶಪೂರ್ಣಮಾಸಗಳಲ್ಲಿ ಹುತಪ್ರಹುತಗಳಿಗಿಂತ ಮುಖ್ಯತ್ವವಿದೆ[2]. ಆದ್ದರಿಂದ ಅವುಗಳನ್ನೇ 'ಎರಡನ್ನು ದೇವತೆಗಳಿಗೆ ಭಾಗಿಸಿಕೊಟ್ಟನು' ಎಂಬ (ಮಂತ್ರದಲ್ಲಿ) ಗ್ರಹಿಸುವದು ಯುಕ್ತ.

ಹೀಗೆ ದರ್ಶಪೂರ್ಣಮಾಸಗಳೆಂಬ ಅನ್ನಗಳು ದೇವತೆಗಳಿಗೆಂದು ತಂದೆಯಿಂದ ಪ್ರಕಲ್ಪಿತವಾಗಿರುವವಷ್ಟೆ, ಆದ್ದರಿಂದ ಅವು ದೇವತೆಗಳಿಗಾಗಿಯೇ ಇರುವದು ತಪ್ಪದೆ ಇರುವದಕ್ಕಾಗಿ ಇಷ್ಟಿಯಾಜುಕ(ನಾಗಬಾರದು. ಇಷ್ಟಿಯಾಜುಕ)ನೆಂದರೆ ಇಷ್ಟಿಯಾಗವನ್ನು ಮಾಡುವ ಸ್ವಭಾವದವನು. ಇಷ್ಟಿಶಬ್ದದಿಂದ ಕಾಮ್ಯವಾದ ಇಷ್ಟಿಗಳನ್ನೇ (ತೆಗೆದುಕೊಳ್ಳಬೇಕು). ಈ ಪ್ರಸಿದ್ಧಿಯು ಶತಪಥಕ್ಕೆ ಸೇರಿದ್ದು[3]. (ಉಕ ಎಂಬ) ತಾಚ್ಛೀಲ್ಯಪ್ರತ್ಯಯವನ್ನು ಪ್ರಯೋಗಿಸಿರುವದರಿಂದ ಕಾಮ್ಯೇಷ್ಟಿಗಳನ್ನು ಮಾಡುವದೇ ಮುಖ್ಯವಾದವನಾಗಬಾರದು ಎಂದರ್ಥ[4].

## ಪಶುಗಳಿಗೆ ಕೊಟ್ಟಿರುವ ಅನ್ನ

(ಭಾಷ್ಯ)

೨೦೬. ಪಶುಭ್ಯ ಏಕಂ ಪ್ರಾಯಚ್ಛತ್ ಇತಿ। ಯತ್ಪಶುಭ್ಯ ಏಕಂ ಪ್ರಾಯಚ್ಛತ್ ಪಿತಾ ಕಿಂ ಪುನಸ್ತದನ್ನಮ್? ತತ್ಪಯಃ। ಕಥಂ ಪುನರವಗಮ್ಯತೇ ಪಶವೋಽಸ್ಯ ಅನ್ನಸ್ಯ ಸ್ವಾಮಿನಃ ಇತಿ? ಅತ ಆಹ। ಪಯೋ ಹಿ ಅಗ್ರೇ ಪ್ರಥಮಂ ಯಸ್ಮಾತ್ ಮನುಷ್ಯಾಶ್ಚ ಪಶವಶ್ಚ ಪಯ ಏವ ಉಪಜೀವನ್ತಿ ಇತಿ। ಉಚಿತಂ ಹಿ ತೇಷಾಂ ತದನ್ನಮ್। ಅನ್ಯಥಾ ಕಥಂ ತದೇವ ಅಗ್ರೇ ನಿಯಮೇನ ಉಪಜೀವೇಯುಃ? ಕಥಮಗ್ರೇ ತದೇವ ಉಪಜೀವನ್ತೀತಿ? ಉಚ್ಯತೇ। ಮನುಷ್ಯಾಶ್ಚ ಪಶವಶ್ಚ ಯಸ್ಮಾತ್ ತೇನೈವ ಅನ್ನೇನ ವರ್ತನ್ತೇ

1. 'ಅಗ್ನಯೇ ಜುಷ್ಟಂ ನಿರ್ವಪಾಮಿ' ಮುಂತಾದ ಮಂತ್ರಗಳಲ್ಲಿ ದೇವತೆಗಳಿಗಾಗಿ ಅವನ್ನು ವಿನಿಯೋಗಿಸಿರುತ್ತದೆ ಎಂದರ್ಥ.

2. ದರ್ಶಪೂರ್ಣಮಾಸಗಳನ್ನು ಶ್ರುತಿಯಲ್ಲಿ ಹೇಳಿದೆ; ಹುತಪ್ರಹುತಗಳನ್ನು ಸಾಪೇಕ್ಷವಾದ ಸ್ಮೃತಿಯಲ್ಲಿ ಹೇಳಿದೆಯಾದ್ದರಿಂದ ಅವು ಗೌಣ. ಆ. ಗಿ.

3. ಶತ. ಬ್ರಾ. ೧-೩-೫-೧೦ ನ್ನು ನೋಡಿ.

4. ಕಾಮ್ಯೇಷ್ಟಿಗಳನ್ನೇ ಪ್ರಧಾನವಾಗಿ ಮಾಡುವ ಅಭ್ಯಾಸವಿರುವವನಾಗಬಾರದು ಎಂದರ್ಥವೇ ಹೊರತು ಅವುಗಳನ್ನು ಮಾಡಲೇಬಾರದು ಎಂದೇನೂ ಅಭಿಪ್ರಾಯವಿಲ್ಲ. ಮಾಡಲೇಬಾರದೆಂದರೆ "ಸ್ವರ್ಗಕಾಮನು ಯಾಗಮಾಡಬೇಕು" ಎಂದಿರುವ ಶ್ರುತಿಗೆ ವಿರುದ್ಧವಾಗುತ್ತದೆ.

ಅದ್ಯತ್ವೇಽಪಿ ಯಥಾ ಪಿತ್ರಾ ಆದೌ ವಿನಿಯೋಗಃ ಕೃತಃ। ತಸ್ಮಾತ್ ಕುಮಾರಂ ಬಾಲಂ ಜಾತಂ ಘೃತಂ ವಾ ತ್ರೈವರ್ಣಿಕಾಃ ಜಾತಕರ್ಮಣಿ ಜಾತರೂಪ ಸಂಯುಕ್ತಂ ಪ್ರತಿಲೇಹಯನ್ತಿ ಪ್ರಾಶಯನ್ತಿ, ಸ್ತನಂ ವಾ ಅನುಧಾಪಯನ್ತಿ ಪಶ್ಚಾತ್ ಪಾಯಯನ್ತಿ। ಯಥಾಸಂಭವಮ್ ಅನ್ಯೇಷಾಂ ಸ್ತನಮೇವ ಅಗ್ರೇ ಧಾಪಯನ್ತಿ ಮನುಷ್ಯೇಭ್ಯೋಽನ್ಯೇಷಾಂ ಪಶೂನಾಮ್। ಅಥ ವತ್ಸಂ ಜಾತ ಮಾಹುಃ ಕಿಯತ್ಪ್ರಮಾಣೋ ವತ್ಸಃ? ಇತ್ಯೇವಂ ಪೃಷ್ಟಾಃ ಸನ್ತೋಽತೃಣಾದಃ ಇತಿ। ನಾದ್ಯಾಪಿ ತೃಣಮತ್ತಿ ಅತೀವ ಬಾಲಃ ಪಯಸ್ಯೈವ ಅದ್ಯಾಪಿ ವರ್ತತೇ ಇತ್ಯರ್ಥಃ। ಯಚ್ಚ ಅಗ್ರೇ ಜಾತಕರ್ಮಾದೌ ಘೃತಮ್ ಉಪಜೀವನ್ತಿ ಯಚ್ಚ ಇತರೇ ಪಯ ಏವ, ತತ್ ಸರ್ವಥಾಪಿ ಪಯ ಏವ ಉಪಜೀವನ್ತಿ। ಘೃತಸ್ಯಾಪಿ ಪಯೋವಿಕಾರತ್ವಾತ್ ಪಯಸ್ತ್ವಮೇವ ॥

(ಭಾಷ್ಯಾರ್ಥ)

"ಪಶುಗಳಿಗೆ ಒಂದನ್ನು ಕೊಟ್ಟನು" ಎಂದು (ಮಂತ್ರವು). ಪಶುಗಳಿಗೆ ತಂದೆಯು ಒಂದನ್ನು ಕೊಟ್ಟನಲ್ಲ, ಆ ಅನ್ನವು ಯಾವದು? ಎಂದರೆ ಅದು ಹಾಲು. ಪಶುಗಳು ಈ ಅನ್ನಕ್ಕೆ ಒಡೆಯರು ಎಂದು ಹೇಗೆ ಗೊತ್ತು? ಎಂದರೆ ಇದಕ್ಕೆ (ಬ್ರಾಹ್ಮಣವು) ಹೇಳುತ್ತದೆ. ಏಕೆಂದರೆ ಮನುಷ್ಯರೂ ಪಶುಗಳೂ ಮೊದಲು ಹಾಲನ್ನೇ ಉಪಜೀವಿಸಿಕೊಂಡಿರುತ್ತವೆ. ಆದ್ದರಿಂದ ಆ ಅನ್ನವು ಅವುಗಳದ್ದು ಎಂಬುದು ಉಚಿತವು; ಹಾಗಲ್ಲದಿದ್ದರೆ ಮೊದಲು ಗೊತ್ತಾಗಿ ಅದನ್ನೇ ಏಕೆ ಉಪಜೀವಿಸಿಕೊಂಡಿರುತ್ತಿದ್ದವು?

ಮೊದಲು ಅದನ್ನೇ ಉಪಜೀವಿಸಿಕೊಂಡಿರುತ್ತವೆ ಎಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ. ಏಕೆಂದರೆ ಮನುಷ್ಯರೂ ಪಶುಗಳೂ ಅದೇ ಅನ್ನದಿಂದಲೇ ಈಗಲೂ- ಮೊದಲು ತಂದೆಯಿಂದ ಹೇಗೆ ವಿನಿಯೋಗವಾಯಿತೋ (ಹಾಗೆಯೇ) –ಇದ್ದುಕೊಂಡಿರುತ್ತವೆ. ಆದ್ದರಿಂದ ಹುಟ್ಟಿದ ಕುಮಾರನಿಗೆ ಮಗುವಿಗೆ ತ್ರೈವರ್ಣಿಕರು (ಮೊದಲು)[1] ಜಾತಕರ್ಮದಲ್ಲಿ ಚಿನ್ನದಿಂದ ಕೂಡಿದ ತುಪ್ಪವನ್ನಾದರೂ ನೆಕ್ಕಿಸುತ್ತಾರೆ, ಸ್ತನವನ್ನಾದರೂ ಅನುಧಾಪನಮಾಡಿಸುತ್ತಾರೆ, ಬಳಿಕ ಕುಡಿಸುತ್ತಾರೆ. ಮಿಕ್ಕವರಲ್ಲಿ ಯಥಾಸಂಭವವಾಗಿ (ಮಾಡುತ್ತಾರೆ)[2]. ಮನುಷ್ಯರಿಗಿಂತ ಬೇರೆಯಾಗಿರುವ ಪಶುಗಳಿಗೆ ಮೊದಲು ಸ್ತನವನ್ನೇ

1. ಇಲ್ಲಿ ಮೂಲಭಾಷ್ಯದಲ್ಲಿ 'ಅಗ್ರೇ' ಎಂಬ ಮಾತು ಬಿಟ್ಟುಹೋಗಿದೆ ಎಂದು ತೋರುತ್ತದೆ.

2. ತ್ರೈವರ್ಣಿಕರಲ್ಲದವರು ತುಪ್ಪವನ್ನೋ ಸ್ತನವನ್ನೋ ಯಥಾಸಂಭವವಾಗಿ ಉಪಯೋಗಿಸುತ್ತಾರೆ. ತ್ರೈವರ್ಣಿಕರು ಜಾತಕರ್ಮದಲ್ಲಿ ತುಪ್ಪವನ್ನು, ಅದಿಲ್ಲದಿದ್ದರೆ ಅಥವಾ ಅದನ್ನು ಕುಡಿಸಿದ ಬಳಿಕ ಸ್ತನ್ಯವನ್ನು ಉಪಯೋಗಿಸುತ್ತಾರೆ.

ಕುಡಿಸುತ್ತಾರೆ. ಇನ್ನು ಹುಟ್ಟಿದ ಕರುವನ್ನು ಎಷ್ಟು (ವಯಸ್ಸಿನ) ಪ್ರಮಾಣದ್ದು? ಎಂದು ಕೇಳಿದರೆ 'ಅತೃಣಾದ' ಎನ್ನುವರು. ಇನ್ನೂ ಹುಲ್ಲನ್ನು ತಿನ್ನುತ್ತಿಲ್ಲ, ಬಹಳ ಚಿಕ್ಕದು, ಈಗಲೂ ಹಾಲಿನಲ್ಲಿಯೇ ಇದ್ದುಕೊಂಡಿದೆ ಎಂದರ್ಥ. ಮೊದಲು (ಮನುಷ್ಯರು) ಜಾತಕರ್ಮಾದಿಗಳಲ್ಲಿ ತುಪ್ಪವನ್ನೇ ಉಪಜೀವಿಸಿಕೊಂಡಿರುತ್ತಾರಲ್ಲ, ಉಳಿದ (ಪಶುಗಳು) ಹಾಲನ್ನೇ (ಉಪಜೀವಿಸಿಕೊಂಡಿರುತ್ತವೆ)ಯಲ್ಲ, ಹೇಗಾದರೂ ಅದು ಹಾಲನ್ನೇ ಉಪಜೀವಿಸಿಕೊಂಡಿದ್ದಂತೆ ; ತುಪ್ಪವೂ ಹಾಲಿನ ವಿಕಾರವೇ ಆದ್ದರಿಂದ (ಅದೂ) ಹಾಲೇ[1].

## ಏಳನೆಯ ಅನ್ನವನ್ನು ನಾಲ್ಕನೆಯದಾಗಿ ತಿಳಿಸಿದ್ದೇಕೆ ?

(ಭಾಷ್ಯ)

೨೦೭. ಕಸ್ಮಾತ್ ಪುನಃ ಸಪ್ತಮಂ ಸತ್ ಪಶ್ವನ್ನಂ ಚತುರ್ಥತ್ವೇನ ವ್ಯಾಖ್ಯಾಯತೇ ? ಕರ್ಮಸಾಧನತ್ವಾತ್ । ಕರ್ಮ ಹಿ ಪಯಃಸಾಧನಾಶ್ರಯಮ್ ಅಗ್ನಿಹೋತ್ರಾದಿ। ತಚ್ಚ ಕರ್ಮಸಾಧನಂ ವಿತ್ತಸಾಧ್ಯಂ ವಕ್ಷ್ಯಮಾಣಸ್ಯ ಅನ್ನತ್ರಯಸ್ಯ ಸಾಧ್ಯಸ್ಯ। ಯಥಾ ದರ್ಶಪೂರ್ಣಮಾಸೌ ಪೂರ್ವೋಕ್ತೌ ಅನ್ನೇ। ಅತಃ ಕರ್ಮಪಕ್ಷತ್ವಾತ್ ಕರ್ಮಣಾ ಸಹ ಪಿಣ್ಡೀಕೃತ್ಯ ಉಪದೇಶಃ। ಸಾಧನತ್ವಾವಿಶೇಷಾತ್ ಅರ್ಥಸಂಬನ್ಧಾತ್ ಆನನ್ತರ್ಯಮ್ ಅಕಾರಣಮ್ ಇತಿ ಚ; ವ್ಯಾಖ್ಯಾನ[2]ಪ್ರತಿಪತ್ತಿಸೌಕರ್ಯಾಚ್ಚ। ಸುಖಂ ಹಿ ನೈರನ್ತರ್ಯೇಣ ವ್ಯಾಖ್ಯಾತುಂ ಶಕ್ಯನ್ತೇ ಅನ್ನಾನಿ, ವ್ಯಾಖ್ಯಾತಾನಿ ಚ ಸುಖಂ ಪ್ರತೀಯನ್ತೇ ॥

(ಭಾಷ್ಯಾರ್ಥ)

(ಪ್ರಶ್ನೆ) :- ಪಶ್ವನ್ನವು ಏಳನೆಯದಾದರೂ ನಾಲ್ಕನೆಯದಾಗಿ (ಅದನ್ನು ಬ್ರಾಹ್ಮಣದಲ್ಲಿ) ವ್ಯಾಖ್ಯಾನಮಾಡಿರುವದೇಕೆ ?

(ಉತ್ತರ) :- ಏಕೆಂದರೆ (ಅದು) ಕರ್ಮಕ್ಕೆ ಸಾಧನವಾಗಿರುತ್ತದೆ. (ಇದರ ವಿವರ): ಅಗ್ನಿಹೋತ್ರವೇ ಮುಂತಾದ ಕರ್ಮವು ಹಾಲೆಂಬ ಸಾಧನವನ್ನು ಆಶ್ರಯಿಸಿ (ಆಗತಕ್ಕದ್ದು). ಆ ಕರ್ಮವು ವಿತ್ತಸಾಧ್ಯವಾಗಿದ್ದು ಮುಂದೆ ಹೇಳಲಿರುವ ಅನ್ನತ್ರಯವೆಂಬ ಸಾಧ್ಯಕ್ಕೆ ಸಾಧನ(ವಾಗಿರುತ್ತದೆ) ; ಹಿಂದೆ ಹೇಳಿದ ದರ್ಶಪೂರ್ಣಮಾಸಗಳೆಂಬ ಅನ್ನಗಳು ಹೇಗೆ (ಆ ಅನ್ನತ್ರಯಕ್ಕೆ ಸಾಧನವೋ ಹಾಗೆಯೇ ಇದೂ ಸಾಧನವು). ಆದ್ದರಿಂದ (ಇದು) ಕರ್ಮಪಕ್ಷಕ್ಕೇ (ಸೇರಿದ್ದಾ)ದ್ದರಿಂದ (ಇದನ್ನು) ಕರ್ಮದೊಡನೆ ಒಟ್ಟುಗೂಡಿಸಿಯೇ ತಿಳಿಸಿರು

---

1. ಆದ್ದರಿಂದ ಹಾಲು ಪಶ್ವನ್ನವೆಂದದ್ದು ಯುಕ್ತವಾಯಿತು ಎಂದರ್ಥ.
2. ವ್ಯಾಖ್ಯಾನೇ ಎಂಬ ಪಾಠಕ್ಕಿಂತ ಇದೇ ಮೇಲು.

ತ್ತದೆ. ಇದೂ (ಅವುಗಳಂತೆ) ಸಾಧನವೇ ಆಗಿರುವದರಿಂದ (ಎರಡಕ್ಕೂ) ಅರ್ಥಸಂಬಂಧವಿದೆ ; (ಬರಿಯ ಪಾಠಕ್ರಮದ) ಆನಂತರ್ಯವು ಕಾರಣವಲ್ಲ[1]. ವ್ಯಾಖ್ಯಾನಮಾಡುವದಕ್ಕೂ ತಿಳಿದುಕೊಳ್ಳುವದಕ್ಕೂ ಸುಲಭವಾಗಿರುವದರಿಂದಲೂ (ಹೀಗೆ ವ್ಯಾಖ್ಯಾನಮಾಡಿರುತ್ತದೆ). ಈ ಅನ್ನಗಳನ್ನು (ಹೀಗೆ) ಒಂದಾಗುತ್ತಲೊಂದನ್ನು ಸುಲಭವಾಗಿ ವ್ಯಾಖ್ಯಾನಮಾಡಬಹುದು, (ಹೀಗೆ) ವ್ಯಾಖ್ಯಾನಮಾಡಿದರೆ ಸುಲಭವಾಗಿ ಅರಿತುಕೊಳ್ಳಲೂಬಹುದು. ಅಲ್ಲವೆ ?

## ಹಾಲಿನ ಮಹಿಮೆ

(ಭಾಷ್ಯ)

೨೦೮. 'ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ' ಇತ್ಯಸ್ಯ ಕೋಽರ್ಥ ಇತಿ ? ಉಚ್ಯತೇ। ತಸ್ಮಿನ್ ಪಶ್ವನ್ನೇ ಪಯಸಿ ಸರ್ವಮ್ ಅಧ್ಯಾತ್ಮಾಧಿಭೂತಾಧಿದೈವಂ ಲಕ್ಷಣಂ ಕೃತ್ಸ್ನಂ ಜಗತ್ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಪ್ರಾಣಚೇಷ್ಟಾವತ್ ಯಚ್ಚ ನ ಸ್ಥಾವರಂ ಶೈಲಾದಿ। ತತ್ರ ಹಿಶಬ್ದೋ ನೈವ ಪ್ರಸಿದ್ಧಾವದ್ಯೋತಕೇನ ವ್ಯಾಖ್ಯಾತಮ್। ಕಥಂ ಪಯೋದ್ರವ್ಯಸ್ಯ ಸರ್ವಪ್ರತಿಷ್ಠಾತ್ವಮ್ ? ಕಾರಣತ್ವಂ ಚ ಅಗ್ನಿಹೋತ್ರಾದಿಕರ್ಮಸಮವಾಯಿತ್ವಮ್ ಅಗ್ನಿಹೋತ್ರಾದ್ಯಾಹುತಿಪರಿಣಾಮಾತ್ಮಕಂ ಚ ಜಗತ್ ಕೃತ್ಸ್ನಮ್ ಇತಿ ಶ್ರುತಿಸ್ಮೃತಿವಾದಾಃ ಶತಶೋ ವ್ಯವಸ್ಥಿತಾಃ ಅತೋ ಯುಕ್ತಮೇವ ಹಿಶಬ್ದೇನ ವ್ಯಾಖ್ಯಾನಮ್। ಯತ್ತದ್ ಬ್ರಾಹ್ಮಣಾನ್ತರೇಷು ಇದಮಾಹುಃ। ಸಂವತ್ಸರಂ ಪಯಸಾ ಜುಹ್ವತ್ ಅಪ ಪುನರ್ಮೃತ್ಯುಂ ಜಯತಿ ಇತಿ। ಸಂವತ್ಸರೇಣ ಕಿಲ ತ್ರೀಣಿ ಷಷ್ಟಿಶತಾನಿ ಆಹುತೀನಾಂ ಸಪ್ತ ಚ ಶತಾನಿ ವಿಂಶತಿಶ್ಚೇತಿ ಯಾಜುಷ್ಮತೀಃ ಇಷ್ಟಕಾ ಅಭಿಸಂಪದ್ಯಮಾನಾಃ ಸಂವತ್ಸರಸ್ಯ ಚ ಅಹೋರಾತ್ರಾಣಿ। ಸಂವತ್ಸರಮ್ ಅಗ್ನಿಂ ಪ್ರಜಾಪತಿಮ್ ಆಪ್ನುವನ್ತಿ। ಏವಂ ಕೃತ್ವಾ ಸಂವತ್ಸರಂ ಜುಹ್ವತ್ ಅಪಜಯತಿ ಪುನರ್ಮೃತ್ಯುಮ್ ಇತಃ ಪ್ರೇತ್ಯ ದೇವೇಷು ಸಂಭೂತಃ ಪುನರ್ನ ಮ್ರಿಯತೇ ಇತ್ಯರ್ಥಃ। ಇತ್ಯೇವಂ ಬ್ರಾಹ್ಮಣವಾದಾ ಆಹುಃ। ನ ತಥಾ ವಿದ್ಯಾತ್ ನ, ತಥಾ ದ್ರಷ್ಟವ್ಯಮ್। ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮ್ ಅಪಜಯತಿ ನ ಸಂವತ್ಸರಾಭ್ಯಾಸಮ್ ಅಪೇಕ್ಷತೇ ಏವಂ ವಿದ್ವಾನ್ ಸನ್। ಯದುಕ್ತಂ ಪಯಸಿ ಹೀದಂ ಸರ್ವಂ ಪ್ರತಿಷ್ಠಿತಂ ಪಯಆಹುತಿವಿಪರಿಣಾಮಾತ್ಮಕತ್ವಾತ್ ಸರ್ವಸ್ಯೇತಿ। ತತ್ ಏಕೇನೈವಾಹ್ನಾ ಜಗ

---

1. ಪಾಠಕ್ರಮವನ್ನೇ ಮುಖ್ಯವೆಂದೆಣಿಸಿ ವ್ಯಾಖ್ಯಾನಮಾಡಬೇಕೆಂಬ ನಿಯಮವಿಲ್ಲ ಎಂದರ್ಥ. ಪಾಠಕ್ರಮಕ್ಕಿಂತ ಅರ್ಥಕ್ರಮವೇ ಪ್ರಬಲವೆಂಬುದನ್ನು ಮೀಮಾಂಸಕರು ನಿರ್ಣಯಿಸಿರುತ್ತಾರೆ.

ದಾತ್ಮತ್ವಂ ಪ್ರತಿಪದ್ಯತೇ। ತದುಚ್ಯತೇ ಅಪಜಯತಿ ಪುನರ್ಮೃತ್ಯುಂ ಪುನರ್ಮರಣಂ ಸಕೃತ್ ಮೃತ್ವಾ ವಿದ್ವಾನ್ ಶರೀರೇಣ ವಿಯುಜ್ಯ ಸರ್ವಾತ್ಮಾ ಭವತಿ ನ ಪುನರ್ಮರಣಾಯ ಪರಿಚ್ಛಿನ್ನಂ ಶರೀರಂ ಗೃಹ್ಣಾತಿ ಇತ್ಯರ್ಥಃ। ಕಃ ಪುನರ್ಹೇತುಃ ಸರ್ವಾತ್ಮಾಪ್ತ್ಯಾ ಮೃತ್ಯುಮ್ ಅಪಜಯತೀತಿ? ಉಚ್ಯತೇ। ಸರ್ವಂ ಸಮಸ್ತಂ ಹಿ ಯಸ್ಮಾತ್ ದೇವೇಭ್ಯಃ ಸರ್ವೇಭ್ಯಃ ಅನ್ನಾದ್ಯಮ್ ಅನ್ನಮೇವ ತತ್ ಆದ್ಯಂ ಚ ಸಾಯಂ ಪ್ರಾತರಾಹುತಿಪ್ರಕ್ಷೇಪೇಣ ಪ್ರಯಚ್ಛತಿ। ತದ್ಯುಕ್ತಂ ಸರ್ವಮಾಹುತಿಮ್ ಅಯಮ್ ಆತ್ಮಾನಂ ಕೃತ್ವಾ ಸರ್ವದೇವಾನ್ನರೂಪೇಣ ಸರ್ವೈರ್ದೇವೈಃ ಏಕಾತ್ಮಭಾವಂ ಗತ್ವಾ ಸರ್ವದೇವಮಯೋ ಭೂತ್ವಾ ಪುನರ್ನ ಮ್ರಿಯತೇ ಇತಿ। ಅಥ ಏತದಪ್ಯುಕ್ತಂ ಬ್ರಾಹ್ಮಣೇನ। "ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ। ತದೈಕ್ಷತ ನ ವೈ ತಪಸ್ಯಾನನ್ತ್ಯಮಸ್ತಿ ಹನ್ತಾಹಂ ಭೂತೇಷ್ವಾತ್ಮಾನಂ ಹುತ್ವಾ ಭೂತಾನಿ ಚಾತ್ಮನಿ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತ್" (ಶತ. ಬ್ರಾ. ೧೩-೭-೧-೧) ಇತಿ॥

(ಭಾಷ್ಯಾರ್ಥ)

"ಯಾವದು ಬದುಕಿದೆಯೋ ಯಾವದು ಇಲ್ಲವೋ ಅದೆಲ್ಲವೂ ಅದರಲ್ಲಿ ಪ್ರತಿಷ್ಠಿತವಾಗಿರುತ್ತದೆ" ಎಂಬ (ಮಂತ್ರಕ್ಕೆ) ಅರ್ಥವೇನು ? ಎಂದರೆ ಹೇಳುತ್ತೇವೆ. ಆ ಪಸ್ವನ್ನವಾದ ಹಾಲಿನಲ್ಲಿ ಎಲ್ಲವೂ ಅಧ್ಯಾತ್ಮ, ಅಧಿಭೂತ, ಅಧಿದೈವ- (ಈ) ರೂಪವಾಗಿರುವ ಜಗತ್ತೆಲ್ಲವೂ, ಯಾವದು ಬದುಕಿದೆಯೋ ಪ್ರಾಣವ್ಯಾಪಾರವನ್ನು ಮಾಡಿಕೊಂಡಿದೆಯೋ; ಯಾವದು ಇಲ್ಲವೋ ಎಂದರೆ ಯಾವದು ಸ್ಥಾವರವಾದ ಬೆಟ್ಟವೇ ಮುಂತಾದದ್ದೋ (ಅದೆಲ್ಲವೂ) ಪ್ರತಿಷ್ಠಿತವಾಗಿರುತ್ತದೆ. ಇದನ್ನು ಪ್ರಸಿದ್ಧವಾದದ್ದನ್ನು ತಿಳಿಸುವ ಹಿಶಬ್ದದಿಂದಲೇ (ಬ್ರಾಹ್ಮಣವು) ವ್ಯಾಖ್ಯಾನಮಾಡಿರುತ್ತದೆ[1].

(ಪ್ರಶ್ನೆ) :- ಪಯೋದ್ರವ್ಯವು ಎಲ್ಲಕ್ಕೂ ಪ್ರತಿಷ್ಠೆ ಎಂಬುದು ಹೇಗೆ ?

(ಉತ್ತರ) :- ಏಕೆಂದರೆ ಅದು ಕಾರಣವಾಗಿರುತ್ತದೆ, ಕಾರಣವಾಗಿರುವದೆಂದರೆ ಅಗ್ನಿಹೋತ್ರಕರ್ಮಕ್ಕೆ ಸಂಬದ್ಧವಾಗಿರುವದು. ಅಗ್ನಿಹೋತ್ರಾದಿಗಳಲ್ಲಿ (ಕೊಡುವ) ಆಹುತಿಯ ಪರಿಣಾಮವೇ ಸರ್ವಜಗತ್ತು ಎಂದು ನೂರಾರು ಶ್ರುತಿಸ್ಮೃತಿವಾದಗಳಿರುತ್ತವೆ. ಆದ್ದರಿಂದ ಹಿಶಬ್ದದಿಂದ ವ್ಯಾಖ್ಯಾನಮಾಡಿದ್ದು ಸರಿಯೇ (ಆಗಿದೆ).

1. 'ಪಯಸಿ ಹೀದಗ್ಂ ಪ್ರತಿಷ್ಠಿತಮ್' ಎಂಬ ಬ್ರಾಹ್ಮಣದಲ್ಲಿರುವ ಹಿಶಬ್ದಕ್ಕೆ ಇದು ಅರ್ಥವೆಂದು ಅಭಿಪ್ರಾಯ.

ಸಂವತ್ಸರದವರೆಗೆ ಹಾಲಿನಿಂದ ಹೋಮಮಾಡಿದವನು ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ ಎಂದು ಬ್ರಾಹ್ಮಣಾಂತರಗಳಲ್ಲಿ ಇದನ್ನು ಹೇಳುತ್ತಾರಷ್ಟೆ- 'ಸಂವತ್ಸರದೊಳಗೆ ಮುನ್ನೂರು ಅರುವತ್ತು ಆಹುತಿಗಳು, ಏಳುನೂರು ಇಪ್ಪತ್ತು' ಆಗಿರುವದರಿಂದ ಯಾಜುಷ್ಮತಿ ಇಷ್ಟಕೆಗಳಾಗುವವು[1] ; ಸಂವತ್ಸರದ ಅಹೋರಾತ್ರಗಳು[2] ಅವು ಸಂವತ್ಸರ(ರೂಪಿ)ಯಾದ ಅಗ್ನಿಯನ್ನು, ಪ್ರಜಾಪತಿಯನ್ನು ಪಡೆಯುತ್ತವೆ' -ಹೀಗೆಂದು ಚಿಂತನೆಮಾಡಿ ಒಂದು ವರ್ಷದವರೆಗೂ ಹೋಮ ಮಾಡಿದರೆ ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ, ಇಲ್ಲಿಂದ (ಸತ್ತು) ಹೊರಟುಹೋದ ಬಳಿಕ ದೇವತೆಗಳಲ್ಲಿ ಹುಟ್ಟಿದವನಾಗಿ ಮತ್ತೆ ಸಾಯುವದಿಲ್ಲ ಎಂದರ್ಥ[3]. ಹೀಗೆಂದು ಬ್ರಾಹ್ಮಣವಾದಗಳು ಹೇಳುವವಷ್ಟೆ[4] -ಹೀಗೆ ಅರಿಯಬಾರದು, ಹಾಗೆ ಕಾಣಬಾರದು. ಯಾವ ದಿನದಲ್ಲಿ ಹೋಮಮಾಡುತ್ತಾನೋ ಆ ದಿನವೇ ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ, ಸಂವತ್ಸರದವರೆಗೆ (ಇದನ್ನು) ಅಭ್ಯಾಸಮಾಡುತ್ತಿರಬೇಕೆಂಬುದೇನೂ ಬೇಕಿಲ್ಲ. ಎಲ್ಲವೂ ಹಾಲಿನ ಆಹುತಿಯ ಪರಿಣಾಮಸ್ವರೂಪವೇ ಆಗಿರುವದರಿಂದ ಹಾಲಿನಲ್ಲಿ ಇದೆಲ್ಲವೂ ಪ್ರತಿಷ್ಠಿತವಾಗಿದೆ ಎಂದು ಹೇಳಿತ್ತಲ್ಲ ಅದನ್ನು, ಹೀಗೆಂದು ಅರಿತುಕೊಂಡವನಾದರೆ ಒಂದೇ ದಿನದಲ್ಲಿ ಜಗದಾತ್ಮತ್ವವನ್ನು[5] ಪಡೆದುಕೊಳ್ಳುತ್ತಾನೆ. ಇದನ್ನು (ಶ್ರುತಿಯು) ಪುನರ್ಮೃತ್ಯುವನ್ನು, ಪುನರ್ಮರಣವನ್ನು ಗೆದ್ದುಕೊಳ್ಳುತ್ತಾ

1. ಒಂದು ದಿನಕ್ಕೆ ಬೆಳಗ್ಗೆ ಎರಡು ಆಹುತಿ, ರಾತ್ರೆ ಎರಡು ಆಹುತಿ; ಹೀಗೆ ಪ್ರತ್ಯೇಕವಾಗಿ ಏಳನೂರು ಇಪ್ಪತ್ತಾಗುತ್ತವೆ.

2. ಅಹೋರಾತ್ರಗಳನ್ನು ಬೇರೆಬೇರೆಯಾಗಿ ಎಣಿಸಿದರೆ ಒಂದೊಂದರಲ್ಲಿಯೂ ಏಳನೂರು ಇಪ್ಪತ್ತರಂತೆ ಆಗುವ ಒಟ್ಟುಸಂಖ್ಯೆಯು ಇಷ್ಟಕೆಗಳ ಲೆಕ್ಕಕ್ಕೆ ಸರಿಯಾಗುತ್ತದೆ.

3. ಅಗ್ನಿಹೋತ್ರದ ಆಹುತಿಗಳನ್ನು ಯಾಜುಷ್ಮತೀ ಇಷ್ಟಕೆಗಳೆಂದು ಸಂಪಾದನೆ ಮಾಡಿ ಆ ರೂಪದಿಂದ ಆಹುತಿಗಳನ್ನು ಧ್ಯಾನಮಾಡುತ್ತಾ ಆಹುತಿಮಯ ಇಷ್ಟಕೆಗಳನ್ನು ಸಂವತ್ಸರದ ಅಹೋರಾತ್ರಗಳೆಂಬ ಅವಯವಗಳೆಂದು ಸಂಪಾದನೆಮಾಡಿ, ಪುರುಷನಾಡಿಗಳೂ ಇಷ್ಟೇ ಇರುವದರಿಂದ ಅವುಗಳನ್ನು ಅಹೋರಾತ್ರಗಳೆಂದು ಸಂಪಾದನೆಮಾಡಿ, ಅಹೋರಾತ್ರಗಳ ರೂಪದಿಂದ ಆಹುತಿಗಳನ್ನೂ ಇಷ್ಟಕೆಗಳನ್ನೂ ನಾಡಿಗಳನ್ನೂ ಅನುಸಂಧಾನಮಾಡುತ್ತಾ ಸಂವತ್ಸರದವರೆಗೂ ಹಾಲಿನಿಂದ ಅಗ್ನಿಹೋತ್ರಹೋಮವನ್ನು ಮಾಡುತ್ತಿದ್ದು ನಾಡಿಗಳು, ಅಹೋರಾತ್ರಗಳು, ಯಾಜುಷ್ಮತಿಗಳು -ಇವುಗಳ ಮೂಲಕ ಪುರುಷನೂ ಸಂವತ್ಸರವೂ ಅಗ್ನಿಯೂ ಸಮವೆಂಬ ಭಾವನೆಯಿಂದ ನಾನು ಅಗ್ನಿಯು ಸಂವತ್ಸರಾತ್ಮನಾದ ಪ್ರಜಾಪತಿಯೇ ಎಂಬ ಧ್ಯಾನದ ಬಲದಿಂದ ಸಂವತ್ಸರಾತ್ಮಕನಾದ ಪ್ರಜಾಪತಿಯನ್ನು ಪಡೆದುಕೊಳ್ಳುತ್ತಾನೆ, ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ ಎಂದರ್ಥ. ಆ. ಗಿ.

4. ಇಲ್ಲಿ ಹೇಳಿರುವ ಬ್ರಾಹ್ಮಣವು ಯಾವದೆಂಬುದು ತಿಳಿಯಲಿಲ್ಲ. ಐ. ಬ್ರಾ. ೨೫-೮-೨೮ರಲ್ಲಿ ಇದೇ ಅಭಿಪ್ರಾಯವಿದೆ. ಆದರೆ ಆನಂದಗಿರಿಗಳು ಹೇಳುವ ನಾಡಿಗಳ ಅಭಿಪ್ರಾಯವು ಅಲ್ಲಿಲ್ಲ ; ಅಲ್ಲಿ ಯಾಜುಷ್ಮತೀಃ ಎಂದಿಲ್ಲ, ಯಾಜುಷ್ಮತ್ಯಃ ಎಂದಿದೆ.

5. ಪ್ರಜಾಪತಿಯನ್ನು.

ನೆಂದು ಎಂದು ಹೇಳುತ್ತಿದೆ; ಒಂದು ಸಲ ಸತ್ತ ಬಳಿಕ ಉಪಾಸಕನು ಶರೀರದಿಂದ ವಿಯುಕ್ತನಾಗಿ ಸರ್ವಾತ್ಮನಾಗಿರುತ್ತಾನೆ, ಮತ್ತೆ ಸಾಯುವ (ಫಲದ) ಪರಿಚ್ಛಿನ್ನ ಶರೀರವನ್ನು ತೆಗೆದುಕೊಳ್ಳುವದಿಲ್ಲ ಎಂದರ್ಥ[1].

ಸರ್ವಾತ್ಮನನ್ನು ಪಡೆದುಕೊಂಡದ್ದರಿಂದ ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ ಎಂಬುದಕ್ಕೆ ಕಾರಣವೇನು ? (ಇದಕ್ಕೆ ಶ್ರುತಿ) ಹೇಳುತ್ತದೆ. (ಹಿ=ಯಸ್ಮಾತ್) ಏಕೆಂದರೆ ಸಂಜೆ, ಬೆಳಗ್ಗೆ ಆಹುತಿಗಳನ್ನು ಕೊಡುವದರಿಂದ (ಅವನು) ಎಲ್ಲಾ ದೇವತೆಗಳಿಗೂ ಅನ್ನಾದ್ಯವನ್ನು, ಅನ್ನವೂ ಆದ್ಯವೂ ಆಗಿರುವದನ್ನು ಸರ್ವವನ್ನೂ ಎಲ್ಲವನ್ನೂ ಕೊಟ್ಟವನಾಗುತ್ತಾನೆ. ಆದ್ದರಿಂದ ತನ್ನನ್ನು ಆಹುತಿ ಮಯನಾಗಿ ಸರ್ವವೂ ಆಗಿ ಮಾಡಿಕೊಂಡು ಸರ್ವದೇವತೆಗಳ ಅನ್ನರೂಪದಿಂದ ಸರ್ವದೇವತೆಗಳೊಡನೆ ಏಕಾತ್ಮಭಾವವನ್ನು ಹೊಂದಿ ಸರ್ವದೇವಮಯನಾದ (ಬಳಿಕ) ಮತ್ತೆ ಸಾಯುವದಿಲ್ಲ ಎಂಬುದು ಯುಕ್ತವು. ಇನ್ನು ಇದನ್ನು ಬ್ರಾಹ್ಮಣದಲ್ಲಿ (ಹೀಗೆಂದು) ಹೇಳಿರುತ್ತದೆ. "ಸ್ವಯಂಭುವಾದ ಬ್ರಹ್ಮವು[2] ತಪಸ್ಸನ್ನು ಮಾಡಿತು. ಅದು 'ತಪಸ್ಸಿನಲ್ಲಿ ಆನಂತ್ಯವಿಲ್ಲ[3]; ಒಳಿಯದು ನಾನು ಭೂತಗಳಲ್ಲಿ ನನ್ನನ್ನೂ ಭೂತಗಳನ್ನು ನನ್ನಲ್ಲಿಯೂ ಹೋಮಮಾಡಿಕೊಳ್ಳುವೆನು' ಎಂದು ಯೋಚಿಸಿಕೊಂಡಿತು. ಅದು ಸರ್ವಭೂತಗಳಲ್ಲಿ ತನ್ನನ್ನೂ ಸರ್ವಭೂತ ಗಳನ್ನು ತನ್ನಲ್ಲಿಯೂ ಹೋಮಮಾಡಿಕೊಂಡು ಸರ್ವಭೂತಗಳಲ್ಲಿ ಶ್ರೈಷ್ಠ್ಯ ವನ್ನು ಸ್ವಾರಾಜ್ಯವನ್ನು, ಆಧಿಪತ್ಯವನ್ನು ಪಡೆದುಕೊಂಡಿತು." (ಶತ. ಬ್ರಾ. ೧೩-೭-೧-೧).

## ಅನ್ನಗಳು ಕ್ಷಯವಾಗುವದಿಲ್ಲವೇಕೆ ?

(ಭಾಷ್ಯ)

೨೧೯. 'ಕಸ್ಮಾತ್ತಾನಿ ನ ಕ್ಷೀಯನ್ತೇಽದ್ಯಮಾನಾನಿ ಸರ್ವದಾ' ಇತಿ । ಯದಾ ಪಿತ್ರಾ ಅನ್ನಾನಿ ಸೃಷ್ಟ್ವಾ ಸಪ್ತ ಪೃಥಕ್ಪೃಥಗ್ಭೋಕ್ತೃಭ್ಯಃ ಪ್ರತ್ತಾನಿ ತದಾ ಪ್ರಭೃತ್ಯೇವ ತೈರ್ಭೋಕ್ತೃಭಿಃ ಅದ್ಯಮಾನಾನಿ । ತನ್ನಿಮಿತ್ತತ್ವಾತ್ ತೇಷಾಂ ಸ್ಥಿತೇಃ । ಸರ್ವದಾ ನೈರನ್ತರ್ಯೇಣ । ಕೃತಕಕ್ಷಯೋಪಪತ್ತೇಶ್ಚ ಯುಕ್ತಸ್ತೇಷಾಂ ಕ್ಷಯಃ । ನ ಚ ತಾನಿ ಕ್ಷೀಯಮಾಣಾನಿ । ಜಗತೋಽವಿ ಭ್ರಷ್ಟರೂಪೇಣೈವ ಅವಸ್ಥಾನದರ್ಶನಾತ್ । ಭವಿತವ್ಯಂ ಚ ಅಕ್ಷಯಕಾರಣೇನ ।

---

1. ಈ ಶರೀರವನ್ನು ಬಿಟ್ಟ ಬಳಿಕ ಸರ್ವದೇವಾತ್ಮಕನಾದ ಪ್ರಜಾಪತಿಯೇ ಆಗಿಬಿಡುವದರಿಂದ ಅಪರಿಚ್ಛಿನ್ನ ಶರೀರನಾದ ಅವನಿಗೆ ಮತ್ತೆ ಸಾವಿಲ್ಲ.
2. ಸ್ವಯಂಭುಬ್ರಹ್ಮವಾಗಲೆಳಸಿದ ಜೀವನು.
3. ಕರ್ಮಗಳ ಫಲವು ಕೊನೆಗಾಣಲೇಬೇಕು.

ತಸ್ಮಾತ್ ಕಸ್ಮಾತ್ ಪುನಸ್ತಾನಿ ನ ಕ್ಷೀಯನ್ತೇ ? ಇತಿ ಪ್ರಶ್ನಃ। ತಸ್ಯೇದಂ ಪ್ರತಿವಚನಮ್ । ಪುರುಷೋ ವಾ ಅಕ್ಷಿತಿಃ । ಯಥಾಸೌ ಪೂರ್ವಮನ್ನಾನಾಂ ಸ್ರಷ್ಟಾ ಆಸೀತ್ ಪಿತಾ ಮೇಧಯಾ ಜಾಯಾದಿಸಂಬದ್ಧೇನ[1] ಚ ಕರ್ಮಣಾ ಭೋಕ್ತಾ ಚ । ತಥಾ ಯೇಭ್ಯೋ ದತ್ತಾನ್ಯನ್ನಾನಿ ತೇಽಪಿ ತೇಷಾಮನ್ನಾನಾಂ ಭೋಕ್ತಾರೋಽಪಿ ಸನ್ತಃ ಪಿತರ ಏವ ಮೇಧಯಾ ತಪಸಾ ಚ ಯತೋ ಜನಯನ್ತಿ ತಾನ್ಯನ್ನಾನಿ। ತದೇತತ್ ಅಭಿಧೀಯತೇ ಪುರುಷೋ ವೈ ಯೋಽನ್ನಾನಾಂ ಭೋಕ್ತಾ ಸೋಽಕ್ಷಿತಿಃ ಅಕ್ಷಯಹೇತುಃ। ಕಥಮಸ್ಯ ಅಕ್ಷಿತಿತ್ವಮ್ ಇತಿ ? ಉಚ್ಯತೇ। ಸ ಹಿ ಯಸ್ಮಾತ್ ಇದಂ ಭುಜ್ಯಮಾನಂ ಸಪ್ತವಿಧಂ ಕಾರ್ಯಕರಣಲಕ್ಷಣಂ ಕ್ರಿಯಾಫಲಾತ್ಮಕಂ ಪುನಃ ಪುನಃ ಭೂಯೋ ಭೂಯಃ ಜನಯತೇ ಉತ್ಪಾದಯತಿ ಧಿಯಾ ಧಿಯಾ ತತ್ತತ್ಕಾಲಭಾವಿನ್ಯಾ ತಯಾ ತಯಾ ಪ್ರಜ್ಞಯಾ ಕರ್ಮಭಿಶ್ಚ ವಾಙ್ಮನಃಕಾಯಚೇಷ್ಟಿತೈಃ । ಯದ್ ಯದಿಹ ಯದೇತತ್[2] ಸಪ್ತವಿಧಮನ್ನಮುಕ್ತಂ ಕ್ಷಣಮಾತ್ರಮಪಿ ನ ಕುರ್ಯಾತ್ ಪ್ರಜ್ಞಯಾ ಕರ್ಮಭಿಶ್ಚ, ತತೋ ವಿಚ್ಛಿದ್ಯೇತ ಭುಜ್ಯಮಾನತ್ವಾತ್ ಸಾತತ್ಯೇನ ಕ್ಷೀಯೇತ ಹ। ತಸ್ಮಾತ್ ಯಥೈವಾಯಂ ಪುರುಷೋ ಭೋಕ್ತಾ ಅನ್ನಾನಾಂ ನೈರನ್ತರ್ಯೇಣ ಯಥಾ ಪ್ರಜ್ಞಂ ಯಥಾ ಕರ್ಮ ಚ ಕರೋತ್ಯಪಿ । ತಸ್ಮಾತ್ ಪುರುಷೋಽಕ್ಷಿತಿಃ । ಸಾತತ್ಯೇನ ಕರ್ತೃತ್ವಾತ್ । ತಸ್ಮಾತ್ ಭುಜ್ಯಮಾನಾನ್ಯಪಿ ಅನ್ನಾನಿ ನ ಕ್ಷೀಯನ್ತೇ ಇತ್ಯರ್ಥಃ॥

ಅತಃ ಪ್ರಜ್ಞಾಕ್ರಿಯಾಲಕ್ಷಣಪ್ರಬನ್ಧಾರೂಢಃ ಸರ್ವೋ ಲೋಕಃ ಸಾಧ್ಯಸಾಧನಲಕ್ಷಣಃ . ಕ್ರಿಯಾಫಲಾತ್ಮಕಃ ಸಂಹತಾನೇಕಪ್ರಾಣಿಕರ್ಮವಾಸನಾಸಂತಾನಾವಷ್ಟಬ್ಧತ್ವಾತ್ ಕ್ಷಣಿಕೋಽಸಾರೋ ನದೀಸ್ರೋತಃಪ್ರದೀಪಸಂತಾನಕಲ್ಪಃ ಕದಲೀಸ್ತಂಭವದಸಾರಃ ಫೇನಮಾಯಾಮರೀಚ್ಯಮ್ಭಃಸ್ವಪ್ನಾದಿಸಮಃ ತದಾತ್ಮಗತದೃಷ್ಟೀನಾಮ್ ಅವಿಕೀರ್ಯಮಾಣೋ ನಿತ್ಯಃ ಸಾರವಾನಿವ ಲಕ್ಷ್ಯತೇ । ತದೇತದ್ ವೈರಾಗ್ಯಾರ್ಥಮುಚ್ಯತೇ 'ಧಿಯಾ ಧಿಯಾ ಜನಯತೇ ಕರ್ಮಭಿರ್ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ' ಇತಿ । ವಿರಕ್ತಾನಾಂ ಹಿ ಅಸ್ಮಾತ್ ಬ್ರಹ್ಮವಿದ್ಯಾ ಆರಬ್ಧವ್ಯಾ ಚತುರ್ಥಪ್ರಮುಖೇಣ ಇತಿ ॥

(ಭಾಷ್ಯಾರ್ಥ)

"ಯಾವಾಗಲೂ ತಿನ್ನಲ್ಪಡುತ್ತಿದ್ದರೂ ಅವು ಏತಕ್ಕೆ ಕ್ಷಯವಾಗದೆ ಇವೆ ?" ಎಂದು (ಮಂತ್ರವು). ಯಾವಾಗ ತಂದೆಯು ಏಳು ಅನ್ನಗಳನ್ನು ಸೃಜಿಸಿ ಬೇರೆ ಬೇರೆಯ ಭೋಕ್ತೃಗಳಿಗೆ ಕೊಟ್ಟನೋ ಆಗಿನಿಂದಲೂ ಆ ಭೋಕ್ತೃಗಳಿಂದ

---

1. ಸಂಬನ್ಧೇನ ಎಂಬುದಕ್ಕಿಂತ ಈ ಪಾಠವು ಮೇಲು.
2. ಯದ್ಧೈತತ್ ಎಂಬುದಕ್ಕಿಂತ ಈ ಪಾಠವು ಮೇಲು.

ತಿನ್ನಲ್ಪಡುತ್ತಿವೆ; ಏಕೆಂದರೆ ಆ ಕಾರಣದಿಂದಲೇ ಅವು ಇದ್ದುಕೊಂಡಿರುವದು. ಯಾವಾಗಲೂ ಎಂದರೆ ಎಡೆಬಿಡದೆ (ತಿನ್ನಲ್ಪಡುತ್ತಿವೆ). ಮಾಡಿದ್ದು ಕ್ಷಯವಾಗುವದು ಯುಕ್ತವಾದ್ದರಿಂದಲೂ ಅವು ಕ್ಷಯವಾಗುವದು ಯುಕ್ತವಾಗಿರುತ್ತದೆ. ಆದರೂ ಅವು ಕ್ಷಯವಾಗುತ್ತಿಲ್ಲ; ಏಕೆಂದರೆ ಜಗತ್ತು (ತನ್ನ) ಸ್ವರೂಪವನ್ನು ಬಿಡದೆಯೇ ಇದ್ದುಕೊಂಡಿರುವದು ಕಂಡುಬರುತ್ತಿದೆ. (ಹೀಗೆ) ಕ್ಷಯವಾಗದಿರುವದಕ್ಕೆ ಕಾರಣವಿರಬೇಕು. ಆದ್ದರಿಂದ ಅವು ಏತರಿಂದ ಕ್ಷಯವಾಗದೆ ಇರುತ್ತವೆ? –ಎಂದು ಪ್ರಶ್ನೆ.

ಅದಕ್ಕೆ ಇದು ಉತ್ತರವು. (ಏಕೆಂದರೆ) ಪುರುಷನೇ ಅಕ್ಷಿತಿಯು. ಹೇಗೆ ಈ ತಂದೆಯು ಪೂರ್ವದಲ್ಲಿ ಮೇಧೆಯಿಂದಲೂ ಹೆಂಡತಿಯೇ ಮುಂತಾದವರ ಸಂಬಂಧವುಳ್ಳ ಪಾಙ್ಕ್ತಕರ್ಮದಿಂದಲೂ ಅನ್ನಗಳನ್ನು ಸೃಜಿಸುವವನಾಗಿದ್ದನೋ ಭೋಕ್ತೃವೂ ಆಗಿದ್ದನೋ ಹಾಗೆಯೇ ಅನ್ನಗಳನ್ನು ಯಾರಿಗೆ ಕೊಟ್ಟನೋ ಅವರು ಆ ಅನ್ನಗಳನ್ನು ತಿನ್ನುವವರಾಗಿದ್ದರೂ ತಂದೆಗಳೇ, ಏಕೆಂದರೆ ಮೇಧೆಯಿಂದಲೂ ತಪಸ್ಸಿನಿಂದಲೂ ಆ ಅನ್ನಗಳನ್ನು ಉಂಟುಮಾಡುತ್ತಲೇ ಇರುತ್ತಾರೆ. ಅದನ್ನೇ (ಶ್ರುತಿಯು) ಹೇಳುತ್ತಿದೆ: ಅನ್ನಗಳ ಭೋಕ್ತೃವಾಗಿರುವನಲ್ಲ, (ಆ) ಪುರುಷನೇ ಅಕ್ಷಿತಿಯು, ಅಕ್ಷಯ(ವಾಗಿರುವದಕ್ಕೆ) ಹೇತು. ಅವನು ಅಕ್ಷಿತಿ ಎಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ. (ಹಿ= ಯಸ್ಮಾತ್) ಏಕೆಂದರೆ ಈ ತಿನ್ನಲ್ಪಡುತ್ತಿರುವ ಕಾರ್ಯಕರಣಲಕ್ಷಣವೂ ಕ್ರಿಯಾಫಲಲಕ್ಷಣವೂ ಆಗಿರುವ ಏಳು ವಿಧವಾದ (ಅನ್ನವನ್ನು)[1] ಮತ್ತೆಮತ್ತೆ ಮೇಲಿಂದಮೇಲೆ, ಧೀಯಿಂದ ಧೀಯಿಂದ ಆಯಾ ಕಾಲದಲ್ಲಾಗುವ ಆಯಾ ಪ್ರಜ್ಞೆಯಿಂದಲೂ ಕರ್ಮಗಳಿಂದಲೂ ಎಂದರೆ ವಾಙ್ಮನಃಕಾಯಗಳ ವ್ಯಾಪಾರದಿಂದಲೂ ಹುಟ್ಟಿಸುತ್ತಾನೆ ಉಂಟುಮಾಡುತ್ತಿರುತ್ತಾನೆ. ಈ ಹೇಳಿದ ಸಪ್ತವಿಧವಾದ ಅನ್ನವನ್ನು ಕ್ಷಣವಾದರೂ (ಅವನು) ಪ್ರಜ್ಞೆಯಿಂದಲೂ ಕರ್ಮಗಳಿಂದಲೂ ಮಾಡದೆ (ಯತ್= ಯದಿ) ಇದ್ದಿದ್ದರೆ, ಆಗ ಸತತವಾಗಿ ಭುಕ್ತವಾಗುತ್ತಿರುವದರಿಂದ ಕ್ಷಯವಾಗುತ್ತಿತ್ತು, ವಿಚ್ಛಿನ್ನವಾಗಿಬಿಡುತ್ತಿತ್ತು. ಆದ್ದರಿಂದ ಈ ಪುರುಷನು ಅನ್ನಗಳನ್ನು ಹೇಗೆ ತಿನ್ನುತ್ತಿದಾನೋ ಹಾಗೆಯೇ ನಿರಂತರವಾಗಿ (ಆಯಾ) ಪ್ರಜ್ಞೆಗೆ ತಕ್ಕಂತೆಯೂ (ಆಯಾ) ಕರ್ಮಕ್ಕೆ ತಕ್ಕಂತೆಯೂ ಮಾಡುತ್ತಲೂ ಇರುತ್ತಾನೆ. ಆದ್ದರಿಂದ (ಹೀಗೆ) ಸತತವಾಗಿ (ಉಂಟು)ಮಾಡುತ್ತಿರುವದರಿಂದ ಅಕ್ಷಿತಿಯು; ಆದ್ದರಿಂದ ಅನ್ನಗಳು ತಿನ್ನಲ್ಪಡುತ್ತಿದ್ದರೂ ಕ್ಷಯವಾಗುವದಿಲ್ಲ ಎಂದರ್ಥ.

**ಆದ್ದರಿಂದ ಪ್ರಜ್ಞೆ, ಕರ್ಮ–ಇವುಗಳ ರೂಪದ ಇವುಗಳ ಸಾಲನ್ನು ಏರಿರುವ ಸಾಧ್ಯಸಾಧನಲಕ್ಷಣವಾದ ಕ್ರಿಯಾಫಲಾತ್ಮಕವಾದ ಲೋಕ**

---

1. ಸಪ್ತಾನ್ನವೇ ಪ್ರಪಂಚವು ಎಂದು ಭಾವ

ವೆಲ್ಲವೂ ಸಂಹತವಾಗಿರುವ ಅನೇಕ ಪ್ರಾಣಿಗಳ ಕರ್ಮವಾಸನೆಗಳ ಸಂತಾನವನ್ನಾಶ್ರಯಿಸಿರುವದರಿಂದ ಕ್ಷಣಿಕವೂ ಅಶುದ್ಧವೂ ಅಸಾರವೂ ನದಿಯ ಪ್ರವಾಹದಂತೆಯೂ ಪ್ರದೀಪದ ಸಂತಾನದಂತೆಯೂ ಇರುವದಾಗಿ ಬಾಳೆಯ ಕಂಬದಂತೆ ಅಸಾರವೂ ನೊರೆ, ಮಾಯೆ, ಬಿಸಿಲುಕುದುರೆಯ ನೀರು, ಕನಸು- ಮುಂತಾದವುಗಳಿಗೆ ಸಮವಾಗಿದ್ದುಕೊಂಡು ಅದೇ ತಾವೆಂಬ ದೃಷ್ಟಿಯುಳ್ಳವರಿಗೆ ಯಾವ ವಿಕಾರವೂ ಇಲ್ಲದೆ ನಿತ್ಯವೂ ಸಾರವುಳ್ಳದ್ದೂ ಆಗಿ ತೋರುತ್ತಿರುವದು. (ಆದ್ದರಿಂದ) ಇದನ್ನು 'ಧೀಯಿಂದ ಧೀಯಿಂದಲೂ ಕರ್ಮಗಳಿಂದಲೂ ಹುಟ್ಟಿಸುತ್ತಿರುತ್ತಾನೆ, ಇದನ್ನು ಮಾಡದಿದ್ದರೆ ಕ್ಷಯವಾಗಿಬಿಡುತ್ತಿತ್ತು' -ಎಂದು ವೈರಾಗ್ಯಕ್ಕಾಗಿ ಹೇಳಿರುತ್ತದೆ. ಇದರಿಂದ ವಿರಕ್ತರಾದವರಿಗಲ್ಲವೆ, ನಾಲ್ಕನೆಯ (ಅಧ್ಯಾಯವೇ) ಮುಂತಾದ (ಗ್ರಂಥದಿಂದ) ಬ್ರಹ್ಮವಿದ್ಯೆಯನ್ನು ಆರಂಭಿಸಿರುವದು ?

## ಅನ್ನಯಾಥಾತ್ಮ್ಯಜ್ಞಾನಕ್ಕೆ ಫಲ

(ಭಾಷ್ಯ)

೨೧೦. 'ಯೋ ವೈತಾಮಕ್ಷಿತಿಂ ವೇದ' ಇತಿ ವಕ್ಷ್ಯಮಾಣಾನ್ಯಪಿ ತ್ರೀಣಿ ಅನ್ನಾನಿ ಅಸ್ಮಿನ್ನವಸರೇ ವ್ಯಾಖ್ಯಾತಾನ್ಯೇವ ಇತಿ ಕೃತ್ವಾ ತೇಷಾಂ ಯಾಥಾತ್ಮ್ಯವಿಜ್ಞಾನಫಲಮ್ ಉಪಸಂಹ್ರಿಯತೇ । ಯೋ ವಾ ಏತಾಮ್ ಅಕ್ಷಿತಿಮ್ ಅಕ್ಷಯಹೇತುಂ ಯಥೋಕ್ತಂ ವೇದ ಪುರುಷೋ ವಾ ಅಕ್ಷಿತಿಃ ಸ ಹೀದಮನ್ನಂ ಧಿಯಾ ಧಿಯಾ ಜನಯತೇ ಕರ್ಮಭಿರ್ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ ಇತಿ । ಸೋಽನ್ನಮತ್ತಿ ಪ್ರತೀಕೇನ ಇತಿ । ಅಸ್ಯಾರ್ಥ ಉಚ್ಯತೇ । ಮುಖಂ ಮುಖ್ಯತ್ವಂ ಪ್ರಾಧಾನ್ಯಮ್ ಇತ್ಯೇತತ್ । ಪ್ರಾಧಾನ್ಯೇನೈವ ಅನ್ನಾನಾಂ ಪಿತುಃ ಪುರುಷಸ್ಯ ಅಕ್ಷಿತಿತ್ವಂ ಯೋ ವೇದ ಸೋಽನ್ನಮತ್ತಿ ನಾನ್ನಂ ಪ್ರತಿ ಗುಣಭೂತಃ ಸನ್ ಯಥಾಽಜ್ಞಃ ನ ತಥಾ ವಿದ್ವಾನ್ ಅನ್ನಾನಾಮ್ ಆತ್ಮಭೂತಃ ಭೋಕ್ತೈವ ಭವತಿ ನ ಭೋಜ್ಯತಾಮ್ ಆಪದ್ಯತೇ । ಸ ದೇವಾನ್ ಅಪಿ ಗಚ್ಛತಿ ಸ ಊರ್ಜಮುಪಜೀವತಿ । ದೇವಾನಪಿ ಗಚ್ಛತಿ ದೇವಾತ್ಮಭಾವಂ ಪ್ರತಿಪದ್ಯತೇ । ಊರ್ಜಮ್ ಅಮೃತಂ ಚ ಉಪಜೀವತಿ ಇತಿ ಯದುಕ್ತಂ ಸಾ ಪ್ರಶಂಸಾ ನಾಪೂರ್ವಾರ್ಥೋಽನ್ಯೋಽಸ್ತಿ ॥

(ಭಾಷ್ಯಾರ್ಥ)

'ಯೋ ವೈತಾಮಕ್ಷಿತಿಂ ವೇದ' (ಎಂಬುದರ ಸಂಬಂಧವೇನೆಂದರೆ) : ಮುಂದೆ ಹೇಳುವ ಮೂರು ಅನ್ನಗಳನ್ನು ಈ ಸಂದರ್ಭದಲ್ಲಿ ವ್ಯಾಖ್ಯಾನಮಾಡಿ

ದಂತೆಯೇ ಆಯಿತೆಂದು ಇಟ್ಟುಕೊಂಡು (ಅನ್ನಗಳ) ಯಾಥಾತ್ಮ್ಯವಿಜ್ಞಾನದ ಫಲವನ್ನು (ಶ್ರುತಿಯಿಂದ) ಉಪಸಂಹಾರಮಾಡುತ್ತದೆ.

ಯಾವನು ಈ ಅಕ್ಷಿತಿಯನ್ನು, ಮೇಲೆ ಹೇಳಿದ ಅಕ್ಷಯಹೇತುವನ್ನು–ಪುರುಷನೇ ಅಕ್ಷಿತಿಯು, ಅವನೇ ಅಲ್ಲವೆ, ಈ ಅನ್ನವನ್ನು ಧೀಯಿಂದ ಧೀಯಿಂದ ಹುಟ್ಟಿಸುತ್ತಾನೆ? ಇದನ್ನು ಮಾಡದೆ ಇದ್ದರೆ ಕ್ಷಯವಾಗುತ್ತಿತ್ತು ಎಂದು ತಿಳಿದು ಕೊಳ್ಳುತ್ತಾನೋ 'ಅವನು ಅನ್ನವನ್ನು ಪ್ರತೀಕದಿಂದ ತಿನ್ನುತ್ತಾನೆ' ಎಂಬ (ಮಂತ್ರಭಾಗ)ದ ಅರ್ಥವನ್ನು (ಬ್ರಾಹ್ಮಣವು) ತಿಳಿಸುತ್ತದೆ. ಮುಖವು ಎಂದರೆ ಮುಖ್ಯತ್ವವು. ಪ್ರಾಧಾನ್ಯವು ಎಂದು ಅಭಿಪ್ರಾಯ. ಅನ್ನಗಳ ತಂದೆಯಾದ ಪುರುಷನು ಅಕ್ಷಿತಿಯು ಎಂದು ಯಾವನು ಅರಿತುಕೊಳ್ಳುತ್ತಾನೋ ಅವನು ಪ್ರಾಧಾನ್ಯದಿಂದಲೇ ಅನ್ನವನ್ನು ತಿನ್ನುತ್ತಾನೆ. ಅನ್ನಕ್ಕೆ ಗುಣಭೂತನಾಗಿ (ತಿನ್ನು)ವದಿಲ್ಲ. ಅಜ್ಞನು ಹೇಗೆ (ಅಧೀನನಾಗಿ ತಿನ್ನುತ್ತಾನೋ) ಅನ್ನಗಳಿಗೆ ಆತ್ಮನೇ ಆಗಿರುವ ಜ್ಞಾನಿಯು ಹಾಗಲ್ಲ, (ಅವನು) ಭೋಕ್ತೃವೇ ಆಗಿರುತ್ತಾನೆಯೇ ಹೊರತು ಭೋಜ್ಯತ್ವವನ್ನು ಹೊಂದುವದಿಲ್ಲ[1]. ಅವನು ದೇವತೆಗಳಲ್ಲಿ ಸೇರಿಹೋಗುತ್ತಾನೆ, ಅವನು ಊರ್ಜವನ್ನು ಉಪಜೀವಿಸುತ್ತಾನೆ; ದೇವತೆಗಳಲ್ಲಿ ಸೇರಿಹೋಗುತ್ತಾನೆ ಎಂದರೆ ದೇವಾತ್ಮಭಾವವನ್ನು ಹೊಂದುತ್ತಾನೆ, ಊರ್ಜವನ್ನು ಎಂದರೆ ಅಮೃತವನ್ನು[2] ಉಪಜೀವಿಸುತ್ತಾನೆ –ಎಂದು (ಮಂತ್ರದಲ್ಲಿ) ಹೇಳಿದೆಯಲ್ಲ, (ಅದು ಪ್ರಶಂಸೆಯು, (ಅದಕ್ಕೆ) ಮತ್ತೆ (ಯಾವ) ಅಪೂರ್ವವಾದ ಅರ್ಥವೂ ಇರುವದಿಲ್ಲ.

## ಮನೋವಾಕ್ಪ್ರಾಣರೂಪಾನ್ನಗಳು

(ಉಪನಿಷತ್ತು)

**ತ್ರೀಣ್ಯಾತ್ಮನೇಽಕುರುತೇತಿ ಮನೋ ವಾಚಂ ಪ್ರಾಣಂ ತಾನ್ಯಾತ್ಮನೇಽಕುರುತಾನ್ಯತ್ರಮನಾ ಅಭೂವಂ ನಾದರ್ಶಮನ್ಯತ್ರಮನಾ ಅಭೂವಂ ನಾಶ್ರೌಷಮಿತಿ ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ। ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ ತಸ್ಮಾದಪಿ ಪೃಷ್ಠತ ಉಪಸ್ಪೃಷ್ಟೋ ಮನಸಾ ವಿಜಾನಾತಿ ಯಃ ಕಶ್ಚ ಶಬ್ದೋ ವಾಗೇವ ಸಾ। ಏಷಾ ಹ್ಯನ್ತಮಾಯ**

---

1. ಅನ್ನಗಳಿಗೆ ಆತ್ಮನೇ ಆಗಿರುವ ಉಪಾಸಕನನ್ನು ಅನ್ನಗಳು ತಿನ್ನಲಾರವು, ಅವು ಅವನಿಗೆ ಭೋಜ್ಯಗಳಾಗಿರುವವು.

2. ಊರ್ಜವು ಎಂದರೆ ಅನ್ನವು; ದೇವತೆಗಳ ಅನ್ನವು ಅಮೃತವು.

**ತ್ರ್ಯೇಷಾ ಹಿ ನ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನೋಽನ ಇತ್ಯೇತತ್ ಸರ್ವಂ ಪ್ರಾಣ ಏವೈತನ್ಮಯೋ ವಾ ಅಯಮಾತ್ಮಾ ವಾಙ್ಮಯೋ ಮನೋಮಯಃ ಪ್ರಾಣಮಯಃ ॥೩॥**

೩. 'ಮೂರನ್ನು ತನಗೆ ಮಾಡಿಕೊಂಡನು' ಎಂದು (ಮಂತ್ರವು. ಮೂರನ್ನು ಎಂದರೆ) ಮನಸ್ಸನ್ನು, ವಾಕ್ಕನ್ನು, ಪ್ರಾಣವನ್ನು. ಇವುಗಳನ್ನು ತನಗೆ ಮಾಡಿಕೊಂಡನು. 'ಮತ್ತೊಂದು ಕಡೆ ಮನಸ್ಸಿಟ್ಟವನಾಗಿದ್ದೆನು, ಕಾಣಲಿಲ್ಲ', 'ಮತ್ತೊಂದು ಕಡೆ ಮನಸ್ಸಿಟ್ಟವನಾಗಿದ್ದೆನು, ಕೇಳಲಿಲ್ಲ' (ಎನ್ನುವರು). ಮನಸ್ಸಿನಿಂದಲೇ ಅಲ್ಲವೆ, ಕಾಣುತ್ತಾನೆ, ಮನಸ್ಸಿನಿಂದ(ಲೇ ಅಲ್ಲವೆ), ಕೇಳುತ್ತಾನೆ? ಕಾಮ, ಸಂಕಲ್ಪ, ವಿಚಿಕಿತ್ಸೆ, ಶ್ರದ್ಧೆ, ಅಶ್ರದ್ಧೆ, ಧೃತಿ, ಅಧೃತಿ, ಹ್ರೀ, ಧೀ, ಭೀ- ಎಂಬಿವೆಲ್ಲವೂ ಮನಸ್ಸೇ. ಆದ್ದರಿಂದ ಹಿಂದಿನಿಂದ ಮುಟ್ಟಿದರೂ ಮನಸ್ಸಿನಿಂದ ಅರಿತುಕೊಳ್ಳುತ್ತಾನೆ. ಯಾವ ಶಬ್ದವೇ ಆಗಲಿ, ಅದು ವಾಕ್ಕೇ; ಏಕೆಂದರೆ ಇದು ಅಂತವನ್ನು ಮುಟ್ಟುತ್ತದೆ, ಇದು (ಮಾತ್ರ ಪ್ರಕಾಶ್ಯವಲ್ಲವೇ) ಅಲ್ಲ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಅನ- ಇವೆಲ್ಲವೂ ಪ್ರಾಣವೇ, ಈ ಆತ್ಮನು ಏತನ್ಮಯನು; ವಾಙ್ಮಯ, ಮನೋಮಯ, ಪ್ರಾಣಮಯ.

## ಕಂಡಿಕೆಯ ಸಂಬಂಧ

(ಭಾಷ್ಯ)

೨೧೧. **ಪಾಙ್ಕ್ತಸ್ಯ ಕರ್ಮಣಃ ಫಲಭೂತಾನಿ ಯಾನಿ ತ್ರೀಣಿ ಅನ್ನಾನಿ ಉಪಕ್ಷಿಪ್ತಾನಿ ತಾನಿ ಕಾರ್ಯತ್ವಾತ್ ವಿಸ್ತೀರ್ಣವಿಷಯತ್ವಾಚ್ಚ ಪೂರ್ವೇಭ್ಯೋಽನ್ನೇಭ್ಯಃ ಪೃಥಕ್ ಉತ್ಕೃಷ್ಟಾನಿ। ತೇಷಾಂ ವ್ಯಾಖ್ಯಾನಾರ್ಥಃ ಉತ್ತರೋ ಗ್ರನ್ಥಃ ಆಬ್ರಾಹ್ಮಣಪರಿಸಮಾಪ್ತೇಃ ॥**

(ಭಾಷ್ಯಾರ್ಥ)

**ಪಾಙ್ಕ್ತಕರ್ಮದ ಫಲವಾಗಿರುವ ಮೂರು ಅನ್ನಗಳನ್ನು (ಈ) ಮೊದಲು ಹೇಳಿತ್ತಷ್ಟೆ, ಅವು ಕಾರ್ಯವಾಗಿರುವದರಿಂದಲೂ ವಿಸ್ತಾರವಾದ ವಿಷಯವುಳ್ಳದಾಗಿರುವದರಿಂದಲೂ ಹಿಂದಿನ ಅನ್ನಗಳಿಗಿಂತ ಬೇರೆಯಾಗಿ ಬಿಡಿಸಿ (ಹೇಳಿತ್ತು). ಅವನ್ನು ವ್ಯಾಖ್ಯಾನಮಾಡುವದಕ್ಕೆ (ಈ) ಬ್ರಾಹ್ಮಣದ ಕೊನೆಯವರೆಗಿನ ಮುಂದಿನ ಗ್ರಂಥವು (ಹೊರಟಿರುತ್ತದೆ).**

# ಆಧ್ಯಾತ್ಮಿಕಮನಸ್ಸಿನ ವಿವರಣೆ

(ಭಾಷ್ಯ)

೨೧೨. ತ್ರೀಣಿ ಆತ್ಮನೇಽಕುರುತೇತಿ । ಕೋಽಸ್ಯಾರ್ಥ ಇತಿ? ಉಚ್ಯತೇ । ಮನೋವಾಕ್ಪ್ರಾಣಾ[1] ಏತಾನಿ ತ್ರೀಣಿ ಅನ್ನಾನಿ । ತಾನಿ ಮನೋ ವಾಚಂ ಪ್ರಾಣಂ ಚ ಆತ್ಮನಃ ಆತ್ಮಾರ್ಥಮ್ ಅಕುರುತ ಕೃತವಾನ್ ಸೃಷ್ಟ್ವಾ ಆದೌ ಪಿತಾ । ತೇಷಾಂ ಮನಸಃ ಅಸ್ತಿತ್ವಂ ಸ್ವರೂಪಂ ಚ ಪ್ರತಿ ಸಂಶಯಃ ಇತ್ಯತ ಆಹ– ಅಸ್ತಿ ತಾವತ್ ಮನಃ, ಶ್ರೋತ್ರಾದಿಬಾಹ್ಯಕರಣವ್ಯತಿರಿಕ್ತಮ್ । ಯತ ಏವಂ ಪ್ರಸಿದ್ಧಂ ಬಾಹ್ಯಕರಣವಿಷಯಾತ್ಮಸಂಬನ್ಧೇ ಸತ್ಯಪಿ ಅಭಿಮುಖೀಭೂತಂ ವಿಷಯಂ ನ ಗೃಹ್ಣಾತಿ । 'ಕಿಂ ದೃಷ್ಟವಾನಸಿ ಇದಂ ರೂಪಮ್?' ಇತ್ಯುಕ್ತೋ ವದತಿ 'ಅನ್ಯತ್ರ ಮೇ ಗತಂ ಮನ ಆಸೀತ್, ಸೋಽಹಮನ್ಯತ್ರಮನಾ ಆಸಮ್, ನಾದರ್ಶಮ್'! ತಥಾ 'ಇದಂ ಶ್ರುತವಾನಸಿ ಮದೀಯಂ ವಚಃ?' ಇತ್ಯುಕ್ತಃ 'ಅನ್ಯತ್ರಮನಾ ಅಭೂವಂ ನಾಶ್ರೌಷಮ್, ನ ಶ್ರುತವಾನಸ್ಮಿ' ಇತಿ । ತಸ್ಮಾತ್ ಯಸ್ಯ ಅಸಂನಿಧೌ ರೂಪಾದಿಗ್ರಹಣಸಮರ್ಥಸ್ಯಾಪಿ ಸತಶ್ಚಕ್ಷುರಾದೇಃ ಸ್ವಸ್ವವಿಷಯಸಂಬನ್ಧೇ ರೂಪಶಬ್ದಾದಿಜ್ಞಾನಂ ನ ಭವತಿ, ಯಸ್ಯ ಚ ಭಾವೇ ಭವತಿ ತದನ್ಯದಸ್ತಿ ಮನೋ ನಾಮ ಅನ್ತಃಕರಣಂ ಸರ್ವಕರಣವಿಷಯಯೋಗಿ ಇತ್ಯವಗಮ್ಯತೇ । ತಸ್ಮಾತ್ ಸರ್ವೋ ಹಿ ಲೋಕೋ ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ । ತದ್ವ್ಯಗ್ರತ್ವೇ ದರ್ಶನಾದ್ಯಭಾವಾತ್ । ಅಸ್ತಿತ್ವೇ ಸಿದ್ಧೇ ಮನಸಃ ಸ್ವರೂಪಾರ್ಥಮ್ ಇದಮುಚ್ಯತೇ । ಕಾಮಃ ಸ್ತ್ರೀವ್ಯತಿಕರಾಭಿಲಾಷಾದಿಃ । ಸಂಕಲ್ಪಃ ಪ್ರತ್ಯುಪಸ್ಥಿತವಿಷಯವಿಕಲ್ಪನಂ ಶುಕ್ಲನೀಲಾದಿಭೇದೇನ । ವಿಚಿಕಿತ್ಸಾ ಸಂಶಯಜ್ಞಾನಮ್ । ಶ್ರದ್ಧಾ ಅದೃಷ್ಟಾರ್ಥೇಷು ಕರ್ಮಸು ಆಸ್ತಿಕ್ಯಬುದ್ಧಿರ್ದೇವತಾದಿಷು ಚ । ಅಶ್ರದ್ಧಾ ತದ್ವಿಪರೀತಾ ಬುದ್ಧಿಃ । ಧೃತಿಃ ಧಾರಣಮ್ ದೇಹಾದ್ಯವಸಾದೇ ಉತ್ತಮ್ಭನಮ್ । ಅಧೃತಿಃ ತದ್ವಿಪರ್ಯಯಃ । ಹ್ರೀರ್ಲಜ್ಜಾ । ಧೀಃ ಪ್ರಜ್ಞಾ । ಭೀರ್ಭಯಮ್ । ಇತ್ಯೇತದೇವಮಾದಿಕಂ ಸರ್ವಂ ಮನ ಏವ, ಮನಸೋಽನ್ತಃಕರಣಸ್ಯ ರೂಪಾಣ್ಯೇತಾನಿ । ಮನೋಽಸ್ತಿತ್ವಂ ಪ್ರತಿ ಅನ್ಯಚ್ಚ ಕಾರಣಮ್ ಉಚ್ಯತೇ । ತಸ್ಮಾತ್ ಮನೋ ನಾಮ ಅಸ್ತಿ ಅನ್ತಃಕರಣಮ್ । ಯಸ್ಮಾತ್ ಚಕ್ಷುಷೋಽಹ್ಯಗೋಚರೇ ಪೃಷ್ಠತೋಽಪಿ ಉಪಸ್ಪೃಷ್ಟಃ ಕೇನಚಿತ್ ಹಸ್ತಸ್ಯಾಯಂ ಸ್ಪರ್ಶಃ, ಜಾನೋರಯಮ್ ಇತಿ ವಿವೇಕೇನ ಪ್ರತಿಪದ್ಯತೇ ಯದಿ ವಿವೇಕಕೃನ್ಮನೋ ನಾಮ ನಾಸ್ತಿ ತರ್ಹಿ ತ್ವಙ್ಮಾತ್ರೇಣ ಕುತೋ ವಿವೇಕಪ್ರತಿಪತ್ತಿಃ ಸ್ಯಾತ್? ಯತ್ ತದ್ವಿವೇಕಕಾರಣಮ್, ತನ್ಮನಃ ॥

1. "ಮನೋ ವಾಕ್ ಪ್ರಾಣಾಃ" ಎಂದು ವಾ॥ ಪಾಠ; ಅದು ಮುಂದಿರುವ ವಿವರಕ್ಕೆ ಹೊಂದುವಂತಿದೆ.

(ಭಾಷ್ಯಾರ್ಥ)

'ಮೂರನ್ನು ತನಗಾಗಿ ಮಾಡಿಕೊಂಡನು' ಎಂದು (ಮಂತ್ರವು), ಇದರ ಅರ್ಥವೇನು ? ಎಂದರೆ (ಬ್ರಾಹ್ಮಣವು) ಹೇಳುತ್ತದೆ. ಮನಸ್ಸು, ವಾಕ್ಕು, ಪ್ರಾಣ– ಇವೇ ಮೂರನ್ನಗಳು; ಅವುಗಳನ್ನು, ಮನಸ್ಸನ್ನು, ವಾಕ್ಕನ್ನು, ಪ್ರಾಣವನ್ನು ಮೊದಲು ತಂದೆಯು ಸೃಜಿಸಿ, ತನಗೆ ತನಗೋಸ್ಕರ ಮಾಡಿಕೊಂಡನು, ಮಾಡಿಕೊಂಡವನಾದನು.

ಇವುಗಳಲ್ಲಿ ಮನಸ್ಸಿನ ಇರವು ಮತ್ತು ಸ್ವರೂಪ– ಇವುಗಳ ವಿಷಯದಲ್ಲಿ ಸಂಶಯ(ವಿದೆ). ಆದ್ದರಿಂದ (ಬ್ರಾಹ್ಮಣವು ಹೀಗೆಂದು) ಹೇಳುತ್ತದೆ. ಮೊದಲನೆಯದಾಗಿ ಶ್ರೋತ್ರವೇ ಮುಂತಾದ ಹೊರಗಿನ ಕರಣಗಳಿಗಿಂತ ಬೇರೆಯಾಗಿ ಮನಸ್ಸು (ಎಂಬುದೂ) ಇದೆ. ಏಕೆಂದರೆ ಹೀಗೆ ಪ್ರಸಿದ್ಧವಾಗಿದೆ. ಹೊರಗಿನ ಕರಣ, ವಿಷಯ, ಆತ್ಮ– ಇವುಗಳ ಸಂಬಂಧನಾದರೂ ಎದುರಿಗಿರುವ ವಿಷಯುವನ್ನು ಗ್ರಹಿಸುವದಿಲ್ಲ. 'ಈ ರೂಪವನ್ನು ಕಂಡೆಯ ?' ಎಂದು ಕೇಳಿದರೆ 'ನನ್ನ ಮನಸ್ಸು ಬೇರೆ ಕಡೆ ಹೋಗಿತ್ತು, ಆ ನಾನು ಮತ್ತೊಂದು ಕಡೆಯಲ್ಲಿ ಮನಸ್ಸಿಟ್ಟವನಾಗಿದ್ದೆನು; ಆದ್ದರಿಂದ ಕಾಣಲಿಲ್ಲ' ಎನ್ನುವನು. ಹೀಗೆಯೇ 'ಈ ನನ್ನ ಮಾತನ್ನು ಕೇಳಿದೆಯ ?' ಎಂದು ಕೇಳಿದರೆ 'ಮತ್ತೊಂದು ಕಡೆ ಮನಸ್ಸಿಟ್ಟವನಾಗಿದ್ದೆನು, ಕೇಳಲಿಲ್ಲ, ಕೇಳಿದವನಾಗಲಿಲ್ಲ' (ಎನ್ನುವನು). ಆದ್ದರಿಂದ ಯಾವದು ಹತ್ತಿರವಿಲ್ಲದಿದ್ದರೆ ರೂಪಾದಿಗಳನ್ನು ಗ್ರಹಿಸಬಲ್ಲವನಾಗಿದ್ದರೂ ಕೂಡ ಚಕ್ಷುರಾದಿಗಳಿಗೆ ತಮ್ಮತಮ್ಮ ವಿಷಯದ ಸಂಬಂಧವು (ಆದರೂ) ರೂಪಶಬ್ದಾದಿಗಳ ಜ್ಞಾನವು ಆಗುವದಿಲ್ಲವೋ, ಯಾವದು ಇದ್ದರೆ ಆಗುವದೋ, ಆ ಮನಸ್ಸೆಂಬ ಸರ್ವಕರಣವಿಷಯಗಳ ಸಂಬಂಧವುಳ್ಳ ಅಂತಃಕರಣವು ಇದೆ ಎಂದು ಗೊತ್ತಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ಮನಸ್ಸಿನಿಂದಲೇ ಕಾಣುತ್ತಾನೆ, ಮನಸ್ಸಿನಿಂದಲೇ ಕೇಳುತ್ತಾನೆ; ಏಕೆಂದರೆ ಅದು ವ್ಯಗ್ರವಾಗಿದ್ದರೆ ಕಾಣುವದೇ ಮುಂತಾದದ್ದು ಆಗುವದಿಲ್ಲ.[1]

ಇದೆ ಎಂಬುದು ಸಿದ್ಧವಾದ ಬಳಿಕ ಮನಸ್ಸಿನ ಸ್ವರೂಪವನ್ನು (ತಿಳಿಸು)ವದಕ್ಕೆ ಇದನ್ನು ಹೇಳಲಾಗುತ್ತದೆ: ಕಾಮ, ಎಂದರೆ ಹೆಂಗಸಿನೊಡನೆ ಬೆರೆಯುವ ಅಭಿಲಾಷೆಯೇ ಮುಂತಾದದ್ದು; ಸಂಕಲ್ಪ, ಎಂದರೆ ಎದುರಿಗೆ ಕಾಣಿಸಿಕೊಂಡ ವಿಷಯುವನ್ನು ಬಿಳಿಯದು, ಕರಿಯದು –ಎಂದು ಮುಂತಾಗಿ ಬೇರೆಬೇರೆಯಾಗಿ ವಿಕಲ್ಪಿಸುವದು. ವಿಚಿಕಿತ್ಸೆ ಎಂದರೆ ಸಂಶಯಜ್ಞಾನವು; ಶ್ರದ್ಧೆ ಎಂದರೆ ಅದೃಷ್ಟ(ಫಲವನ್ನು) ಕೊಡುವದಕ್ಕಾಗಿ (ಮಾಡುವ) ಕರ್ಮಗಳಲ್ಲಿಯೂ ದೇವತಾದಿಗಳಲ್ಲಿಯೂ ಆಸ್ತಿಕ್ಯಬುದ್ಧಿ; ಅಶ್ರದ್ಧೆ ಎಂದರೆ ಅದಕ್ಕೆ ವಿಪರೀತವಾದ ಬುದ್ಧಿ; ಧೃತಿ ಎಂದರೆ ಧರಿಸುವದು, ದೇಹಾದಿಗಳು ಕುಸಿದಾಗ ಹಿಡಿದೆತ್ತು

1. ಇದರಿಂದ ಮನಸ್ಸಿನ ಕೆಲಸವನ್ನು ತಿಳಿಸಿದಂತೆಯೂ ಆಯಿತು.

ವದು; ಅಧೃತಿ ಎಂದರೆ ಅದಕ್ಕೆ ವಿಪರೀತವಾದದ್ದು; ಹ್ರೀ ಎಂದರೆ ನಾಚಿಕೆ; ಧೀ ಎಂದರೆ ಪ್ರಜ್ಞೆ; ಭೀ ಎಂದರೆ ಹೆದರಿಕೆ –ಇವೇ ಮುಂತಾದದ್ದೆಲ್ಲವೂ ಮನಸ್ಸೇ, ಮನಸ್ಸೆಂಬ ಅಂತಃಕರಣದ ರೂಪಗಳಿವು.[1]

ಮನಸ್ಸು ಇದೆ ಎಂಬುದಕ್ಕೆ ಇನ್ನೊಂದು ಕಾರಣವನ್ನೂ ಶ್ರುತಿ ಹೇಳುತ್ತಿದೆ. ಈ ಕಾರಣದಿಂದ(ಲೂ) ಮನಸ್ಸೆಂಬ ಅಂತಃಕರಣವು ಇದೆ (ಎಂದು ನಿಶ್ಚಯಿಸಬೇಕು); ಏಕೆಂದರೆ ಚಕ್ಷುರಿಂದ್ರಿಯಕ್ಕೆ ಗೋಚರವಲ್ಲದೆ (ಇರುವಾಗಲೂ) ಹಿಂದುಗಡೆಯಿಂದ ಯಾರಾದರೂ ತನ್ನನ್ನು ಮುಟ್ಟಿದರೂ ಈ ಸ್ಪರ್ಶವು ಕೈಯಿಂದಾದದ್ದು, ಇದು ಮೊಳಕಾಲಿನಿಂದಾದದ್ದು ಎಂದು ವಿವೇಚಿಸಿ (ಮನುಷ್ಯನು) ಅರಿತುಕೊಳ್ಳುತ್ತಾನೆ. (ಹೀಗೆ)ಅರಿಯುವುದಕ್ಕೆ ಮನಸ್ಸೆಂಬುದು ಇಲ್ಲವೇ ಇಲ್ಲವಾದರೆ, ಆಗ ಬರಿಯ ತ್ವಗಿಂದ್ರಿಯಮಾತ್ರದಿಂದ ವಿವೇಚಿಸಿ ಅರಿಯುವದು ಹೇಗಾದೀತು? ಆ ವಿವೇಚನಕಾರಣವಿದೆಯಲ್ಲ, ಅದೇ ಮನಸ್ಸು.

## ಆಧ್ಯಾತ್ಮಿಕವಾಕ್ಕಿನ ವಿವರಣೆ

(ಭಾಷ್ಯ)

೨೧೩. ಅಸ್ತಿ ತಾವನ್ಮನಃ। ಸ್ವರೂಪಂ ಚ ತಸ್ಯ ಅಧಿಗತಮ್। ತ್ರೀಣಿ ಅನ್ನಾನಿ ಇಹ ಫಲಭೂತಾನಿ ಕರ್ಮಣಾಂ ಮನೋವಾಕ್ಪ್ರಾಣಾಖ್ಯಾನಿ ಆಧ್ಯಾತ್ಮಮ್, ಅಧಿಭೂತಮ್, ಅಧಿದೈವಂ ಚ ವ್ಯಾಚಿಖ್ಯಾಸಿತಾನಿ। ತತ್ರ ಆಧ್ಯಾತ್ಮಿಕಾನಾಂ ವಾಙ್ಮನಃಪ್ರಾಣಾನಾಂ ಮನೋ ವ್ಯಾಖ್ಯಾತಮ್। ಅಥೇದಾನೀಂ ವಾಗ್ವಕ್ತವ್ಯಾ ಇತ್ಯಾರಭ್ಯತೇ। ಯಃ ಕಶ್ಚ ಲೋಕೇ ಶಬ್ದೋ ಧ್ವನಿಃ ತಾಲ್ವಾದಿವ್ಯಙ್ಗ್ಯಃ ಪ್ರಾಣಿಭಿರ್ವರ್ಣಾದಿಲಕ್ಷಣಃ, ಇತರೋ ವಾ ವಾದಿತ್ರಮೇಘಾದಿನಿಮಿತ್ತಃ ಸರ್ವೋ ಧ್ವನಿರ್ವಾಗೇವ ಸಾ। ಇದಂ ತಾವತ್ ವಾಚಃ ಸ್ವರೂಪಮುಕ್ತಮ್। ಅಥ ತಸ್ಯಾಃ ಕಾರ್ಯಮುಚ್ಯತೇ। ಏಷಾ ವಾಕ್ ಹಿ ಯಸ್ಮಾತ್ ಅನ್ತಮ್ ಅಭಿಧೇಯಾವಸಾನಮ್ ಅಭಿಧೇಯನಿರ್ಣಯಮ್ ಆಯತ್ತಾ ಅನುಗತಾ। ಏಷಾ ಪುನಃ ಸ್ವಯಂ ನ ಅಭಿಧೇಯವತ್ ಪ್ರಕಾಶ್ಯಾ। ಅಭಿಧೇಯಪ್ರಕಾಶಿಕೈವ। ಪ್ರಕಾಶಾತ್ಮಕತ್ವಾತ್ ಪ್ರದೀಪಾದಿವತ್। ನ ಹಿ ಪ್ರದೀಪಾದಿಪ್ರಕಾಶಃ ಪ್ರಕಾಶಾನ್ತರೇಣ ಪ್ರಕಾಶ್ಯತೇ। ತದ್ವತ್ ವಾಕ್ ಪ್ರಕಾಶಿಕೈವ ಸ್ವಯಂ ನ ಪ್ರಕಾಶ್ಯಾ ಇತ್ಯನವಸ್ಥಾಂ ಶ್ರುತಿಃ ಪರಿಹರತಿ 'ಏಷಾ ಹಿ ನ ಪ್ರಕಾಶ್ಯಾ'। ಪ್ರಕಾಶಕತ್ವಮೇವ ವಾಚಃ ಕಾರ್ಯಮ್ ಇತ್ಯರ್ಥಃ॥

(ಭಾಷ್ಯಾರ್ಥ)

ಮೊದಲನೆಯದಾಗಿ ಮನಸ್ಸು ಇದೆ (ಎಂದು ಗೊತ್ತಾಯಿತು). ಅದರ ಸ್ವರೂಪವನ್ನೂ ತಿಳಿದುಕೊಂಡದ್ದಾಯಿತು. ಕರ್ಮಗಳಿಗೆ ಫಲವಾಗಿರುವ

1. ಇಲ್ಲಿಯೂ ಮನಸ್ಸಿನ ಕೆಲಸವನ್ನು ವರ್ಣಿಸಿದಂತೆ ಆಯಿತು.

ಮನೋವಾಕ್ಪ್ರಾಣಗಳೆಂಬ ಮೂರು ಅನ್ನಗಳನ್ನು ಇಲ್ಲಿ ಅಧ್ಯಾತ್ಮವಾಗಿಯೂ ಅಧಿಭೂತವಾಗಿಯೂ ಅಧಿದೈವವಾಗಿಯೂ ವ್ಯಾಖ್ಯಾನಮಾಡಬೇಕೆಂದು ಹೊರಟಿರುತ್ತದೆ. ಇವುಗಳಲ್ಲಿ ಆಧ್ಯಾತ್ಮಿಕವಾದ ವಾಙ್ಮನಃಪ್ರಾಣಗಳೊಡನೆ ಮನಸ್ಸನ್ನು ವಿವರಿಸಿದ್ದಾಯಿತು. ಇನ್ನು ಈಗ ವಾಕ್ಕನ್ನು ಹೇಳಬೇಕು ಎಂದು (ಇದನ್ನು) ಆರಂಭಿಸಿರುತ್ತದೆ.

ಲೋಕದಲ್ಲಿ ಯಾವ ಶಬ್ದವೇ ಆಗಲಿ- ತಾಲ್ವಾದಿಗಳಲ್ಲಿ ಪ್ರಾಣಿಗಳು ವ್ಯಕ್ತಗೊಳಿಸುವ ವರ್ಣವೇ ಮುಂತಾದ[1] ಧ್ವನಿಯಾಗಲಿ, ಅಥವಾ ವಾದ್ಯ, ಮೇಘ ಮುಂತಾದ ನಿಮಿತ್ತಗಳಿಂದಾದ (ಧ್ವನಿಯಾಗಲಿ) ಎಲ್ಲಾ ಧ್ವನಿಯೂ- ಅದು ವಾಕ್ಕೇ. ಇದು ವಾಕ್ಕಿನ ಸ್ವರೂಪವನ್ನು ಹೇಳಿದ್ದು. ಇನ್ನು ಅದರ ಕಾರ್ಯವನ್ನು ಹೇಳಲಾಗುತ್ತದೆ. (ಹಿ= ಯಸ್ಮಾತ್) ಏಕೆಂದರೆ ಇದು, (ಈ) ವಾಕ್ಕು ಅಂತವನ್ನು ಅಭಿಧೇಯದ ಕೊನೆಯನ್ನು, ಅಭಿಧೇಯ(ವಸ್ತುವಿನ) ನಿರ್ಣಯಕ್ಕೆ ಅಧೀನವಾಗಿರುತ್ತದೆ, ಹಿಂಬಾಲಿಸುತ್ತದೆ.[2] ಆದರೆ ಇದು ಅಭಿಧೇಯದಂತೆ ಪ್ರಕಾಶ್ಯವಲ್ಲ, ಅಭಿಧೇಯವನ್ನು ಬೆಳಗಿ ತೋರತಕ್ಕದ್ದೇ. ಏಕೆಂದರೆ (ಅದು) ಪ್ರದೀಪವೇ ಮುಂತಾದವುಗಳಂತೆ ಪ್ರಕಾಶಸ್ವರೂಪವಾಗಿರುತ್ತದೆ. ಪ್ರದೀಪವೇ ಮುಂತಾದ ಬೆಳಕು ಮತ್ತೊಂದು ಬೆಳಕಿನಿಂದ ಬೆಳಗುವದಿಲ್ಲವಷ್ಟೆ. ಅದರಂತೆ ವಾಕ್ಕು ಪ್ರಕಾಶಕವೇ ಹೊರತು ತಾನೂ ಪ್ರಕಾಶ್ಯವಲ್ಲ ಎಂದು ಶ್ರುತಿಯು ಅನವಸ್ಥೆಯನ್ನು ಪರಿಹರಿಸಿರುತ್ತದೆ.[3] ಇದು ಪ್ರಕಾಶ್ಯವಲ್ಲವೇ ಅಲ್ಲ. ಪ್ರಕಾಶಕತ್ವವೇ ವಾಕ್ಕಿನ ಕಾರ್ಯವು ಎಂದರ್ಥ.[4]

## ಆಧ್ಯಾತ್ಮಿಕಪ್ರಾಣದ ವಿವರಣೆ

(ಭಾಷ್ಯ)

೨೧೪. ಅಥ ಪ್ರಾಣ ಉಚ್ಯತೇ। ಪ್ರಾಣೋ ಮುಖನಾಸಿಕಾಸಂಚಾರೀ ಹೃದಯವೃತ್ತಿಃ। ಪ್ರಣಯನಾತ್ ಪ್ರಾಣಃ। ಅಪನಯನಾತ್[5] ಮೂತ್ರಪುರೀಷಾದೇರಪಾನಃ, ಅಧೋವೃತ್ತಿಃ, ಆನಾಭಿಸ್ಥಾನಃ । ವ್ಯಾನಃ ವ್ಯಾಯಮನಕರ್ತಾ । ವ್ಯಾನಃ ಪ್ರಾಣಾಪಾನಯೋಃ ಸಂಧಿಃ, ವೀರ್ಯವತ್ಕರ್ಮ

1. ಶಬ್ದ, ವಾಕ್ಯ- ಮುಂತಾದದ್ದು.

2. ಅಭಿಧೇಯವನ್ನು ಗೊತ್ತುಪಡಿಸಿ ತಿಳಿಯಿಸುವದೇ ಇದರ ಕಾರ್ಯವು.

3. ವಾಕ್ಕು ಪ್ರಕಾಶ್ಯವಾದರೆ ಅದರ ಪ್ರಕಾಶವೂ ಪ್ರಕಾಶ್ಯವಾಗಿರುವದು. ಅದರ ಪ್ರಕಾಶವೂ ಪ್ರಕಾಶ್ಯವಾಗಿರುವದು -ಎಂದು ಅನವಸ್ಥೆ.

4. ವ್ಯವಹಾರದೃಷ್ಟಿಯಿಂದ ವಾಕ್ಕು ಪ್ರಕಾಶಕವೇ, ಪ್ರಕಾಶ್ಯವಲ್ಲ ಎಂದರ್ಥ.

5. 'ಅಪಾನಃ ಅಪನಯನಾತ್' ಎಂದೇ ಭಾಷ್ಯಕಾರರು ಬರೆದಿರಬಹುದೆಂದು ತೋರುತ್ತದೆ.

ಹೇತುಶ್ಚ। ಉದಾನಃ ಉತ್ಕರ್ಷೋರ್ಧ್ವಗಮನಾದಿಹೇತುಃ, ಆಪಾದತಲ ಮಸ್ತಕಸ್ಥಾನಃ, ಊರ್ಧ್ವವೃತ್ತಿಃ । ಸಮಾನಃ ಸಮಂ ನಯನಾತ್ ಭುಕ್ತಸ್ಯ ಪೀತಸ್ಯ ಚ ಕೋಷ್ಠಸ್ಥಾನೋಽನ್ನಪಕ್ತಾ। ಅನಃ ಇತ್ಯೇಷಾಂ ವೃತ್ತಿವಿಶೇಷಾಣಾಂ ಸಾಮಾನ್ಯಭೂತಾ ಸಾಮಾನ್ಯದೇಹಚೇಷ್ಟಾಭಿಸಂಬನ್ಧಿನೀ ವೃತ್ತಿಃ । ಏವಂ ಯಥೋಕ್ತಂ ಪ್ರಾಣಾದಿವೃತ್ತಿಜಾತಮ್ ಏತತ್ಸರ್ವಂ ಪ್ರಾಣ ಏವ। ಪ್ರಾಣ ಇತಿ ವೃತ್ತಿಮಾನ್ ಆಧ್ಯಾತ್ಮಿಕೋಽನಃ ಉಕ್ತಃ। ಕರ್ಮ ಚ ಅಸ್ಯ ವೃತ್ತಿಭೇದ ಪ್ರದರ್ಶನೇನೈವ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

ಈಗ ಪ್ರಾಣವನ್ನು ಹೇಳಲಾಗುತ್ತದೆ: ಪ್ರಾಣವು, ಮುಖದಲ್ಲಿಯೂ ಮೂಗಿನಲ್ಲಿಯೂ ಸಂಚರಿಸುತ್ತಿರುವ ಹೃದಯವೃತ್ತಿಯು, ಮುಂದಕ್ಕೆ ಒಯ್ಯುವದರಿಂದ ಪ್ರಾಣ(ವೆನಿಸುವದು). (ಅಪಾನವು), ಮೂತ್ರಪುರೀಷಾದಿಗಳನ್ನು ಹಿಂದಕ್ಕೆ ಒಯ್ಯುವದರಿಂದ ಅಪಾನವು; (ಅದು) ಹೊಕ್ಕುಳಿನ ಸ್ಥಾನದವರೆಗೆ (ಇರುವ) ಕೆಳಗಡೆಗೆ ವ್ಯಾಪಾರವುಳ್ಳದ್ದು. ವ್ಯಾನವು, ವ್ಯಾಯಾಮಮಾಡತಕ್ಕದ್ದು ವ್ಯಾನವು; (ಇದು) ಪ್ರಾಣಾಪಾನವೃತ್ತಿಗಳ ಸಂಧಿಯಾಗಿರುತ್ತದೆ, ವೀರ್ಯದಿಂದ ಕೂಡಿದ ಕರ್ಮಗಳಿಗೆ ಕಾರಣವೂ[1] (ಆಗಿದೆ). ಉದಾನ, (ಇದು) ಮೇಲಕ್ಕೇಳಿಯುವದು, ಮೇಲಕ್ಕೆ ಹೋಗುವದು- ಮುಂತಾದದ್ದಕ್ಕೆ ಕಾರಣವಾಗಿರುತ್ತದೆ; ಅಂಗಾಲಿನಿಂದ ನೆತ್ತಿಯವರೆಗಿನ ಸ್ಥಾನವುಳ್ಳದ್ದು, ಮೇಲ್ಗಡೆಗೆ ವ್ಯಾಪಾರವುಳ್ಳದ್ದು, ಸಮಾನ, ತಿಂದದ್ದನ್ನೂ ಕುಡಿದದ್ದನ್ನೂ ಸಮವಾಗಿ ಒಯ್ಯುವದರಿಂದ (ಸಮಾನವೆನಿಸಿದೆ); ಕೋಷ್ಠಸ್ಥಾನದಲ್ಲಿದ್ದು ಅನ್ನವನ್ನು ಪಚನಮಾಡುತ್ತದೆ. 'ಅನ' ಎಂಬುದು ಈ ಬೇರೆಬೇರೆಯ ವೃತ್ತಿಗಳಿಗೆ ಸಾಮಾನ್ಯವಾಗಿದ್ದುಕೊಂಡು[2] ದೇಹದ ಸಾಮಾನ್ಯವ್ಯಾಪಾರಕ್ಕೆ ಸಂಬಂಧಪಟ್ಟಿರುವ ವೃತ್ತಿಯು. ಹೀಗೆ ಮೇಲೆ ಹೇಳಿರುವ ಪ್ರಾಣವೇ ಮುಂತಾದ ವೃತ್ತಿಸಮೂಹ(ವಿದೆಯಲ್ಲ), ಇದೆಲ್ಲವೂ ಪ್ರಾಣವೇ.

ಪ್ರಾಣ ಎಂದು (ಈ) ವೃತ್ತಿಗಳುಳ್ಳ ಆಧ್ಯಾತ್ಮಿಕವಾದ 'ಅನ'ವನ್ನು ಹೇಳಿದ್ದಾಯಿತು. ಇದರ ಕರ್ಮವು (ಯಾವದು ಎಂಬಿದನ್ನು ಬೇರೆಬೇರೆ ವೃತ್ತಿಗಳನ್ನು ತಿಳಿಸುವದರಿಂದಲೇ ವಿವರಿಸಿದಂತೆ ಆಯಿತು.

---

1. ಛಾಂ. ೧-೩-೩, ೫ -ಇವುಗಳಲ್ಲಿರುವ ವ್ಯಾನವಿವರಣೆಯನ್ನು ನೋಡಿ.
2. ಪ್ರಾಣ, ಅಪಾನ- ಮುಂತಾದವುಗಳೆಲ್ಲ ಅನ ಎಂಬುದರ ವಿಶೇಷಗಳೇ. ಸೂ. ಭಾ. ೨-೪-೧೨ನ್ನು ನೋಡಿ.

## ಶರೀರವು ತ್ರ್ಯನ್ನಾತ್ಮಕ

(ಭಾಷ್ಯ)

೨೧೫. ವ್ಯಾಖ್ಯಾತಾನಿ ಆಧ್ಯಾತ್ಮಿಕಾನಿ ಮನೋವಾಕ್ಪ್ರಾಣಾಖ್ಯಾನಿ ಅನ್ನಾನಿ। ಏತನ್ಮಯಃ ಏತದ್ವಿಕಾರಃ ಪ್ರಾಜಾಪತ್ಯೈರೇತೈರ್ವಾಙ್ಮನಃಪ್ರಾಣೈ ರಾರಬ್ಧಃ। ಕೋಽಸೌ? ಅಯಂ ಕಾರ್ಯಕರಣಸಂಘಾತ ಆತ್ಮಾ ಪಿಣ್ಡಃ ಆತ್ಮಸ್ವರೂಪತ್ವೇನ ಅಭಿಮತೋಽವಿವೇಕಿಭಿಃ। ಅವಿಶೇಷೇಣ ಏತನ್ಮಯಃ ಇತ್ಯುಕ್ತಸ್ಯ ವಿಶೇಷೇಣ ವಾಙ್ಮಯೋ ಮನೋಮಯಃ ಪ್ರಾಣಮಯಃ ಇತಿ ಸ್ಫುಟೀಕರಣಮ್ ॥

(ಭಾಷ್ಯಾರ್ಥ)

ಮನೋವಾಕ್ಪ್ರಾಣಗಳೆಂಬ ಆಧ್ಯಾತ್ಮಿಕಾನ್ನಗಳನ್ನು ವಿವರಿಸಿದ್ದಾಯಿತು. ಏತನ್ಮಯವು, ಎಂದರೆ ಇವುಗಳ ಕಾರ್ಯವು, ಪ್ರಾಜಾಪತ್ಯವಾದ ಈ ವಾಙ್ಮನಃ ಪ್ರಾಣಗಳಿಂದ ಆಗಿರುವದು ; ಅದು ಯಾವದು? ಎಂದರೆ ಈ ಕಾರ್ಯಕರಣ ಸಂಘಾತವು. ಆತ್ಮವು, ಆತ್ಮಸ್ವರೂಪವೆಂದು ಅವಿವೇಕಿಗಳು ಅಭಿಮಾನಪಡು ತ್ತಿರುವ ಶರೀರವು. ಸಾಮಾನ್ಯವಾಗಿ ಏತನ್ಮಯವು ಎಂದು ಹೇಳಿದ್ದನ್ನು ವಿಶೇಷವಾಗಿ ವಾಙ್ಮಯವು, ಮನೋಮಯವು, ಪ್ರಾಣಮಯವು ಎಂದು ಸ್ಫುಟ ಗೊಳಿಸಿರುತ್ತದೆ.

## ಆಧಿಭೌತಿಕತ್ರ್ಯನ್ನಗಳು

## ತ್ರಿಲೋಕಾತ್ಮಕತ್ರ್ಯನ್ನಗಳು

(ಉಪನಿಷತ್ತು)

**ತ್ರಯೋ ಲೋಕಾ ಏತ ಏವ ವಾಗೇವಾಯಂ ಲೋಕೋ ಮನೋಽನ್ತರಿಕ್ಷಲೋಕಃ ಪ್ರಾಣೋಽಸೌ ಲೋಕಃ ॥ ೪ ॥**

೪. ಮೂರು ಲೋಕಗಳು ಇವೇ. ವಾಕ್ಕೇ ಈ ಲೋಕವು ; ಮನಸ್ಸು ಅಂತರಿಕ್ಷಲೋಕವು, ಪ್ರಾಣವು ಆ ಲೋಕವು.

(ಭಾಷ್ಯ)

೨೧೬. ತೇಷಾಮೇವ ಪ್ರಾಜಾಪತ್ಯಾನಾಮ್ ಅನ್ನಾನಾಮ್ ಆಧಿ ಭೌತಿಕೋ ವಿಸ್ತಾರೋಽಭಿಧೀಯತೇ। ತ್ರಯೋ ಲೋಕಾ ಭೂರ್ಭುವಃಸ್ವರಿ ತ್ಯಾಖ್ಯಾ ಏತ ಏವ ವಾಙ್ಮನಃಪ್ರಾಣಾಃ। ತತ್ರ ವಿಶೇಷಃ। ವಾಗೇವ ಅಯಂ ಲೋಕಃ। ಮನೋಽನ್ತರಿಕ್ಷಲೋಕಃ, ಪ್ರಾಣೋಽಸೌ ಲೋಕಃ ॥

(ಭಾಷ್ಯಾರ್ಥ)

ಅದೇ ಪ್ರಾಜಾಪತ್ಯವಾದ (ಮೂರು) ಅನ್ನಗಳ ಆಧಿಭೌತಿಕವಿಸ್ತಾರವನ್ನು ಹೇಳಲಾಗುತ್ತದೆ. ಭೂಃ, ಭುವಃ, ಸ್ವಃ- ಎಂಬ ಮೂರು ಲೋಕಗಳು, ಇವೇ, ವಾಙ್ಮನಃಪ್ರಾಣಗಳೆಂಬಿವೇ. ಅವುಗಳಲ್ಲಿ ವಿಶೇಷ(ವನ್ನು ಹೇಳಲಾಗುವದು).[1] ವಾಕ್ಕೇ ಈ ಲೋಕವು, ಮನಸ್ಸು ಅಂತರಿಕ್ಷಲೋಕವು, ಪ್ರಾಣವು ಆ ಲೋಕವು.

## ವೇದಾತ್ಮಕತ್ರ್ಯನ್ನಗಳು

(ಉಪನಿಷತ್ತು)

**ತ್ರಯೋ ವೇದಾ ಏತ ಏವ ವಾಗೇವರ್ಗ್ವೇದೋ ಮನೋ ಯಜುರ್ವೇದಃ ಪ್ರಾಣಃ ಸಾಮವೇದಃ || ೫ ||**

೫. ಮೂರು ವೇದಗಳೂ ಇವೇ. ವಾಕ್ಕೇ ಋಗ್ವೇದವು, ಮನಸ್ಸು ಯಜುರ್ವೇದವು, ಪ್ರಾಣವು ಸಾಮವೇದವು.

## ದೇವಾದ್ಯಾತ್ಮಕತ್ರ್ಯನ್ನಗಳು

(ಉಪನಿಷತ್ತು)

**ದೇವಾಃ ಪಿತರೋ ಮನುಷ್ಯಾ ಏತ ಏವ ವಾಗೇವ ದೇವಾ ಮನಃ ಪಿತರಃ ಪ್ರಾಣೋ ಮನುಷ್ಯಾಃ || ೬ ||**

೬. ದೇವತೆಗಳು, ಪಿತೃಗಳು, ಮನುಷ್ಯರು (ಇವರೂ) ಇವೇ. ವಾಕ್ಕೇ ದೇವತೆಗಳು, ಮನಸ್ಸು ಪಿತೃಗಳು, ಪ್ರಾಣವು ಮನುಷ್ಯರು.

## ತಂದೆ ಮುಂತಾದ ರೂಪದ ತ್ರ್ಯನ್ನಗಳು

(ಉಪನಿಷತ್ತು)

**ಪಿತಾ ಮಾತಾ ಪ್ರಜೈತ ಏವ ಮನ ಏವ ಪಿತಾ ವಾಙ್ಮಾತಾ ಪ್ರಾಣಃ ಪ್ರಜಾ || ೭ ||**

೭. ತಂದೆ, ತಾಯಿ, ಪ್ರಜೆ- (ಇವರೂ) ಇವೇ. ಮನಸ್ಸೇ ತಂದೆ, ವಾಕ್ಕು ತಾಯಿ, ಪ್ರಾಣವು ಪ್ರಜೆ.

(ಭಾಷ್ಯ)

೨೧೭. ತಥಾ ತ್ರಯೋ ವೇದಾ ಇತ್ಯಾದೀನಿ ವಾಕ್ಯಾನಿ ಋಜ್ವರ್ಥಾನಿ ||

1. ವಾಙ್ಮನಃಪ್ರಾಣಗಳೊಳಗೆ ಯಾವಯಾವದು ಲೋಕವೆಂಬುದನ್ನು ಗೊತ್ತುಪಡಿಸಿ ಹೇಳಲಾಗುವದು ಎಂದರ್ಥ.

(ಭಾಷ್ಯಾರ್ಥ)

'ಮೂರು ಲೋಕಗಳು (ಇವೇ)' ಎಂದು ಮುಂತಾಗಿರುವ ವಾಕ್ಯಗಳು ನೇರಾಗಿ ಅರ್ಥ(ವುಳ್ಳವೆಂದು ತಿಳಿಯಬೇಕು).[1]

## ವಿಜ್ಞಾತಾದ್ಯಾತ್ಮಕ ತ್ರ್ಯನ್ನಗಳು

(ಉಪನಿಷತ್ತು)

**ವಿಜ್ಞಾತಂ ವಿಜಿಜ್ಞಾಸ್ಯಮವಿಜ್ಞಾತಮೇತ ಏವ ಯತ್ಕಿಂಚ ವಿಜ್ಞಾತಂ ವಾಚಸ್ತದ್ರೂಪಂ ವಾಗ್ಘಿ ವಿಜ್ಞಾತಾ ವಾಗೇನಂ ತದ್ಭೂತ್ವಾಽವತಿ ॥ ೮ ॥**

೮. ವಿಜ್ಞಾತ, ವಿಜಿಜ್ಞಾಸ್ಯ, ಅವಿಜ್ಞಾತ- (ಇವುಗಳೂ) ಇವೇ. ಯಾವಯಾವದು ವಿಜ್ಞಾತವೋ ಅದು ವಾಕ್ಕಿನ ರೂಪವು, ವಾಕ್ಕು ವಿಜ್ಞಾತವಲ್ಲವೆ? ವಾಕ್ಕೇ ಅದಾಗಿ ಇವನನ್ನು ಕಾಪಾಡುತ್ತದೆ.

(ಭಾಷ್ಯ)

೨೧೮. ವಿಜ್ಞಾತಂ ವಿಜಿಜ್ಞಾಸ್ಯಮ್ ಅವಿಜ್ಞಾತಮ್ ಏತೇ ಏವ। ತತ್ರ ವಿಶೇಷಃ। ಯತ್ಕಿಂಚ ವಿಜ್ಞಾತಂ ವಿಸ್ಪಷ್ಟಂ ಜ್ಞಾತಂ ವಾಚಸ್ತದ್ರೂಪಮ್। ತತ್ರ ಸ್ವಯಮೇವ ಹೇತುಮಾಹ। ವಾಕ್ ಹಿ ವಿಜ್ಞಾತಾ। ಪ್ರಕಾಶಾತ್ಮಕತ್ವಾತ್। ಕಥಮ್ ಅವಿಜ್ಞಾತಾ ಭವೇತ್ ಯಾ ಅನ್ಯಾನಪಿ ವಿಜ್ಞಾಪಯತಿ। "ವಾಚೈವ ಸಮ್ರಾಡ್ ಬನ್ಧುಃ ಪ್ರಜ್ಞಾಯತೇ" (೪-೧-೨) ಇತಿ ಹಿ ವಕ್ಷ್ಯತಿ। ವಾಗ್ವಿಶೇಷ ವಿದಃ ಇದಂ ಫಲಮ್ ಉಚ್ಯತೇ। ವಾಗೇವೈನಂ ಯಥೋಕ್ತವಾಗ್ವಿಭೂತಿವಿದಂ ತದ್ ವಿಜ್ಞಾತಂ ಭೂತ್ವಾ ಅವತಿ ಪಾಲಯತಿ। ವಿಜ್ಞಾತರೂಪೇಣೈವ ಅಸ್ಯ ಅನ್ನಂ ಭೋಜ್ಯತಾಂ ಪ್ರತಿಪದ್ಯತೇ ಇತ್ಯರ್ಥಃ॥

(ಭಾಷ್ಯಾರ್ಥ)

ವಿಜ್ಞಾತ, ವಿಜಿಜ್ಞಾಸ್ಯ, ಅವಿಜ್ಞಾತ- (ಇವುಗಳೂ) ಅವೇ. ಅವುಗಳಲ್ಲಿ ವಿಶೇಷವನ್ನು (ಹೇಳಲಾಗುತ್ತದೆ). ಯಾವಯಾವದು ವಿಜ್ಞಾತವೋ ವಿಸ್ಪಷ್ಟವಾಗಿ ತಿಳಿದುಬಂದಿದೆಯೋ ಅದು ವಾಕ್ಕಿನ ರೂಪವು. ಇದಕ್ಕೆ (ಶ್ರುತಿಯು) ತಾನೇ ಹೇತುವನ್ನು ಹೇಳುತ್ತಿದೆ. ವಾಕ್ಕು ವಿಜ್ಞಾತವಲ್ಲವೆ ? ಏಕೆಂದರೆ (ಅದು) ಪ್ರಕಾಶಾತ್ಮಕವಾಗಿರುತ್ತದೆ. ಯಾವದು ಮಿಕ್ಕವುಗಳನ್ನೂ ತಿಳಿಸಿಕೊಡುತ್ತದೆಯೋ (ಅದು) ಹೇಗೆತಾನೆ ಅವಿಜ್ಞಾತವಾದೀತು ? "ಸಮ್ರಾಜನೆ, ವಾಕ್ಕಿನಿಂದಲೇ ಬಂಧುವು ತಿಳಿದುಬರುತ್ತಾನೆ" (೪-೧-೨) ಎಂದಲ್ಲವೆ, ಮುಂದೆ

1. ಆದ್ದರಿಂದ ಇವಕ್ಕೆ ಹೆಚ್ಚಿಗೆಯ ವಿವರಣವನ್ನು ಇಲ್ಲಿ ಭಾಷ್ಯದಲ್ಲಿ ಬರೆದಿಲ್ಲ.

ಹೇಳಿದೆ? ವಾಕ್ಕಿನ (ಈ) ವಿಶೇಷವನ್ನು ಅರಿತುಕೊಳ್ಳುವವನಿಗೆ ಈ ಫಲವನ್ನು (ಶ್ರುತಿ) ಹೇಳುತ್ತದೆ. ವಾಕ್ಕೇ ಇವನನ್ನು, ಮೇಲೆ ಹೇಳಿರುವ ವಾಗ್ವಿಭೂತಿಯನ್ನು ಅರಿತುಕೊಂಡಿರುವಾತನನ್ನು, ಅದಾಗಿ (ಆ) ವಿಜ್ಞಾತ(ವಾಗಿ), ಕಾಪಾಡುತ್ತದೆ, ಪಾಲಿಸುತ್ತದೆ. ಇವನಿಗೆ (ಈ) ಅನ್ನವು ವಿಜ್ಞಾತರೂಪದಿಂದಲೇ ಭೋಜ್ಯತ್ವವನ್ನು ಹೊಂದುತ್ತದೆ ಎಂದರ್ಥ.

(ಉಪನಿಷತ್ತು)

**ಯತ್ಕಿಂಚ ವಿಜಿಜ್ಞಾಸ್ಯಂ ಮನಸಸ್ತದ್ರೂಪಂ ಮನೋ ಹಿ ವಿಜಿಜ್ಞಾಸ್ಯಂ ಮನ ಏನಂ ತದ್ಭೂತ್ವಾಽವತಿ ॥ ೯ ॥**

೯. ಯಾವಯಾವದು ವಿಜಿಜ್ಞಾಸ್ಯವೋ ಅದು ಮನಸ್ಸಿನ ರೂಪವು. ಮನಸ್ಸು ವಿಜಿಜ್ಞಾಸ್ಯವಲ್ಲವೆ? ಮನಸ್ಸು ಇವನನ್ನು ಅದಾಗಿ ಕಾಪಾಡುತ್ತದೆ.

(ಭಾಷ್ಯ)

೨೧೯. ತಥಾ ಯತ್ಕಿಂಚ ವಿಜಿಜ್ಞಾಸ್ಯಂ ವಿಸ್ಪಷ್ಟಂ ಜ್ಞಾತುಮಿಷ್ಟಂ ವಿಜಿಜ್ಞಾಸ್ಯಂ ತತ್ಸರ್ವಂ ಮನಸೋ ರೂಪಮ್। ಮನೋ ಹಿ ಯಸ್ಮಾತ್ ಸಂದಿಹ್ಯಮಾನಾಕಾರತ್ವಾತ್ ವಿಜಿಜ್ಞಾಸ್ಯಮ್। ಪೂರ್ವವತ್ ಮನೋವಿಭೂತಿವಿದಃ ಫಲಮ್। ಮನಃ ಏನಂ ತದ್ ವಿಜಿಜ್ಞಾಸ್ಯಂ ಭೂತ್ವಾ ಅವತಿ। ವಿಜಿಜ್ಞಾಸ್ಯಸ್ವರೂಪೇಣೈವ ಅನ್ನತ್ವಮಾಪದ್ಯತೇ ॥

(ಭಾಷ್ಯಾರ್ಥ)

ಹೀಗೆಯೇ ಯಾವಯಾವದು ವಿಜಿಜ್ಞಾಸ್ಯವೋ – ವಿಸ್ಪಷ್ಟವಾಗಿ ಅರಿತುಕೊಳ್ಳಬೇಕಾಗಿರುವದೇ ವಿಜಿಜ್ಞಾಸ್ಯವು – ಅದೆಲ್ಲವೂ ಮನಸ್ಸಿನ ರೂಪವು. (ಹಿ= ಯಸ್ಮಾತ್) ಏಕೆಂದರೆ ಮನಸ್ಸು ಸಂದೇಹಾಸ್ಪದವಾದ ಆಕಾರವುಳ್ಳದಾದ್ದರಿಂದ ವಿಜಿಜ್ಞಾಸ್ಯವಾಗಿರುವದು. ಹಿಂದಿನಂತೆ ಮನಸ್ಸಿನ (ಈ) ವಿಭೂತಿಯನ್ನು ಅರಿತುಕೊಂಡಿರುವವನಿಗೆ ಫಲ(ವನ್ನು ಹೇಳಲಾಗುತ್ತದೆ). ಮನಸ್ಸು ಇವನನ್ನು ಅದಾಗಿ ಆ (ವಿಜಿಜ್ಞಾಸ್ಯವಾಗಿ) ಕಾಪಾಡುತ್ತದೆ. ವಿಜಿಜ್ಞಾಸ್ಯರೂಪದಿಂದಲೇ ಅನ್ನತ್ವವನ್ನು ಹೊಂದುತ್ತದೆ.

(ಉಪನಿಷತ್ತು)

**ಯತ್ಕಿಂಚಾವಿಜ್ಞಾತಂ ಪ್ರಾಣಸ್ಯ ತದ್ರೂಪಂ ಪ್ರಾಣೋ ಹ್ಯವಿಜ್ಞಾತಃ ಪ್ರಾಣ ಏನಂ ತದ್ಭೂತ್ವಾಽವತಿ ॥ ೧೦ ॥**

೧೦. ಯಾವಯಾವದು ಅವಿಜ್ಞಾತವೋ ಅದು ಪ್ರಾಣದ ರೂಪವು. ಪ್ರಾಣವು, ಅವಿಜ್ಞಾತವಲ್ಲವೆ? ಪ್ರಾಣವು ಇವನನ್ನು ಅದಾಗಿ ಕಾಪಾಡುತ್ತದೆ.

(ಭಾಷ್ಯ)

೨೨೦. ತಥಾ ಯತ್ಕಿಂಚ ಅವಿಜ್ಞಾತಂ, ವಿಜ್ಞಾನಾಗೋಚರಮ್, ನ ಚ ಸಂದಿಹ್ಯಮಾನಮ್, ಪ್ರಾಣಸ್ಯ ತದ್ ರೂಪಮ್। ಪ್ರಾಣೋ ಹಿ ಅವಿಜ್ಞಾತಃ। ಅವಿಜ್ಞಾತರೂಪೋ ಹಿ ಯಸ್ಮಾತ್ ಪ್ರಾಣಃ। ಅನಿರುಕ್ತಶ್ರುತೇಃ। ವಿಜ್ಞಾತ ವಿಜಿಜ್ಞಾಸ್ಯಾವಿಜ್ಞಾತಭೇದೇನ ವಾಙ್ಮನಃಪ್ರಾಣವಿಭಾಗೇ ಸ್ಥಿತೇ 'ತ್ರಯೋ ಲೋಕಾಃ' ಇತ್ಯಾದಯೋ ವಾಚನಿಕಾ ಏವ। ಸರ್ವತ್ರ ವಿಜ್ಞಾತಾದಿರೂಪ ದರ್ಶನಾತ್ ವಚನಾದೇವ ನಿಯಮಃ ಸ್ಮರ್ತವ್ಯಃ॥ ಪ್ರಾಣ ಏನಂ ತದ್ ಭೂತ್ವಾ ಅವತಿ। ಅವಿಜ್ಞಾತರೂಪೇಣೈವ ಅಸ್ಯ ಪ್ರಾಣಃ ಅನ್ನಂ ಭವತಿ ಇತ್ಯರ್ಥಃ। ಶಿಷ್ಯಪುತ್ರಾದಿಭಿಃ ಸಂದಿಹ್ಯಮಾನಾ ವಿಜ್ಞಾತೋಪಕಾರಕಾ ಅಪಿ ಆಚಾರ್ಯ ಪಿತ್ರಾದಯೋ ದೃಶ್ಯನ್ತೇ। ತಥಾ ಮನಃಪ್ರಾಣಯೋರಪಿ ಸಂದಿಹ್ಯಮಾನಾ ವಿಜ್ಞಾತಯೋರನ್ನತ್ವೋಪಪತ್ತಿಃ॥

(ಭಾಷ್ಯಾರ್ಥ)

ಹೀಗೆಯೇ ಯಾವಯಾವದು ಅವಿಜ್ಞಾತವೋ ವಿಜ್ಞಾನಕ್ಕೆ ಗೋಚರ ವಲ್ಲವೋ ಸಂದೇಹ(ಕ್ಕೆ ವಿಷಯವೂ) ಅಲ್ಲವೋ, ಅದು ಪ್ರಾಣದ ರೂಪವು. ಪ್ರಾಣವು ಅವಿಜ್ಞಾತವಲ್ಲವೆ ? (ಹಿ= ಯಸ್ಮಾತ್) ಏಕೆಂದರೆ ಪ್ರಾಣವು ಅನಿ ರುಕ್ತವೆಂದು ಶ್ರುತಿಯಿರುವದರಿಂದ (?) ಅವಿಜ್ಞಾನರೂಪದ್ದೇ ಆಗಿದೆ.

ವಿಜ್ಞಾತ, ವಿಜಿಜ್ಞಾಸ್ಯ, ಅವಿಜ್ಞಾತ –ಎಂಬ (ಮೂರು) ಬಗೆಯಾಗಿ ವಾಕ್ಕು, ಮನಸ್ಸು, ಪ್ರಾಣ –(ಇವುಗಳ) ವಿಭಾಗವು ಸಿದ್ಧವಾಗಿರುವಲ್ಲಿ 'ಮೂರು ಲೋಕಗಳು' (೧-೫-೪) ಮುಂತಾದವು ವಾಚನಿಕವೇ ಆಗಿರುತ್ತವೆ[1] ; ಎಲ್ಲೆಲ್ಲಿಯೂ ವಿಜ್ಞಾತಾದಿರೂಪಗಳು ಕಾಣುತ್ತಿರುವಲ್ಲಿ ವಚನದಿಂದಲೇ (ಆ) ನಿಯಮವನ್ನು ಮನದಂದುಕೊಳ್ಳಬೇಕಾಗಿದೆ.[2]

1. ವಿಜ್ಞಾತ, ವಿಜಿಜ್ಞಾಸ್ಯ, ಅವಿಜ್ಞಾತ– ಇವುಗಳಿಗಿಂತ ಬೇರೆಯಾಗಿ ಲೋಕಾದಿ ಗಳು ಇಲ್ಲದಿದ್ದರೂ ಉಪಾಸನೆಗಾಗಿ ಹಾಗೆಂದು ಹೇಳಿದೆ.

2. ಭೂತಾದಿಗಳಲ್ಲಿ ಒಂದೊಂದರಲ್ಲಿಯೂ ವಿಜ್ಞಾತಾದಿಗಳೆಲ್ಲವೂ ಕಾಣಬರುವದ ರಿಂದ ವಾಙ್ಮನಃಪ್ರಾಣಗಳು ಎಲ್ಲಾ ರೂಪದಿಂದಲೂ ಇರುತ್ತವೆಯಾದರೂ ವಾಕ್ಕು ಭೂಲೋಕವು ಎಂದು ಮುಂತಾಗಿ ಶ್ರುತಿಪ್ರಮಾಣದಿಂದಲೇ ಉಪಾಸನೆಮಾಡಬೇಕು– ಎಂಬರ್ಥ.

ಪ್ರಾಣವು ಇವನನ್ನು ಅವಾಗಿ ಕಾಪಾಡುತ್ತದೆ, ಅವಿಜ್ಞಾತರೂಪದಿಂದಲೇ ಇವನಿಗೆ ಪ್ರಾಣವು ಅನ್ನವಾಗುತ್ತದೆ ಎಂದರ್ಥ. ಶಿಷ್ಯರು, ಮಕ್ಕಳು ಮುಂತಾದವರಿಗೆ ಸಂದೇಹವಾಗಿರುವಂತೆ, ಅಥವಾ ತಿಳಿಯದೆ ಇರುವಂತೆಯೂ ಉಪಕಾರವನ್ನು ಮಾಡುವ ಆಚಾರ್ಯ, ತಂದೆ –ಮುಂತಾದವರೂ ಕಂಡುಬರುತ್ತಾರೆ. ಇದರಂತೆ ಮನಸ್ಸು, ಪ್ರಾಣ –ಇವುಗಳೂ ಸಂದೇಹಕ್ಕೆ ವಿಷಯವಾಗಿದ್ದರೂ ಅವಿಜ್ಞಾತವಾಗಿದ್ದರೂ ಅನ್ನವಾಗಿರಬಹುದಾಗಿದೆ.

## ಆಧಿದೈವಿಕತ್ರ್ಯನ್ನಗಳು

### ಆಧಿದೈವಿಕವಾಕ್ಕು

(ಉಪನಿಷತ್ತು)

**ತಸ್ಯೈ ವಾಚಃ ಪೃಥಿವೀ ಶರೀರಂ ಜ್ಯೋತೀರೂಪಮಯಮಗ್ನಿ ಸ್ತದ್ಯಾವತ್ಯೇವ ವಾಕ್ತಾವತೀ ಪೃಥಿವೀ ತಾವಾನಯಮಗ್ನಿಃ ॥೧೧॥**

೧೧. ಆ ವಾಕ್ಕಿಗೆ ಪೃಥಿವಿಯೇ ಶರೀರವು. ಈ ಅಗ್ನಿಯೇ ಜ್ಯೋತೀರೂಪವು. ಇಲ್ಲಿ ವಾಕ್ಕು ಎಷ್ಟೋ, ಅಷ್ಟೇ ಪೃಥಿವಿಯು, ಅಷ್ಟೇ ಈ ಅಗ್ನಿಯು.

(ಭಾಷ್ಯ)

೨೨೧. ವ್ಯಾಖ್ಯಾತೋ ವಾಙ್ಮನಃಪ್ರಾಣಾನಾಮ್ ಆಧಿಭೌತಿಕೋ ವಿಸ್ತಾರಃ । ಅಥಾಯಮ್ ಆಧಿದೈವಿಕಾರ್ಥ ಆರಮ್ಭಃ । ತಸ್ಯೈ ತಸ್ಯಾಃ ವಾಚಃ ಪ್ರಜಾಪತೇರನ್ನತ್ವೇನ ಪ್ರಸ್ತುತಾಯಾಃ ಪೃಥಿವೀ ಶರೀರಂ ಬಾಹ್ಯ ಆಧಾರಃ । ಜ್ಯೋತೀರೂಪಂ ಪ್ರಕಾಶಾತ್ಮಕಂ ಕರಣಂ ಪೃಥಿವ್ಯಾ ಆಧೇಯಭೂತಮ್ ಅಯಂ ಪಾರ್ಥಿವೋಽಗ್ನಿಃ । ದ್ವಿರೂಪಾ ಹಿ ಪ್ರಜಾಪತೇರ್ವಾಕ್ । ಕಾರ್ಯಮ್ ಆಧಾರೋಽಪ್ರಕಾಶಃ, ಕರಣಂ ಚ ಆಧೇಯಂ ಪ್ರಕಾಶಃ । ತದುಭಯಂ ಪೃಥಿವ್ಯಗ್ನೀ ವಾಗೇವ ಪ್ರಜಾಪತೇಃ । ತತ್ ತತ್ರ ಯಾವತ್ಯೇವ ಯಾವತ್ಪರಿಮಾಣೈವ ಅಧ್ಯಾತ್ಮಾಧಿಭೂತಭೇದಭಿನ್ನಾ ಸತೀ ವಾಗ್ಭವತಿ ತತ್ರ ಸರ್ವತ್ರ ಆಧಾರತ್ವೇನ ಪೃಥಿವೀ ವ್ಯವಸ್ಥಿತಾ ತಾವತ್ಯೇವ ಭವತಿ ಕಾರ್ಯಭೂತಾ । ತಾವಾನಯಮಗ್ನಿರಾಧೇಯಃ ಕರಣರೂಪೋ ಜ್ಯೋತೀರೂಪೇಣ ಪೃಥಿವೀಮ್ ಅನುಪ್ರವಿಷ್ಟಸ್ತಾವಾನೇವ ಭವತಿ । ಸಮಾನಮುತ್ತರಮ್ ॥

(ಭಾಷ್ಯಾರ್ಥ)

ವಾಙ್ಮನಃಪ್ರಾಣಗಳ ಆಧಿಭೌತಿಕವಿಸ್ತಾರವನ್ನು ವಿವರಿಸಿದ್ದಾಯಿತು. ಇನ್ನು ಆಧಿದೈವಿಕ(ವಿಸ್ತಾರವನ್ನು ತಿಳಿಸು)ವದಕ್ಕಾಗಿ ಈ (ಗ್ರಂಥವನ್ನು) ಆರಂಭಿಸಿದೆ.

(ತಸ್ಯೈ=ತಸ್ಯಾಃ) ಈ ಪ್ರಜಾಪತಿಯ ಅನ್ನವೆಂದು ಪ್ರಕೃತವಾಗಿರುವ ವಾಕ್ಕಿಗೆ ಪೃಥಿವಿಯು ಶರೀರವು, ಹೊರಗಿನ ಆಧಾರವು. ಈ ಪಾರ್ಥಿವಾಗ್ನಿಯು ಜ್ಯೋತೀರೂಪವು, ಪ್ರಕಾಶಾತ್ಮಕವಾದ ಕರಣವು, ಪೃಥಿವಿಗೆ ಆಧೇಯವಾಗಿರುವದು.[1] ಪ್ರಜಾಪತಿಯ ವಾಕ್ಕು ಎಂಬುದು ಆಧಾರವೂ ಅಪ್ರಕಾಶವೂ ಆಗಿರುವ ಕಾರ್ಯವು, ಆಧೇಯವೂ ಪ್ರಕಾಶವೂ ಆಗಿರುವ ಕರಣವು ಎಂದು ಎರಡು ಬಗೆಯಷ್ಟೆ. ಪೃಥಿವಿ, ಅಗ್ನಿ -ಎಂಬ ಆ ಎರಡೂ ಪ್ರಜಾಪತಿಯ ವಾಕ್ಕೇ.

(ತತ್=ತತ್ರ) ಅಲ್ಲಿ ಅಧ್ಯಾತ್ಮ, ಅಧಿಭೂತ- ಎಂಬ ಭೇದಗಳಿಂದ ಭಿನ್ನವಾಗಿರುವ ವಾಕ್ಕು ಎಷ್ಟು ಆಗಿರುತ್ತದೆಯೋ, ಅಲ್ಲೆಲ್ಲ ಆಧಾರವಾಗಿರುವ ಪೃಥಿವಿಯು ಕಾರ್ಯವಾಗಿ ಅಷ್ಟೇ; ಈ ಅಗ್ನಿಯೂ ಅಷ್ಟೇ ಆಧೇಯವಾಗಿ ಕರಣರೂಪನಾಗಿ ಜ್ಯೋತೀರೂಪದಿಂದ ಪೃಥಿವಿಯನ್ನು ಒಳಹೊಕ್ಕಿರುವ ಈ ಅಗ್ನಿಯು ಅಷ್ಟೇ ಆಗಿರುತ್ತಾನೆ. ಮುಂದಿನ (ಈ ಬಗೆಯ ಗ್ರಂಥವು ಇದಕ್ಕೆ) ಸಮಾನವಾಗಿರುತ್ತದೆ.

## ಆಧಿದೈವಿಕಮನಸ್ಸು, ಪ್ರಾಣೋತ್ಪತ್ತಿ

(ಉಪನಿಷತ್ತು)

**ಅಥೈತಸ್ಯ ಮನಸೋ ದ್ಯೌಃ ಶರೀರಂ ಜ್ಯೋತೀರೂಪಮಸಾವಾದಿತ್ಯಸ್ತದ್ಯಾವದೇವ ಮನಸ್ತಾವತೀ ದ್ಯೌಸ್ತಾವಾನಸಾವಾದಿತ್ಯಸ್ತೌ ಮಿಥುನಗ್ಂ ಸಮೈತಾಂ ತತಃ ಪ್ರಾಣೋಽಜಾಯತ ಸ ಇನ್ದ್ರಃ ಸ ಏಷೋಽಸಪತ್ನೋ ದ್ವಿತೀಯೋ ವೈ ಸಪತ್ನೋ ನಾಸ್ಯ ಸಪತ್ನೋ ಭವತಿ ಯ ಏವಂ ವೇದ ॥ ೧೨ ॥**

೧೨. ಇನ್ನು ಈ ಮನಸ್ಸಿಗೆ ದ್ಯುಲೋಕವೇ ಶರೀರವು, ಆ ಆದಿತ್ಯನೇ ಜ್ಯೋತೀರೂಪವು; ಅಲ್ಲಿ ಮನಸ್ಸು ಎಷ್ಟೋ ಅಷ್ಟೇ ದ್ಯುಲೋಕವು ಅಷ್ಟೇ ಆ ಆದಿತ್ಯನು. ಅವರಿಬ್ಬರೂ ಮಿಥುನವನ್ನು ಸೇರಿದರು, ಅದರಿಂದ ಪ್ರಾಣನು ಹುಟ್ಟಿದನು. ಅವನೇ ಇಂದ್ರನು. ಆ ಇವನು ಎದುರಾಳಿಯಿಲ್ಲದವನು; ಏಕೆಂದರೆ ಎರಡನೆಯವನಲ್ಲವೆ, ಎದುರಾಳಿ? ಯಾವನು ಹೀಗೆಂದು ಅರಿತುಕೊಳ್ಳುವನೋ ಅವನಿಗೆ ಎದುರಾಳಿ ಇರುವದಿಲ್ಲ.

---

1. ಅಧಿದೈವಿಕಕಾರ್ಯಕರಣರೂಪವಾದ ವಾಗಾದಿಗಳು ಅಧ್ಯಾತ್ಮಾಧಿಭೂತಗಳಲ್ಲೆಲ್ಲ ವ್ಯಾಪಿಸಿಕೊಂಡಿರುತ್ತಾರೆ ಎಂದರ್ಥವನ್ನು ಈ ಗ್ರಂಥಭಾಗಕ್ಕೆಲ್ಲ ಮಾಡಿಕೊಳ್ಳಬೇಕೆಂದು ಅಭಿಪ್ರಾಯ.

(ಭಾಷ್ಯ)

೨೨೧. ಅಥೈತಸ್ಯ ಪ್ರಾಜಾಪತ್ಯಾನ್ನೋಕ್ತಸ್ಯೈವ ಮನಸಃ ದ್ಯೌ ದ್ಯುರ್ಲೋಕಃ ಶರೀರಮ್, ಕಾರ್ಯಮ್ ಆಧಾರಃ। ಜ್ಯೋತೀರೂಪಂ ಕರಣಮ್ ಆಧೇಯಃ ಅಸಾವಾದಿತ್ಯಃ। ತತ್ ತತ್ರ ಯಾವತ್ಪರಿಮಾಣಮೇವ ಅಧ್ಯಾತ್ಮಮ್ ಅಧಿಭೂತಂ ವಾ ಮನಃ, ತಾವತೀ ತಾವದ್ವಿಸ್ತಾರಾ ತಾವತ್ಪರಿಮಾಣಾ ಮನಸೋ ಜ್ಯೋತೀರೂಪಸ್ಯ ಕರಣಸ್ಯ ಆಧಾರತ್ವೇನ ವ್ಯವಸ್ಥಿತಾ ದ್ಯೌಃ। ತಾವಾನಸೌ ಆದಿತ್ಯಃ ಜ್ಯೋತೀರೂಪಂ ಕರಣಮ್ ಆಧೇಯಮ್। ತೌ ಅಗ್ನ್ಯಾದಿತ್ಯೌ ವಾಙ್ಮನಸೇ ಆಧಿದೈವಿಕೇ ಮಾತಾಪಿತರೌ ಮಿಥುನಂ ಮೈಥುನ್ಯಮ್ ಇತರೇತರಸಂಸರ್ಗಂ ಸಮೈತಾಂ ಸಮಗಚ್ಛೇತಾಮ್। ಮನಸಾ ಆದಿತ್ಯೇನ ಪ್ರಸೂತಂ ಪಿತ್ರಾ, ವಾಚಾ ಅಗ್ನಿನಾ ಮಾತ್ರಾ ಪ್ರಕಾಶಿತಂ ಕರ್ಮ ಕರಿಷ್ಯಾಮಿ ಇತ್ಯನ್ತರಾ ರೋದಸ್ಯೋಃ। ತತಃ ತಯೋರೇವ ಸಂಗಮನಾತ್ ಪ್ರಾಣೋ ವಾಯುಃ ಅಜಾಯತ ಪರಿಸ್ಪನ್ದಾಯ ಕರ್ಮಣೇ। ಯೋ ಜಾತಃ ಸ ಇನ್ದ್ರಃ ಪರಮೇಶ್ವರಃ। ನ ಕೇವಲಮ್ ಇನ್ದ್ರ ಏವ, ಅಸಪತ್ನಃ। ಅವಿದ್ಯಮಾನಃ ಸಪತ್ನೋ ಯಸ್ಯ। ಕಃ ಪುನಃ ಸಪತ್ನೋ ನಾಮ ? ದ್ವಿತೀಯೋ ವೈ ಪ್ರತಿಪಕ್ಷತ್ವೇನ ಉಪಗತಃ। ಸ ದ್ವಿತೀಯಃ ಸಪತ್ನ ಇತ್ಯುಚ್ಯತೇ। ತೇನ ದ್ವಿತೀಯತ್ವೇಽಪಿ ಸತಿ ವಾಙ್ಮನಸೇ ನ ಸಪತ್ನತ್ವಂ ಭಜೇತೇ। ಪ್ರಾಣಂ ಪ್ರತಿ ಗುಣಭಾವೋಪಗತೇ ಏವ ಹಿ ತೇ ಅಧ್ಯಾತ್ಮಮಿವ। ತತ್ರ ಪ್ರಾಸಙ್ಗಿಕಾಸಪತ್ನ ವಿಜ್ಞಾನಫಲಮಿದಮ್। ನಾಸ್ಯ ವಿದುಷಃ ಸಪತ್ನಃ ಪ್ರತಿಪಕ್ಷೋ ಭವತಿ ಯ ಏವಂ ಯಥೋಕ್ತಂ ಪ್ರಾಣಮ್ ಅಸಪತ್ನಂ ವೇದ ॥

(ಭಾಷ್ಯಾರ್ಥ)

ಇನ್ನು (ಈ) ಪ್ರಜಾಪತಿಯ ಅನ್ನವೆಂದು ಹೇಳಿದೆಯಲ್ಲ, ಇದೇ ಮನಸ್ಸಿಗೆ ದ್ಯೌಃ ಎಂದರೆ ದ್ಯುಲೋಕವು ಶರೀರವು. ಕಾರ್ಯವು, ಆಧಾರವು. ಜ್ಯೋತೀರೂಪವು, ಎಂದರೆ ಆಧೇಯವಾದ ಕರಣವು, ಆ ಆದಿತ್ಯನೇ. (ತತ್ = ತತ್ರ) ಅಲ್ಲಿ ಮನಸ್ಸು ಅಧ್ಯಾತ್ಮವೇ ಆಗಲಿ ಅಧಿಭೂತವೇ ಆಗಲಿ, ಎಷ್ಟು ಪರಿಮಾಣ ದ್ದೋ ಜ್ಯೋತೀರೂಪವಾದ ಮನಸ್ಸೆಂಬ ಕರಣಕ್ಕೆ ಆಧಾರವಾಗಿದ್ದುಕೊಂಡಿರುವ ದ್ಯುಲೋಕವು ಅಷ್ಟೇ, ಅಷ್ಟೇ ವಿಸ್ತಾರವಾಗಿರುವದು, ಅಷ್ಟೇ ಪರಿಮಾಣವುಳ್ಳ ದ್ದಾಗಿರುವದು; ಜ್ಯೋತೀರೂಪವಾದ ಆಧೇಯವಾದ ಕರಣವಾಗಿರುವ ಆ ಆದಿತ್ಯನೂ ಅಷ್ಟೇ.

ಆ ಅಗ್ನ್ಯಾದಿತ್ಯರು, ಆಧಿದೈವಿಕವಾಙ್ಮನಸ್ಸುಗಳಾದ ತಾಯಿತಂದೆಗಳು ಮಿಥುನವನ್ನು, ಮೈಥುನವನ್ನು, ಪರಸ್ಪರಸಂಬಂಧವನ್ನು, ಸೇರಿದರು, ಬೆರೆತರು, ಮನಸ್ಸಾದ ಆದಿತ್ಯನೆಂಬ ತಂದೆಯಿಂದ ಉಂಟಾದ, ವಾಕ್ಕಾದ ಅಗ್ನಿಯೆಂಬ

ತಾಯಿಯಿಂದ ಪ್ರಕಾಶಿತವಾದ ಕಾರ್ಯವನ್ನು ಮಾಡುವೆನು ಎಂದು ಭೂಮ್ಯಂತರಿಕ್ಷಗಳ ನಡುವೆ (ಸೇರಿದರು).[1] ಅದರಿಂದ ಅವರಿಬ್ಬರ ಸೇರುವಿಕೆಯಿಂದಲೇ ಪ್ರಾಣನು, ವಾಯುವು, ಚಲನರೂಪವಾದ ಕರ್ಮಕ್ಕಾಗಿ ಜನಿಸಿದನು.[2] (ಹೀಗೆ) ಹುಟ್ಟಿದನಲ್ಲ, ಅವನು ಇಂದ್ರನು, ಪರಮೇಶ್ವರನು[3] ಬರಿಯ ಇಂದ್ರನೇ ಅಲ್ಲ ಅಸಪತ್ನನು, ಎದುರಾಳಿಯಿಲ್ಲದವನು. ಎದುರಾಳಿ ಎಂದರೆ ಯಾರು? ಪ್ರತಿಪಕ್ಷದವನಾಗಿ ಬಂದ ಎರಡನೆಯವನೇ ಅಷ್ಟೆ? ಆ ಎರಡನೆಯವನೇ ಎದುರಾಳಿಯೆನಿಸುತ್ತಾನೆ; ಆದ್ದರಿಂದ ವಾಙ್ಮನಸ್ಸುಗಳು ಎರಡನೆಯವರಾದರೂ ಎದುರಾಳಿತನವನ್ನು ಹೊಂದಿರುವದಿಲ್ಲ; ಏಕೆಂದರೆ ಅಧ್ಯಾತ್ಮದಲ್ಲಿ ಹೇಗೋ ಹಾಗೆ[4] ಅವೆರಡೂ ಪ್ರಾಣಕ್ಕೆ ಗುಣಭಾವವನ್ನೇ ಹೊಂದಿರುತ್ತವೆ. ಇಲ್ಲಿ (ಈ) ಪ್ರಾಸಂಗಿಕವಾದ ಅಸಪತ್ನೋಪಾಸನೆಯ ಫಲವಿದು: ಯಾವನು ಈ ಮೇಲೆ ಹೇಳಿದ ಪ್ರಾಣನು ಅಸಪತ್ನನೆಂದು ಉಪಾಸನೆಮಾಡುವನೋ ಆ ಉಪಾಸಕನಿಗೆ ಸಪತ್ನನು, ಪ್ರತಿಪಕ್ಷದವನು ಇರುವದಿಲ್ಲ.

## ಆಧಿದೈವಿಕಪ್ರಾಣ

(ಉಪನಿಷತ್ತು)

**ಅಥೈತಸ್ಯ ಪ್ರಾಣಸ್ಯಾಪಃ ಶರೀರಂ ಜ್ಯೋತೀರೂಪಮಸೌ ಚನ್ದ್ರಸ್ತದ್ಯಾವಾನೇವ ಪ್ರಾಣಸ್ತಾವತ್ಯ ಆಪಸ್ತಾವಾನಸೌ ಚನ್ದ್ರಸ್ತ ಏತೇ ಸರ್ವ ಏವ ಸಮಾಃ ಸರ್ವೇಽನನ್ತಾಃ ಸ ಯೋ ಹೈತಾನನ್ತವತ ಉಪಾಸ್ತೇಽನ್ತವನ್ತಗ್ಂ ಸ ಲೋಕಂ ಜಯತ್ಯಥ ಯೋ ಹೈತಾನನನ್ತಾನುಪಾಸ್ತೇಽನನ್ತಗ್ಂ ಸ ಲೋಕಂ ಜಯತಿ ॥ ೧೩ ॥**

೧೩. ಇನ್ನು ಈ ಪ್ರಾಣಕ್ಕೆ ಅಪ್ಪು ಶರೀರವು, ಆ ಚಂದ್ರನೇ ಜ್ಯೋತೀರೂಪವು. ಅಲ್ಲಿ ಪ್ರಾಣನು ಎಷ್ಟೋ ಅಷ್ಟೇ ಅಪ್ಪು, ಆ ಚಂದ್ರನೂ ಅಷ್ಟೇ. ಆ ಇವೆಲ್ಲವೂ ಸಮವೇ, ಎಲ್ಲವೂ ಅನಂತಗಳೇ.

---

1. ಅಗ್ನ್ಯಾದಿತ್ಯರ ಸಹಾಯವಿಲ್ಲದೆ ಭೂಮ್ಯಂತರಿಕ್ಷಗಳ ನಡುವೆ ಯಾವ ಕಾರ್ಯವೂ ಆಗುವದಿಲ್ಲ; ಆದ್ದರಿಂದ ಅವರೇ ಕಾರ್ಯಕ್ಕೆಲ್ಲ ತಾಯಿತಂದೆಗಳು.

2. ಹೀಗೆ ಹುಟ್ಟಿದವನು ಪ್ರಕೃತವಾಗಿರುವ ಪ್ರಾಣನಲ್ಲ, ಚಲನರೂಪನಾದ ವಾಯುವೇ. 3. ಸ್ವತಂತ್ರನು.

4. ನಮ್ಮೊಳಗೆ ಹೇಗೆ ವಾಙ್ಮನಸ್ಸುಗಳು ಕರ್ಮಕ್ಕೆ ಗುಣಭಾವವನ್ನು ಹೊಂದಿರುವವೋ ಅಧಿದೈವವಾಗಿಯೂ ಹಾಗೆಯೇ.

ಯಾವನು ಇವನ್ನು ಅಂತವುಳ್ಳವುಗಳೆಂದು ಉಪಾಸನೆಮಾಡುತ್ತಾನೋ ಆವನು ಅಂತವಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ; ಯಾವನು ಇವನ್ನು ಅನಂತವೆಂದು ಉಪಾಸನೆಮಾಡುತ್ತಾನೋ ಅವನು ಅನಂತವಾದ ಲೋಕವನ್ನು ಗೆದ್ದುಕೊಳ್ಳುತ್ತಾನೆ.

## ಪ್ರಾಣನ ವರ್ಣನೆ

(ಭಾಷ್ಯ)

೨೨೩. ಅಥೈತಸ್ಯ ಪ್ರಕೃತಸ್ಯ ಪ್ರಾಜಾಪತ್ಯಸ್ಯಾನ್ನಸ್ಯ ಪ್ರಾಣಸ್ಯ, ನ ಪ್ರಜೋಕ್ತಸ್ಯ ಅನನ್ತರನಿರ್ದಿಷ್ಟಸ್ಯ, ಆಪಃ ಶರೀರಂ ಕಾರ್ಯಂ ಕರಣಾಧಾರಃ ಪೂರ್ವವತ್। ಜ್ಯೋತೀರೂಪಮ್ ಅಸೌ ಚನ್ದ್ರಃ। ತತ್ರ ಯಾವಾನೇವ ಪ್ರಾಣಃ, ಯಾವತ್ಪರಿಮಾಣೋಽಧ್ಯಾತ್ಮಾದಿಭೇದೇಷು ತಾವದ್ವ್ಯಾಪ್ತಿಮತ್ಯ ಆಪಃ, ತಾವತ್ಪರಿಮಾಣಾಃ। ತಾವಾನ್ ಅಸೌ ಚನ್ದ್ರೋಽಬಾಧೇಯಃ, ತಾಸ್ವಪ್ಸು ಅನುಪ್ರವಿಷ್ಟಃ, ಕರಣಭೂತಃ ಅಧ್ಯಾತ್ಮಮ್ ಅಧಿಭೂತಂ ಚ ತಾವದ್ವ್ಯಾಪ್ತಿಮಾನೇವ ॥

(ಭಾಷ್ಯಾರ್ಥ)

ಇನ್ನು ಈ ಪ್ರಕೃತನಾದ ಪ್ರಜಾಪತಿಯ ಅನ್ನವಾದ ಪ್ರಾಣಕ್ಕೆ- (ಅಗ್ನ್ಯಾದಿತ್ಯರ) ಪ್ರಜೆ ಎಂದು ಹಿಂದಿನ (ವಾಕ್ಯದಲ್ಲಿ) ತಿಳಿಸಿತ್ತಲ್ಲ (ಆ ಪ್ರಾಣ)ಕ್ಕಲ್ಲ[1]- ಅಪ್ಪು ಶರೀರವು, ಕಾರ್ಯವು, ಕರಣಕ್ಕೆ ಆಧಾರವು (ಎಂದು) ಹಿಂದಿನಂತೆ (ವ್ಯಾಖ್ಯಾನಮಾಡಬೇಕು).[2] ಈ ಚಂದ್ರನು ಜ್ಯೋತೀರೂಪವು. ಅಲ್ಲಿ ಪ್ರಾಣವು ಎಷ್ಟೋ, ಅಧ್ಯಾತ್ಮವೇ ಮುಂತಾದ ಭೇದಗಳಲ್ಲಿ[3] ಎಷ್ಟು ಪರಿಮಾಣದ್ದೋ, ಅಪ್ಪು ಅಷ್ಟೇ ವ್ಯಾಪ್ತಿಯುಳ್ಳದ್ದು, ಅಷ್ಟೇ ಪರಿಮಾಣವುಳ್ಳದ್ದು; ಆ ಅಪ್ಪಿನಲ್ಲಿ ಪ್ರವಿಷ್ಟನಾಗಿರುವ ಕರಣಭೂತನಾಗಿರುವ ಚಂದ್ರನು ಅಧ್ಯಾತ್ಮದಲ್ಲಿಯೂ ಅಧಿಭೂತದಲ್ಲಿಯೂ ಅಷ್ಟೇ ವ್ಯಾಪ್ತಿಯುಳ್ಳವನು.

---

1. ಹಿಂದೆ ಹೇಳಿದ್ದು ಮನಸ್ಸಿನ ವಿಭೂತಿಯಾದ ವಾಯು, ಪ್ರಕೃತವಾಗಿರುವ ಪ್ರಾಜಾಪತ್ಯಾನ್ನವಲ್ಲ.

2. ಶರೀರವೆಂದರೆ ಆಧಾರವಾದ ಕಾರ್ಯವೆಂದೂ ಜ್ಯೋತೀರೂಪವೆಂದರೆ ಕರಣವೆಂದೂ ವ್ಯಾಖ್ಯಾನಮಾಡಬೇಕು ಎಂದರ್ಥ. ಇಲ್ಲಿ 'ಪೂರ್ವವತ್' ಎಂಬ ಶಬ್ದವು ಮಧ್ಯಮಣಿನ್ಯಾಯದಿಂದ ಹಿಂದಕ್ಕೂ ಮುಂದಕ್ಕೂ ಅನ್ವಯಿಸುತ್ತದೆ.

3. ಅಧ್ಯಾತ್ಮ, ಅಧಿಭೂತ -ಇವುಗಳಲ್ಲಿ.

## ಅನ್ನತ್ರಯಗಳು ಸಮ, ಅನಂತ —ಎಂದು ಉಪಾಸನೆಮಾಡಬೇಕು

(ಭಾಷ್ಯ)

೨೨೪. ತಾನ್ಯೇತಾನಿ ಪಿತ್ರಾ ಪಾಙ್ಕ್ತೇನ ಕರ್ಮಣಾ ಸೃಷ್ಟಾನಿ ತ್ರೀಣಿ ಅನ್ನಾನಿ ವಾಙ್ಮನಃಪ್ರಾಣಾಖ್ಯಾನಿ। ಅಧ್ಯಾತ್ಮಮ್ ಅಧಿಭೂತಂ ಚ ಜಗತ್ ಸಮಸ್ತಮ್ ಏತೈರ್ವ್ಯಾಪ್ತಮ್, ನೈತೇಭ್ಯೋಽನ್ಯತ್ ಅತಿರಿಕ್ತಂ ಕಿಂಚಿದಸ್ತಿ ಕಾರ್ಯಾತ್ಮಕಂ ಕರಣಾತ್ಮಕಂ ವಾ। ಸಮಸ್ತಾನಿ ತು ಏತಾನಿ ಪ್ರಜಾಪತಿಃ। ತ ಏತೇ ವಾಙ್ಮನಃಪ್ರಾಣಾಃ ಸರ್ವ ಏವ ಸಮಾಃ, ತುಲ್ಯವ್ಯಾಪ್ತಿಮನ್ತಃ,[1] ಯಾವತ್ಪ್ರಾಣಿಗೋಚರಂ ಸಾಧ್ಯಾತ್ಮಾಧಿಭೂತಂ ವ್ಯಾಪ್ಯವ್ಯವಸ್ಥಿತಾಃ। ಅತ ಏವ ಅನನ್ತಾಃ। ಯಾವತ್ಸಂಸಾರಭಾವಿನೋ ಹಿ ತೇ। ಕಾರ್ಯಕರಣಪ್ರತ್ಯಾಖ್ಯಾನೇ ನ ಸಂಸಾರೋಽವಗಮ್ಯತೇ। ಕಾರ್ಯಕರಣಾತ್ಮಕಾ ಹಿ ತೇ ಇತ್ಯುಕ್ತಮ್। ಸ ಯಃ ಕಶ್ಚಿತ್ ಹ ಏತಾನ್ ಪ್ರಜಾಪತೇರಾತ್ಮಭೂತಾನ್ ಅನ್ತವತಃ ಪರಿಚ್ಛಿನ್ನಾನ್ ಅಧ್ಯಾತ್ಮರೂಪೇಣ ವಾ ಅಧಿಭೂತರೂಪೇಣ ವಾ ಉಪಾಸ್ತೇ, ಸ ತದುಪಾಸನಾನುರೂಪಮೇವ ಫಲಮ್ ಅನ್ತವನ್ತಂ ಲೋಕಂ ಜಯತಿ ಪರಿಚ್ಛಿನ್ನ ಏವ ಜಾಯತೇ। ನೈತೇಷಾಮ್ ಆತ್ಮಭೂತೋ ಭವತಿ ಇತ್ಯರ್ಥಃ। ಅಥ ಪುನರ್ಯೋ ಹೈತಾನ್ ಅನನ್ತಾನ್ ಸರ್ವಾತ್ಮಕಾನ್ ಸರ್ವಪ್ರಾಣ್ಯಾತ್ಮಭೂತಾನ್ ಅಪರಿಚ್ಛಿನ್ನಾನ್ ಉಪಾಸ್ತೇ ಸೋಽನನ್ತಮೇವ ಲೋಕಂ ಜಯತಿ ॥

(ಭಾಷ್ಯಾರ್ಥ)

ವಾಙ್ಮನಃಪ್ರಾಣಗಳೆಂಬ ಈ ಮೂರು ಅನ್ನಗಳೂ ತಂದೆಯು ಪಾಙ್ಕ್ತಕರ್ಮದಿಂದ ಸೃಷ್ಟಿಮಾಡಿದವುಗಳಾಗಿವೆ. ಅಧ್ಯಾತ್ಮ, ಅಧಿಭೂತ —ಎಂಬ ಜಗತ್ತೆಲ್ಲವೂ ಇವುಗಳಿಂದ ವ್ಯಾಪ್ತವಾಗಿರುತ್ತದೆ[2] ; ಇವುಗಳಿಗಿಂತ ಬೇರೆಯಾಗಿರುವದು ಕಾರ್ಯಾತ್ಮಕವಾಗಲಿ ಕರಣಾತ್ಮಕವಾಗಲಿ ಮತ್ತೆ ಯಾವದೂ ಇರುವದಿಲ್ಲ. ಇವುಗಳು ಒಟ್ಟುಗೂಡಿದರಾದರೋ ಪ್ರಜಾಪತಿ (ಎನಿಸುತ್ತವೆ).[3] ಆ ಈ ವಾಙ್ಮನಃಪ್ರಾಣಗಳು ಎಲ್ಲವೂ ಸಮ, ಸಮಾನವಾದ ವ್ಯಾಪ್ತಿಯುಳ್ಳವು, ಪ್ರಾಣಿಗಳ ವಿಷಯವನ್ನೆಲ್ಲ, ಅಧ್ಯಾತ್ಮಾಧಿಭೂತಗಳೊಡನೆ ವ್ಯಾಪಿಸಿಕೊಂಡು ಇರುತ್ತವೆ. ಆದ್ದರಿಂದಲೇ ಅನಂತವಾಗಿರುತ್ತವೆ; ಏಕೆಂದರೆ ಇವು ಸಂಸಾರ

1. 'ತುಲ್ಯಾಃ ವ್ಯಾಪ್ತಿಮನ್ತಃ' ಎಂಬುದಕ್ಕಿಂತ ಈ ಪಾಠವೇ ಮೇಲು.

2. ಅಧಿದೈವರೂಪವಾಗಿರುವ ಈ ಅನ್ನಗಳೇ ಅಧ್ಯಾತ್ಮಾಧಿಭೂತರೂಪದ ಜಗತ್ತೆಲ್ಲವನ್ನೂ ವ್ಯಾಪಿಸಿವೆ.

3. ಇವುಗಳ ಒಟ್ಟೇ ಪ್ರಜಾಪತಿಯ ಉಪಾಧಿಯು.

ವಿರುವವರೆಗೂ ಇದ್ದುಕೊಂಡಿರುತ್ತವೆ.[1] ಕಾರ್ಯಕರಣಗಳನ್ನು ಬಿಟ್ಟರೆ ಸಂಸಾರವೇ ತಿಳಿಯಬರುವದಿಲ್ಲ; ಇವು ಕಾರ್ಯಕರಣಾತ್ಮಕವಾಗಿವೆ ಎಂದಲ್ಲವೆ, ಹಿಂದೆ ಹೇಳಿರುವದು ?

ಯಾವನು ಪ್ರಜಾಪತಿಯ ಸ್ವರೂಪಭೂತವಾಗಿರುವ ಈ (ಅನ್ನಗಳನ್ನು) ಅಂತವುಳ್ಳವೆಂದು ಪರಿಚ್ಛಿನ್ನವೆಂದು ಅಧ್ಯಾತ್ಮರೂಪದಿಂದಲೋ ಅಧಿಭೂತರೂಪ ದಿಂದಲೋ ಉಪಾಸನೆಮಾಡುತ್ತಾನೋ ಅವನು ಆ ಉಪಾಸನೆಗೆ ಅನುರೂಪ ವಾಗಿಯೇ ಫಲವನ್ನು, ಅಂತವುಳ್ಳ ಲೋಕವನ್ನು ಗೆದ್ದುಕೊಳ್ಳುತ್ತಾನೆ, ಪರಿಚ್ಛಿನ್ನ ನಾಗಿಯೇ ಹುಟ್ಟುತ್ತಾನೆ, ಇವುಗಳಲ್ಲಿ ಒಂದಾಗುವದಿಲ್ಲ ಎಂದರ್ಥ. ಇನ್ನು ಯಾವನಾದರೆ ಇವುಗಳನ್ನು ಅನಂತಗಳೆಂದು, ಸರ್ವಾತ್ಮಕಗಳೆಂದು, ಎಲ್ಲಾ ಪ್ರಾಣಿಗಳಿಗೂ ಆತ್ಮವೇ ಆಗಿರುವವೆಂದು, ಪರಿಚ್ಛೇದವಿಲ್ಲದವೆಂದು, ಉಪಾಸನೆ ಮಾಡುತ್ತಾನೋ, ಅವನು ಅನಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ.

## ಪ್ರಜಾಪತಿಯಲ್ಲಿ ಪಾಙ್ಕ್ತತ್ವ

( ಉಪನಿಷತ್ತು )

**ಸ ಏಷ ಸಂವತ್ಸರಃ ಪ್ರಜಾಪತಿಃ ಷೋಡಶಕಲಸ್ತಸ್ಯ ರಾತ್ರಯ ಏವ ಪಞ್ಚದಶಕಲಾ ಧ್ರುವೈವಾಸ್ಯ ಷೋಡಶೀ ಕಲಾ ಸ ರಾತ್ರಿಭಿ ರೇವಾಽಽ ಚ ಪೂರ್ಯತೇಽಪ ಚ ಕ್ಷೀಯತೇ ಸೋಽಮಾವಾ ಸ್ಯಾಗ್ಂ ರಾತ್ರಿಮೇತಯಾ ಷೋಡಶ್ಯಾ ಕಲಯಾ ಸರ್ವಮಿದಂ ಪ್ರಾಣಭೃದನುಪ್ರವಿಶ್ಯ ತತಃ ಪ್ರಾತರ್ಜಾಯತೇ ತಸ್ಮಾದೇತಾ ಗ್ಂ ರಾತ್ರಿಂ ಪ್ರಾಣಭೃತಃ ಪ್ರಾಣಂ ನ ವಿಚ್ಛಿನ್ದ್ಯಾದಪಿ ಕೃಕಲಾಸ ಸ್ಯೈತಸ್ಯಾ ಏವ ದೇವತಾಯಾ ಅಪಚಿತ್ಯೈ ॥ ೧೪ ॥**

೧೪. ಆ ಈ ಸಂವತ್ಸರನೆಂಬ ಪ್ರಜಾಪತಿಯು ಹದಿನಾರು ಕಲೆಗಳುಳ್ಳವನು. ಅವನಿಗೆ ರಾತ್ರಿಗಳೇ ಹದಿನೈದು ಕಲೆಗಳು ; ಇವನ ಹದಿನಾರನೆಯ ಕಲೆಯು ಧ್ರುವವಾಗಿಯೇ ಇರುತ್ತದೆ. ಅವನು ರಾತ್ರಿಗಳಿಂದಲೇ ತುಂಬಿಕೊಳ್ಳುತ್ತಾನೆ, ಮತ್ತು ಅಪಕ್ಷಯವಾಗು ತ್ತಾನೆ. ಅವನು ಅಮಾವಾಸ್ಯೆಯ ರಾತ್ರೆ ಈ ಹದಿನಾರನೆಯ ಕಲೆ ಯಿಂದ ಈ ಎಲ್ಲಾ ಪ್ರಾಣಭೃತರನ್ನೂ ಒಳಹೊಕ್ಕು ಆ (ಮಾರನೆಯ) ಬೆಳಗ್ಗೆ ಹುಟ್ಟುತ್ತಾನೆ. ಆದ್ದರಿಂದ ಈ ರಾತ್ರಿಯಲ್ಲಿ ಪ್ರಾಣಿಯ

1. ಕಾರ್ಯಕರಣಗಳ ಸಂಯೋಗವೇ ಜೀವರಿಗೆ ಸಂಸಾರವು, ಅವುಗಳ ಆತ್ಯಂತಿಕ ವಿಯೋಗವೇ ಮೋಕ್ಷವು.

ಪ್ರಾಣವನ್ನು ತೆಗೆಯಬಾರದು, ಓತಿಕೇತನ (ಪ್ರಾಣವನ್ನು) ಕೂಡ ತೆಗೆಯಬಾರದು, ಇದು ಇದೇ ದೇವತೆಯ ಅಪಚಿತಿಗಾಗಿ (ಹೇಳಿದ್ದು).

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೨೫. ಪಿತಾ ಪಾಙ್ಕ್ತೇನ ಕರ್ಮಣಾ ಸಪ್ತಾನ್ನಾನಿ ಸೃಷ್ಟ್ವಾ ತ್ರೀಣಿ ಅನ್ನಾನಿ ಆತ್ಮಾರ್ಥಮ್ ಅಕರೋತ್ ಇತ್ಯುಕ್ತಮ್। ತಾನ್ಯೇತಾನಿ ಪಾಙ್ಕ್ತ ಕರ್ಮಫಲಭೂತಾನಿ ವ್ಯಾಖ್ಯಾತಾನಿ। ತತ್ರ ಕಥಂ ಪುನಃ ಪಾಙ್ಕ್ತಸ್ಯ ಕರ್ಮಣಃ ಫಲಮೇತಾನೀತಿ? ಉಚ್ಯತೇ, ಯಸ್ಮಾತ್ ತೇಷ್ವಪಿ ತ್ರಿಷು ಅನ್ನೇಷು ಪಾಙ್ಕ್ತತಾ ಅವಗಮ್ಯತೇ। ವಿತ್ತಕರ್ಮಣೋರಪಿ ತತ್ರ ಸಂಭವಾತ್। ತತ್ರ ಪೃಥಿವ್ಯಗ್ನೀ ಮಾತಾ, ದಿವಾದಿತ್ಯೌ ಪಿತಾ। ಯೋಽಯಮನಯೋರನ್ತರಾ ಪ್ರಾಣಃ ಸ ಪ್ರಜಾ ಇತಿ ವ್ಯಾಖ್ಯಾತಮ್। ತತ್ರ ವಿತ್ತಕರ್ಮಣೀ ಸಂಭಾವಯಿತವ್ಯೇ ಇತ್ಯಾರಮ್ಭಃ ॥

(ಭಾಷ್ಯಾರ್ಥ)

ತಂದೆಯು ಪಾಙ್ಕ್ತಕರ್ಮದಿಂದ ಸಪ್ತಾನ್ನಗಳನ್ನು ಸೃಜಿಸಿ ಮೂರು ಅನ್ನಗಳನ್ನು ತನಗಾಗಿ ಮಾಡಿಕೊಂಡನು ಎಂದು ಹೇಳಿದ್ದಾಯಿತು. ಆ ಈ (ಮೂರು ಅನ್ನಗಳನ್ನು) ಪಾಙ್ಕ್ತಕರ್ಮದ ಫಲವಾಗಿರುವವೆಂದು ವಿವರಿಸಿದ್ದಾಯಿತು. ಇಲ್ಲಿ ಇವು ಪಾಙ್ಕ್ತಕರ್ಮದ ಫಲವೆಂಬುದು ಹೇಗೆ? ಎಂದರೆ ಹೇಳುತ್ತೇವೆ. ಏಕೆಂದರೆ ಆ ಮೂರನ್ನಗಳಲ್ಲಿಯೂ ಪಾಙ್ಕ್ತತ್ವವು ತೋರಿಬರುತ್ತಿದೆ; ಏಕೆಂದರೆ ವಿತ್ತಕರ್ಮಗಳನ್ನು ಅಲ್ಲಿ ಸಂಭಾವನೆಯಿಂದ (ತೋರಿಸಬಹುದಾಗಿದೆ). ಇವುಗಳಲ್ಲಿ ಪೃಥಿವ್ಯಗ್ನಿಗಳು ತಾಯಿ, ದಿವಾದಿತ್ಯರು ತಂದೆ; ಇವುಗಳ ನಡುವೆಯಿದೆಯಲ್ಲ, ಆ ಪ್ರಾಣವು ಪ್ರಜೆ- ಎಂಬುದನ್ನು ವಿವರಿಸಿದ್ದಾಗಿದೆ. ಇಲ್ಲಿ ವಿತ್ತಕರ್ಮಗಳನ್ನು ಸಂಭಾವನೆಯಿಂದ (ತೋರಿಸ)ಬೇಕಾಗಿದೆಯಾದ್ದರಿಂದ (ಮುಂದಿನ ಗ್ರಂಥವನ್ನು) ಆರಂಭಿಸಿರುತ್ತದೆ.[1]

## ಪ್ರಜಾಪತಿಗಳಿಗೆ ಕಲಾನಿಮಿತ್ತವೃದ್ಧಿಕ್ಷಯಗಳು

(ಭಾಷ್ಯ)

೨೨೬. ಸ ಏಷ ಸಂವತ್ಸರಃ। ಯೋಽಯಂ ತ್ರ್ಯನ್ನಾತ್ಮಾ ಪ್ರಜಾಪತಿಃ ಪ್ರಕೃತಃ ಸ ಏಷ ಸಂವತ್ಸರಾತ್ಮನಾ ವಿಶೇಷತೋ ನಿರ್ದಿಶ್ಯತೇ। ಷೋಡಶಕಲಃ।

1. ತಾನು, ಹೆಂಡತಿ, ಮಗ, ವಿತ್ತ, ಕರ್ಮ- ಎಂಬಿವೇ ಪಾಙ್ಕ್ತ. ಮೊದಲನೆಯ ಮೂರನ್ನು ಆಗಲೇ ಹೇಳಿದ್ದಾಗಿದೆ; ಮಿಕ್ಕೆರಡನ್ನೂ ಇವುಗಳಲ್ಲಿ ಕಲ್ಪಿಸಬಹುದಾಗಿದೆ. ಆದ್ದರಿಂದ ಇವು ಪಾಙ್ಕ್ತಕರ್ಮದ ಕಾರ್ಯ.

ಷೋಡಶ ಕಲಾಃ ಅವಯವಾಃ ಅಸ್ಯ ಸೋಽಯಂ ಷೋಡಶಕಲಃ ಸಂವತ್ಸರಃ, ಸಂವತ್ಸರಾತ್ಮಾ ಕಾಲರೂಪಃ। ತಸ್ಯ ಚ ಕಾಲಾತ್ಮನಃ ಪ್ರಜಾಪತೇಃ ರಾತ್ರಯ ಏವ ಅಹೋರಾತ್ರಾಣಿ ತಿಥಯ ಇತ್ಯರ್ಥಃ। ಪಞ್ಚದಶಕಲಾಃ। ಧ್ರುವೈವ ನಿತ್ಯೈವ ವ್ಯವಸ್ಥಿತಾ ಅಸ್ಯ ಪ್ರಜಾಪತೇಃ ಷೋಡಶೀ ಷೋಡಶಾನಾಂ ಪೂರಣೀ ಕಲಾ। ಸಃ ರಾತ್ರಿಭಿರೇವ ತಿಥಿಭಿಃ ಕಲೋಕ್ತಾಭಿಃ ಆಪೂರ್ಯತೇ ಚ ಅಪ ಕ್ಷೀಯತೇ ಚ। ಪ್ರತಿಪದಾದ್ಯಾಭಿರ್ಹಿ ಚನ್ದ್ರಮಾಃ ಪ್ರಜಾಪತಿಃ ಶುಕ್ಲಪಕ್ಷೇ ಆಪೂರ್ಯತೇ, ಕಲಾಭಿರುಪಚೀಯಮಾನಾಭಿರ್ವರ್ಧತೇ ಯಾವತ್ಸಂಪೂರ್ಣ ಮಣ್ಡಲಃ ಪೌರ್ಣಮಾಸ್ಯಾಮ್। ತಾಭಿರೇವ ಅಪಚೀಯಮಾನಾಭಿಃ ಕಲಾಭಿಃ ಅಪಕ್ಷೀಯತೇ ಕೃಷ್ಣಪಕ್ಷೇ, ಯಾವತ್ ಧ್ರುವಾ ಏಕಾ ಕಲಾ ವ್ಯವಸ್ಥಿತಾ ಅಮಾವಾಸ್ಯಾಯಾಮ್। ಸ ಪ್ರಜಾಪತಿಃ ಕಾಲಾತ್ಮಾ ಅಮಾವಾಸ್ಯಾಮ್ ಅಮಾವಾಸ್ಯಾಯಾಂ ರಾತ್ರಿಂ ರಾತ್ರೌ ಯಾ ವ್ಯವಸ್ಥಿತಾ ಧ್ರುವಾ ಕಲಾ ಉಕ್ತಾ ಏತಯಾ ಷೋಡಶ್ಯಾ ಕಲಯಾ ಸರ್ವಮಿದಂ ಪ್ರಾಣಭೃತ್ ಪ್ರಾಣಿಜಾತಮ್ ಅನುಪ್ರವಿಶ್ಯ ಯದ್ ಅಪಃ ಪಿಬತಿ ಯಚ್ಚ ಓಷಧೀರಶ್ನಾತಿ ತತ್ಸರ್ವಮೇವ ಓಷಧ್ಯಾತ್ಮನಾ ಸರ್ವಂ ವ್ಯಾಪ್ಯ ಅಮಾವಾಸ್ಯಾಂ ರಾತ್ರಿಮ್ ಅವಸ್ಥಾಯ ತತೋಽಪರೇದ್ಯುಃ ಪ್ರಾತರ್ಜಾಯತೇ ದ್ವಿತೀಯಯಾ ಕಲಯಾ ಸಂಯುಕ್ತಃ ॥

(ಭಾಷ್ಯಾರ್ಥ)

ಆ ಈ ಸಂವತ್ಸರನು. ತ್ರ್ಯನ್ನಾತ್ಮನಾದ ಪ್ರಕೃತಪ್ರಜಾಪತಿಯಿರುವ ನಲ್ಲ, ಅವನನ್ನೇ ಸಂವತ್ಸರರೂಪದಿಂದ ವಿಶೇಷವಾಗಿ (ಇಲ್ಲಿ) ತಿಳಿಸಿರುತ್ತದೆ. (ಈ ಪ್ರಜಾಪತಿಯು) ಹದಿನಾರು ಕಲೆಗಳುಳ್ಳವನು; ಹದಿನಾರು ಕಲೆಗಳು ಎಂದರೆ ಅವಯವಗಳು ಇವನಿಗೆ ಇರುವದರಿಂದ ಇವನನ್ನು ಷೋಡಶಕಲ ನೆಂದಿದೆ. ಸಂವತ್ಸರನು ಎಂದರೆ, ಸಂವತ್ಸರರೂಪನು, ಕಾಲರೂಪನು.[1] ಆ ಕಾಲಾತ್ಮನಾದ ಪ್ರಜಾಪತಿಗೆ ರಾತ್ರೆಗಳೇ, ಅಹೋರಾತ್ರೆಗಳು, ತಿಥಿಗಳು ಎಂದರ್ಥ; (ಅವೇ) ಹದಿನೈದು ಕಲೆಗಳು. ಈ ಪ್ರಜಾಪತಿಗೆ ಹದಿನಾರನೆಯು, ಹದಿನಾರನ್ನು ಪೂರಣಮಾಡುವ ಕಲೆಯು ಧ್ರುವವಾಗಿಯೇ (ಇದೆ), ನಿತ್ಯ ವಾಗಿಯೇ ಇದ್ದುಕೊಂಡಿರುತ್ತದೆ. (ಅವನು) ರಾತ್ರೆಗಳಿಂದಲೇ ಎಂದರೆ ಕಲೆ ಗಳೆಂದು ಕರೆದಿರುವ ತಿಥಿಗಳಿಂದಲೇ ತುಂಬಿಕೊಳ್ಳುತ್ತಾನೆ, ಮತ್ತು ಅಪಕ್ಷಯ ವಾಗುತ್ತಾನೆ. ಪ್ರತಿಪತ್ತು ಮುಂತಾದವುಗಳಿಂದಲೇ ಅಲ್ಲವೆ, (ಚಂದ್ರ)ರೂಪ ಪ್ರಜಾಪತಿಯು ಶುಕ್ಲಪಕ್ಷವಲ್ಲಿ ತುಂಬಿಕೊಳ್ಳುತ್ತಾನೆ, (ಅವು) ಹೆಚ್ಚುವದ ರಿಂದ, ಹುಣ್ಣಿಮೆಯಲ್ಲಿ ಸಂಪೂರ್ಣಮಂಡಲವಾಗುವವರೆಗೂ ಬೆಳೆಯುತ್ತಿರು

1. ಸಂವತ್ಸರ ಎಂಬ ಹೆಸರು ಕಾಲವನ್ನು ಸೂಚಿಸುತ್ತದೆ; ಕೇವಲ ವರ್ಷ ಎಂಬರ್ಥವಿಲ್ಲ.

ತ್ತಾನೆ; ಅದೇ (ಕಲೆಗಳು) ಕಡಿಮೆಯಾದರೆ ಕೃಷ್ಣಪಕ್ಷದಲ್ಲಿ ಧ್ರುವವಾದ ಒಂದು ಕಲೆ ನಿಂತುಕೊಳ್ಳುವವರೆಗೂ ಅಪಕ್ಷಯವಾಗುತ್ತಾನೆ?

ಆ ಕಾಲಾತ್ಮನಾದ ಪ್ರಜಾಪತಿಯು ಅಮಾವಾಸ್ಯೆ ಅಮಾವಾಸ್ಯೆಯಲ್ಲಿ, ರಾತ್ರೆ ರಾತ್ರೆಯಲ್ಲಿ, ನಿಂತಿರುವ ಧ್ರುವಕಲೆಯೆಂದು (ಮೇಲೆ) ಹೇಳಿತಲ್ಲ, ಈ ಹದಿನಾರನೆಯ ಕಲೆಯಿಂದ ಈ ಪ್ರಾಣಭೃತರನ್ನೆಲ್ಲ ಪ್ರಾಣಿಸಮೂಹವನ್ನೆಲ್ಲ ಒಳಹೊಕ್ಕು (ಪ್ರಾಣಿಯು) ಕುಡಿಯುವ ನೀರು, ತಿನ್ನುವ ಸಸ್ಯಗಳು- ಅವೆಲ್ಲವನ್ನೂ ಸಸ್ಯರೂಪದಿಂದ[1] ವ್ಯಾಪಿಸಿಕೊಂಡು, ಅಮಾವಾಸ್ಯೆಯ ರಾತ್ರೆ ಇದ್ದು ಆ ಮಾರನೆಯ ದಿನ ಬೆಳಗ್ಗೆ ಎರಡನೆಯ ಕಲೆಯಿಂದೊಡಗೂಡಿ ಹುಟ್ಟುತ್ತಾನೆ.

## ಪ್ರಜಾಪತಿಯು ಪಾಙ್ಕ್ತಾತ್ಮಕನೆಂಬುದು ಹೇಗೆ?

(ಭಾಷ್ಯ)

೨೨೭. ಏವಂ ಪಾಙ್ಕ್ತಾತ್ಮಕೋಽಸೌ ಪ್ರಜಾಪತಿಃ। ದಿವಾದಿತ್ಯೌ ಮನಃ ಪಿತಾ। ಪೃಥಿವ್ಯಗ್ನೀ ವಾಗ್ ಜಾಯಾ ಮಾತಾ। ತಯೋಶ್ಚ ಪ್ರಾಣಃ ಪ್ರಜಾ। ಚಾನ್ದ್ರಮಸ್ಯಸ್ತಿಥಯಃ ಕಲಾ ವಿತ್ತಮ್। ಉಪಚಯಾಪಚಯಧರ್ಮಿತ್ವಾತ್ ವಿತ್ತವತ್। ತಾಸಾಂ ಚ ಕಲಾನಾಂ ಕಾಲಾವಯವಾನಾಂ ಜಗತ್ಪರಿಣಾಮಹೇತುತ್ವಂ ಕರ್ಮ। ಏವಮೇಷ ಕೃತ್ಸ್ನಃ ಪ್ರಜಾಪತಿಃ 'ಜಾಯಾ ಮೇ ಸ್ಯಾದಥ ಪ್ರಜಾಯೇಯ, ಅಥ ವಿತ್ತಂ ಮೇ ಸ್ಯಾದಥ ಕರ್ಮ ಕುರ್ವೀಯ'- ಇತ್ಯೇಷಣಾನುರೂಪ ಏವ ಪಾಙ್ಕ್ತಸ್ಯ ಕರ್ಮಣಃ ಫಲಭೂತಃ ಸಂವೃತ್ತಃ। ಕಾರಣಾನುವಿಧಾಯಿ ಹಿ ಕಾರ್ಯಮ್ ಇತಿ ಲೋಕೇಽಪಿ ಸ್ಥಿತಿಃ ॥

(ಭಾಷ್ಯಾರ್ಥ)

ಹೀಗೆ ಈ ಪ್ರಜಾಪತಿಯು ಪಾಙ್ಕ್ತಸ್ವರೂಪನಾಗಿರುತ್ತಾನೆ. ದ್ಯುಲೋಕಾದಿತ್ಯರ (ರೂಪದ) ಮನಸ್ಸು ತಂದೆ, ಪೃಥಿವ್ಯಗ್ನಿ (ರೂಪದ) ವಾಕ್ಕು ಹೆಂಡತಿ, ತಾಯಿ; ಅವರಿಬ್ಬರಿಗೂ ಪ್ರಾಣವು ಪ್ರಜೆ. ಚಂದ್ರನ ತಿಥಿಗಳೆಂಬ ಕಲೆಗಳು ವಿತ್ತವು; ಏಕೆಂದರೆ (ಅವು) ವಿತ್ತದಂತೆ ಹೆಚ್ಚುವ ಕುಂದುವ ಧರ್ಮವುಳ್ಳವಾಗಿರುತ್ತವೆ. ಆ ಕಾಲಾವಯವವಾದ ಕಲೆಗಳು ಜಗತ್ಪರಿಣಾಮಕ್ಕೆ ಕಾರಣವಾಗಿರುವದೇ **ಕರ್ಮ.** ಹೀಗೆ ಪೂರ್ಣನಾದ ಈ ಪ್ರಜಾಪತಿಯು, 'ನನಗೆ ಹೆಂಡತಿಯಾಗಬೇಕು, ಇನ್ನು ಹುಟ್ಟುವೆನು', 'ನನಗೆ ವಿತ್ತವಾಗಬೇಕು, ಇನ್ನು ಕರ್ಮವನ್ನು ಮಾಡುವೆನು' (೧-೪-೧೭) ಎಂಬ ಏಷಣೆಗೆ ಅನುರೂಪವಾಗಿಯೇ ಪಾಙ್ಕ್ತ

---

1. ಜಲರೂಪದಿಂದಲೂ ಎಂದು ಸೇರಿಸಿಕೊಳ್ಳಬೇಕು. ಆ॥ ಗಿ॥

ಕರ್ಮಕ್ಕೆ ಫಲವಾಗಿ ಉಂಟಾಗಿರುತ್ತಾನೆ. ಕಾರಣಕ್ಕೆ ಅನುಗುಣವಾಗಿ ಕಾರ್ಯವು ಎಂದಲ್ಲವೆ, ಲೋಕದಲ್ಲಿಯೂ ಇರತಕ್ಕದ್ದು[1] ?

## ಅಮಾವಾಸ್ಯೆಯ ರಾತ್ರೆ ಹಿಂಸೆಮಾಡಬಾರದೆಂಬ ವಿಶೇಷವಿಧಿ

(ಭಾಷ್ಯ)

೨೨೮. ಯಸ್ಮಾತ್ ಏಷ ಚನ್ದ್ರಃ ಏತಾಂ ರಾತ್ರಿಂ ಸರ್ವಪ್ರಾಣಿಜಾತಮ್ ಅನುಪ್ರವಿಷ್ಟೋ ಧ್ರುವಯಾ ಕಲಯಾ ವರ್ತತೇ, ತಸ್ಮಾತ್ ಹೇತೋಃ ಏತಾಮ್ ಅಮಾವಾಸ್ಯಾಂ ರಾತ್ರಿಂ ಪ್ರಾಣಭೃತಃ ಪ್ರಾಣಿನಃ ಪ್ರಾಣಂ ನ ವಿಚ್ಛಿನ್ದ್ಯಾತ್ ಪ್ರಾಣಿನಂ ನ ಪ್ರಮಾಪಯೇತ್ ಇತ್ಯೇತತ್ । ಅಪಿ ಕೃಕಲಾಸಸ್ಯ । ಕೃಕಲಾಸೋ ಹಿ ಪಾಪಾತ್ಮಾ ಸ್ವಭಾವೇನೈವ ಹಿಂಸ್ಯತೇ ಪ್ರಾಣಿಭಿಃ, ದೃಷ್ಟೋಽಸ್ಯಮಙ್ಗಲ ಇತಿ ಕೃತ್ವಾ। ನನು ಪ್ರತಿಷಿದ್ಧೈವ ಪ್ರಾಣಿಹಿಂಸಾ 'ನ ಹಿಂಸ್ಯಾತ್ ಸರ್ವಾ ಭೂತಾನ್ಯನ್ಯತ್ರ ತೀರ್ಥೇಭ್ಯಃ" (?)[2] ಇತಿ। ಬಾಢಂ ಪ್ರತಿಷಿದ್ಧಾ। ತಥಾಪಿ ನಾಮಾವಾಸ್ಯಾಯಾ ಅನ್ಯತ್ರ ಪ್ರತಿಪ್ರಸವಾರ್ಥಂ ವಚನಮ್, ಹಿಂಸಾಯಾಃ ಕೃಕಲಾಸ ವಿಷಯೇ ವಾ, ಕಿಂ ತರ್ಹಿ ಏತಸ್ಯಾಃ ಸೋಮದೇವತಾಯಾ ಅಪಚಿತ್ಯೈ ಪೂಜಾರ್ಥಮ್ ॥

(ಭಾಷ್ಯಾರ್ಥ)

(ಹೀಗೆ) ಈ ಚಂದ್ರನು ಈ ರಾತ್ರೆ ಎಲ್ಲಾ ಪ್ರಾಣಿಗಳಲ್ಲಿಯೂ ಒಳಹೊಕ್ಕು ಧ್ರುವಕಲೆಯಿಂದೊಡಗೂಡಿರುತ್ತಾನಷ್ಟೆ, ಈ ಕಾರಣದಿಂದ ಈ ಅಮಾವಾಸ್ಯೆಯ ರಾತ್ರೆ ಪ್ರಾಣಭೃತ್ತಿನ ಪ್ರಾಣಿಯ ಪ್ರಾಣವನ್ನು ತೆಗೆಯಬಾರದು, ಪ್ರಾಣಿಯನ್ನು ಕೊಲ್ಲಬಾರದು ಎಂದು ಅಭಿಪ್ರಾಯ. ಓತಿಕೇತನ (ಪ್ರಾಣವನ್ನು) ಕೂಡ (ತೆಗೆಯಬಾರದು). ಓತಿಕೇತನು ಸ್ವಭಾವದಿಂದಲೇ ಪಾಪಾತ್ಮವಾಗಿರುತ್ತದೆ; ಜನರು ಅದನ್ನು ಕಂಡಮಾತ್ರದಿಂದ ಅಮಂಗಲವಾಯಿತೆಂದು (ಅದನ್ನು) ಹಿಂಸಿಸುತ್ತಾರೆ. ಅಲ್ಲವೆ[3] ?

(ಆಕ್ಷೇಪ) :- 'ತೀರ್ಥಗಳನ್ನು ಹೊರತು[4] ಮಿಕ್ಕ ಯಾವ ಪ್ರಾಣಿಗಳನ್ನೂ ಕೊಲ್ಲಬಾರದು' (?) ಎಂದು ಪ್ರಾಣಿಹಿಂಸೆಯನ್ನು ಪ್ರತಿಷೇಧಿಸಿಯೇ ಇರುತ್ತದೆಯಲ್ಲ !

1. ಆದ್ದರಿಂದ ಪಾಙ್ಕ್ತಕರ್ಮದಿಂದ ಪಾಙ್ಕ್ತಫಲವುಂಟಾಗುವದು ಸ್ವಾಭಾವಿಕ ವಾಗಿದೆ ಎಂದು ಭಾವ.

2. ಇದು ಎಲ್ಲಿಯ ವಾಕ್ಯವೋ ತಿಳಿಯಲಿಲ್ಲ. ಛಾಂ. ೮-೧೫-೧ನ್ನು ನೋಡಿ.

3. ಇಂಥ ಪ್ರಾಣಿಯಾದರೂ ಕೂಡ ಅದನ್ನು ಹಿಂಸಿಸಬಾರದು ಎಂದು ಭಾವ.

4. ಶಾಸ್ತ್ರದಲ್ಲಿ ಒಪ್ಪಿರುವ ಸ್ಥಳದಲ್ಲಿ ಮಾಡುವ ಹಿಂಸೆಯನ್ನು ಬಿಟ್ಟು.

(ಪರಿಹಾರ) :- ನಿಜ, ಪ್ರತಿಷೇಧಿಸಿದೆ. ಆದರೂ ಅಮಾವಾಸ್ಯೆಯಲ್ಲಿ ಮತ್ತೊಂದನ್ನು (ಹಿಂಸಿಸಬಹುದೆಂದು) ಪ್ರತಿಪ್ರಸವವನ್ನು[1] (ಹೇಳುವದಕ್ಕಾಗಿ) ಯಾಗಲಿ, ಓತಿಕೇತವನ್ನು ಹಿಂಸಿಸ(ಬಹುದೆಂದು, ಅದರ ವಿಷಯ)ದಲ್ಲಿ (ಹೇಳು ವದಕ್ಕಾಗಲಿ ಈ) ವಚನವು (ಬಂದಿಲ್ಲ), ಮತ್ತೇನೆಂದರೆ ಈ ಸೋಮದೇವತೆಯು ಅಪಚಿತಿಗಾಗಿ, ಪೂಜೆಗಾಗಿ (ಬಂದಿರುತ್ತದೆ).[2]

## ಉಪಾಸಕರೂಪಪ್ರಜಾಪತಿಗೆ ವಿತ್ತಕರ್ಮಗಳು

(ಉಪನಿಷತ್ತು)

**ಯೋ ವೈ ಸ ಸಂವತ್ಸರಃ ಪ್ರಜಾಪತಿಃ ಷೋಡಶಕಲೋಽಯ ಮೇವ ಸ ಯೋಽಯಮೇವಂವಿತ್ ಪುರುಷಸ್ತಸ್ಯ ವಿತ್ತಮೇವ ಪಞ್ಚದಶಕಲಾ ಆತ್ಮೈವಾಸ್ಯ ಷೋಡಶೀ ಕಲಾ ಸ ವಿತ್ತೇನೈವಾ ಽಽ ಚ ಪೂರ್ಯತೇಽಪ ಚ ಕ್ಷೀಯತೇ ತದೇತನ್ನಭ್ಯಂ ಯದ ಯಮಾತ್ಮಾ ಪ್ರಧಿರ್ವಿತ್ತಂ ತಸ್ಮಾದ್ಯದ್ಯಪಿ ಸರ್ವಜ್ಯಾನಿಂ ಜೀಯತ ಆತ್ಮನಾ ಚೇಜ್ಜೀವತಿ ಪ್ರಧಿನಾಽಗಾದಿತ್ಯೇವಾಹುಃ ॥೧೫**

೧೫. ಷೋಡಶಕಲನಾದ ಸಂವತ್ಸರನೆಂಬ ಆ ಪ್ರಜಾಪತಿ ಯಿರುವನಲ್ಲ, ಹೀಗೆಂದು ಉಪಾಸನೆಮಾಡುವ ಈ ಪುರುಷನೇ ಅವನು. ಅವನಿಗೆ ವಿತ್ತವೇ ಹದಿನೈದು ಕಲೆಗಳು, ಆತ್ಮನೇ ಇವನಿಗೆ ಹದಿನಾರ ನೆಯ ಕಲೆಯು. ಅವನು ವಿತ್ತದಿಂದಲೇ ತುಂಬಿಕೊಳ್ಳುತ್ತಾನೆ ಮತ್ತು ಅಪಕ್ಷಯವೂ ಆಗುತ್ತಾನೆ. ಈ ಆತ್ಮವಿದೆಯಲ್ಲ, ಇದೇ ನಭ್ಯವು, ವಿತ್ತವೇ ಪ್ರಧಿಯು. ಆದ್ದರಿಂದ ಸರ್ವವನ್ನೂ ಸೋತು (ಕಳೆದುಕೊಂಡರೂ) ತಾನೊಬ್ಬನು ಬದುಕಿರುವನಾದರೆ, ಪ್ರಧಿಯು ಹೋಯಿತು ಎಂದೇ ಎನ್ನುವರು.

## ಪುರುಷನು ಪ್ರಜಾಪತಿ ಎಂಬುದು ಹೇಗೆ?

(ಭಾಷ್ಯ)

೨೫. ಯೋ ವೈ ಪರೋಕ್ಷಾಭಿಹಿತಃ ಸಂವತ್ಸರಃ ಪ್ರಜಾಪತಿಃ **ಷೋಡಶಕಲಃ** ಸ ನೈವಾತ್ಯನ್ತಂ ಪರೋಕ್ಷೋ ಮನ್ತವ್ಯಃ। ಯಸ್ಮಾತ್

1. ನಿಷೇಧವನ್ನು ಬಾಧಿಸುವ ವಿಧಿಯು ಪ್ರತಿಪ್ರಸವವು.

2. ದೇವತೆಯ ಗೌರವಕ್ಕಾಗಿ, ಹಿಂಸೆಯನ್ನು ಮಾಡಬಾರದು ಎಂದಿದೆಯೇ ಹೊರತು ಅಮಾವಾಸ್ಯೆಯನ್ನು ಬಿಟ್ಟು ಮಿಕ್ಕ ದಿನಗಳಲ್ಲಿ ಹಿಂಸಿಸಬಹುದು, ಅಥವಾ ಓತಿಕೇತ ನನ್ನು ಹಿಂಸಿಸತಕ್ಕದ್ದೇ ಎಂದು ಹೇಳುವದಕ್ಕೆ ವಚನವು ಬಂದಿಲ್ಲ.

ಅಯಮೇವ ಸ ಪ್ರತ್ಯಕ್ಷ ಉಪಲಭ್ಯತೇ। ಕೋಽಸೌ? ಅಯಂ ಯೋ ಯಥೋಕ್ತಂ ತ್ರ್ಯನ್ನಾತ್ಮಕಂ ಪ್ರಜಾಪತಿಮ್ ಆತ್ಮಭೂತಂ ವೇತ್ತಿ ಸ ಏವಂ ವಿತ್ ಪುರುಷಃ। ಕೇನ ಸಾಮಾನ್ಯೇನ ಪ್ರಜಾಪತಿರಿತಿ? ತದುಚ್ಯತೇ। ತಸ್ಯ ಏವಂವಿದಃ ಪುರುಷಸ್ಯ ಗವಾದಿವಿತ್ತಮೇವ ಪಞ್ಚದಶಕಲಾಃ। ಉಪಚಯಾಪಚಯಧರ್ಮಿತ್ವಾತ್। ತದ್ವಿತ್ತಸಾಧ್ಯಂ ಚ ಕರ್ಮ। ತಸ್ಯ ಕೃತ್ಸ್ನತಾಯೈ ಆತ್ಮೈವ ಪಿಣ್ಡ ಏವ ಅಸ್ಯ ವಿದುಷಃ ಷೋಡಶೀ ಕಲಾ ಧ್ರುವಸ್ಥಾನೀಯಾ। ಸ ಚನ್ದ್ರವತ್ ವಿತ್ತೇನೈವ ಆಪೂರ್ಯತೇ ಚ ಅಪಕ್ಷೀಯತೇ ಚ। ತದೇತತ್ ಲೋಕೇ ಪ್ರಸಿದ್ಧಮ್। ತದೇತತ್ ನಭ್ಯಂ ನಾಭ್ಯೈ ಹಿತಂ ನಭ್ಯಮ್, ನಾಭಿಂ ವಾ ಅರ್ಹತೀತಿ। ಕಿಂ ತತ್? ಯದಯಂ ಯೋಽಯಮಾತ್ಮಾ ಪಿಣ್ಡಃ। ಪ್ರಧಿರ್ವಿತ್ತಂ ಪರಿವಾರಸ್ಥಾನೀಯಂ ಬಾಹ್ಯಮ್, ಚಕ್ರಸ್ಯೇವ ಅರನೇಮ್ಯಾದಿ। ತಸ್ಮಾತ್ ಯದ್ಯಪಿ ಸರ್ವಜ್ಯಾನಿಂ ಸರ್ವಸ್ವಾಪಹರಣಂ ಜೀಯತೇ ಹೀಯತೇ ಗ್ಲಾನಿಂ ಪ್ರಾಪ್ನೋತಿ ಆತ್ಮನಾ ಚಕ್ರನಾಭಿಸ್ಥಾನೀಯೇನ ಚೇತ್ ಯದಿ ಜೀವತಿ ಪ್ರಧಿನಾ ಬಾಹ್ಯೇನ ಪರಿವಾರೇಣ ಅಯಮಗಾತ್ ಕ್ಷೀಣೋಽಯಮ್, ಯಥಾ ಚಕ್ರಮ್ ಅರನೇಮಿವಿಯುಕ್ತಮ್[1] ಇತ್ಯೇವಮಾಹುಃ। ಜೀವಂಶ್ಚೇತ್ ಅರನೇಮಿಸ್ಥಾನೀಯೇನ ವಿತ್ತೇನ ಪುನರುಪಚೀಯತೇ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹದಿನಾರು ಕಲೆಗಳ ಸಂವತ್ಸರ, ಪ್ರಜಾಪತಿ –ಎಂದು ಪರೋಕ್ಷವಾಗಿ ಯಾವನನ್ನು ಹೇಳಿತೋ ಅವನು ಅತ್ಯಂತಪರೋಕ್ಷವೆಂದು ತಿಳಿಯಬಾರದು. ಏಕೆಂದರೆ ಇಗೊ, ಇವನೇ ಅವನಾಗಿ ಪ್ರತ್ಯಕ್ಷವಾಗಿ ಕಾಣುತ್ತಿದಾನೆ.[2] ಈ ಇವನು ಎಂಬವನು ಯಾರು? ಹಿಂದೆ ಹೇಳಿರುವ ತ್ರ್ಯನ್ನಾತ್ಮಕನಾದ ಪ್ರಜಾಪತಿಯನ್ನು ತಾನೇ ಎಂದು ಅರಿತುಕೊಳ್ಳುತ್ತಾನಲ್ಲ, ಆ ಹೀಗೆಂದು ಉಪಾಸನೆ ಮಾಡುತ್ತಿರುವ ಪುರುಷನೇ. (ಇವನು) ಯಾವ ಹೋಲಿಕೆಯಿಂದ ಪ್ರಜಾಪತಿ (ಯೆನಿಸಿರುವನು)? ಎಂದರೆ ಅದನ್ನು ಹೇಳಲಾಗುತ್ತದೆ. ಆ ಹೀಗೆಂದು ಅರಿಯುವ ಪುರುಷನ ಗವಾದಿವಿತ್ತವೇ ಹದಿನೈದು ಕಲೆಗಳು; ಏಕೆಂದರೆ ಅದು ಹೆಚ್ಚುವದು, ಕುಂದುವದು –ಎಂಬ ಸ್ವಭಾವವುಳ್ಳದ್ದು. (ಆ) ವಿತ್ತಸಾಧ್ಯವಾದದ್ದು **ಕರ್ಮವು.** ಅವನು ಪೂರ್ಣನಾಗುವದಕ್ಕೆ ಆತ್ಮವೇ, ಈ ಉಪಾಸಕನ ಶರೀರವೇ, ಧ್ರುವ(ಕಲೆ)ಯಂತಿರುವ ಹದಿನಾರನೆಯ ಕಲೆಯು. ಅದು ವಿತ್ತ

1. 'ವಿನುಕ್ತಮ್' ಎಂಬ ಪಾಠಕ್ಕಿಂತ ಇದೇ ಮೇಲೆಂದು ಇಟ್ಟುಕೊಂಡಿವೆ.

2. ಹೀಗೆಂದು ಉಪಾಸನೆಮಾಡಬೇಕು ಎಂದರ್ಥ. ಉಪಾಸಕನು ತಾನೇ ಈ ಪ್ರಜಾಪತಿಯು ಎಂದು ಅಹಂಗ್ರಹೋಪಾಸನೆಮಾಡಿದರೇ ಫಲವು ದೊರಕುತ್ತದೆ ಎಂದು ಅಭಿಪ್ರಾಯ.

ದಿಂದಲೇ ಚಂದ್ರನಂತೆ ತುಂಬಿಕೊಳ್ಳುತ್ತದೆ, ಮತ್ತು ಅಪಕ್ಷಯವಾಗುತ್ತದೆ. ಆ ಇದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ.

ಆ ಇದು ನಭ್ಯವು; ನಾಭಿಗೆ (ಗುಂಬಕ್ಕೆ) ಹಿತವಾದದ್ದು ಅಥವಾ ನಾಭಿಗೆ ತಕ್ಕದ್ದು (ಎಂಬರ್ಥದಲ್ಲಿ ಪ್ರತ್ಯಯವು ಬಂದು ನಭ್ಯ ಎಂದಾಗಿದೆ). ಆ (ಗುಂಬದಂತಿರುವದು) ಯಾವದು? ಎಂದರೆ ಆತ್ಮವು, ಶರೀರವು. ವಿತ್ತವು ಪ್ರಧಿಯು, ಸುತ್ತುಗಟ್ಟಿನಂತಿರುವದು, (ಬಂಡಿಯ) ಗಾಲಿಗೆ ಹಾರೆಕೋಲು, ಹಳಿ –ಮುಂತಾದದ್ದರಂತೆ ಹೊರಗಿನ (ಅವಯವವು). ಆದ್ದರಿಂದ ಸರ್ವಜ್ಯಾನಿಯನ್ನು, ತನ್ನ ಸರ್ವವೂ ಹೋಗುವಂಥ ಸೋಲನ್ನು, ಸೋತರೂ ಕಳೆದುಕೊಂಡರೂ, ಕೊರತೆಯನ್ನು ಪಡೆದರೂ, ಗಾಲಿಯ ಗುಂಬದ ಸ್ಥಾನದಲ್ಲಿರುವ ಶರೀರದಿಂದ (ಸಹಿತನಾಗಿ) ಬದುಕಿರುವನಾದರೆ (ಇವನ) ಪ್ರಧಿಯು ಹೋಯಿತು, ಹೊರಗಿನ ಪರಿವಾರವು ಕ್ಷೀಣವಾಯಿತು; ಹಾರೆಕೋಲು, ಹಳಿ– (ಇವನ್ನು) ಕಳಚಿದ ಗಾಲಿಯಂತೆ (ಆದನು) ಎಂದು ಹೇಳುವರು. ಬದುಕಿದ್ದರೆ ಹಾರೆಕೋಲುಹಳಿಗಳಂತಿರುವ ವಿತ್ತದಿಂದ ಮತ್ತೆ ಕೂಡಿಕೊಳ್ಳುತ್ತಾನೆ ಎಂದು (ಜನರ) ಅಭಿಪ್ರಾಯ.

## ಪುತ್ರಾದಿಸಾಧನಗಳಿಗೆ ಸಾಧ್ಯಗಳು

(ಉಪನಿಷತ್ತು)

**ಅಥ ತ್ರಯೋ ವಾವ ಲೋಕಾ ಮನುಷ್ಯಲೋಕಃ ಪಿತೃಲೋಕೋ ದೇವಲೋಕ ಇತಿ ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯೋ ನಾನ್ಯೇನ ಕರ್ಮಣಾ ಕರ್ಮಣಾ ಪಿತೃಲೋಕೋ ವಿದ್ಯಯಾ ದೇವಲೋಕೋ ದೇವಲೋಕೋ ವೈ ಲೋಕಾನಾಗ್ಂ ಶ್ರೇಷ್ಠಸ್ತಸ್ಮಾದ್ವಿದ್ಯಾಂ ಪ್ರಶಗ್ಂಸನ್ತಿ ॥ ೧೬ ॥**

೧೬. ಇನ್ನು ಮನುಷ್ಯಲೋಕ, ಪಿತೃಲೋಕ, ದೇವಲೋಕ– ಎಂದು ಮೂರೇ ಲೋಕಗಳು. ಆ ಈ ಮನುಷ್ಯಲೋಕವು ಪುತ್ರನಿಂದ ಗೆದ್ದುಕೊಳ್ಳತಕ್ಕದ್ದು, ಬೇರೆಯ ಕರ್ಮದಿಂದ ಅಲ್ಲ. ಪಿತೃಲೋಕವು ಕರ್ಮದಿಂದ, ದೇವಲೋಕವು ವಿದ್ಯೆಯಿಂದ. ದೇವಲೋಕವೇ ಲೋಕಗಳಲ್ಲಿ ಶ್ರೇಷ್ಠವು; ಆದ್ದರಿಂದ ವಿದ್ಯೆಯನ್ನು ಹೊಗಳುತ್ತಾರೆ.

## ಕಂಡಿಕೆಯ ಸಂಬಂಧ

(ಭಾಷ್ಯ)

**೨೩೦.** ಏವಂ ಪಾಙ್ಕ್ತೇನ ದೈವವಿತ್ತವಿದ್ಯಾಸಂಯುಕ್ತೇನ ಕರ್ಮಣಾ ತ್ರ್ಯನ್ನಾತ್ಮಕಃ ಪ್ರಜಾಪತಿರ್ಭವತಿ ಇತಿ ವ್ಯಾಖ್ಯಾತಮ್। ಅನನ್ತರಂ ಚ

ಜಾಯಾದಿವಿತ್ತಂ ಪರಿವಾರಸ್ಥಾನೀಯಮ್ ಇತ್ಯುಕ್ತಮ್ । ತತ್ರ ಪುತ್ರಕರ್ಮಾಪರವಿದ್ಯಾನಾಂ ಲೋಕಪ್ರಾಪ್ತಿಸಾಧನತ್ವಮಾತ್ರಂ ಸಾಮಾನ್ಯೇನ ಅವಗತಂ ನ ಪುತ್ರಾದೀನಾಂ ಲೋಕಪ್ರಾಪ್ತಿಫಲಂ ಪ್ರತಿ ವಿಶೇಷಸಂಬನ್ಧನಿಯಮಃ । ಸೋಽಯಂ ಪುತ್ರಾದೀನಾಂ ಸಾಧನಾನಾಂ ಸಾಧ್ಯವಿಶೇಷಸಂಬನ್ಧೋ ವಕ್ತವ್ಯಃ ಇತ್ಯುತ್ತರಕಣ್ಡಿಕಾ ಪ್ರಣೀಯತೇ ॥

(ಭಾಷ್ಯಾರ್ಥ)

ಹೀಗೆ ದೈವವಿತ್ತವಾದ ವಿದ್ಯೆಯೊಡಗೂಡಿರುವ ಪಾಙ್ಕ್ತಕರ್ಮದಿಂದ ತ್ರ್ಯನ್ನಾತ್ಮಕಪ್ರಜಾಪತಿಯಾಗುತ್ತಾನೆ ಎಂದು ವಿವರಿಸಿದ್ದಾಯಿತು. ಆಮೇಲೆ ಜಾಯಾದಿವಿತ್ತವು (ಚಕ್ರದ) ಸುತ್ತುಗಟ್ಟಿನಂತಿದೆ ಎಂದು ಹೇಳಿದ್ದಾಯಿತು. ಅಲ್ಲಿ ಪುತ್ರ, ಕರ್ಮ, ಅಪರವಿದ್ಯೆ– (ಇವು) ಲೋಕಗಳನ್ನು ಪಡೆಯುವ ಸಾಧನವೆಂದಿಷ್ಟೇ ಸಾಮಾನ್ಯವಾಗಿ ತಿಳಿದುಬಂದಿದೆಯೇ ಹೊರತು ಪುತ್ರಾದಿಗಳು ಲೋಕಪ್ರಾಪ್ತಿ ಎಂಬ ಫಲಕ್ಕೆ ಲೋಕ (ಇಂಥಿಂಥದ್ದೆಂಬ) ಸಂಬಂಧವು ಗೊತ್ತಾಗಿ (ತಿಳಿದು)ಬಂದಿಲ್ಲ. ಆ ಈ ಪುತ್ರಾದಿಗಳಿಗೆ ಇಂಥಿಂಥದ್ದು ಸಾಧ್ಯ(ಫಲ)ವೆಂಬುದನ್ನು ಹೇಳೋಣವೆಂದು ಮುಂದಿನ ಕಂಡಿಕೆಯನ್ನು ತಂದಿದೆ.[1]

## ಪುತ್ರಾದಿಗಳಿಗೆ ಗೊತ್ತಾಗಿರುವ ಸಾಧ್ಯಗಳು

(ಭಾಷ್ಯ)

೨೩೧. ಅಥ ಇತಿ ವಾಕ್ಯೋಪನ್ಯಾಸಾರ್ಥಃ । ತ್ರಯೋ ವಾವ ಇತಿ ಅವಧಾರಣಾರ್ಥಃ । ತ್ರಯ ಏವ ಶಾಸ್ತ್ರೋಕ್ತಸಾಧನಾರ್ಹಾ ಲೋಕಾಃ, ನ ನ್ಯೂನಾ ನಾಧಿಕಾ ವಾ । ಕೇ ತೇ ಇತಿ ? ಉಚ್ಯತೇ । ಮನುಷ್ಯಲೋಕಃ ಪಿತೃಲೋಕೋ ದೇವಲೋಕ ಇತಿ । ತೇಷಾಂ ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಸಾಧನೇನ ಜಯ್ಯಃ ಜೇತವ್ಯಃ ಸಾಧ್ಯಃ । ಯಥಾ ಚ ಪುತ್ರೇಣ ಜೇತವ್ಯಃ ತಥಾ ಉತ್ತರತ್ರ ವಕ್ಷ್ಯಾಮಃ । ನಾನ್ಯೇನ ಕರ್ಮಣಾ ವಿದ್ಯಯಾ ವಾ ಇತಿ ವಾಕ್ಯಶೇಷಃ । ಕರ್ಮಣಾ ಅಗ್ನಿಹೋತ್ರಾದಿಲಕ್ಷಣೇನ ಕೇವಲೇನ ಪಿತೃಲೋಕೋ ಜೇತವ್ಯಃ, ನ ಪುತ್ರೇಣ ನಾಪಿ ವಿದ್ಯಯಾ । ವಿದ್ಯಯಾ ದೇವಲೋಕಃ, ನ ಪುತ್ರೇಣ ನಾಪಿ ಕರ್ಮಣಾ । ದೇವಲೋಕೋ ವೈ ಲೋಕಾನಾಂ ತ್ರಯಾಣಾಂ ಶ್ರೇಷ್ಠಃ ಪ್ರಶಸ್ಯತಮಃ । ತಸ್ಮಾತ್ ತತ್ಸಾಧನತ್ವಾತ್ ವಿದ್ಯಾಂ ಪ್ರಶಂಸನ್ತಿ ॥

---

1. ಪುತ್ರಕರ್ಮಗಳು ವಿದ್ಯಾಸಮುಚ್ಚಿತವಾದರೇ ಸರ್ವಾತ್ಮಭಾವವನ್ನು ಕೊಡುತ್ತವೆ ಎಂಬುದನ್ನು ತಿಳಿಸುವದಕ್ಕೆ ಮುಂದಿನ ಕಂಡಿಕೆ ಪ್ರಾರಂಭವಾಗಿದೆ ಎಂಬ ಭರ್ತೃಪ್ರಪಂಚಮತವನ್ನು ವಾರ್ತಿಕದಲ್ಲಿ ವಿಮರ್ಶಿಸಿದೆ.

(ಭಾಷ್ಯಾರ್ಥ)

(ಇಲ್ಲಿ) ಅಥ (ಇನ್ನು) ಎಂಬುದು ವಾಕ್ಯಪ್ರಾರಂಭಕ್ಕಾಗಿ (ಬಂದಿದೆ).[1] 'ಮೂರೇ' ಎಂಬುದು ಒತ್ತಿಹೇಳುವದಕ್ಕಾಗಿ (ಬಂದಿದೆ). ಶಾಸ್ತ್ರದಲ್ಲಿ ಹೇಳಿರುವ ಸಾಧನಕ್ಕೆ ತಕ್ಕ ಲೋಕಗಳು ಮೂರೇ, ಕಡಿಮೆಯಿಲ್ಲ, ಹೆಚ್ಚಿಲ್ಲ. ಅವು ಯಾವವು? ಎಂದರೆ (ಶ್ರುತಿ) ಹೇಳುತ್ತದೆ. ಮನುಷ್ಯಲೋಕ, ಪಿತೃಲೋಕ, ದೇವಲೋಕ. ಅವುಗಳಲ್ಲಿ ಆ ಈ ಮನುಷ್ಯಲೋಕವು ಪುತ್ರನೆಂಬ ಸಾಧನದಿಂದಲೇ ಗೆಲ್ಲುಕೊಳ್ಳತಕ್ಕದ್ದು ಗೆದ್ದುಕೊಳ್ಳಬೇಕಾದದ್ದು, ಸಾಧ್ಯವಾದದ್ದು. (ಇದು) ಪುತ್ರನಿಂದ ಗೆದ್ದುಕೊಳ್ಳತಕ್ಕದ್ದು ಹೇಗೆಂಬುದನ್ನು ಮುಂದೆ ತಿಳಿಸುವೆವು. ಬೇರೆಯ ಕರ್ಮದಿಂದ (ಗೆದ್ದುಕೊಳ್ಳತಕ್ಕದ್ದಲ್ಲ), ವಿದ್ಯೆಯಿಂದಲೂ (ಗೆದ್ದುಕೊಳ್ಳತಕ್ಕ)ದ್ದಲ್ಲ ಎಂದು ವಾಕ್ಯಶೇಷವು. ಅಗ್ನಿಹೋತ್ರವೇ ಮುಂತಾದ ಕರ್ಮದಿಂದಲೇ ಪಿತೃಲೋಕವು ಗೆದ್ದುಕೊಳ್ಳತಕ್ಕದ್ದು; (ಅದು) ಪುತ್ರನಿಂದ (ಗೆದ್ದುಕೊಳ್ಳತಕ್ಕದ್ದಲ್ಲ), ವಿದ್ಯೆಯಿಂದಲೂ (ಗೆದ್ದುಕೊಳ್ಳತಕ್ಕದ್ದಲ್ಲ). ದೇವಲೋಕವು ವಿದ್ಯೆಯಿಂದ (ಗೆದ್ದುಕೊಳ್ಳತಕ್ಕದ್ದು), ಪುತ್ರನಿಂದಲ್ಲ, ಕರ್ಮದಿಂದಲೂ ಅಲ್ಲ.[2] (ಈ) ಮೂರು ಲೋಕಗಳಲ್ಲಿ ದೇವಲೋಕವೇ ಶ್ರೇಷ್ಠವು, ಉತ್ತಮವಾದದ್ದು. ಆದ್ದರಿಂದ ಅದಕ್ಕೆ ಸಾಧನವಾಗಿರುವದರಿಂದ ವಿದ್ಯೆಯನ್ನು ಹೊಗಳುತ್ತಾರೆ.

## ಸಂಪ್ರತ್ತಿಕರ್ಮ

(ಉಪನಿಷತ್ತು)

**ಅಥಾತಃ ಸಂಪ್ರತ್ತಿರ್ಯದಾ ಪ್ರೈಷ್ಯನ್ ಮನ್ಯತೇಽಥ ಪುತ್ರಮಾಹ ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕ ಇತಿ ಸ ಪುತ್ರಃ ಪ್ರತ್ಯಾಹಾಹಂ ಬ್ರಹ್ಮಾಹಂ ಯಜ್ಞೋಽಹಂ ಲೋಕ ಇತಿ ಯದ್ವೈ ಕಿಂ ಚಾನೂಕ್ತಂ ತಸ್ಯ ಸರ್ವಸ್ಯ ಬ್ರಹ್ಮೇತ್ಯೇಕತಾ। ಯೇ ವೈ ಕೇ ಚ ಯಜ್ಞಾಸ್ತೇಷಾಗ್ಂ ಸರ್ವೇಷಾಂ ಯಜ್ಞ ಇತ್ಯೇಕತಾ ಯೇ ವೈ ಕೇ ಚ ಲೋಕಾಸ್ತೇಷಾಗ್ಂ ಸರ್ವೇಷಾಂ ಲೋಕ ಇತ್ಯೇಕತೈತಾವದ್ವಾ ಇದಗ್ಂ ಸರ್ವಮೇತನ್ಮಾ ಸರ್ವಗ್ಂ ಸನ್ನಯಮಿತೋಽಭುನಜದಿತಿ ತಸ್ಮಾತ್ ಪುತ್ರಮನುಶಿಷ್ಟಂ ಲೋಕ್ಯಮಾಹುಸ್ತಸ್ಮಾದೇನಮನುಶಾಸತಿ ಸ ಯದೈವಂ**

---

1. ಯಾವದಾದರೊಂದರ ಅನಂತರ ಎಂಬ ಅರ್ಥದಲ್ಲಿ ಬಂದಿಲ್ಲ.

2. ಏವ ಎಂಬ ಮಾತು ಪುತ್ರನಿಗೆ ಮಾತ್ರ ಸಂಬಂಧಪಟ್ಟಿರುವದರಿಂದ ಕರ್ಮ, ವಿದ್ಯೆ- ಇವುಗಳಿಗೂ ಇದನ್ನು ಹೊಂದಿಸಿದ್ದು ಸರಿಯಲ್ಲವೆಂದು ವಾರ್ತಿಕ. ಪಿತೃಲೋಕ ದೇವಲೋಕಗಳಿಗೆ ಸಾಧನಾಂತರವೂ ಉಂಟೆಂದು (೨೮೦) ವಾರ್ತಿಕಕಾರರ ಮತವು.

**ವಿದಸ್ಮಾಲ್ಲೋಕಾತ್ ಪ್ರೈತ್ಯಥೈಭಿರೇವ ಪ್ರಾಣೈಃ ಸಹ ಪುತ್ರ ಮಾವಿಶತಿ। ಸ ಯದ್ಯನೇನ ಕಿಂಚಿದಕ್ಷ್ಣಯಾಽಕೃತಂ ಭವತಿ ತಸ್ಮಾದೇನಗ್ಂ ಸರ್ವಸ್ಮಾತ್ ಪುತ್ರೋ ಮುಞ್ಚತಿ ತಸ್ಮಾತ್ ಪುತ್ರೋ ನಾಮ ಸ ಪುತ್ರೇಣೈವಾಸ್ಮಿಲ್ಲೋಕೇ ಪ್ರತಿತಿಷ್ಠತ್ಯಥೈನ ಮೇತೇ ದೈವಾಃ ಪ್ರಾಣಾ ಅಮೃತಾ ಆವಿಶನ್ತಿ ॥ ೧೭ ॥**

೧೭. ಇನ್ನು ಆದ್ದರಿಂದ ಸಂಪ್ರತ್ತಿಯು. ಯಾವಾಗ (ಇಲ್ಲಿಂದ) ಹೊರಟುಹೋಗುವೆನೆಂದು ತಿಳಿದುಕೊಳ್ಳುತ್ತಾನೋ ಆಗ ಪುತ್ರನನ್ನು (ಕುರಿತು) "ನೀನು ಬ್ರಹ್ಮವು, ನೀನು ಯಜ್ಞವು, ನೀನು ಲೋಕವು" ಎನ್ನುತ್ತಾನೆ. ಆ ಪುತ್ರನು "ನಾನು ಬ್ರಹ್ಮವು, ನಾನು ಯಜ್ಞವು, ನಾನು ಲೋಕವು" ಎಂದು ಮಾರುನುಡಿಯುತ್ತಾನೆ. ಯಾವದು ಒಂದಿಷ್ಟು ಅನುವಚನಮಾಡಿದ್ದಿತ್ತೋ ಅದೆಲ್ಲವೂ 'ಬ್ರಹ್ಮ' ಎಂದು ಒಂದಾಯಿತು; ಯಾವಯಾವ ಯಜ್ಞಗಳಿದ್ದವೋ ಅವೆಲ್ಲವೂ 'ಯಜ್ಞ' ಎಂದು ಒಂದಾದವು; ಯಾವಯಾವ ಲೋಕಗಳಿದ್ದವೋ ಅವೆಲ್ಲವೂ 'ಲೋಕ' ಎಂದು ಒಂದಾದವು. ಇದೆಲ್ಲವೂ ಇಷ್ಟೇ. ಇದೆಲ್ಲವೂ ಆಗಿ ಇದರಿಂದ ನನ್ನನ್ನು ಕಾಪಾಡುವನು ಎಂದು (ತಿಳಿದುಕೊಳ್ಳುತ್ತಾನೆ). ಆದ್ದರಿಂದ ಅನುಶಿಷ್ಟಪುತ್ರನನ್ನು 'ಲೋಕ್ಯ'ನು ಎನ್ನುವರು. ಆದ್ದರಿಂದ ಇವನಿಗೆ ಅನುಶಾಸನಮಾಡುತ್ತಾನೆ. ಆ ಹೀಗೆಂದು ಅರಿತವನು ಯಾವಾಗ ಈ ಲೋಕದಿಂದ ಹೊರಟು)ಹೋಗುತ್ತಾನೋ ಆಗ) ಆ ಈ ಪ್ರಾಣಗಳಿಂದಲೇ ಪುತ್ರನನ್ನು ತುಂಬಿಕೊಳ್ಳುತ್ತಾನೆ. ಇವನು ಯಾವದನ್ನಾದರೂ ಕೊರೆಯಿಂದ ಮಾಡಿದ್ದರೆ ಅದೆಲ್ಲದರಿಂದಲೂ ಪುತ್ರನು ಬಿಡಿಸುತ್ತಾನೆ; ಆದ್ದರಿಂದ ಪುತ್ರನೆನಿಸುವನು. ಅವನು ಪುತ್ರ(ರೂಪ) ದಿಂದಲೇ ಈ ಲೋಕದಲ್ಲಿ ನಿಂತಿರುತ್ತಾನೆ. ಇನ್ನು ಇವನನ್ನು ಈ ದೇವತೆಗಳೂ ಅಮೃತರೂ (ಆದ) ಪ್ರಾಣಗಳು ತುಂಬಿಕೊಳ್ಳುತ್ತವೆ.

## ಕಂಡಿಕೆಯ ಸಂಬಂಧ

(ಭಾಷ್ಯ)

೨೩೨. ಏವಂ ಸಾಧ್ಯಲೋಕತ್ರಯಫಲಭೇದೇನ ವಿನಿಯುಕ್ತಾನಿ ಪುತ್ರಕರ್ಮವಿದ್ಯಾಖ್ಯಾನಿ ತ್ರೀಣಿ ಸಾಧನಾನಿ। ಜಾಯಾ ತು ಪುತ್ರಕರ್ಮಾರ್ಥತ್ವಾತ್ ನ ಪೃಥಕ್ಸಾಧನಮ್ ಇತಿ ಪೃಥಕ್ ನಾಭಿಹಿತಾ। ವಿತ್ತಂ ಚ ಕರ್ಮಸಾಧನ

ತ್ವಾತ್ ನ ಪೃಥಕ್ಸಾಧನಮ್ । ವಿದ್ಯಾಕರ್ಮಣೋರ್ಲೋಕಜಯಹೇತುತ್ವಂ ಸ್ವಾತ್ಮಪ್ರತಿಲಾಭೇನೈವ ಭವತಿ ಇತಿ ಪ್ರಸಿದ್ಧಮ್ । ಪುತ್ರಸ್ಯ ತು ಅಕ್ರಿಯಾತ್ಮಕತ್ವಾತ್ ಕೇನ ಪ್ರಕಾರೇಣ ಲೋಕಜಯಹೇತುತ್ವಮ್ ಇತಿ ನ ಜ್ಞಾಯತೇ । ಅತಃ ತದ್ವಕ್ತವ್ಯಮ್ ಇತಿ ಅಥ ಅನನ್ತರಮ್ ಆರಭ್ಯತೇ । ಸಂಪ್ರತ್ತಿಃ ಸಂಪ್ರದಾನಮ್ । ಸಂಪ್ರತ್ತಿಃ ಇತಿ ವಕ್ಷ್ಯಮಾಣಸ್ಯ ಕರ್ಮಣೋ ನಾಮಧೇಯಮ್ । ಪುತ್ರೇ ಹಿ ಸ್ವಾತ್ಮವ್ಯಾಪಾರಸಂಪ್ರದಾನಂ ಕರೋತಿ ಅನೇನ ಪ್ರಕಾರೇಣ ಪಿತಾ । ತೇನ ಸಂಪ್ರತ್ತಿಸಂಜ್ಞಕಮ್ ಇದಂ ಕರ್ಮ । ತತ್ ಕಸ್ಮಿನ್ ಕಾಲೇ ಕರ್ತವ್ಯಮಿತಿ? ಆಹ । ಸ ಪಿತಾ ಯದಾ ಯಸ್ಮಿನ್ ಕಾಲೇ ಪ್ರೈಷ್ಯನ್ ಮರಿಷ್ಯನ್ ಮರಿಷ್ಯಾಮಿ ಇತಿ ಅರಿಷ್ಟಾದಿದರ್ಶನೇನ ಮನ್ಯತೇ ಅಥ ತದಾ ಪುತ್ರಮ್ ಆಹೂಯ ಆಹ । ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕಃ ಇತಿ । ಸ ಏವಮುಕ್ತಃ ಪುತ್ರಃ ಪ್ರತ್ಯಾಹ । ಸ ತು ಪೂರ್ವಮೇವ ಅನುಶಿಷ್ಟಃ ಜಾನಾತಿ ಮಯಾ ಏತತ್ ಕರ್ತವ್ಯಮ್ ಇತಿ । ತೇನ ಆಹ 'ಅಹಂ ಬ್ರಹ್ಮ', 'ಅಹಂ ಯಜ್ಞಃ', 'ಅಹಂ ಲೋಕಃ' ಇತ್ಯೇತದ್ ವಾಕ್ಯತ್ರಯಮ್ ॥

(ಭಾಷ್ಯಾರ್ಥ)

ಹೀಗೆ ಪುತ್ರ, ಕರ್ಮ, ವಿದ್ಯೆ– ಎಂಬ ಮೂರು ಸಾಧನಗಳು ಸಾಧ್ಯವಾದ ಲೋಕತ್ರಯವೆಂಬ ಬೇರೆಬೇರೆಯ ಫಲವುಳ್ಳವೆಂದು ವಿನಿಯೋಗವನ್ನು ಮಾಡಿದ್ದಾಯಿತು. ಹೆಂಡತಿಯು ಮಾತ್ರ ಪುತ್ರ, ಕರ್ಮ– ಇವುಗಳಿಗಾಗಿರುವದರಿಂದ ಬೇರೆಯಾಗಿ (ತಾನೇ) ಸಾಧನವಲ್ಲವೆಂಬ ಕಾರಣದಿಂದ (ಅವಳನ್ನು) ವಿಂಗಡವಾಗಿ ಹೇಳಲಿಲ್ಲ. ವಿತ್ತವೂ ಕರ್ಮಕ್ಕೆ ಸಾಧನವಾದ್ದರಿಂದ (ತಾನೇ) ಬೇರೊಂದು ಸಾಧನವಲ್ಲ. ವಿದ್ಯಾಕರ್ಮಗಳು ತಮ್ಮ ಸ್ವರೂಪವನ್ನು ಪಡೆದುಕೊಂಡ ಮಾತ್ರದಿಂದಲೇ[1] ಲೋಕವನ್ನು ಗೆದ್ದುಕೊಳ್ಳುವದಕ್ಕೆ ಕಾರಣವಾಗುವವೆಂದು ಪ್ರಸಿದ್ಧವಾಗಿರುತ್ತದೆ. ಆದರೆ ಪುತ್ರನು ಕ್ರಿಯಾ(ರೂಪ)ನಲ್ಲವಾದ್ದರಿಂದ ಯಾವ ಪ್ರಕಾರದಿಂದ ಲೋಕವನ್ನು ಗೆದ್ದುಕೊಳ್ಳುವದಕ್ಕೆ ಸಾಧನವು? –ಎಂಬದು ತಿಳಿಯುವಂತಿಲ್ಲ. ಆದ್ದರಿಂದ ಅದನ್ನು ಹೇಳೋಣ ಎಂದು ಇನ್ನು ಈಮೇಲೆ[2] (ಇದನ್ನು) ಆರಂಭಿಸಿರುತ್ತದೆ.

ಸಂಪ್ರತ್ತಿ ಎಂದರೆ ಸಂಪ್ರದಾನವು (ಒಪ್ಪಿಸಿಕೊಡುವದು). ಸಂಪ್ರತ್ತಿ ಎಂಬುದು (ಈಗ) ಹೇಳಲಿರುವ ಕರ್ಮದ ಹೆಸರು. ಈ ಪ್ರಕಾರದಿಂದ ತಂದೆಯು ಪುತ್ರನಿಗೆ ತನ್ನ ವ್ಯಾಪಾರಗಳನ್ನು ಒಪ್ಪಿಸಿಕೊಡುತ್ತಾನಷ್ಟೆ; ಆದ್ದರಿಂದ ಈ ಕರ್ಮಕ್ಕೆ ಸಂಪ್ರತ್ತಿ ಎಂದು ಹೆಸರು.

---

1. ಹುಟ್ಟಿದಮಾತ್ರದಿಂದಲೇ.
2. 'ಅಥ', 'ಅತಃ' ಎಂಬ ಶ್ರುತಿಯ ಮಾತುಗಳನ್ನು ವ್ಯಾಖ್ಯಾನಮಾಡುವದರಿಂದಲೇ ಭಾಷ್ಯಕಾರರು ಸಂಬಂಧವನ್ನು ತಿಳಿಸಿರುತ್ತಾರೆ.

ಅದನ್ನು ಯಾವ ಕಾಲದಲ್ಲಿ ಮಾಡತಕ್ಕದ್ದು ? ಎಂದರೆ (ಶ್ರುತಿ) ಹೇಳುತ್ತದೆ. ತಂದೆಯು ಯಾವಾಗ ಯಾವ ಕಾಲದಲ್ಲಿ ಹೊರಟುಹೋಗುವೆನೆಂದು ಸಾಯುವೆನೆಂದು ಅರಿಷ್ಟವೇ ಮುಂತಾದವುಗಳನ್ನು ಕಂಡದ್ದರಿಂದ[1] ತಿಳಿದು ಕೊಳ್ಳುತ್ತಾನೋ ಆಗ ಮಗನನ್ನು ಕರೆದು ಹೀಗೆನ್ನುತ್ತಾನೆ: "ನೀನು ಬ್ರಹ್ಮವು, ನೀನು ಯಜ್ಞವು, ನೀನು ಲೋಕವು" ಹೀಗೆನ್ನಲು ಆ ಮಗನು (ಹೀಗೆಂದು) ಮಾರುನುಡಿಯುತ್ತಾನೆ: ಅವನಿಗೆ ಮೊದಲೇ ಅನುಶಾಸನವನ್ನು ಮಾಡಿರುವದರಿಂದ ನಾನು ಇದನ್ನು ಮಾಡಬೇಕು ಎಂದು ತಿಳಿದಿರುತ್ತದೆ ; ಆದ್ದರಿಂದ 'ನಾನು ಬ್ರಹ್ಮವು', 'ನಾನು ಯಜ್ಞವು', 'ನಾನು ಲೋಕವು' ಎಂಬೀ ಮೂರು ವಾಕ್ಯಗಳನ್ನು ಹೇಳುತ್ತಾನೆ.

## ಸಂಪ್ರತ್ತಿಕರ್ಮದ ಅಭಿಪ್ರಾಯ

(ಭಾಷ್ಯ)

೨೩೩. ಏತಸ್ಯಾರ್ಥಸ್ತಿರೋಹಿತಃ ಇತಿ ಮನ್ವಾನಾ ಶ್ರುತಿರ್ವ್ಯಾಖ್ಯಾನಾಯ ಪ್ರವರ್ತತೇ । ಯದ್ವೈ ಕಿಂಚ ಅವಶಿಷ್ಟಮ್ ಅನೂಕ್ತಮ್ ಅಧೀತಮ್ ಅನಧೀತಂ ಚ ತಸ್ಯ ಸರ್ವಸ್ಯೈವ 'ಬ್ರಹ್ಮ' ಇತ್ಯೇತಸ್ಮಿನ್ ಪದೇ ಏಕತಾ ಏಕತ್ವಮ್ । ಯೋಽಧ್ಯಯನವ್ಯಾಪಾರೋ ಮಮ ಕರ್ತವ್ಯ ಆಸೀತ್ ಏತಾವನ್ತಂ ಕಾಲಂ ವೇದವಿಷಯಃ ಸ ಇತ ಊರ್ಧ್ವಂ 'ತ್ವಂ ಬ್ರಹ್ಮ' ತ್ವತ್ಕರ್ತೃಕೋಽಸ್ತು ಇತ್ಯರ್ಥಃ । ತಥಾ ಯೇ ವೈ ಕೇ ಚ ಯಜ್ಞಾಃ ಅನುಷ್ಠೇಯಾಃ ಸನ್ತೋ ಮಯಾ ಅನುಷ್ಠಿತಾಶ್ಚ ಅನನುಷ್ಠಿತಾಶ್ಚ ತೇಷಾಂ ಸರ್ವೇಷಾಂ 'ಯಜ್ಞಃ' ಇತ್ಯೇತಸ್ಮಿನ್ ಪದೇ ಏಕತಾ ಏಕತ್ವಮ್ । ಮತ್ಕರ್ತೃಕಾ ಯಜ್ಞಾಃ ಯ ಆಸನ್ ತೇ ಇತ ಊರ್ಧ್ವಂ 'ತ್ವಂ ಯಜ್ಞಃ' ತ್ವತ್ಕರ್ತೃಕಾ ಭವನ್ತು ಇತ್ಯರ್ಥಃ । ಯೇ ವೈ ಕೇ ಚ ಲೋಕಾಃ ಮಯಾ ಜೇತವ್ಯಾಃ ಸನ್ತೋ ಜಿತಾ ಅಜಿತಾಶ್ಚ ತೇಷಾಂ ಸರ್ವೇಷಾಂ ಲೋಕಃ ಇತ್ಯೇತಸ್ಮಿನ್ ಪದೇ ಏಕತಾ । ಇತ ಊರ್ಧ್ವಂ 'ತ್ವಂ ಲೋಕಃ' ತ್ವಯಾ ಜೇತವ್ಯಾಸ್ತೇ । ಇತ ಊರ್ಧ್ವಂ ಮಯಾ ಅಧ್ಯಯನಯಜ್ಞಲೋಕಜಯಕರ್ತವ್ಯಕ್ರತುಃ ತ್ವಯಿ ಸಮರ್ಪಿತಃ । ಅಹಂ ತು ಮುಕ್ತೋಽಸ್ಮಿ ಕರ್ತವ್ಯತಾಬನ್ಧನವಿಷಯಾತ್ ಕ್ರತೋಃ । ಸ ಚ ಸರ್ವಂ ತಥೈವ ಪ್ರತಿಪನ್ನವಾನ್ ಪುತ್ರಃ । ಅನುಶಿಷ್ಟತ್ವಾತ್ ॥

---

1. ಸೂರ್ಯನು ಚಂದ್ರನಂತೆ ರಶ್ಮಿರಹಿತನಾಗಿ ಕಾಣುವದೇ ಮುಂತಾದ ಅರಿಷ್ಟಗಳನ್ನೂ ಕರಿಯ ಹಲ್ಲಿನ ಕರಿಯ ಮನುಷ್ಯನನ್ನು ಕಾಣುವದು ಮುಂತಾದ ಕನಸುಗಳನ್ನೂ ಕಂಡದ್ದರಿಂದ ಎಂದರ್ಥ. ಐ. ಆ. ೩-೨-೪ನ್ನು ನೋಡಿ.

(ಭಾಷ್ಯಾರ್ಥ)

ಈ (ವಾಕ್ಯತ್ರಯದ) ಅರ್ಥವು ಮರೆಯಾಗಿರುವದೆಂದು ತಿಳಿದು ಶ್ರುತಿಯು (ಅದನ್ನು) ವಿವರಿಸುವದಕ್ಕೆ ಹೊರಟಿರುತ್ತದೆ: ಅನುವಚನಮಾಡಿದ್ದೂ ಮಾಡದೆ ಇರುವದೂ[1] ಯಾವದು ಒಂದಿಷ್ಟು ಉಳಿದಿರುವದೋ ಅದೆಲ್ಲಕ್ಕೂ 'ಬ್ರಹ್ಮ' ಎಂಬೀ ಮಾತಿನಲ್ಲಿ ಏಕತೆಯು, (ಅದರಲ್ಲಿ ಎಲ್ಲವೂ) ಒಂದಾಗಿದೆ. ಇಷ್ಟು ಕಾಲವೂ ವೇದವಿಷಯಕವಾದ ಅಧ್ಯಯನವೆಂಬ ಕೆಲಸವು ನನಗೆ ಕರ್ತವ್ಯವಾಗಿತ್ತಷ್ಟೆ, ಅದು ಇನ್ನುಮೇಲೆ 'ನೀನು ಬ್ರಹ್ಮವು', ಎಂದರೆ ನೀನು ಮಾಡತಕ್ಕದ್ದಾಗಿರಲಿ ಎಂದರ್ಥ. ಇದರಂತೆ ಯಾವಯಾವ ಯಜ್ಞಗಳು ಮಾಡತಕ್ಕವುಗಳಾಗಿದ್ದು ನಾನು ಮಾಡಿರುವೆನೋ ಮತ್ತು ಮಾಡಿಲ್ಲವೋ, ಅವುಗಳೆಲ್ಲಕ್ಕೂ 'ಯಜ್ಞ' ಎಂಬೀ ಪದದಲ್ಲಿ ಏಕತೆಯು, (ಎಲ್ಲವೂ ಅದರಲ್ಲಿ) ಒಂದಾಗಿದೆ. ನಾನು ಮಾಡಬೇಕಾಗಿದ್ದ ಯಜ್ಞಗಳಿದ್ದವಷ್ಟೆ, ಅವು ಇನ್ನುಮೇಲೆ 'ನೀನು ಯಜ್ಞವು', ನೀನು ಮಾಡತಕ್ಕವಾಗಲಿ ! ಎಂದರ್ಥ. ನಾನು ಗೆದ್ದುಕೊಳ್ಳಬೇಕಾಗಿದ್ದು ಯಾವಯಾವ ಲೋಕಗಳನ್ನು ಗೆದ್ದುಕೊಂಡಿರುವೆನೋ ಅಥವಾ ಗೆದ್ದುಕೊಂಡಿರುವದಿಲ್ಲವೋ ಅವುಗಳೆಲ್ಲಕ್ಕೂ 'ಲೋಕ' ಎಂಬೀ ಮಾತಿನಲ್ಲಿ ಏಕತೆ(ಯಾಯಿತು). ಇನ್ನುಮೇಲೆ 'ನೀನು ಲೋಕವು', ಅವು ನೀನು ಗೆದ್ದುಕೊಳ್ಳತಕ್ಕವಾಗಲಿ !

ಇನ್ನುಮೇಲೆ ನಾನು ಅಧ್ಯಯನ, ಯಜ್ಞ, ಲೋಕಜಯ- ಇವುಗಳನ್ನು ಮಾಡಿಕೊಳ್ಳಬೇಕೆಂಬ ನಿಶ್ಚಯವನ್ನು ನಿನ್ನಲ್ಲಿಟ್ಟಿರುವೆನು ; ಕರ್ತವ್ಯತೆ ಎಂಬ ಬಂಧನವಿಷಯವಾದ ಮನೋನಿಶ್ಚಯದಿಂದ ನಾನು ಮುಕ್ತನಾಗಿರುವೆನು.[2] (ಎಂದು ತಂದೆಯ ಅಭಿಪ್ರಾಯ. ಹೀಗೆನ್ನಲು,) ಆ ಪುತ್ರನು ಹಾಗೆಂದೇ ತಿಳಿದುಕೊಳ್ಳುವನು ; ಏಕೆಂದರೆ (ಹಾಗೆಂದು ತಂದೆಯು ಮೊದಲೇ) ತಿಳಿಸಿ ಕೊಟ್ಟಿರುತ್ತಾನೆ.[3]

---

1. ಮಾಡಬೇಕಾಗಿದ್ದು ಉಳಿದಿರುವದೂ.

2. ಕರ್ತವ್ಯತೆಯನ್ನು ನಿನಗೆ ಒಪ್ಪಿಸಿದ್ದರಿಂದ ನನಗೆ ಮಾಡಬೇಕಾದದ್ದು ಇನ್ನಿರುವದಿಲ್ಲ. ಸಂಪ್ರತ್ತಿಕರ್ಮವನ್ನು ಮಾಡಿದಮೇಲೂ ತಂದೆ ಬದುಕಿದ್ದರೆ ಅಗ್ನಿಹೋತ್ರಾದಿಗಳನ್ನು ಬಿಡಬಾರದು ಎಂದು ಭರ್ತೃಪ್ರಪಂಚರು ಬರೆದಿದ್ದರು. ಆ ಅಭಿಪ್ರಾಯವನ್ನು ಖಂಡಿಸುವದಕ್ಕಾಗಿ ವಾರ್ತಿಕದಲ್ಲಿ ಈ ಸಂಪ್ರತ್ತಿಕರ್ಮವು ಸಂನ್ಯಾಸಾಂಗವಾಗಿ ಹೇಳಿದ್ದು ಎಂಬ ಪ್ರೌಢಿವಾದವನ್ನು (೩೦೨, ೩೦೩) ಅವಲಂಬಿಸಿದೆ.

3. ಹೀಗೆ ಹೇಳಿಕೊಡಬೇಕೆಂಬುದು ಮುಂದಿನ ಗ್ರಂಥದಲ್ಲಿ ವ್ಯಕ್ತವಾಗುತ್ತದೆ ಎಂದು ಭಾವ.

## ಮಗನಿಗೆ ಅನುಶಾಸನಮಾಡಬೇಕು

(ಭಾಷ್ಯ)

೨೩೪. ತತ್ರ ಇಮಂ ಪಿತುರಭಿಪ್ರಾಯಂ ಮನ್ವಾನಾ ಆಚಷ್ಟೇ ಶ್ರುತಿಃ। ಏತಾವತ್ ಏತತ್ಪರಿಮಾಣಂ ವಾ ಇದಂ ಸರ್ವಂ ಯದ್ಗೃಹಿಣಾ ಕರ್ತವ್ಯಂ ಯದುತ ವೇದಾ ಅಧ್ಯೇತವ್ಯಾಃ ಯಜ್ಞಾ ಯಷ್ಟವ್ಯಾಃ ಲೋಕಾಶ್ಚ ಜೇತವ್ಯಾಃ, ಏತತ್ ಸರ್ವಂ ಸನ್ ಅಯಂ ಸರ್ವಂ ಹೀಮಂ ಭಾರಂ ಮದಧೀನಂ ಮತ್ತೋಽಪಚ್ಛಿದ್ಯ ಆತ್ಮನಿ ನಿಧಾಯ ಇತಃ ಅಸ್ಮಾತ್ ಲೋಕಾತ್ ಮಾ ಮಾಮ್ ಅಭುನಜತ್ ಪಾಲಯಿಷ್ಯತಿ ಇತಿ ಲೃಡರ್ಥೇ ಲಙ್ । ಛನ್ದಸಿ ಕಾಲನಿಯಮಾಭಾವಾತ್। ಯಸ್ಮಾದೇವಂ ಸಂಪನ್ನಃ ಪುತ್ರಃ ಪಿತರಮ್ ಅಸ್ಮಾತ್ ಲೋಕಾತ್ ಕರ್ತವ್ಯತಾಬನ್ಧನತಃ ಮೋಚಯಿಷ್ಯತಿ ತಸ್ಮಾತ್ ಪುತ್ರಮ್ ಅನುಶಿಷ್ಟಂ ಲೋಕ್ಯಂ ಲೋಕಹಿತಂ ಪಿತುಃ ಆಹುರ್ಬ್ರಾಹ್ಮಣಾಃ। ಅತ ಏವ ಹಿ ಏನಂ ಪುತ್ರಮ್ ಅನುಶಾಸತಿ ಲೋಕ್ಯಃ ಅಯಂ ನಃ ಸ್ಯಾತ್ ಇತಿ ಪಿತರಃ ॥

(ಭಾಷ್ಯಾರ್ಥ)

ಇಲ್ಲಿ[1] ಇದು ತಂದೆಯ ಅಭಿಪ್ರಾಯವು ಎಂದೆಣಿಸಿ ಶ್ರುತಿಯು ಹೀಗೆನ್ನುತ್ತಿದೆ. ಇದೆಲ್ಲವೂ ಗೃಹಸ್ಥನಾದವನು ಮಾಡಬೇಕಾದದ್ದೆ(ಲ್ಲವೂ) ಇಷ್ಟೇ, ಇಷ್ಟು ಪರಿಮಾಣದ್ದೇ; ಏಕೆಂದರೆ ವೇದಗಳನ್ನು ಅಧ್ಯಯನಮಾಡಬೇಕು, ಯಜ್ಞಗಳನ್ನು ಮಾಡಬೇಕು, ಮತ್ತು ಲೋಕಗಳನ್ನು ಗೆದ್ದುಕೊಳ್ಳಬೇಕು. ಇವನು ಇದೆಲ್ಲವೂ ಆಗಿ ಈ ನನ್ನ ಅಧೀನವಾಗಿರುವ ಹೊರೆಯನ್ನು ನನ್ನಿಂದ ತಪ್ಪಿಸಿ ತನ್ನಲ್ಲಿಟ್ಟುಕೊಂಡು ಇವರಿಂದ ಈ ಲೋಕದಿಂದ ನನ್ನನ್ನು ಕಾಪಾಡುವನು. (ಇಲ್ಲಿ) ಅಭುನಜತ್ ಎಂಬ ಲಙ್ (ಭೂತ)ರೂಪವನ್ನು ಲೃಟ್ (ಭವಿಷ್ಯದರ್ಥ)ದಲ್ಲಿ ಪ್ರಯೋಗಿಸಿದೆ; ಏಕೆಂದರೆ ವೇದದಲ್ಲಿ ಕಾಲದ ನಿಯಮವಿಲ್ಲ.[2] ಹೀಗೆ ಸಿದ್ಧನಾದ ಪುತ್ರನು ತಂದೆಯನ್ನು ಈ ಲೋಕದಿಂದ ಎಂದರೆ ಕರ್ತವ್ಯತಾಬಂಧನದಿಂದ ಬಿಡುಗಡೆಮಾಡುತ್ತಾನಷ್ಟೆ, ಆದ್ದರಿಂದ ಅನುಶಿಷ್ಟನಾದ ಪುತ್ರನನ್ನು ಲೋಕ್ಯನು, ತಂದೆಯ ಲೋಕಕ್ಕೆ ಹಿತನಾದವನು ಎಂದು ಬ್ರಾಹ್ಮಣರು ಹೇಳುತ್ತಾರೆ. ಆದ್ದರಿಂದಲೇ ಅಲ್ಲವೆ, ಇವನು ನಮಗೆ ಲೋಕ್ಯವಾಗಲಿ ಎಂದು ಮಗನಿಗೆ ಅನುಶಾಸನವನ್ನು ಮಾಡುತ್ತಾರೆ ?

---

1. ಹೀಗೆ ಸಂಪ್ರತ್ತಿಯನ್ನು ಮಾಡುವವರಲ್ಲಿ.
2. ವೇದದಲ್ಲಿ ಒಂದು ಲಕಾರವನ್ನು ಮತ್ತೊಂದರರ್ಥದಲ್ಲಿ ಪ್ರಯೋಗಿಸಿರುವದು ಕಂಡುಬರುತ್ತದೆ.

## ಸಂಪ್ರತ್ತಿಯ ಫಲ

(ಭಾಷ್ಯ)

೨೩೫. ಸ ಪಿತಾ ಯದಾ ಯಸ್ಮಿನ್ ಕಾಲೇ ಏವಂವಿತ್ ಪುತ್ರ ಸಮರ್ಪಿತಕರ್ತವ್ಯತಾಕ್ರತುಃ ಅಸ್ಮಾತ್ ಲೋಕಾತ್ ಪ್ರೈತಿ ಮ್ರಿಯತೇ ತದಾ ಏಭಿರೇವ ಪ್ರಕೃತೈಃ ವಾಙ್ಮನಃಪ್ರಾಣೈಃ ಪುತ್ರಮ್ ಆವಿಶತಿ ಪುತ್ರಂ ವ್ಯಾಪ್ನೋತಿ। ಅಧ್ಯಾತ್ಮಪರಿಚ್ಛೇದಹೇತ್ವಪಗಮಾತ್ ಪಿತುರ್ವಾಙ್ಮನಃಪ್ರಾಣಾಃ ಸ್ವೇನ ಆಧಿದೈವಿಕೇನ ರೂಪೇಣ ಪೃಥಿವ್ಯಗ್ನ್ಯಾದ್ಯಾತ್ಮನಾ ಭಿನ್ನಘಟಪ್ರದೀಪ ಪ್ರಕಾಶವತ್ ಸರ್ವಮ್ ಆವಿಶನ್ತಿ। ತೈಃ ಪ್ರಾಣೈಃ ಸಹ ಪಿತಾಪಿ ಆವಿಶತಿ ವಾಙ್ಮನಃಪ್ರಾಣಾತ್ಮಭಾವಿತ್ವಾತ್ ಪಿತುಃ। ಅಹಮಸ್ಮಿ ಅನನ್ತಾ ವಾಙ್ಮನಃ ಪ್ರಾಣಾಃ ಅಧ್ಯಾತ್ಮಾದಿಭೇದವಿಸ್ತಾರಾಃ ಇತ್ಯೇವಂಭಾವಿತೋ ಹಿ ಪಿತಾ। ತಸ್ಮಾತ್ ತತ್ಪ್ರಾಣಾನುವೃತ್ತಿತ್ವಂ ಪಿತುರ್ಭವತಿ ಇತಿ ಯುಕ್ತಮುಕ್ತಮ್ ಏಭಿರೇವ ಪ್ರಾಣೈಃ ಸಹ ಪುತ್ರಮಾವಿಶತಿ ಇತಿ। ಸರ್ವೇಷಾಂ ಹಿ ಅಸೌ ಆತ್ಮಾ ಭವತಿ ಪುತ್ರಸ್ಯ ಚ। ಏತದುಕ್ತಂ ಭವತಿ। ಯಸ್ಯ ಪಿತುಃ ಏವಮನುಶಿಷ್ಟಃ ಪುತ್ರೋ ಭವತಿ, ಸಃ ಅಸ್ಮಿನ್ನೇವ ಲೋಕೇ ವರ್ತತೇ ಪುತ್ರರೂಪೇಣ ನೈವ ಮೃತೋ ಮನ್ತವ್ಯಃ ಇತ್ಯರ್ಥಃ। ತಥಾ ಚ ಶ್ರುತ್ಯನ್ತರೇ- "ಸೋಽಸ್ಯಾಯಮಿತರ[1] ಆತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ" (ಐ. ೨-೪) ಇತಿ ॥

(ಭಾಷ್ಯಾರ್ಥ)

ಆ ಹೀಗೆಂದು ಅರಿತುಕೊಂಡಿರುವ[2] ತಂದೆಯು ಯಾವಾಗ ಯಾವ ಕಾಲದಲ್ಲಿ ಪುತ್ರನಿಗೆ ಮಾಡತಕ್ಕ ವಿಷಯದ ನಿಶ್ಚಯವನ್ನು ಒಪ್ಪಿಸಿಕೊಟ್ಟು ಈ ಲೋಕದಿಂದ ಹೊರಟುಹೋಗುವನೋ ಸಾಯುವನೋ, (ಅಥ=ತದಾ) ಆಗ ಇದೇ ಪ್ರಕೃತವಾದ ವಾಙ್ಮನಃಪ್ರಾಣಗಳೊಡನೆ ಪುತ್ರನನ್ನು ತುಂಬಿಕೊಳ್ಳುತ್ತಾನೆ, ಪುತ್ರನನ್ನು ವ್ಯಾಪಿಸಿಕೊಳ್ಳುತ್ತಾನೆ. ಅಧ್ಯಾತ್ಮಪರಿಚ್ಛೇದಕ್ಕೆ ಕಾರಣ(ವಾಗಿದ್ದ ಮಿಥ್ಯಾಭಿಮಾನವು) ಹೋದದ್ದರಿಂದ ತಂದೆಯ ವಾಙ್ಮನಃಪ್ರಾಣಗಳು ತಮ್ಮ ಆಧಿದೈವಿಕವಾದ ರೂಪದಿಂದ ಪೃಥಿವಿ, ಅಗ್ನಿ- ಮುಂತಾದ ರೂಪದಿಂದ ಒಡೆದ ಗಡಿಗೆಯ ದೀಪದ ಪ್ರಕಾಶದಂತೆ[3] ಎಲ್ಲವನ್ನೂ ತುಂಬಿಕೊಳ್ಳುವವು. ಆ

1. ಅನುವಾದದಲ್ಲಿ ಟಿಪ್ಪಣಿಯನ್ನು ನೋಡಿ.

2. ಭಾವನೆಮಾಡಿಕೊಂಡಿರುವ.

3. ಗಡಿಗೆಯೊಳಗೆ ಮುಚ್ಚಿಕೊಂಡಿರುವಾಗ ಪರಿಚ್ಛಿನ್ನವಾಗಿ ಬೆಳಗುತ್ತಿದ್ದ ದೀಪ ಪ್ರಕಾಶವು ಗಡಿಗೆಯು ಒಡೆಯಲು ಕೋಣೆಯಲ್ಲಿ ಎಲ್ಲೆಲ್ಲಿಯೂ ತುಂಬಿಕೊಳ್ಳುವಂತೆ ಎಂದರ್ಥ.

ಪ್ರಾಣಗಳೊಡನೆ ತಂದೆಯೂ ತುಂಬಿಕೊಳ್ಳುತ್ತಾನೆ; ಏಕೆಂದರೆ ತಂದೆಯು (ಈಗ) ವಾಙ್ಮನಃಪ್ರಾಣಗಳೇ ತಾನಾಗಿರುತ್ತಾನೆ. ನಾನು ಅಧ್ಯಾತ್ಮಾದಿಭೇದಗಳಿಂದ ಹರಡಿಕೊಂಡಿರುವ ಅನಂತವಾದ ವಾಙ್ಮನಃಪ್ರಾಣಗಳಾಗಿರುತ್ತೇನೆ ಎಂದಲ್ಲವೆ, ತಂದೆಯು ಭಾವನೆಯುಳ್ಳವನಾಗಿರುತ್ತಾನೆ?[1] ಆದ್ದರಿಂದ ಆ ಪ್ರಾಣಗಳ ಅನುವರ್ತನೆಯು ತಂದೆಗೆ ಆಗುತ್ತದೆಯಾಗಿ "ಇದೇ ಪ್ರಾಣಗಳೊಡನೆ ಪುತ್ರನನ್ನು ತುಂಬಿಕೊಳ್ಳುತ್ತಾನೆ" ಎಂದು ಹೇಳಿದ್ದು ಯುಕ್ತವಾಗಿದೆ. ಇವನು ಎಲ್ಲರಿಗೂ, ಪುತ್ರನಿಗೂ ಸಹ, ಆತ್ಮನಾಗುತ್ತಾನಲ್ಲವೆ?

ಇಲ್ಲಿ ಇಷ್ಟನ್ನು ಹೇಳಿದಂತಾಗಿದೆ. ಯಾವ ತಂದೆಯ ಮಗನು ಹೀಗೆ ಅನುಶಿಷ್ಟನಾಗಿರುವನೋ, ಅವನು ಈ ಲೋಕದಲ್ಲಿಯೇ ಪುತ್ರರೂಪದಿಂದ ಇದ್ದುಕೊಂಡಿರುತ್ತಾನೆ, (ಅವನು) ಸತ್ತನೆಂದು ತಿಳಿಯಬಾರದು ಎಂದರ್ಥ. ಆದ್ದರಿಂದಲೇ ಬೇರೊಂದು ಶ್ರುತಿಯಲ್ಲಿ "ಈ (ತಂದೆಯ) ಈ ಮತ್ತೊಬ್ಬ[2] ಆತ್ಮನು ಪುಣ್ಯಕರ್ಮಗಳಿಗೋಸ್ಕರ ಪ್ರತಿನಿಧಿಯಾಗಿ ಮಾಡಲ್ಪಡುತ್ತಾನೆ" (ಐ. ೨-೪) ಎಂದು (ಹೇಳಿದೆ).

## ಪುತ್ರನಿರ್ವಚನ

(ಭಾಷ್ಯ)

೨೩೬. ಅಥ ಇದಾನೀಂ ಪುತ್ರನಿರ್ವಚನಮ್ ಆಹ। ಸ ಪುತ್ರೋ ಯದಿ ಕದಾಚಿತ್ ಅನೇನ ಪಿತ್ರಾ ಅಕ್ಷ್ಣಯಾ ಕೋಣಚ್ಛಿದ್ರತೋ ಅನ್ತರಾ ಅಕೃತಂ ಭವತಿ ಕರ್ತವ್ಯಮ್। ತಸ್ಮಾತ್ ಕರ್ತವ್ಯತಾರೂಪಾತ್ ಪಿತ್ರಾ ಅಕೃತಾತ್ ಸರ್ವಸ್ಮಾತ್ ಲೋಕಪ್ರಾಪ್ತಿಪ್ರತಿಬನ್ಧರೂಪಾತ್ ಪುತ್ರೋ ಮುಞ್ಚತಿ ಮೋಚಯತಿ ತತ್ ಸರ್ವಂ ಸ್ವಯಮ್ ಅನುತಿಷ್ಠನ್ ಪೂರಯಿತ್ವಾ। ತಸ್ಮಾತ್ ಪೂರಣೇನ ತ್ರಾಯತೇ ಸ ಪಿತರಂ ಯಸ್ಮಾತ್ ತಸ್ಮಾತ್ ಪುತ್ರೋ ನಾಮ। ಇದಂ ತತ್ ಪುತ್ರಸ್ಯ ಪುತ್ರತ್ವಂ ಯತ್ ಪಿತುಶ್ಛಿದ್ರಂ ಪೂರಯಿತ್ವಾ ತ್ರಾಯತೇ। ಸ ಪಿತಾ ಏವಂವಿಧೇನ ಪುತ್ರೇಣ ಮೃತೋಽಪಿ ಸನ್ ಅಮೃತಃ ಅಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ। ಏವಮಸೌ ಪಿತಾ ಪುತ್ರೇಣ ಇಮಂ ಮನುಷ್ಯಲೋಕಂ ಜಯತಿ। ನ ಯಥಾ[3] ವಿದ್ಯಾಕರ್ಮಭ್ಯಾಂ ದೇವಲೋಕಪಿತೃಲೋಕೌ ಸ್ವರೂಪ

1. ಹಿಂದಿನ ವಾಕ್ಯದಲ್ಲಿಯೂ 'ಭಾವಿತತ್ವಾತ್' ಎಂದಿದ್ದರೆ ವಾಙ್ಮನಃಪ್ರಾಣಗಳಿಂದೇ ಭಾವಿತನಾಗಿರುತ್ತಾನೆ ಎಂದು ಕನ್ನಡಿಸಿಕೊಳ್ಳಬೇಕಾಗುವದು.

2. ಇಲ್ಲಿ 'ಇತರಃ' ಎಂಬ ಮಾತನ್ನು ಭಾಷ್ಯಕಾರರು ಸೇರಿಸಿಕೊಂಡಿರುತ್ತಾರೆ ಆದ್ದರಿಂದ ಇದು ಶ್ರುತಿವಾಕ್ಯವಲ್ಲ, ಶ್ರುತ್ಯರ್ಥಮಾತ್ರ. ತಂದೆಯು ಮತ್ತೊಬ್ಬ ಆತ್ಮನಾಗಿರುವ ಪುತ್ರನು ಕರ್ಮಕ್ಕೆ ಪ್ರತಿನಿಧಿಯಾಗುತ್ತಾನೆ, ಮಗನಿಗೆ ಆತ್ಮನಂತಿರುವ ತಂದೆಯು ವಯಸ್ಸಾಗಲು ಸಾಯುತ್ತಾನೆ ಎಂದು ಶ್ರುತಿಯ ಅಭಿಪ್ರಾಯವು. ತಂದೆಗೂ ಮಗನಿಗೂ ಸಂಪ್ರತ್ತಿಕರ್ಮದಿಂದ ಐಕಾತ್ಮ್ಯವುಂಟಾಗುತ್ತದೆ ಎಂದು ಹೇಳಿದಂತೆ ಆಯಿತು.

3. ತಥಾ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಲಾಭಸತ್ತಾಮಾತ್ರೇಣ। ನ ಹಿ ವಿದ್ಯಾಕರ್ಮಣೀ ಸ್ವರೂಪಲಾಭವ್ಯತಿರೇಕೇಣ ಪುತ್ರವತ್ ವ್ಯಾಪಾರಾನ್ತರಾಪೇಕ್ಷಯಾ ಲೋಕಜಯಹೇತುತ್ವಂ ಪ್ರತಿಪದ್ಯೇತೇ। ಅಥ ಕೃತಸಂಪ್ರತ್ತಿಕಂ ಪಿತರಮ್ ಏನಮ್ ಏತೇ ವಾಗಾದಯಃ ಪ್ರಾಣಾಃ ದೈವಾ ಹೈರಣ್ಯಗರ್ಭಾಃ ಅಮೃತಾ ಅಮರಣಧರ್ಮಾಣಃ ಆವಿಶನ್ತಿ। ಕಥಮಿತಿ ವಕ್ಷ್ಯತಿ ಪೃಥಿವ್ಯೈ ಚೈನಮಿತ್ಯಾದಿ ॥

(ಭಾಷ್ಯಾರ್ಥ)

ಇನ್ನು ಈಗ (ಶ್ರುತಿಯು) ಪುತ್ರನಿರ್ವಚನವನ್ನು ಹೇಳುತ್ತದೆ: ಆ ಪುತ್ರನು ಒಂದು ವೇಳೆ ಈ ತಂದೆಯು ಕೊರೆಯಿಂದ ನಡುವೆ (ಯಾವದಾದರೊಂದು) ಮೂಲೆಯು ಸಾಲದೆ ಕರ್ತವ್ಯವನ್ನು ಮಾಡದೆ ಇರುವನಾದರೆ ಲೋಕಪ್ರಾಪ್ತಿಗೆ ಅಡ್ಡಿಯಾಗಿ, ಆ ಕರ್ತವ್ಯವೆಂಬ ತಂದೆಯು ಮಾಡದೆ ಇರುವದೆಲ್ಲದರಿಂದಲೂ ಪುತ್ರನು ಬಿಡಿಸುತ್ತಾನೆ[1]; ಅವೆಲ್ಲವನ್ನೂ ತಾನೇ ಮಾಡುವವನಾಗಿ ಪೂರ್ಣಗೊಳಿಸಿ ಬಿಡುಗಡೆಮಾಡಿಸುತ್ತಾನೆ. ಪೂರ್ಣಗೊಳಿಸಿ ಅವರಿಂದ ತಂದೆಯನ್ನು (ತ್ರಾಯತೇ) ಕಾಪಾಡುತ್ತಾನಲ್ಲವೆ, ಆದ್ದರಿಂದ ಪುತ್ರನೆನಿಸಿಸುತ್ತಾನೆ. ತಂದೆಯ ರಂಧ್ರವನ್ನು ಪೂರಣಮಾಡಿ ತ್ರಾಣಮಾಡುತ್ತಾನಲ್ಲ, ಇದೇ ಆ ಪುತ್ರನ ಪುತ್ರತ್ವವು.

ಆ ತಂದೆಯು ಇಂಥ ಮಗನಿಂದ, ಮೃತನಾಗಿದ್ದರೂ ಅಮೃತನಾಗಿ, ಈ ಲೋಕದಲ್ಲಿಯೇ ನಿಂತಿರುತ್ತಾನೆ. ಹೀಗೆ ಈ ತಂದೆಯು ಪುತ್ರನಿಂದ ಈ ಮನುಷ್ಯಲೋಕವನ್ನು ಗೆದ್ದುಕೊಳ್ಳುತ್ತಾನೆ. ಹೇಗೆ ವಿದ್ಯಾಕರ್ಮಗಳಿಂದ, (ಅವುಗಳಿಗೆ) ಸ್ವರೂಪಲಾಭ(ವಾದ)ಮಾತ್ರದಿಂದಲೇ[2] ದೇವಲೋಕಪಿತೃಲೋಕಗಳನ್ನು (ಗೆದ್ದುಕೊಳ್ಳುವನೋ) ಹಾಗಲ್ಲ. **ವಿದ್ಯಾಕರ್ಮಗಳು ಸ್ವರೂಪಲಾಭಕ್ಕಿಂತ ಬೇರೆಯಾಗಿ ಪುತ್ರನಂತೆ ಮತ್ತೊಂದು ವ್ಯಾಪಾರವನ್ನು ಬಯಸಿ ಲೋಕಕ್ಕೆ ಕಾರಣವಾಗುವದಿಲ್ಲವಷ್ಟೆ.**[3]

ಇನ್ನು ಸಂಪ್ರತ್ತಿಯನ್ನು ಮಾಡಿದ ಈ ತಂದೆಯನ್ನು ಈ ವಾಗಾದಿಗಳೆಂಬ ಪ್ರಾಣಗಳು ದೈವ ಎಂದರೆ ಹಿರಣ್ಯಗರ್ಭನ ಸಂಬಂಧವಾದ ಅಮೃತವಾದ ನಾಶವೆಂಬ ಧರ್ಮವಿಲ್ಲದ ಈ ವಾಗಾದಿಪ್ರಾಣಗಳು ಸೇರಿಕೊಳ್ಳುವವು. (ಅದು)

---

1. ತಂದೆಯು ಕರ್ತವ್ಯವನ್ನು ಮಾಡದೆ ಬಿಟ್ಟದ್ದೆಲ್ಲವೂ ಲೋಕಪ್ರಾಪ್ತಿಗೆ ಅಡ್ಡಿಯಾಗಿರುತ್ತದೆ; ಆ ಅಡ್ಡಿಯಿಂದ ತಂದೆಯನ್ನು ಮಗನು ಬಿಡಿಸುತ್ತಾನೆ ಎಂದರ್ಥ.

2. ಹುಟ್ಟಿದ ಮಾತ್ರದಿಂದಲೇ.

3. ಪುತ್ರನು ಹುಟ್ಟಿದ ಮಾತ್ರದಿಂದ ಮನುಷ್ಯಲೋಕಜಯಕ್ಕೆ ಕಾರಣನಾಗುವದಿಲ್ಲ; ತಂದೆಯು ಮಾಡದೆ ಇದ್ದ ಕರ್ತವ್ಯವನ್ನು ಮಾಡಿ ಪೂರಯಿಸುವದರಿಂದಲೇ ಕಾರಣನಾಗುತ್ತಾನೆ. ಆದರೆ ಕರ್ಮವು ಆದರೆ, ಉಪಾಸನೆಯು ಸಾಕ್ಷಾತ್ಕಾರವು ಆದರೆ, ಮತ್ತೆ ಯಾವ ವ್ಯಾಪಾರವೂ ಬೇಕಿಲ್ಲದೆ ಪಿತೃಲೋಕದೇವಲೋಕಜಯವಾಗುವದು.

ಹೇಗೆಂಬುದನ್ನು 'ಪೃಥಿವ್ಯೈ ಚೈನಮ್' ಮುಂತಾದ (ಮುಂದಿನ ಗ್ರಂಥದಲ್ಲಿ ಶ್ರುತಿಯು) ಹೇಳುವದು.

## ಪುತ್ರಾದಿಗಳು ನೇರಾಗಿ ಮೋಕ್ಷಸಾಧನವಲ್ಲ

(ಭಾಷ್ಯ)

೨೩೭. ಏವಂ ಪುತ್ರಕರ್ಮಾಪರವಿದ್ಯಾನಾಂ ಮನುಷ್ಯಲೋಕಪಿತೃಲೋಕದೇವಲೋಕಸಾಧ್ಯಾರ್ಥತಾ ಪ್ರದರ್ಶಿತಾ ಶ್ರುತ್ಯಾ ಸ್ವಯಮೇವ। ಅತ್ರ ಕೇಚಿತ್ ವಾವದೂಕಾಃ ಶ್ರುತ್ಯುಕ್ತವಿಶೇಷಾರ್ಥಾನಭಿಜ್ಞಾಃ ಸನ್ತಃ ಪುತ್ರಾದಿಸಾಧನಾನಾಂ ಮೋಕ್ಷಾರ್ಥತಾಂ ವದನ್ತಿ। ತೇಷಾಂ ಮುಖಾಪಿಧಾನಂ ಶ್ರುತ್ಯಾ ಇದಂ ಕೃತಂ 'ಜಾಯಾ ಮೇ ಸ್ಯಾತ್' ಇತ್ಯಾದಿ ಪಾಙ್ಕ್ತಂ ಕಾಮ್ಯಂ ಕರ್ಮ ಇತ್ಯುಪಕ್ರಮೇಣ, ಪುತ್ರಾದೀನಾಂ ಚ ಸಾಧ್ಯವಿಶೇಷವಿನಿಯೋಗೋಪಸಂಹಾರೇಣ ಚ। ತಸ್ಮಾತ್ ಋಣತ್ರಯಶ್ರುತಿಃ ಅವಿದ್ವದ್ವಿಷಯಾ ನ ಪರಮಾತ್ಮವಿದ್ವಿಷಯಾ ಇತಿ ಸಿದ್ಧಮ್। ವಕ್ಷ್ಯತಿ ಚ "ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ" (೪-೪-೨೨) ಇತಿ ॥

(ಭಾಷ್ಯಾರ್ಥ)

ಹೀಗೆ ಪುತ್ರ, ಕರ್ಮ, ಅಪರವಿದ್ಯೆ – (ಇವು) ಮನುಷ್ಯಲೋಕ, ಪಿತೃಲೋಕ, ದೇವಲೋಕ –ಎಂಬ ಸಾಧ್ಯಗಳಿಗಾಗಿರುವ (ಸಾಧನಗಳು) ಎಂದು ಶ್ರುತಿಯು ತಾನೇ ತಿಳಿಸಿಕೊಟ್ಟಿರುತ್ತದೆ. (ಆದರೆ) **ಇಲ್ಲಿ ಕೆಲವರು ವಾದಿಗಳು ಶ್ರುತಿಯಲ್ಲಿ ಹೇಳಿರುವ ವಿಶೇಷಾರ್ಥವನ್ನು ತಿಳಿದುಕೊಳ್ಳಲಾರದವರಾಗಿ ಪುತ್ರನೇ ಮುಂತಾದ ಸಾಧನಗಳು (ನೇರಾಗಿ) ಮೋಕ್ಷಕ್ಕೇ (ಸಾಧನ)ವೆನ್ನುತ್ತಾರೆ**[1] "ನನಗೆ ಹೆಂಡತಿಯಾಗಬೇಕು" ಎಂದುಮುಂತಾಗಿ ಪಾಙ್ಕ್ತಕರ್ಮವು ಕಾಮ್ಯವೆಂದು ಉಪಕ್ರಮಿಸಿರುವದರಿಂದಲೂ ಪುತ್ರಾದಿಗಳು ಇಂಥಿಂಥ ಸಾಧ್ಯಕ್ಕೆ ಎಂದು ವಿನಿಯೋಗ(ಮಾಡಿರುವ) ಉಪಸಂಹಾರ (ಮಾಡಿರುವದರಿಂದಲೂ ಶ್ರುತಿಯು ಹೀಗೆ ಅವರ ಬಾಯಿಯನ್ನು ಮುಚ್ಚಿಸಿರುತ್ತದೆ.[2] ಆದ್ದರಿಂದ ಋಣ(ತ್ರಯ)ಶ್ರುತಿಯು[3] ಅಜ್ಞರ ವಿಷಯವೇ

1. ಇವರು ಮೀಮಾಂಸಕರೆಂದು ಆ॥ ಟೀ॥ ಐ. ಭಾ.ದ ಅವತರಣಿಕೆ ಮುಂತಾದವುಗಳಲ್ಲಿ ಹೇಳಿರುವ ಋಣತ್ರಯವಾದಿಗಳ ಮತವು ಇದೇ.

2. ಪುತ್ರಾದಿಗಳನ್ನು ಮೋಕ್ಷಕ್ಕೆ ಕಾರಣವೆಂದು ಹೇಳದೆ ಅವು ಇಂಥಿಂಥ ಲೋಕದ ಜಯಕ್ಕೆ ಕಾರಣವೆಂದೇ ಹೇಳಿರುವದರಿಂದ ಶ್ರುತಿಗೆ ಇವರ ಅಭಿಪ್ರಾಯವು ಸಮ್ಮತವಿಲ್ಲವೆಂದಾಗುತ್ತದೆ ಎಂದು ಭಾವ.

3. ೧-೪-೧೦ (ಭಾ. ಭಾ. ೧೬೮), ೧-೪-೧೬ (ಭಾ. ಭಾ. ೧೯೩)ರಲ್ಲಿ ಈ ಋಣತ್ರಯವಿಚಾರವನ್ನು ಮಾಡಿರುವದನ್ನು ನೋಡಿ.

ಹೊರತು ಪರಮಾತ್ಮಜ್ಞಾನಿಗಳ ವಿಷಯವಲ್ಲ ಎಂದು ಸಿದ್ಧವಾಯಿತು. "(ನಾವು) ಪ್ರಜೆಯಿಂದ ಏನು ಮಾಡಿಕೊಳ್ಳೋಣ? ಈ ನಮಗೆ ಇವನೇ ಆತ್ಮನು, ಇವನೇ ಲೋಕವು" (೪-೪-೨೨) ಎಂದು ಮುಂದೆ ಹೇಳಿಯೂ ಇರುತ್ತದೆ.[1]

## ಭರ್ತೃಪ್ರಪಂಚರ ಮತದ ಖಂಡನೆ

(ಭಾಷ್ಯ)

೨೩೮. ಕೇಚಿತ್ತು ಪಿತೃಲೋಕದೇವಲೋಕಜಯೋಽಪಿ ಪಿತೃಲೋಕದೇವಲೋಕಾಭ್ಯಾಂ ವ್ಯಾವೃತ್ತಿರೇವ । ತಸ್ಮಾತ್ ಪುತ್ರಕರ್ಮಾಪರವಿದ್ಯಾಭಿಃ ಸಮುಚ್ಚಿತ್ಯ ಅನುಷ್ಠಿತಾಭಿಃ ತ್ರಿಭ್ಯ ಏತೇಭ್ಯೋ ಲೋಕೇಭ್ಯೋ ವ್ಯಾವೃತ್ತಃ ಪರಮಾತ್ಮವಿಜ್ಞಾನೇನ ಮೋಕ್ಷಮ್ ಅಧಿಗಚ್ಛತಿ ಇತಿ ಪರಮ್ಪರಯಾ ಮೋಕ್ಷಾರ್ಥಾನ್ಯೇವ ಪುತ್ರಾದಿಸಾಧನಾನಿ ಇಚ್ಛನ್ತಿ । ತೇಷಾಮಪಿ ಮುಖಾಪಿಧಾನಾಯ ಇಯಮೇವ ಶ್ರುತಿರುತ್ತರಾ ಕೃತಸಂಪ್ರತ್ತಿಕಸ್ಯ ಪುತ್ರಿಣಃ ಕರ್ಮಿಣಃ ತ್ರ್ಯನ್ನಾತ್ಮವಿದ್ಯಾವಿದಃ ಫಲಪ್ರದರ್ಶನಾಯ ಪ್ರವೃತ್ತಾ। ನ ಚ ಇದಮೇವ ಫಲಂ ಮೋಕ್ಷಫಲಮ್ ಇತಿ ಶಕ್ಯಂ ವಕ್ತುಮ್ । ತ್ರ್ಯನ್ನಸಂಬನ್ಧಾತ್ ಮೇಧಾತಪಃಕಾರ್ಯತ್ವಾಚ್ಚ (೧-೫-೧) ಅನ್ನಾನಾಂ ಪುನಃ ಪುನರ್ಜನಯತೇ (೧-೫-೨) ಇತಿ ದರ್ಶನಾತ್ 'ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ' (೧-೫-೨) ಇತಿ ಚ ಕ್ಷಯಶ್ರವಣಾತ್ 'ಶರೀರಂ ಜ್ಯೋತೀರೂಪಮ್' ಇತಿ ಚ ಕಾರ್ಯಕರಣತ್ವೋಪಪತ್ತೇಃ' (೧-೫-೧೧.....೧೭)- 'ತ್ರಯಂ ವಾ ಇದಮ್' (೧-೬-೧) ಇತಿ ಚ ನಾಮರೂಪಕರ್ಮಾತ್ಮಕತ್ವೇನ ಉಪಸಂಹಾರಾತ್ । ನ ಚ ಇದಮೇವ ಸಾಧನತ್ರಯಂ ಸಂಹತಂ ಸತ್ ಕಸ್ಯಚಿತ್ ಮೋಕ್ಷಾರ್ಥಮ್ ಕಸ್ಯಚಿತ್ ತ್ರ್ಯನ್ನಾತ್ಮಕಫಲಮ್ ಇತಿ ಅಸ್ಮಾದೇವ ವಾಕ್ಯಾತ್ ಅವಗನ್ತುಂ ಶಕ್ಯಮ್ । ಪುತ್ರಾದಿಸಾಧನಾನಾಂ ತ್ರ್ಯನ್ನಾತ್ಮಕಫಲದರ್ಶನೇನೈವ ಉಪಕ್ಷೀಣತ್ವಾತ್ ವಾಕ್ಯಸ್ಯ ॥

(ಭಾಷ್ಯಾರ್ಥ)

ಆದರೆ ಕೆಲವರು ಪಿತೃಲೋಕದೇವಲೋಕಗಳ ಜಯ(ವೆಂಬುದು) ಕೂಡ ಪಿತೃಲೋಕದೇವಲೋಕಗಳಿಂದ ಹಿಂತಿರುಗುವದೇ. ಆದ್ದರಿಂದ ಪುತ್ರ, ಕರ್ಮ, ಅಪರವಿದ್ಯೆ- (ಇವೆಲ್ಲವನ್ನೂ) ಸೇರಿಸಿಕೊಂಡು ಅನುಷ್ಠಾನಮಾಡಿದರೆ ಈ ಮೂರು ಲೋಕಗಳಿಂದಲೂ ಹಿಂತಿರುಗಿ[2] ಪರಮಾತ್ಮವಿಜ್ಞಾನದಿಂದ ಮೋಕ್ಷ

1. ವಿರಕ್ತರಾದ ವಿವೇಕಿಗಳಾದ ಮುಮುಕ್ಷುಗಳಿಗೂ ಋಣತ್ರಯವನ್ನು ತೀರಿಸುವದು ಅವಶ್ಯವಾಗಿದ್ದರೆ ಈ ಶ್ರುತಿಯು ಹೀಗೆಂದು ಹೇಳುತ್ತಿರಲಿಲ್ಲ ಎಂದು ಭಾವ.

2. ಪುತ್ರಾದಿಗಳಿಂದ ಮನುಷ್ಯಾದಿಲೋಕಗಳನ್ನು ಜಯಿಸುವದು ಎಂದರೆ ಆಯಾ ಫಲದಲ್ಲಿ ವಿರಕ್ತನಾಗಿ ಮುಂದಕ್ಕೆ ಹೋಗುವದು ; ಲೋಕತ್ರಯವನ್ನೂ ಮೀರಿದವನಿಗೇ ಜ್ಞಾನದಿಂದ ಮೋಕ್ಷ ಎಂಬುದು ಭರ್ತೃಪ್ರಪಂಚರ ಅಭಿಪ್ರಾಯ.

ವನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಪುತ್ರಾದಿಸಾಧನಗಳೂ ಪರಂಪರೆಯಿಂದ ಮೋಕ್ಷಸಾಧನಗಳೇ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಅವರನ್ನೂ ಬಾಯಿಮುಚ್ಚಿಸುವದಕ್ಕಾಗಿ ಇದೇ ಮುಂದಿನ ('ಪೃಥಿವ್ಯೈ' ಮುಂತಾದ) ಶ್ರುತಿಯೇ ಸಂಪ್ರತ್ತಿಕರ್ಮವನ್ನು ಮಾಡಿ ಪುತ್ರಿಯೂ ಕರ್ಮಿಯೂ ತ್ರ್ಯನ್ನಾತ್ಮವಿದ್ಯೆಯನ್ನು ಬಲ್ಲವನೂ ಆಗಿರುವವನಿಗೆ ಫಲವನ್ನು ತಿಳಿಸುವದಕ್ಕಾಗಿ ಹೊರಟಿರುತ್ತದೆ.[1]

ಈ ಫಲವೇ ಮೋಕ್ಷಫಲವೆಂದು ಹೇಳುವದಕ್ಕೂ ಆಗುವಂತಿಲ್ಲ. ಏಕೆಂದರೆ (ಇದು) ತ್ರ್ಯನ್ನಕ್ಕೆ ಸಂಬಂಧಪಟ್ಟಿರುತ್ತದೆ, ಮತ್ತು ಅನ್ನಗಳು ಮೇಧಾತಪಸ್ಸುಗಳ ಕಾರ್ಯವಾಗಿವೆ[2] (೧-೫-೧), 'ಅನ್ನಗಳನ್ನು ಮತ್ತೆಮತ್ತೆ ಉಂಟುಮಾಡಿದನು' (೧-೫-೧) ಎಂದು ಶ್ರುತಿಯೂ ಹೇಳಿರುತ್ತದೆ; ಮತ್ತು "ಇದನ್ನು ಮಾಡದೆ ಇದ್ದರೆ ಕ್ಷಯವಾಗಬೇಕಾದೀತು" (೧-೫-೨) ಎಂದು (ಫಲಕ್ಕೆ) ಕ್ಷಯವನ್ನೂ ಶ್ರುತಿಯಲ್ಲಿ ಹೇಳಿದೆ.[3] ಶರೀರವು, ಜ್ಯೋತೀರೂಪವು (೧-೫-೧೧ ರಿಂದ ೧೩) ಎಂದು ಕಾರ್ಯಕರಣಗಳನ್ನು (ಹೇಳಿರುವದೂ ಹೀಗೆಯೇ) ಹೊಂದುತ್ತದೆ[4]; ಮತ್ತು "ಇದು ಮೂರೇ" (೧-೬-೧) ಎಂದು (ಇದೆಲ್ಲವೂ) ನಾಮರೂಪಕರ್ಮಾತ್ಮಕವೆಂದು (ಮುಂದೆ) ಉಪಸಂಹಾರ(ಮಾಡಲಾಗಿದೆ).[5] ಇದಲ್ಲದೆ ಇದೇ ಸಾಧನತ್ರಯವು ಒಟ್ಟುಗೂಡಿದರೆ ಒಬ್ಬನಿಗೆ ಮೋಕ್ಷಪ್ರಯೋಜನಕ್ಕೂ ಒಬ್ಬನಿಗೆ ತ್ರ್ಯನ್ನಾತ್ಮಫಲಕ್ಕೂ (ಕಾರಣವು) ಎಂದು ಈ (ಒಂದೇ) ವಾಕ್ಯದಿಂದ ಗೊತ್ತುಪಡಿಸುವದಕ್ಕೂ ಆಗುವದಿಲ್ಲ; ಏಕೆಂದರೆ ಪುತ್ರಾದಿಸಾಧನಗಳಿಗೆ ತ್ರ್ಯನ್ನಾತ್ಮಕಫಲವನ್ನು ತಿಳಿಸುವದರಿಂದಲೇ (ಈ) ವಾಕ್ಯವು ಕೊನೆಗಂಡಿರುತ್ತದೆ.[6]

---

1. ಆದ್ದರಿಂದ ಇಲ್ಲಿ ಆಯಾ ಫಲಗಳಿಂದ ಹಿಂತಿರುಗುವದನ್ನು ಹೇಳಿಲ್ಲವೆಂದು ನಿಶ್ಚಯವಾಗುತ್ತದೆ.

2. ಮೋಕ್ಷವು ಯಾವ ಸಾಧನದ ಕಾರ್ಯವೂ ಅಲ್ಲ, ನಿತ್ಯಸಿದ್ಧವಾದದ್ದು.

3. ಕ್ಷಯವಾಗುವದು ಮೋಕ್ಷವಾಗಲಾರದು.

4. ಮುಕ್ತಿಯಲ್ಲಿ ಕಾರ್ಯಕರಣಗಳಿರುವ ಸಂಭವವಿಲ್ಲ.

5. ಉಪಕ್ರಮದಲ್ಲಿಯೂ ಉಪಸಂಹಾರದಲ್ಲಿಯೂ ಅನಾತ್ಮವಿಷಯವೇ ಇದೆ. ಆದ್ದರಿಂದ ಇಲ್ಲಿ ಆತ್ಮಜ್ಞಾನದಿಂದ ಮೋಕ್ಷವಾಗುವ ಸುದ್ದಿಯಾಗಲಿ, ಪುತ್ರಾದಿಗಳ ಸಮುಚ್ಚಯದಿಂದ ಮೋಕ್ಷವು ಸಿದ್ಧಿಸುವದೆಂಬ ಸೊಲ್ಲಾಗಲಿ ಇಲ್ಲ.

6. ಈ ವಾಕ್ಯವು ತಾತ್ಪರ್ಯದಿಂದ ತ್ರ್ಯನ್ನಾತ್ಮಕಫಲವನ್ನು ಹೇಳುತ್ತಿರುವಲ್ಲಿ, ಇದು ಮೋಕ್ಷಸಾಧನವೆಂಬ ಸೊಲ್ಲೂ ಇಲ್ಲದಿದ್ದರೂ, ಈ ಸಾಧನತ್ರಯವು ಕೆಲವರಿಗೆ ಮೋಕ್ಷವನ್ನು ಕೊಡಬಹುದೆಂಬ ಅಭಿಪ್ರಾಯವನ್ನೂ ಈ ವಾಕ್ಯಕ್ಕೆ ಕಲ್ಪಿಸುವದು ಆಗಲಾರದು. ಹಾಗೆ ಕಲ್ಪಿಸಿದರೆ ವಾಕ್ಯಭೇದವೂ ಆಗುತ್ತದೆ -ಎಂದು ಭಾವ.

## ದೈವವಾಕ್ಕು ಉಪಾಸಕನನ್ನು ಪ್ರವೇಶಿಸುವದು

(ಉಪನಿಷತ್ತು)

**ಪೃಥಿವ್ಯೈ ಚೈನಮಗ್ನೇಶ್ಚ ದೈವೀ ವಾಗಾವಿಶತಿ ಸಾ ವೈ ದೈವೀ ವಾಗ್ಯಯಾ ಯದ್ಯದೇವ ವದತಿ ತತ್ತದ್ ಭವತಿ ॥ ೧೮ ॥**

೧೮. ಪೃಥಿವಿಯಿಂದಲೂ ಅಗ್ನಿಯಿಂದಲೂ (ಬಂದ) ದೈವ ವಾಕ್ಕು ಇವನನ್ನು ತುಂಬಿಕೊಳ್ಳುತ್ತದೆ. ಯಾವದರಿಂದ ಏನೇನು ಹೇಳುತ್ತಾನೋ ಅದೆಲ್ಲವೂ ಆಗುವದೋ ಅದೇ ದೈವವಾಕ್ಕು.

## ದೈವವಾಕ್ಕು ತುಂಬಿಕೊಳ್ಳುವದೆಂದರೇನು ?

(ಭಾಷ್ಯ)

೨೩೯. ಪೃಥಿವ್ಯೈ ಪೃಥಿವ್ಯಾಶ್ಚ ಏನಮ್ ಅಗ್ನೇಶ್ಚ ದೈವೀ ಆಧಿದೈವಾತ್ಮಿಕಾ ವಾಕ್ ಏನಂ ಕೃತಸಂಪ್ರತ್ತಿಕಮ್ ಆವಿಶತಿ। ಸರ್ವೇಷಾಂ ಹಿ ವಾಚಃ ಉಪಾದಾನಭೂತಾ ದೈವೀ ವಾಕ್ ಪೃಥಿವ್ಯಗ್ನಿಲಕ್ಷಣಾ। ಸಾ ಹಿ ಆಧ್ಯಾತ್ಮಿಕಾಸಙ್ಗಾದಿ ಲಕ್ಷಣೈಃ ದೋಷೈಃ ನಿರುದ್ಧಾ। ವಿದುಷಸ್ತದ್ದೋಷಾಪಗಮೇ ಆವರಣಭಙ್ಗೇ ಇವ ಉದಕಮ್, ಪ್ರದೀಪಪ್ರಕಾಶವಚ್ಚ ವ್ಯಾಪ್ನೋತಿ। ತದೇತತ್ ಉಚ್ಯತೇ ಪೃಥಿವ್ಯಾ ಅಗ್ನೇಶ್ಚ ಏನಂ ದೈವೀ ವಾಕ್ ಆವಿಶತಿ ಇತಿ। ಸಾ ಚ ದೈವೀ ವಾಕ್ ಅನೃತಾದಿದೋಷರಹಿತಾ ಶುದ್ಧಾ ಯಯಾ ವಾಚಾ ದೈವ್ಯಾ ಯದ್ಯದೇವ ಆತ್ಮನೇ ಪರಸ್ಮೈ ವಾ ವದತಿ ತತ್ತತ್ ಭವತಿ। ಅಮೋಘಾ ಅಪ್ರತಿಬದ್ಧಾ ಅಸ್ಯ ವಾಗ್ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

(ಪೃಥಿವ್ಯೈ= ಪೃಥಿವ್ಯಾಃ) ಪೃಥಿವಿಯಿಂದಲೂ ಅಗ್ನಿಯಿಂದಲೂ (ಬಂದ) ದೈವವಾಕ್ಕು ಅಧಿದೈವಾತ್ಮಕವಾದ (ವಾಕ್ಕು) ಈ ಸಂಪ್ರತ್ತಿಯನ್ನು ಮಾಡಿರುವ (ಉಪಾಸಕನನ್ನು) ತುಂಬಿಕೊಳ್ಳುವದು. ಎಲ್ಲರ ವಾಕ್ಕಿಗೂ ಪೃಥಿವ್ಯಗ್ನಿರೂಪ ವಾದ ವಾಕ್ಕೇ ಉಪಾದಾನವಾಗಿರುತ್ತದೆಯಷ್ಟೆ. ಆಧ್ಯಾತ್ಮಿಕವಾದ ಆಸಂಗವೇ ಮುಂತಾದ ದೋಷಗಳಿಂದ ಆ (ವಾಕ್ಕಿಗೆ) ತಡೆಯಾಗಿರುತ್ತದೆ. ಆದರೆ ಉಪಾಸಕ ನಿಗೆ ಆ ದೋಷಗಳು ತೊಲಗಲು, ಆವರಣವು ನಾಶವಾದ ನೀರಿನಂತೆಯೂ ಪ್ರದೀಪದ ಬೆಳಕಿನಂತೆಯೂ ತುಂಬಿಕೊಳ್ಳುತ್ತದೆ.[1] ಆ ಇದನ್ನೇ "ಪೃಥಿವಿ

1. ಅಣೆಕಟ್ಟು ಮುಂತಾದ ಅಡ್ಡಿಯನ್ನು ಒಡೆದರೆ ನೀರು ತಾನೇ ಮುಂಬರಿದು ಹೊಲವನ್ನೆಲ್ಲ ತುಂಬಿಕೊಳ್ಳುವಂತೆ ಅಥವಾ ಗಡಿಗೆ, ಮನೆಯ ಗೋಡೆ-ಮುಂತಾದ ಮರೆಯು ನಾಶವಾದರೆ ಒಳಗಿದ್ದ ದೀಪದ ಪ್ರಕಾಶವು ಎಲ್ಲೆಲ್ಲಿಯೂ ತುಂಬಿಕೊಳ್ಳುವಂತೆ ಎಂದರ್ಥ. ಯೋ. ಸೂ. ೪-೩೨ ಭಾಷ್ಯವನ್ನು ನೋಡಿ.

ಯಿಂದಲೂ ಅಗ್ನಿಯಿಂದಲೂ (ಬಂದ) ದೈವವಾಕ್ಕು ಇವನನ್ನು ತುಂಬಿಕೊಳ್ಳು ತ್ತದೆ" ಎಂಬೀ (ವಾಕ್ಯದಲ್ಲಿ) ಹೇಳಿರುತ್ತದೆ.[1] ಆ ದೈವವಾಕ್ಕು ಅನೃತವೇ ಮುಂತಾದ ದೋಷಗಳಿಲ್ಲದ್ದು; ಆ ದೈವವಾಕ್ಕಿನಿಂದ ತನಗಾಗಿ ಅಥವಾ ಮತ್ತೊಬ್ಬನಿಗಾಗಿ ಯಾವಯಾವದನ್ನು ಆಡುತ್ತಾನೋ ಅದದೇ ಆಗುತ್ತದೆ. ಇವನ ವಾಕ್ಕು ವ್ಯರ್ಥವಾಗದೆ (ಇರುತ್ತದೆ), ಯಾವ ಅಡ್ಡಿಯೂ ಇಲ್ಲದ್ದಾಗು ತ್ತದೆ ಎಂದರ್ಥ.

## ದೈವಮನಸ್ಸು ಉಪಾಸಕನನ್ನು ಪ್ರವೇಶಿಸುವದು

(ಉಪನಿಷತ್ತು)

**ದಿವಶ್ಚೈನಮಾದಿತ್ಯಾಚ್ಚ ದೈವಂ ಮನ ಆವಿಶತಿ ತದ್ವೈ ದೈವಂ ಮನೋ ಯೇನಾನನ್ದ್ಯೇವ ಭವತ್ಯಥೋ ನ ಶೋಚತಿ ॥ ೧೯ ॥**

೧೯. ದ್ಯುಲೋಕದಿಂದಲೂ ಆದಿತ್ಯನಿಂದಲೂ (ಬಂದ) ದೈವ ಮನಸ್ಸು ಇವನನ್ನು ತುಂಬಿಕೊಳ್ಳುತ್ತದೆ. ಯಾವದರಿಂದ ಆನಂದಿ ಯಾಗಿಯೇ ಇರುತ್ತಾನೋ ಮತ್ತು ಶೋಕಿಸುವದಿಲ್ಲವೋ ಅದೇ ದೈವಮನಸ್ಸು.

## ದೈವಮನಸ್ಸು ಪ್ರವೇಶವಾದದ್ದರ ಫಲ

(ಭಾಷ್ಯ)

೨೪೦. ತಥಾ ದಿವಶ್ಚ ಏನಮ್ ಆದಿತ್ಯಾಚ್ಚ ದೈವಂ ಮನ ಆವಿಶತಿ । ತಚ್ಚ ದೈವಂ ಮನಃ ಸ್ವಭಾವನಿರ್ಮಲತ್ವಾತ್ । ಯೇನ ಮನಸಾಽಸಾವಾ ನನ್ದ್ಯೇವ ಭವತಿ ಸುಖ್ಯೇವ ಭವತಿ । ಅಥೋ ಅಪಿ ನ ಶೋಚತಿ ಶೋಕಾದಿ ನಿಮಿತ್ತಾಸಂಯೋಗಾತ್ ॥

(ಭಾಷ್ಯಾರ್ಥ)

ಹಾಗೆಯೇ ದ್ಯುಲೋಕದಿಂದಲೂ ಆದಿತ್ಯನಿಂದಲೂ (ಬಂದ) ದೈವಮನಸ್ಸು ಇವನನ್ನು ತುಂಬಿಕೊಳ್ಳುವದು. ಸ್ವಭಾವದಿಂದಲೇ ನಿರ್ಮಲವಾಗಿರುವದರಿಂದ ಅದು ದೈವಮನಸ್ಸು (ಎನಿಸಿಕೊಳ್ಳುತ್ತದೆ). ಯಾವ ಮನಸ್ಸಿನಿಂದ ಈ (ಉಪಾ ಸಕನು) ಆನಂದಿಯೇ ಆಗಿರುತ್ತಾನೋ, ಸುಖಿಯೇ ಆಗಿರುತ್ತಾನೋ, ಶೋಕ ವೇ ಮುಂತಾದದ್ದರ ನಿಮಿತ್ತವಿಲ್ಲದ್ದರಿಂದ ಶೋಕಿಸುವದೂ ಇಲ್ಲವೋ (ಅದೇ ದೈವಮನಸ್ಸು).

---

1. ಇಷ್ಟೇ ಹೊರತು ದೈವವಾಕ್ಕು ಹೊರಗಿನಿಂದ ಬಂದು ತುಂಬಿಕೊಳ್ಳಬೇಕಾದ ದ್ದೇನೂ ಇಲ್ಲ ಎಂದು ಅಭಿಪ್ರಾಯ.

## ದೈವಪ್ರಾಣವು ಉಪಾಸಕನನ್ನು ಪ್ರವೇಶಿಸುವದು

(ಉಪನಿಷತ್ತು)

**ಅದ್ಭ್ಯಶ್ಚೈನಂ ಚನ್ದ್ರಮಸಶ್ಚ ದೈವಃ ಪ್ರಾಣ ಆವಿಶತಿ ಸ ವೈ ದೈವಃ ಪ್ರಾಣೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇಽಥೋ ನ ರಿಷ್ಯತಿ ಸ ಯ ಏವಂವಿತ್[1] ಸರ್ವೇಷಾಂ ಭೂತಾನಾಮಾತ್ಮಾ ಭವತಿ ಯಥೈಷಾ ದೇವತೈವಗ್ಂ ಸ ಯಥೈತಾಂ ದೇವತಾಗ್ಂ ಸರ್ವಾಣಿ ಭೂತಾನ್ಯವನ್ತ್ಯೇವಗ್ಂ ಹೈವಂವಿದಗ್ಂ ಸರ್ವಾಣಿ ಭೂತಾನ್ಯವನ್ತಿ । ಯದು ಕಿಂಚೇಮಾಃ ಪ್ರಜಾಃ ಶೋಚನ್ತ್ಯಮೈವಾಸಾಂ ತದ್ಭವತಿ ಪುಣ್ಯಮೇವಾಮುಂ ಗಚ್ಛತಿ ನ ಹ ವೈ ದೇವಾನ್ ಪಾಪಂ ಗಚ್ಛತಿ ॥ ೨೦ ॥**

೨೦. ನೀರಿನಿಂದಲೂ ಚಂದ್ರನಿಂದಲೂ ದೈವಪ್ರಾಣವು ಇವನನ್ನು ತುಂಬಿಕೊಳ್ಳುವದು. ಸಂಚರಿಸುತ್ತಲೂ ಸಂಚರಿಸದೆಯೂ (ಇದ್ದರೂ) ವ್ಯಥೆಗೊಳ್ಳುವದಿಲ್ಲವಲ್ಲ, ಮತ್ತು ಗಾಯಗೊಳ್ಳುವದಿಲ್ಲವಲ್ಲ, ಅದೇ ದೈವಪ್ರಾಣವು. ಹೀಗೆಂದು ತಿಳಿದುಕೊಂಡಿರುವನಲ್ಲ, ಅವನು ಎಲ್ಲಾ ಭೂತಗಳ ಆತ್ಮನಾಗುವನು. ಈ ದೇವತೆ ಹೇಗಿರುವದೋ ಹಾಗೆಯೇ ಅವನು. ಹೇಗೆ ಈ ದೇವತೆಯನ್ನು ಸರ್ವಭೂತಗಳೂ ಕಾಪಾಡುವವೋ ಹಾಗೆಯೇ ಈ ಹೀಗೆಂದು ತಿಳಿದುಕೊಂಡಿರುವವನ್ನು ಎಲ್ಲಾ ಭೂತಗಳೂ ಕಾಪಾಡುವವು. ಈ ಪ್ರಜೆಗಳು ಯಾವದೊಂದಿಷ್ಟನ್ನು ಶೋಕಿಸುವರೋ ಅದು ಅವರ ಹತ್ತಿರವೇ ಇರುತ್ತದೆ, ಇವನಿಗೆ ಪುಣ್ಯವೇ ಬರುತ್ತದೆ. ದೇವತೆಗಳಿಗೆ ಪಾಪವು ಬರುವದೇ ಇಲ್ಲ.

## ದೈವಪ್ರಾಣೋಪಾಸನೆಯ ಫಲ

(ಭಾಷ್ಯ)

೨೪೧. **ತಥಾ ಅದ್ಭ್ಯಶ್ಚ ಏನಂ ಚನ್ದ್ರಮಸಶ್ಚ ದೈವಃ ಪ್ರಾಣ ಆವಿಶತಿ । ಸ ವೈ ದೈವಃ ಪ್ರಾಣಃ । ಕಿಂಲಕ್ಷಣ ಇತಿ? ಉಚ್ಯತೇ । ಯಃ ಸಂಚರನ್ ಪ್ರಾಣಿಭೇದೇಷು ಅಸಂಚರನ್ ಸಮಷ್ಟಿವ್ಯಷ್ಟಿರೂಪೇಣ –ಅಥವಾ ಸಂಚರನ್ ಜಙ್ಗಮೇಷು ಅಸಂಚರನ್ ಸ್ಥಾವರೇಷು ನ ವ್ಯಥತೇ ನ ದುಃಖನಿಮಿತ್ತೇನ ಭಯೇನ ಯುಜ್ಯತೇ ಅಥೋ ಅಪಿ ನ ರಿಷ್ಯತಿ ನ ವಿನಶ್ಯತಿ ನ ಹಿಂಸಾಮ್ ಆಪದ್ಯತೇ ॥**

---

1. ಯ ಇರುವ ಪಾಠವನ್ನೇ ಅಂಗೀಕರಿಸಿದೆ.

(ಭಾಷ್ಯಾರ್ಥ)

ಹೀಗೆ ನೀರಿನಿಂದಲೂ ಚಂದ್ರನಿಂದಲೂ (ಬಂದ) ದೈವಪ್ರಾಣವು ಇವನನ್ನು ತುಂಬಿಕೊಳ್ಳುವದು. ಆದೇ ದೈವಪ್ರಾಣವು. ಯಾವ ಸ್ವರೂಪದ್ದು ? ಎಂದರೆ (ಶ್ರುತಿ) ಹೇಳುತ್ತದೆ : ಯಾವದು ಬೇರೆಬೇರೆಯ ಪ್ರಾಣಗಳಲ್ಲಿ ಸಂಚರಿಸುತ್ತಿದ್ದರೂ ಸಮಷ್ಟಿವ್ಯಷ್ಟಿರೂಪದಿಂದ ಸಂಚರಿಸದೆ ಇದ್ದರೂ -ಅಥವಾ ಜಂಗಮ ಪ್ರಾಣಿಗಳಲ್ಲಿ ಸಂಚರಿಸುತ್ತಿದ್ದರೂ ಸ್ಥಾವರಗಳಲ್ಲಿ ಸಂಚರಿಸದೆ ಇದ್ದರೂ -ವ್ಯಥೆಗೊಳ್ಳುವದಿಲ್ಲವೋ, ದುಃಖನಿಮಿತ್ತವಾದ ಅಂಜಿಕೆಯಿಂದ ಕೂಡಿರುವದಿಲ್ಲವೋ (ಅಥೋ=ಅಪಿ) ಮತ್ತು ಗಾಯಗೊಳ್ಳುವದಿಲ್ಲವೋ ವಿನಾಶವಾಗುವದಿಲ್ಲವೋ, ಹಿಂಸೆಯನ್ನು ಹೊಂದುವದಿಲ್ಲವೋ, (ಅದು ದೈವಪ್ರಾಣವು).

## ತ್ರ್ಯನ್ನಾತ್ಮದರ್ಶನದ ಫಲ

(ಭಾಷ್ಯ)

೨೪೨. ಸ ಯಃ ಯಥೋಕ್ತಮ್ ಏವಂ ವೇತ್ತಿ ತ್ರ್ಯನ್ನಾತ್ಮದರ್ಶನಂ ಸ ಸರ್ವೇಷಾಂ ಭೂತಾನಾಮ್ ಆತ್ಮಾ ಭವತಿ, ಸರ್ವೇಷಾಂ ಭೂತಾನಾಂ ಪ್ರಾಣೋ ಭವತಿ, ಸರ್ವೇಷಾಂ ಭೂತಾನಾಂ ಮನೋ ಭವತಿ, ಸರ್ವೇಷಾಂ ಭೂತಾನಾಂ ವಾಗ್ ಭವತಿ ಇತ್ಯೇವಂ ಸರ್ವಭೂತಾತ್ಮತಯಾ ಸರ್ವಜ್ಞೋ ಭವತಿ ಇತ್ಯರ್ಥಃ॥ ಸರ್ವಕೃಚ್ಚ । ಯಥಾ ಏಷಾ ಪೂರ್ವಸಿದ್ಧಾ ಹಿರಣ್ಯಗರ್ಭದೇವತಾ ಏವಮೇವ । ನಾಸ್ಯ ಸರ್ವಜ್ಞತ್ವೇ ಸರ್ವಕೃತ್ತ್ವೇ ವಾ ಕ್ವಚಿತ್ ಪ್ರತಿಘಾತಃ । ಸಃ ಇತಿ ದಾರ್ಷ್ಟಾನ್ತಿಕನಿರ್ದೇಶಃ । ಕಿಂ ಚ ಯಥೈತಾಂ ಹಿರಣ್ಯಗರ್ಭದೇವತಾಮ್ ಇಜ್ಯಾದಿಭಿಃ ಸರ್ವಾಣಿ ಭೂತಾನಿ ಅವನ್ತಿ ಪಾಲಯನ್ತಿ ಪೂಜಯನ್ತಿ, ಏವಂ ಹ ಏವಂವಿದಂ ಸರ್ವಾಣಿ ಭೂತಾನಿ ಅವನ್ತಿ ಇಜ್ಯಾದಿಲಕ್ಷಣಾಂ ಪೂಜಾಂ ಸತತಂ ಪ್ರಯುಞ್ಜತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾವನು ಮೇಲೆ ಹೇಳಿದ ತ್ರ್ಯನ್ನಾತ್ಮದರ್ಶನವನ್ನು ಹೀಗೆಂದು ತಿಳಿದುಕೊಂಡಿರುವನೋ ಅವನು ಸರ್ವಭೂತಗಳಿಗೂ ಆತ್ಮನಾಗುತ್ತಾನೆ ; ಸರ್ವಪ್ರಾಣಿಗಳಿಗೂ ಪ್ರಾಣನಾಗುತ್ತಾನೆ, ಸರ್ವಪ್ರಾಣಿಗಳಿಗೂ ಮನಸ್ಸಾಗುತ್ತಾನೆ, ಸರ್ವಪ್ರಾಣಿಗಳಿಗೂ ವಾಕ್ಕಾಗುತ್ತಾನೆ -ಎಂದಿಂತು ಸರ್ವಭೂತಗಳಿಗೂ ಆತ್ಮನಾಗಿ ಸರ್ವಜ್ಞನಾಗುತ್ತಾನೆ ಎಂದರ್ಥ ; ಸರ್ವಕರ್ತನೂ (ಆಗುತ್ತಾನೆ). ಹೇಗೆ ಈ ಮೊದಲೇ ಸಿದ್ಧನಾಗಿರುವ ಹಿರಣ್ಯಗರ್ಭದೇವತೆಯು (ಸರ್ವಜ್ಞವೂ ಸರ್ವಕರ್ತೃವೂ ಆಗಿರುವದೋ) ಹಾಗೆಯೇ. ಇವನು ಸರ್ವಜ್ಞನಾಗಿರುವದಕ್ಕಾಗಲಿ ಸರ್ವಕರ್ತೃವಾಗಿರುವದಕ್ಕಾಗಲಿ ಎಲ್ಲಿಯೂ (ಯಾವ) ತಡೆಯೂ ಇರುವದಿಲ್ಲ.

(ಮೂಲದಲ್ಲಿ) ಸಃ (ಅವನು) ಎಂಬುದು ದಾರ್ಷ್ಟಾರ್ನ್ತಿಕ(ನಾದ ಉಪಾಸಕನನ್ನು) ತಿಳಿಸುತ್ತದೆ. ಮತ್ತು ಹೇಗೆ ಈ ಹಿರಣ್ಯಗರ್ಭದೇವತೆಯನ್ನು ಇಜ್ಯಾದಿಗಳಿಂದ ಸರ್ವಭೂತಗಳೂ ಕಾಪಾಡುವವೋ ರಕ್ಷಿಸುವವೋ, ಪೂಜಿಸುವವೋ ಹಾಗೆಯೇ. ಹೀಗೆಂದು ಅರಿತುಕೊಂಡಿರುವವನನ್ನು ಸರ್ವಭೂತಗಳೂ ಕಾಪಾಡುವವು, ಇಜ್ಯಾದಿರೂಪವಾದ ಪೂಜೆಯನ್ನು ಯಾವಾಗಲೂ ಮಾಡುತ್ತಿರುವವು ಎಂದರ್ಥ.

## ತ್ರ್ಯನ್ನಾತ್ಮೋಪಾಸಕನಿಗೆ ದುಃಖವೇ ಇಲ್ಲ

(ಭಾಷ್ಯ)

೨೪೩. ಅಥೇದಮ್ ಆಶಙ್ಕ್ಯತೇ । ಸರ್ವಪ್ರಾಣಿನಾಮ್ ಆತ್ಮಾ ಭವತಿ ಇತ್ಯುಕ್ತಮ್ । ತಸ್ಯ ಚ ಸರ್ವಪ್ರಾಣಿಕಾರ್ಯಕರಣಾತ್ಮತ್ವೇ ಸರ್ವಪ್ರಾಣಿಸುಖದುಃಖೈಃ ಸಂಬಧ್ಯೇತ ಇತಿ । ತನ್ನ । ಅಪರಿಚ್ಛಿನ್ನಬುದ್ಧಿತ್ವಾತ್ । ಪರಿಚ್ಛಿನ್ನಾತ್ಮಬುದ್ಧೀನಾಂ ಹಿ ಆಕ್ರೋಶಾದೌ ದುಃಖಸಂಬನ್ಧೋ ದೃಷ್ಟಃ 'ಅಹಮನೇನ ಆಕ್ರುಷ್ಟಃ' ಇತಿ । ಅಸ್ಯ ತು ಸರ್ವಾತ್ಮನಃ ಯ ಆಕ್ರುಶ್ಯತೇ ಯಶ್ಚ ಆಕ್ರೋಶತಿ ತಯೋರಾತ್ಮತ್ವಬುದ್ಧಿವಿಶೇಷಾಭಾವಾತ್ ನ ತನ್ನಿಮಿತ್ತಂ ದುಃಖಮ್ ಉಪಪದ್ಯತೇ । ಮರಣದುಃಖವಚ್ಚ ನಿಮಿತ್ತಾಭಾವಾತ್ । ಯಥಾ ಕಸ್ಮಿಂಶ್ಚಿನ್ಮೃತೇ ಕಸ್ಯಚಿತ್ ದುಃಖಮ್ ಉತ್ಪದ್ಯತೇ ಮಮಾಸೌ ಪುತ್ರೋ ಭ್ರಾತಾ ಚೇತಿ[1] ಪುತ್ರಾದಿನಿಮಿತ್ತಮ್ । ತನ್ನಿಮಿತ್ತಾಭಾವೇ ತನ್ಮರಣದರ್ಶಿನೋಽಪಿ ನೈವ ದುಃಖಮ್ ಉಪಜಾಯತೇ । ತಥಾ ಈಶ್ವರಸ್ಯಾಪಿ ಅಪರಿಚ್ಛಿನ್ನಾತ್ಮನಃ ಮಮತವತಾದಿದುಃಖನಿಮಿತ್ತಮಿಥ್ಯಾಜ್ಞಾನಾದಿದೋಷಾಭಾವಾನ್ನೈವ ದುಃಖಮ್ ಉಪಜಾಯತೇ । ತದೇತದುಚ್ಯತೇ । ಯದು ಕಿಂಚ ಯತ್ಕಿಂಚ ಇಮಾಃ ಪ್ರಜಾಃ ಶೋಚನ್ತಿ ಅಮೈವ ಸಹೈವ ಪ್ರಜಾಭಿಃ ತಚ್ಛೋಕಾದಿನಿಮಿತ್ತಂ ದುಃಖಂ ಸಂಯುಕ್ತಂ ಭವತಿ ಆಸಾಂ ಪ್ರಜಾನಾಂ ಪರಿಚ್ಛಿನ್ನಬುದ್ಧಿಜನಿತತ್ವಾತ್ । ಸರ್ವಾತ್ಮನಸ್ತು ಕೇನ ಸಹ ಕಿಂ ಸಂಯುಕ್ತಂ ಭವೇತ್ ವಿಯುಕ್ತಂ ವಾ ? ಅಮುಂ ತು ಪ್ರಾಜಾಪತ್ಯೇ ಪದೇ ವರ್ತಮಾನಂ ಪುಣ್ಯಮೇವ ಶುಭಮೇವ ಫಲಮ್ ಅಭಿಪ್ರೇತಂ ಪುಣ್ಯಮಿತಿ । ನಿರತಿಶಯಂ ಹಿ ತೇನ ಪುಣ್ಯಂ ಕೃತಮ್ । ತೇನ ತತ್ಫಲಮೇವ ಗಚ್ಛತಿ ನ ಹ ವೈ ದೇವಾನ್ ಪಾಪಂ ಗಚ್ಛತಿ । ಪಾಪಸ್ಯ[2] ಅವಸರಾಭಾವಾತ್ ಪಾಪಫಲಂ ದುಃಖಂ ನ ಗಚ್ಛತಿ ಇತ್ಯರ್ಥಃ ॥

---

1. 'ವೇತಿ' ಎಂದಿದ್ದರೆ ಚೆನ್ನಾಗಿರುವದು ; ಅಥವಾ ಚಶಬ್ದವೇ ವಾಶಬ್ದದ ಅರ್ಥದಲ್ಲಿ ಬಂದಿದೆ ಎಂದೂ ಇಟ್ಟುಕೊಳ್ಳಬಹುದು.

2. 'ಪಾಪಫಲಸ್ಯ' ಎಂಬುದನ್ನು 'ಪಾಪಸ್ಯ' ಎಂದು ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಈಗ ಇದನ್ನು ಆಶಂಕಿಸುತ್ತಾರೆ. ಸರ್ವಪ್ರಾಣಿಗಳಿಗೂ ಆತ್ಮನಾಗುತ್ತಾನೆ ಎಂದು ಹೇಳಿದೆ(ಯಷ್ಟೆ). ಅವನು ಸರ್ವಪ್ರಾಣಗಳ ಕಾರ್ಯಕರಣಾತ್ಮನಾದರೆ ಎಲ್ಲಾ ಪ್ರಾಣಿಗಳ ಸುಖದುಃಖಗಳ ಸಂಬಂಧವೂ ಆಗಬಹುದಾಗುವದಲ್ಲ !

ಹಾಗಲ್ಲ. ಏಕೆಂದರೆ (ಇವನಿಗೆ) ಅಪರಿಚ್ಛಿನ್ನವಾದ ಬುದ್ಧಿಯಿರುತ್ತದೆ. ಪರಿಚ್ಛಿನ್ನವಾದ ಆತ್ಮರು (ತಾವೆಂಬ) ಬುದ್ಧಿಯಿರುವವರಿಗಲ್ಲವೆ, ಬಯ್ಯುವದೇ ಮುಂತಾದದ್ದರಿಂದ 'ಇವನು ನನ್ನನ್ನು ಬಯ್ದನು' ಎಂದು (ಮುಂತಾಗಿ) ದುಃಖಸಂಬಂಧವಾಗುವದು ಕಂಡಿರುತ್ತದೆ ? ಆದರೆ ಇವನು ಎಲ್ಲರಿಗೂ ಆತ್ಮನಾಗಿರುವದರಿಂದ ಯಾವನನ್ನು ಬಯ್ಯುತ್ತಾನೋ, ಯಾವನು ಬಯ್ಯುತ್ತಾನೋ ಅವರಿಬ್ಬರಲ್ಲಿಯೂ ತಾನೆಂಬ ಬುದ್ಧಿಯು ಸಮಾನವಾಗಿರುವದರಿಂದ ಆ ನಿಮಿತ್ತವಾದ ದುಃಖವುಂಟಾಗುವಂತಿಲ್ಲ. ಮರಣದುಃಖದಂತೆ ನಿಮಿತ್ತವಿಲ್ಲದ್ದರಿಂದಲೂ (ದುಃಖವಾಗುವದಿಲ್ಲ). ಹೇಗೆ ಒಬ್ಬನು ಸತ್ತರೆ- 'ನನ್ನ ಮಗನು ಅಥವಾ ಒಡಹುಟ್ಟಿದವನು' -ಎಂದು ಪುತ್ರಾದಿನಿಮಿತ್ತದಿಂದ ಒಬ್ಬನಿಗೆ ದುಃಖವಾಗುತ್ತದೆಯೋ, ಆ ನಿಮಿತ್ತವು ಇಲ್ಲದ್ದರಿಂದ (ಮತ್ತೊಬ್ಬನಿಗೆ) ಅವನು ಸತ್ತದ್ದನ್ನು ಕಂಡರೂ ದುಃಖವುಂಟಾಗುವದೇ ಇಲ್ಲವೋ[1] ಹಾಗೆಯೇ ಈಶ್ವರನೂ ಅಪರಿಚ್ಛಿನ್ನಾತ್ಮನಾಗಿರುವದರಿಂದ ನನ್ನದು ನಿನ್ನದು ಎಂಬ ದುಃಖನಿಮಿತ್ತವಾದ ಮಿಥ್ಯಾಜ್ಞಾನವೇ ಮುಂತಾದ ದೋಷವಿಲ್ಲದ್ದರಿಂದ ದುಃಖವಾಗುವದೇ ಇಲ್ಲ. ಆ ಇದನ್ನು (ಶ್ರುತಿ) ಹೇಳುತ್ತಿದೆ : ಯಾವದು ಒಂದಿಷ್ಟನ್ನು, ಯಾವದೊಂದನ್ನು (ಕುರಿತು) ಈ ಪ್ರಜೆಗಳು ಶೋಕಿಸುವವೋ ಅದು (ಅವರ) ಹತ್ತಿರವೇ ಆ ಪ್ರಜೆಗಳೊಡನೆಯೇ ಆ ಶೋಕಾದಿನಿಮಿತ್ತವಾದ ದುಃಖವು ಸೇರಿಕೊಂಡಿರುತ್ತದೆ ; ಏಕೆಂದರೆ ಈ ಪ್ರಜೆಗಳ ಪರಿಚ್ಛಿನ್ನಬುದ್ಧಿಯಿಂದ (ಅದು) ಉಂಟಾಗಿರುತ್ತದೆ. ಆದರೆ ಸರ್ವಾತ್ಮನಾದವನಿಗೆ ಯಾವದರೊಡನೆ ಯಾವದು ಸೇರಿಕೊಳ್ಳಬೇಕು, ಅಥವಾ (ಯಾವದರಿಂದ ಯಾವದು) ಬಿಟ್ಟುಕೊಳ್ಳಬೇಕು ? ಪ್ರಾಜಾಪತ್ಯಸ್ಥಾನದಲ್ಲಿರುವ ಈ (ಉಪಾಸಕ)ನಿಗೋ ಎಂದರೆ ಪುಣ್ಯವೇ ಒಳ್ಳೆಯ ಫಲವೇ- ಇಲ್ಲಿ ಪುಣ್ಯವೆಂಬ ಮಾತಿನಿಂದ ಅಭಿಪ್ರೇತವಾಗಿರುತ್ತದೆ[2] ; ನಿರತಿಶಯವಾದ ಪುಣ್ಯವನ್ನಲ್ಲವೆ, ಅವನು ಮಾಡಿರುತ್ತಾನೆ ? ಆದ್ದರಿಂದ ಅದರ ಫಲವೇ- ಬರುತ್ತದೆ. ದೇವತೆಗಳಿಗೆ ಪಾಪವು ಬರುವದೇ ಇಲ್ಲ ; ಪಾಪಕ್ಕೆ ಅವಕಾಶವೇ ಇಲ್ಲದ್ದರಿಂದ[3] ಪಾಪಫಲವಾದ ದುಃಖವು ಬರುವದಿಲ್ಲ ಎಂದೇ ಅರ್ಥ.

---

1. ಪುತ್ರಾದ್ಯಭಿಮಾನವಿಲ್ಲದ ಪರಿವ್ರಾಜಕಾದಿಗಳಿಗೆ ದುಃಖವುಂಟಾಗುವದಿಲ್ಲ.
2. ಪುಣ್ಯಕರ್ಮವಲ್ಲ.
3. ಉಪಾಸನೆಯ ಬಲದಿಂದ ಪಾಪವನ್ನೇ ಮೊದಲೇ ನಾಶಪಡಿಸಿಕೊಂಡಿರುತ್ತಾನಾದ್ದರಿಂದ.

## ಅಧ್ಯಾತ್ಮಪ್ರಾಣದರ್ಶನ

(ಉಪನಿಷತ್ತು)

**ಅಥಾತೋ ವ್ರತಮೀಮಾಗ್ಂಸಾ ಪ್ರಜಾಪತಿರ್ಹ ಕರ್ಮಾಣಿ ಸಸೃಜೇ ತಾನಿ ಸೃಷ್ಟಾನ್ಯನ್ಯೋನ್ಯೇನಾಸ್ಪರ್ಧನ್ತ ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ ದ್ರಕ್ಷ್ಯಾಮ್ಯಹಮಿತಿ ಚಕ್ಷುಃ ಶ್ರೋಷ್ಯಾಮ್ಯಹಮಿತಿ ಶ್ರೋತ್ರಮೇವಮನ್ಯಾನಿ ಕರ್ಮಾಣಿ ಯಥಾಕರ್ಮ ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇ ತಾನ್ಯಾಪ್ನೋತ್ತಾನ್ಯಾಪ್ತ್ವಾ ಮೃತ್ಯುರವಾರುನ್ಧ ತಸ್ಮಾಚ್ಛ್ರಾಮ್ಯತ್ಯೇವ ವಾಕ್ ಶ್ರಾಮ್ಯತಿ ಚಕ್ಷುಃ ಶ್ರಾಮ್ಯತಿ ಶ್ರೋತ್ರಮಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಸ್ತಾನಿ ಜ್ಞಾತುಂ ದಧ್ರಿರೇ। ಅಯಂ ವೈ ನಃ ಶ್ರೇಷ್ಠೋ ಯಃ ಸಂಚರಗ್ಂಶ್ಚಾಸಂಚರಗ್ಂಶ್ಚ ನ ವ್ಯಥತೇಽಥೋ ನ ರಿಷ್ಯತಿ ಹನ್ತಾಸ್ಯೈವ ಸರ್ವೇ ರೂಪಮಸಾಮೇತಿ ತ ಏತಸ್ಯೈವ ಸರ್ವೇ ರೂಪಮಭವಗ್ಂಸ್ತಸ್ಮಾದೇತ ಏತೇನಾಖ್ಯಾಯನ್ತೇ ಪ್ರಾಣಾ ಇತಿ ತೇನ ಹ ವಾವ ತತ್ಕುಲಮಾಚಕ್ಷತೇ ಯಸ್ಮಿನ್ ಕುಲೇ ಭವತಿ ಯ ಏವಂ ವೇದ ಯ ಉ ಹೈವಂವಿದಾ ಸ್ಪರ್ಧತೇಽನುಶುಷ್ಯತ್ಯನುಶುಷ್ಯ ಹೈವಾನ್ತತೋ ಮ್ರಿಯತ ಇತ್ಯಧ್ಯಾತ್ಮಮ್ ॥ ೨೧ ॥**

೨೧. ಇನ್ನು ಆದ್ದರಿಂದ ವ್ರತಮೀಮಾಂಸೆಯು : ಪ್ರಜಾಪತಿಯು ಕರ್ಮಗಳನ್ನು ಸೃಜಿಸಿದನು. ಅವು ಸೃಷ್ಟಿಯಾದಮೇಲೆ ಒಂದರೊಡನೊಂದು ಸ್ಪರ್ಧೆಯನ್ನು ಮಾಡಿದವು. 'ನಾನು ಮಾತಾಡುತ್ತಲೇ ಇರುವೆನು' ಎಂದು ವಾಕ್ಕು ನಿಶ್ಚಯಿಸಿತು. 'ನಾನು ನೋಡುತ್ತಿರುವೆನು ಎಂದು ಚಕ್ಷುಸ್ಸು, 'ನಾನು ಕೇಳುತ್ತಲೇ ಇರುವೆನು' ಎಂದು ಶ್ರೋತ್ರವು. ಹೀಗೆಯೇ ಬೇರೆಬೇರೆಯ ಕರ್ಮಗಳೂ (ತಮ್ಮತಮ್ಮ) ಕರ್ಮಕ್ಕೆ ತಕ್ಕಂತೆ (ನಿಶ್ಚಯಿಸಿದವು). ಅವುಗಳನ್ನು ಮೃತ್ಯುವು ಶ್ರಮವಾಗಿ ವಶಗೊಳಿಸಿಕೊಂಡಿತು. ಅವುಗಳನ್ನು ವ್ಯಾಪಿಸಿಕೊಂಡಿತು; ಅವುಗಳನ್ನು ವ್ಯಾಪಿಸಿಕೊಂಡು ತಡೆಗಟ್ಟಿತು. ಆದ್ದರಿಂದ ವಾಕ್ಕು ಬಳಲುತ್ತಲೇ ಇದೆ; ಚಕ್ಷುಸ್ಸೂ ಬಳಲುತ್ತಲಿದೆ; ಶ್ರೋತ್ರವೂ ಬಳಲುತ್ತಲಿದೆ. ಇನ್ನು ಈ ನಡುವಿನ ಪ್ರಾಣವಿದೆಯಲ್ಲ, ಇದನ್ನೇ ವ್ಯಾಪಿಸಲಿಲ್ಲ. ಅವುಗಳು (ಅದನ್ನು) ಅರಿತುಕೊಳ್ಳುವದಕ್ಕೆ ನಿಶ್ಚಯಿಸಿ

ದವು. "ಸಂಚರಿಸುತ್ತಲೂ ಸಂಚರಿಸದೆಯೂ ವ್ಯಥೆಗೊಳ್ಳುವದಿಲ್ಲ, ಗಾಸಿಯಾಗುವದೂ ಇಲ್ಲವಲ್ಲ, ಇದೇ ನಮ್ಮಲ್ಲಿ ಶ್ರೇಷ್ಠವು ಒಳ್ಳೆಯದು ಇವರ ರೂಪವೇ ಆಗೋಣ!" ಆದ್ದರಿಂದ ಇವು ಇದರ (ಹೆಸರಿ)ನಿಂದ ಪ್ರಾಣಗಳು ಎಂದೇ ಕರೆಯಲ್ಪಡುತ್ತಿವೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನ (ಹೆಸರಿ)ನಿಂದಲೇ ಅವನ ಕುಲವನ್ನು ಕರೆಯುವರು. ಮತ್ತು ಹೀಗೆಂದು ಅರಿತುಕೊಂಡಿರುವವನೊಡನೆ ಯಾವನು ಸ್ಪರ್ಧೆಮಾಡುವನೋ (ಅವನು) ಒಣಗುತ್ತಾ ಬರುತ್ತಾನೆ, ಒಣಗುತ್ತಾ ಬಂದು ಕೊನೆಗೆ ಸಾಯುತ್ತಾನೆ. ಇದು ಅಧ್ಯಾತ್ಮವು.

## ಕಂಡಿಕೆಯ ಸಂಬಂಧ

(ಭಾಷ್ಯ)

೨೪೪. ತ ಏತೇ 'ಸರ್ವ ಏವ ಸಮಾಃ ಸರ್ವೇಽನನ್ತಾಃ' (೧-೫-೧೩) ಇತಿ ಅವಿಶೇಷೇಣ ವಾಙ್ಮನಃಪ್ರಾಣಾನಾಮ್ ಉಪಾಸನಮುಕ್ತಂ ನಾನ್ಯತಮಗತೋ ವಿಶೇಷಃ ಉಕ್ತಃ। ಕಿಮೇವಮೇವ ಪ್ರತಿಪತ್ತವ್ಯಮ್ ಕಿಂ ವಾ ವಿಚಾರ್ಯಮಾಣೇ ಕಶ್ಚಿದ್ವಿಶೇಷೋ ವ್ರತಮುಪಾಸನಂ ಪ್ರತಿಪತ್ತುಂ ಶಕ್ಯತೇ ಇತಿ? ಉಚ್ಯತೇ ॥

(ಭಾಷ್ಯಾರ್ಥ)

"ಆ ಇವರೆಲ್ಲರೂ ಸಮರು, ಎಲ್ಲರೂ ಅನಂತರು" (೧-೫-೧೩) ಎಂದು ಅವಿಶೇಷವಾಗಿ ವಾಙ್ಮನಃಪ್ರಾಣಗಳ ಉಪಾಸನೆಯನ್ನು ಹೇಳಿದ್ದಾಯಿತು; (ಇವುಗಳಲ್ಲಿ) ಯಾವದೊಂದರಲ್ಲಿಯೂ ವಿಶೇಷವನ್ನು ಹೇಳಿಲ್ಲ. (ಹಾಗಾದರೆ) ಹೀಗೆಂದೇ ತಿಳಿಯಬೇಕೊ, ಅಥವಾ ವಿಚಾರಿಸಿದರೆ ವ್ರತವನ್ನು ಕುರಿತ ಉಪಾಸನೆಯನ್ನು (ಕುರಿತ) ವಿಶೇಷವನ್ನೇನಾದರೂ ತಿಳಿಯುವದಕ್ಕಾಗುವದೊ ಎಂದರೆ (ಶ್ರುತಿ) ಹೇಳುತ್ತದೆ.

(ಭಾಷ್ಯ)

೨೪೫. ಅಥಾತಃ ಅನನ್ತರಂ ವ್ರತಮೀಮಾಂಸಾ ಉಪಾಸನಕರ್ಮವಿಚಾರಣಾ ಇತ್ಯರ್ಥಃ। ಏಷಾಂ ಪ್ರಾಣಾನಾಂ ಕಸ್ಯ ಕರ್ಮ ವ್ರತತ್ವೇನ ಧಾರಯಿತವ್ಯಮ್ ಇತಿ ಮೀಮಾಂಸಾ ಪ್ರವರ್ತತೇ। ತತ್ರ ಪ್ರಜಾಪತಿಃ ಹ। ಹಶಬ್ದಃ ಕಿಲಾರ್ಥೇ। ಪ್ರಜಾಪತಿಃ ಕಿಲ ಪ್ರಜಾಃ ಸೃಷ್ಟ್ವಾ ಕರ್ಮಾಣಿ ಕರಣಾನಿ

ವಾಗಾದೀನಿ। ಕರ್ಮಾರ್ಥಾನಿ ಹಿ ತಾನಿ ಇತಿ ಕರ್ಮಾಣಿ ಇತ್ಯುಚ್ಯನ್ತೇ। ಸಸೃಜೇ ಸೃಷ್ಟವಾನ್ ವಾಗಾದಿಕರಣಾನಿ ಇತ್ಯರ್ಥಃ। ತಾನಿ ಪುನಃ ಸೃಷ್ಟಾನಿ ಅನ್ಯೋನ್ಯೇನ ಇತರೇತರಮ್ ಅಸ್ಪರ್ಧನ್ತ ಸ್ಪರ್ಧಾಂ ಸಂಘರ್ಷಂ ಚಕ್ರುಃ। ಕಥಮ್ ? ವದಿಷ್ಯಾಮ್ಯೇವ ಸ್ವವ್ಯಾಪಾರಾದ್ ವದನಾತ್ ಅನುಪರತೈವ ಅಹಂ ಸ್ಯಾಮ್ ಇತಿ ವಾಕ್ ವ್ರತಂ ದಧ್ರೇ ಧೃತವತೀ। ಯದಿ ಅನ್ಯೋಽಪಿ ಮತ್ಸಮೋಽಸ್ತಿ ಸ್ವವ್ಯಾಪಾರಾತ್ ಅನುಪರನ್ತುಂ ಶಕ್ತಃ ಸೋಽಪಿ ದರ್ಶಯತು ಆತ್ಮನೋ ವೀರ್ಯಮ್ ಇತಿ। ತಥಾ[1] ದ್ರಕ್ಷ್ಯಾಮ್ಯಹಮ್ ಇತಿ ಚಕ್ಷುಃ ಶ್ರೋಷ್ಯಾಮ್ಯಹಮ್ ಇತಿ ಶ್ರೋತ್ರಮ್ ಏವಮ್ ಅನ್ಯಾನಿ ಕರ್ಮಾಣಿ ಕರಣಾನಿ ಯಥಾಕರ್ಮ ಯತ್[2] ಯಸ್ಯ ಕರ್ಮ ಯಥಾಕರ್ಮ॥

(ಭಾಷ್ಯಾರ್ಥ)

ಇನ್ನು ಆದ್ದರಿಂದ[3] (ಈ) ಬಳಿಕ[4] ವ್ರತಮೀಮಾಂಸೆಯು, ಉಪಾಸನ ಕರ್ಮದ ವಿಚಾರಣೆಯನ್ನು (ಮಾಡಲಾಗುವದು), ಈ ಪ್ರಾಣಗಳಲ್ಲಿ ಯಾವದರ ಕರ್ಮವನ್ನು ವ್ರತವಾಗಿ ಹಿಡಿಯಬೇಕು ಎಂಬ ವಿಚಾರವನ್ನು ನಡೆಯಿಸಲಾಗುವದು. ಇಲ್ಲಿ ಪ್ರಜಾಪತಿಯು—(ಪ್ರಜಾಪತಿರ್ಹ ಎಂಬಲ್ಲಿ) ಹಶಬ್ದವು ಕಿಲ (ಅಂತೆ) ಎಂಬರ್ಥದಲ್ಲಿ ಬಂದಿದೆ.—ಪ್ರಜೆಗಳನ್ನು ಸೃಜಿಸಿ ಕರ್ಮಗಳನ್ನು ಎಂದರೆ ವಾಗಾದಿಕರಣಗಳನ್ನು (ಸೃಜಿಸಿದನು). ಆ (ಕರಣಗಳು) ಕರ್ಮಕ್ಕಾಗಿರುವವಷ್ಟೆ; ಆದ್ದರಿಂದ (ಅವನ್ನು) ಕರ್ಮಗಳು ಎಂದಿದೆ. (ಆ ಕರಣಗಳನ್ನು) ಸೃಜಿಸಿದನು, ವಾಗಾದಿಕರಣಗಳನ್ನು ಸೃಷ್ಟಿಸಿದವನಾದನು ಎಂದರ್ಥ.

ಸೃಷ್ಟಿಯಾದ ಮೇಲೆ ಅವು ಒಂದರೊಡನೊಂದು ಸ್ಪರ್ಧೆಯನ್ನು ಮೇಲಾಟವನ್ನು ಮಾಡಿದವು. ಹೇಗೆ? ಎಂದರೆ ಮಾತನಾಡುತ್ತಲೇ ಇರುವೆನು, ನನ್ನ ವ್ಯಾಪಾರವಾದ ಮಾತನಾಡುವಿಕೆಯನ್ನು ಬಿಡದೆಯೇ ಇರುವೆನು ಎಂದು ವಾಕ್ಕು ವ್ರತವನ್ನು ಧರಿಸಿತು, ಹಿಡಿಯಿತು. ಇನ್ನೊಬ್ಬನೂ ನನಗೆ ಸಮನಾಗಿ ತನ್ನ ವ್ಯಾಪಾರವನ್ನು ಬಿಡದೆ ಇಟ್ಟುಕೊಂಡೇ ಇರಬಲ್ಲವನಿದ್ದರೆ ಅವನು ತನ್ನ ವೀರ್ಯವನ್ನು ತೋರಿಸಲಿ! ಎಂದು (ಅದರ ಅಭಿಪ್ರಾಯ). ಹೀಗೆಯೇ 'ನಾನು ನೋಡುತ್ತಲೇ ಇರುವೆನು' ಎಂದು ಚಕ್ಷುಸ್ಸು, 'ಕೇಳುತ್ತಲೇ ಇರುವೆನು'—

1. ಯಥಾ ಎಂಬದಕ್ಕಿಂತ ಈ ಪಾ॥ ಪಾಠವು ಮೇಲು.

2. ಯದ್ವೃತ್ ಎಂಬಲ್ಲಿ ಒಂದು ಯತ್ ಹೆಚ್ಚು; ಏಕೆಂದರೆ ಮುಂದೆ ಯಸ್ಯ ಯಃ ಸ ಎಂದಲ್ಲ.

3. ಯಾವದರ ಉಪಾಸನೆಯಲ್ಲಿ ಯಾವ ವಿಶೇಷವಿದೆ ಎಂಬುದು ತಿಳಿಯದಿರುವದರಿಂದ.

4 ಸಾಮಾನ್ಯವಾಗಿ ವಾಙ್ಮನಃಪ್ರಾಣಗಳ ಉಪಾಸನೆಯನ್ನು ಹೇಳಿದ ಬಳಿಕ.

ಎಂದು ಶ್ರೋತ್ರವು- ಹೀಗೆಯೇ ಮಿಕ್ಕ ಕರ್ಮಗಳೂ (ಉಳಿದ) ಕರಣಗಳೂ (ತಮ್ಮತಮ್ಮ) ಕರ್ಮಕ್ಕೆ ತಕ್ಕಂತೆ, ಯಾವದಕ್ಕೆ ಯಾವದು ಕರ್ಮವೋ ಅದರಂತೆ, ಯಥಾಕರ್ಮವಾಗಿ (ವ್ರತವನ್ನು ಹಿಡಿದವು).

## ಪ್ರಾಣೇತರಕರ್ಮಗಳು ಮೃತ್ಯುಗ್ರಸ್ತವಾದದ್ದು

(ಭಾಷ್ಯ)

೨೪೬. ತಾನಿ ಕರಣಾನಿ ಮೃತ್ಯುಃ ಮಾರಕಃ ಶ್ರಮಃ ಶ್ರಮರೂಪೀ ಭೂತ್ವಾ ಉಪಯೇಮೇ ಸಂಜಗ್ರಾಹ। ಕಥಮ್? ತಾನಿ ಕರಣಾನಿ ಸ್ವವ್ಯಾಪಾರೇ ಪ್ರವೃತ್ತಾನಿ ಆಪ್ನೋತ್ ಶ್ರಮರೂಪೇಣ ಆತ್ಮಾನಂ ದರ್ಶಿತವಾನ್। ಆಪ್ತ್ವಾ ಚ ತಾನಿ ಅವಾರುನ್ಧ ಅವರೋಧಂ ಕೃತವಾನ್ ಮೃತ್ಯುಃ ಸ್ವಕರ್ಮಭ್ಯಃ ಪ್ರಚ್ಯಾವಿತವಾನ್ ಇತ್ಯರ್ಥಃ। ತಸ್ಮಾತ್ ಅದ್ಯತ್ವೇಽಪಿ ವದನೇ ಸ್ವಕರ್ಮಣಿ ಪ್ರವೃತ್ತಾ ವಾಕ್ ಶ್ರಾಮ್ಯತ್ಯೇವ ಶ್ರಮರೂಪಿಣಾ ಮೃತ್ಯುನಾ ಸಂಯುಕ್ತಾ ಸ್ವಕರ್ಮತಃ ಪ್ರಚ್ಯವತೇ। ತಥಾ ಶ್ರಾಮ್ಯತಿ ಚಕ್ಷುಃ। ಶ್ರಾಮ್ಯತಿ ಶ್ರೋತ್ರಮ್॥

(ಭಾಷ್ಯಾರ್ಥ)

ಆ ಕರಣಗಳನ್ನು ಮೃತ್ಯುವು ಸಾವು ಶ್ರಮವಾಗಿ ಬಳಲಿಕೆಯ ರೂಪವನ್ನು ಧರಿಸಿಕೊಂಡು ವಶಗೊಳಿಸಿಕೊಂಡಿತು ಹಿಡಿದುಕೊಂಡಿತು. ಹೇಗೆ? ಎಂದರೆ ಆ ಕರಣಗಳು (ತಮ್ಮ)ತಮ್ಮ ವ್ಯಾಪಾರದಲ್ಲಿ ತೊಡಗಿರಲು (ಮೃತ್ಯುವು) ಅವನ್ನು ವ್ಯಾಪಿಸಿಕೊಂಡಿತು, ಬಳಲಿಕೆಯ ರೂಪದಿಂದ ಕಾಣಿಸಿಕೊಂಡಿತು; ಅವುಗಳನ್ನು ವ್ಯಾಪಿಸಿಕೊಂಡು ಮೃತ್ಯುವು ತಡೆಗಟ್ಟಿತು, ಅಡ್ಡಿಮಾಡಿತು. (ಅವನ್ನು ತಮ್ಮ) ತಮ್ಮ ಕರ್ಮಗಳಿಂದ ತಪ್ಪಿಸಿತು ಎಂದರ್ಥ. ಆದ್ದರಿಂದ ಈಗಲೂ ತನ್ನ ಕರ್ಮವಾದ ವಾಕ್ಕಿನಲ್ಲಿ ತೊಡಗಿರುವ ವಾಕ್ಕು ಬಳಲುತ್ತಲೇ ಇರುವದು, ಬಳಲಿಕೆಯ ರೂಪದ ಮೃತ್ಯುವಿನಿಂದ ಕೂಡಿದ್ದಾಗಿ ತನ್ನ ಕರ್ಮವನ್ನು (ಮಾಡದೆ) ತಪ್ಪುತ್ತದೆ. ಹೀಗೆಯೇ ಚಕ್ಷುಸ್ಸೂ ಬಳಲುತ್ತದೆ, ಶ್ರೋತ್ರವೂ ಬಳಲುತ್ತದೆ.

## ಪ್ರಾಣದ ಹೆಚ್ಚುಗಾರಿಕೆ

(ಭಾಷ್ಯ)

೨೪೭. ಅಥ ಇಮಮೇವ ಮುಖ್ಯಂ ಪ್ರಾಣಂ ನಾಪ್ನೋತ್ ನ ಪ್ರಾಪ್ತವಾನ್ ಮೃತ್ಯುಃ ಶ್ರಮರೂಪೀ, ಯೋಽಯಂ ಮಧ್ಯಮಃ ಪ್ರಾಣಃ, ತಮ್। ತೇನ ಅದ್ಯತ್ವೇಽಪಿ ಅಶ್ರಾನ್ತ ಏವ ಸ್ವಕರ್ಮಣಿ ಪ್ರವರ್ತತೇ। ತಾನಿ ಇತರಾಣಿ ಕರಣಾನಿ ತಂ ಜ್ಞಾತುಂ ದಧ್ರಿರೇ ಧೃತವನ್ತಿ ಮನಃ। ಅಯಂ ವೈ ನಃ ಅಸ್ಮಾಕಂ

ಮಧ್ಯೇ ಶ್ರೇಷ್ಠಃ ಪ್ರಶಸ್ಯತಮಃ ಅಭ್ಯಧಿಕಃ ಯಸ್ಮಾತ್ ಯಃ ಸಂಚರಂಶ್ಚ ಅಸಂಚರಂಶ್ಚ ನ ವ್ಯಥತೇ ಅಥೋ ನ ರಿಷ್ಯತಿ। ಹನ್ತ ಇದಾನೀಮ್ ಅಸ್ಯೈವ ಪ್ರಾಣಸ್ಯ ಸರ್ವೇ ವಯಂ ರೂಪಮ್ ಅಸಾಮ ಪ್ರಾಣಮ್ ಆತ್ಮತ್ವೇನ ಪ್ರತಿಪದ್ಯೇಮಹಿ। ಏವಂ ವಿನಿಶ್ಚಿತ್ಯ ತೇ ಏತಸ್ಯೈವ ಸರ್ವೇ ರೂಪಮ್ ಅಭವನ್। ಪ್ರಾಣರೂಪಮೇವ ಆತ್ಮತ್ವೇನ ಪ್ರತಿಪನ್ನಾಃ। ಪ್ರಾಣವ್ರತಮೇವ ದಧ್ರಿರೇ ಅಸ್ಮದ್ವ್ರತಾನಿ ನ ಮೃತ್ಯೋರ್ವಾರಣಾಯ ಪರ್ಯಾಪ್ತಾನಿ ಇತಿ। ಯಸ್ಮಾತ್ ಪ್ರಾಣೇನ ರೂಪೇಣ ರೂಪವನ್ತಿ ಇತರಾಣಿ ಕರಣಾನಿ ಚಲನಾತ್ಮನಾ, ಸ್ವೇನ ಚ ಪ್ರಕಾಶಾತ್ಮನಾ। ನ ಹಿ ಪ್ರಾಣಾದನ್ಯತ್ರ ಚಲನಾತ್ಮಕತ್ವೋಪಪತ್ತಿಃ। ಚಲನಾವ್ಯಾಪಾರಪೂರ್ವಕಾಣ್ಯೇವ ಹಿ ಸರ್ವದಾ ಸ್ವವ್ಯಾಪಾರೇಷು ಲಕ್ಷ್ಯನ್ತೇ। ತಸ್ಮಾತ್ ಏತೇ ವಾಗಾದಯಃ ಏತೇನ ಪ್ರಾಣಾಭಿಧಾನೇನ ಆಖ್ಯಾಯನ್ತೇ ಅಭಿಧೀಯನ್ತೇ ಪ್ರಾಣಾಃ ಇತ್ಯೇವಮ್ ॥

(ಭಾಷ್ಯಾರ್ಥ)

ಇನ್ನು ಈ ಮುಖದಲ್ಲಿರುವ ಪ್ರಾಣವನ್ನು ಮಾತ್ರ ಬಳಲಿಕೆಯ ರೂಪವಾದ ಮೃತ್ಯುವು ವ್ಯಾಪಿಸಿಕೊಳ್ಳಲಿಲ್ಲ, ತಲುಪಲಿಲ್ಲ. ಈ ನಡುವಿನ ಪ್ರಾಣವಿದೆಯಲ್ಲ, ಅದನ್ನು (ವ್ಯಾಪಿಸಲಿಲ್ಲ). ಆದರಿಂದ ಈಗಲೂ (ಅದು) ಬಳಲದೆಯೇ ತನ್ನ ಕರ್ಮದಲ್ಲಿ ತೊಡಗಿರುತ್ತದೆ.

ಆ ಉಳಿದ ಕರಣಗಳು ಆ (ಮುಖ್ಯಪ್ರಾಣ)ವನ್ನು ಅರಿತುಕೊಳ್ಳುವದಕ್ಕೆ ನಿಶ್ಚಯಿಸಿದವು, ಮನಸ್ಸುಮಾಡಿದವು. ಇದಲ್ಲವೆ, ನಮ್ಮೊಳಗೆ ಶ್ರೇಷ್ಠವಾದದ್ದು, ಉತ್ತಮವಾದದ್ದು, ಹೆಚ್ಚಿನದು ? ಏಕೆಂದರೆ ಇದು ಸಂಚರಿಸುತ್ತಿದ್ದರೂ ಸಂಚರಿಸದಿದ್ದರೂ ವ್ಯಥೆಗೊಳ್ಳುವದಿಲ್ಲ, ಗಾಸಿಯಾಗುವದಿಲ್ಲ(ವಲ್ಲ) ! ಒಳ್ಳೆಯದು, ಇದೇ ಪ್ರಾಣದ ರೂಪವೇ ನಾವೆಲ್ಲರೂ ಆಗೋಣ. ಪ್ರಾಣವೇ ನಾವೆಂದು ಭಾವಿಸೋಣ ! ಹೀಗೆಂದು ನಿಶ್ಚಯಿಸಿ ಇದರ ರೂಪವೇ ಆದವು; ಪ್ರಾಣದ ರೂಪವೇ ತಾವೆಂದು ತಿಳಿದುಕೊಂಡವು. ನಮ್ಮ ವ್ರತಗಳು ಮೃತ್ಯುವನ್ನು ತಪ್ಪಿಸಿಕೊಳ್ಳುವದಕ್ಕೆ ಸಾಲವು ಎಂದು ಪ್ರಾಣವ್ರತವನ್ನೇ ಹಿಡಿದವು. ಹೀಗೆ ಉಳಿದ ಕರಣಗಳು ಚಲನಾತ್ಮಕವಾದ ಪ್ರಾಣದ ರೂಪದಿಂದಲೂ ರೂಪವುಳ್ಳವುಗಳಾಗಿ ತಮ್ಮ ಪ್ರಕಾಶಸ್ವರೂಪದಿಂದಲೂ (ರೂಪವುಳ್ಳವುಗಳಾಗಿವೆಯಲ್ಲ) — ಪ್ರಾಣವನ್ನು ಬಿಟ್ಟರೆ ಮತ್ತೆಲ್ಲಿಯೂ ಚಲನರೂಪವು ಇರುವಂತಿಲ್ಲವಷ್ಟೆ ? ಚಲನವೆಂಬ ವ್ಯಾಪಾರದ ದ್ವಾರದಿಂದಲೇ ಅಲ್ಲವೆ, (ಅವು) ತಮ್ಮತಮ್ಮ ವ್ಯಾಪಾರಗಳಲ್ಲಿ (ಇರುವದು) ಕಾಣುತ್ತದೆ ?– ಆದ್ದರಿಂದ ಈ ವಾಗಾದಿಗಳು ಈ ಪ್ರಾಣದ ಹೆಸರಿನಿಂದಲೇ ಹೇಳಲ್ಪಡುತ್ತಿವೆ, 'ಪ್ರಾಣಗಳು' ಎಂದಿಂತು ಕರೆಯಲ್ಪಡುತ್ತಿವೆ.

## ಅಧ್ಯಾತ್ಮಪ್ರಾಣೋಪಾಸಕನಿಗೆ ಫಲ

(ಭಾಷ್ಯ)

೨೪೮. ಯ ಏವಂ ಪ್ರಾಣಾತ್ಮತಾಂ ಸರ್ವಕರಣಾನಾಂ ವೇತ್ತಿ ಪ್ರಾಣಶಬ್ದಾಭಿಧೇಯತ್ವಂ ಚ ತೇನ ಹ ವಾವ ತೇನೈವ ವಿದುಷಾ ತತ್ಕುಲಮ್ ಆಚಕ್ಷತೇ ಲೌಕಿಕಾಃ। ಯಸ್ಮಿನ್ ಕುಲೇ ಸ ವಿದ್ವಾನ್ ಜಾತೋ ಭವತಿ ತತ್ಕುಲಂ ವಿದ್ವನ್ನಾಮ್ನೈವ ಪ್ರಥಿತಂ ಭವತಿ 'ಅಮುಷ್ಯ ಇದಂ ಕುಲಮ್' ಇತಿ। ಯಥಾ ತಾಪತ್ಯಃ ಇತಿ। ಯ ಏವಂ ಯಥೋಕ್ತಂ ವೇದ ವಾಗಾದೀನಾಂ ಪ್ರಾಣರೂಪತಾಂ ಪ್ರಾಣಾಖ್ಯತ್ವಂ ಚ ತಸ್ಯೈತತ್ ಫಲಮ್। ಕಿಂ ಚ ಯಃ ಕಶ್ಚಿತ್ ಹ ಏವಂವಿದಾ ಪ್ರಾಣಾತ್ಮದರ್ಶಿನಾ ಸ್ಪರ್ಧತೇ। ತತ್ಪ್ರತಿಪಕ್ಷೀ ಸನ್ ಸಃ ಅಸ್ಮಿನ್ನೇವ ಶರೀರೇ ಅನುಶುಷ್ಯತಿ ಶೋಷಮುಪಗಚ್ಛತಿ। ಅನುಶುಷ್ಯ ಹ್ಯೈನ ಶೋಷಂ ಗತ್ವೈವ ಅನ್ತತೋಽನ್ತೇ ಮ್ರಿಯತೇ ನ ಸಹಸಾ ಅನುಪದ್ರುತೋ ಮ್ರಿಯತೇ। ಇತಿ ಏವಮುಕ್ತಮ್ ಅಧ್ಯಾತ್ಮಂ ಪ್ರಾಣಾತ್ಮದರ್ಶನಮ್ ಇತ್ಯಕ್ತೋಪಸಂಹಾರಃ ಅಧಿದೈವತಪ್ರದರ್ಶನಾರ್ಥಃ ॥

(ಭಾಷ್ಯಾರ್ಥ)

ಯಾವನು ಹೀಗೆ ಕರಣಗಳೆಲ್ಲವೂ ಪ್ರಾಣರೂಪವೆಂದೂ (ಈ ಕಾರಣದಿಂದ) ಪ್ರಾಣವೆಂಬ ಹೆಸರಿನಿಂದಲೇ ಕರೆಯಲ್ಪಡುತ್ತಿವೆಯೆಂದೂ ಅರಿತುಕೊಳ್ಳುವನೋ ಅವ(ನ ಹೆಸರಿ)ನಿಂದಲೇ, ಆ ಉಪಾಸಕನ (ಹೆಸರಿ)ನಿಂದಲೇ ಅವನ ಕುಲವನ್ನು ಲೌಕಿಕರು ಕರೆಯುವರು. ಯಾವ ಕುಲದಲ್ಲಿ ಆ ಉಪಾಸಕನು ಹುಟ್ಟಿರುವನೋ ಆ ಕುಲವನ್ನು (ಆ) ಉಪಾಸಕನ ಹೆಸರಿನಿಂದಲೇ– ಈ ಕುಲವು ಇಂಥವನದು ಎಂದು– ಪ್ರಸಿದ್ಧವಾಗುತ್ತದೆ. ಉದಾಹರಣೆಗೆ ತಾಪತ್ಯ ಎಂಬುದು (ತಪತಿಯೆಂಬಾಕೆಯ ವಂಶದವನ ಹೆಸರು). ಯಾವನು ಹೀಗೆ ಮೇಲೆ ಹೇಳಿದಂತೆ ವಾಗಾದಿಗಳು ಪ್ರಾಣರೂಪವೆಂದೂ ಪ್ರಾಣ ಎಂಬ ಹೆಸರಿನವೆಂದೂ ಅರಿತುಕೊಂಡಿರುವನೋ ಅವನಿಗೆ ಇದು ಫಲವು. ಮತ್ತು ಯಾವನೊಬ್ಬನು ಹೀಗೆಂದು ತಿಳಿದವನೊಡನೆ ಪ್ರಾಣಾತ್ಮೋಪಾಸಕನೊಡನೆ ಸ್ಪರ್ಧೆಮಾಡುವನೋ, ಅವನ ಎದುರಾಳಿಯಾಗಿ (ಸೆಣಸುವನೋ) ಅವನು ಇದೇ ಶರೀರದಲ್ಲಿರುವಾಗಲೇ ಒಣಗುತ್ತಾಬರುತ್ತಾನೆ. ಒಣಕಲಾಗುತ್ತಾನೆ, ಒಣಗುತ್ತಾಬಂದೇ ಒಣಕಲಾಗಿಯೇ ಕೊನೆಗೆ ಕಡೆಯಲ್ಲಿ ಸಾಯುತ್ತಾನೆ; ತಟ್ಟನೆ ಯಾವ ಸಂಕಟವೂ ಇಲ್ಲದೆ ಸಾಯುವದಿಲ್ಲ.

ಇದು ಹೀಗೆ ಹೇಳಿದ್ದು ಅಧ್ಯಾತ್ಮವಾದ ಪ್ರಾಣದರ್ಶನವು ಎಂದು ಹೇಳಿದ್ದನ್ನು ಉಪಸಂಹಾರಮಾಡಿರುವದು (ಮುಂದೆ) ಅಧಿದೈವತವನ್ನು ತಿಳಿಸುವದಕ್ಕಾಗಿ.

## ಅಧಿದೈವತಪ್ರಾಣದರ್ಶನ

(ಉಪನಿಷತ್ತು)

**ಅಥಾಧಿದೈವತಂ ಜ್ವಲಿಷ್ಯಾಮ್ಯೇವಾಹಮಿತ್ಯಗ್ನಿರ್ದಧ್ರೇ ತಪ್ಸ್ಯಾಮ್ಯಹಮಿತ್ಯಾದಿತ್ಯೋ ಭಾಸ್ಯಾಮ್ಯಹಮಿತಿ ಚನ್ದ್ರಮಾ ಏವಮನ್ಯಾ ದೇವತಾ ಯಥಾದೈವತಗ್ಂ ಸ ಯಥೈಷಾಂ ಪ್ರಾಣಾನಾಂ ಮಧ್ಯಮಃ ಪ್ರಾಣ ಏವಮೇತಾಸಾಂ ದೇವತಾನಾಂ ವಾಯುರ್ನ್ಮ್ಲೋಚನ್ತಿ ಹ್ಯನ್ಯಾ ದೇವತಾ ನ ವಾಯುಃ ಸೈಷಾಽನಸ್ತಮಿತಾ ದೇವತಾ ಯದ್ವಾಯುಃ ॥ ೨೨ ॥**

೨೨. ಇನ್ನು ಅಧಿದೈವತವು. ಅಗ್ನಿಯು 'ನಾನು ಸುಡುತ್ತಲೇ ಇರುವೆನು' ಎಂದು ನಿಶ್ಚಯಿಸಿದನು ; 'ನಾನು ತಪಿಸುತ್ತಲೇ ಇರುವೆನು' ಎಂದು ಆದಿತ್ಯನು, 'ನಾನು ಹೊಳೆಯುತ್ತಲೇ ಇರುವೆನು' ಎಂದು ಚಂದ್ರನು. ಹೀಗೆಯೇ ಉಳಿದ ದೇವತೆಗಳೂ ಆಯಾ ದೇವತೆಗೆ ತಕ್ಕಂತೆ (ನಿಶ್ಚಯಿಸಿದರು). ಈ ಪ್ರಾಣಗಳಲ್ಲಿ ನಡುವಿನ ಪ್ರಾಣವು ಹೇಗೋ, ಈ ದೇವತೆಗಳಲ್ಲಿ ವಾಯುವೂ ಹಾಗೆ. ಏಕೆಂದರೆ ಉಳಿದ ದೇವತೆಗಳು ಮುಳುಗುವರು, ವಾಯು (ಮುಳುಗು)ವದಿಲ್ಲ. ಈ) ವಾಯುವೆಂಬುದಿದೆಯಲ್ಲ, ಆ ಇದು ಅಸ್ತವಾಗದ ದೇವತೆ.

(ಭಾಷ್ಯ)

೨೪೯. ಅಥ ಅನನ್ತರಮ್ ಅಧಿದೈವತಂ ದೇವತಾವಿಷಯಂ ದರ್ಶನಮ್ ಉಚ್ಯತೇ। ಕಸ್ಯ ದೇವತಾವಿಶೇಷಸ್ಯ ವ್ರತಧಾರಣಂ ಶ್ರೇಯಃ ಇತಿ ಮೀಮಾಂಸ್ಯತೇ। ಅಧ್ಯಾತ್ಮವತ್ ಸರ್ವಮ್। ಜ್ವಲಿಷ್ಯಾಮ್ಯೇವಾಹಮ್ ಇತಿ ಅಗ್ನಿರ್ದಧ್ರೇ। ತಪ್ಸ್ಯಾಮ್ಯಹಮ್ ಇತಿ ಆದಿತ್ಯಃ। ಭಾಸ್ಯಾಮ್ಯಹಮ್ ಇತಿ ಚನ್ದ್ರಮಾಃ। ಏವಮನ್ಯಾ ದೇವತಾ ಯಥಾದೈವತಮ್। ಸಃ[1] ಅಧ್ಯಾತ್ಮಂ ವಾಗಾದೀನಾಮ್ ಏಷಾಂ ಪ್ರಾಣಾನಾಂ ಮಧ್ಯೇ ಮಧ್ಯಮಃ ಪ್ರಾಣಃ ಮೃತ್ಯುನಾ ಅನಾಪ್ತಃ ಸ್ವಕರ್ಮಣೋ ನ ಪ್ರಚ್ಯಾವಿತಃ ಸ್ವೇನ ಪ್ರಾಣವ್ರತೇನ ಅಭಗ್ನವ್ರತಃ ಯಥಾ, ಏವಮ್ ಏತಾಸಾಮ್ ಅಗ್ನ್ಯಾದೀನಾಂ ದೇವತಾನಾಂ ವಾಯುರಪಿ। ಮ್ಲೋಚನ್ತಿ ಅಸ್ತಂ ಯನ್ತಿ (ಹಿ)[2] ಸ್ವಕರ್ಮಭ್ಯ ಉಪರಮನ್ತೇ ಯಥಾ ಅಧ್ಯಾತ್ಮಂ ವಾಗಾದಯಃ, ಅನ್ಯಾ ದೇವತಾಃ

---

1. ಇಲ್ಲಿ 'ದೃಷ್ಟಾಂತಃ' ಎಂಬ ಮಾತೊಂದು ಹೆಚ್ಚಾಗಿರುವ ಪಾಠವೂ ಉಂಟು. ಅನುವಾದದ ಟಿಪ್ಪಣಿಯನ್ನು ನೋಡಿ.

2. ಈ ಮಾತು ಕೈತಪ್ಪಿನಿಂದ ಬಿಟ್ಟುಹೋಗಿದೆ.

ಅಗ್ನ್ಯಾದ್ಯಾ ನ ವಾಯುರಸ್ತಂ ಯಾತಿ ಯಥಾ ಮಧ್ಯಮಃ ಪ್ರಾಣಃ। ಅತಃ ಸೈಷಾ ಅನಸ್ತಮಿತಾ ದೇವತಾ ಯದ್ವಾಯುಃ ಯೋಽಯಂ ವಾಯುಃ। ಏವಮ್ ಅಧ್ಯಾತ್ಮಮ್ ಅಧಿದೈವಂ ಚ ಮೀಮಾಂಸಿತ್ವಾ ನಿರ್ಧಾರಿತಂ ಪ್ರಾಣ ವಾಯ್ವಾತ್ಮನೋರ್ವ್ರತಮ್ ಅಭಗ್ನಮಿತಿ ॥

(ಭಾಷ್ಯಾರ್ಥ)

ಇನ್ನು (ಅಧ್ಯಾತ್ಮವಾದ) ಬಳಿಕ ಅಧಿದೈವತವು, ದೇವತಾವಿಷಯವಾದ ದರ್ಶನವನ್ನು ಹೇಳಲಾಗುವದು. ಯಾವ ಗೊತ್ತಾದ ದೇವತೆಯ ವ್ರತವನ್ನಿಟ್ಟು ಕೊಳ್ಳುವದು ಒಳ್ಳೆಯದು ಎಂಬಿದನ್ನು ವಿಚಾರಮಾಡಲಾಗುವದು. ಅಧ್ಯಾತ್ಮ (ದರ್ಶನ)ದಂತೆ ಎಲ್ಲವನ್ನೂ (ವ್ಯಾಖ್ಯಾನಮಾಡಬೇಕು).

ಅಗ್ನಿಯು 'ನಾನು ಸುಡುತ್ತಲೇ ಇರುವೆನು' ಎಂದು ನಿಶ್ಚಯಿಸಿದನು, 'ನಾನು ತಪಿಸುತ್ತಲೇ ಇರುವೆನು' ಎಂದು ಆದಿತ್ಯನು, 'ನಾನು ಹೊಳೆಯುತ್ತಲೇ ಇರುವೆನು' ಎಂದು ಚಂದ್ರನು. ಹೀಗೆಯೇ ಉಳಿದ ದೇವತೆಗಳು ಆಯಾ ದೇವತೆಗೆ ತಕ್ಕಂತೆ (ನಿಶ್ಚಯಿಸಿದರು).

ಅದು ಹೇಗೆಂದರೆ,[1] ಅಧ್ಯಾತ್ಮವಾಗಿ ವಾಗಾದಿಗಳೆಂಬ ಈ ಪ್ರಾಣಗಳೊಳಗೆ ಆ ನಡುವಿನ ಪ್ರಾಣನು ಮೃತ್ಯುವಿಗೆ ಸಿಲುಕದೆ ತನ್ನ ಕರ್ಮವನ್ನು ಬಿಟ್ಟು ಕೆಳಕ್ಕೆ ಜಾರದೆ ತನ್ನ ಪ್ರಾಣವ್ರತವು ಭಂಗವಾಗದೆ ಹೇಗೆ (ಇರುತ್ತದೆಯೋ), ಹಾಗೆಯೇ ಈ ಅಗ್ನ್ಯಾದಿದೇವತೆಗಳಲ್ಲಿ ವಾಯು(ದೇವತೆಯೂ ಇರುತ್ತದೆ). ಉಳಿದ ಅಗ್ನಿಯೇ ಮುಂತಾದ ದೇವತೆಗಳು ಅಧ್ಯಾತ್ಮವಾದ ವಾಗಾದಿಗಳಂತೆ ಯೇ ಮುಳುಗುತ್ತವೆ, ಅಸ್ತವಾಗುತ್ತವೆ, ತಮ್ಮ (ತಮ್ಮ) ಕರ್ಮವನ್ನು ಬಿಟ್ಟು (ಸುಮ್ಮನಾಗು)ತ್ತವೆ. ನಡುವಿನ ಪ್ರಾಣದಂತೆಯೇ ವಾಯುವು ಅಸ್ತವಾಗು ವದಿಲ್ಲ. ಆದ್ದರಿಂದ (ಯದ್ ವಾಯುಃ=ಯೋಽಯಂ ವಾಯುಃ) ಈ ವಾಯು ವೆಂಬುದಿದೆಯಲ್ಲ, ಆ ಇದು ಅಸ್ತವಾಗದೆ ಇರುವ ದೇವತೆ.

ಹೀಗೆ ಅಧ್ಯಾತ್ಮವಾಗಿಯೂ ಅಧಿದೈವವಾಗಿಯೂ ವಿಚಾರಮಾಡಿ ಪ್ರಾಣ ವಾಯ್ವಾತ್ಮರ[2] ವ್ರತವು ಭಗ್ನವಾಗುವದಿಲ್ಲವೆಂದು ನಿಶ್ಚಯಿಸಿದ್ದಾಯಿತು.

---

1. 'ಸ ಯಥಾ' ಎಂಬುದಕ್ಕೆ ಅನುವಾದವಿದು. 'ದೃಷ್ಟಾಂತಃ' ಎಂಬ ಮಾತಿರುವ ಪಾಠವನ್ನು ಆ ದೃಷ್ಟಾಂತವು ಹೇಗೆಂದರೆ ಎಂದು ಕನ್ನಡಿಸಬೇಕು. ಇಂಥ ಸಂದರ್ಭಗಳಲ್ಲಿ ಯಥಾ ಎಂಬ ಮಾತನ್ನು ಎರಡು ಸಲ ಕನ್ನಡಿಸಬೇಕಾಗುತ್ತದೆ. ಉದಾಹರಣೆಗೆ ೧–೩–೭ ರಲ್ಲಿರುವ 'ಸ ಯಥಾ' ಎಂಬದರ ಭಾಷ್ಯವನ್ನು ನೋಡಿರಿ.

2. ಇಲ್ಲಿ ಪ್ರಾಣೋಪಾಸನೆ, ವಾಯೂಪಾಸನೆ– ಇವೆರಡೂ ಬೇರೆಬೇರೆಯ ಉಪಾಸನೆ ಗಳೇ. ಮುಂದೆ ಶ್ಲೋಕದಲ್ಲಿ ಪ್ರಾಣವೊಂದನ್ನೇ ಉಪಸಂಹಾರಮಾಡಿರುವದು ಇವೆರಡೂ ಬೇರೆಬೇರೆ ತತ್ತ್ವಗಳಲ್ಲ ಎಂಬ ಅಭಿಪ್ರಾಯದಿಂದ. ಸೂ.ಭಾ. ೩–೩–೪೩ (ಭಾ.ಛಾ. ೪೦೨).

# ಪ್ರಾಣೋಪಾಸನೆಯ ಉಪಸಂಹಾರ

(ಉಪನಿಷತ್ತು)

**ಅಥೈಷ ಶ್ಲೋಕೋ ಭವತಿ ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತೀತಿ ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತ ಮೇತಿ ತಂ ದೇವಾಶ್ಚಕ್ರಿರೇ ಧರ್ಮಗ್ಂ ಸ ಏವಾದ್ಯ ಸ ಉ ಶ್ವಃ ಇತಿ ಯದ್ವಾ ಏತೇಽಮುರ್ಹ್ಯಧ್ರಿಯನ್ತ ತದೇವಾಪ್ಯದ್ಯ ಕುರ್ವನ್ತಿ । ತಸ್ಮಾದೇಕಮೇವ ವ್ರತಂ ಚರೇತ್ ಪ್ರಾಣ್ಯಾಚ್ಚೈವಾಪಾನ್ಯಾಚ್ಚ ನೇನ್ಮಾ ಪಾಪ್ಮಾಮೃತ್ಯುರಾಪ್ನುವದಿತಿ ಯದ್ಯು ಚರೇತ್ ಸಮಾಪಿಪಯಿಷೇತ್ತೇನೋ ಏತಸ್ಯೈ ದೇವತಾಯೈ ಸಾಯುಜ್ಯಗ್ಂ ಸಲೋಕತಾಂ ಜಯತಿ ॥ ೨೩ ॥**

೨೩. ಇನ್ನು ಈ ಶ್ಲೋಕವಿರುವದು[1]: "ಯಾವನಿಂದ ಸೂರ್ಯನು ಉದಯಿಸುವನೋ ಮತ್ತು ಯಾವನಲ್ಲಿ ಅಸ್ತವಾಗುವನೋ" ಎಂದು (ಮಂತ್ರವು). ಪ್ರಾಣದಿಂದಲೇ ಉದಯಿಸುತ್ತಾನೆ, ಪ್ರಾಣನಲ್ಲಿಯೇ ಅಸ್ತಂಗತನಾಗುತ್ತಾನೆ. "ದೇವತೆಗಳು ಅದನ್ನೇ ಧರ್ಮವನ್ನಾಗಿ ಮಾಡಿಕೊಂಡರು; ಅದೇ ಇಂದು, ಅದೇ ನಾಳೆ" ಎಂದು (ಮಂತ್ರವು). ಇವರು ಆಗ ಯಾವದನ್ನು ಧರಿಸಿದ್ದರೋ ಅದನ್ನೇ ಈಗಲೂ ಮಾಡುತ್ತಿದ್ದಾರೆ. ಆದ್ದರಿಂದ ನನ್ನನ್ನು ಪಾಪವೆಂಬ ಮೃತ್ಯುವು ವ್ಯಾಪಿಸದೆ ಇರಲಿ! ಎಂದು ಒಂದೇ ವ್ರತವನ್ನೇ ಆಚರಿಸಬೇಕು. ಪ್ರಾಣನಕರ್ಮವನ್ನು ಮಾಡಬೇಕು, ಅಪಾನನಕರ್ಮ

---

1. ಹಿಂದೆ ಸಪ್ತಾನ್ನಗಳ ಮಂತ್ರವನ್ನು ೧-೫-೧ರಲ್ಲಿ ಉದಾಹರಿಸಿ ಆಮೇಲೆ ಬ್ರಾಹ್ಮಣವು ವಿವರಿಸುವಂತೆ ಇಲ್ಲಿಯೂ ಮಂತ್ರವು ಪೂರ ಇದ್ದಿರಬೇಕೆಂದು ಭಾಷ್ಯದಿಂದ ಕಲ್ಪಿಸುವದಕ್ಕೆ ಅವಕಾಶವಿದೆ. ಏಕೆಂದರೆ ಭಾಷ್ಯಕಾರರು ಮಂತ್ರವನ್ನು ವ್ಯಾಖ್ಯಾನ ಮಾಡಿದ ಬಳಿಕವೇ ಬ್ರಾಹ್ಮಣವನ್ನು ವ್ಯಾಖ್ಯಾನಮಾಡಿರುತ್ತಾರೆ. ಆದರೆ ಅಚ್ಚಿನ ಪುಸ್ತಕಗಳಲ್ಲಿ ಮಾತ್ರ ಬ್ರಾಹ್ಮಣವೊಂದೇ ಇದೆ. ಇದರ ತತ್ತ್ವವನ್ನು ಅಧ್ಯಯನಸಂಪ್ರದಾಯದಿಂದಲೂ ವ್ಯಾಖ್ಯಾನಾಂತರಗಳಿದ್ದರೆ ಅವುಗಳಿಂದಲೂ ವಿಮರ್ಶಿಸಿ ನಿರ್ಧರಿಸಬೇಕಾಗಿದೆ. ಮಂತ್ರವು ಹೀಗಿರಬೇಕು: "ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ। ತಂ ದೇವಾ ಚಕ್ರಿರೇ ಧರ್ಮಗ್ಂ ಸ ಏವಾದ್ಯ ಸ ಉ ಶ್ವಃ ॥" 'ಬ್ರಾಹ್ಮಣಾರ್ಥ ದಾರ್ಢ್ಯಾರ್ಥಂ ಮನ್ತ್ರಮುಪಾತ್ತಃ್ಯರ್ಯ ವ್ಯಾಕರೋತಿ' ಎಂದು ಆ॥ಗಿ॥ ಟೀಕೆ. ಈ ಮಂತ್ರವು ಮೂಲದಲ್ಲಿದೆಯೆಂದು ಟೀಕಾಕಾರರಿಗೆ ಅಭಿಪ್ರಾಯವಿತ್ತೋ ಇಲ್ಲವೋ ಹೇಳುವದಕ್ಕೆ ಬರುವಂತಿಲ್ಲ.

ವನ್ನೂ ಮಾಡಬೇಕು. ಮತ್ತು ಅದನ್ನು ಆಚರಣೆಮಾಡಿದರೆ ಅದನ್ನು ಸಮಾಪ್ತಿಮಾಡಲಿಚ್ಛಿಸಬೇಕು; ಅದರಿಂದ ಈ ದೇವತೆಯ ಸಾಯುಜ್ಯವನ್ನು, ಸಲೋಕವನ್ನು ಪಡೆದುಕೊಳ್ಳುತ್ತಾನೆ.

## ಮಂತ್ರದ ವ್ಯಾಖ್ಯಾನ

(ಭಾಷ್ಯ)

೨೫೦. ಅಥ ಏತಸ್ಯೈವ ಅರ್ಥಸ್ಯ ಪ್ರಕಾಶಕಃ ಏಷ ಶ್ಲೋಕೋ ಮನ್ತ್ರೋ ಭವತಿ। ಯತಶ್ಚ ಯಸ್ಮಾತ್ ವಾಯೋಃ ಉದೇತಿ ಉದ್ಗಚ್ಛತಿ ಸೂರ್ಯಃ ಅಧ್ಯಾತ್ಮಂ ಚ ಚಕ್ಷುರಾತ್ಮನಾ ಪ್ರಾಣಾತ್ । ಅಸ್ತಂ ಚ[1] ಯತ್ರ ವಾಯೌ ಪ್ರಾಣೇ ಚ ಗಚ್ಛತಿ ಅಪರಸಂಧ್ಯಾಸಮಯೇ ಸ್ವಾಪಸಮಯೇ ಚ ಪುರುಷಸ್ಯ, ತಂ ದೇವಾಃ ತಂ ಧರ್ಮಂ ದೇವಾಃ ಚಕ್ರಿರೇ ಧೃತವನ್ತೋ ವಾಗಾದಯೋಽಗ್ನ್ಯಾದಯಶ್ಚ ಪ್ರಾಣವ್ರತಂ ವಾಯುವ್ರತಂ ಚ ಪುರಾ ವಿಚಾರ್ಯ। ಸ ಏವಾದ್ಯ ಇದಾನೀಂ ಶ್ವೋಽಪಿ ಭವಿಷ್ಯತ್ಯಪಿ ಕಾಲೇ ಅನುವರ್ತ್ಯತೇ ಅನುವರ್ತಿಷ್ಯತೇ ಚ ದೇವೈಃ ಇತ್ಯಭಿಪ್ರಾಯಃ॥

(ಭಾಷ್ಯಾರ್ಥ)

ಇನ್ನು ಇದೇ ಅರ್ಥವನ್ನು ತಿಳಿಸುವದಕ್ಕೆ ಈ ಶ್ಲೋಕವು, ಮಂತ್ರವು, ಬಂದಿರುತ್ತದೆ. ಯಾವನಿಂದ ಯಾವ ವಾಯುವಿನಿಂದ ಸೂರ್ಯನು ಉದಯಿಸುವನೋ, ಮತ್ತು ಅಧ್ಯಾತ್ಮವಾಗಿ ಚಕ್ಷುವಿನ ರೂಪದಿಂದ ಪ್ರಾಣದಿಂದ (ಉದಯಿಸುವನೋ), ಹುಟ್ಟುವನೋ; ಮತ್ತು ಯಾವನಲ್ಲಿ ಎಂದರೆ ವಾಯುವಿನಲ್ಲಿಯೂ ಪ್ರಾಣದಲ್ಲಿಯೂ ಕಡೆಯ ಸಂಧ್ಯಾಕಾಲದಲ್ಲಿಯೂ ಪುರುಷನು ನಿದ್ರಿಸುವಾಗಲೂ[2] ಅಸ್ತಂಗತನೂ ಆಗುತ್ತಾನೋ ಅವನ್ನು, ಆ ಧರ್ಮವನ್ನು, ಆ ಪ್ರಾಣವ್ರತವನ್ನೂ ವಾಯುವ್ರತವನ್ನೂ ಪೂರ್ವದಲ್ಲಿ ವಿಚಾರಮಾಡಿ ದೇವತೆಗಳು ವಾಗಾದಿಗಳೂ ಅಗ್ನ್ಯಾದಿಗಳೂ ಮಾಡಿಕೊಂಡರು, (ಆ ಧರ್ಮವನ್ನೇ ತಮ್ಮದನ್ನಾಗಿ) ಹಿಡಿದರು. ಅದೇ ಇಂದು, ಈಗ; ನಾಳೆಯೂ ದೇವತೆಗಳಿಂದ ಮುಂದಿನ ಕಾಲದಲ್ಲಿಯೂ; ಅನುವರ್ತಿಸಲ್ಪಡುತ್ತಿದೆ ಮತ್ತು ಅನುವರ್ತಿಸಲ್ಪಡುವದು ಎಂದು ಅಭಿಪ್ರಾಯ.

---

1. ವಾ॥ ಪಾಠವನ್ನನುಸರಿಸಿ ಚಶಬ್ದವನ್ನು ಸೇರಿಸಿಕೊಂಡಿದೆ.

2. ಯಥಾಸಂಖ್ಯವಾಗಿ ಇದನ್ನು ಅರ್ಥಮಾಡಿಕೊಳ್ಳಬೇಕು. ಸಂಧ್ಯಾಕಾಲದಲ್ಲಿ ವಾಯುವಿನಲ್ಲಿಯೂ ನಿದ್ರಿಸುವಾಗ ಪ್ರಾಣದಲ್ಲಿಯೂ ಎಂದರ್ಥ. ಮಂತ್ರದಲ್ಲಿರುವ ವಾಯು ಪ್ರಾಣಗಳಿಗೆ ಯಥಾಸಂಭವವಾಗಿ ಅನ್ವಯಿಸಬೇಕು ಎಂಬುದೇ ಶ್ರುತಿಯ ತಾತ್ಪರ್ಯವೆಂದು ಭಾವ.

# ಬ್ರಾಹ್ಮಣವಾಕ್ಯದ ಮೂಲಕ ಮಂತ್ರದ ವಿವರಣೆ

(ಭಾಷ್ಯ)

೨೫೧. ತತ್ರ ಇಮಂ ಮನ್ತ್ರಂ ಸಂಕ್ಷೇಪತೋ ವ್ಯಾಚಷ್ಟೇ ಬ್ರಾಹ್ಮಣಮ್। ಪ್ರಾಣಾ ದ್ವಾ ಏಷ ಸೂರ್ಯ ಉದೇತಿ ಪ್ರಾಣೇಽಸ್ತಮೇತಿ। ತಂದೇವಾಶ್ಚಕ್ರಿರೇ ಧರ್ಮಂ ಸ ಏವಾದ್ಯ ಸ ಉ ಶ್ವ ಇತ್ಯಸ್ಯ ಕೋಽರ್ಥ ಇತಿ? ಉಚ್ಯತೇ। ಯದ್ವೈ ಏತೇ ವ್ರತಮ್ ಅಮುರ್ಹಿ ಅಮುಷ್ಮಿನ್ ಕಾಲೇ ವಾಗಾದಯಃ ಅಗ್ನ್ಯಾದಯಶ್ಚ ಪ್ರಾಣವ್ರತಂ ವಾಯುವ್ರತಂ ಚ ಅಧ್ರಿಯನ್ತ ತದೇವ ಅದ್ಯಾಪಿ ಕುರ್ವನ್ತಿ ಅನುವರ್ತನ್ತೇ ಅನುವರ್ತಿಷ್ಯತೇ ಚ ವ್ರತಂ ತಯೋಃ[1] ರಭಗ್ನಮೇವ। ಯತ್ತು ವಾಗಾದಿವ್ರತಮ್, ಅಗ್ನ್ಯಾದಿವ್ರತಂ ಚ ತದ್ ಭಗ್ನಮೇವ। ತೇಷಾಮ್ ಅಸ್ತಮನಕಾಲೇ ಸ್ವಾಪಕಾಲೇ ವಾಯೌ ಪ್ರಾಣೇ ಚ ನಿಮ್ಲುಕ್ತಿ ದರ್ಶನಾತ್। ಅಥೈತದನ್ಯತ್ರೋಕ್ತಮ್– "ಯದಾ ವೈ ಪುರುಷಃ ಸ್ವಪಿತಿ ಪ್ರಾಣಂ ತರ್ಹಿ ವಾಗಪ್ಯೇತಿ ಪ್ರಾಣಂ ಮನಃ ಪ್ರಾಣಂ ಚಕ್ಷುಃ[2] ಪ್ರಾಣಂ ಶ್ರೋತ್ರಂ ಯದಾ ಪ್ರಬುಧ್ಯತೇ ಪ್ರಾಣಾದೇವಾಧಿಪುನರ್ಜಾಯನ್ತ ಇತ್ಯಧ್ಯಾತ್ಮಮಥಾಧಿದೈವತಮ್...... ಯದಾ ವಾ ಅಗ್ನಿರನುಗಚ್ಛತಿ ವಾಯುಂ ತರ್ಹ್ಯನೂದ್ವಾತಿ ತಸ್ಮಾದೇನಮುದವಾಸೀದಿತ್ಯಾಹುರ್ವಾಯುಂ ಹ್ಯನೂದ್ವಾತಿ ಯದಾದಿತ್ಯೋಽಸ್ತಮೇತಿ ವಾಯುಂ ತರ್ಹಿ ಪ್ರವಿಶತಿ ವಾಯುಂ ಚನ್ದ್ರಮಾ ವಾಯೌ ದಿಶಃ ಪ್ರತಿಷ್ಠಿತಾ ವಾಯೋರೇವಾಧಿ ಪುನರ್ಜಾಯನ್ತೇ" (ಶತ. ಬ್ರಾ. ೧೦-೩-೩-೬, ೮) ಇತಿ ॥

(ಭಾಷ್ಯಾರ್ಥ)

ಇಲ್ಲಿ ಈ ಮಂತ್ರವನ್ನು ಬ್ರಾಹ್ಮಣವು ಸಂಕ್ಷೇಪವಾಗಿ ವ್ಯಾಖ್ಯಾನಮಾಡುತ್ತಿದೆ: ಪ್ರಾಣನಿಂದಲೇ ಈ ಸೂರ್ಯನು ಉದಯಿಸುತ್ತಾನೆ, ಪ್ರಾಣನಲ್ಲಿಯೇ ಅಸ್ತಂಗತನಾಗುತ್ತಾನೆ. "ದೇವತೆಗಳು ಅದನ್ನೇ ಧರ್ಮವಾಗಿ ಮಾಡಿಕೊಂಡರು; ಅದೇ ಇಂದು, ಅದೇ ನಾಳೆ" ಎಂಬಿದರ ಅರ್ಥವೇನು? ಎಂದರೆ (ಬ್ರಾಹ್ಮಣವು) ಹೇಳುತ್ತದೆ: ಯಾವ ವ್ರತವನ್ನು ಇವರು ಆಗ ಆ ಕಾಲದಲ್ಲಿ (ಈ) ವಾಗಾದಿಗಳೂ ಅಗ್ನ್ಯಾದಿಗಳೂ (ಯಾವ) ಪ್ರಾಣವ್ರತವನ್ನೂ ವಾಯುವ್ರತವನ್ನೂ ಆಶ್ರಯಿಸಿದರೋ ಅದನ್ನೇ ಈಗಲೂ ಮಾಡುತ್ತಿದ್ದಾರೆ, ಅನುಸರಿಸುತ್ತಿದ್ದಾರೆ; (ಮುಂದೆಯೂ) ಅನುಸರಿಸುತ್ತಿರುವರು. ಅವರಿಬ್ಬರ ವ್ರತವೂ ಭಂಗವಾಗಿಯೇ ಇಲ್ಲ. ಆದರೆ ವಾಗಾದಿಗಳ ವ್ರತವೂ ಅಗ್ನ್ಯಾದಿಗಳ ವ್ರತವೂ ಇದೆಯಲ್ಲ, ಅದು ಮುರಿದೇ(ಹೋಗಿದೆ). ಏಕೆಂದರೆ ಅವರು ಮುಳುಗುವ ಕಾಲದಲ್ಲಿಯೂ ನಿದ್ರೆಯ ಕಾಲದಲ್ಲಿಯೂ ವಾಯುವಿನಲ್ಲಿಯೂ ಪ್ರಾಣದಲ್ಲಿಯೂ

1. 'ತೈಃ' ಎಂಬುದಕ್ಕಿಂತ 'ತಯೋಃ' ಎಂಬ ಪಾಠವೇ ಮೇಲು.
2. ಶತ. ಮಾ. ದಲ್ಲಿ 'ಪ್ರಾಣಂ ಚಕ್ಷುಃ ಪ್ರಾಣಂ ಮನಃ' ಎಂದಿದೆ.

ಲಯವಾಗುವದು ಕಂಡುಬರುತ್ತದೆ. ಇನ್ನು ಈ (ವಿಷಯವನ್ನು) ಮತ್ತೊಂದು (ಕಡೆಯಲ್ಲಿ) "ಯಾವಾಗ ಪುರುಷನು ನಿದ್ರಿಸುತ್ತಾನೋ ಆಗ ಪ್ರಾಣದಲ್ಲಿಯೇ ವಾಕ್ಕು ಅಡಗುತ್ತದೆ, ಪ್ರಾಣದಲ್ಲಿಯೇ ಮನಸ್ಸು, ಪ್ರಾಣದಲ್ಲಿಯೇ ಚಕ್ಷುಸ್ಸು, ಪ್ರಾಣದಲ್ಲಿಯೇ ಶ್ರೋತ್ರವು (ಅಡಗುತ್ತದೆ); ಯಾವಾಗ (ಅವನು) ಎಚ್ಚರುತ್ತಾನೋ ಪ್ರಾಣದಿಂದಲೇ ಮತ್ತೆ ಮೇಲಕ್ಕೆದ್ದು ಹುಟ್ಟುತ್ತಾರೆ. ಇದು ಅಧ್ಯಾತ್ಮವು. ಇನ್ನು ಅಧಿದೈವತವು: ......ಯಾವಾಗ ಅಗ್ನಿಯು ಹೊರಟುಹೋಗುತ್ತಾನೋ ಆಗ ವಾಯುವನ್ನೇ ಹಿಂಬಾಲಿಸಿಕೊಂಡು ಹೋಗುತ್ತಾನೆ; ಆದ್ದರಿಂದ ಇವನನ್ನು ಆರಿದನು (ಉದವಾಸೀತ್) ಎನ್ನುವರು; ವಾಯುವನ್ನು ಹಿಂಬಾಲಿಸಿಕೊಂಡಲ್ಲವೆ, ಇವನು ಹೋಗುತ್ತಾನೆ[1]? ಯಾವಾಗ ಆದಿತ್ಯನು ಅಸ್ತಂಗತನಾಗುತ್ತಾನೋ ಆಗ ವಾಯುವನ್ನೇ ಒಳಹೊಗುತ್ತಾನೆ, ವಾಯುವನ್ನೇ ಚಂದ್ರನು (ಒಳಹೊಗುತ್ತಾನೆ); ವಾಯುವಿನಲ್ಲಿಯೇ ದಿಕ್ಕುಗಳು ಸೇರುತ್ತವೆ, ವಾಯುವಿನಿಂದಲೇ ಮತ್ತೆ ಹುಟ್ಟಿ ಮೇಲಕ್ಕೇಳುತ್ತವೆ" (ಶತ. ಬ್ರಾ. ೧೦-೩-೩, ೬, ೮ರವರೆಗೆ) ಎಂದು ಹೇಳಿರುತ್ತದೆ.[2]

## ವಾಯುಪ್ರಾಣವ್ರತಗಳನ್ನೇ ಮಾಡಬೇಕು

(ಭಾಷ್ಯ)

೨೩.೨. ಯಸ್ಮಾತ್ ಏತದೇವ ವ್ರತಂ ವಾಗಾದಿಷು ಅಗ್ನ್ಯಾದಿಷು ಚ ಅನುಗತಂ ಯದೇತತ್ ವಾಯೋಶ್ಚ ಪ್ರಾಣಸ್ಯ ಚ ಪರಿಸ್ಪಂದಾತ್ಮಕತ್ವಂ ಸರ್ವೈರ್ದೇವೈರನುವರ್ತ್ಯಮಾನಂ ವ್ರತಮ್, ತಸ್ಮಾತ್ ಅನ್ಯೋಽಪಿ ಏಕಮೇವ ವ್ರತಂ ಚರೇತ್। ಕಿಂ ತತ್ ? ಪ್ರಾಣ್ಯಾತ್ ಪ್ರಾಣನವ್ಯಾಪಾರಂ ಕುರ್ಯಾತ್ ಅಪಾನ್ಯಾತ್ ಅಪಾನನವ್ಯಾಪಾರಂ ಚ। ನ ಹಿ ಪ್ರಾಣಾಪಾನವ್ಯಾಪಾರಸ್ಯ ಪ್ರಾಣನಾಪಾನನಲಕ್ಷಣಸ್ಯ ಉಪರಮೋಽಸ್ತಿ। ತಸ್ಮಾತ್ ತದೇವ ಏಕಂ ವ್ರತಂ ಚರೇತ್ ಹಿತ್ವಾ ಇನ್ದ್ರಿಯಾನ್ತರವ್ಯಾಪಾರಂ ನೇತ್ ಮಾ ಮಾಂ ಪಾಪ್ಮಾ ಮೃತ್ಯುಃ ಶ್ರಮರೂಪೀ ಆಪ್ನುವತ್ ಆಪ್ನುಯಾತ್। ನೇಚ್ಛಬ್ದಃ ಪರಿಭಯೇ। ಯದ್ಯಹಮ್ ಅಸ್ಮಾತ್ ವ್ರತಾತ್ ಪ್ರಚ್ಯುತಃ ಸ್ಯಾಂ ಗ್ರಸ್ತ ಏವಾಹಂ ಮೃತ್ಯುನಾ

---

1. ಲಯವಾಗುತ್ತಾನೆ.

2. ಇಲ್ಲಿ ಬ್ರಾಹ್ಮಣವು ಈ ಮಂತ್ರದ ಅರ್ಥವನ್ನು ಪ್ರಾಣ ಮತ್ತು ವಾಯುವಿನ ಪರವಾಗಿ ವಿವರಿಸಿರುತ್ತದೆ. ಕಠದಲ್ಲಿ ಈ ವಾಯುವು ಬ್ರಹ್ಮಸ್ವರೂಪವೇ ಎಂದು ಜ್ಞಾನ ಪ್ರಕರಣದಲ್ಲಿ ವರ್ಣಿಸಿದೆ. ಹೀಗೆಯೇ ಐ. ಬ್ರಾ. ೧೮-೬ರಲ್ಲಿ ಆದಿತ್ಯನ ಪರವಾಗಿ ವರ್ಣಿಸಿರುವ ಮಂತ್ರವನ್ನು ಕಠದಲ್ಲಿ ಪರಮಾತ್ಮನ ಪರವೆಂದು ಕ. ೨-೨-೨ರಲ್ಲಿ ವರ್ಣಿಸಿರುವದಕ್ಕೆ ಇದನ್ನು ಹೋಲಿಸಬಹುದು. ವಾಯುವಿನಲ್ಲಿಯೇ ಸೂರ್ಯಾದಿಗಳು ಲಯವಾಗುವರೆಂದು ಐ. ಬ್ರಾ. ೪೦-೬-೨ ರಲ್ಲಿ ಹೇಳಿರುವದನ್ನೂ ಇಲ್ಲಿ ಮನದಂದುಕೊಳ್ಳಬೇಕು.

ಇತ್ಯೇವಂ ತ್ರಸ್ತಃ ಧಾರಯೇತ್ ಪ್ರಾಣವ್ರತಮ್ ಇತ್ಯಭಿಪ್ರಾಯಃ। ಯದಿ ಕದಾಚಿತ್ ಉ ಚರೇತ್ ಪ್ರಾರಭೇತ ಪ್ರಾಣವ್ರತಂ ಸಮಾಪಿಪಯಿಷೇತ್ ಸಮಾಪಯಿತುಮಿಚ್ಛೇತ್। ಯದಿ ಹಿ ಅಸ್ಮಾತ್ ವ್ರತಾತ್ ಉಪರಮೇತ್ ಪ್ರಾಣಃ ಪರಿಭೂತಃ ಸ್ಯಾತ್ ದೇವಾಶ್ಚ। ತಸ್ಮಾತ್ ಸಮಾಪಯೇದೇವ ॥

(ಭಾಷ್ಯಾರ್ಥ)

ಪ್ರಾಣದ ಚಲನಾತ್ಮಕವಾಗಿರುವಿಕೆ ಎಂಬ ಎಲ್ಲಾ ದೇವತೆಗಳೂ ಅನುಸರಿಸುತ್ತಿರುವ ವ್ರತವಿದೆಯಲ್ಲ, ಈ ವ್ರತವೇ ವಾಗಾದಿಗಳಲ್ಲಿಯೂ ಅಗ್ನ್ಯಾದಿಗಳಲ್ಲಿಯೂ ಅನುಗತವಾಗಿರುವದಷ್ಟೆ; ಆದ್ದರಿಂದ ಮತ್ತೊಬ್ಬನಾದರೂ ಒಂದೇ ವ್ರತವನ್ನು ಆಚರಿಸಬೇಕು. ಅದು ಯಾವ (ವ್ರತವು)? ಎಂದರೆ ('ಪ್ರಾಣ್ಯಾತ್') ಪ್ರಾಣನಕರ್ಮವನ್ನು ಮಾಡಬೇಕು, ('ಅಪಾನ್ಯಾಚ್ಚ') ಅಪಾನನವ್ಯಾಪಾರವನ್ನೂ (ಮಾಡಬೇಕು). ಪ್ರಾಣನ (ಮುಂದಕ್ಕೆ ಬಿಡುವದು) ಅಪಾನನ (ಹಿಂದಕ್ಕೆ ಎಳೆದುಕೊಳ್ಳುವದು) ಎಂಬ ಪ್ರಾಣಾಪಾನವ್ಯಾಪಾರಕ್ಕೆ ಬಿಡುವು ಇರುವದೇ ಇಲ್ಲವಲ್ಲವೆ? ಆದ್ದರಿಂದ ಮಿಕ್ಕ ಇಂದ್ರಿಯಗಳ ವ್ಯಾಪಾರವನ್ನು ಬಿಟ್ಟು ಅದೊಂದೇ ವ್ರತವನ್ನು —(ಮಾ=ಮಾಮ್) ನನ್ನನ್ನು ಬಳಲಿಕೆಯು ರೂಪದ ಪಾಪವು, ಮೃತ್ಯುವು ವ್ಯಾಪಿಸಿಕೊಳ್ಳದಿರಲಿ ಮುಟ್ಟದೆ ಇರಲಿ! ಎಂದು– ಆಚರಿಸಬೇಕು. ಇಲ್ಲಿರುವ ನೇತ್ ಎಂಬ ಶಬ್ದವು ಅಂಜಿಕೆಯನ್ನು (ತಿಳಿಸುವದಕ್ಕೆ ಬಂದಿದೆ). ನಾನು ಈ ವ್ರತವನ್ನು ಬಿಟ್ಟವನಾದರೆ ಮೃತ್ಯುವಿನ ಹಿಡಿತಕ್ಕೆ ಬಿದ್ದಂತೆಯೇ ಎಂದು ಅಂಜಿಕೊಂಡು ಪ್ರಾಣವ್ರತವನ್ನು ಹಿಡಿಯಬೇಕು ಎಂದು ಅಭಿಪ್ರಾಯ.[1] ಮತ್ತು ಪ್ರಾಣವ್ರತವನ್ನು ಯಾವಾಗಲಾದರೂ ಆಚರಿಸಿದರೆ, ಆರಂಭಿಸಿದರೆ, ಕೊನೆಮುಟ್ಟಿಸುವದಕ್ಕೆ ಇಚ್ಛಿಸಬೇಕು.[2] ಏಕೆಂದರೆ ಈ ವ್ರತವನ್ನು ಬಿಟ್ಟರೆ ಪ್ರಾಣಕ್ಕೂ ದೇವತೆಗಳಿಗೂ ತಿರಸ್ಕಾರವಾಗುತ್ತದೆ. ಆದ್ದರಿಂದ (ಇದನ್ನು) ಕೊನೆಗಾಣಿಸಲೇಬೇಕು.

## ಉಪಾಸನೆಯ ಫಲ

(ಭಾಷ್ಯ)

೨೩. ತೇನ ಉ ತೇನ ಅನೇನ ವ್ರತೇನ ಪ್ರಾಣಾತ್ಮಪ್ರತಿಪತ್ತ್ಯಾ ಸರ್ವಭೂತೇಷು ವಾಗಾದಯೋಽಗ್ನ್ಯಾದಯಶ್ಚ ಮದಾತ್ಮಕಾ ಏವ, ಅಹಂ

---

1. ಮೃತ್ಯುಗ್ರಸ್ತನಾಗದೆ ಇರುವದಕ್ಕಾಗಿ ಪ್ರಾಣವ್ರತವನ್ನೇ, ವಾಯುವ್ರತವನ್ನೇ, ಆಚರಿಸಬೇಕು ಎಂದಭಿಪ್ರಾಯ. ಒಂದೇ ವ್ರತವನ್ನು ಎಂದಿರುವದರಿಂದ ಇದು ಸಂನ್ಯಾಸಿಗೆ ಹೇಳಿದ್ದು ಎಂದು ವಾರ್ತಿಕ (೨೭೧೧).

2. ನಡುವೆ ಎಂದಿಗೂ ನಿಲ್ಲಿಸತಕ್ಕದ್ದಲ್ಲ, ಯಾವಜ್ಜೀವವೂ ಇದನ್ನೇ ಮಾಡುತ್ತಿರಬೇಕು.

ಪ್ರಾಣ ಆತ್ಮಾ ಸರ್ವಪರಿಸ್ಪನ್ದಕೃತ್ ಏವಂ[1] ತೇನಾನೇನ ವ್ರತಧಾರಣೇನ ಏತಸ್ಯಾ ಏವ ಪ್ರಾಣದೇವತಾಯಾಃ ಸಾಯುಜ್ಯಂ ಸಯುಗ್ಭಾವಮ್ ಏಕಾತ್ಮತ್ವಮ್ । ಸಲೋಕತಾಂ ಸಮಾನಲೋಕತಾಂ ವಾ ಏಕಸ್ಥಾನತ್ವಮ್ । ವಿಜ್ಞಾನಮಾನ್ದ್ಯಪೇಕ್ಷಮೇತತ್ । ಜಯತಿ ಪ್ರಾಪ್ನೋತಿ ಇತಿ ॥

(ಭಾಷ್ಯಾರ್ಥ)

ಮತ್ತು ಅದರಿಂದ ಪ್ರಾಣಾತ್ಮಪ್ರಾಪ್ತಿ ಎಂಬ ಆ ಈ ವ್ರತದಿಂದ "ಸರ್ವಭೂತಗಳಲ್ಲಿಯೂ ಇರುವ ವಾಗಾದಿಗಳೂ ಅಗ್ನ್ಯಾದಿಗಳೂ ನನ್ನ ಸ್ವರೂಪವೇ ಆಗಿರುವವು, ನಾನೇ ಎಲ್ಲವನ್ನೂ ಚಲನೆಗೊಳಿಸುವ ಪ್ರಾಣಾತ್ಮನು" ಎಂದಿಂತು ಆ ಈ ವ್ರತವನ್ನು ಹಿಡಿಯುವದರಿಂದ ಇದೇ ಪ್ರಾಣದೇವತೆಯ ಸಾಯುಜ್ಯವನ್ನು, ಒಳಗೆ ಸೇರಿಹೋಗುವಿಕೆಯನ್ನು, ಏಕಾತ್ಮತ್ವವನ್ನು, (ಅಥವಾ) ಸಾಲೋಕ್ಯವನ್ನು ಎಂದರೆ ಸಮಾನಲೋಕತ್ವವನ್ನು ಅವನೊಡನೆ ಅದೇ ಸ್ಥಾನದಲ್ಲಿರುವಿಕೆಯನ್ನು- ಉಪಾಸನೆಯು ಕಡಿಮೆಯ (ವೇಗವುಳ್ಳ)ದ್ದಾದ್ದರಿಂದ ಈ ಫಲವನ್ನು- ಗೆದ್ದುಕೊಳ್ಳುತ್ತಾನೆ, ಪಡೆಯುತ್ತಾನೆ.

---

1. 'ಇತ್ಯೇವಂ' ಎಂದಿದ್ದರೆ ಸ್ಪಷ್ಟತರವಾಗಿರುತ್ತಿತ್ತೆಂದು ಕಾಣುತ್ತದೆ.

# ಒಂದನೆಯ ಅಧ್ಯಾಯ - ಆರನೆಯ ಬ್ರಾಹ್ಮಣ

(ಜಗತ್ತು ನಾಮರೂಪಕರ್ಮಾತ್ಮಕ)

## ನಾಮಸಾಮಾನ್ಯ

(ಉಪನಿಷತ್ತು)

**ತ್ರಯಂ ವಾ ಇದಂ ನಾಮ ರೂಪಂ ಕರ್ಮ ತೇಷಾಂ ನಾಮ್ನಾಂ ವಾಗಿತ್ಯೇತದೇಷಾಮುಕ್ಥಮತೋ ಹಿ ಸರ್ವಾಣಿ ನಾಮಾನ್ಯು ತ್ತಿಷ್ಠಂತಿ । ಏತದೇಷಾಗ್ಂ ಸಾಮೈತದ್ಧಿ ಸರ್ವೈರ್ನಾಮಭಿಃ ಸಮಮೇತದೇಷಾಂ ಬ್ರಹ್ಮೈತದ್ಧಿ ಸರ್ವಾಣಿ ನಾಮಾನಿ ಬಿಭರ್ತಿ ॥ ೧ ॥**

೧. ಇವು ನಾಮ, ರೂಪ, ಕರ್ಮ- (ಈ) ಮೂರೇ. ಅವುಗಳಲ್ಲಿ ಈ ನಾಮಗಳಿಗೆ ವಾಕ್ಕೆಂಬುದೇ ಇವುಗಳ ಉಕ್ಥವು; ಇದರಿಂದಲೇ ಅಲ್ಲವೆ, ಎಲ್ಲಾ ನಾಮಗಳೂ ಮೇಲಕ್ಕೇಳುತ್ತವೆ? ಇದೇ ಇವುಗಳ ಸಾಮವು; ಇದೇ ಅಲ್ಲವೆ, ಎಲ್ಲಾ ನಾಮಗಳಿಗೂ ಸಮವಾಗಿರುವದು? ಇದೇ ಇವುಗಳ ಬ್ರಹ್ಮವು; ಇದೇ ಅಲ್ಲವೆ, ನಾಮಗಳನ್ನೆಲ್ಲ ಧರಿಸಿರುವದು?

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೨೪. ಯದೇತತ್ ಅವಿದ್ಯಾವಿಷಯತ್ವೇನ ಪ್ರಸ್ತುತಂ ಸಾಧ್ಯಸಾಧನಲಕ್ಷಣಂ ವ್ಯಾಕೃತಂ ಜಗತ್ ಪ್ರಾಣಾತ್ಮಪ್ರಾಪ್ತ್ಯಂತೋತ್ಕರ್ಷವದಪಿ ಫಲಮ್, ಯಾ ಚ ಏತಸ್ಯ ವ್ಯಾಕರಣಾತ್ ಪ್ರಾಗವಸ್ಥಾ ಅವ್ಯಾಕೃತಶಬ್ದವಾಚ್ಯಾ ವೃಕ್ಷಬೀಜವತ್, ಸರ್ವಮೇತತ್ ತ್ರಯಮ್ । ಕಿಂ ತತ್ತ್ರಯಮಿತಿ ? ಉಚ್ಯತೇ । ನಾಮ ರೂಪಂ ಕರ್ಮ ಚ ಇತ್ಯನಾತ್ಮೈವ ನಾತ್ಮಾ ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ । ತಸ್ಮಾದಸ್ಮಾದ್ ವಿರಜ್ಯೇತ ಇತ್ಯೇವಮರ್ಥಃ "ತ್ರಯಂ ವಾ" ಇತ್ಯಾದ್ಯಾರಮ್ಭಃ । ನ ಹಿ ಅಸ್ಮಾದನಾತ್ಮನೋಽವ್ಯಾವೃತ್ತಚಿತ್ತಸ್ಯ ಆತ್ಮಾನಮೇವ ಲೋಕಮ್ 'ಅಹಂ ಬ್ರಹ್ಮಾಸ್ಮಿ' ಇತಿ ಉಪಾಸಿತುಂ ಬುದ್ಧಿಃ ಪ್ರವರ್ತತೇ । ಬಾಹ್ಯಪ್ರತ್ಯಗಾತ್ಮಪ್ರವೃತ್ತ್ಯೋರ್ವಿರೋಧಾತ್ । ತಥಾ ಚ ಕಾಠಕೇ "ಪರಾಞ್ಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾನ್ತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್" (೨-೧-೧) ಇತ್ಯಾದಿ ॥

(ಭಾಷ್ಯ)

ಅವಿದ್ಯಾವಿಷಯವೆಂದು ಪ್ರಾರಂಭವಾಗಿರುವ ಸಾಧ್ಯಸಾಧನರೂಪವಾದ ಪ್ರಾಣಾತ್ಮಪ್ರಾಪ್ತಿಯವರೆಗಿನ ಉತ್ಕರ್ಷವುಳ್ಳ ಫಲವಾಗಿರುವ ಈ ವ್ಯಾಕೃತ ಜಗತ್ತಿದೆಯಲ್ಲ (ಇದು), ಮತ್ತು ವೃಕ್ಷಕ್ಕೆ ಬೀಜವಿದ್ದಂತೆ ಈ (ಜಗತ್ತು) ವ್ಯಾಕರಣವಾಗುವ ಮುಂಚಿನ ಅವ್ಯಾಕೃತವೆಂಬ ಶಬ್ದದಿಂದ ಕರೆಯಲ್ಪಡುವ ಅವಸ್ಥೆಯಿರುವದಲ್ಲ (ಇದು), ಇದೆಲ್ಲವೂ ಮೂರೇ. ಆ ಮೂರು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ: ನಾಮ, ರೂಪ, ಕರ್ಮ– ಎಂಬ ಅನಾತ್ಮವೇ, ನೇರಾಗಿಯೂ ಅಪರೋಕ್ಷವಾಗಿಯೂ ಬ್ರಹ್ಮವಾಗಿರುವ ಆತ್ಮನಲ್ಲ. ಆದ್ದರಿಂದ ಇದರಲ್ಲಿ ವಿರಕ್ತನಾಗಬೇಕು ಎಂದು 'ತ್ರಯಂ ವಾ' ಎಂದುಮುಂತಾಗಿರುವ (ಈ ಬ್ರಾಹ್ಮಣವನ್ನು) ಪ್ರಾರಂಭಿಸಿರುತ್ತದೆ. ಈ ಅನಾತ್ಮದಿಂದ ಚಿತ್ತವು ಹಿಂದಿರುಗದೆ ಇರುವವನಿಗೆ ಆತ್ಮನೆಂಬ ಲೋಕವನ್ನೇ ನಾನು ಬ್ರಹ್ಮವಾಗಿರುವೆನು ಎಂದು ಉಪಾಸನೆಮಾಡುವದಕ್ಕೆ ಬುದ್ಧಿಯು ತೊಡಗಲಾರದಷ್ಟೆ? ಏಕೆಂದರೆ ಹೊರಗಿನ (ವಿಷಯಗಳಲ್ಲಿ) ಪ್ರವರ್ತಿಸುವದು, ಒಳಗಿನ ಆತ್ಮನ ಕಡೆಗೆ ಪ್ರವರ್ತಿಸುವದು – ಇವೆರಡಕ್ಕೂ ವಿರೋಧವಿದೆ. ಆದ್ದರಿಂದಲೇ ಕಾಠಕದಲ್ಲಿ "ಸ್ವಯಂಭುವು ಇಂದ್ರಿಯಗಳನ್ನು ಹೊರಗಡೆಗೆ ಕೊರೆದಿರುತ್ತಾನೆ; ಆದ್ದರಿಂದ (ಮನುಷ್ಯನು) ಹೊರಗಡೆಗೆ ನೋಡುತ್ತಾನೆಯೇ ಹೊರತು ಒಳಗಿನ ಆತ್ಮನ ಕಡೆಗೆ (ನೋಡುವದಿಲ್ಲ). ಯಾವನೋ ಒಬ್ಬ ಧೀರನು ಇಂದ್ರಿಯಗಳನ್ನು ಹಿಂದಕ್ಕೆಳೆದುಕೊಂಡು ಅಮೃತತ್ವವನ್ನು ಬಯಸಿ ಪ್ರತ್ಯಗಾತ್ಮನನ್ನೇ ನೋಡುತ್ತಾನೆ" (ಕ. ೨-೧-೧) ಎಂದು ಹೇಳಿದೆ.

## ನಾಮಗಳ ಸಾಮಾನ್ಯವೇ ವಾಕ್ಕು

(ಭಾಷ್ಯ)

೨೫೫. ಕಥಂ ಪುನರಸ್ಯ ವ್ಯಾಕೃತಾವ್ಯಾಕೃತಸ್ಯ ಕ್ರಿಯಾಕಾರಕಫಲಾತ್ಮನಃ ಸಂಸಾರಸ್ಯ ನಾಮರೂಪಕರ್ಮಾತ್ಮಕತೈವ ನ ಪುನರಾತ್ಮತ್ವಮ್ ಇತ್ಯೇತತ್ ಸಂಭಾವಯಿತುಂ ಶಕ್ಯತ ಇತಿ ? ಅತ್ರೋಚ್ಯತೇ। ತೇಷಾಂ ನಾಮ್ನಾಂ ಯಥೋಪನ್ಯಸ್ತಾನಾಂ ವಾಗಿತಿ ಶಬ್ದಸಾಮಾನ್ಯಮುಚ್ಯತೇ। "ಯಃ ಕಶ್ಚ ಶಬ್ದೋ ವಾಗೇವ ಸಾ" (೧-೫-೩) ಇತ್ಯುಕ್ತತ್ವಾತ್ ವಾಗಿತ್ಯೇತಸ್ಯ ಶಬ್ದಸ್ಯ ಯೋಽರ್ಥಃ ಶಬ್ದಸಾಮಾನ್ಯಮಾತ್ರಮ್ ಏತದೇಷಾಂ ನಾಮವಿಶೇಷಾಣಾಮ್ ಉಕ್ಥಂ ಕಾರಣಮ್ ಉಪಾದಾನಂ ಸೈನ್ಧವಲವಣಕಣಾನಾಮಿವ ಸೈನ್ಧವಾಚಲಃ। ತದಾಹ। ಅತೋ ಹಿ ಅಸ್ಮಾತ್ ನಾಮಸಾಮಾನ್ಯಾತ್ ಸರ್ವಾಣಿ ನಾಮಾನಿ ಯಜ್ಞದತ್ತಃ ದೇವದತ್ತಃ ಇತ್ಯೇವಮಾದಿಪ್ರವಿಭಾಗಾನಿ ಉತ್ತಿಷ್ಠನ್ತಿ ಉತ್ಪದ್ಯನ್ತೇ ಪ್ರವಿಭಜ್ಯನ್ತೇ ಲವಣಾಚಲಾದಿವ ಲವಣಕಣಾಃ। ಕಾರ್ಯಂ ಚ

ಕಾರಣೇನ ಅವ್ಯತಿರಿಕ್ತಮ್ ; ತಥಾ ವಿಶೇಷಾಣಾಂ ಚ ಸಾಮಾನ್ಯೇ ಅನ್ತರ್ಭಾವಾತ್। ಕಥಂ ಸಾಮಾನ್ಯವಿಶೇಷಭಾವಃ ಇತಿ?[1] ಏತತ್ ಶಬ್ದಸಾಮಾನ್ಯಮ್ ಏಷಾಂ ನಾಮವಿಶೇಷಾಣಾಂ ಸಾಮ। ಸಮತ್ವಾತ್ ಸಾಮ। ಸಾಮಾನ್ಯಮ್ ಇತ್ಯರ್ಥಃ। ಏತದ್ ಹಿ ಯಸ್ಮಾತ್ ಸರ್ವೈರ್ನಾಮಭಿಃ ಆತ್ಮವಿಶೇಷೈಃ ಸಮಮ್, ಕಿಂ ಚ। ಆತ್ಮಲಾಭಾವಿಶೇಷಾಚ್ಚ ನಾಮವಿಶೇಷಾಣಾಮ್। ಯಸ್ಯ ಚ ಯಸ್ಮಾತ್ ಆತ್ಮಲಾಭೋ ಭವತಿ ಸ ತೇನ ಅಪ್ರವಿಭಕ್ತೋ ದೃಷ್ಟಃ। ಯಥಾ ಘಟಾದೀನಾಂ ಮೃದಾ। ಕಥಂ ನಾಮವಿಶೇಷಾಣಾಮ್ ಆತ್ಮಲಾಭೋ ವಾಚಃ ಇತಿ ? ಉಚ್ಯತೇ। ಯತಃ ಏತದೇಷಾಂ ವಾಕ್ಶಬ್ದವಾಚ್ಯಂ ವಸ್ತು ಬ್ರಹ್ಮ ಆತ್ಮಾ। ತತೋ ಹಿ ಆತ್ಮಲಾಭೋ ನಾಮ್ನಾಮ್। ಶಬ್ದವ್ಯತಿರಿಕ್ತಸ್ವರೂಪಾನುಪಪತ್ತೇಃ। ತತ್ಪ್ರತಿಪಾದಯತಿ। ಏತತ್ ಶಬ್ದಸಾಮಾನ್ಯಂ ಹಿ ಯಸ್ಮಾತ್ ಶಬ್ದವಿಶೇಷಾನ್ ಸರ್ವಾಣಿ ನಾಮಾನಿ ಬಿಭರ್ತಿ ಧಾರಯತಿ ಸ್ವರೂಪಪ್ರದಾನೇನ। ಏವಂ ಕಾರ್ಯಕಾರಣತ್ವೋಪಪತ್ತೇಃ ಸಾಮಾನ್ಯವಿಶೇಷೋಪಪತ್ತೇಃ। ಆತ್ಮಪ್ರದಾನೋಪಪತ್ತೇಶ್ಚ ನಾಮವಿಶೇಷಾಣಾಂ ಶಬ್ದಮಾತ್ರತಾ ಸಿದ್ಧಾ। ಏವಮ್ ಉತ್ತರಯೋರಪಿ ಸರ್ವಂ ಯೋಜ್ಯಂ ಯಥೋಕ್ತಮ್ ॥

(ಭಾಷ್ಯಾರ್ಥ)

( ಪ್ರಶ್ನೆ ) :- ಈ ವ್ಯಾಕೃತಾವ್ಯಾಕೃತವಾದ ಕ್ರಿಯಾಕಾರಕಫಲರೂಪವಾಗಿರುವ ಸಂಸಾರವು ನಾಮರೂಪಕರ್ಮಾತ್ಮಕವೇ ಹೊರತು ಆತ್ಮನಲ್ಲ ಎಂಬಿದನ್ನು ಇರಬಹುದೆಂದು (ಒಪ್ಪುವದು) ಹೇಗಾದೀತು ?

(ಉತ್ತರ) :- ಇದಕ್ಕೆ (ಶ್ರುತಿ) ಹೇಳುತ್ತದೆ. ಅವುಗಳಲ್ಲಿ[2] ಮೇಲೆ ಹೇಳಿದ ನಾಮಗಳಿಗೆ ವಾಕ್ಕು, (ವಾಕ್ಕು) ಎಂದು ಶಬ್ದಸಾಮಾನ್ಯವನ್ನು ಹೇಳಿರುತ್ತದೆ; ಏಕೆಂದರೆ "ಯಾವ ಶಬ್ದವೇ ಆಗಿರಲಿ, ಅದು ವಾಕ್ಕೇ" (೧-೫-೩) ಎಂದು (ಹಿಂದೆ) ಹೇಳಿರುತ್ತದೆ. ಈ ವಾಕ್ಕೆಂಬ ಶಬ್ದಕ್ಕೆ ಅರ್ಥವಾದ ಶಬ್ದಸಾಮಾನ್ಯಮಾತ್ರವಿದೆಯಲ್ಲ, ಇದು ಈ ನಾಮವಿಶೇಷಗಳಿಗೆ ಉಕ್ಥವು, ಕಾರಣವು; ಸೈಂಧವಲವಣದ ಹರಳುಗಳಿಗೆ ಸೈಂಧವಪರ್ವತವು ಹೇಗೋ ಹಾಗೆ ಉಪಾದಾನ(ಕಾರಣವು). ಇದನ್ನೇ (ಶ್ರುತಿ) ಹೇಳುತ್ತದೆ: ಇದರಿಂದಲೇ ಅಲ್ಲವೆ, ಈ ನಾಮಸಾಮಾನ್ಯದಿಂದಲೇ ಅಲ್ಲವೆ, ಯಜ್ಞದತ್ತ, ದೇವದತ್ತ-ಮುಂತಾದ ಒಳಭೇದಗಳುಳ್ಳ ನಾಮಗಳೆಲ್ಲ (ಉತ್ತಿಷ್ಠನ್ತಿ) ಮೇಲಕ್ಕೇಳುತ್ತವೆ,

---

1. 'ಇತಿ'ಯಿಲ್ಲದ ಪಾಠವೂ ಉಂಟು ; ಅರ್ಥವೇನೂ ಅದರಿಂದ ಹೆಚ್ಚುಕಡಿಮೆಯಾಗುವದಿಲ್ಲ.

2. ನಾಮರೂಪಕರ್ಮಗಳೊಳಗೆ ಎಂದರ್ಥ.

ಹುಟ್ಟುತ್ತವೆ, ಉಪ್ಪಿನ ಬೆಟ್ಟದಿಂದ ಉಪ್ಪಿನ ಹರಳುಗಳು (ಬೇರ್ಪಟ್ಟು ಬರು) ವಂತೆ ಬಿಡಿಯಾಗಿ ಬರುತ್ತವೆ ? ಕಾರ್ಯವು ಕಾರಣಕ್ಕಿಂತ ಬೇರೆಯಾಗಿರು ವದಿಲ್ಲ ; ಇದರಂತೆ (ನಾಮ)ವಿಶೇಷಗಳು ಸಾಮಾನ್ಯದಲ್ಲಿ ಅಡಕವಾಗಿರುತ್ತವೆ ಯಾದ್ದರಿಂದ (ಸಾಮಾನ್ಯವು ಕಾರಣವು).

ಸಾಮಾನ್ಯವಿಶೇಷಭಾವವೆಂಬಿದು ಹೇಗೆ ? ಎಂದರೆ ಈ ಶಬ್ದಸಾಮಾನ್ಯ ವು ಈ ನಾಮವಿಶೇಷಗಳ ಸಾಮವು ; ಸಮವಾಗಿರುವದರಿಂದ ಸಾಮವು, ಸಾಮಾನ್ಯವು ಎಂದರ್ಥ. ಇದೆ ಅಲ್ಲವೆ, (ಹಿ= ಯಸ್ಮಾತ್) ತನ್ನ ವಿಶೇಷಗಳಾಗಿ ರುವ ಎಲ್ಲಾ ನಾಮಗಳಿಗೂ ಸಮವಾಗಿರುವದು? ಇದಲ್ಲದೆ ನಾಮವಿಶೇಷಗಳು ಹುಟ್ಟುವದು ಸಮಾನವಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು). ಯಾವದಕ್ಕೆ ಯಾವದರಿಂದ ಹುಟ್ಟು ಆಗುತ್ತದೆಯೋ ಅದು ಅದಕ್ಕಿಂತ ಬೇರೆ ಯಾಗಿರುವದಿಲ್ಲವೆಂದು ಕಂಡಿದೆ; ಉದಾಹರಣೆಗೆ ಗಡಿಗೆ ಮುಂತಾದವುಗಳು ಮಣ್ಣಿಗಿಂತ (ಬೇರೆಯಾಗಿರುವದಿಲ್ಲ). ನಾಮವಿಶೇಷಗಳಿಗೆ ವಾಕ್ಕಿನಿಂದ ಹುಟ್ಟು (ಆಗುತ್ತದೆ) ಎಂಬಿದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ. ಏಕೆಂದರೆ ವಾಕ್ಶಬ್ದವಾಚ್ಯವಾದ ಈ ವಸ್ತು ಇವುಗಳಿಗೆ ಬ್ರಹ್ಮವು, ಆತ್ಮವು. ಆದರಿಂದಲೇ ಅಲ್ಲವೆ, ನಾಮಗಳು ಹುಟ್ಟುವದು ? ಏಕೆಂದರೆ (ಅವಕ್ಕೆ) ಶಬ್ದಕ್ಕಿಂತ ಬೇರೆ ಯಾಗಿ ಸ್ವರೂಪವಿರಲಾರದು. ಇದನ್ನು (ಶ್ರುತಿ) ತಿಳಿಸುತ್ತಿದೆ. ಇದೇ (ಈ) ಶಬ್ದಸಾಮಾನ್ಯವೇ ಅಲ್ಲವೆ, (ಹಿ= ಯಸ್ಮಾತ್) ಶಬ್ದವಿಶೇಷಗಳಾಗಿರುವ ನಾಮ ಗಳನ್ನೆಲ್ಲ ಧರಿಸಿರುವದು, (ಅವುಗಳಿಗೆ) ಸ್ವರೂಪವನ್ನು ಕೊಟ್ಟು ನಿಲ್ಲಿಸಿಕೊಂಡಿ ರುವದು? ಹೀಗೆ ಕಾರ್ಯಕಾರಣಭಾವವು ಹೊಂದುವದರಿಂದಲೂ ಸಾಮಾನ್ಯ ವಿಶೇಷಭಾವವು ಹೊಂದುವದರಿಂದಲೂ ನಾಮವಿಶೇಷಗಳು ಶಬ್ದಮಾತ್ರವೇ ಎಂದು ಸಿದ್ಧವಾಯಿತು.

ಹೀಗೆಯೇ ಮುಂದಿನ ( ಎರಡಕ್ಕೂ ) ಮೇಲೆ ಹೇಳಿದ್ದೆಲ್ಲವನ್ನೂ[1] ಹೊಂದಿಸಿಕೊಳ್ಳಬೇಕು.

## ರೂಪಸಾಮಾನ್ಯ

(ಉಪನಿಷತ್ತು)

**ಅಥ ರೂಪಾಣಾಂ ಚಕ್ಷುರಿತ್ಯೇತದೇಷಾಮುಕ್ಥಮತೋ ಹಿ ಸರ್ವಾಣಿ ರೂಪಾಣ್ಯುತ್ತಿಷ್ಠನ್ತ್ಯೇತದೇಷಾಗ್ಂ ಸಾಮೈತದ್ಧಿ ಸರ್ವೈ ರೂಪೈಃ ಸಮಮೇತದೇಷಾಂ ಬ್ರಹ್ಮೈತದ್ಧಿ ಸರ್ವಾಣಿ ರೂಪಾಣಿ ಬಿಭರ್ತಿ ॥ ೨ ॥**

1. ಉಕ್ಥ, ಸಾಮ, ಬ್ರಹ್ಮ- ಎಂಬಿವುಗಳನ್ನು ನಾಮಕ್ಕೆ ವಿವರಿಸಿರುವಂತೆಯೇ ರೂಪಕರ್ಮಗಳಿಗೂ ಅನ್ವಯಿಸಿಕೊಳ್ಳಬೇಕು ಎಂದರ್ಥ.

೨. ಇನ್ನು ರೂಪಗಳಿಗೆ : ಚಕ್ಷುಸ್ಸು ಎಂಬಿದು ಇವುಗಳ ಉಕ್ಥವು ; ಇದರಿಂದಲೇ ಅಲ್ಲವೆ, ಸರ್ವರೂಪಗಳೂ ಮೇಲಕ್ಕೇಳುತ್ತವೆ ? ಇದೇ ಇವುಗಳ ಸಾಮವು ; ಇದೇ ಅಲ್ಲವೆ, ಎಲ್ಲಾ ರೂಪಗಳಿಗೂ ಸಮವಾಗಿರುವದು ? ಇದೇ ಇವುಗಳ ಬ್ರಹ್ಮವು ; ಇದೇ ಅಲ್ಲವೆ, ರೂಪಗಳನ್ನೆಲ್ಲ ಧರಿಸಿರುವದು ?

## ರೂಪಸಾಮಾನ್ಯವೇ ಚಕ್ಷುಸ್ಸು

(ಭಾಷ್ಯ)

**೨೫೬. ಅಥ ಇದಾನೀಂ ರೂಪಾಣಾಂ ಸಿತಾಸಿತಪ್ರಭೃತೀನಾಂ ಚಕ್ಷುರಿತಿ ಚಕ್ಷುರ್ವಿಷಯಸಾಮಾನ್ಯಮ್ । ಚಕ್ಷುಃಶಬ್ದಾಭಿಧೇಯಂ ರೂಪಸಾಮಾನ್ಯಂ ಪ್ರಕಾಶ್ಯಮಾತ್ರಮ್ ಅಭಿಧೀಯತೇ । ಅತೋ ಹಿ ಸರ್ವಾಣಿ ರೂಪಾಣಿ ಉತ್ತಿಷ್ಠನ್ತಿ ಏತದೇಷಾಂ ಸಾಮ ಏತದ್ ಹಿ ಸರ್ವೈ ರೂಪೈಃ ಸಮಮ್ । ಏತದೇಷಾಂ ಬ್ರಹ್ಮ ಏತದ್ ಹಿ ಸರ್ವಾಣಿ ರೂಪಾಣಿ ಬಿಭರ್ತಿ ॥**

(ಭಾಷ್ಯಾರ್ಥ)

ಇನ್ನು ಈಗ ಬಿಳುಪು, ಕಪ್ಪು- ಮುಂತಾದ ರೂಪಗಳಿಗೆ ಚಕ್ಷುಸ್ಸು, ಎಂದರೆ ಚಕ್ಷುಸ್ಸಿಗೆ ವಿಷಯವಾಗಿರುವ ಸಾಮಾನ್ಯವು. ಚಕ್ಷುಃಶಬ್ದಕ್ಕೆ ವಾಚ್ಯವಾಗಿರುವ ರೂಪಸಾಮಾನ್ಯವು, (ಚಕ್ಷುಃ) ಪ್ರಕಾಶ್ಯಮಾತ್ರವಿದೆಯಲ್ಲ (ಅದನ್ನು ಇಲ್ಲಿ ಚಕ್ಷುವೆಂದು) ಕರೆದಿದೆ. (ಇದೇ ಉಕ್ಥವು) ; ಇದರಿಂದಲೇ ಅಲ್ಲವೆ, ಎಲ್ಲಾ ರೂಪಗಳೂ ಹುಟ್ಟುತ್ತವೆ ? ಇದೇ ಇವುಗಳ ಸಾಮವು ; ಇದೇ ಅಲ್ಲವೆ, ಎಲ್ಲಾ ರೂಪಗಳಿಗೂ ಸಮವಾಗಿರುವದು ? ಇದೇ ಇವುಗಳ ಬ್ರಹ್ಮವು ; ಇದೇ ಅಲ್ಲವೆ, ಎಲ್ಲಾ ರೂಪಗಳನ್ನೂ ಧರಿಸಿರುವದು ?

## ಕರ್ಮಸಾಮಾನ್ಯ, ಪ್ರಾಣವಿಚಾರೋಪಸಂಹಾರ

(ಉಪನಿಷತ್ತು)

**ಅಥ ಕರ್ಮಣಾಮಾತ್ಮೇತ್ಯೇತದೇಷಾಮುಕ್ಥಮತೋ ಹಿಸರ್ವಾಣಿ ಕರ್ಮಾಣ್ಯುತ್ತಿಷ್ಠನ್ತ್ಯೇತದೇಷಾಗ್ಂ ಸಾಮೈತದ್ಧಿ ಸರ್ವೈಃ ಕರ್ಮಭಿಃ ಸಮಮೇತದೇಷಾಂ ಬ್ರಹ್ಮೈತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ ತದೇತತ್ ತ್ರಯಗ್ಂ ಸದೇಕಮಯಮಾತ್ಮಾಽಽತ್ಮೋ ಏಕಃ ಸನ್ನೇತತ್ತ್ರಯಂ ತದೇತದಮೃತಗ್ಂ ಸತ್ಯೇನ ಚ್ಛನ್ನಂ ಪ್ರಾಣೋ ವಾ ಅಮೃತಂ ನಾಮರೂಪೇ ಸತ್ಯಂ ತಾಭ್ಯಾಮಯಂ ಪ್ರಾಣಶ್ಛನ್ನಃ ॥ ೩ ॥**

೩. ಇನ್ನು ಕರ್ಮಗಳಿಗೆ ; ಆತ್ಮನೆಂಬಿದೇ ಇವುಗಳಿಗೆ ಉಕ್ಥವು, ಇದರಿಂದಲೇ ಅಲ್ಲವೆ, ಎಲ್ಲಾ ಕರ್ಮಗಳೂ ಮೇಲಕ್ಕೇಳುವವು ? ಇದೇ ಇವುಗಳ ಸಾಮವು ; ಇದೇ ಅಲ್ಲವೆ, ಎಲ್ಲಾ ಕರ್ಮಗಳಿಗೂ ಸಮವು ? ಇದೇ ಇವುಗಳ ಬ್ರಹ್ಮವು ; ಇದೇ ಅಲ್ಲವೆ, ಕರ್ಮಗಳನ್ನೆಲ್ಲ ಧರಿಸಿರುವದು ? ಆ ಇದು ಮೂರಾಗಿದ್ದುಕೊಂಡು ಒಂದು, ಈ ಆತ್ಮವು ; ಮತ್ತು ಆತ್ಮವು ಒಂದಾಗಿದ್ದುಕೊಂಡು ಈ ಮೂರು. ಆ ಈ ಅಮೃತವು ಸತ್ಯದಿಂದ ಮರೆಯಾಗಿರುತ್ತದೆ. ಪ್ರಾಣವೇ ಅಮೃತವು ನಾಮರೂಪಗಳೇ ಸತ್ಯವು ; ಅವುಗಳಿಂದ ಈ ಪ್ರಾಣವು ಮರೆಯಾಗಿರುತ್ತದೆ.

## ಕರ್ಮಸಾಮಾನ್ಯವೇ ಶರೀರವು

(ಭಾಷ್ಯ)

೨೫೭. ಅಥ ಇದಾನೀಂ ಸರ್ವಕರ್ಮವಿಶೇಷಾಣಾಂ ಮನನದರ್ಶನಾತ್ಮಕಾನಾಂ ಚಲನಾತ್ಮಕಾನಾಂ ಚ ಕ್ರಿಯಾಸಾಮಾನ್ಯಮಾತ್ರೇ ಅನ್ತರ್ಭಾವಃ ಉಚ್ಯತೇ । ಕಥಮ್ ? ಸರ್ವೇಷಾಂ ಕರ್ಮವಿಶೇಷಾಣಾಮ್ ಆತ್ಮಾ ಶರೀರಮ್ ಸಾಮಾನ್ಯಮ್[1] ಆತ್ಮನಃ ಕರ್ಮ ಆತ್ಮೇತ್ಯುಚ್ಯತೇ । 'ಆತ್ಮನಾ ಹಿ ಶರೀರೇಣ ಕರ್ಮ ಕರೋತಿ' (೧-೪-೭) ಇತ್ಯುಕ್ತಮ್ । ಶರೀರೇ ಚ ಸರ್ವಂ ಕರ್ಮ ಅಭಿವ್ಯಜ್ಯತೇ । ಅತಃ ತಾತ್ಸ್ಥ್ಯಾತ್ ತಚ್ಛಬ್ದಂ ಕರ್ಮ ಕರ್ಮಸಾಮಾನ್ಯಮಾತ್ರಂ ಸರ್ವೇಷಾಮ್ ಉಕ್ಥಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಇನ್ನು ಈಗ ಮನನದರ್ಶನರೂಪವಾಗಿರುವ ಮತ್ತು ಚಲನರೂಪವಾಗಿರುವ ಎಲ್ಲಾ ಕರ್ಮಗಳಿಗೂ ಕ್ರಿಯಾಸಾಮಾನ್ಯಮಾತ್ರದಲ್ಲಿ ಅಂತರ್ಭಾವವನ್ನು ಹೇಳಲಾಗುತ್ತದೆ. ಹೇಗೆ ? ಎಂದರೆ ಎಲ್ಲಾ ಕರ್ಮವಿಶೇಷಗಳಿಗೂ ಆತ್ಮವು ಶರೀರವು (ಉಕ್ಥವು). ಸಾಮಾನ್ಯವಾದ ಆತ್ಮದ ಕರ್ಮವನ್ನೇ ಆತ್ಮ ಎಂದು ಇಲ್ಲಿ ಕರೆದಿದೆ. "ಆತ್ಮದಿಂದ ಎಂದರೆ ಶರೀರದಿಂದ ಕರ್ಮವನ್ನು ಮಾಡುತ್ತಾನೆ" (೧-೪-೧೭) ಎಂದಲ್ಲವೆ, ಹಿಂದೆ ಹೇಳಿದೆ ? ಶರೀರದಲ್ಲಿಯೇ ಕರ್ಮವು ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಅದರಲ್ಲಿರುವದರಿಂದ ಕರ್ಮವು ಆ (ಆತ್ಮ) ಶಬ್ದದಿಂದ (ಹೇಳಲ್ಪಡುತ್ತದೆ. ಅದು) ಎಲ್ಲಾ (ಕರ್ಮಗಳಿಗೂ) ಉಕ್ಥವು ಎಂಬಿದೇ ಮುಂತಾದದ್ದನ್ನು ಮೊದಲಿನಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).

---

1. ಇದರ ಮುಂದಿನ 'ಆತ್ಮಾ' ಎಂಬಿದು ಅವಶ್ಯವಿಲ್ಲ.

## ನಾಮರೂಪಕರ್ಮಗಳ ಸಂಕ್ಷೇಪ

(ಭಾಷ್ಯ)

೨೫೮. ತದೇತತ್ ಯಥೋಕ್ತಂ ನಾಮ ರೂಪಂ ಕರ್ಮ[1] ತ್ರಯಮ್ ಇತರೇತರಾಭಿವ್ಯಕ್ತಿಕಾರಣಮ್ ಇತರೇತರಪ್ರಲಯಂ ಸಂಹತಂ ತ್ರಿದಣ್ಡವಿಷ್ಟಮ್ಭವತ್ ಸತ್ ಏಕಮ್ । ಕೇನಾತ್ಮನಾ ಏಕತ್ವಮಿತಿ ? ಉಚ್ಯತೇ । ಅಯಮಾತ್ಮಾ ಅಯಂ ಪಿಣ್ಡಃ ಕಾರ್ಯಕರಣಾತ್ಮಸಂಘಾತಃ । ತಥಾ ಅನ್ನತ್ರಯೇ ವ್ಯಾಖ್ಯಾತಃ "ಏತನ್ಮಯೋ ವಾ ಅಯಮಾತ್ಮಾ" (೧-೫-೩) ಇತ್ಯಾದಿನಾ । ಏತಾವದ್ ಹಿ ಇದಂ ಸರ್ವಂ ವ್ಯಾಕೃತಮ್ ಅವ್ಯಾಕೃತಂ ಚ ಯದುತ ನಾಮ ರೂಪಂ ಕರ್ಮ ಇತಿ । ಆತ್ಮಾ ಉ ಏಕೋಽಯಂ ಕಾರ್ಯಕರಣಸಂಘಾತಃ ಸನ್ ಅಧ್ಯಾತ್ಮಾಧಿಭೂತಾಧಿದೈವಭಾವೇನ ವ್ಯವಸ್ಥಿತಮ್ ಏತದೇವ ತ್ರಯಂ ನಾಮ ರೂಪಂ ಕರ್ಮ ಇತಿ ॥

(ಭಾಷ್ಯಾರ್ಥ)

ಆ ಈ ಮೇಲೆ ಹೇಳಿರುವ ನಾಮ, ರೂಪ, ಕರ್ಮ– ಎಂಬ ಮೂರೂ ಒಂದಕ್ಕೊಂದು ಆಶ್ರಯವಾಗಿ ಒಂದಕ್ಕೊಂದು ಅಭಿವ್ಯಕ್ತಿಕಾರಣವಾಗಿ[2] ಒಂದರಲ್ಲೊಂದು ಅಡಗುವದಾಗಿ[3] ಮೂರು ಕೋಲಿನ ಕಂಬದಂತೆ ಇದ್ದುಕೊಂಡಿರುವದರಿಂದ ಒಂದು. ಯಾವ ರೂಪದಿಂದ (ಇವು ಮೂರೂ) ಒಂದು ? ಎಂದರೆ (ಶ್ರುತಿ) ಹೇಳುತ್ತದೆ: ಈ ಆತ್ಮವು ಈ ಶರೀರವು, ಕಾರ್ಯಕರಣರೂಪ ಸಂಘಾತವು. ಹೀಗೆಂದು ಅನ್ನತ್ರಯ(ಪ್ರಕರಣ)ದಲ್ಲಿ 'ಈ ಆತ್ಮವು ಏತನ್ಮಯವು' (೧-೫-೩) ಎಂದು ಮುಂತಾದ (ವಾಕ್ಯ)ದಿಂದ (ಇದನ್ನು) ವ್ಯಾಖ್ಯಾನ ಮಾಡಿರುತ್ತದೆ. ನಾಮ, ರೂಪ, ಕರ್ಮ– ಎನ್ನುವರಲ್ಲ, ಇಷ್ಟೇ ಅಲ್ಲವೆ, ಈ ವ್ಯಾಕೃತವೂ ಅವ್ಯಾಕೃತವೂ ಆಗಿರುವದೆಲ್ಲ ? ಮತ್ತು ಆತ್ಮವು ಈ ಕಾರ್ಯಕರಣ

---

1. 'ನಾಮರೂಪಕರ್ಮ' ಎಂದು ಸಮಸ್ತಪದವಾಗಿರುವ ಪಾಠವು ಬೇಕಿಲ್ಲ; ಮೂಲವನ್ನೇ ಅನುಸರಿಸಿ ಭಾಷ್ಯಕಾರರು ಬರೆದಿರುತ್ತಾರೆ, 'ನಾಮ ರೂಪಂ ಕರ್ಮ ಚೇತ್ಯೇತತ್ ತತ್ ತ್ರಯಮ್' ಎಂದು ಅನ್ವಯಿಸಿಕೊಳ್ಳಬೇಕು.

2. ರೂಪವೆಂಬ ವಿಷಯವನ್ನು ಆಶ್ರಯಿಸಿಕೊಂಡು ನಾಮಕರ್ಮಗಳು ಸಿದ್ಧವಾಗುತ್ತವೆ ; ಕರ್ಮಗಳನ್ನು ಆಶ್ರಯಿಸಿ ರೂಪವು ಸಿದ್ಧವಾಗುತ್ತದೆ ; ವಾಚಕವು ವಾಚ್ಯವನ್ನು ವಾಚ್ಯವು ವಾಚಕವನ್ನು ಅವೆರಡೂ ಕ್ರಿಯೆಯನ್ನು ಕ್ರಿಯೆಯು ಅವೆರಡನ್ನು ಅಭಿವ್ಯಕ್ತಿಗಾಗಿ ಬಯಸುತ್ತವೆ.

3. ನಾಮವಿದ್ದರೂ ರೂಪವು ಲಯವಾಗುತ್ತದೆ, ರೂಪವಿದ್ದರೂ ನಾಮವು ಅಡಗುತ್ತದೆ. ಅವೆರಡೂ ಇದ್ದರೂ ಕರ್ಮವು ಅಡಗುತ್ತದೆ; ಅವೆರಡೂ ಕರ್ಮವಿದ್ದರೂ ಅಡಗುತ್ತವೆ. ೬॥ ೧॥

ಸಂಘಾತವು ಒಂದೇ ಆಗಿದ್ದುಕೊಂಡು ನಾಮ,ರೂಪ,ಕರ್ಮ- ಎಂಬೀ ಮೂರೇ ಅಧ್ಯಾತ್ಮ, ಅಧಿಭೂತ, ಅಧಿದೈವ- ಎಂಬ ರೂಪದಿಂದ ಇದ್ದುಕೊಂಡಿರುತ್ತದೆ[1].

## ಪ್ರಾಣಾತ್ಮವು ನಾಮರೂಪಗಳಿಂದ ಮರೆಯಾಗಿರುವದು

(ಭಾಷ್ಯ)

೨೫. ತದೇತತ್ ವಕ್ಷ್ಯಮಾಣಮ್ ಅಮೃತಂ ಸತ್ಯೇನ ಛನ್ನಮ್ ಇತ್ಯೇತಸ್ಯ ವಾಕ್ಯಸ್ಯ ಅರ್ಥಮಾಹ। ಪ್ರಾಣೋ ವಾ ಅಮೃತಮ್ । ಕರಣಾತ್ಮಕಃ ಅನ್ತರುಪಷ್ಟಮ್ಭಕಃ ಆತ್ಮಭೂತಃ ಅಮೃತಃ ಅವಿನಾಶೀ। ನಾಮರೂಪೇ ಸತ್ಯಮ್। ಕಾರ್ಯಾತ್ಮಕೇ ಶರೀರಾವಸ್ಥೇ। ಕ್ರಿಯಾತ್ಮಕಸ್ತು ಪ್ರಾಣಃ ತಯೋರುಪಷ್ಟಮ್ಭಕಃ ಬಾಹ್ಯಾಭ್ಯಾಂ ಶರೀರಾತ್ಮಕಾಭ್ಯಾಮ್ ಉಪಜನಾಪಾಯಧರ್ಮಿಭ್ಯಾಂ ಮರ್ತ್ಯಾಭ್ಯಾಂ (ತಾಭ್ಯಾಂ)[2] ಛನ್ನಃ ಅಪ್ರಕಾಶೀಕೃತಃ । ಏತದೇವ ಸಂಸಾರಸತತ್ತ್ವಮ್ ಅವಿದ್ಯಾವಿಷಯಂ ಪ್ರದರ್ಶಿತಮ್ । ಅತ ಊರ್ಧ್ವಂ[3] ವಿದ್ಯಾವಿಷಯಃ ಆತ್ಮಾ ಅಧಿಗನ್ತವ್ಯಃ ಇತಿ ಚತುರ್ಥಃ ಆರಭ್ಯತೇ ॥

(ಭಾಷ್ಯಾರ್ಥ)

'ಆ ಈ ಮುಂದೆ ಹೇಳುವ ಅಮೃತವು ಸತ್ಯದಿಂದ ಮರೆಯಾಗಿದೆ.' ಈ ವಾಕ್ಯದ ಅರ್ಥವನ್ನು ಶ್ರುತಿ ಹೇಳುತ್ತಿದೆ: ಪ್ರಾಣವೇ ಅಮೃತವು, ಕರಣಾತ್ಮಕವಾಗಿ' ಒಳಗಡೆ (ಶರೀರವನ್ನು) ಎತ್ತಿಹಿಡಿದುಕೊಂಡಿರುವ ಆತ್ಮಭೂತವಾಗಿರುವ (ಪ್ರಾಣವು) ಅಮೃತವು, ನಾಶವಾಗತಕ್ಕದ್ದಲ್ಲ. ಕಾರ್ಯಾತ್ಮಕವಾದ ಶರೀರಾವಸ್ಥೆಯಲ್ಲಿರುವ ನಾಮರೂಪಗಳು ಸತ್ಯವು. ಆದರೆ ಕ್ರಿಯಾತ್ಮಕವಾಗಿರುವ ಅವೆರಡನ್ನೂ ಎತ್ತಿಹಿಡಿದುಕೊಂಡಿರುವ ಪ್ರಾಣವಿದೆಯಲ್ಲ,(ಅದು) ಹೊರಗೆ ಶರೀರಾತ್ಮವಾಗಿರುವ ಬರುವದು,ಹೋಗುವದು-ಎಂಬ ಧರ್ಮವುಳ್ಳ ಮರ್ತ್ಯವಾದ ಆ(ನಾಮರೂಪ)ಗಳಿಂದ ಮರೆಯಾಗಿರುತ್ತದೆ, ಕಾಣದಂತೆ ಮಾಡಲ್ಪಟ್ಟಿರುತ್ತದೆ.

ಈ ತಿಳಿಸಿದ್ದೇ ಅವಿದ್ಯಾವಿಷಯವಾದ ಸಂಸಾರದ ತತ್ತ್ವವು. ಇನ್ನು ಮೇಲೆ ವಿದ್ಯಾವಿಷಯವಾದ ಆತ್ಮನನ್ನು ಅರಿತುಕೊಳ್ಳಬೇಕಾಗಿದೆ. ಆದ್ದರಿಂದ **ನಾಲ್ಕನೆಯ** ಅಧ್ಯಾಯವನ್ನು ಆರಂಭಿಸಲಾಗುತ್ತದೆ.

ಇತಿಶ್ರೀಗೋವಿನ್ದಭಗವತ್ಪೂಜ್ಯಪಾದಶಿಷ್ಯಸ್ಯ ಪರಮಹಂಸಪರಿವ್ರಾಜಕಾಚಾರ್ಯಸ್ಯ ಶ್ರೀಶಂಕರಭಗವತಃ ಕೃತೌ ಬೃಹದಾರಣ್ಯಕಭಾಷ್ಯೇ ಪ್ರಥಮೋಽಧ್ಯಾಯಃ[4]

---

1. ಒಂದು ಮೂರಾಗಿರುವದು, ಮೂರೇ ಒಂದಾಗಿರುವದು-ಎಂಬ ಶ್ರುತಿಯ ಬಲದಿಂದ ಪರಮಾತ್ಮನು ಭಿನ್ನಾಭಿನ್ನ ಸ್ವರೂಪನೆಂದು ಅನುಮಾನದಿಂದ ನಿಶ್ಚಯಿಸಬೇಕು ಎಂಬ ಭರ್ತೃಪ್ರಪಂಚರ ಮತವನ್ನು ವಾರ್ತಿಕದಲ್ಲಿ (೫೨) ಖಂಡಿಸಿರುತ್ತದೆ.

2. ಇಲ್ಲಿ 'ತಾಭ್ಯಾಂ' ಎಂಬ ಮಾತು ಬಿಟ್ಟುಹೋಗಿದೆ.

3. ಆರಣ್ಯಕಕ್ರಮದಿಂದ ಇದು ಮೂರನೆಯ ಅಧ್ಯಾಯವು. ಹಿಂದೆ ಎರಡು ಅಧ್ಯಾಯಗಳು ಪ್ರವರ್ಗ್ಯಕ್ಕೆ ಸಂಬಂಧಿಸಿರುವದರಿಂದ ಇಲ್ಲಿ ಅವಕ್ಕೆ ಭಾಷ್ಯವನ್ನು ಮಾಡಿಲ್ಲ.

4. ಇಲ್ಲಿ ಕೊಟ್ಟಿರುವ ಸಮಾಪ್ತಿವಾಕ್ಯವು ಮೂಲಭಾಷ್ಯದಲ್ಲಿಯೂ ಇತ್ತೆಂಬುದಕ್ಕೆ ಪ್ರಮಾಣವಿಲ್ಲ. ಭಾಷ್ಯಕಾರರ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

# ಐದನೆಯ ಆರನೆಯ ಬ್ರಾಹ್ಮಣಗಳ ಸಾರ

## ಐದನೆಯ ಬ್ರಾಹ್ಮಣ

೧-೩. ಈಗಿನ ಪ್ರಜಾಪತಿಯು ಹಿಂದಿನ ಕಲ್ಪದಲ್ಲಿ ಸಾಧಕಾವಸ್ಥೆಯಲ್ಲಿ ಮಾಡಿದ ಜ್ಞಾನಕರ್ಮಗಳಿಂದ ಏಳು ಅನ್ನಗಳನ್ನು ಸೃಷ್ಟಿಸಿರುತ್ತಾನೆ. ಎಲ್ಲಾ ಪ್ರಾಣಿಗಳೂ ತಿನ್ನುತ್ತಿರುವ ಸಾಧಾರಣಾನ್ನವೊಂದು; ಹುತಪ್ರಹುತಗಳ ರೂಪದ ಅಥವಾ ದರ್ಶಪೂರ್ಣಮಾಸಗಳ ರೂಪದ ಕರ್ಮಗಳು ಎರಡು ದೇವತೆಗಳಿಗಾಗಿ ಹುಟ್ಟಿದ್ದು; ಪಶುಗಳಿಗೆ ಕೊಟ್ಟ ಹಾಲೆಂಬುದು ಒಂದು; ವಾಙ್ಮನಃಪ್ರಾಣಗಳೆಂಬ ತನಗಾಗಿ ಸೃಷ್ಟಿಮಾಡಿಕೊಂಡ ಅನ್ನಗಳು ಮೂರು. ಈ ಏಳು ಬಗೆಯ ಅನ್ನಗಳನ್ನು ಪುರುಷನು ಮತ್ತೆ ಮತ್ತೆ ಜ್ಞಾನಕರ್ಮಗಳಿಂದ ಸೃಜಿಸುತ್ತಲೇ ಇರುವದರಿಂದ ಅವು ಕ್ಷಯವಾಗದೆ ಇವೆ. ಹೀಗೆಂದು ತಿಳಿದುಕೊಂಡವನು ಸ್ವಪ್ರಧಾನನಾದ ಭೋಕ್ತೃವಾಗಿ ಭೋಗವನ್ನು ಅನುಭವಿಸಿ ದೇವತೆಗಳಲ್ಲಿ ಒಂದಾಗಿ ಪ್ರಜಾಪತಿಯಾಗುವನು.

೪-೧೩. ಪ್ರಜಾಪತಿಯು ತನಗಾಗಿ ವಾಙ್ಮನಃಪ್ರಾಣಗಳೆಂಬ ಮೂರು ಅನ್ನಗಳನ್ನು ಮಾಡಿಕೊಂಡಿರುತ್ತಾನೆ. ಇವುಗಳೊಳಗೆ ಒಂದಾದ ಮನಸ್ಸಿನ ನೆರವಿನಿಂದ ಇಂದ್ರಿಯಗಳ ವ್ಯಾಪಾರವು ನಡೆಯುತ್ತಿದೆ; ಕಾಮಸಂಕಲ್ಪಾದಿಗಳೆಲ್ಲ ಆ ಮನಸ್ಸಿನ ವೃತ್ತಿಗಳೇ. ಇನ್ನು ವಾಕ್ಕೆಂದರೆ ಶಬ್ದಸಾಮಾನ್ಯವು; ಅದು ಎಲ್ಲವನ್ನೂ ವಿಷಯೀಕರಿಸುತ್ತದೆ, ಅದನ್ನು ಯಾವದೂ ವಿಷಯೀಕರಿಸುವದಿಲ್ಲ. ಪ್ರಾಣಾಪಾನಾದಿವ್ಯಾಪಾರಪಂಚಕವುಳ್ಳದ್ದೇ ಮೂರನೆಯದಾದ ಪ್ರಾಣವು. ಶರೀರವು ಈ ವಾಙ್ಮನಃಪ್ರಾಣಗಳಿಂದಾಗಿರುತ್ತದೆ. ಇದೇ ಅವಿವೇಕಿಗಳಿಗೆ ಆತ್ಮನು. ಭೂರ್ಭುವಃಸುವರ್ಲೋಕಗಳೂ ಋಗ್ಯಜುಸ್ಸಾಮವೇದಗಳೂ ದೇವಪಿತೃಮನುಷ್ಯರೂ ಮಾತಾಪಿತೃಪ್ರಜೆಗಳೂ ವಿಜ್ಞಾತಾವಿಜ್ಞಾತವಿಜಿಜ್ಞಾಸ್ಯಗಳೂ ವಾಙ್ಮನಃಪ್ರಾಣಗಳ ವಿಭೂತಿಗಳೇ. ಇವುಗಳ ಆಧಿದೈವಿಕವಿಭೂತಿಗಳು ಯಾವವೆಂದರೆ ವಾಕ್ಕಿಗೆ ಪೃಥ್ವಿಯು ಶರೀರವು, ಅಗ್ನಿಯು ಕರಣವು; ಅಧ್ಯಾತ್ಮಾಧಿಭೂತವಾಗಿರುವ ವಾಕ್ಕೆಲ್ಲ ಈ ದೈವೀವಾಕ್ಕಿನಿಂದ ವ್ಯಾಪ್ತವಾಗಿರುತ್ತದೆ. ಇದರಂತೆ ಮನಸ್ಸಿಗೆ ದ್ಯುಲೋಕವು ಶರೀರವು, ಆದಿತ್ಯನು ಕರಣವು; ಅಧ್ಯಾತ್ಮಾಧಿಭೂತವಾಗಿರುವ ಮನಸ್ಸೆಲ್ಲ ಈ ದೈವಮನಸ್ಸಿನಿಂದ ವ್ಯಾಪ್ತವಾಗಿರುತ್ತದೆ. ಇದರಂತೆ ಪ್ರಾಣಕ್ಕೆ ಅಪ್ಪು ಶರೀರವು, ಚಂದ್ರನು ಕರಣವು; ಅಧ್ಯಾತ್ಮಾಧಿಭೂತವಾಗಿರುವ ಪ್ರಾಣವೆಲ್ಲ ಈ ದೈವಪ್ರಾಣದಿಂದ ವ್ಯಾಪ್ತವಾಗಿರುತ್ತದೆ.

೧೪-೧೫. ವಾಙ್ಮನಃಪ್ರಾಣಗಳೆಂಬ ಈ ಮೂರು ಅನ್ನಗಳೂ ಪಾಙ್ಕ್ತಕರ್ಮದ ಫಲವೇ; ಏಕೆಂದರೆ ಅವು ಪಾಙ್ಕ್ತಾತ್ಮಕವಾಗಿಯೇ ಇರುತ್ತವೆ. ಹೇಗೆಂದರೆ ತ್ರ್ಯನ್ನಾತ್ಮನಾದ ಪ್ರಜಾಪತಿಯು ಸಂವತ್ಸರರೂಪದಿಂದ ಹದಿನಾರು ಕಲೆಗಳುಳ್ಳವನಾಗಿರುತ್ತಾನೆ; ತಿಥಿಗಳೇ ಅವನಿಗೆ ಹದಿನೈದು ಕಲೆಗಳು; ಅವನ ಧ್ರುವವಾದ ಒಂದು ಕಲೆಯು ಅಮಾವಾಸ್ಯೆಯಲ್ಲಿ ಹಾಗೆಯೇ ಇದ್ದು ಉಳಿದ ಹದಿನೈದು ಕಲೆಗಳಿಂದ ವೃದ್ಧಿಕ್ಷಯವನ್ನು ಹೊಂದುತ್ತಿರುವದರಿಂದ ಆ ಕಲೆಗಳೇ ವಿತ್ತವಾಗಿರುತ್ತವೆ. ಅಂತೂ ದ್ಯುಲೋಕ, ಆದಿತ್ಯ- ಎಂಬ ಮನಸ್ಸು ಗಂಡನಾದ ತಂದೆ; ಪೃಥಿವ್ಯಗ್ನಿಗಳೆಂಬ ವಾಕ್ಕು ಹೆಂಡತಿಯಾದ ತಾಯಿ; ಪ್ರಾಣವು ಅವುಗಳೆರಡರ ಪ್ರಜೆ; ತಿಥಿಗಳೆಂಬ ಕಲೆಗಳು ವಿತ್ತ. ಕಲೆಗಳಿಂದ ಆಗುವ ಜಗತ್ಪರಿಣಾಮವೇ ಕರ್ಮ- ಹೀಗೆ ಈ ಪ್ರಜಾಪತಿಯು ಪಾಙ್ಕ್ತಾತ್ಮಕನಾಗಿರುತ್ತಾನೆ.

ಹೀಗೆಂದು ಉಪಾಸನೆಮಾಡುವವನೇ ಮುಂದೆ ಪ್ರಜಾಪತಿಯಾಗುವನು. ಆ ಉಪಾಸಕನಿಗೆ ವಿತ್ತವು ಹದಿನೈದು ಕಲೆಗಳು; ಶರೀರವೇ ಹದಿನಾರನೆಯ ಧ್ರುವಕಲೆಯು; ಏಕೆಂದರೆ ಅದು ವಿತ್ತದಿಂದ ವೃದ್ಧಿಕ್ಷಯಗಳನ್ನು ಹೊಂದುತ್ತಿರುವದು. ಈ ಶರೀರವೇ ಗುಂಬವು, ವಿತ್ತವು ಹಾರೆಕೋಲು, ಹಳಿ – ಇವುಗಳಂತಿರುವ ಸುತ್ತುಗಟ್ಟು. ಆದ್ದರಿಂದ ಶರೀರ ವೊಂದು ಬದುಕಿದ್ದರೆ ಎಲ್ಲವನ್ನೂ ಕಳೆದುಕೊಂಡಿದ್ದರೂ ಸುತ್ತುಗಟ್ಟು ಮಾತ್ರ ಹೋದಂ ತಾಯಿತು. ಅಷ್ಟೆ. ಈ ರೀತಿಯಲ್ಲಿ ಪುರುಷನು ದೈವವಿತ್ತರೂಪವಾದ ಉಪಾಸನೆಯಿಂದೊಡ ಗೂಡಿದ ಪಾಙ್ಕ್ತಕರ್ಮದಿಂದ ಪಾಙ್ಕ್ತರೂಪನಾದ ಪ್ರಜಾಪತಿಯ ಸಾಯುಜ್ಯವನ್ನು ಪಡೆದುಕೊಳ್ಳುತ್ತಾನೆ.

೧೬-೨೦. ಪುತ್ರ, ಕರ್ಮ, ಉಪಾಸನೆ– ಈ ಸಾಧನಗಳಿಂದ ಕ್ರಮವಾಗಿ ಮನುಷ್ಯ ಲೋಕ, ಪಿತೃಲೋಕ, ದೇವಲೋಕ– ಇವುಗಳನ್ನು ಗೆದ್ದುಕೊಳ್ಳುತ್ತಾರೆ. ಮನುಷ್ಯ ಲೋಕವು ಪುತ್ರನಿಂದಲೇ ಗೆದ್ದುಕೊಳ್ಳತಕ್ಕದ್ದು. ಈ ಲೋಕಗಳಲ್ಲಿ ದೇವಲೋಕವು ಶ್ರೇಷ್ಠವಾದದ್ದಾದ್ದರಿಂದ ಉಪಾಸನೆಯು ಉತ್ತಮಸಾಧನವು. ಪುತ್ರನಿಂದ ಈ ಲೋಕ ವನ್ನು ಗೆದ್ದುಕೊಳ್ಳುವದು ಹೇಗೆಂದರೆ, ಸಾಧಕನಾದವನು ತನ್ನ ಮಗನಿಗೆ ಮೊದಲೇ ಉಪದೇಶಮಾಡಿಕೊಂಡಿದ್ದು, ತನಗೆ ಸಾಯುವ ಕಾಲವು ಹತ್ತಿರವಾಗಲು ಅವನನ್ನು ಕರೆದು "ನೀನೇ ಬ್ರಹ್ಮವು, ನೀನೇ ಯಜ್ಞವು, ನೀನೇ ಲೋಕವು" ಎಂದು ನುಡಿಯಬೇಕು. ಆ ಪುತ್ರನು ಇದರರ್ಥವನ್ನು ಅರಿತುಕೊಂಡು "ನಾನೇ ಬ್ರಹ್ಮವು, ನಾನೇ ಯಜ್ಞವು, ನಾನೇ ಲೋಕವು" ಎಂದು ಉತ್ತರವನ್ನು ಕೊಡುತ್ತಾನೆ. ತಂದೆಯು ಇದುವರೆಗೆ ಅಧ್ಯಯನ ಮಾಡಿರುವದು, ಮಾಡದೆ ಇರುವದು– ಎಲ್ಲವೂ 'ಬ್ರಹ್ಮ'ವೆನಿಸುವದು. ಇದನ್ನು ಮುಂದೆ ಮಗನು ಮಾಡತಕ್ಕದ್ದು. ಇದರಂತೆ ತಂದೆಯು ಈವರೆಗೆ ಮಾಡಿರುವ ಅಥವಾ ಮಾಡದೆ ಉಳಿದಿರುವ ಕರ್ಮವೆಲ್ಲವೂ 'ಯಜ್ಞವು'. ಅದನ್ನು ಇನ್ನುಮುಂದೆ ಮಗನು ಅನುಷ್ಠಾನ ಮಾಡತಕ್ಕದ್ದು. ಹೀಗೆಯೇ ತಂದೆಯು ಈವರೆಗೆ ಸಾಧನಗಳಿಂದ ಗೆದ್ದುಕೊಂಡಿರುವ, ಅಥವಾ ಗೆದ್ದುಕೊಳ್ಳದೆ ಉಳಿದಿರುವ ಲೋಕಗಳೆಲ್ಲವೂ 'ಲೋಕವು'. ಇನ್ನುಮುಂದೆ ಮಗನು ಅವುಗಳನ್ನು ಗೆದ್ದುಕೊಳ್ಳತಕ್ಕದ್ದು. ಹೀಗೆಂದು ತಂದೆಯು ತನ್ನಮೇಲಿದ್ದ ಸಾಧನಗಳ ಹೊರೆಯನ್ನು ಮಗನಿಗೆ ಒಪ್ಪಿಸುವ ಕರ್ಮಕ್ಕೆ 'ಸಂಪ್ರತ್ತಿ' ಎಂದು ಹೆಸರು. ಹೀಗೆ ಮಾಡಿದವನು ಇನ್ನುಮೇಲೆ ಪುತ್ರರೂಪ, ತನ್ನ ರೂಪ– ಎಂದು ಎರಡು ರೂಪಗಳಿಂದ ಕೂಡಿರುತ್ತಾನೆ. ಪುತ್ರರೂಪದಿಂದ ಈ ಲೋಕದಲ್ಲಿಯೇ ಇದ್ದುಕೊಂಡಿರುತ್ತಾನೆ. ತನ್ನ ಸ್ವರೂಪದಲ್ಲಿರುವ ಅವನನ್ನು ಅಧಿದೈವಿಕವಾದ ಅಪರಿಚ್ಛಿನ್ನವಾದ ವಾಙ್ಮನಃಪ್ರಾಣಗಳು ತುಂಬಿಕೊಳ್ಳುತ್ತವೆ; ಪೃಥಿವ್ಯಗ್ನಿಗಳಿಂದ ಹೊರಟ ದೈವವಾಕ್ಕು– ಏನು ಆಡಿದರೆ ಅದರಂತೆ ನಡೆಯುವ ವಾಕ್ಕು– ಅವನನ್ನು ತುಂಬಿಕೊಳ್ಳುತ್ತದೆ; ದ್ಯುಲೋಕಾದಿತ್ಯರಿಂದ ಹೊರಟ ದೈವಮನಸ್ಸು– ಯಾವ ಶೋಕವೂ ಇಲ್ಲದೆ ಆನಂದಿಯೇ ಆಗಿರುವ ಮನಸ್ಸು– ಅವನನ್ನು ತುಂಬಿಕೊಳ್ಳುತ್ತದೆ; ಅಪ್ಪುಚಂದ್ರರಿಂದ ಹೊರಟ ದೈವಪ್ರಾಣವು– ಸಂಚಾರಾಸಂಚಾರ ಗಳಿಂದ ವ್ಯಥೆಗೊಳ್ಳದೆ ಗಾಸಿಯಾಗದೆ ಇರುವ ಪ್ರಾಣವು– ಅವನನ್ನು ತುಂಬಿಕೊಳ್ಳುತ್ತದೆ. ಆಗ ಈ ಉಪಾಸಕನು ವಾಙ್ಮನಃಪ್ರಾಣಾತ್ಮನಾದ ಪ್ರಜಾಪತಿಯ ಸಾಯುಜ್ಯವನ್ನು ಪಡೆದು ಎಲ್ಲಾ ಪ್ರಾಣಿಗಳ ಆತ್ಮನಾಗಿಬಿಡುವನು, ಈ ರೂಪದಿಂದ ತನ್ನ ಪುತ್ರನನ್ನೂ ತುಂಬಿಕೊಂ ಡಿರುವನು. ಎಲ್ಲಾ ಪ್ರಾಣಿಗಳೂ, ಪ್ರಜಾಪತಿಯನ್ನು ಹೇಗೋ ಹಾಗೆ, ಅವನನ್ನು ಗೌರವಿಸುವವು.

೨೧-೨೩. ಆಧಿದೈವಿಕವಾಙ್ಮನಃಪ್ರಾಣಗಳೆಲ್ಲವೂ ಸರ್ವತ್ರವ್ಯಾಪಕವಾಗಿ ಸಮಾನವಾಗಿಯೇ ಅನಂತವಾಗಿರುವವಾದರೂ ಪ್ರಾಣದಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ಅಧ್ಯಾತ್ಮವಾಗಿ ವಾಕ್ಕು, ಚಕ್ಷುಸ್ಸು, ಶ್ರೋತ್ರ- ಮುಂತಾದ ಇಂದ್ರಿಯಗಳು ಸತತವಾಗಿ ತಮ್ಮತಮ್ಮ ವದನ, ದರ್ಶನ, ಶ್ರವಣ- ಮುಂತಾದ ವ್ಯಾಪಾರಗಳನ್ನು ಮಾಡುತ್ತಲೇ ಇರುವದಕ್ಕಾಗುವದಿಲ್ಲ. ಅವುಗಳನ್ನು ಶ್ರಮರೂಪಿಯಾದ ಮೃತ್ಯು ಹಿಡಿದುಕೊಂಡುಬಿಟ್ಟಿರುತ್ತದೆ. ಮುಖ್ಯಪ್ರಾಣವೊಂದೇ ವ್ಯಥೆಗೊಳ್ಳದೆ ಗಾಸಿಗೊಳ್ಳದೆ ಇರುತ್ತದೆ; ಆದ್ದರಿಂದ ಮಿಕ್ಕ ಕರಣಗಳೆಲ್ಲ ಪ್ರಾಣರೂಪದಿಂದಲೇ ಅಮೃತವಾಗಿರುತ್ತವೆ. ಇದರಂತೆ ಅಧಿದೈವತವಾಗಿ ಅಗ್ನಿ, ಆದಿತ್ಯ, ಚಂದ್ರ- ಮುಂತಾದ ದೇವತೆಗಳು ಜ್ವಲನ, ತಪನ, ಭಾನ- ಮುಂತಾದ ತಮ್ಮತಮ್ಮ ವ್ಯಾಪಾರಗಳನ್ನು ಸತತವಾಗಿ ಮಾಡುತ್ತಿರಲಾರರು, ಅವರು ಅಸ್ತವಾಗುವದೂ ಉಂಟು. ಆದರೆ ವಾಯುದೇವತೆಯು ಮಾತ್ರ ಅಸ್ತವಾಗುವದಿಲ್ಲ. ಆದ್ದರಿಂದ ಅಧ್ಯಾತ್ಮರೂಪವಾದ ಪ್ರಾಣನೂ ಅಧಿದೈವತರೂಪವಾದ ವಾಯುವೂ ಆಗಿರುವ ದೇವತೆಯೇ ತಾನೆಂದು ಉಪಾಸನೆಮಾಡಬೇಕು. ಈ ವ್ರತವನ್ನು ಸಾಯುವವರೆಗೂ ಹಿಡಿದಿರುವಾತನು ಉಪಾಸನೆಯ ಬಲಾಬಲತಾರತಮ್ಯಕ್ಕನುಗುಣವಾಗಿ ಆ ದೇವತೆಯ ಸಾಯುಜ್ಯವನ್ನೋ ಸಾಲೋಕ್ಯವನ್ನೋ ಪಡೆದುಕೊಳ್ಳುತ್ತಾನೆ.

## ಆರನೆಯ ಬ್ರಾಹ್ಮಣ

೧. ಸಾಧ್ಯಸಾಧನರೂಪವಾದ ವ್ಯಾಕೃತಾವ್ಯಾಕೃತಜಗತ್ತೆಲ್ಲವೂ ನಾಮ, ರೂಪ, ಕರ್ಮ- ಎಂಬೀ ಮೂರರಲ್ಲಿ ಅಡಕವಾಗಿರುತ್ತದೆ. ಇವುಗಳೊಳಗೆ ನಾಮಗಳೆಲ್ಲ ವಾಕ್ಕು ಎಂಬ ಶಬ್ದಸಾಮಾನ್ಯದಲ್ಲಿ ಅಡಕವಾಗಿರುತ್ತವೆ. ನಾಮಗಳು ವಾಕ್ಕಿನ ಕಾರ್ಯಗಳು, ವಿಶೇಷಗಳು; ವಾಕ್ಕೆಂಬುದೇ ಅವುಗಳ ಆತ್ಮವು. ಆದ್ದರಿಂದ ಅವೆಲ್ಲ ವಾಕ್ಕೇ.

೨-೩. ಇದರಂತೆ ರೂಪಗಳೆಲ್ಲವೂ ಚಕ್ಷುವೆಂಬ ರೂಪಸಾಮಾನ್ಯದ ಕಾರ್ಯಗಳು, ವಿಶೇಷಗಳು; ಅವೇ ಇವುಗಳ ಆತ್ಮವು. ಆದ್ದರಿಂದ ಅವೆಲ್ಲ ಚಕ್ಷುಸ್ಸೇ. ಹೀಗೆಯೇ ಮನನ, ದರ್ಶನ, ಚಲನ- ಎಂಬ ಕರ್ಮಗಳೆಲ್ಲವೂ ಶರೀರವೆಂಬ ಕರ್ಮಸಾಮಾನ್ಯದ ಕಾರ್ಯಗಳು. ಅದರಲ್ಲಿ ಅಭಿವ್ಯಕ್ತವಾಗುವ ವಿಶೇಷಗಳು; ಅವೇ ಅವುಗಳ ಆತ್ಮವು. ಆದ್ದರಿಂದ ಕರ್ಮಗಳೆಲ್ಲ ಈ ಶರೀರವೇ.

೩. ನಾಮ, ರೂಪ, ಕರ್ಮ- ಎಂಬೀ ಮೂರೂ "ಶರೀರ"ವೆಂಬ ರೂಪದಿಂದ ಒಂದು; ಶರೀರವು ಒಂದೇ ಆದರೂ ನಾಮರೂಪಕರ್ಮಗಳೆಂಬ ಮೂರು ರೂಪದಿಂದಲೂ ತೋರಿಕೊಳ್ಳುತ್ತಿರುವದು.

೪. ಇದುವರೆಗೆ ಹೇಳಿದ್ದೆಲ್ಲ "ಸತ್ಯ"ವೆಂಬ ನಾಮರೂಪಕಾರ್ಯಾತ್ಮಕಶರೀರ; ಅಮೃತವೆಂಬ ಕರಣಾತ್ಮಕಪ್ರಾಣ- ಇವೆರಡರಲ್ಲಿ ಅಡಕವಾಗಿರುತ್ತದೆ. ಸತ್ಯವೆಂಬ ಶರೀರರೂಪವಾದ ನಾಮರೂಪಗಳು ಮರ್ತ್ಯವಾಗಿರುತ್ತವೆ, ಅವುಗಳಿಂದ ಮರೆಯಾಗಿರುವ, ಶರೀರವನ್ನು ಹಿಡಿದೆತ್ತಿಕೊಂಡಿರುವ ಕರಣಾತ್ಮಕಪ್ರಾಣವು ಅಮೃತವಾಗಿರುತ್ತದೆ. ಇದಿಷ್ಟೂ ಅವಿದ್ಯಾವಿಷಯವು; ಇನ್ನುಮುಂದೆ ವಿದ್ಯಾವಿಷಯವನ್ನು ತಿಳಿಸಲಾಗುವದು.

---

# ಎರಡನೆಯ ಅಧ್ಯಾಯ - ಒಂದನೆಯ ಬ್ರಾಹ್ಮಣ

## ( ಸವಿಶೇಷನಿರ್ವಿಶೇಷಬ್ರಹ್ಮಗಳು )

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೨೬೦. "ಆತ್ಮೇತ್ಯೇವೋಪಾಸೀತ" (೧-೪-೭), ತದನ್ವೇಷಣೇ ಚ ಸರ್ವಮ್ ಅನ್ವಿಷ್ಟಂ ಸ್ಯಾತ್ ? ತದೇವ ಚ ಆತ್ಮತತ್ತ್ವಂ ಸರ್ವಸ್ಮಾತ್ ಪ್ರೇಯಸ್ತ್ವಾತ್ ಅನ್ವೇಷ್ಟವ್ಯಮ್। "ಆತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ" (ಇತ್ಯಾ)[1]ತ್ಮತತ್ತ್ವಮೇಕಂ ವಿದ್ಯಾವಿಷಯಃ। ಯಸ್ತು ಭೇದದೃಷ್ಟಿವಿಷಯಃ ಸಃ "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (೧-೪-೧೦) ಇತ್ಯವಿದ್ಯಾವಿಷಯಃ। "ಏಕಧೈವಾನುದ್ರಷ್ಟವ್ಯಮ್" (೪-೪-೨೦), "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (೪-೪-೧೯) ಇತ್ಯೇವಮಾದಿಭಿಃ ಪ್ರವಿಭಕ್ತೌ ವಿದ್ಯಾವಿದ್ಯಾವಿಷಯೌ ಸರ್ವೋಪನಿಷತ್ಸು (ಚ)[2]। ತತ್ರ ಚ ಅವಿದ್ಯಾವಿಷಯಃ ಸರ್ವ ಏವ ಸಾಧ್ಯಸಾಧನಾದಿಭೇದವಿಶೇಷವಿನಿಯೋಗೇನ ವ್ಯಾಖ್ಯಾತಃ ಆತೃತೀಯಾಧ್ಯಾಯಪರಿಸಮಾಪ್ತೇಃ। ಸ ಚ ವ್ಯಾಖ್ಯಾತೋಽವಿದ್ಯಾವಿಷಯಃ ಸರ್ವ ಏವ ದ್ವಿಪ್ರಕಾರಃ। ಅನ್ತಃ ಪ್ರಾಣ ಉಪಷ್ಟಮ್ಭಕೋ ಗೃಹಸ್ಯೇವ ಸ್ತಮ್ಭಾದಿಲಕ್ಷಣಃ ಪ್ರಕಾಶಕೋಽಮೃತಃ। ಬಾಹ್ಯಶ್ಚ ಕಾರ್ಯಲಕ್ಷಣಃ ಅಪ್ರಕಾಶಕಃ, ಉಪಜನಾಪಾಯಧರ್ಮಕಃ, ತೃಣಕುಶಮೃತ್ತಿಕಾಸಮಃ, ಗೃಹಸ್ಯೇವ ಸತ್ತ್ಯಶಬ್ದವಾಚ್ಯೋ ಮರ್ತ್ಯಃ। ತೇನ ಅಮೃತಶಬ್ದವಾಚ್ಯಃ ಪ್ರಾಣಶ್ಛನ್ನಃ ಇತಿ ಚೋಪಸಂಹೃತಮ್। ಸ ಏವ ಚ ಪ್ರಾಣೋ ಬಾಹ್ಯಾಧಾರಭೇದೇಷು ಅನೇಕಧಾ ವಿಸ್ತೃತಃ। ಪ್ರಾಣ ಏಕೋ ದೇವ ಇತ್ಯುಚ್ಯತೇ। ತಸ್ಯೈವ ಬಾಹ್ಯಃ ಪಿಣ್ಡಃ ಏಕಃ ಸಾಧಾರಣಃ ವಿರಾಟ್, ವೈಶ್ವಾನರ ಆತ್ಮಾ, ಪುರುಷವಿಧಃ, ಪ್ರಜಾಪತಿಃ, ಕಃ, ಹಿರಣ್ಯಗರ್ಭಃ, ಇತ್ಯಾದಿಭಿಃ ಪಿಣ್ಡಪ್ರಧಾನೈಃ ಶಬ್ದೈರಾಖ್ಯಾಯತೇ ಸೂರ್ಯಾದಿಪ್ರವಿಭಕ್ತಕರಣಃ। ಏಕಂ ಚಾನೇಕಂ ಚ ಬ್ರಹ್ಮ ಏತಾವದೇವ ನಾತಃಪರಮಸ್ತಿ ಪ್ರತ್ಯೇಕಂ ಚ ಶರೀರಭೇದೇಷು ಪರಿಸಮಾಪ್ತಂ ಚೇತನಾವತ್ ಕರ್ತೃಭೋಕ್ತೃ ಚ ಇತ್ಯವಿದ್ಯಾವಿಷಯಮೇವ ಆತ್ಮತ್ವೇನ ಉಪಗತೋ ಗಾರ್ಗ್ಯೋ ಬ್ರಾಹ್ಮಣೋ ವಕ್ತಾ ಉಪಸ್ಥಾಪ್ಯತೇ। ತದ್ವಿಪರೀತಾತ್ಮದೃಕ್ ಅಜಾತಶತ್ರುಃ ಶ್ರೋತಾ ॥

---

1. ಇಲ್ಲೊಂದು ಇತಿ ಹೆಚ್ಚಾಗಿ ಬೇಕಾಗುತ್ತದೆ. ಇಂಥ ಸ್ಥಲದಲ್ಲಿ ಒಂದು ಇತಿಯನ್ನು ಬಿಡುವದು ಭಾಷ್ಯಕಾರರ ಶೈಲಿ ಎನ್ನಬಹುದು.

2. ಇಲ್ಲೊಂದು 'ಚ' ಇದ್ದರೆ ಚೆನ್ನಾಗಿರುತ್ತದೆ.

(ಭಾಷ್ಯಾರ್ಥ)

"ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೭), ಆದನ್ನು ಹುಡುಕಿ (ಕಂಡುಕೊಂಡರೆ) ಎಲ್ಲವನ್ನೂ ಹುಡುಕಿ (ತಿಳಿದುಕೊಂಡಂತೆ) ಆಗುವದು (೧-೪-೭), ಮತ್ತು ಆ ಆತ್ಮತತ್ತ್ವವೇ ಎಲ್ಲಕ್ಕಿಂತಲೂ ಪ್ರಿಯವಾಗಿರುವದರಿಂದ (ಅದನ್ನೇ) ಹುಡುಕಿ ಕಂಡುಕೊಳ್ಳಬೇಕು (೧-೪-೮), (ಬ್ರಹ್ಮವು) ತನ್ನನ್ನೇ ನಾನು ಬ್ರಹ್ಮವಾಗಿರುವೆನು ಎಂದು ತಿಳಿದುಕೊಂಡಿತು (೧-೪-೧೦) -ಎಂಬೀ ಒಂದೇ ಆತ್ಮತತ್ತ್ವವು ವಿದ್ಯಾವಿಷಯವು. ಆದರೆ ಭೇದದೃಷ್ಟಿಗೆ ವಿಷಯವಾಗಿದೆಯಲ್ಲ, ಅದು "ಈ (ದೇವತೆ) ಬೇರೆ, ನಾನು ಬೇರೆಯಾಗಿರುವೆನು (ಎಂದು ಉಪಾಸನೆಮಾಡುವನಲ್ಲ), ಅವನು ಅರಿಯನು" (೧-೪-೧೦) ಎಂಬ (ಶ್ರುತಿಯಂತೆ) ಅವಿದ್ಯಾವಿಷಯವು. "ಒಂದು ಪ್ರಕಾರವಾಗಿಯೇ ಅದನ್ನು ಕಾಣಬೇಕು" (೪-೪-೨೦), "ಇಲ್ಲಿ ನಾನಾ ಇರುವಂತೆ ಯಾವನು ಕಾಣುತ್ತಾನೋ ಅವನು ಸಾವಿನಮೇಲೆ ಸಾವನ್ನು ಪಡೆಯುತ್ತಿರುವನು" (೪-೪-೧೯)- ಇವೇ ಮುಂತಾದ (ವಚನ)ಗಳಿಂದ ವಿದ್ಯಾವಿದ್ಯಾವಿಷಯಗಳು ಎಲ್ಲಾ ಉಪನಿಷತ್ತುಗಳಲ್ಲಿಯೂ[1] ವಿಂಗಡವಾಗಿ (ಉಕ್ತ)ವಾಗಿರುತ್ತವೆ.

ಇವುಗಳಲ್ಲಿ ಅವಿದ್ಯೆಯ ವಿಷಯವೆಲ್ಲವನ್ನೂ ಬೇರೆಬೇರೆಯ ಸಾಧ್ಯಸಾಧನಾದಿ[2] ಭೇದವಿಶೇಷಗಳಲ್ಲಿ ವಿನಿಯೋಗಿಸಿ ಮೂರನೆಯ ಅಧ್ಯಾಯವು ಮುಗಿಯುವವರೆಗೂ ವಿವರಿಸಿದ್ದಾಗಿದೆ. (ಹಾಗೆ) ವಿವರಿಸಿದ ಆ ಅವಿದ್ಯಾವಿಷಯವೆಲ್ಲ ಎರಡು ಪ್ರಕಾರವಾಗಿರುತ್ತದೆ: ಮನೆಯ ಕಂಬವೇ ಮುಂತಾದವುಗಳಂತೆ (ಶರೀರವನ್ನು) ಎತ್ತಿಹಿಡಿದುಕೊಂಡಿರುವ (ಅದನ್ನು) ಬೆಳಗುವ ಅಮೃತವಾಗಿರುವ ಒಳಗಿನ ಪ್ರಾಣ(ವೊಂದು); ಮನೆಗೆ ಕಡ್ಡಿ, ಹುಲ್ಲು, ಮಣ್ಣು-ಮುಂತಾದವುಗಳಂತಿರುವ ಪ್ರಕಾಶಕವಲ್ಲದ ಹುಟ್ಟುಹೊಂದುಗಳೆಂಬ ಧರ್ಮಗಳುಳ್ಳ, ಸತ್ತ್ಯಶಬ್ದವಾಚ್ಯವಾದ ಮರ್ತ್ಯವಾದ ಹೊರಗಿನ ಕಾರ್ಯರೂಪವಾಗಿರುವ[3] (ದೊಂದು). ಆ (ಸತ್ತ್ಯಶಬ್ದವಾಚ್ಯವಾದ ಕಾರ್ಯ)ದಿಂದ ಅಮೃತಶಬ್ದವಾಚ್ಯವಾದ ಪ್ರಾಣವು ಮರೆಯಾಗಿರುತ್ತದೆ (೧-೬-೩) ಎಂದು ಉಪಸಂಹಾರಮಾಡಿದ್ದಾಯಿತು.

---

1. ಈ ಉಪನಿಷತ್ತಿನಲ್ಲಿರುವ ವಚನಗಳನ್ನು ಮಾತ್ರ ಇಲ್ಲಿ ಉದಾಹರಿಸಿದ್ದರೂ ಮಿಕ್ಕ ಉಪನಿಷತ್ತುಗಳಲ್ಲಿಯೂ ಹೀಗೆಯೇ ವಿದ್ಯಾವಿದ್ಯಾವಿಷಯಗಳನ್ನು ವಿಂಗಡಿಸಿ ತಿಳಿಸಿದೆಎಂದು ಅಭಿಪ್ರಾಯ.

2. ಇಲ್ಲಿ ಆದಿ ಎಂಬ ಮಾತು ಹೆಚ್ಚೆಂದು ಕಾಣುತ್ತದೆ. ಪುತ್ರಾದಿಸಾಧನಗಳು, ಮನುಷ್ಯಲೋಕಾದಿಸಾಧ್ಯಗಳು- ಎಂದು ವಿನಿಯೋಗಿಸಿ ತಿಳಿಸಿದ್ದಾಗಿದೆ ಎಂದರ್ಥ.

3. ಶರೀರರೂಪವಾದ ಹೊರಗಿನ ಸ್ಥೂಲಶರೀರವೂ ಒಳಗಿನ ಸೂಕ್ಷ್ಮಶರೀರವೂ ವಿದ್ಯಾವಿಷಯವಾದ ಆತ್ಮಗಳೇ ಎಂದು ಭಾವ.

ಅದೇ ಪ್ರಾಣವೇ ಹೊರಗಿನ ಬೇರೆಬೇರೆಯ ಆಧಾರಗಳಲ್ಲಿ ಅನೇಕ ಪ್ರಕಾರವಾಗಿ ಹರಡಿಕೊಂಡಿರುತ್ತದೆ. (ಈ) ಪ್ರಾಣನು ಒಂದೇ ದೇವತೆ ಎನಿಸುವನು (೩-೯-೧ರ ಅರ್ಥ). ಅದೇ (ಪ್ರಾಣನ) ಹೊರಗಿನ ಶರೀರವು ತಾನೊಂದೇ ಎಲ್ಲರಿಗೂ ಸಮಾನವಾಗಿರುತ್ತದೆ. ಅದನ್ನೇ ವಿರಾಟ್, ವೈಶ್ವಾನರನು, ಪುರುಷವಿಧನಾದ ಆತ್ಮನು, ಪ್ರಜಾಪತಿ, ಕ, ಹಿರಣ್ಯಗರ್ಭ– ಮುಂತಾದ ಶರೀರಪ್ರಧಾನವಾದ ಶಬ್ದಗಳಿಂದ (ಶ್ರುತಿಯಲ್ಲಿ) ಕರೆದಿರುತ್ತದೆ; ಸೂರ್ಯನೇ ಮುಂತಾದವರಲ್ಲಿ ಬೇರೆಬೇರೆಯಾಗಿರುವ ಕರಣಗಳಿಂದೊಡಗೂಡಿರುತ್ತದೆ; ಒಂದೂ ಅನೇಕವೂ ಆಗಿರುತ್ತದೆ. ಬ್ರಹ್ಮವೆಂದರೆ ಇಷ್ಟೇ, ಇದಕ್ಕಿಂತ ಹೆಚ್ಚಿನ (ಬ್ರಹ್ಮ) ವಿಲ್ಲ. (ಇದು) ಬೇರೆಬೇರೆಯ ಶರೀರಗಳಲ್ಲಿ ಒಂದೊಂದರಲ್ಲಿಯೂ ವ್ಯಾಪಿಸಿಕೊಂಡಿರುವದು, ಚೇತನವಾಗಿರುವದು, ಕರ್ತೃವೂ ಭೋಕ್ತೃವೂ ಆಗಿರುವದು– ಎಂಬ (ಈ) ಅವಿದ್ಯಾವಿಷಯ(ನಾದ ಪ್ರಾಣನನ್ನೇ) ಆತ್ಮನೆಂದು ಒಪ್ಪಿರುವ ಗಾರ್ಗ್ಯನೆಂಬ ಬ್ರಾಹ್ಮಣನು ಹೇಳುವವನೆಂದೂ, ಅದಕ್ಕೆ ವಿಪರೀತವಾಗಿರುವ ಆತ್ಮನನ್ನು ಕಂಡಿರುವ[1] ಅಜಾತಶತ್ರುವು ಕೇಳುವವನೆಂದೂ (ಇಲ್ಲಿ) ಕಲ್ಪಿಸಿರುತ್ತದೆ[2].

## ಆಖ್ಯಾಯಿಕೆಯ ಪ್ರಯೋಜನ

(ಭಾಷ್ಯ)

೨೬೧. ಏವಂ ಹಿ ಯತಃ ಪೂರ್ವಪಕ್ಷಸಿದ್ಧಾನ್ತಾಖ್ಯಾಯಿಕಾರೂಪೇಣ ಸಮರ್ಪ್ಯಮಾಣೋಽರ್ಥಃ ಶ್ರೋತುಶ್ಚಿತ್ತಸ್ಯ ವಶವೇತಿ । ವಿಪರ್ಯಯೇ ಹಿ ತರ್ಕಶಾಸ್ತ್ರವತ್ ಕೇವಲಾರ್ಥಾನುಗಮವಾಕ್ಯೈಃ ಸಮರ್ಪ್ಯಮಾಣೋ ದುರ್ವಿಜ್ಞೇಯಃ ಸ್ಯಾತ್ ಅತ್ಯನ್ತಸೂಕ್ಷ್ಮತ್ವಾತ್ ವಸ್ತುನಃ । ತಥಾ ಚ ಕಾಠಕೇ "ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ" (ಕಾ. ೧-೨-೭) ಇತ್ಯಾದಿವಾಕ್ಯೈಃ ಸುಸಂಸ್ಕೃತದೇವಬುದ್ಧಿಗಮ್ಯತ್ವಂ ಸಾಮಾನ್ಯ[3]ಬುದ್ಧ್ಯಗಮ್ಯತ್ವಂ ಚ ಸ

1. ಕಾರ್ಯಕರಣಸಂಘಾತಕ್ಕಿಂತ ವಿಲಕ್ಷಣನಾದ ಅಪರಿಚ್ಛಿನ್ನನಾದ ಯಾವದೊಂದು ಉಪಾಧಿಯ ಧರ್ಮವೂ ಸೋಂಕದ ನಿರ್ವಿಶೇಷನಾದ ಅದ್ವಿತೀಯನಾದ ಆತ್ಮನನ್ನು ಅರಿತುಕೊಂಡಿರುವ ಎಂದರ್ಥ. ಗಾರ್ಗ್ಯನು ಬ್ರಹ್ಮವನ್ನು ಪೂರ್ಣವಾಗಿ ತಿಳಿದುಕೊಳ್ಳದೆ ಇದ್ದರೂ ತಿಳಿದವನಂತೆ ಬಂದು 'ಬ್ರಹ್ಮವನ್ನು ಹೇಳಿಕೊಡುತ್ತೇನೆ' ಎಂದಿರುತ್ತಾನೆ; ಅಜಾತಶತ್ರುವು ಅವನು ತಿಳಿದಿರುವವುಟ್ಟಿಗೆ ಸರಿ ಎಂದು ಒಪ್ಪಿ ಅದಕ್ಕಿಂತ ಹೆಚ್ಚಿನ ನಿರ್ವಿಶೇಷಬ್ರಹ್ಮವನ್ನು ಅವನಿಗೆ ತಿಳಿಸಿಕೊಟ್ಟಿರುತ್ತಾನೆ.

2. ಶ್ರುತಿಯು ಶಿಷ್ಯಾಚಾರ್ಯರನ್ನು ಕಲ್ಪಿಸಿ ಈ ಅಭಿಪ್ರಾಯವನ್ನು ತಿಳಿಸಿಕೊಟ್ಟಿದೆ ಎಂದು ಭಾವ. ಪ್ರಾಣದೇವತೆಯೇ ಕರ್ತೃಭೋಕ್ತೃ ಎಂಬ ತಿಳಿವಳಿಕೆಯನ್ನು ತಪ್ಪಿಸಿ ಅದಕ್ಕಿಂತ ಬೇರೆಯಾಗಿರುವ ಜೀವನೇ ಕರ್ತೃಭೋಕ್ತೃ ಎಂದು ತಿಳಿಸುವದು ಬ್ರಾಹ್ಮಣದ ಉದ್ದೇಶ ಎಂದು ಭರ್ತೃಪ್ರಪಂಚರು ಸಂಬಂಧವನ್ನು ಹೇಳಿದ್ದರು. ಇದನ್ನು ವಾರ್ತಿಕದಲ್ಲಿ (೨೪, ೨೫) ಖಂಡಿಸಿದೆ. 3. 'ಸಾಮಾನ್ಯಮಾತ್ರ' ಎಂಬ ಪಾಠದಲ್ಲಿ 'ಮಾತ್ರ' ಹೆಚ್ಚು.

ಪ್ರಪಞ್ಚಂ ದರ್ಶಿತಮ್ । "ಆಚಾರ್ಯವಾನ್ ಪುರುಷೋ ವೇದ" (ಛಾಂ. ೬-೧೪-೨), "ಆಚಾರ್ಯಾದ್ಧೈವ ವಿದ್ಯಾ" (ಛಾಂ. ೪-೪-೩) ಇತಿ ಚ ಛಾನ್ದೋಗ್ಯೇ । "ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ" (ಗೀ. ೪-೩೬) ಇತಿ ಚ ಗೀತಾಸು । ಇಹಾಪಿ ಚ ಶಾಕಲ್ಯಯಾಜ್ಞವಲ್ಕ್ಯೀಯ ಸಂವಾದೇನ ಅತಿಗಹ್ವರತ್ವಂ ಮಹತಾ ಸಂರಮ್ಭೇಣ ಬ್ರಹ್ಮಣೋ ವಕ್ಷ್ಯತಿ । ತಸ್ಮಾತ್ ಶ್ಲಿಷ್ಟ ಏವ ಆಖ್ಯಾಯಿಕಾರೂಪೇಣ ಪೂರ್ವಪಕ್ಷಸಿದ್ಧಾನ್ತರೂಪಮಾಪಾದ್ಯ ವಸ್ತುಸಮರ್ಪಣಾರ್ಥ ಆರಮ್ಭಃ । ಆಚಾರವಿಧ್ಯುಪದೇಶಾರ್ಥಶ್ಚ । ಏವಮಾಚಾರವತೋರ್ವಕ್ತೃಶ್ರೋತ್ರೋಃ ಆಖ್ಯಾಯಿಕಾನುಗತೋಽರ್ಥೋಽವಗಮ್ಯತೇ । ಕೇವಲತರ್ಕಬುದ್ಧಿನಿಷೇಧಾರ್ಥಾ ಚ ಆಖ್ಯಾಯಿಕಾ । "ನೈಷಾ ತರ್ಕೇಣ ಮತಿರಾಪನೇಯಾ" (ಕ. ೧-೨-೯), "ನ ತರ್ಕಶಾಸ್ತ್ರದಗ್ಧಾಯ" (ಮೋ. ಧ. ೨೪೬-೧೮)[1] ಇತಿ ಶ್ರುತಿಸ್ಮೃತಿಭ್ಯಾಮ್ । ಶ್ರದ್ಧಾ ಚ ಬ್ರಹ್ಮವಿಜ್ಞಾನೇ ಪರಮಂ ಸಾಧನಮ್ ಇತ್ಯಾಖ್ಯಾಯಿಕಾರ್ಥಃ । ತಥಾ ಹಿ ಗಾರ್ಗ್ಯಾಜಾತಶತ್ರ್ವೋಃ ಅತೀವ ಶ್ರದ್ಧಾಲುತಾ ದೃಶ್ಯತೇ ಆಖ್ಯಾಯಿಕಾಯಾಮ್ । "ಶ್ರದ್ಧಾವಾಲ್ಲಭತೇ ಜ್ಞಾನಮ್" (ಗೀ. ೪-೩೦) ಇತಿ ಚ ಸ್ಮೃತಿಃ ॥

(ಭಾಷ್ಯಾರ್ಥ)

ಹೀಗೆಯೇ (ತಿಳಿಸತಕ್ಕದ್ದು ಯುಕ್ತವು). ಏಕೆಂದರೆ ಪೂರ್ವಪಕ್ಷಸಿದ್ಧಾಂತ(ವನ್ನು ತಿಳಿಸುವ) ಕಥೆಯ ರೂಪದಿಂದ ತಿಳಿಸಿದ ವಿಷಯವು ಕೇಳುವವನ ಚಿತ್ತಕ್ಕೆ ವಶವಾಗುತ್ತದೆ. (ಇದಕ್ಕೆ) ವಿಪರೀತವಾಗಿ ತರ್ಕಶಾಸ್ತ್ರದಂತೆ ಬರಿಯ ಅರ್ಥಾನುಗಮವಾಕ್ಯಗಳಿಂದ ತಿಳಿಸಿದರೆ (ಆತ್ಮ)ವಸ್ತು ಅತ್ಯಂತಸೂಕ್ಷ್ಮವಾಗಿರುವದರಿಂದ ತಿಳಿಯುವದು ಕಷ್ಟವಾಗುವದು. ಆದ್ದರಿಂದಲೇ ಕಾಠಕವಲ್ಲಿ[2] "ಬಹುಜನರಿಗೆ ಶ್ರವಣಕ್ಕೂ ಯಾವನು ಸಿಕ್ಕುವದಿಲ್ಲವೋ....." (ಕಾ. ೧-೨-೭) ಮುಂತಾದ ವಾಕ್ಯಗಳಿಂದ ಚೆನ್ನಾಗಿ ಸಂಸ್ಕೃತವಾಗಿರುವ ದೇವಬುದ್ಧಿಯಿಂದ ತಿಳಿಯಬರುವನೆಂತಲೂ ಸಾಮಾನ್ಯಬುದ್ಧಿಗೆ ತಿಳಿಯುವದಿಲ್ಲವೆಂತಲೂ ವಿಸ್ತಾರವಾಗಿ ತಿಳಿಸಿರುತ್ತದೆ. "ಆಚಾರ್ಯನನ್ನುಳ್ಳ ಪುರುಷನೇ ಅರಿತುಕೊಳ್ಳುವನು" (ಛಾಂ. ೬-೧೪-೨) ಎಂದೂ "ಆಚಾರ್ಯನಿಂದ ಅರಿತುಕೊಂಡ ವಿದ್ಯೆಯೇ (ಪುರುಷಾರ್ಥವನ್ನು ಪಡೆಯುವದು)" (ಛಾಂ.೪-೪-೩) ಎಂದೂ ಛಾಂದೋಗ್ಯ

1. ನಾವೇದವಿದುಷೇ ವಾಚ್ಯಂ ತಥಾನನುಗತಾಯ ಚ । ನಾಸೂಯಕಾಯಾನೃಜವೇ ನ ಚಾನಿರ್ದಿಷ್ಟಕಾರಿಣೇ ॥ ನ ತರ್ಕಶಾಸ್ತ್ರದಗ್ಧಾಯ ತಥೈವ ಪಿಶುನಾಯ ಚ ॥ ಎಂದು ಅನಧಿಕಾರಿಗಳನ್ನು ತಿಳಿಸುವ ಪೂರ್ಣವಾಕ್ಯ.

2. 'ಕಠ' ಎಂಬ ಹೆಸರಿನಿಂದ ಈ ಉಪನಿಷತ್ತನ್ನು ಆಚಾರ್ಯರು ಕರೆದಿರುವದು ಕಂಡುಬರುವದೇ ಇಲ್ಲ. ಕಾಠಕಶಾಖೆಯವರ ಆರಣ್ಯಕಕ್ಕೆ ಸೇರಿದ ಭಾಗವಿದೆಂದು ಅವರ ಅಭಿಪ್ರಾಯವೆಂಬುದು ಇದರಿಂದ ವ್ಯಕ್ತವಾಗುತ್ತದೆ.

ದಲ್ಲಿ (ಹೇಳಿದೆ). "ಆ ತತ್ತ್ವದರ್ಶಿಗಳಾದ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶಿಸುವರು" (ಗೀ. ೪-೩೬) ಎಂದು **ಗೀತೆಗಳಲ್ಲಿ** ಹೇಳಿರುತ್ತದೆ. ಇಲ್ಲಿಯೂ **ಶಾಕಲ್ಯಯಾಜ್ಞವಲ್ಕ್ಯಸಂವಾದದಿಂದ** ಬ್ರಹ್ಮವು ಅತಿಗಂಭೀರ (ತತ್ತ್ವ)ವೆಂದು ಹೆಚ್ಚಿನ ಸಂರಂಭದಿಂದ ಮುಂದೆ ಹೇಳಲಾಗುವದು. ಆದ್ದರಿಂದ ಕಥೆಯ ರೂಪದಿಂದ ಪೂರ್ವಪಕ್ಷಸಿದ್ಧಾಂತಗಳ ರೂಪವನ್ನು ಕೊಟ್ಟು ವಸ್ತುವನ್ನು ತಿಳಿಸುವದಕ್ಕೆ (ಬ್ರಾಹ್ಮಣವನ್ನು) ಮೊದಲುಮಾಡಿರುವದು ಯುಕ್ತವೇ ಆಗಿರುತ್ತದೆ[1].

ಆಚಾರವಿಧಾನವನ್ನು ತಿಳಿಸಿಕೊಡುವದಕ್ಕೂ (ಹೀಗೆ ಮಾಡಿದೆ). ಇಂಥ ಆಚಾರವುಳ್ಳ ವಕ್ತೃಶ್ರೋತೃಗಳಲ್ಲಿ(ಯೇ) ಕಥೆಯಲ್ಲಿ ಅನುಗತವಾಗಿ (ಈ) ಅರ್ಥವು ತಿಳಿದುಬರುತ್ತದೆ[2]. ಕೇವಲತರ್ಕಬುದ್ಧಿಯನ್ನು ನಿಷೇಧಿಸುವದಕ್ಕಾಗಿಯೂ ಕಥೆಯು (ಬಂದಿದೆ). "ಈ ಮತಿಯು ತರ್ಕದಿಂದ ಸಿಕ್ಕತಕ್ಕದ್ದಲ್ಲ" (ಕ. ೧-೨-೯) "ತರ್ಕಶಾಸ್ತ್ರದಿಂದ ಸುಟ್ಟುಹೋಗಿರುವ (ಚಿತ್ತವುಳ್ಳ)ವನಿಗೆ (ಹೇಳಿಕೊಡತಕ್ಕದ್ದಲ್ಲ)" (ಮೋ. ಧ. ೨೪೭-೧೮) ಎಂಬ ಶ್ರುತಿಸ್ಮೃತಿಗಳಿಂದ (ಬರಿಯ ತರ್ಕವನ್ನು ಶಾಸ್ತ್ರದಲ್ಲಿ ನಿಷೇಧಿಸಿದೆ ಎಂದು ಸಿದ್ಧವಾಗಿರುತ್ತದೆ)[3]. ಬ್ರಹ್ಮವಿಜ್ಞಾನಕ್ಕೆ ಶ್ರದ್ಧೆಯು ಹೆಚ್ಚಿನ ಸಾಧನವು ಎಂಬುದೂ ಈ ಕಥೆಯ ಅರ್ಥವು. ಆದ್ದರಿಂದಲೇ ಗಾರ್ಗ್ಯ, ಅಜಾತಶತ್ರು (ಇವರು) ಶ್ರದ್ಧಾಲುಗಳಾಗಿದ್ದರೆಂದು (ಈ) ಕಥೆಯಲ್ಲಿ ಕಂಡುಬರುತ್ತದೆ[4]. "ಶ್ರದ್ಧಾವಂತನಿಗೆ ಜ್ಞಾನವು ಲಭಿಸುವದು" (ಗೀ. ೪-೩೦) ಎಂದು ಸ್ಮೃತಿಯೂ ಇದೆ.

---

1. ವಿಷಯವು ಸುಲಭವಾಗಿ ತಿಳಿಯಲೆಂದು ಕಥೆಯ ರೂಪದಲ್ಲಿ ಹೇಳಿದೆ ಎಂದು ಹೇಳಿದಂತಾಯಿತು.

2. ಗಾರ್ಗ್ಯನು ಶಿಷ್ಯನು, ಅಜಾತಶತ್ರುವು ಗುರು; ಆದ್ದರಿಂದ ತತ್ತ್ವವನ್ನು ಕೆಳಗಿನ ವರ್ಣದವನಿಂದಲಾದರೂ ತಿಳಿದುಕೊಳ್ಳಬೇಕು, ಕೆಳಗಿನ ವರ್ಣದವರು ವಿನಯದಿಂದಲೇ ತಿಳಿಯಹೇಳಬೇಕು ಎಂಬುದನ್ನು ಕಥೆಯು ತಿಳಿಸುತ್ತದೆ.

3. ಆಗಮಬಲವಿಲ್ಲದ ತರ್ಕವು ಕೇವಲ ತರ್ಕವು; ಅದಕ್ಕೆ ಆತ್ಮತತ್ತ್ವವು ನಿಲುಕುವದಿಲ್ಲವೆಂದು ಶಾಸ್ತ್ರದಲ್ಲಿ ಅದನ್ನು ನಿಷೇಧಿಸಿದೆ. ಸೂ. ಭಾ. ೨-೧-೧೧, (ಛಾ. ಭಾ. ೪೨೭, ೪೨೮).

4. ಅಸಡ್ಡೆಯಿಂದ ವಿಚಾರಮಾಡುವವರಿಗೆ ಬ್ರಹ್ಮಜ್ಞಾನವುಂಟಾಗುವದಿಲ್ಲ; ಅದರ ವಿಷಯಕ್ಕೆ ಆದರಾತಿಶಯವಿರಬೇಕು ಎಂಬುದು ಕಥೆಯ ಒಂದು ಉಪದೇಶ. ಒಂದೇ ಕಥೆಯಿಂದ ನಾಲ್ಕು ಅರ್ಥಗಳು ತಿಳಿಯಬರುತ್ತವೆ ಎಂದದ್ದರಿಂದ ವಾಕ್ಯಭೇದವಾದೀತೆಂದು ಶಂಕಿಸಬಾರದು; ಏಕೆಂದರೆ ಇವೆಲ್ಲವೂ ಬ್ರಹ್ಮಜ್ಞಾನಕ್ಕೆ ಅಂಗವಾಗಿರುವ ಅರ್ಥವನ್ನು ಹೇಳುವವು.

## ಗಾರ್ಗ್ಯಾಜಾತಶತ್ರುಗಳ ಸಮಾಗಮ

(ಉಪನಿಷತ್ತು)

**ದೃಪ್ತಬಾಲಾಕಿರ್ಹಾನೂಚಾನೋ ಗಾರ್ಗ್ಯ ಆಸ ಸ ಹೋವಾಚಾ ಜಾತಶತ್ರುಂ ಕಾಶ್ಯಂ ಬ್ರಹ್ಮ ತೇ ಬ್ರವಾಣೀತಿ ಸ ಹೋವಾಚಾ ಜಾತಶತ್ರುಃ ಸಹಸ್ರಮೇತಸ್ಯಾಂ ವಾಚಿ ದದ್ಮೋ ಜನಕೋ ಜನಕ ಇತಿ ವೈ ಜನಾ ಧಾವನ್ತೀತಿ ॥ ೧ ॥**

೧. ದೃಪ್ತಬಾಲಾಕಿಗಾರ್ಗ್ಯನೆಂಬ ಅನೂಚಾನನಿದ್ದನು. ಅವನು ಕಾಶಿಯ ಅಜಾತಶತ್ರುವನ್ನು (ಕುರಿತು) "ನಿನಗೆ ಬ್ರಹ್ಮವನ್ನು ಹೇಳುವೆನು" ಎಂದನು. ಆ ಅಜಾತಶತ್ರುವು "ಈ ಮಾತಿಗೆ ಸಾವಿರ (ಗೋವನ್ನು) ಕೊಡುವೆವು ; 'ಜನಕ', 'ಜನಕ' ಎಂದು ಜನರು ಓಡಾಡುತ್ತಾರೆ" ಎಂದನು.

(ಭಾಷ್ಯ)

**೨೬೨. ತತ್ರ ಪೂರ್ವಪಕ್ಷವಾದೀ ಅವಿದ್ಯಾವಿಷಯಬ್ರಹ್ಮವಿದ್ ದೃಪ್ತಬಾಲಾಕಿಃ ದೃಪ್ತೋ ಗರ್ವಿತಃ। ಅಸಮ್ಯಗ್ಬ್ರಹ್ಮವಿತ್ತ್ವಾದೇವ। ಬಲಾಕಾಯಾ ಅಪತ್ಯಂ ಬಾಲಾಕಿಃ। ದೃಪ್ತಶ್ಚಾಸೌ ಬಾಲಾಕಿಶ್ಚ ಇತಿ ದೃಪ್ತಬಾಲಾಕಿಃ। ಹಶಬ್ದಃ ಐತಿಹ್ಯಾರ್ಥಃ ಆಖ್ಯಾಯಿಕಾಯಾಮ್। ಅನೂಚಾನಃ ಅನುವಚನಸಮರ್ಥಃ ವಕ್ತಾ ವಾಗ್ಮೀ। ಗಾರ್ಗ್ಯಃ ಗೋತ್ರತಃ ಆಸ ಬಭೂವ ಕಸ್ಮಿಂಶ್ಚಿತ್ ಕಾಲವಿಶೇಷೇ। ಸ ಹೋವಾಚ ಅಜಾತಶತ್ರುಮ್ ಅಜಾತಶತ್ರುನಾಮಾನಂ ಕಾಶ್ಯಂ ಕಾಶಿರಾಜಮ್ ಅಭಿಗಮ್ಯ 'ಬ್ರಹ್ಮ ತೇ ಬ್ರವಾಣಿ' ಇತಿ ಬ್ರಹ್ಮ ತೇ ತುಭ್ಯಂ ಬ್ರವಾಣಿ ಕಥಯಾನಿ। ಸ ಏವಮುಕ್ತೋಽಜಾತಶತ್ರುಃ ಉವಾಚ। ಸಹಸ್ರಂ ಗವಾಂ ದದ್ಮಃ ಏತಸ್ಯಾಂ ವಾಚಿ ಯಾಂ ಮಾಂ ಪ್ರತಿ ಅವೋಚಃ 'ಬ್ರಹ್ಮ ತೇ ಬ್ರವಾಣಿ' ಇತಿ ತಾವನ್ಮಾತ್ರಮೇವ ಗೋಸಹಸ್ರದಾನೇ ನಿಮಿತ್ತಮ್ ಇತ್ಯಭಿಪ್ರಾಯಃ। ಸಾಕ್ಷಾತ್ ಬ್ರಹ್ಮಕಥನಮೇವ ನಿಮಿತ್ತಂ ಕಸ್ಮಾತ್ ನಾಪೇಕ್ಷತೇ ಸಹಸ್ರದಾನೇ, 'ಬ್ರಹ್ಮ ತೇ ಬ್ರವಾಣಿ' ಇತೀಯಮೇವ ವಾಕ್ ನಿಮಿತ್ತಮ್ ಅಪೇಕ್ಷ್ಯತೇ ಇತಿ? ಉಚ್ಯತೇ। ಯತಃ ಶ್ರುತಿರೇವ ರಾಜ್ಞೋಽಭಿಪ್ರಾಯಮಾಹ। ಜನಕೋ ದಾತಾ ಜನಕಃ ಶ್ರೋತಾ ಇತಿ ಚ ಏತಸ್ಮಿನ್ ವಾಕ್ಯದ್ವಯೇ ಪದದ್ವಯಮ್ ಅಭ್ಯಸ್ಯತೇ ಜನಕೋ ಜನಕ ಇತಿ। ವೈಶಬ್ದಃ ಪ್ರಸಿದ್ಧಾವದ್ಯೋತನಾರ್ಥಃ। ಜನಕೋ ದಿತ್ಸುಃ ಜನಕಃ ಶುಶ್ರೂಷುಃ ಇತಿ ಬ್ರಹ್ಮಶುಶ್ರೂಷವೋ (?) ವಿವಕ್ಷವಃ ಪ್ರತಿಜಿಘೃಕ್ಷವಶ್ಚ ಜನಾ ಧಾವನ್ತಿ ಅಭಿಗಚ್ಛನ್ತಿ। ತಸ್ಮಾತ್ ತತ್ಸರ್ವಂ ಮಯ್ಯಪಿ ಸಂಭಾವಿತವಾನಸಿ ಇತಿ ॥**

(ಭಾಷ್ಯಾರ್ಥ)

ಇಲ್ಲಿ ಪೂರ್ವಪಕ್ಷವಾದಿಯು ಅವಿದ್ಯಾವಿಷಯವಾದ ಬ್ರಹ್ಮವನ್ನು ಬಲ್ಲ ದೃಪ್ತಬಾಲಕಿಯು. ದೃಪ್ತನಾದ, ಸರಿಯಾಗಿ ಬ್ರಹ್ಮವನ್ನು ಅರಿಯದ್ದರಿಂದಲೇ ಹೆಮ್ಮೆಯುಳ್ಳ[1] ; ಬಾಲಾಕಿ ಎಂದರೆ ಬಲಾಕಾ ಎಂಬಾಕೆಯ ಮಗನು. ದೃಪ್ತನಾದ ಬಾಲಾಕಿಯು ದೃಪ್ತಬಾಲಾಕಿಯು. ಕಥೆಯಲ್ಲಿರುವ ಹಶಬ್ದವು ಐತಿಹ್ಯವನ್ನು (ತಿಳಿಸು)ವದಕ್ಕೆ[2]. ಅನೂಚಾನನು, ಎಂದರೆ ಅನುವಚನದಲ್ಲಿ ಶಕ್ತನು ; ವಕ್ತೃವು, ವಾಗ್ಮಿಯು. (ಅವನು) ಗೋತ್ರದಲ್ಲಿ ಗಾರ್ಗ್ಯನು. (ದೃಪ್ತಬಾಲಾಕಿ ಗಾರ್ಗ್ಯನೆಂಬ ಅನೂಚಾನನು) ಒಂದಾನೊಂದು ಕಾಲವಿಶೇಷದಲ್ಲಿ ಇದ್ದನು, ಇರುತ್ತಿದ್ದನು. ಅವನು ಕಾಶ್ಯನಾದ ಕಾಶಿಯ ರಾಜನಾದ ಅಜಾತಶತ್ರುವನ್ನು (ಕುರಿತು) ಅಜಾತಶತ್ರುವೆಂಬಾತನ ಬಳಿಗೆ ಬಂದು "ನಿನಗೆ ಬ್ರಹ್ಮವನ್ನು ಹೇಳುವೆನು, (ತೇ = ತುಭ್ಯಂ) ನಿನಗೆ ಬ್ರಹ್ಮವನ್ನು ತಿಳಿಸಿಕೊಡುವೆನು" ಎಂದನು.

ಹೀಗೆನ್ನಲು ಆ ಅಜಾತಶತ್ರುವಿಂತೆಂದನು : ನಿನಗೆ ಸಾವಿರ ಗೋವುಗಳನ್ನು ಈ ಮಾತಿಗೆ ಕೊಡುವೆವು. ನನ್ನನ್ನು ಕುರಿತು 'ನಿನಗೆ ಬ್ರಹ್ಮವನ್ನು ಹೇಳುವೆನು' ಎಂದೆಯಲ್ಲ, ಇಷ್ಟುಮಾತ್ರವೇ ಗೋಸಹಸ್ರವನ್ನು ಕೊಡುವದಕ್ಕೆ ನಿಮಿತ್ತವು ಎಂದು ಅಭಿಪ್ರಾಯ. ಸಾವಿರ (ಗೋ)ವನ್ನು ಕೊಡುವದಕ್ಕೆ ಸಾಕ್ಷಾತ್ತಾಗಿ ಬ್ರಹ್ಮವನ್ನು ಹೇಳುವದೇ ಬೇಕಿಲ್ಲವೇಕೆ ? 'ನಿನಗೆ ಬ್ರಹ್ಮವನ್ನು ಹೇಳುವೆನು' ಎಂಬೀ ಮಾತಿನ ನಿಮಿತ್ತವೇ ಸಾಕೆನ್ನುವದೇಕೆ ? ಎಂದರೆ ಹೇಳುತ್ತೇವೆ. ಏಕೆಂದರೆ, ಶ್ರುತಿಯೇ ರಾಜನ ಅಭಿಪ್ರಾಯವನ್ನು (ಇಲ್ಲಿ) ಹೇಳುತ್ತಿದೆ: ಜನಕನೇ ದಾತೃ, ಜನಕನೇ ಶ್ರೋತೃ- ಎಂದು ಈ ಎರಡು ವಾಕ್ಯಗಳ (ಅಭಿಪ್ರಾಯ)ದಲ್ಲಿ 'ಜನಕ', 'ಜನಕ' ಎಂಬ ಎರಡು ಪದಗಳನ್ನು ಪ್ರಯೋಗಿಸಿರುತ್ತದೆ. ವೈ ಎಂಬ ಶಬ್ದವು ಪ್ರಸಿದ್ಧಿಯನ್ನು ತಿಳಿಸುವದಕ್ಕೆ. ಜನಕನೇ (ಧನವನ್ನು) ಕೊಡುವಿಚ್ಛೆಯುಳ್ಳವನು, ಜನಕನೇ (ತತ್ತ್ವವನ್ನು) ಕೇಳಲಿಚ್ಛೆಯುಳ್ಳವನು ಎಂದು ಬ್ರಹ್ಮವನ್ನು ಕೇಳಬೇಕೆನ್ನುವವರೂ[3] (?) ಹೇಳಬೇಕೆನ್ನುವವರೂ ಪ್ರತಿಗ್ರಹವನ್ನು ಮಾಡಲಿಚ್ಛಿಸುವವರೂ ಆದ ಜನರು ಓಡಿಬರುತ್ತಿರು

1. ಪರಮಾರ್ಥವನ್ನು ತಿಳಿದವನು ನಿರಹಂಕಾರಿಯಾಗಿರುತ್ತಾನೆ, ಏಕೆಂದರೆ ಎಲ್ಲರ ಆತ್ಮನಾಗಿರುವ ಬ್ರಹ್ಮವೇ ತನ್ನ ಆತ್ಮನೆಂದು ಅವನು ಅರಿತಿರುವದರಿಂದ ವ್ಯಕ್ತಿಗತಜ್ಞಾನದ ಫಲವಾದ ಅಹಂಕಾರವು ಅವನಲ್ಲಿರಲಾರದು.

2. ಹಿಂದೆ ಇದು ನಡೆಯಿತು ಎಂಬುದನ್ನು ತಿಳಿಸುವದಕ್ಕೆ.

3. "ಶುಶ್ರೂಷವಃ" ಎಂಬ ಮಾತಿನ ಕನ್ನಡವಿದು. ಈ ಮಾತು ಮೂಲಭಾಷ್ಯದಲ್ಲಿತ್ತೆ? ಎಂಬುದು ಸಂಶಯಗ್ರಸ್ತ ; ಏಕೆಂದರೆ ಜನಕನಿಗೆ ತತ್ತ್ವವನ್ನು ಹೇಳಿ ಪ್ರತಿಗ್ರಹವನ್ನು ಮಾಡುವ ವಿದ್ವಾಂಸರು ಬಹಳವಾಗಿರುತ್ತಾರೆ ಎಂಬುದೇ ಪ್ರಕೃತವಾಗಿದೆ, ಶುಶ್ರೂಷುಗಳು ಪ್ರಕೃತವಾಗಿಲ್ಲ.

ವರು, ಅವನ) ಬಳಿಗೆ ಬರುತ್ತಿರುವರು. ಆದ್ದರಿಂದ ಅವೆಲ್ಲವನ್ನೂ ನನ್ನಲ್ಲಿ ಯೂ ಇರಬಹುದೆಂದು (ತಿಳಿಸಿರು)ತ್ತೀಯೆ. ಆದ್ದರಿಂದ (ಈ ಮಾತೇ ನಿಮಿತ್ತ ವಾಗಿದೆ ಎಂದು ಅಭಿಪ್ರಾಯ).

## ಆದಿತ್ಯಬ್ರಹ್ಮೋಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತ ಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜೇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇಽತಿಷ್ಠಾ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ ॥ ೨ ॥**

೨. ಆ ಗಾರ್ಗ್ಯನು "ಆದಿತ್ಯನಲ್ಲಿ ಆ ಪುರುಷನಿರುವನಲ್ಲ, ಇವ ನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತಿದೇನೆ'' ಎಂದನು. ಆ ಅಜಾತಶತ್ರುವಿಂತೆಂದನು : "ಬೇಡ, ಬೇಡ, ಈ (ವಿಷಯ)ದಲ್ಲಿ ಸಂವಾದಮಾಡ(ದಿರು) ; ಅತಿಷ್ಠನು, ಸರ್ವಭೂತಗಳಿಗೂ ಮೂರ್ಧ ವಾಗಿರುವ ರಾಜನು- ಎಂದೇ ನಾನು ಇವನನ್ನು ಉಪಾಸನೆಮಾಡು ತ್ತಿರುವೆನು. ಯಾವನು ಇವನನ್ನು ಹೀಗೆಂದು ಉಪಾಸನೆಮಾಡು ವನೋ (ಅವನು) ಅತಿಷ್ಠನೂ ಸರ್ವಭೂತಗಳಿಗೂ ಮೂರ್ಧವಾದ ರಾಜನೂ ಆಗುವನು.''

(ಭಾಷ್ಯ)

೨೬೩. ಏವಂ ರಾಜಾನಂ ಶುಶ್ರೂಷುಮ್ ಅಭಿಮುಖೀಭೂತಂ ಸ **ಹೋವಾಚ ಗಾರ್ಗ್ಯಃ । ಯ ಏವಾಸಾವಾದಿತ್ಯೇ** ಚಕ್ಷುಷಿ ಚೈಕೋಽಭಿಮಾನೀ ಚಕ್ಷುರ್ದ್ವಾರೇಣ ಹೃದಿ ಪ್ರವಿಷ್ಟಃ ಅಹಂ ಭೋಕ್ತಾ ಕರ್ತಾ ಚ ಇತ್ಯವಸ್ಥಿತಃ । **ಏತಮೇವ** ಅಹಂ **ಬ್ರಹ್ಮ** ಪಶ್ಯಾಮಿ ಅಸ್ಮಿನ್ ಕಾರ್ಯಕಾರಣಸಂಘಾತೇ **ಉಪಾಸೇ।** ತಸ್ಮಾತ್ ತಮಹಂ ಪುರುಷಂ ಬ್ರಹ್ಮ ತುಭ್ಯಂ ಬ್ರವೀಮಿ ಉಪಾಸ್ಸ್ವ **ಇತಿ । ಸ** ಏವಮುಕ್ತಃ ಪ್ರತ್ಯುವಾಚ **ಅಜಾತಶತ್ರುಃ ಮಾ ಮೇತಿ**[1] ಹಸ್ತೇನ ವಿನಿವಾರಯನ್ । **ಏತಸ್ಮಿನ್** ಬ್ರಹ್ಮಣಿ ವಿಜ್ಞೇಯೇ **ಮಾ ಸಂವದಿಷ್ಠಾಃ ।**

---

1 ಮಾ ಮಾ ಎಂದು ಇದರ ಹಿಂದೆ ಅಚ್ಚಿನ ಪುಸ್ತಕದಲ್ಲಿದೆ ; ಅದು ಅವಶ್ಯವಿಲ್ಲ.

ಮಾ ಮಾ ಇತಿ ಅಬಾಧನಾರ್ಥಂ[1] ದ್ವಿರ್ವಚನಮ್। ಏವಂ ಸಮಾನೇ ವಿಜ್ಞಾನ ವಿಷಯೇ ಆವಯೋಃ ಅಸ್ಮಾನ್ ಅವಿಜ್ಞಾನವತ ಇವ ದರ್ಶಯತಾ ಬಾಧಿತಾಃ ಸ್ಯಾಮ। ಅತಃ ಮಾ ಸಂವದಿಷ್ಠಾಃ ಮಾ ಸಂವಾದಂ ಕಾರ್ಷೀಃ ಅಸ್ಮಿನ್ ಬ್ರಹ್ಮಣಿ। ಅನ್ಯಚ್ಚೇತ್ ಜಾನಾಸಿ ತದ್ಬ್ರಹ್ಮ ವಕ್ತುಮರ್ಹಸಿ ನ ತು ಯನ್ಮಯಾ ಜ್ಞಾಯತ ಏವ। ಅಥಾ ಚೇತ್ ಮನ್ಯಸೇ ಜಾನೀಷೇ ತ್ವಂ ಬ್ರಹ್ಮ ಮಾತ್ರಂ ನ ತು ತದ್ವಿಶೇಷಣೋಪಾಸನಫಲಾನೀತಿ। ತನ್ನ ಮನ್ತವ್ಯಮ್। ಯತಃ ಸರ್ವಮೇತತ್ ಅಹಂ ಜಾನೇ ಯತ್ ಬ್ರವೀಷಿ। ಕಥಮ್? ಅತಿಷ್ಠಾಃ ಅತೀತ್ಯ ಭೂತಾನಿ ತಿಷ್ಠತಿ ಇತ್ಯತಿಷ್ಠಾಃ। ಸರ್ವೇಷಾಂ ಚ[2] ಭೂತಾನಾಂ ಮೂರ್ಧಾ ಶಿರಃ ರಾಜಾ ಇತಿ ವೈ ರಾಜಾ ದೀಪ್ತಿಗುಣೋಪೇತತ್ವಾತ್ ಏತೈರ್ವಿಶೇಷಣೈರ್ವಿಶಿಷ್ಟಮ್ ಏತದ್ ಬ್ರಹ್ಮ ಅಸ್ಮಿನ್ ಕಾರ್ಯಕಾರಣಸಂಘಾತೇ ಕರ್ತೃಭೋಕ್ತೃ ಚ ಇತ್ಯಹಮ್ ಏವಮ್ ಉಪಾಸೇ ಇತಿ। ಫಲಮಪಿ ಏವಂ ವಿಶಿಷ್ಟೋಪಾಸಕಸ್ಯ। ಸ ಯ ಏತಮೇವಮ್ ಉಪಾಸ್ತೇ ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ। ಯಥಾಗುಣೋಪಾಸನಮೇವ ಹಿ ಫಲಮ್। "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ ಬ್ರಾ. ೧೦-೫-೨-೨೦) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಹೀಗೆ ಕೇಳಬೇಕೆಂದು (ತನ್ನ) ಕಡೆಗೆ ತಿರುಗಿದ ರಾಜನನ್ನು (ಕುರಿತು) ಆ ಗಾರ್ಗ್ಯನಿಂತೆಂದನು: ಆದಿತ್ಯನಲ್ಲಿಯೂ ಕಣ್ಣಿನಲ್ಲಿಯೂ ಒಬ್ಬನೇ ಅಭಿಮಾನಿಯಾಗಿರುವ, ಚಕ್ಷುಸ್ಸಿನ ಮೂಲಕ ಹೃದಯದಲ್ಲಿ ಒಳಹೊಕ್ಕಿರುವ ನಾನು ಕರ್ತೃಭೋಕ್ತೃ ಎಂದೀತನು ಇದ್ದುಕೊಂಡಿರುವನಷ್ಟೆ, ಇವನನ್ನೇ ಬ್ರಹ್ಮವೆಂದು ನಾನು ತಿಳಿದಿರುವೆನು, ಈ ಕಾರ್ಯಕರಣಸಂಘಾತದಲ್ಲಿ[3] (ಅವನೇ ಬ್ರಹ್ಮವೆಂದು) ಉಪಾಸನೆಮಾಡುತ್ತಿರುವೆನು. ಆದ್ದರಿಂದ ಆ ಪುರುಷನನ್ನು ಬ್ರಹ್ಮವೆಂದು ಉಪಾಸನೆಮಾಡು ಎಂದು ನಿನಗೆ ಹೇಳುತ್ತಿದ್ದೇನೆ[4].

ಹೀಗೆನ್ನಲು, ಆ ಅಜಾತಶತ್ರುವು 'ಬೇಡ, ಬೇಡ' ಎಂದು ಕೈಯಿಂದ (ಸನ್ನೆಮಾಡಿ) ನಿಲ್ಲಿಸಿ (ಹೀಗೆಂದು) ಉತ್ತರಕೊಟ್ಟನು, ಈ ವಿಜ್ಞೇಯಬ್ರಹ್ಮದಲ್ಲಿ

---

1. ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ. ಅನುವಾದದಲ್ಲಿ ಟಿಪ್ಪಣಿಯನ್ನು ನೋಡಿ.

2. ಇದಿಲ್ಲದಿದ್ದರೂ ಸಾಕಾಗುತ್ತದೆ.

3. ಆದಿತ್ಯನೇ ಚಕ್ಷುರಿಂದ್ರಿಯಕ್ಕೆ ಅನುಗ್ರಾಹಕನು, ಅವನೇ ಹೃದಯದಲ್ಲಿದ್ದುಕೊಂಡು ಕರ್ತೃಭೋಕ್ತೃವಾಗಿರುವನು ಎಂದು ಅಭಿಪ್ರಾಯ. ಗಾರ್ಗ್ಯನು ಕರಣಾನುಗ್ರಾಹಕದೇವತೆಯೇ ಬ್ರಹ್ಮವು, ಅದೇ ಆತ್ಮನು ಎಂದು ಭಾವಿಸಿರುತ್ತಾನೆ.

4. "ನಿನಗೆ ಬ್ರಹ್ಮವನ್ನು ಹೇಳುತ್ತೇನೆ" ಎಂಬ ಪ್ರತಿಜ್ಞಾವಾಕ್ಯದಿಂದ ಇಲ್ಲಿ ಈ ಅಭಿಪ್ರಾಯವು ಹೊರಡುತ್ತದೆ ಎಂದು ಭಾವ.

ಸಂವಾದವನ್ನು ಮಾಡದಿರು[1]. 'ಬೇಡ ಬೇಡ' ಎಂದು ಎರಡು ಸಲ ಹೇಳಿರುವದು ಅಬಾಧನಕ್ಕಾಗಿ[2]. ಉಪಾಸನಾವಿಷಯವು ಹೀಗೆ ನಮ್ಮಿಬ್ಬರಿಗೂ ಸಮಾನವಾಗಿರುವಲ್ಲಿ ನಮಗೆ ಇದು ತಿಳಿದಿಲ್ಲವೆಂಬಂತೆ ತೋರಿಸಿಕೊಂಡರೆ (ನೀನು ನಮ್ಮನ್ನು) ಬಾಧಿಸಿದಂತೆ ಆದೀತು[3]. ಆದ್ದರಿಂದ ಸಂವಾದಮಾಡದಿರು, ಈ ಬ್ರಹ್ಮದ ವಿಷಯದಲ್ಲಿ ಸಂವಾದವನ್ನು ಮಾಡಬೇಡ. ಮತ್ತೊಂದು (ಬ್ರಹ್ಮವನ್ನು) ತಿಳಿದಿರುವೆಯಾದರೆ ಆ ಬ್ರಹ್ಮವನ್ನು ಹೇಳಬೇಕು[4], ನನಗೆ ತಿಳಿದೇ ಇರುವದನ್ನು (ಹೇಳತಕ್ಕ)ದ್ದಲ್ಲ.

ಹೀಗಲ್ಲದೆ, "ನೀನು ಬ್ರಹ್ಮಮಾತ್ರವನ್ನು ತಿಳಿದಿರುವೆಯೋ ಹೊರತು ಅದರ ವಿಶೇಷಣಗಳನ್ನೂ ಉಪಾಸನೆಯ ಫಲಗಳನ್ನೂ ಅರಿಯೆ" ಎಂದು ಎಣಿಸಿರುವೆಯಾದರೆ, ಹಾಗೆಂದೆಣಿಸಬಾರದು. ಏಕೆಂದರೆ ನೀನು ಹೇಳುವ ಇದೆಲ್ಲವನ್ನೂ ನಾನು ಬಲ್ಲೆನು. ಹೇಗೆಂಪರೆ, ಅತಿಷ್ಠನು, ಭೂತಗಳನ್ನು ಮೀರಿರುತ್ತಾನಾದ್ದರಿಂದ ಅತಿಷ್ಠನು ; ಮತ್ತು ಸರ್ವಭೂತಗಳಿಗೂ ಮೂರ್ಧವು, ತಲೆಯು ; ರಾಜನು, ಹೊಳೆಯುವ ಗುಣದಿಂದ ಕೂಡಿರುವದರಿಂದ (ರಾಜನು) —ಎಂಬೀ ವಿಶೇಷಣಗಳಿಂದ ಕೂಡಿದ ಇವು ಈ ಕಾರ್ಯಕರಣಸಂಘಾತದಲ್ಲಿ ಬ್ರಹ್ಮವೆಂದು, ಕರ್ತೃವೂ ಭೋಕ್ತೃವೂ (ಆಗಿರುವ)ದೆಂದು ನಾನು ಈತನನ್ನು ಉಪಾಸನೆಮಾಡುತ್ತಿರುವೆನು. ಈ (ಗುಣ)ಗಳಿಂದ ಕೂಡಿರುವ (ಬ್ರಹ್ಮವನ್ನು) ಉಪಾಸನೆಮಾಡುವವನಿಗೆ ಫಲವನ್ನೂ (ಬಲ್ಲೆನು). ಯಾವನು ಈ (ಪುರುಷನನ್ನು) ಹೀಗೆಂದು ಉಪಾಸನೆ ಮಾಡುವನೋ ಅವನು ಅತಿಷ್ಠನೂ ಸರ್ವಭೂತಗಳ ತಲೆಯಾದ ರಾಜನೂ ಆಗುವನು, ಗುಣೋಪಾಸನೆಗೆ ತಕ್ಕಂತಲ್ಲವೆ, ಫಲ(ವಾಗುವದು) ? "ಅವನನ್ನು ಹೇಗೆ ಹೇಗೆ ಉಪಾಸನೆಮಾಡುವರೋ ಅದೇ ಆಗುವದು" (ಶತ. ಬ್ರಾ. ೧೦-೫-೨-೨೦) ಎಂಬ ಶ್ರುತಿಯಿಂದ (ಹೀಗೆಂದು ಗೊತ್ತಾಗುತ್ತದೆ).

---

1. ತಿಳಿದಷ್ಟನ್ನೇ ಹೇಳುವದು ಸಂವಾದವು ; ಅನುವಾದ ಎಂದರ್ಥ.

2. ಅಬಾಧನಾರ್ಥಮ್ — (ಸ್ವಲ್ಪ) ಬಾಧನವೆಂಬರ್ಥವುಳ್ಳದ್ದು — ಎಂಬ ಪಾಠವನ್ನು ವ್ಯಾಖ್ಯಾನದಲ್ಲಿ ಅಂಗೀಕರಿಸಿದೆ. ಆದರೆ ಇದು ಅಜಾತಶತ್ರುವಿಗೆ ಹೊಂದುವಂತಿದೆಯೋ ಹೊರತು ಗಾರ್ಗ್ಯನಿಗೆ ಅನ್ವಯಿಸುವಂತೆ ಇಲ್ಲ. ಹೇಗೋ ಅವನಿಗೆ ಹೊಂದಿಸಿದರೂ ಅಬಾಧನೆಮಾಡುವದಕ್ಕಾಗಿ ಎಂದರ್ಥವಾಗುವದು. ಆ ಎಂದರೆ ಸ್ವಲ್ಪ ಎಂಬ ಅರ್ಥವನ್ನು ಮಾಡಿರುವದೂ ಸಮಂಜಸವಾಗುವದಿಲ್ಲ ; ವಿವರಣವಾಕ್ಯಕ್ಕೂ ಹೊಂದುಗಡೆಯಾಗುವದಿಲ್ಲ.

3. ಆದ್ದರಿಂದ ಬಾಧಿಸದಿರು, ಸಂವಾದಮಾಡದಿರು ಎಂದರ್ಥ.

4. ನನಗೆ ತಿಳಿಯದ ಅಪೂರ್ವವಾದ ಬ್ರಹ್ಮಜ್ಞಾನವು ನಿನ್ನಲ್ಲಿದ್ದರೆ ಆ ಬ್ರಹ್ಮವನ್ನು ತಿಳಿಸು ; ನನಗೆ ಗೊತ್ತಿರುವದನ್ನು ಗೊತ್ತಿಲ್ಲವೆಂಬಂತೆ ಮಾತಾಡಬೇಡ ಎಂದು ಅಭಿಪ್ರಾಯ.

# ಚಂದ್ರಬ್ರಹ್ಮೋಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಸೌ ಚನ್ದ್ರೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರು ರ್ಮಾಮೈತಸ್ಮಿನ್ ಸಂವದಿಷ್ಠಾ ಬೃಹನ್ ಪಾಣ್ಡರವಾಸಾಃ ಸೋಮೋ ರಾಜೇತಿ ವಾ ಅಹಮೇತಮುಪಾಸ ಇತಿ ಸ ಯ ಏತ ಮೇವಮುಪಾಸ್ತೇಽಹರಹರ್ಹ ಸುತಃ ಪ್ರಸುತೋ ಭವತಿ ನಾಸ್ಯಾನ್ನಂ ಕ್ಷೀಯತೇ ॥ ೩ ॥**

೩. ಆ ಗಾರ್ಗ್ಯನು "ಚಂದ್ರನಲ್ಲಿ ಆ ಪುರುಷನಿದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ" ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು). ಪಾಂಡರವಾಸನು, ಸೋಮರಾಜನು ಎಂದೇ ನಾನು ಇವನನ್ನು ಉಪಾಸನೆಮಾಡುತ್ತಿರುವೆನು. ಯಾವನು ಇವನನ್ನು ಹೀಗೆಂದು ಉಪಾಸನೆಮಾಡುವನೋ (ಅವನಿಗೆ ಸೋಮವು) ದಿನ ದಿನವೂ ಸುತವಾಗುತ್ತಿರುವದು, ಪ್ರಸುತವಾಗುತ್ತಿರುವದು; ಅವನ ಅನ್ನವು ಕ್ಷಯವಾಗುವದಿಲ್ಲ.

(ಭಾಷ್ಯ)

೨೬೪. ಸಂವಾದೇನ ಆದಿತ್ಯಬ್ರಹ್ಮಣಿ ಪ್ರತ್ಯಾಖ್ಯಾತೇ ಅಜಾತಶತ್ರುಣಾ ಚನ್ದ್ರಮಸಿ ಬ್ರಹ್ಮಾನ್ತರಂ ಪ್ರತಿಪೇದೇ ಗಾರ್ಗ್ಯಃ । ಯ ಏವಾಸೌ ಚನ್ದ್ರೇ ಮನಸಿ ಚೈತಃ ಪುರುಷೋ ಭೋಕ್ತಾ ಕರ್ತಾ ಚ ಇತಿ ಪೂರ್ವವದ್ ವಿಶೇಷಣಮ್ । ಬೃಹನ್ ಮಹಾನ್ ಪಾಣ್ಡರಂ ಶುಕ್ಲಂ ವಾಸಃ ಯಸ್ಯ ಸೋಽಯಂ ಪಾಣ್ಡರವಾಸಾಃ ಅಪ್ಶರೀರತ್ವಾತ್ ಪ್ರಾಣಸ್ಯ । ಸೋಮೋ ರಾಜಾ ಚನ್ದ್ರಃ[1] ಯಶ್ಚಾನ್ನಭೂತೋಽಭಿಷೂಯತೇ ಲತಾತ್ಮಕೋ ಯಜ್ಞೇ ತಮ್ ಏಕೀಕೃತ್ಯ ಏತಮೇವಾಹಂ ಬ್ರಹ್ಮ ಉಪಾಸೇ । ಯಥೋಕ್ತಗುಣಂ ಯ ಉಪಾಸ್ತೇ ತಸ್ಯ ಅಹರಹಃ ಸುತಃ ಸೋಮೋಽಭಿಷುತೋ ಭವತಿ ಯಜ್ಞೇ । ಪ್ರಸುತಶ್ಚ ವಿಕಾರೇಷು । ಅನ್ನಂ ಚಾಸ್ಯ ನ ಕ್ಷೀಯತೇ ಅನ್ನಾತ್ಮಕೋಪಾಸಕಸ್ಯ ॥

(ಭಾಷ್ಯಾರ್ಥ)

ಅಜಾತಶತ್ರುವು ಸಂವಾದವೆಂದು ಆದಿತ್ಯಬ್ರಹ್ಮನನ್ನು ತಿರಸ್ಕರಿಸಲು ಗಾರ್ಗ್ಯನು ಚಂದ್ರನಲ್ಲಿರುವ ಮತ್ತೊಂದು ಬ್ರಹ್ಮವೆಂದು ಎಣಿಸಿದನು.[2] 'ಚಂದ್ರ

---

1. ಈ ಭಾಗವನ್ನು ಪಾಠಾಂತರದಿಂದ ಸೇರಿಸಿಕೊಂಡಿದೆ.

2. ಬ್ರಹ್ಮವು ಬೇರೆಬೇರೆ ಉಪಾಧಿಗಳಲ್ಲಿ ವಿಭಕ್ತವಾಗಿದ್ದುಕೊಂಡು ಉಪಾಸ್ಯವಾಗಿದೆ ಎಂಬುದು ಅವನ ಅಭಿಪ್ರಾಯ.

ನಲ್ಲಿರುವ ಆ ಪುರುಷನಿದ್ದಾನಲ್ಲ'; (ಚಂದ್ರನಲ್ಲಿಯೂ) ಮನಸ್ಸಿನಲ್ಲಿಯೂ ಒಬ್ಬನೇ ಆಗಿರುವ ಪುರುಷನು ಕರ್ತೃವೂ ಭೋಕ್ತೃವೂ ಎಂದು (ಹೇಳಿದನು)[1].

ಮೊದಲಿನಂತೆಯೇ ವಿಶೇಷಣವನ್ನು (ಅರಿಯಬೇಕು)[2]. ಬೃಹನ್ ದೊಡ್ಡವನು; ಪಾಂಡರವಾದ ಬೆಳ್ಳನೆಯ ವಸ್ತ್ರವುಳ್ಳವನು ಪಾಂಡರವಾಸನು; ಏಕೆಂದರೆ (ಚಂದ್ರಾಭಿಮಾನಿಯಾದ)[3] ಪ್ರಾಣನಿಗೆ ಅಪ್ಪೇ ಶರೀರವು. ಸೋಮರಾಜನು ಎಂದರೆ ಚಂದ್ರನು; ಮತ್ತು ಲತಾತ್ಮಕವಾದ ಅನ್ನವಾಗಿದ್ದುಕೊಂಡು ಯಜ್ಞದಲ್ಲಿ ಹಿಂಡಲ್ಪಡುತ್ತದೆಯಲ್ಲ. ಅವನನ್ನೂ (ಚಂದ್ರನನ್ನೂ) ಒಂದಾಗಿ ಭಾವಿಸಿ ಈತನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತಿದೇನೆ. ಈ ಹೇಳಿದ ಗುಣಗಳುಳ್ಳ (ಬ್ರಹ್ಮವನ್ನು) ಯಾವನು ಉಪಾಸನೆಮಾಡುತ್ತಾನೋ ಅವನಿಗೆ ದಿನದಿನವೂ ಸೋಮವು ಯಜ್ಞದಲ್ಲಿ ಸುತವಾಗುತ್ತದೆ, ಹಿಂಡಲ್ಪಡುತ್ತದೆ; (ಯಜ್ಞ)ವಿಕಾರಗಳಲ್ಲಿ ಪ್ರಸುತವೂ ಆಗುತ್ತಿರುತ್ತದೆ. ಅನ್ನಾತ್ಮಕ(ಸೋಮ)ವನ್ನು ಉಪಾಸನೆಮಾಡುವದರಿಂದ ಇವನ ಅನ್ನವೂ ಕ್ಷಯವಾಗುವದಿಲ್ಲ.

## ವಿದ್ಯುದ್ಬ್ರಹ್ಮದ ಉಪದೇಶ

( ಉಪನಿಷತ್ತು )

**ಸ ಹೋವಾಚ ಗಾರ್ಗ್ಯೋ ಯ ಏವಾಸೌ ವಿದ್ಯುತಿ ಪುರುಷ**
**ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರು**
**ರ್ಮಾಮೈತಸ್ಮಿನ್ ಸಂವದಿಷ್ಠಾಸ್ತೇಜಸ್ವೀತಿ ವಾ ಅಹಮೇತ**
**ಮುಪಾಸ ಇತಿ ಸ ಯ ಏತಮೇವಮುಪಾಸ್ತೇ ತೇಜಸ್ವೀ ಹ**
**ಭವತಿ ತೇಜಸ್ವಿನೀ ಹಾಸ್ಯ ಪ್ರಜಾ ಭವತಿ || ೪ ||**

೪. ಆ ಗಾರ್ಗ್ಯನು "ಮಿಂಚಿನಲ್ಲಿದ್ದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ" ಎಂದನು. ಆ ಅಜಾತಶತ್ರು ಇಂತೆಂದನು: "ಬೇಡ, ಬೇಡ; ಈ (ವಿಷಯ)ದಲ್ಲಿ ಸಂವಾದವನ್ನು ಮಾಡದಿರು. ತೇಜಸ್ವಿ ಎಂದೇ ನಾನು ಈತನನ್ನು ಉಪಾಸನೆಮಾಡುತ್ತಿರುವೆನು. ಯಾವನು ಇವನನ್ನು ಹೀಗೆಂದು ಉಪಾಸನೆಮಾಡುವನೋ (ಅವನು) ತೇಜಸ್ವಿಯಾಗುತ್ತಾನೆ, ಇವನ ಪ್ರಜೆಯು ತೇಜಸ್ವಿಯೇ ಆಗುವದು."

---

1. ಹಿಂದೆ ಹೇಳಿದ ಆದಿತ್ಯಪುರುಷನಂತೆಯೇ ಇದನ್ನು ತಿಳಿಯಬೇಕು.

2. ಅಜಾತಶತ್ರುವು ಚಂದ್ರಬ್ರಹ್ಮವೂ ಅದರ ವಿಶೇಷಣವೂ ಫಲವೂ ತನಗೆ ಗೊತ್ತಿದೆ ಎಂದು ಹೇಳುತ್ತಿದ್ದಾನೆ ಎಂದರ್ಥ. ಉಪನಿಷತ್ತಿನ ಮಿಕ್ಕ ಶಬ್ದಗಳಿಗೆಲ್ಲ ಹಿಂದಿನಂತೆಯೇ ಅರ್ಥಮಾಡಿಕೊಳ್ಳಬಹುದೆಂದು ಭಾಷ್ಯಕಾರರು ಮತ್ತೆ ವ್ಯಾಖ್ಯಾನಮಾಡಿಲ್ಲ.

3 ಪಾಠಾಂತರದಲ್ಲಿ "ಚನ್ದ್ರಾಭಿಮಾನಿನಃ" ಎಂಬ ಶಬ್ದವೂ ಇದೆ. ಇಲ್ಲದಿದ್ದರೂ ಇದೇ ಅರ್ಥ.

(ಭಾಷ್ಯ)

೨೬೫. ತಥಾ ವಿದ್ಯುತಿ ತ್ವಚಿ ಹೃದಯೇ ಚ ಏಕಾ ದೇವತಾ। ತೇಜಸ್ವೀ ಇತಿ ವಿಶೇಷಣಮ್। ತಸ್ಯಾಸ್ತತ್ಫಲಂ[1] ತೇಜಸ್ವೀ ಹ ಭವತಿ ತೇಜಸ್ವಿನೀ ಹಾಸ್ಯ ಪ್ರಜಾ ಭವತಿ। ವಿದ್ಯುತಾಂ ಬಹುತ್ವಸ್ಯ ಅಙ್ಗೀಕರಣಾತ್ ಆತ್ಮನಿ ಪ್ರಜಾಯಾಂ ಚ ಫಲಬಾಹುಲ್ಯಮ್॥

(ಭಾಷ್ಯಾರ್ಥ)

ಇದರಂತೆ ಮಿಂಚಿನಲ್ಲಿಯೂ ತ್ವಗಿಂದ್ರಿಯದಲ್ಲಿಯೂ ಹೃದಯದಲ್ಲಿಯೂ ಒಂದೇ ದೇವತೆ. ಆ (ದೇವತೆಗೆ) ತೇಜಸ್ವಿ ಎಂಬುದೇ ವಿಶೇಷಣವು. ಅದಕ್ಕೆ ಫಲವೇನೆಂದರೆ ತೇಜಸ್ವಿಯಾಗಿರುತ್ತಾನೆ, ಅವನ ಪ್ರಜೆಯೂ ತೇಜಸ್ವಿಯಾಗಿರುತ್ತದೆ. ಮಿಂಚುಗಳು ಬಹಳವೆಂದಿಟ್ಟುಕೊಂಡು ತನ್ನಲ್ಲಿಯೂ ಪ್ರಜೆಯಲ್ಲಿಯೂ ಹೆಚ್ಚಿನ ಫಲವನ್ನು ಹೇಳಿದೆ.

## ಆಕಾಶಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಮಾಕಾಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾಃ ಪೂರ್ಣಮಪ್ರವರ್ತೀತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಪೂರ್ಯತೇ ಪ್ರಜಯಾ ಪಶುಭಿರ್ನಾಸ್ಯಾಸ್ಮಾಲ್ಲೋಕಾತ್ ಪ್ರಜೋದ್ವರ್ತತೇ ॥ ೫ ॥**

೫. ಆ ಗಾರ್ಗ್ಯನು "ಆಕಾಶದಲ್ಲಿ ಈ ಪುರುಷನಿದ್ದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ, ಈ (ವಿಷಯ)ದಲ್ಲಿ ಸಂವಾದವನ್ನು ಮಾಡದಿರು. ಪೂರ್ಣವು, ಅಪ್ರವರ್ತಿ- ಎಂದೇ ನಾನು ಈತನನ್ನು ಉಪಾಸನೆಮಾಡುತ್ತಿರುವೆನು.'' ಯಾವನು ಇವನನ್ನು ಹೀಗೆಂದು ಉಪಾಸನೆಮಾಡುವನೋ (ಅವನು) ಪ್ರಜೆಯಿಂದಲೂ ಪಶುಗಳಿಂದಲೂ ತುಂಬಿಕೊಳ್ಳುತ್ತಾನೆ, ಅವನ ಪ್ರಜೆಯು ಈ ಲೋಕವನ್ನು ಬಿಟ್ಟುಹೋಗುವದಿಲ್ಲ.

(ಭಾಷ್ಯ)

೨೬೬. ತಥಾ ಆಕಾಶೇ ಹೃದಯಾಕಾಶೇ ಹೃದಯೇ ಚ[2] ಏಕಾ।

---

1. 'ತಸ್ಯಾ ಏತತ್ಫಲಮ್' ಎಂದೋ 'ತಸ್ಯಾಃ ಫಲಮ್' ಎಂದೋ ಮೂಲಭಾಷ್ಯವಿದ್ದಿರಬಹುದು.

2. 'ಹೃದ್ಯಾಕಾಶೇ ಚ' ಎಂಬುದನ್ನು ತಿದ್ದಿಕೊಂಡದ್ದಿದು; ಹೃದಯಾಕಾಶೇ ಹೃದಿ ಚ ಎಂದಾದರೂ ಇರಬಹುದು.

ಪೂರ್ಣಮ್ ಅಪ್ರವರ್ತಿ ಚ ಇತಿ ವಿಶೇಷಣದ್ವಯಮ್ । ಪೂರ್ಣತ್ವವಿಶೇಷಣ ಫಲಮಿದಮ್ । ಪೂರ್ಯತೇ ಪ್ರಜಯಾ ಪಶುಭಿಃ। ಅಪ್ರವರ್ತಿವಿಶೇಷಣಫಲಮ್ । ನಾಸ್ಯ ಅಸ್ಮಾತ್ ಲೋಕಾತ್ ಪ್ರಜಾ ಉದ್ವರ್ತತೇ ಇತಿ । ಪ್ರಜಾಸಂತಾನಾ ವಿಚ್ಛಿತ್ತಿಃ ॥

(ಭಾಷ್ಯಾರ್ಥ)

ಇದರಂತೆ ಆಕಾಶದಲ್ಲಿಯೂ ಹೃದಯಾಕಾಶದಲ್ಲಿಯೂ ಹೃದಯದಲ್ಲಿಯೂ ಒಂದೇ ದೇವತೆ. ಪೂರ್ಣವು, ಅಪ್ರವರ್ತಿ[1]– ಎಂದು (ಅದಕ್ಕೆ) ಎರಡು ವಿಶೇಷಣಗಳು. ಪೂರ್ಣತ್ವವಿಶೇಷಣ(ದಿಂದ ಉಪಾಸನೆಮಾಡಿದ್ದರ) ಫಲವು ಇದು: ಪ್ರಜೆಗಳಿಂದಲೂ ಪಶುಗಳಿಂದಲೂ ಪೂರ್ಣನಾಗುತ್ತಾನೆ. ಅಪ್ರವರ್ತಿ ಎಂಬ ವಿಶೇಷಣಕ್ಕೆ ಫಲ(ವಿದು): ಈ (ಉಪಾಸಕ)ನ ಪ್ರಜೆಯು ಈ ಲೋಕ ದಿಂದ ಹೋಗುವದಿಲ್ಲ, ಪ್ರಜಾಸಂತಾನವು ವಿಚ್ಛಿನ್ನವಾಗುವದಿಲ್ಲ.

## ವಾಯುಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಂ ವಾಯೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರು ರ್ಮಾಮೈತಸ್ಮಿನ್ ಸಂವದಿಷ್ಠಾ ಇನ್ದ್ರೋ ವೈಕುಣ್ಠೋಽಪ ರಾಜಿತಾ ಸೇನೇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಜಿಷ್ಣುರ್ಹಾಪರಾಜಿಷ್ಣುರ್ಭವತ್ಯನ್ಯ ತಸ್ತ್ಯಜಾಯೀ ॥ ೬ ॥**

೬. ಆ ಗಾರ್ಗ್ಯನು ವಾಯುವಿನಲ್ಲಿ ಈ ಪುರುಷನಿದ್ದಾನಲ್ಲ, "ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು : "ಬೇಡ, ಬೇಡ ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು). ಇಂದ್ರನು, ವೈಕುಂಠ, ಅಪರಾಜಿತಾ ಸೇನಾ- ಎಂದು ಈತನನ್ನು ನಾನು ಉಪಾಸನೆಮಾಡುತ್ತಿದೇನೆ.'' ಯಾವನು ಇವನನ್ನು ಹೀಗೆಂದು ಉಪಾಸನೆಮಾಡುತ್ತಾನೋ ಅವನು ಜಿಷ್ಣುವೂ ಅಪರಾಜಿಷ್ಣುವೂ ಆಗುತ್ತಾನೆ. (ಮತ್ತೊಬ್ಬಳ ಮಕ್ಕಳನ್ನು) ಜಯಿಸು ವವನೂ ಆಗುತ್ತಾನೆ.

---

1. ನಾಶವಿಲ್ಲದ್ದು.

(ಭಾಷ್ಯ)

೨೬೭. ತಥಾ ವಾಯೌ ಪ್ರಾಣೇ ಹೃದಿ ಚ ಏಕಾ[1] । ವಿಶೇಷಣಮ್ ಇನ್ದ್ರಃ ಪರಮೇಶ್ವರಃ, ವೈಕುಣ್ಠಃ ಅಪ್ರಸಹ್ಯಃ, ನ ಪರೈರ್ಜಿತಪೂರ್ವಾ ಅಪರಾಜಿತಾ ಸೇನಾ । ಮರುತಾಂ ಗಣತ್ವಪ್ರಸಿದ್ಧೇಃ । ಉಪಾಸನಾಫಲಮಪಿ । ಜಿಷ್ಣುರ್ಹ ಜಯನಶೀಲಃ । ಅಪರಾಜಿಷ್ಣುಃ ನ ಪರೈರ್ಜಿತಸ್ವಭಾವೋ ಭವತಿ । ಅನ್ಯತಸ್ತ್ಯಜಾಯಿಾ ಅನ್ಯತಸ್ತ್ಯಾನಾಂ ಸಪತ್ನಾನಾಂ ಜಯನಶೀಲೋ ಭವತಿ ॥

(ಭಾಷ್ಯಾರ್ಥ)

ಹೀಗೆಯೇ ವಾಯುವಿನಲ್ಲಿಯೂ ಪ್ರಾಣದಲ್ಲಿಯೂ ಹೃದಯದಲ್ಲಿಯೂ ಒಂದೇ (ದೇವತೆ. ಅದರ) ವಿಶೇಷಣವು (ಯಾವದೆಂದರೆ), ಇಂದ್ರನು, ಪರಮೇಶ್ವರನು ; ವೈಕುಂಠನು, ತಡೆದುಕೊಳ್ಳುವದಕ್ಕೆ ಆಗಲಾರದ (ಪರಾಕ್ರಮದವನು) ; ಅಪರಾಜಿತವಾದ ಎಂದರೆ ಮತ್ತೊಬ್ಬರು ಹಿಂದೆ ಜಯಿಸದೆ ಇರುವ ಸೇನೆ; ಏಕೆಂದರೆ ಮರುತ್ತರು ಗಣವಾಗಿರುವರೆಂಬುದು ಪ್ರಸಿದ್ಧವಾಗಿರುತ್ತದೆ[2]. ಉಪಾಸನೆಯ ಫಲವೂ (ಹೀಗಿದೆ) : ಜಿಷ್ಣು, ಗೆಲ್ಲುವ ಸ್ವಭಾವದವನು ; ಅಪರಾಜಿಷ್ಣು ಎಂದರೆ ಮತ್ತೊಬ್ಬರಿಗೆ ಸೋತನೆಂಬ ಸ್ವಭಾವವಿಲ್ಲದವನು-(ಇಂಥವ)ನಾಗುವನು. ಅನ್ಯತಸ್ತ್ಯರನ್ನು ಮತ್ತೊಬ್ಬ (ತಾಯಿ)ಯಿಂದ ಹುಟ್ಟಿರುವವರನ್ನು, ಎಂದರೆ ದಾಯಾದಿಗಳನ್ನು ಗೆಲ್ಲುವವನೂ ಆಗುತ್ತಾನೆ.

## ಅಗ್ನಿಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಮಗ್ನೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ವಿಷಾಸಹಿರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ವಿಷಾಸಹಿರ್ಹ ಭವತಿ ವಿಷಾಸಹಿರ್ಹಾಸ್ಯ ಪ್ರಜಾ ಭವತಿ ॥ ೭ ॥**

೭. ಆ ಗಾರ್ಗ್ಯನು "ಅಗ್ನಿಯಲ್ಲಿ ಈ ಪುರುಷನಿರುವನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು.

---

1. ಇಲ್ಲಿ ದೇವತಾ ಎಂಬ ವಿಶೇಷಣವನ್ನು ಅಧ್ಯಾಹಾರಮಾಡಿಕೊಳ್ಳಬೇಕು ; ಅಥವಾ ಭಾಷ್ಯದಲ್ಲಿದ್ದುದನ್ನು ಬರೆದವರು ಕೈಬಿಟ್ಟಿರುತ್ತಾರೆಂದು ಕಲ್ಪಿಸಬೇಕು. ಮುಂದಿನ ವಾಕ್ಯಗಳಲ್ಲಿಯೂ ಹೀಗೆಯೇ.

2. ಮರುದ್ದೇವತೆಗಳು ಗಣರೂಪವಾಗಿರುವದರಿಂದ ಗೆಲ್ಲಲಾರದ ಸ್ವಭಾವದವರೆಂಬ ಗುಣವು ಹೊಂದುತ್ತದೆ ಎಂದು ಭಾವ.

ಆ ಅಜಾತಶತ್ರುವಿಂತೆಂದನು : "ಬೇಡ, ಬೇಡ ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು). ವಿಷಾಸಹಿ ಎಂದೇ ನಾನು ಈತನನ್ನು ಉಪಾಸನೆಮಾಡುವೆನು.'' ಯಾವನು ಇವನನ್ನು ಹೀಗೆಂದು ಉಪಾಸನೆ ಮಾಡುವನೋ (ಅವನು) ವಿಷಾಸಹಿಯಾಗುತ್ತಾನೆ, ಇವನ ಪ್ರಜೆಯು ವಿಷಾಸಹಿಯಾಗುತ್ತದೆ.

(ಭಾಷ್ಯ)

೨೬೮. ಅಗ್ನೌ ವಾಚಿ ಹೃದಿ ಚೈಕಾ । ವಿಶೇಷಣಂ ವಿಷಾಸಹಿಃ ಮರ್ಷಯಿತಾ ಪರೇಷಾಮ್ । ಅಗ್ನಿಬಾಹುಲ್ಯಾತ್ ಫಲಬಾಹುಲ್ಯಂ ಪೂರ್ವವತ್ ॥

(ಭಾಷ್ಯಾರ್ಥ)

ಅಗ್ನಿಯಲ್ಲಿಯೂ ವಾಕ್ಕಿನಲ್ಲಿಯೂ ಹೃದಯದಲ್ಲಿಯೂ ಒಂದೇ (ದೇವತೆ). ವಿಶೇಷಣ(ವೇನೆಂದರೆ). ವಿಷಾಸಹಿ, ಮತ್ತೊಬ್ಬರನ್ನು ಸಹಿಸಿಕೊಳ್ಳುವವನು. ಅಗ್ನಿಗಳು ಬಹಳ ಇರುವದರಿಂದ ಫಲವೂ ಬಹಳ ಎಂದು ಹಿಂದಿನಂತೆ (ತಿಳಿಯಬೇಕು).

## ಅಬ್ಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಮಪ್ಸು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾಃ ಪ್ರತಿರೂಪ ಇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಪ್ರತಿರೂಪಗ್ಂ ಹೈವೈನಮುಪಗಚ್ಛತಿ ನಾಪ್ರತಿರೂಪಮಥೋ ಪ್ರತಿರೂಪೋಽಸ್ಮಾಜ್ಜಾಯತೇ ॥ ೮ ॥**

೮. ಆ ಗಾರ್ಗ್ಯನು "ಅಪ್ಪಿನಲ್ಲಿರುವ ಈ ಪುರುಷನಿದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು : "ಬೇಡ, ಬೇಡ, ಈ (ವಿಷಯದಲ್ಲಿ) ಸಂವಾದ(ಮಾಡದಿರು). ಪ್ರತಿರೂಪನು ಎಂದೇ ನಾನು ಈತನನ್ನು ಉಪಾಸನೆಮಾಡುತ್ತಿರುವೆನು.'' ಯಾವನು ಇವನನ್ನು ಹೀಗೆಂದು ಉಪಾಸನೆಮಾಡುತ್ತಿರುವನೋ ಅವನಿಗೆ ಪ್ರತಿರೂಪವಾದದ್ದು ಬರುತ್ತದೆಯೇ ಹೊರತು ಅಪ್ರತಿರೂಪವಾದದ್ದು (ಬರುವ)ದಿಲ್ಲ. ಇವನಿಂದ ಪ್ರತಿರೂಪವಾದ (ಪ್ರಜೆಯೇ) ಉಂಟಾಗುವದು.

(ಭಾಷ್ಯ)

೨೬೯. ಅಪ್ಸು ರೇತಸಿ ಹೃದಿ ಚೈಕಾ[1] । ವಿಶೇಷಣಮ್ ಪ್ರತಿರೂಪಃ ಅನುರೂಪಃ ಶ್ರುತಿಸ್ಮೃತ್ಯಪ್ರತಿಕೂಲಃ ಇತ್ಯರ್ಥಃ । ಫಲಂ ಪ್ರತಿರೂಪಂ ಶ್ರುತಿಸ್ಮೃತಿಶಾಸನಾನುರೂಪಮೇವ ಏನಮ್ ಉಪಗಚ್ಛತಿ ಪ್ರಾಪ್ನೋತಿ ನ ವಿಪರೀತಮ್ । ಅನ್ಯಚ್ಚ ಅಸ್ಮಾತ್ ತಥಾವಿಧ ಏವ ಉಪಜಾಯತೇ ॥

(ಭಾಷ್ಯಾರ್ಥ)

ಅಪ್ಪಿನಲ್ಲಿಯೂ ರೇತಸ್ಸಿನಲ್ಲಿಯೂ ಹೃದಯದಲ್ಲಿಯೂ ಒಂದೇ (ದೇವತೆಯು). ವಿಶೇಷಣ(ವಿದು) : ಪ್ರತಿರೂಪನು, ಎಂದರೆ ಅನುರೂಪನು ; ಶ್ರುತಿಸ್ಮೃತಿಗಳಿಗೆ ಪ್ರತಿಕೂಲನಲ್ಲದವನು ಎಂದರ್ಥ. ಫಲ : ಪ್ರತಿರೂಪವಾದ ಶ್ರುತಿಸ್ಮೃತಿಗಳ ಶಾಸನಕ್ಕೆ ಅನುರೂಪವಾದದ್ದೇ ಇವನ ಬಳಿಗೆ ಬರುತ್ತದೆ, ದೊರಕುತ್ತದೆ ; (ಅದಕ್ಕೆ) ವಿಪರೀತವಾದದ್ದು (ಬರುವ)ದಿಲ್ಲ. ಇನ್ನೊಂದು (ಫಲ) : ಅಂಥ ಪ್ರಕಾರದವನೇ ಇವನಿಗೆ ಹುಟ್ಟುತ್ತಾನೆ.

## ಆದರ್ಶಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಮಾದರ್ಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ರೋಚಿಷ್ಣುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ರೋಚಿಷ್ಣುರ್ಹ ಭವತಿ ರೋಚಿಷ್ಣುರ್ಹಾಸ್ಯ ಪ್ರಜಾ ಭವತ್ಯಥೋ ಯೈಃ ಸಂನಿಗಚ್ಛತಿ ಸರ್ವಾಗ್ಂಸ್ತಾನತಿರೋಚತೇ ॥ ೯ ॥**

೯. ಆ ಗಾರ್ಗ್ಯನು "ಕನ್ನಡಿಯಲ್ಲಿರುವ ಈ ಪುರುಷನಿದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ, ಈ (ವಿಷಯ)ದಲ್ಲಿ ಸಂವಾದ(ಮಾಡದಿರು). ರೋಚಿಷ್ಣುವೆಂದೇ ನಾನು ಈತನನ್ನು ಉಪಾಸನೆಮಾಡುತ್ತೇನೆ.'' ಯಾವನು ಇವನನ್ನು ಹೀಗೆಂದು ಉಪಾಸನೆ ಮಾಡುತ್ತಾನೋ (ಅವನು) ರೋಚಿಷ್ಣುವಾಗುತ್ತಾನೆ ; ಇವನ ಪ್ರಜೆಯು ರೋಚಿಷ್ಣುವಾಗುತ್ತದೆ, ಮತ್ತು ಯಾರ ಸಮೀಪಕ್ಕೆ ಬರುತ್ತಾನೋ ಅವರನ್ನೆಲ್ಲ ಮೀರಿ ಹೊಳೆಯುತ್ತಾನೆ.

1. 'ಚೈಕಾ ದೇವತಾ' ಎಂಬ ಪಾಠವೂ ಇದೆ.

(ಭಾಷ್ಯ)

೨೭೦. ಆದರ್ಶೇ ಪ್ರಸಾದಸ್ವಭಾವೇ ಚ ಅನ್ಯತ್ರ ಖಡ್ಗಾದೌ ಹಾರ್ದೇ ಚ ಸತ್ತ್ವಶುದ್ಧಿಸ್ವಾಭಾವ್ಯೇ ಚ ಏಕಾ। ವಿಶೇಷಣಮ್ ರೋಚಿಷ್ಣುಃ ದೀಪ್ತಿಸ್ವಭಾವಃ। ಫಲಂ ಚ ತದೇವ। ರೋಚನಾಧಾರಬಾಹುಲ್ಯಾತ್ ಫಲಬಾಹುಲ್ಯಮ್ ॥

(ಭಾಷ್ಯಾರ್ಥ)

ಕನ್ನಡಿಯಲ್ಲಿಯೂ ಪ್ರಸಾರಸ್ವಭಾವವುಳ್ಳ ಕತ್ತಿಯೇ ಮುಂತಾದ ಬೇರೆಯ (ವಸ್ತು)ಗಳಲ್ಲಿಯೂ, ಸತ್ತ್ವಶುದ್ಧಿಯ ಸ್ವಭಾವದ ಹೃದಯದಲ್ಲಿಯೂ ಒಂದೇ (ದೇವತೆ). ವಿಶೇಷಣವು: ರೋಚಿಷ್ಣು, ಹೊಳೆಯುವ ಸ್ವಭಾವದವನು (ಎಂಬುದು). ಫಲವೂ ಅದೇ. ಹೊಳೆಯುವದಕ್ಕೆ ಆಧಾರಗಳು ಬಹಳವಾಗಿರುವದರಿಂದ ಫಲವೂ ಬಹಳವಾಗಿರುತ್ತದೆ.

## ಶಬ್ದಬ್ರಹ್ಮೋಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಂ ಯನ್ತಂ ಪಶ್ಚಾಚ್ಛಬ್ದೋಽನೂದೇತ್ಯೇತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಅಸುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಸರ್ವಗ್ಂ ಹೈವಾಸ್ಮಿಲ್ಲೋಕ ಆಯುರೇತಿ ನೈನಂ ಪುರಾ ಕಾಲಾತ್ ಪ್ರಾಣೋ ಜಹಾತಿ ॥ ೧೦ ॥**

೧೦. ಆ ಗಾರ್ಗ್ಯನು "ಹೋಗುತ್ತಿರುವವನ ಹಿಂದುಗಡೆಯಿಂದ ಶಬ್ದವು ಕೇಳಬರುವದಷ್ಟೆ, ಇದನ್ನೇ ನಾನು ಬ್ರಹ್ಮವೆಂದು ಉಪಾಸನೆ ಮಾಡುತ್ತೇನೆ" ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ, ಈ (ವಿಷಯ)ದಲ್ಲಿ ಸಂವಾದ(ಮಾಡದಿರು) ; ನಾನು ಇವನನ್ನು ಅಸು ಎಂದು ಉಪಾಸನೆಮಾಡುತ್ತಿರುವೆನು." ಯಾವನು ಹೀಗೆಂದು ಉಪಾಸನೆಮಾಡುವನೋ (ಅವನು) ಈ ಲೋಕದಲ್ಲಿ ಎಲ್ಲಾ ಆಯುಸ್ಸನ್ನೂ ಪಡೆದುಕೊಳ್ಳುವನು ; ಅವನನ್ನು ಕಾಲಕ್ಕಿಂತ ಮುಂಚೆ ಪ್ರಾಣವು ಬಿಟ್ಟುಹೋಗುವದಿಲ್ಲ.

(ಭಾಷ್ಯ)

೨೭೧. ಯನ್ತಂ ಗಚ್ಛನ್ತಂ ಯ ಏವಾಯಂ ಶಬ್ದಃ ಪಶ್ಚಾತ್ ಪೃಷ್ಠತಃ ಅನೂದೇತಿ ಅಧ್ಯಾತ್ಮಂ ಚ ಜೀವನಹೇತುಃ ಪ್ರಾಣಃ ತಮೇಕೀಕೃತ್ಯ ಆಹ।

ಅಸುಃ ಪ್ರಾಣಃ ಜೀವನಹೇತುರಿತಿ ಗುಣಸ್ತಸ್ಯ[1] । ಫಲಂ ಸರ್ವಮಾಯುಃ ಅಸ್ಮಿನ್ ಲೋಕೇ ಏತಿ ಇತಿ । ಯಥೋಪಾತ್ತಂ ಕರ್ಮಣಾ ಆಯುಃ । ಕರ್ಮಫಲಪರಿಚ್ಛಿನ್ನಕಾಲಾತ್ ಪುರಾ ಪೂರ್ವಂ ರೋಗಾದಿಭಿಃ ಪೀಡ್ಯಮಾನ ಮಪಿ ಏನಂ ಪ್ರಾಣೋ ನ ಜಹಾತಿ ॥

(ಭಾಷ್ಯಾರ್ಥ)

ಹೋಗುತ್ತಿರುವ ನಡೆಯುತ್ತಿರುವ (ಮನುಷ್ಯನ) ಹಿಂದುಗಡೆಯಿಂದ ಶಬ್ದವು ಕೇಳಬರುವದಷ್ಟೆ,[2] ಮತ್ತು ಅಧ್ಯಾತ್ಮವಾಗಿ ಬದುಕಿರುವದಕ್ಕೆ ಕಾರಣ ವಾಗಿರುವ ಪ್ರಾಣವಿರುವದಷ್ಟೆ, ಅದನ್ನು ಒಂದಾಗಿ ಮಾಡಿಕೊಂಡು ಹೇಳಿರು ತ್ತಾನೆ.[3] ಅಸು, ಜೀವನಹೇತುವಾದ ಪ್ರಾಣವು ಎಂಬುದು ಅವನ ಗುಣವು. ಈ ಲೋಕದಲ್ಲಿ ಎಲ್ಲಾ ಆಯುಸ್ಸನ್ನೂ ಪಡೆದುಕೊಳ್ಳುತ್ತಾನೆ ಎಂಬುದು ಫಲವು. ಕರ್ಮದಿಂದ ಸಂಪಾದಿಸಿಕೊಂಡಿದ್ದಷ್ಟು (ಆ) ಆಯುಸ್ಸನ್ನು (ಎಲ್ಲಾ ಆಯುಸ್ಸು ಎಂದಿದೆ). ಕರ್ಮಫಲಪರಿಚ್ಛಿನ್ನವಾದ ಕಾಲಕ್ಕಿಂತ[4] ಮೊದಲು ರೋಗಾದಿ ಗಳಿಂದ ನರಳಿದರೂ ಇವನನ್ನು ಪ್ರಾಣವು ಬಿಟ್ಟುಹೋಗುವದಿಲ್ಲ (ಎಂದರ್ಥ)[5].

## ದಿಗ್ಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಂ ದಿಕ್ಷು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತ ಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ದ್ವಿತೀಯೋಽನಪಗ ಇತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ದ್ವಿತೀಯವಾನ್ ಹ ಭವತಿ ನಾಸ್ಮಾದ್ ಗಣಶ್ಛಿದ್ಯತೇ ॥ ೧೧ ॥**

---

1. 'ಗುಣಸ್ತಸ್ಯ' ಎಂದು ತಸ್ಯ ಎಂಬ ಮಾತನ್ನು ವಾ॥ ಪಾಠದಂತೆ ಹಿಂದಕ್ಕೆ ಅನ್ವಯಿಸಿದೆ. ಮುಂದಿನ ಕಂಡಿಕೆಯ ಭಾಷ್ಯಕ್ಕೆ ಈ ಅನ್ವಯವೇ ಅನುಗುಣವಾಗಿದೆ.

2. ಶಬ್ದದಲ್ಲಿ ಪುರುಷನಿದಾನಲ್ಲ ಎಂದೇ ಅರ್ಥ.

3. ಶಬ್ದ ಎಂಬ ಮಾತಿಗೆ ಈ ಎರಡರಲ್ಲಿಯೂ ಇರುವ ಒಂದೇ ದೇವತೆಯು ಎಂದು ಅರ್ಥ.

4. ಪ್ರಾರಬ್ಧಕರ್ಮಕ್ಕೆ ತಕ್ಕಷ್ಟು ಕಾಲ ಆಯುಸ್ಸು ಇರುತ್ತದೆ; ಅಷ್ಟು ಆಯುಸ್ಸ ನ್ನೂ ಪಡೆದುಕೊಳ್ಳುತ್ತಾನೆ ಎಂದರ್ಥ. ಪಾಪದ ಫಲವಾಗಿ ಆ ಆಯುಸ್ಸೂ ಹ್ರಾಸವಾಗ ಬಹುದು ಎಂದು ಭಾವ. ಇಲ್ಲಿ 'ಸರ್ವಮಾಯುಃ' ಎಂಬ ಶ್ರುತಿಗೆ ನೂರು ವರ್ಷಗಳು ಎಂದೂ ಅರ್ಥಮಾಡಬಹುದೆಂದು ಬ್ರಾಹ್ಮಣದಲ್ಲಿ ಪ್ರಸಿದ್ಧಿ. ತೈ.ಭಾ. ೨-೩ನ್ನು ನೋಡಿ.

5. ಅಪಮೃತ್ಯುವುಂಟಾಗುವದಿಲ್ಲ ಎಂದರ್ಥ.

೧೧. ಆ ಗಾರ್ಗ್ಯನು "ದಿಕ್ಕುಗಳಲ್ಲಿ ಪುರುಷನಿದ್ದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತಿದ್ದೇನೆ'' ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು). "ಎರಡನೆಯವನು, ಬಿಟ್ಟುಹೋಗದವನು- ಎಂದೇ ನಾನು ಈತನನ್ನು ಉಪಾಸನೆಮಾಡುತ್ತಿರುವೆನು.'' ಯಾವನು ಹೀಗೆಂದು ಉಪಾಸನೆಮಾಡುವನೋ (ಅವನು) ಎರಡನೆಯವನನ್ನುಳ್ಳವನಾಗಿರುತ್ತಾನೆ. ಅವನ ಗಣವು ತಪ್ಪಿಹೋಗುವದಿಲ್ಲ.

(ಭಾಷ್ಯ)

೨೭೨. ದಿಕ್ಷು ಕರ್ಣಯೋರ್ಹೃದಿ ಚೈಕಾ। ಅಶ್ವಿನೌ ದೇವೌ ಅವಿಯುಕ್ತಸ್ವಭಾವೌ । ಗುಣಸ್ತಸ್ಯ ದ್ವಿತೀಯವತ್ತ್ವಮ್, ಅನಪಗತ್ವಮ್, ಅವಿಯುಕ್ತತಾ ಚಾನ್ಯೋಽನ್ಯಮ್ । ದಿಶಾಮ್ ಅಶ್ವಿನೋಶ್ಚ ಏವಂಧರ್ಮತ್ವಾತ್ । ತದೇವ ಚ ಫಲಮ್ ಉಪಾಸಕಸ್ಯ ಗಣಾವಿಚ್ಛೇದೋ ದ್ವಿತೀಯವತ್ತ್ವಂ ಚ ॥

(ಭಾಷ್ಯಾರ್ಥ)

ದಿಕ್ಕುಗಳಲ್ಲಿಯೂ ಕರ್ಣಗಳಲ್ಲಿಯೂ ಹೃದಯದಲ್ಲಿಯೂ ಒಂದೇ (ದೇವತೆ). ಒಬ್ಬರನ್ನೊಬ್ಬರಗಲದ ಅಶ್ವಿನೀದೇವತೆಗಳೇ (ಆ ದೇವತೆ). ಆ (ಪುರುಷನಿಗೆ) ದ್ವಿತೀಯನಾಗಿರುವವನು, ಒಬ್ಬರನ್ನೊಬ್ಬರು ಬಿಟ್ಟುಹೋಗದೆ ಇರುವವನು, ಅಗಲದಿರುವದು- ಎಂಬಿದು ಗುಣವು ; ಏಕೆಂದರೆ ದಿಕ್ಕುಗಳಿಗೂ ಅಶ್ವಿನೀದೇವತೆಗಳಿಗೂ ಈ ಧರ್ಮವಿದೆ. ಉಪಾಸಕನಿಗೂ ಗಣವು ತಪ್ಪಿಹೋಗದೆ ಇರುವದು, ಎರಡನೆಯವನನ್ನುಳ್ಳವನಾಗಿಯೇ ಇರುವದು ಎಂಬ ಅದೇ ಫಲವೇ (ಉಂಟಾಗುವದು).

## ಛಾಯಾಬ್ರಹ್ಮದ ಉಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಂ ಛಾಯಾಮಯಃ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರುರ್ಮಾಮೈತಸ್ಮಿನ್ ಸಂವದಿಷ್ಠಾ ಮೃತ್ಯುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವಮುಪಾಸ್ತೇ ಸರ್ವಂ ಹೈವಾಸ್ಮಿಲ್ಲೋಕ ಆಯುರೇತಿ ನೈನಂ ಪುರಾ ಕಾಲಾನ್ಮೃತ್ಯುರಾಗಚ್ಛತಿ ॥ ೧೨ ॥**

೧೨. ಆ ಗಾರ್ಗ್ಯನು "ಈ ಛಾಯಾಮಯಪುರುಷನಿದಾನಲ್ಲ. ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು) ; ಮೃತ್ಯುವೆಂದೇ ನಾನು ಈತನನ್ನು ಉಪಾಸನೆಮಾಡುತ್ತಿರುವೆನು.'' ಯಾವನು ಇವನನ್ನು ಹೀಗೆಂದು ಉಪಾಸನೆ ಮಾಡುವನೋ (ಅವನು) ಲೋಕದಲ್ಲಿ ಎಲ್ಲಾ ಆಯುಸ್ಸನ್ನೂ ಪಡೆದುಕೊಳ್ಳುತ್ತಾನೆ ; ಇವನಿಗೆ ಕಾಲಕ್ಕಿಂತ ಮುಂಚೆ ಮೃತ್ಯು ಬರುವದಿಲ್ಲ.

(ಭಾಷ್ಯ)

೨೭೩. ಛಾಯಾಯಾಂ ಬಾಹ್ಯೇ ತಮಸಿ ಅಧ್ಯಾತ್ಮಂ ಚ ಆವರಣಾತ್ಮಕೇ ಅಜ್ಞಾನೇ ಹೃದಿ ಚ ಏಕಾ ದೇವತಾ[1] । ವಿಶೇಷಣಂ ಮೃತ್ಯುಃ। ಫಲಂ ಸರ್ವಂ ಪೂರ್ವವತ್ । ಮೃತ್ಯೋರನಾಗಮೇ[2] ರೋಗಾದಿಪೀಡಾಭಾವೋ ವಿಶೇಷಃ ॥

(ಭಾಷ್ಯಾರ್ಥ)

ಛಾಯೆಯಲ್ಲಿ ಎಂದರೆ ಹೊರಗಿನ ಕತ್ತಲೆಯಲ್ಲಿಯೂ ಅಧ್ಯಾತ್ಮವಾಗಿ ಆವರಣರೂಪವಾಗಿರುವ ಅಜ್ಞಾನದಲ್ಲಿಯೂ ಹೃದಯದಲ್ಲಿಯೂ ಒಂದೇ ದೇವತೆ. ಮೃತ್ಯು ಎಂಬುದು ವಿಶೇಷಣವು. ಫಲವು ಹಿಂದೆ ಹೇಳಿದಂತೆ ಎಲ್ಲವೂ ಇಲ್ಲಿಯೂ ಆಗಿರುವದು)[3]; ಮೃತ್ಯುವು ಬಾರದೆ ಇರುವಲ್ಲಿ ರೋಗಾದಿಗಳಿಂದ ನರಳದೆ ಇರುವದೆಂಬುದು (ಇಲ್ಲಿ) ವಿಶೇಷವು[4].

## ಪ್ರಜಾಪತಿಬ್ರಹ್ಮೋಪದೇಶ

(ಉಪನಿಷತ್ತು)

**ಸ ಹೋವಾಚ ಗಾರ್ಗ್ಯೋ ಯ ಏವಾಯಮಾತ್ಮನಿ ಪುರುಷ**

---

1. ಇಲ್ಲಿ 'ದೇವತಾ' ಎಂಬ ಮಾತು ಉಲ್ಲಿಖಿತವಾಗಿರುವದರಿಂದ ಹಿಂದಿನ ಭಾಷ್ಯಗಳಲ್ಲಿಯೂ ಈ ಮಾತು ಇದ್ದು ಲೇಖಕರು ಕೈಬಿಟ್ಟಿರಬಹುದೆಂದು ಕಲ್ಪಿಸುವವರಿಗೆ ಅವಕಾಶವಿದೆ. 2. 'ಅನಾಗಮನೇನ' ಎಂಬ ಪಾಠಕ್ಕಿಂತ ಇದು ಮೇಲೆಂದು ಕಾಣುತ್ತದೆ.

3. 'ಸರ್ವಮ್' ಎಂಬುದರ ಮುಂದೆ 'ಆಯುಃ' ಎಂಬ ಮಾತು ಬಿಟ್ಟುಹೋಗಿದೆ ಎಂದು ಕಲ್ಪಿಸಿದರೆ ಫಲವು ಹಿಂದಿನ ಕಂಡಿಕೆಯಲ್ಲಿ ಹೇಳಿರುವಂತೆ ಸರ್ವಾಯುಸ್ಸು ಎಂದು ಕನ್ನಡಿಸಬಹುದಾಗುವದು.

4. ಹಿಂದಿನ ಹತ್ತನೆಯ ಕಂಡಿಕೆಯಲ್ಲಿ ಭಾಷ್ಯದಲ್ಲಿ ರೋಗಾದಿಗಳಿಂದ ನರಳುತ್ತಿದ್ದರೂ ಅಪಮೃತ್ಯು ಬರುವದಿಲ್ಲ ಎಂದು ಭಾಷ್ಯವಲ್ಲಿ ತಿಳಿಸಿತ್ತು ; ಇಲ್ಲಿ ಮೃತ್ಯು ಬರುವವರೆಗೂ ಯಾವ ರೋಗವೂ ಬರುವದೇ ಇಲ್ಲ ಎಂದು ಹೇಳಿದೆ. ಈ ಎರಡು ಫಲಗಳಿಗಿರುವ ತಾರತಮ್ಯವು ಇಷ್ಟೇ ಎಂದು ಭಾವ.

**ಏತಮೇವಾಹಂ ಬ್ರಹ್ಮೋಪಾಸ ಇತಿ ಸ ಹೋವಾಚಾಜಾತಶತ್ರು ರ್ಮಾಮೈತಸ್ಮಿನ್ ಸಂವದಿಷ್ಠಾ ಆತ್ಮನ್ವೀತಿ ವಾ ಅಹಮೇತ ಮುಪಾಸ ಇತಿ ಸ ಯ ಏತದೇವಮುಪಾಸ್ತ ಆತ್ಮನ್ವೀ ಹ ಭವತ್ಯಾತ್ಮನ್ವಿನೀ ಹಾಸ್ಯ ಪ್ರಜಾ ಭವತಿ ಸ ಹ ತೂಷ್ಣೀಮಾಸ ಗಾರ್ಗ್ಯಃ ॥ ೧೩ ॥**

೧೩. ಆ ಗಾರ್ಗ್ಯನು "ಆತ್ಮನಲ್ಲಿ ಈ ಪುರುಷನಿದ್ದಾನಲ್ಲ, ಇವನನ್ನೇ ನಾನು ಬ್ರಹ್ಮವೆಂದು ಉಪಾಸನೆಮಾಡುತ್ತೇನೆ'' ಎಂದನು. ಆ ಅಜಾತಶತ್ರುವಿಂತೆಂದನು: "ಬೇಡ, ಬೇಡ; ಈ (ವಿಷಯ)ದಲ್ಲಿ ಸಂವಾದ(ಮಾಡದಿರು). ಆತ್ಮನ್ವೀ ಎಂದೇ ಇವನನ್ನು ನಾನು ಉಪಾಸನೆಮಾಡುತ್ತಿರುವೆನು[1].'' ಯಾವನು ಇವನನ್ನು ಹೀಗೆಂದು ಉಪಾಸನೆ ಮಾಡುತ್ತಿರುವನೋ ಅವನು ಆತ್ಮನ್ವಿಯಾಗುವನು, ಅವನ ಪ್ರಜೆಯು ಆತ್ಮನ್ವಿಯಾಗುವದು. ಆ ಗಾರ್ಗ್ಯನು ಸುಮ್ಮನಾದನು.

(ಭಾಷ್ಯ)

೨೭೪. ಆತ್ಮನಿ ಪ್ರಜಾಪತೇರ್ಬುದ್ಧೌ[2] ಚ ಹೃದಿ ಚ ಏಕಾ ಆತ್ಮನ್ವೀ ಆತ್ಮವಾನಿತಿ ವಿಶೇಷಣಮ್ । ಫಲಮ್ ಆತ್ಮನ್ವೀ ಹ ಭವತಿ ಆತ್ಮವಾನ್ ಭವತಿ। ಆತ್ಮನ್ವಿನೀ ಹಾಸ್ಯ ಪ್ರಜಾ ಭವತಿ । ಬುದ್ಧಿಬಹುಲತ್ವಾತ್ ಪ್ರಜಾಯಾಂ ಸಂಪಾದನಮ್[3] । ಸ್ವಯಂಪರಿಜ್ಞಾತತ್ವೇನ ಏವಂ ಕ್ರಮೇಣ ಪ್ರತ್ಯಾಖ್ಯಾತೇಷು ಬ್ರಹ್ಮಸು ಸ ಗಾರ್ಗ್ಯಃ ಕ್ಷೀಣಬ್ರಹ್ಮವಿಜ್ಞಾನಃ ಅಪ್ರತಿಭಾಸಮಾನೋತ್ತರಃ ತೂಷ್ಣೀಮ್ ಅವಾಕ್ಶಿರಾ ಆಸ ॥

(ಭಾಷ್ಯಾರ್ಥ)

ಆತ್ಮನಲ್ಲಿ ಎಂದರೆ ಪ್ರಜಾಪತಿಯ ಬುದ್ಧಿಯಲ್ಲಿಯೂ ಹೃದಯದಲ್ಲಿಯೂ ಒಂದೇ (ದೇವತೆ). ಆತ್ಮನ್ವೀ, ಆತ್ಮವಂತನು ಎಂಬುದು ವಿಶೇಷಣವು.

---

1. ಎರಡನೆಯ ಕಂಡಿಕೆಯ ಭಾಷ್ಯದಲ್ಲಿ ಸೂಚಿಸಿರುವಂತೆ ಅಜಾತಶತ್ರುವು ಉಪಾಸನೆಯ ಫಲವನ್ನು ತಿಳಿದಿದ್ದಾನೆಂದು ಪ್ರಕಟಿಸಬೇಕಾಗಿರುವದರಿಂದ ಫಲವಾಕ್ಯವು ಮುಗಿದ ಮೇಲೆಯೇ ಈ ಅನುವಾದಕಚಿಹ್ನೆಯನ್ನು ಹಾಕಬೇಕಾದದ್ದು ಯುಕ್ತವಾದರೂ ಮೂಲೋಪನಿಷತ್ತಿಗನುಗುಣವಾಗಿ ಇತಿಯಿರುವಲ್ಲಿಗೇ ಅನುವಾದವು ಉಪಸಂಹೃತವಾದಂತೆ ತೋರಿಸಿದೆ.

2. ವಾರ್ತಿಕಾನುಸಾರವಾಗಿ ಇಲ್ಲಿ 'ಪ್ರಜಾಪತೌ ದೇಹೇ ಹೃದಿ ಚ' ಎಂಬ ಪಾಠವನ್ನು ಮೂಲದಲ್ಲಿ ಕಲ್ಪಿಸಬೇಕಾಗುವದು. ಮುಂದೆ 'ಬುದ್ಧಿಬಾಹುಲ್ಯಾತ್' ಎಂದಿರುವದಕ್ಕೆ ಅನುಗುಣವಾಗಿ ನಾವು 'ಪ್ರಜಾಪತೇರ್ಬುದ್ಧೌ' ಎಂದು ಕಲ್ಪಿಸಿರುತ್ತೇವೆ. ಪ್ರಜಾಪತೌ ಎಂಬುದಕ್ಕೇ ಪ್ರಜಾಪತಿಯ ಬುದ್ಧಿಯಲ್ಲಿ ಎಂಬರ್ಥವನ್ನು ಮಾಡಿದರೆ ಬುದ್ಧೌ ಚ ಎಂಬುದಕ್ಕೆ ವ್ಯಷ್ಟಿಬುದ್ಧಿಯಲ್ಲಿ ಎಂಬರ್ಥವನ್ನು ಮಾಡಿಕೊಳ್ಳಬಹುದು.

3 'ಇತಿ ವಿಶೇಷಃ' ಎಂಬುದನ್ನು ಬಿಟ್ಟುಬಿಟ್ಟಿದ್ದೇವೆ.

ಫಲವೇನೆಂದರೆ ಆತ್ಮನ್ವಿಯಾಗಿರುತ್ತಾನೆ, ಆತ್ಮವಂತನಾಗಿರುತ್ತಾನೆ[1] ; ಅವನ ಪ್ರಜೆಯೂ ಆತ್ಮನ್ವಿಯಾಗಿರುವದು. ಬುದ್ಧಿಗಳು ಬಹಳವಾಗಿರುವದರಿಂದ[2] (ಈ ಗುಣವನ್ನು) ಪ್ರಜೆಯಲ್ಲಿಯೂ ಸಂಪಾದನಮಾಡಿರುತ್ತದೆ.

ನನಗೇ (ಇದು) ತಿಳಿದಿದೆ ಎಂದು ಹೀಗೆ ಒಂದೊಂದಾಗಿ ಬ್ರಹ್ಮಗಳನ್ನು ತಿರಸ್ಕರಿಸಲಾಗಿ ಆ ಗಾರ್ಗ್ಯನು (ತನ್ನ) ಬ್ರಹ್ಮವಿಜ್ಞಾನವೆಲ್ಲ ಕ್ಷಯವಾಗಿ ಉತ್ತರವು (ಯಾವದೂ) ತೋರದೆ ಸುಮ್ಮನೆ ತಲೆತಗ್ಗಿಸಿಕೊಂಡು ಇದ್ದುಬಿಟ್ಟನು[3].

## ಗಾರ್ಗ್ಯನು ಅಜಾತಶತ್ರುವಿನ ಶಿಷ್ಯನಾದದ್ದು

(ಉಪನಿಷತ್ತು)

**ಸ ಹೋವಾಚಾಜಾತಶತ್ರುರೇತಾವನ್ನೂ೩ ಇತ್ಯೇತಾವದ್ಧೀತಿ ನೈತಾವತಾ ವಿದಿತಂ ಭವತೀತಿ ಸ ಹೋವಾಚ ಗಾರ್ಗ್ಯ ಉಪ ತ್ವಾ ಯಾನೀತಿ || ೧೪ ||**

೧೪. ಆ ಅಜಾತಶತ್ರುವು "ಇಷ್ಟೇಯೆ ?" ಎಂದನು. "ಇಷ್ಟೇ" (ಎನ್ನಲು) "ಇಷ್ಟರಿಂದ ಅರಿತದ್ದಾಗುವದಿಲ್ಲ" (ಎಂದನು). ಆ ಗಾರ್ಗ್ಯನು "ನಿನ್ನನ್ನು (ಶಿಷ್ಯನಾಗಿ) ಬಳಿಸಾರುವೆನು" ಎಂದನು.

(ಭಾಷ್ಯ)

೨೭೫. ತಂ ತಥಾಭೂತಮ್ ಆಲಕ್ಷ್ಯ ಗಾರ್ಗ್ಯಂ ಸ ಹೋವಾಚ-ಅಜಾತಶತ್ರುಃ ಏತಾವನ್ನೂ೩ ಇತಿ । ಕಿಮೇತಾವದ್ ಬ್ರಹ್ಮ ನಿರ್ಜ್ಞಾತಮ್ ಆಹೋಸ್ವಿತ್ ಅಧಿಕಮಪಿ ಅಸ್ತಿ ಇತಿ। ಇತರ ಆಹ ಏತಾವದ್ಧಿ ಇತಿ। ನೈತಾವತಾ ವಿದಿತೇನ ಬ್ರಹ್ಮ ವಿದಿತಂ ಭವತಿ ಇತ್ಯಾಹ ಅಜಾತಶತ್ರುಃ । ಕಿಮರ್ಥಂ ಗರ್ವಿತೋಽಸಿ ಬ್ರಹ್ಮ ತೇ ಬ್ರವಾಣಿ ಇತಿ ? ॥

(ಭಾಷ್ಯಾರ್ಥ)

ಹಾಗೆ (ಸುಮ್ಮ)ನಾದ ಆ ಗಾರ್ಗ್ಯನನ್ನು ಕಂಡು ಆ ಅಜಾತಶತ್ರುವು 'ಇಷ್ಟೇಯೆ ?' ಎಂದನು. (ನೀನು) ಅರಿತುಕೊಂಡಿರುವ ಬ್ರಹ್ಮವು ಇಷ್ಟೇಯೊ, ಅಥವಾ (ಇದಕ್ಕಿಂತ) ಹೆಚ್ಚಿನದೂ ಇದೆಯೊ ? ಎಂದು (ಕೇಳಿದನು. ಅದಕ್ಕೆ)

---

1. ವಶ್ಯಾತ್ಮನಾಗುತ್ತಾನೆ ಎಂದರ್ಥ.
2. ವ್ಯಷ್ಟಿಬುದ್ಧಿಗಳು ಬಹಳವಾಗಿರುವದರಿಂದ.
3. ಈವರೆಗೆ ವ್ಯಸ್ತರಾದ ದೇವತೆಗಳನ್ನು ಹೇಳಿತ್ತು : [illegible] ಗಳನ್ನು-ದೇವತೆಗಳ ಒಟ್ಟಾದ ಪ್ರಜಾಪತಿಯನ್ನು-ಹೇಳಿದೆ. ಆದ್ದರಿಂದ ಇಲ್ಲಿಗೆ ಗಾರ್ಗ್ಯನ ಜ್ಞಾನವು ಮುಗಿಯಿತು -ಎಂದು ವಾರ್ತಿಕ.

ಇನ್ನೊಬ್ಬ(ನಾದ ಗಾರ್ಗ್ಯನು) ಇಷ್ಟೇ (ಎನ್ನಲು) ಅಜಾತಶತ್ರುವು ಇಷ್ಟನ್ನು ಅರಿತುಕೊಂಡದ್ದರಿಂದಲೇ ಬ್ರಹ್ಮವನ್ನು ಅರಿತಂತಾಗುವದಿಲ್ಲ; 'ನಿನಗೆ ಬ್ರಹ್ಮವನ್ನು ಹೇಳಿಕೊಡುತ್ತೇನೆ' ಎಂದು (ಸುಮ್ಮನೆ) ಏತಕ್ಕೆ ಹೆಮ್ಮೆಪಡುತ್ತೀಯೆ ? ಎಂದನು.

## ಗಾರ್ಗ್ಯನು ಹೇಳಿದ್ದು ಸರಿ, ಆದರೆ ಅಷ್ಟೇ ಅಲ್ಲ.

(ಭಾಷ್ಯ)

೨೭೬. ಕಿಮ್ ಏತಾವದ್ ವಿದಿತಂ ವಿದಿತಮೇವ ನ ಭವತೀತ್ಯುಚ್ಯತೇ ? ನ । ಫಲವದ್ವಿಜ್ಞಾನಶ್ರವಣಾತ್ । ನ ಚ ಅರ್ಥವಾದತ್ವಮೇವ ವಾಕ್ಯಾನಾಮ್ ಅವಗನ್ತುಂ ಶಕ್ಯಮ್ । ಅಪೂರ್ವವಿಧಾನಪರಾಣಿ ಹಿ ವಾಕ್ಯಾನಿ ಪ್ರತ್ಯುಪಾಸನೋಪದೇಶಂ ಲಕ್ಷ್ಯನ್ತೇ "ಅತಿಷ್ಠಾಃ ಸರ್ವೇಷಾಂ ಭೂತಾನಾಮ್" (೨-೧-೨) ಇತ್ಯಾದೀನಿ । ತದನುರೂಪಾಣಿ ಚ ಫಲಾನಿ ಸರ್ವತ್ರ ಶ್ರೂಯನ್ತೇ ವಿಭಕ್ತಾನಿ । ಅರ್ಥವಾದತ್ವೇ ಏತದಸಮಞ್ಜಸಮ್ । ಕಥಂ ತರ್ಹಿ ನೈತಾವತಾ ವಿದಿತಂ ಭವತೀತಿ ? ನೈಷ ದೋಷಃ । ಅಧಿಕಾಪೇಕ್ಷತ್ವಾತ್[1] । ಬ್ರಹ್ಮೋಪದೇಶಾರ್ಥಂ ಹಿ ಶುಶ್ರೂಷವೇ ಅಜಾತಶತ್ರವೇ ಅಮುಖ್ಯಬ್ರಹ್ಮವಿದ್ ಗಾರ್ಗ್ಯಃ ಪ್ರವೃತ್ತಃ । ಸ ಯುಕ್ತ ಏವ ಮುಖ್ಯಬ್ರಹ್ಮವಿದಾ ಅಜಾತಶತ್ರುಣಾ ಅಮುಖ್ಯಬ್ರಹ್ಮವಿದ್ ಗಾರ್ಗ್ಯೋ ವಕ್ತುಂ ಯನ್ಮುಖ್ಯಂ ಬ್ರಹ್ಮ ವಕ್ತುಂ ಪ್ರವೃತ್ತಸ್ತ್ವಂ ತನ್ನ ಜಾನೀಷೇ ಇತಿ । ಯದಿ ಅಮುಖ್ಯಬ್ರಹ್ಮವಿಜ್ಞಾನಮಪಿ ಪ್ರತ್ಯಾಖ್ಯಾಯೇತ ತದಾ 'ಏತಾವತಾ' ಇತಿ ನ ಬ್ರೂಯಾತ್ । 'ನ ಕಿಂಚಿತ್ ಜ್ಞಾತಂ ತ್ವಯಾ' ಇತ್ಯೇವಂ ಬ್ರೂಯಾತ್ । ತಸ್ಮಾತ್ ಭವನ್ತಿ ಏತಾವನ್ತಿ ಅವಿದ್ಯಾವಿಷಯೇ ಬ್ರಹ್ಮಾಣಿ । ಏತಾವದ್ವಿಜ್ಞಾನದ್ವಾರತ್ವಾಚ್ಚ ಪರಬ್ರಹ್ಮವಿಜ್ಞಾನಸ್ಯ ಯುಕ್ತಮೇವ ವಕ್ತುಂ 'ನೈತಾವತಾ ವಿದಿತಂ ಭವತಿ' ಇತಿ । ಅವಿದ್ಯಾವಿಷಯೇ ವಿಜ್ಞೇಯತ್ವಂ ನಾಮರೂಪಕರ್ಮಾತ್ಮಕತ್ವಂ ಚ ಏಷಾಂ ತೃತೀಯೇಽಧ್ಯಾಯೇ ಪ್ರದರ್ಶಿತಮ್ । ತಸ್ಮಾತ್ 'ನೈತಾವತಾ ವಿದಿತಂ ಭವತಿ' ಇತಿ ಬ್ರುವತಾ ಅಧಿಕಂ ಬ್ರಹ್ಮ ಜ್ಞಾತವ್ಯಮಸ್ತಿ ಇತಿ ದರ್ಶಿತಂ ಭವತಿ । ತಚ್ಚ ಅನುಪಸನ್ನಾಯ ನ ವಕ್ತವ್ಯಮ್ ಇತಿ ಆಚಾರವಿಧಿಜ್ಞೋ ಗಾರ್ಗ್ಯಃ ಸ್ವಯಮೇವ ಆಹ 'ಉಪ ತ್ವಾ ಯಾನಿ' ಇತಿ । ಉಪಗಚ್ಛಾನಿ ಇತಿ ತ್ವಾಂ ಯಥಾ ಅನ್ಯಃ ಶಿಷ್ಯೋ ಗುರುಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :– ಇಷ್ಟನ್ನು ಅರಿತುಕೊಂಡರೆ ಅರಿತುಕೊಂಡಂತೆಯೇ ಅಲ್ಲ ಎಂದು (ಇಲ್ಲಿ) ಹೇಳಿದೆಯೇನು ?

---

1. 'ಅಧಿಕೃತಾಪೇಕ್ಷತ್ವಾತ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಉತ್ತರ) :- ಹಾಗಲ್ಲ. ಏಕೆಂದರೆ, ಫಲಸಹಿತವಾದ ವಿಜ್ಞಾನಗಳನ್ನು ಶ್ರುತಿಯಲ್ಲಿ ಹೇಳಿದೆ. ಈ ವಾಕ್ಯಗಳು ಅರ್ಥವಾದವೇ[1] ಎಂದು ನಿಶ್ಚಯಿಸು ವದಕ್ಕೂ ಆಗುವಹಾಗಿಲ್ಲ. ಏಕೆಂದರೆ ಒಂದೊಂದು ಉಪಾಸನೆಯ ಉಪದೇಶ ದಲ್ಲಿಯೂ 'ಅತಿಷ್ಠಾಃ ಸರ್ವೇಷಾಂ ಭೂತಾನಾಂ' (ಅತಿಷ್ಠೆಯೂ ಎಲ್ಲಾ ಭೂತ ಗಳಿಗೂ ತಲೆಯಾದವನೂ.... ೨-೧-೨) ಎಂದುಮುಂತಾಗಿರುವ ವಾಕ್ಯಗಳು ಅಪೂರ್ವವಾದ (ಧರ್ಮವನ್ನು) ವಿಧಾನಮಾಡುವದರಲ್ಲಿಯೇ ತಾತ್ಪರ್ಯವುಳ್ಳ ವಾಗಿ ಕಾಣುತ್ತಿವೆ.[2] ಅವಕ್ಕೆ ಅನುರೂಪವಾಗಿರುವ ಫಲಗಳನ್ನೇ ಎಲ್ಲೆಲ್ಲಿಯೂ (೧೦ರಿಂದ ೧೩ರವರೆಗೂ) ಬೇರೆಬೇರೆಯಾಗಿ ಹೇಳಿರುತ್ತದೆ. ಅರ್ಥವಾದವಾಗಿದ್ದರೆ ಇದು ಹೊಂದಿಕೆಯಾಗುವದಿಲ್ಲ.

(ಆಕ್ಷೇಪ) :- ಹಾಗಾದರೆ 'ಇಷ್ಟರಿಂದ ಅರಿತಂತೆ ಆಗುವದಿಲ್ಲ' ಎಂದು ಹೇಳಿರುವದು ಹೇಗೆ (ಸರಿ) ?

(ಪರಿಹಾರ) :- ಇದೇನೂ ದೋಷವಲ್ಲ. ಏಕೆಂದರೆ (ಇದು ಇನ್ನೂ) ಹೆಚ್ಚಿನ (ಬ್ರಹ್ಮವನ್ನು ಹೇಳುವದರ) ಅಪೇಕ್ಷೆಯಿಂದ (ಹೇಳಿದ್ದಾಗಿದೆ. ಇದರ ವಿವರ) : ಬ್ರಹ್ಮವನ್ನು ಉಪದೇಶಮಾಡುವದಕ್ಕೆಂದಲ್ಲವೆ, ಕೇಳುವ ಅಜಾತ ಶತ್ರುವಿಗೆ ಅಮುಖ್ಯಬ್ರಹ್ಮವನ್ನರಿತಿದ್ದ ಗಾರ್ಗ್ಯನು ಹೊರಟಿರುತ್ತಾನೆ? ಮುಖ್ಯ ಬ್ರಹ್ಮವನ್ನು ಅರಿತುಕೊಂಡಿರುವ ಅಜಾತಶತ್ರುವು ಅಮುಖ್ಯಬ್ರಹ್ಮಜ್ಞಾನಿಯಾದ ಆ ಗಾರ್ಗ್ಯನಿಗೆ "ಮುಖ್ಯವಾದ ಬ್ರಹ್ಮವನ್ನು ಹೇಳುವೆನೆಂದು ನೀನು ಹೊರ ಟಿರುವೆ, (ಆದರೆ) ಅದನ್ನು ಅರಿಯೆ" ಎಂದು ಹೇಳಿರುವದು ಯುಕ್ತವೇ (ಆಗಿದೆ). ಅಮುಖ್ಯಬ್ರಹ್ಮವಿಜ್ಞಾನವನ್ನೂ ತಿರಸ್ಕಾರಮಾಡುವದಾಗಿದ್ದರೆ 'ಇಷ್ಟ ರಿಂದ' ಎಂದು ಹೇಳುತ್ತಲಿರಲಿಲ್ಲ; 'ನಿನಗೆ ಏನೂ ತಿಳಿಯದು' ಎಂದೇ ರೀತಿ ಯಲ್ಲೇ ಹೇಳುತ್ತಿದ್ದನು. ಆದ್ದರಿಂದ ಅವಿದ್ಯಾವಿಷಯದಲ್ಲಿ ಇವೂ ಬ್ರಹ್ಮ ಗಳಾಗಿರುತ್ತವೆ. **ಇಷ್ಟರ ವಿಜ್ಞಾನವು ಪರಬ್ರಹ್ಮವಿಜ್ಞಾನಕ್ಕೆ ದ್ವಾರ ವಾಗಿರುವದರಿಂದಲೂ, ಇಷ್ಟರಿಂದಲೇ ಅರಿತಂತಾಗುವದಿಲ್ಲ ಎಂದು ಹೇಳಿದ್ದು ಯುಕ್ತವೇ ಆಗಿರುತ್ತದೆ.[3] ಅವಿದ್ಯಾವಿಷಯದಲ್ಲಿ ಇವು- ಅರಿಯತಕ್ಕವೇ ಎಂದೂ (ಇವು) ನಾಮರೂಪಕರ್ಮಾತ್ಮಕವಾಗಿರುವ ವೆಂದೂ ಮೂರನೆಯ ಅಧ್ಯಾಯದಲ್ಲಿ ತಿಳಿಸಿದ್ದಾಗಿದೆ. ಆದ್ದರಿಂದ**

---

1. ಮುಖ್ಯಬ್ರಹ್ಮವಿದ್ಯೆಯನ್ನು ಹೊಗಳುವದಕ್ಕೆ ಬಂದವೆ.

2. ಅಪೂರ್ವತ್ವವು, ಎಂದರೆ ಮತ್ತೊಂದು ವಚನದಿಂದ ಪ್ರಾಪ್ತವಾಗದಿರುವದನ್ನು ಹೇಳುವದೆಂಬುದು, ಶ್ರುತಿಯ ತಾತ್ಪರ್ಯಕ್ಕೆ ಒಂದು ಲಿಂಗವು.

3. ಉಪಾಸನೆಯೂ ಬ್ರಹ್ಮಜ್ಞಾನಕ್ಕೆ ದ್ವಾರವೆಂದು ಅರ್ಥ; ಅದೊಂದೇ ದ್ವಾರ ವೆಂದೇನೂ ಅಭಿಪ್ರಾಯವಲ್ಲ.

**'ಇಷ್ಟರಿಂದ ಅರಿತಂತಾಗುವದಿಲ್ಲ' ಎಂದು ಹೇಳಿದ್ದರಿಂದ (ಇದಕ್ಕಿಂತ) ಹೆಚ್ಚಿನ ಬ್ರಹ್ಮವು ಇದೆ ಎಂದು ತಿಳಿಸಿದಂತೆ ಆಯಿತು.**

ಅದನ್ನು ಉಪಸನ್ನನಲ್ಲದವನಿಗೆ ಹೇಳಬಾರದಾದ್ದರಿಂದ ಆಚಾರಪ್ರಕಾರವನ್ನು[1] ಬಲ್ಲ ಗಾರ್ಗ್ಯನು "ನಿನ್ನನ್ನು (ಶಿಷ್ಯನಾಗಿ) ಬಳಿಸಾರಿರುವೆನು, ಮತ್ತೆ ಯಾರಾದರೊಬ್ಬ ಶಿಷ್ಯನು ಗುರುವಿನ ಬಳಿಗೆ ಬರುವಂತೆ ನಿನ್ನ ಹತ್ತಿರ ಶಿಷ್ಯನಾಗಿ ಬಂದಿರುವೆನು ಎಂದು ತಾನೇ ಹೇಳಿಕೊಂಡಿರುತ್ತಾನೆ.

## ಅಜಾತಶತ್ರುವು ಸುಪ್ತಪುರುಷನ ದೃಷ್ಟಾಂತವನ್ನು ಕೊಟ್ಟದ್ದು

(ಉಪನಿಷತ್ತು)

**ಸ ಹೋವಾಚಾಜಾತಶತ್ರುಃ ಪ್ರತಿಲೋಮಂ ಚೈತದ್ಯದ್ಬ್ರಾಹ್ಮಣಃ ಕ್ಷತ್ರಿಯಮುಪೇಯಾದ್ಬ್ರಹ್ಮ ಮೇ ವಕ್ಷ್ಯತೀತಿ ವ್ಯೇವ ತ್ವಾ ಜ್ಞಪಯಿಷ್ಯಾಮೀತಿ ತಂ ಪಾಣಾವಾದಾಯೋತ್ತಸ್ಥೌ ತೌ ಹ ಪುರುಷಗ್ಂ ಸುಪ್ತಮಾಜಗ್ಮತುಸ್ತಮೇತೈರ್ನಾಮಭಿರಾಮನ್ತ್ರಯಾಂಚಕ್ರೇ ಬೃಹನ್ ಪಾಣ್ಡರವಾಸಃ ಸೋಮರಾಜನ್ನಿತಿ ಸ ನೋತ್ತಸ್ಥೌ ತಂ ಪಾಣಿನಾಽಽಪೇಷಂ ಬೋಧಯಾಂಚಕಾರ ಸ ಹೋತ್ತಸ್ಥೌ ॥ ೧೫ ॥**

೧೫. ಆ ಅಜಾತಶತ್ರುವಿಂತೆಂದನು: "ನನಗೆ ಬ್ರಹ್ಮವನ್ನು ಹೇಳಲಿ ಎಂದು ಬ್ರಾಹ್ಮಣನು ಕ್ಷತ್ರಿಯನ ಬಳಿಗೆ (ಶಿಷ್ಯನಾಗಿ) ಬರುವದೆಂಬುದಿದು ಪ್ರತಿಲೋಮವು. ನಿನಗೆ ವಿಜ್ಞಾಪನೆಯನ್ನೇ ಮಾಡಿಕೊಳ್ಳುವೆನು." ಅವನನ್ನು ಕೈಹಿಡಿದುಕೊಂಡು ಎದ್ದನು. ಅವರಿಬ್ಬರೂ ಸುಪ್ತಪುರುಷನಲ್ಲಿಗೆ ಬಂದರು. ಅವನನ್ನು "ಬೃಹನ್, ಪಾಂಡರವಾಸ, ಸೋಮರಾಜನೆ'' ಎಂಬೀ ನಾಮಗಳಿಂದ ಕರೆದನು. ಅವನು ಏಳಲಿಲ್ಲ. ಅವನನ್ನು ಕೈಯಿಂದ ಹೊರಳಿಸಿ ಎಚ್ಚರಿಸಿದನು, ಅವನು ಎದ್ದನು.

## ಕ್ಷತ್ರಿಯಗುರುವಿನಲ್ಲಿ ಬ್ರಾಹ್ಮಣಶಿಷ್ಯನ ಆಚಾರಕ್ರಮ

(ಭಾಷ್ಯ)

**೨೭೭. ಸ ಹೋವಾಚ ಅಜಾತಶತ್ರುಃ। ಪ್ರತಿಲೋಮಂ ವಿಪರೀತಂ ಚ ಏತತ್। ಕಿಂ ತತ್ ? ಯದ್ ಬ್ರಾಹ್ಮಣಃ ಉತ್ತಮವರ್ಣಃ ಆಚಾರ್ಯತ್ವೇ ಅಧಿಕೃತಃ ಸನ್ ಕ್ಷತ್ರಿಯಮ್ ಅನಾಚಾರ್ಯಸ್ವಭಾವಮ್ ಉಪೇಯಾತ್ ಉಪ**

---

1. **ಕೇಳದೆ ಇರುವವನಿಗೂ ಅನ್ಯಾಯದಿಂದ ಕೇಳುವವನಿಗೂ ತತ್ತ್ವವನ್ನು ಹೇಳಬಾರದು- ಎಂದು ಸ್ಮೃತಿಯಿದೆ.**

ಗಚ್ಛೇತ್ ಶಿಷ್ಯವೃತ್ತ್ಯಾ ಬ್ರಹ್ಮ ಮೇ ವಕ್ಷ್ಯತೀತಿ। ಏತತ್ ಆಚಾರವಿಧಿಶಾಸ್ತ್ರೇಷು ನಿಷಿದ್ಧಮ್ । ತಸ್ಮಾತ್ ತಿಷ್ಠ ತ್ವಮ್ ಆಚಾರ್ಯ ಏವ ಸನ್ । ವಿಜ್ಞಾಪಯಿಷ್ಯಾಮ್ಯೇವ ತ್ವಾಮ್ ಅಹಮ್ ಯಸ್ಮಿನ್ ವಿದಿತೇ ಬ್ರಹ್ಮ ವಿದಿತಂ ಭವತಿ, ಯತ್[1] ತನ್ಮುಖ್ಯಂ ಬ್ರಹ್ಮ ವೇದ್ಯಮ್ ॥

(ಭಾಷ್ಯಾರ್ಥ)

ಆ ಅಜಾತಶತ್ರುವಿಂತೆಂದನು: "ಆದರೆ ಇದು ಪ್ರತಿಲೋಮವು, ವಿಪರೀತವು. ಇದು ಎಂದರೆ ಯಾವದು? ಎಂದರೆ, ಉತ್ತಮವರ್ಣದವನಾದ ಬ್ರಾಹ್ಮಣನು, ಆಚಾರ್ಯನಾಗುವದಕ್ಕೆ ಅಧಿಕಾರಿಯಾಗಿರುವವನು, ಆಚಾರ್ಯಸ್ವಭಾವದವನಲ್ಲದ ಕ್ಷತ್ರಿಯನ ಬಳಿಗೆ 'ನನಗೆ ಬ್ರಹ್ಮವನ್ನು ಹೇಳಲಿ' ಎಂದು ಶಿಷ್ಯವೃತ್ತಿಯಿಂದ ಬರುವದೆಂಬುದು ಆಚಾರವಿಧಿಶಾಸ್ತ್ರಗಳಲ್ಲಿ ನಿಷಿದ್ಧವಾಗಿರುತ್ತದೆ.[2] ಆದ್ದರಿಂದ ನೀನು ಆಚಾರ್ಯನಾಗಿಯೇ ಇರು, ನಾನು ನಿನಗೆ ಯಾವದನ್ನು ಅರಿತುಕೊಂಡರೆ ಬ್ರಹ್ಮವನ್ನು ಅರಿತಂತಾಗುವದೋ ಆ ವೇದ್ಯವಾದ ಮುಖ್ಯಬ್ರಹ್ಮವನ್ನು[3] ವಿಜ್ಞಾಪನೆಯನ್ನೇ ಮಾಡಿಕೊಳ್ಳುವೆನು".

## ಸುಪ್ತಪುರುಷನನ್ನು ಎಚ್ಚರಿಸಿದ್ದು

(ಭಾಷ್ಯ)

೨೭೮. ತಂ ಗಾರ್ಗ್ಯಂ ಸಲಜ್ಜಮ್ ಆಲಕ್ಷ್ಯ ವಿಸ್ರಮ್ಭಜನನಾಯ ಪಾಣೌ ಹಸ್ತೇ ಆದಾಯ ಗೃಹೀತ್ವಾ ಉತ್ತಸ್ಥೌ ಉತ್ಥಿತವಾನ್ । ತೌ ಹ ಗಾರ್ಗ್ಯಾಜಾತಶತ್ರೂ ಪುರುಷಂ ಸುಪ್ತಂ ರಾಜಗೃಹಪ್ರದೇಶೇ ಕ್ವಚಿತ್ ಆಜಗ್ಮತುಃ ಆಗತೌ। ತಂ ಚ ಪುರುಷಂ ಸುಪ್ತಂ ಪ್ರಾಪ್ಯ ಏತೈರ್ನಾಮಭಿಃ, ಬೃಹನ್, ಪಾಣ್ಡುರವಾಸಃ, ಸೋಮರಾಜನ್ನಿತ್ಯೇತೈಃ, ಆಮನ್ತ್ರಯಾಂಚಕ್ರೇ। ಏವಮ್ ಆಮನ್ತ್ರ್ಯಮಾಣೋಽಪಿ ಸ ಸುಪ್ತಃ ನೋತ್ತಸ್ಥೌ । ತಮ್ ಅಪ್ರತಿಬುಧ್ಯಮಾನಂ ಪಾಣಿನಾ ಆಪೇಷಮ್ ಆಪಿಷ್ಯ ಆಪಿಷ್ಯ ಬೋಧಯಾಂಚಕಾರ ಪ್ರತಿಬೋಧಿತವಾನ್। ತೇನ ಸ ಹೋತ್ತಸ್ಥೌ ॥

---

1. ಈಮಾತು ಇಲ್ಲದಿದ್ದರೂ ಸಾಗುತ್ತದೆ; ಅನುವಾದದ ಟಿಪ್ಪಣಿಯನ್ನು ನೋಡಿ.

2. ಆಪತ್ಕಾಲದಲ್ಲಿ ಹೊರತು ಬ್ರಾಹ್ಮಣನು ಕೆಳಗಿನ ವರ್ಣದವರಿಂದ ತತ್ತ್ವವನ್ನು ತಿಳಿದುಕೊಳ್ಳಬೇಕೆಂದು ಶಿಷ್ಯನಾಗಿ ಹೋಗಬಾರದು. ಅಬ್ರಾಹ್ಮಣನಲ್ಲಿ ಶಿಷ್ಯವೃತ್ತಿ ಹೇಗೆಂಬುದಕ್ಕೆ ಮನು. ೨-೨೪೧, ೨೪೨ ನೋಡಿ.

3. ಇದುವರೆಗೂ ಬಾಲಾಕಿಯು ಹೇಳಿದ ಬ್ರಹ್ಮಗಳು ಸಗುಣಬ್ರಹ್ಮಗಳು, ಮುಖ್ಯಬ್ರಹ್ಮವಲ್ಲ ಎಂದು ಅಭಿಪ್ರಾಯ. ಯತ್ ಎಂಬ ಶಬ್ದಕ್ಕೂ ಅರ್ಥವು ಬೇಕಾದರೆ ಯಾವದು ಆ ಮುಖ್ಯಬ್ರಹ್ಮವೋ ಅದನ್ನು ಎಂದು ಕನ್ನಡಿಸಿಕೊಳ್ಳಬೇಕು.

(ಭಾಷ್ಯಾರ್ಥ)

ಆ ಗಾರ್ಗ್ಯನು ನಾಚಿಕೆಯಿಂದ ಕೂಡಿರುವದನ್ನು ಕಂಡು ವಿಶ್ವಾಸವನ್ನುಂಟುಮಾಡುವದಕ್ಕಾಗಿ (ಅವನನ್ನು) ಕೈಯಲ್ಲಿ ತೆಗೆದುಕೊಂಡು, ಎಂದರೆ ಕೈಹಿಡಿದುಕೊಂಡು, ಎದ್ದನು, ಎದ್ದುನಿಂತನು. ಆ ಗಾರ್ಗ್ಯಜಾತಶತ್ರು(ಗಳಿಬ್ಬರೂ) ಅರಮನೆಯ ಒಂದಾನೊಂದು ಪ್ರದೇಶದಲ್ಲಿ ನಿದ್ರಿಸುತ್ತಿದ್ದ ಪುರುಷನಲ್ಲಿಗೆ ಬಂದರು, ಬಂದು ಸೇರಿದರು. ಆ ಸುಪ್ತಪುರುಷನನ್ನು ಸೇರಿ ಈ ನಾಮಗಳಿಂದ 'ಬೃಹನ್, ಪಾಂಡರವಾಸ, ಸೋಮರಾಜನ್' ಎಂಬೀ (ನಾಮಗಳಿಂದ) (ಕೂಗಿ) ಕರೆದನು. ಹೀಗೆ ಕರೆದರೂ ಆ ನಿದ್ರಿಸಿದವನು ಏಳಲಿಲ್ಲ. ಎಚ್ಚರದೆ ಇದ್ದ ಅವನನ್ನು ಕೈಯಿಂದ ಹೊರಳಿಸಿ ಹೊರಳಿಸಿ ಎಚ್ಚರಿಸಿದನು, ಎಚ್ಚರಗೊಳಿಸಿದನು. ಅದರಿಂದ ಅವನು ಎದ್ದನು.

## ಗಾರ್ಗ್ಯನು ಹೇಳಿದ ಪ್ರಾಣನು ಬ್ರಹ್ಮವಲ್ಲವೆಂಬುದು ಹೇಗೆ?

### ಆತ್ಮನು ದ್ರಷ್ಟೃವೇ, ದೃಶ್ಯನಲ್ಲ

(ಭಾಷ್ಯ)

೧೭೯. ತಸ್ಮಾತ್ ಯೋ ಗಾರ್ಗ್ಯೇಣ ಅಭಿಪ್ರೇತೋ ನಾಸಾವಸ್ಮಿನ್ ಶರೀರೇ ಕರ್ತಾ ಭೋಕ್ತಾ ಬ್ರಹ್ಮೇತಿ। ಕಥಂ ಪುನರಿದಮ್ ಅವಗಮ್ಯತೇ ಸುಪ್ತಪುರುಷಗಮನತತ್ಸಂಬೋಧನಾನುತ್ಥಾನೈಃ ಗಾರ್ಗ್ಯಾಭಿಮತಸ್ಯ ಬ್ರಹ್ಮಣೋಽಬ್ರಹ್ಮತ್ವಂ ಜ್ಞಾಪಿತಮ್ ಇತಿ? ಜಾಗರಿತಕಾಲೇ ಯೋ ಗಾರ್ಗ್ಯಾಭಿಪ್ರೇತಃ ಪುರುಷಃ ಕರ್ತಾ ಭೋಕ್ತಾ ಬ್ರಹ್ಮ ಸಂನಿಹಿತಃ ಕರಣೇಷು ಯಥಾ, ತಥಾ ಅಜಾತಶತ್ರ್ವಭಿಪ್ರೇತೋಽಪಿ ತತ್ಸ್ವಾಮೀ ಭೃತ್ಯೇಷ್ವಿವ ರಾಜಾ ಸಂನಿಹಿತ ಏವ। ಕಿಂ ತು ಭೃತ್ಯಸ್ವಾಮಿನೋಃ ಗಾರ್ಗ್ಯಾಜಾತಶತ್ರ್ವಭಿಪ್ರೇತಯೋಃ ಯದ್ವಿವೇಕಾವಧಾರಣಕಾರಣಂ ತತ್ ಸಂಕೀರ್ಣತ್ವಾತ್ ಅನವಧಾರಿತವಿಶೇಷಮ್। ಯದ್ ದ್ರಷ್ಟೃತ್ವಮೇವ ಭೋಕ್ತುಃ ನ ದೃಶ್ಯತ್ವಮ್, ಯಚ್ಚ ಅಭೋಕ್ತುಃ ದೃಶ್ಯತ್ವಮೇವ ನ ತು ದ್ರಷ್ಟೃತ್ವಮ್, ತಚ್ಚ ಉಭಯಮಿಹ ಸಂಕೀರ್ಣತ್ವಾತ್ ವಿವಿಚ್ಯ ದರ್ಶಯಿತುಮಶಕ್ಯಮ್ ಇತಿ ಸುಪ್ತಪುರುಷಗಮನಮ್ ॥

(ಭಾಷ್ಯಾರ್ಥ)

ಆದ್ದರಿಂದ ಗಾರ್ಗ್ಯನು ಅಭಿಪ್ರಾಯಪಟ್ಟಿದ್ದನಲ್ಲ, ಆ (ಪ್ರಾಣನು) ಈ ಶರೀರದಲ್ಲಿ ಕರ್ತೃವೂ ಭೋಕ್ತೃವೂ ಆಗಿರುವ ಬ್ರಹ್ಮವಲ್ಲ ಎಂದು (ನಿಶ್ಚಯವಾಯಿತು)[1].

---

1. ಕರಣಗಳಲ್ಲೆಲ್ಲ ಇದ್ದುಕೊಂಡು ಪ್ರಾಣನೇ ಈ ಸಂಘಾತದಲ್ಲಿ ಕರ್ತೃಭೋಕ್ತೃವಾಗಿರುವ ಬ್ರಹ್ಮ ಎಂಬುದು ಗಾರ್ಗ್ಯನ ಮತವು; ಆ ಕರಣಗಳಿಗೂ ಪ್ರಾಣನಿಗೂ ಒಡೆಯನಾದವನೇ ಕರ್ತೃಭೋಕ್ತೃವು, ಅವನ ಪರಮಾರ್ಥಸ್ವರೂಪವೇ ಮುಖ್ಯಬ್ರಹ್ಮವು ಎಂಬುದು ಅಜಾತಶತ್ರುವಿನ ಮತವು.

(ಆಕ್ಷೇಪ) :- ಆದರೆ ಸುಪ್ತಪುರುಷನ ಬಳಿಗೆ ಬಂದದ್ದು, ಅವನನ್ನು ಕರೆದದ್ದು, ಅವನು ಏಳದೆ ಇದ್ದದ್ದು- ಇವುಗಳಿಂದ ಗಾರ್ಗ್ಯನಿಗೆ ಅಭಿಮತವಾಗಿದ್ದ ಬ್ರಹ್ಮವು ಬ್ರಹ್ಮವಲ್ಲವೆಂದು ತಿಳಿಸಿದಂತಾಯಿತೆಂದು ಹೇಗೆ ಗೊತ್ತಾಯಿತು ?

(ಪರಿಹಾರ):- ಎಚ್ಚರದ ಕಾಲದಲ್ಲಿ ಗಾರ್ಗ್ಯನ ಅಭಿಪ್ರಾಯದಲ್ಲಿ ಕರ್ತೃವೂ ಭೋಕ್ತೃವೂ ಬ್ರಹ್ಮವೂ ಆಗಿದ್ದ ಪುರುಷನು ಹೇಗೆ ಕರಣಗಳಲ್ಲಿ ಹತ್ತಿರವಿರುತ್ತಾನೋ, ಹಾಗೆಯೇ ಅಜಾತಶತ್ರುವಿಗೆ ಅಭಿಪ್ರೇತನಾಗಿದ್ದ ಆ (ಪ್ರಾಣನ) ಸ್ವಾಮಿಯೂ ಭೃತ್ಯರಿರುವಲ್ಲಿ ರಾಜನೂ ಇರುವಂತೆ ಹತ್ತಿರವೇ ಇದ್ದುಕೊಂಡಿರುತ್ತಾನೆ ಆದರೆ ಗಾರ್ಗ್ಯನ ಮತ್ತು ಅಜಾತಶತ್ರುವಿನ ಅಭಿಪ್ರಾಯದಂತೆ (ಬ್ರಹ್ಮವಾಗಿರುವ) ಆಳುಧಣಿಗಳಿಬ್ಬರನ್ನೂ ವಿಂಗಡಿಸಿ ಅರಿಯುವದಕ್ಕೆ ಕಾರಣವಿದೆಯಲ್ಲ, ಅದು ಸಂಕೀರ್ಣವಾಗಿರುವದರಿಂದ (ಇಂಥದ್ದು ಇಂಥದ್ದೆಂದು) ವಿಶೇಷವನ್ನು (ಅಲ್ಲಿ) ನಿರ್ಧಾರಮಾಡಲಾಗುವದಿಲ್ಲ.[1] (ಇದರ ವಿವರ) **ಭೋಕ್ತೃವಾಗಿರುವವನು ದ್ರಷ್ಟೃವೇ ಹೊರತು ದೃಶ್ಯವಲ್ಲ, ಅಭೋಕ್ತೃವಾಗಿರುವದು ದೃಶ್ಯವೇ ಹೊರತು ದ್ರಷ್ಟೃವಲ್ಲ; ಈ ಎರಡೂ ಈ (ಎಚ್ಚರದಲ್ಲಿ) ಸಂಕೀರ್ಣವಾಗಿರುವದರಿಂದ (ಅವನ್ನು) ವಿಂಗಡಿಸಿ ತೋರಿಸುವದು ಅಶಕ್ಯವೆಂದು ಸುಪ್ತಪುರುಷನ ಬಳಿಗೆ ಬಂದದ್ದಾಗಿದೆ.**

## ತನ್ನ ನಾಮಗಳನ್ನು ಅರಿತುಕೊಳ್ಳಲಾರದ ಪ್ರಾಣನು ಭೋಕ್ತೃವಲ್ಲ

(ಭಾಷ್ಯ)

೨೮೦. ನನು ಸುಪ್ತೇಽಪಿ ಪುರುಷೇ ವಿಶಿಷ್ಟೈರ್ನಾಮಭಿರಾಮನ್ತ್ರಿತೋ ಭೋಕ್ತೈವ ಪ್ರತಿಪತ್ಸ್ಯತೇ ನಾಭೋಕ್ತಾ ಇತಿ ನೈವ ನಿರ್ಣಯಃ ಸ್ಯಾತ್ ಇತಿ । ನ। ನಿರ್ಧಾರಿತವಿಶೇಷತ್ವಾತ್ ಗಾರ್ಗ್ಯಾಭಿಪ್ರೇತಸ್ಯ। ಯೋ ಹಿ ಸತ್ಯೇನ ಛನ್ನಃ ಪ್ರಾಣಃ ಆತ್ಮಾ ಅಮೃತಃ ವಾಗಾದಿಷು ಅನಸ್ತಮಿತೋ ನಿಮ್ಲೋಚತ್ಸು, ಯಸ್ಯ ಆಪಃ ಶರೀರಂ ಪಾಣ್ಡರವಾಸಾಃ ಯಶ್ಚ ಅಸಪತ್ನತ್ವಾತ್ ಬೃಹನ್, ಯಶ್ಚ ಸೋಮೋ ರಾಜಾ ಷೋಡಶಕಲಃ, ಸ ಸ್ವವ್ಯಾಪಾರಾರೂಢೋ ಯಥಾನಿರ್ಜ್ಞಾತ ಏವ ಅನಸ್ತಮಿತಸ್ವಭಾವ ಆಸ್ತೇ । ನ ಚ ಅನ್ಯಸ್ಯ ಕಸ್ಯಚಿತ್ ವ್ಯಾಪಾರಸ್ತಸ್ಮಿನ್ ಕಾಲೇ ಗಾರ್ಗ್ಯೇಣ ಅಭಿಪ್ರೇಯತೇ ತದ್ವಿರೋಧಿನಃ। ತಸ್ಮಾತ್ ಸ್ವನಾಮಭಿರಾಮನ್ತ್ರಿತೇನ ಪ್ರತಿಬೋದ್ಧವ್ಯಮ್। ನ ಚ ಪ್ರತ್ಯ

1. ಭೋಕ್ತೃವಾದ ಆತ್ಮನೂ ಭೋಜ್ಯನಾದ ಪ್ರಾಣನೂ ಒಂದೇ ಕಡೆಯಲ್ಲಿ ಬೆರೆತುಕೊಂಡಿರುವದರಿಂದ ಕರ್ತೃಭೋಕ್ತೃವು ಯಾರು? ಕರಣಗಳು ದೇವತೆಗಳೋ, ಆತ್ಮನೋ?- ಎಂಬುದು ಗೊತ್ತಾಗುವಂತಿರಲಿಲ್ಲ.

ಬುಧ್ಯೇತ। ತಸ್ಮಾತ್ ಪಾರಿಶೇಷ್ಯಾತ್ ಗಾರ್ಗ್ಯಾಭಿಪ್ರೇತಸ್ಯ ಅಭೋಕ್ತೃತ್ವಂ ಬ್ರಹ್ಮಣಃ। ಭೋಕ್ತೃಸ್ವಭಾವಶ್ಚೇತ್ ಭುಞ್ಜೀತೈವ ಸ್ವಂ ವಿಷಯಂ ಪ್ರಾಪ್ತಮ್। ನ ಹಿ ದಗ್ಧೃಸ್ವಭಾವಃ ಪ್ರಕಾಶಯಿತೃಸ್ವಭಾವ(ಶ್ಚ)[1] ಸನ್ ವಹ್ನಿಃ ತೃಣೋಲಪಾದಿ ದಾಹ್ಯಂ ಸ್ವವಿಷಯಂ ಪ್ರಾಪ್ತಂ ನ ದಹತಿ ಪ್ರಕಾಶ್ಯಂ ವಾ ನ ಪ್ರಕಾಶಯತಿ। ನ ಚೇದ್ದಹತಿ ಪ್ರಕಾಶಯತಿ ವಾ ಪ್ರಾಪ್ತಂ ಸ್ವಂ ವಿಷಯಮ್ ನಾಸೌ ವಹ್ನಿಃ ದಗ್ಧಾ ಪ್ರಕಾಶಯಿತಾ ವಾ ಇತಿ ನಿಶ್ಚೀಯತೇ। ತಥಾ ಅಸೌ ಪ್ರಾಪ್ತಶಬ್ದಾದಿವಿಷಯೋಪಲಬ್ಧೃಸ್ವಭಾವಶ್ಚೇತ್ ಗಾರ್ಗ್ಯಾಭಿಪ್ರೇತಃ ಪ್ರಾಣೋ ಬೃಹನ್ ಪಾಣ್ಡರವಾಸಃ ಇತ್ಯೇವಮಾದಿಶಬ್ದಂ ಸ್ವಂ ವಿಷಯಮ್ ಉಪಲಭೇತ। ಯಥಾ ಪ್ರಾಪ್ತಂ ತೃಣೋಲಪಾದಿ ವಹ್ನಿರ್ದಹೇತ್ ಪ್ರಕಾಶಯೇಚ್ಚ ಅವ್ಯಭಿಚಾರೇಣ, ತದ್ವತ್। ತಸ್ಮಾತ್ ಪ್ರಾಪ್ತಾನಾಂ ಶಬ್ದಾದೀನಾಮ್ ಅಪ್ರತಿಬೋಧಾತ್ ಅಭೋಕ್ತೃಸ್ವಭಾವಃ ಇತಿ ನಿಶ್ಚೀಯತೇ। ನ ಹಿ ಯಸ್ಯ ಯಃ ಸ್ವಭಾವೋ ನಿಶ್ಚಿತಃ ಸ ತಂ ವ್ಯಭಿಚರತಿ ಕದಾಚಿದಪಿ। ಅತಃ ಸಿದ್ಧಂ ಪ್ರಾಣಸ್ಯ ಅಭೋಕ್ತೃತ್ವಮ್। ಸಂಬೋಧನಾರ್ಥನಾಮವಿಶೇಷೇಣ ಸಂಬನ್ಧಾಗ್ರಹಣಾತ್ ಅಪ್ರತಿಬೋಧಃ ಇತಿ ಚೇತ್। ಸ್ಯಾದೇತತ್। ಯಥಾ ಬಹುಷು ಆಸೀನೇಷು ಸ್ವನಾಮವಿಶೇಷೇಣ ಸಂಬನ್ಧಾಗ್ರಹಣಾತ್ ಮಾಮ್ ಅಯಂ ಸಂಬೋಧಯತಿ ಇತಿ ಶೃಣ್ವನ್ನಪಿ ಸಂಬೋಧ್ಯಮಾನೋ ವಿಶೇಷತೋ ನ ಪ್ರತಿಪದ್ಯತೇ। ತಥಾ ಇಮಾನಿ ಬೃಹನ್ ಇತ್ಯೇವಮಾದೀನಿ ಮಮ ನಾಮಾನಿ ಇತ್ಯಗೃಹೀತಸಂಬನ್ಧತ್ವಾತ್ ಪ್ರಾಣೋ ನ ಗೃಹ್ಣಾತಿ ಸಂಬೋಧನಾರ್ಥಂ ಶಬ್ದಮ್, ನ ತು ಅವಿಜ್ಞಾತೃತ್ವಾದೇವ ಇತಿ ಚೇತ್। ನ ದೇವತಾಭ್ಯುಪಗಮೇ ಅಗ್ರಹಣಾನುಪಪತ್ತೇಃ। ಯಸ್ಯ ಹಿ ಚನ್ದ್ರಾದ್ಯಭಿಮಾನಿನೀ ದೇವತಾ ಅಧ್ಯಾತ್ಮಂ ಪ್ರಾಣೋ ಭೋಕ್ತಾ ಅಭ್ಯುಪಗಮ್ಯತೇ ತಸ್ಯ ತಯಾ ಸಂವ್ಯವಹಾರಾಯ ವಿಶೇಷನಾಮ್ನಾ ಸಂಬನ್ಧೋಽವಶ್ಯಂ ಗ್ರಹೀತವ್ಯಃ। ಅನ್ಯಥಾ ಆಹ್ವಾನಾದಿವಿಷಯೇ ಸಂವ್ಯವಹಾರೋಽನುಪಪನ್ನಃ ಸ್ಯಾತ್॥

(ಭಾಷ್ಯಾರ್ಥ)

(ಆಕ್ಷೇಪ):- ಸುಪ್ತಪುರುಷನಲ್ಲಾದರೂ ಅಸಾಧಾರಣನಾಮಗಳಿಂದ ಕರೆದರೆ (ಅದನ್ನು) ಭೋಕ್ತೃವೇ ಅರಿತುಕೊಳ್ಳಬಲ್ಲನು, ಭೋಕ್ತೃವಲ್ಲದವನು (ಅರಿತು) ಕೊಳ್ಳಲಾರನು. ಅಲ್ಲಿಯೂ ನಿರ್ಣಯವಾಗುವದೇ ಇಲ್ಲವಲ್ಲ!

(ಪರಿಹಾರ):- ಹಾಗಲ್ಲ. ಏಕೆಂದರೆ ಗಾರ್ಗ್ಯನಿಗೆ ಇಷ್ಟವಾಗಿರುವ (ಬ್ರಹ್ಮದ) ವಿಶೇಷವನ್ನು ಗೊತ್ತುಮಾಡಿದ್ದಾಗಿದೆ. (ಇದರ ವಿವರ): ಯಾವನು ಸತ್ಯದಿಂದ ಮರೆಯಾಗಿರುವ ಅಮೃತನಾಗಿರುವ (೧-೬-೩) ಆತ್ಮನೋ, ವಾಗಾದಿ

1. ಇಲ್ಲೊಂದು ಚ ಬೇಕೆಂದು ಇಟ್ಟುಕೊಂಡಿದೆ.

ಗಳು ಅಸ್ತವಾದರೂ ಅಸ್ತವಾಗದಿರುವವನೋ (೧-೫-೨೧, ೨೨), ಯಾವನಿಗೆ ಅಪ್ಪು ಶರೀರವೋ, ಮತ್ತು ಯಾವನು ಪಾಂಡರವಾಸನೋ, ತನಗೆ ಸಪತ್ನರಿಲ್ಲದ್ದ ರಿಂದ ಬೃಹನ್ ಎನಿಸಿಕೊಂಡಿರುವನೋ (೨-೧-೩), ಮತ್ತು ಯಾವನು ಸೋಮ ರಾಜನೋ (೨-೧-೩), ಷೋಡಶಕಲನೋ (೧-೫-೧೪, ೧೫,) ಆ ಪ್ರಾಣನು ತನ್ನ ವ್ಯಾಪಾರವನ್ನು ಮಾಡುತ್ತಾ (ಹಿಂದೆ) ನಿರ್ಣೀತವಾಗಿರುವ ರೂಪದಿಂದಲೇ, (ತನ್ನ) ಸ್ವಭಾವವು ಅಸ್ತಮಿತವಾಗದೆ (ಈಗಲೂ) ಇರುತ್ತಾನೆ. ಅಲ್ಲಿ ಅವನಿಗೆ ವಿರೋಧಿಯಾದ ಮತ್ತೆ ಯಾವದರ ವ್ಯಾಪಾರವಾದರೂ ಇದೆಯೆಂದು ಗಾರ್ಗ್ಯನು ಅಭಿಪ್ರಾಯಪಟ್ಟಿರುವದಿಲ್ಲ.[1] ಆದ್ದರಿಂದ ತನ್ನ ನಾಮಗಳಿಂದ ಕರೆದಾಗ (ಅವನು) ತಿಳಿದುಕೊಳ್ಳಬೇಕಾಗಿತ್ತು. ಆದರೆ ತಿಳಿದುಕೊಳ್ಳಲಿಲ್ಲ. ಆದ್ದರಿಂದ ಗಾರ್ಗ್ಯನಿಗೆ ಅಭಿಪ್ರೇತವಾಗಿರುವ ಬ್ರಹ್ಮವು ಭೋಕ್ತೃವಲ್ಲ ಎಂದು ಪಾರಿಶೇಷ್ಯ ದಿಂದ ಸಿದ್ಧವಾಯಿತು.

(ಪ್ರಾಣನು) ಭೋಕ್ತೃಸ್ವಭಾವವವನಾದರೆ ಒದಗಿಬಂದ ತನ್ನ ವಿಷಯ ವನ್ನು ಅವಶ್ಯವಾಗಿ ಭೋಗಮಾಡಬೇಕು.[2] ಸುಡುವ ಸ್ವಭಾವದ್ದೂ ಬೆಳಗುವ ಸ್ವಭಾವದ್ದೂ ಆಗಿರುವ ಬೆಂಕಿಯು ಕಡ್ಡಿ, ಹುಲ್ಲು- ಮುಂತಾದ ತನ್ನ ವಿಷಯವು ಒದಗಿಬಂದರೆ ಅದನ್ನು ಸುಡುವದಿಲ್ಲವೆಂಬುವೂ ಇಲ್ಲ. ಬೆಳಗತಕ್ಕದ್ದನ್ನು ಬೆಳಗು ವದಿಲ್ಲವೆಂಬುದೂ ಇಲ್ಲ. ಅಲ್ಲವೆ? ಒದಗಿದ ತನ್ನ ವಿಷಯವನ್ನು ಸುಡದೆ ಅಥವಾ ಬೆಳಗದೆ ಇದ್ದರೆ ಈ ಬೆಂಕಿಯು ಸುಡುವದಲ್ಲ ಅಥವಾ ಬೆಳಗುವದಲ್ಲ ಎಂದೇ ನಿಶ್ಚಯವಾಗುತ್ತದೆ. ಅದರಂತೆ ಈ ಗಾರ್ಗ್ಯಾಭಿಪ್ರೇತನಾದ ಪ್ರಾಣನು ಒದಗಿದ ಶಬ್ದಾದಿವಿಷಯಗಳನ್ನು ಅರಿಯುವ ಸ್ವಭಾವದವನಾದರೆ ಬೃಹನ್, ಪಾಂಡರ ವಾಸ- ಎಂಬಿವೇ ಮುಂತಾದ ತನ್ನ ವಿಷಯವಾದ ಶಬ್ದವನ್ನು, ಒದಗಿದ ಕಡ್ಡಿ, ಹುಲ್ಲು- ಮುಂತಾದದ್ದನ್ನು ಬೆಂಕಿಯು ಹೇಗೆ ತಪ್ಪದೆ ಸುಡುವದೋ ಅಥವಾ ಬೆಳಗುವದೋ ಹಾಗೆ, ಅರಿತುಕೊಳ್ಳಬೇಕಾಗಿತ್ತು.[3] ಆದ್ದರಿಂದ ಒದಗಿಬಂದ ಶಬ್ದಾದಿಗಳನ್ನು ಅರಿತುಕೊಳ್ಳದ್ದರಿಂದಲೂ (ಅವನು) ಭೋಕ್ತೃಸ್ವಭಾವದವನಲ್ಲ ಎಂದು ನಿಶ್ಚಯವಾಯಿತು. ಯಾವದು ಯಾವದರ ಸ್ವಭಾವವೆಂದು ನಿಶ್ಚಯ ವಾಗಿರುತ್ತದೆಯೋ ಅದು ಆ ಸ್ವಭಾವವನ್ನು, ಎಂದಿಗೂ ತಪ್ಪಿಹೋಗುವದಿಲ್ಲ ವಷ್ಟೆ. ಆದ್ದರಿಂದ ಪ್ರಾಣನು ಭೋಕ್ತೃವಲ್ಲ ಎಂದಾಯಿತು.[4]

---

1. ಏಕೆಂದರೆ ಮಿಕ್ಕೆಲ್ಲದರ ವ್ಯಾಪಾರವೂ ಅಲ್ಲಿ ಇಲ್ಲವಾಗಿಬಿಟ್ಟಿದೆಯೆಂಬುದು ಅವನಿಗೆ ಒಪ್ಪಾಗಿದೆ.

2. ತನ್ನ ಹೆಸರಿದೆಂದು ಅರಿತುಕೊಳ್ಳಬೇಕು.

3. ಅಂತಃಕರಣ, ಇಂದ್ರಿಯ- ಇವುಗಳಲ್ಲೆಲ್ಲ ಪ್ರಾಣನ ವ್ಯಾಪಾರವಿರುತ್ತದೆ, ಆ ಪ್ರಾಣನೇ ಗ್ರಹಿಸುವ ಸ್ವಭಾವದವನು-ಎನ್ನುವದಾದರೆ ಸುಷುಪ್ತಿಯಲ್ಲಿ ಪ್ರಾಣನಿರುವದ ರಿಂದ ಅಲ್ಲಿಯೂ ಗ್ರಹಿಸಬೇಕು ಎಂದರ್ಥ.

4. ಶಬ್ದಾದಿಗಳನ್ನು ಅರಿಯುವ ಆತ್ಮನು ಪ್ರಾಣನಿಗಿಂತಲೂ ಬೇರೆಯಾಗಿದ್ದಾನೆ ಎಂದಾಯಿತು ಎಂದರ್ಥ.

(ಆಕ್ಷೇಪ) :- ಕರೆಯುವದಕ್ಕಾಗಿ (ಉಪಯೋಗಿಸಿದ) ನಾಮವಿಶೇಷಕ್ಕೂ (ತನಗೂ) ಸಂಬಂಧವನ್ನು ಗ್ರಹಿಸದೆ ಇರುವದರಿಂದ ತಿಳಿದುಕೊಳ್ಳಲಿಲ್ಲ. (ಇದರ ವಿವರ) : ಹೇಗೆ ಬಹುಜನರು ಕುಳಿತಿರುವಲ್ಲಿ ತನ್ನ ಗೊತ್ತಾದ ನಾಮ ವಿಶೇಷಕ್ಕೂ (ತನಗೂ) ಸಂಬಂಧವನ್ನು ಗ್ರಹಿಸದೆ ಇರುವದರಿಂದ, ನನ್ನನ್ನು ಇವನು ಕರೆಯುತ್ತಿದಾನೆ ಎಂದು – ಕರೆಯಿಸಿಕೊಂಡವನು (ಮಾತನ್ನು) ಕೇಳಿದರೂ –ವಿಶೇಷವಾಗಿ ಅರಿತುಕೊಳ್ಳದೆ ಇರುವನೋ ಹಾಗೆ ಈ ಬೃಹನ್ ಮುಂತಾದವು ನನ್ನ ಹೆಸರುಗಳು ಎಂದು ಸಂಬಂಧವನ್ನು ಗ್ರಹಿಸದೆ ಇರುವದರಿಂದ ಪ್ರಾಣನು ಈ ಕರೆಯುವದಕ್ಕಾಗಿ (ಉಪಯೋಗಿಸಿದ) ಶಬ್ದವನ್ನು ಗ್ರಹಿಸದೆ ಇರುತ್ತಾನೆಯೇ ಹೊರತು (ಅವನು) ವಿಜ್ಞಾತೃವಲ್ಲವೆಂಬ ಕಾರಣದಿಂದಲೇ ಅಲ್ಲ.

(ಪರಿಹಾರ) :- ಹಾಗಲ್ಲ. ಏಕೆಂದರೆ ದೇವತೆ ಎಂದು ಒಪ್ಪಿರುವಾಗ ಅಗ್ರಹಣವು ಹೊಂದುವದಿಲ್ಲ. (ಇದರ ವಿವರ): ಯಾವನ (ಮತದಲ್ಲಿ) ಚಂದ್ರಾದ್ಯಭಿಮಾನಿಯಾದ[1] ದೇವತೆಯೇ ಅಧ್ಯಾತ್ಮವಾಗಿ ಪ್ರಾಣನೆಂಬ ಭೋಕ್ತೃವಾಗಿರುತ್ತಾನೆ ಎಂದು ಒಪ್ಪಿರುತ್ತದೆಯೋ ಅವನ (ಮತದಲ್ಲಿ) ಆ (ದೇವತೆಯು) ವ್ಯವಹಾರಕ್ಕಾಗಿ ವಿಶೇಷನಾಮಕ್ಕೂ (ತನಗೂ) ಸಂಬಂಧವನ್ನು ಅವಶ್ಯವಾಗಿ ಗ್ರಹಿಸಲೇಬೇಕು. ಹಾಗಿಲ್ಲದಿದ್ದರೆ ಆಹ್ವಾನವೇ ಮುಂತಾದ ವಿಷಯದಲ್ಲಿ ವ್ಯವಹಾರಮಾಡುವದು ಅಯುಕ್ತವಾದೀತು.[2]

## ಆತ್ಮನನ್ನು ಕರೆದರೆ ಅರಿಯುವದಿಲ್ಲವೇಕೆ?

(ಭಾಷ್ಯ)

೨೮೧. ವ್ಯತಿರಿಕ್ತಪಕ್ಷೇಽಪಿ ಅಪ್ರತಿಪತ್ತೇಃ ಅಯುಕ್ತಮ್ ಇತಿ ಚೇತ್ ।

---

1. ಇಲ್ಲಿ 'ಚಂದ್ರಾಭಿಮಾನಿನೀ' ಎಂಬ ಪಾಠವೂ ಉಂಟು. ಆಚಾರ್ಯರು ಚಂದ್ರಾಭಿಮಾನಿಯಾದ ವಿಶೇಷಣಗಳನ್ನೇ (ಭಾ. ಭಾ. ೨೭೯ರಲ್ಲಿ) ಉದಾಹರಿಸಿರುವದರಿಂದ ಅದೇ ಪಾಠವೇ ಸರಿಯಾದದ್ದೆಂದು ಹೇಳುವದಕ್ಕೂ ಅವಕಾಶವಿದೆ. ಪ್ರಾಣ, ಚಂದ್ರ, ಅಪ್ಪು- ಈ ಮೂರರ ದೇವತೆಯೂ ಒಂದೆಂದು (೧-೬-೧೩) ಹಿಂದೆ ಹೇಳಿರುವದರಿಂದ ಚಂದ್ರನಾಮಗಳಿಂದ ಪ್ರಾಣನನ್ನು ಕರೆಯುವದೂ ತಪ್ಪಲ್ಲ. ಅಥವಾ ಬೃಹನ್ ಮುಂತಾದ ನಾಮಗಳು ಚಂದ್ರನವೇ ಆದರೂ ಇಲ್ಲಿ ಹೇಳದೆ ಇರುವ ಆದಿತ್ಯಾದಿಸರ್ವದೇವತಾನಾಮಗಳಿಗೂ ಇದು ಉಪಲಕ್ಷಣವೆಂದೂ ಭಾವಿಸಬಹುದು. ಬೃ. ವಾ. ೨-೧-೧೧೦,೧೧೧ ನೋಡಿ. ಹೇಗೂ ಇಲ್ಲಿ ಹೇಳಿರುವದು ಸಮಷ್ಟಿಪ್ರಾಣದೇವತೆಯೇ ಎಂಬುದು ವಿವಕ್ಷಿತ.

2. ಏಕೆಂದರೆ ಆಗ ದೇವತೆಯನ್ನು ಆಹ್ವಾನಮಾಡಿದರೂ ಅದಕ್ಕೆ ಅದರ ಗ್ರಹಣವಾಗುವದಿಲ್ಲ ಎಂಬ ಅನಿಷ್ಟವು ಬಂದೊದಗುತ್ತದೆ ಎಂದು ಅಭಿಪ್ರಾಯ.

ಯಸ್ಯ ಚ ಪ್ರಾಣವ್ಯತಿರಿಕ್ತೋ ಭೋಕ್ತಾ ತಸ್ಯಾಪಿ ಬೃಹನ್ ಇತ್ಯಾದಿನಾಮಭಿಃ ಸಂಬೋಧನೇ ಬೃಹತ್ತ್ವಾದಿನಾಮ್ನಾಂ ತದಾ ತದ್ವಿಷಯತ್ವಾತ್ ಪ್ರತಿಪತ್ತಿರ್ಯುಕ್ತಾ। ನ ಚ ಕದಾಚಿದಪಿ ಬೃಹತ್ತ್ವಾದಿಶಬ್ದೈಃ ಸಂಬೋಧಿತಃ ಪ್ರತಿಪದ್ಯಮಾನೋ ದೃಶ್ಯತೇ। ತಸ್ಮಾತ್ ಅಕಾರಣಮ್ ಅಭೋಕ್ತೃತ್ವೇ ಸಂಬೋಧನಾಪ್ರತಿಪತ್ತಿಃ ಇತಿ ಚೇತ್। ನ। ತದ್ವತಸ್ತಾವನ್ಮಾತ್ರಾಭಿಮಾನಾನುಪಪತ್ತೇಃ। ಯಸ್ಯ ಪ್ರಾಣವ್ಯತಿರಿಕ್ತೋ ಭೋಕ್ತಾ ಸ ಪ್ರಾಣಾದಿಕರಣವಾನ್ ಪ್ರಾಣೇ ತಸ್ಯ ನ ಪ್ರಾಣದೇವತಾಮಾತ್ರೇ ಅಭಿಮಾನಃ, ಯಥಾ ಹಸ್ತೇ। ತಸ್ಮಾತ್ ಪ್ರಾಣನಾಮಸಂಬೋಧನೇ ಕೃತ್ಸ್ನಾಭಿಮಾನಿನೋ ಯುಕ್ತೈವ ಅಪ್ರತಿಪತ್ತಿಃ। ನ ತು ಪ್ರಾಣಸ್ಯ ಅಸಾಧಾರಣನಾಮಸಂಯೋಗೇ। ದೇವತಾತ್ಮತ್ವಾನಭಿಮಾನಾಚ್ಚ ಆತ್ಮನಃ। ಸ್ವನಾಮಪ್ರಯೋಗೇಽಪಿ ಅಪ್ರತಿಪತ್ತಿದರ್ಶನಾತ್ ಅಯುಕ್ತಮ್ ಇತಿ ಚೇತ್। ಸುಷುಪ್ತಸ್ಯ ಯಲ್ಲೌಕಿಕಂ ದೇವದತ್ತಾದಿನಾಮ ತೇನಾಪಿ ಸಂಬೋಧ್ಯಮಾನಃ ಕದಾಚಿತ್ ನ ಪ್ರತಿಪದ್ಯತೇ ಸುಷುಪ್ತಃ। ತಥಾ ಭೋಕ್ತಾಪಿ ಸನ್ ಪ್ರಾಣೋ ನ ಪ್ರತಿಪದ್ಯತ ಇತಿ ಚೇತ್। ನ। ಆತ್ಮಪ್ರಾಣಯೋಃ ಸುಪ್ತಾಸುಪ್ತತ್ವವಿಶೇಷೋಪಪತ್ತೇಃ। ಸುಷುಪ್ತತ್ವಾತ್ ಪ್ರಾಣಗ್ರಸ್ತತಯಾ ಉಪರತಕರಣ ಆತ್ಮಾ ಸ್ವನಾಮ ಪ್ರಯುಜ್ಯಮಾನಮಪಿ ನ ಪ್ರತಿಪದ್ಯತೇ। ನ ತು ತದಸುಪ್ತಸ್ಯ ಪ್ರಾಣಸ್ಯ ಭೋಕ್ತೃತ್ವೇ ಉಪರತಕರಣತ್ವಂ ಸಂಬೋಧನಾಗ್ರಹಣಂ ವಾ ಯುಕ್ತಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- (ಪ್ರಾಣ)ವ್ಯತಿರಿಕ್ತ(ನಾದ ಭೋಕ್ತೃ)ವಿರುವನೆಂಬವನ ಪಕ್ಷವಲ್ಲಿಯೂ ಅರಿವಾಗುವದಿಲ್ಲವಾದ್ದರಿಂದ (ಇದು) ಅಯುಕ್ತ. (ಇದರ ವಿವರ): ಯಾವನ (ಮತದಲ್ಲಿ) ಪ್ರಾಣವ್ಯತಿರಿಕ್ತನಾದ ಭೋಕ್ತೃವಿರುವನೋ ಅವನ (ಪಕ್ಷದಲ್ಲಿ)ಯೂ ಬೃಹನ್ ಮುಂತಾದ ನಾಮಗಳಿಂದ ಕರೆದಾಗ ಬೃಹನ್ ಮುಂತಾದ ಹೆಸರುಗಳು ಆಗ ಅವನ ವಿಷಯವಾಗಿರುವದರಿಂದ (ಅದರ) ಅರಿವಾಗುವದು ಯುಕ್ತ. ಆದರೆ ಬೃಹನ್ ಮುಂತಾದ ಶಬ್ದಗಳಿಂದ ಕರೆದರೆ ಅರಿಯುತ್ತಾನೆಂದು ಯಾವಾಗಲೂ ಕಂಡುಬಂದಿರುವದಿಲ್ಲ. ಆದ್ದರಿಂದ ಕರೆದದ್ದನ್ನು ಅರಿತುಕೊಳ್ಳಲಿಲ್ಲವೆಂಬುದು (ಪ್ರಾಣನು) ಭೋಕ್ತೃವಲ್ಲವೆಂಬುದಕ್ಕೆ ಕಾರಣವಲ್ಲ.

(ಪರಿಹಾರ) :- ಹಾಗಲ್ಲ- ಏಕೆಂದರೆ ಆ (ಪ್ರಾಣವುಳ್ಳವನಿಗೆ) ಅಷ್ಟುಮಾತ್ರದಲ್ಲಿ ಅಭಿಮಾನ(ವಿರುವದೆಂಬುದು ಹೊಂದುವದಿಲ್ಲ. (ಇದರ ವಿವರ) : ಯಾವನ (ಮತದಲ್ಲಿ) ಪ್ರಾಣವ್ಯತಿರಿಕ್ತನೇ ಭೋಕ್ತೃವೋ, (ಅವನ ಮತದಲ್ಲಿ) ಅವನು ಪ್ರಾಣವೇ ಮುಂತಾದ ಕರಣವುಳ್ಳ ಪ್ರಾಣಿಯು. ಅವನಿಗೆ ಕೈಯಲ್ಲಿ

(ನಾನೆಂಬ ಅಭಿಮಾನವು ಹೇಗಿರಲಾರದೋ) ಹಾಗೆ ಪ್ರಾಣದೇವತಾಮಾತ್ರದಲ್ಲಿ ಅಭಿಮಾನ(ವಿರಲಾರದು). ಆದ್ದರಿಂದ ಪ್ರಾಣನಾಮದಿಂದ ಕರೆದರೆ ಪೂರ್ಣಾಭಿಮಾನಿಯಾದ (ಆತ್ಮನಿಗೆ) ಅರಿವಾಗದಿರುವದು ಯುಕ್ತವೇ. ಆದರೆ ಪ್ರಾಣನಿಗೆ (ತನ್ನ) ಅಸಾಧಾರಣನಾಮದ ಸಂಬಂಧವಾದರೆ (ಅರಿವಾಗದಿರುವದು ಯುಕ್ತ) ವಾಗುವದಿಲ್ಲ. ಆತ್ಮನಿಗೆ (ತಾನು) ದೇವತಾತ್ಮನು ಎಂಬ ಅಭಿಮಾನವಿಲ್ಲದ್ದರಿಂದಲೂ (ಅವನಿಗೆ ಅರಿವಾಗುವ ಕಾರಣವಿಲ್ಲ).

(ಆಕ್ಷೇಪ) :- ತನ್ನ ಹೆಸರನ್ನು ಪ್ರಯೋಗಿಸಿದರೂ ಅರಿಯದೆ ಇರುವದು ಕಂಡುಬರುವದರಿಂದ (ಇದು) ಸರಿಯಲ್ಲ. (ಇದರ ವಿವರ) : ನಿದ್ರಿಸುತ್ತಿರುವವನಿಗೆ ದೇವದತ್ತನೇ ಮುಂತಾದ ಲೌಕಿಕನಾಮವಿರುವದಷ್ಟೆ, ಆ (ಹೆಸರಿನಿಂದ) ಕರೆದರೂ ಸುಷುಪ್ತನಾದವನು ಒಂದೊಂದು ವೇಳೆ ಅರಿತುಕೊಳ್ಳದೆ ಇರುತ್ತಾನೆ. ಅದರಂತೆ ಪ್ರಾಣನು ಭೋಕ್ತೃವಾದರೂ ಅರಿತುಕೊಳ್ಳುವದಿಲ್ಲ (ಎನ್ನಬಹುದಲ್ಲ)!

(ಪರಿಹಾರ) :- ಹಾಗಲ್ಲ. ಆತ್ಮ, ಪ್ರಾಣ- ಇವರುಗಳಿಗೆ ಸುಪ್ತತ್ವ, ಅಸುಪ್ತತ್ವ ಎಂಬ ವಿಶೇಷವಿರಬಹುದಾಗಿದೆ. (ಇದರ ವಿವರ) : ಆತ್ಮನು ಸುಪ್ತನಾಗಿರುವಾಗ ಪ್ರಾಣಗ್ರಸ್ತವಾಗಿರುವದರಿಂದ ಕರಣಗಳು ಸುಮ್ಮನಿರುವದರಿಂದ (ಅವನು) ತನ್ನ ಹೆಸರನ್ನು ಪ್ರಯೋಗಿಸಿದರೂ ಅರಿತುಕೊಳ್ಳದೆ ಇರುತ್ತಾನೆ. ಆದರೆ ಪ್ರಾಣನು ಭೋಕ್ತೃವಾದರೆ (ಅವನು) ಸುಪ್ತನಲ್ಲದೆ ಇರುವದರಿಂದ ಹಾಗೆ ಕರಣಗಳು ಸುಮ್ಮನಿರುವದಾಗಲಿ ಕರೆದದ್ದನ್ನು ಅರಿತುಕೊಳ್ಳದೆ ಇರುವದಾಗಲಿ ಯುಕ್ತವಾಗುವದಿಲ್ಲ.

## ಅಪ್ರಸಿದ್ಧನಾಮಗಳಿಂದ ಕರೆದದ್ದು ಸರಿಯೆ ?

(ಭಾಷ್ಯ)

೩೮೨. ಅಪ್ರಸಿದ್ಧನಾಮಭಿಃ ಸಂಬೋಧನಮ್ ಅಯುಕ್ತಮ್ ಇತಿ ಚೇತ್ । ಸನ್ತಿ ಹಿ ಪ್ರಾಣವಿಷಯಾಣಿ ಪ್ರಸಿದ್ಧಾನಿ ಪ್ರಾಣಾದಿನಾಮಾನಿ । ತಾನಿ ಅಪೋಹ್ಯ ಅಪ್ರಸಿದ್ಧೈಃ ಬೃಹತ್ತ್ವಾದಿನಾಮಭಿಃ ಸಂಬೋಧನಮ್ ಅಯುಕ್ತಮ್ । ಲೌಕಿಕನ್ಯಾಯಾಪೋಹಾತ್ । ತಸ್ಮಾತ್ ಭೋಕ್ತುರೇವ ಸತಃ ಪ್ರಾಣಸ್ಯ ಅಪ್ರತಿಪತ್ತಿಃ ಇತಿ ಚೇತ್ । ನ । ದೇವತಾಪ್ರತ್ಯಾಖ್ಯಾನಾರ್ಥತ್ವಾತ್ । ಕೇವಲಸಂಬೋಧನಮಾತ್ರಾಪ್ರತಿಪತ್ತ್ಯೈವ ಅಸುಪ್ತಸ್ಯ ಆಧ್ಯಾತ್ಮಿಕಸ್ಯ ಪ್ರಾಣಸ್ಯ ಅಭೋಕ್ತೃತ್ವೇ ಸಿದ್ಧೇ ಯಚ್ಚನ್ದ್ರದೇವತಾವಿಷಯೈಃ ನಾಮಭಿಃ ಸಂಬೋಧನಂ ತಚ್ಚನ್ದ್ರದೇವತಾ ಪ್ರಾಣೋಽಸ್ಮಿನ್ ಶರೀರೇ ಭೋಕ್ತಾ ಇತಿ ಗಾರ್ಗ್ಯಸ್ಯ ವಿಶೇಷಪ್ರತಿಪತ್ತಿನಿರಾಕರಣಾರ್ಥಮ್ । ನ ಹಿ ತತ್ ಲೌಕಿಕನಾಮ್ನಾ ಸಂಬೋಧನೇ ಶಕ್ಯಂ ಕರ್ತುಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಅಪ್ರಸಿದ್ಧವಾದ ಹೆಸರುಗಳಿಂದ ಕರೆದದ್ದು ಅಯುಕ್ತ. (ಇದರ ವಿವರ): ಪ್ರಾಣದ ವಿಷಯದಲ್ಲಿ ಪ್ರಾಣವೇ ಮುಂತಾದ ಪ್ರಸಿದ್ಧವಾದ ಹೆಸರುಗಳು ಇರುತ್ತವಲ್ಲವೆ? ಅದನ್ನು ಬಿಟ್ಟು ಅಪ್ರಸಿದ್ಧವಾದ ಬೃಹತ್ ಮುಂತಾದ ಹೆಸರುಗಳಿಂದ ಕರೆದದ್ದು ಅಯುಕ್ತವು ; ಏಕೆಂದರೆ (ಈ ಪಕ್ಷದಲ್ಲಿ) ಲೌಕಿಕ ನ್ಯಾಯವನ್ನು ಬಿಟ್ಟಂತೆ ಆಗಿರುತ್ತದೆ. ಆದ್ದರಿಂದ ಪ್ರಾಣನು ಭೋಕ್ತೃವೇ ಆಗಿದ್ದರೂ ಅರಿತುಕೊಳ್ಳಲಿಲ್ಲ.

(ಪರಿಹಾರ) :- ಹಾಗಲ್ಲ. ಏಕೆಂದರೆ (ಅದು) ದೇವತೆಯನ್ನು ತಿರಸ್ಕರಿಸುವದಕ್ಕಾಗಿ (ಮಾಡಿದ್ದು). ಬರಿಯ ಸಂಬೋಧನಮಾತ್ರವನ್ನು ಅರಿತುಕೊಳ್ಳುವದಿಲ್ಲವೆಂಬುದರಿಂದಲೇ ಸುಪ್ತನಲ್ಲದ ಆಧ್ಯಾತ್ಮಿಕಪ್ರಾಣನು ಭೋಕ್ತೃವಲ್ಲ ಎಂಬುದು ಸಿದ್ಧವಾಗುತ್ತಿರುವಲ್ಲಿ ಚಂದ್ರದೇವತಾವಿಷಯವಾದ[1] ನಾಮಗಳಿಂದ ಕರೆದದ್ದಿದೆಯಲ್ಲ, ಅದು ಚಂದ್ರದೇವತೆಯಾದ ಪ್ರಾಣನು ಈ ಶರೀರದಲ್ಲಿ ಭೋಕ್ತೃವು ಎಂಬ ಗಾರ್ಗ್ಯನ ವಿಶೇಷಜ್ಞಾನವನ್ನು ತಳ್ಳಿಹಾಕುವದಕ್ಕೆ. ಲೌಕಿಕನಾಮಗಳಿಂದ ಕರೆದಿದ್ದರೆ ಅದನ್ನು ಮಾಡುವದು ಆಗುತ್ತಲೇ ಇರಲಿಲ್ಲ.

## ಕರಣಾಂತರಗಳೂ ದೇವತಾಂತರಗಳೂ ಭೋಕ್ತೃವಲ್ಲ

(ಭಾಷ್ಯ)

೨೮೩. ಪ್ರಾಣಪ್ರತ್ಯಾಖ್ಯಾನೇನೈವ ಪ್ರಾಣಗ್ರಸ್ತತ್ವಾತ್ ಕರಣಾನ್ತರಾಣಾಂ ಪ್ರವೃತ್ತ್ಯನುಪಪತ್ತೇಃ ಭೋಕ್ತೃತ್ವಾಶಙ್ಕಾನುಪಪತ್ತಿಃ। ದೇವತಾನ್ತರಾಭಾವಾಚ್ಚ। ನ[2]। ಅತಿಷ್ಠಾ ಇತ್ಯಾದ್ಯಾತ್ಮನ್ವೀ ಇತ್ಯನ್ತೇನ ಗ್ರನ್ಥೇನ ಗುಣವದ್ದೇವತಾಭೇದಸ್ಯ ದರ್ಶಿತತ್ವಾತ್ ಇತಿ ಚೇತ್। ನ। ತಸ್ಯ ಪ್ರಾಣ ಏವ ಏಕತ್ವಾಭ್ಯುಪಗಮಾತ್ ಸರ್ವಶ್ರುತಿಷು ಅರನಾಭಿನಿದರ್ಶನೇನ। "ಸತ್ಯೇನ ಛನ್ನಃ, ಪ್ರಾಣೋ ವಾ ಅಮೃತಮ್" (೧-೬-೩) ಇತಿ ಚ। ಪ್ರಾಣಬಾಹ್ಯಸ್ಯ ಅನ್ಯಸ್ಯ ಅನಭ್ಯುಪಗಮಾತ್ ಭೋಕ್ತುಃ। "ಏಷ ಉ ಹ್ಯೇವ ಸರ್ವೇ ದೇವಾಃ" (೧-೪-೬), "ಕತಮ ಏಕೋ ದೇವ ಇತಿ ಪ್ರಾಣಃ"(೩-೯-೯) ಇತಿ ಚ ಸರ್ವದೇವಾನಾಂ ಪ್ರಾಣೇ ಏವ ಏಕತ್ವೋಪಪಾದನಾಚ್ಚ। ತಥಾ ಕರಣಭೇದೇಷು ಅನಾಶಙ್ಕಾ। ದೇಹಭೇದೇ

1. ಭಾ.ಭಾ. ೨೭೯ರಲ್ಲಿ 'ಚನ್ದ್ರಾಭಿಮಾನಿನೀ' ಎಂಬ ಪಾಠವೇ ಭಾಷ್ಯಸಮ್ಮತವೆನ್ನುವವರಿಗೆ ಪ್ರಕೃತಭಾಷ್ಯವು ಒಂದು ಗಮಕವಾಗಿರುತ್ತದೆ. ೪೪೪ನೆಯ ಪುಟದಲ್ಲಿರುವ 1ನೆಯ ಟಿಪ್ಪಣಿಯನ್ನು ನೋಡಿ.

2. ನನು ಎಂಬುದನ್ನು ಹೀಗೆ ತಿದ್ದುಕೊಂಡಿದೆ. ನನು ಇದ್ದರೆ ದರ್ಶಿತತ್ವಾತ್ ಯುಕ್ತಮ್ ಎಂಬ ಪಾಠವನ್ನೇ ಅಂಗೀಕರಿಸಬೇಕಾಗುವದು ; ಅನುವಾದವನ್ನೂ ಅದರ ಟಿಪ್ಪಣಿಯನ್ನೂ ನೋಡಿರಿ.

ಷ್ವೇವ ಸ್ಮೃತಿಜ್ಞಾನೇಚ್ಛಾದಿಪ್ರತಿಸಂಧಾನಾನುಪಪತ್ತೇಃ । ನ ಹಿ ಅನ್ಯದೃಷ್ಟಮ್ ಅನ್ಯಃ ಸ್ಮರತಿ, ಜಾನಾತಿ, ಇಚ್ಛತಿ, ಪ್ರತಿಸಂದಧಾತಿ ವಾ । ತಸ್ಮಾತ್ ನ ಕರಣಭೇದವಿಷಯೋ ಭೋಕ್ತೃತ್ವಾಶಙ್ಕಾ ವಿಜ್ಞಾನಮಾತ್ರವಿಷಯಾ ವಾ ಕದಾಚಿದಪಿ ಉಪಪದ್ಯತೇ ॥

(ಭಾಷ್ಯಾರ್ಥ)

ಪ್ರಾಣವನ್ನು ತಳ್ಳಿಹಾಕಿದ್ದರಿಂದಲೇ ಕರಣಾಂತರಗಳೂ (ಆಗ) ಪ್ರಾಣಗ್ರಸ್ತವಾಗಿರುವದರಿಂದ ಪ್ರವರ್ತಿಸುವದು ಹೊಂದುವದಿಲ್ಲವಾದ್ದರಿಂದ (ಅವು) ಭೋಕ್ತೃವೆಂಬ ಶಂಕೆಯು ಹೊಂದುವದಿಲ್ಲ, ಮತ್ತೊಂದು ದೇವತೆಯು ಇಲ್ಲದ್ದರಿಂದ (ಯಾವದಾದರೊಂದು ದೇವತೆಯು ಭೋಕ್ತೃವಾಗಬಹುದೆಂಬ ಶಂಕೆಯೂ ಹೊಂದುವದಿಲ್ಲ).[1]

(ಆಕ್ಷೇಪ) :- ಹಾಗಲ್ಲ. ಏಕೆಂದರೆ 'ಆತಿಷ್ಠಾಃ' (೨-೧-೨) ಎಂಬುದರಿಂದ ಹಿಡಿದು 'ಆತ್ಮನ್ಯೇ' (೨-೧-೧೩) ಎಂಬವರೆಗಿನ ಗ್ರಂಥದಿಂದ ಬೇರೆಬೇರೆ ಗುಣಗಳುಳ್ಳ ಬೇರೆಬೇರೆಯ ದೇವತೆಯನ್ನು ತಿಳಿಸಿರುತ್ತದೆ.[2]

(ಪರಿಹಾರ) :- ಹಾಗಲ್ಲ. ಏಕೆಂದರೆ ಆ (ದೇವತಾಭೇದವು) ಪ್ರಾಣನಲ್ಲಿಯೇ ಒಂದಾಗಿರುವದೆಂದು ಹಾರೆಕೋಲುಗುಂಬಗಳ ದೃಷ್ಟಾಂತದಿಂದ ಸರ್ವಶ್ರುತಿಗಳಲ್ಲಿಯೂ[3] ಒಪ್ಪಿಗುತ್ತದೆ. "ಸತ್ಯದಿಂದ ಮರೆಯಾಗಿರುತ್ತದೆ. ಪ್ರಾಣವೇ ಅಮೃತವು" (೧-೫-೩) ಎಂದು (ಹೇಳಿರುವದರಿಂದಲೂ ಇದು ಸಿದ್ಧವಾಗುತ್ತದೆ).[4] ಪ್ರಾಣಗಿಂತ ಹೊರಚ್ಚಾದ ಮತ್ತೊಬ್ಬ ಭೋಕ್ತೃವನ್ನು, (ಪೂರ್ವಪಕ್ಷಿಯು) ಒಪ್ಪದ್ದರಿಂದಲೂ[5] (ಇದು ಸಿದ್ಧವಾಗಿರುತ್ತದೆ). "ಮತ್ತು ಇವನೇ ಎಲ್ಲ ದೇವತೆಗಳು" (೧-೪-೬) "ಒಬ್ಬನೇ ದೇವನೆಂದರೆ ಯಾರು ? ಪ್ರಾಣನು" (೩-೯-೯) ಎಂದು ದೇವತೆಗಳನ್ನೆಲ್ಲ ಪ್ರಾಣನಲ್ಲಿ ಒಂದೆಂದು ತೋರಿಸಿಕೊಟ್ಟಿರುವದರಿಂದ

---

1. ಪ್ರಾಣನೇ ಎಲ್ಲಾ ದೇವತೆಗಳ ಒಟ್ಟು; ಆದ್ದರಿಂದ ಪ್ರಾಣನು ಭೋಕ್ತೃವಲ್ಲ ವೆಂದದ್ದರಿಂದ ದೇವತೆಯು ಭೋಕ್ತೃ ಎನ್ನುವ ಪಕ್ಷವೂ ತಿರಸ್ಕೃತವಾಯಿತು. ಇದನ್ನು ಮುಂದೆ ವಿವರಿಸಲಾಗಿದೆ.

2. ನನು ಎಂಬ ಪಾಠವನ್ನೇ ಇಟ್ಟುಕೊಂಡರೆ 'ತಿಳಿಸಿರುವದರಿಂದ (ದೇವತೆಯು ಭೋಕ್ತೃವೆಂಬುದು) ಯುಕ್ತವಲ್ಲವೆ ?' ಎಂದು ಕನ್ನಡಿಸಬೇಕಾಗುವದು. ಆದರೆ ಈಗ ನಾವು ಇಟ್ಟುಕೊಂಡಿರುವ ಪಾಠವೇ ಸಾಕಾಗಿದೆ.

3. ಪ್ರ. ೨-೬, ಛಾಂ. ೭-೧೫-೧.

4. ಇಲ್ಲಿ ಪ್ರಾಣನೊಬ್ಬನನ್ನೇ ಅಮೃತನೆಂದು ಕರೆದು ಅವನೇ ಕರಣಾತ್ಮಕನೆಂದು ಹೇಳಿದೆ; ಏಿಕ್ಕ ದೇವತೆಗಳನ್ನು ಹೇಳಿರುವದಿಲ್ಲ.

5. ಪ್ರಾಣನೇ ಸಮಸ್ತವ್ಯಸ್ತರೂಪನು; ಅವನೇ ಈ ಶರೀರದಲ್ಲಿದ್ದುಕೊಂಡು ಕರ್ತೃಭೋಕ್ತೃವಾಗಿರುತ್ತಾನೆ ಎಂಬುದೇ ಪೂರ್ವಪಕ್ಷಿಯ ಮತ.

ಲೂ (ಹೀಗೆ).[1] ಹೀಗೆಯೇ ಬೇರೆಬೇರೆಯ ಕರಣಗಳಲ್ಲಿಯೂ ಭೋಕ್ತೃತ್ವ ಶಂಕೆಯಿರುವದಿಲ್ಲ. ಏಕೆಂದರೆ (ಅವುಗಳಲ್ಲಿ) ಬೇರೆಬೇರೆಯ ದೇಹಗಳಲ್ಲಿ ಹೇಗೋ ಹಾಗೆ ಸ್ಮೃತಿ, ಜ್ಞಾನ, ಇಚ್ಛೆ, ಪ್ರತಿಸಂಧಾನ–ಇವುಗಳು ಆಗಲಾರವು.[2] ಒಬ್ಬನು ಕಂಡದ್ದನ್ನು ಮತ್ತೊಬ್ಬನು ನೆನಪಿಗೆ ತಂದುಕೊಳ್ಳುವದಾಗಲಿ ಅರಿತುಕೊಳ್ಳುವದಾಗಲಿ, ಇಚ್ಛಿಸುವದಾಗಲಿ ಪ್ರತಿಸಂಧಾನಮಾಡುವದಾಗಲಿ ಆಗಲಾರದಷ್ಟೆ. ಆದ್ದರಿಂದ ಬೇರೆಬೇರೆಯ ಕರಣಗಳ ವಿಷಯದಲ್ಲಿ ಅಥವಾ ವಿಜ್ಞಾನಮಾತ್ರದ ವಿಷಯದಲ್ಲಾಗಲಿ[3] (ಅವು) ಭೋಕ್ತೃವೆಂಬ ಆಶಂಕೆಯು ಎಂದಿಗೂ ಯುಕ್ತವಾಗುವದಿಲ್ಲ.

## ಕಾರ್ಯಕರಣಸಂಘಾತವು ಭೋಕ್ತೃವಲ್ಲ

(ಭಾಷ್ಯ)

೨೮೪. ನನು ಸಂಘಾತ ಏವಾಸ್ತು ಭೋಕ್ತಾ ಕಿಂ ವ್ಯತಿರಿಕ್ತಕಲ್ಪನಯಾ ಇತಿ? ನ। ಆಪೇಷಣೇ ವಿಶೇಷದರ್ಶನಾತ್। ಯದಿ ಹಿ ಪ್ರಾಣಶರೀರಸಂಘಾತಮಾತ್ರೋ ಭೋಕ್ತಾ ಸ್ಯಾತ್ ಸಂಘಾತಮಾತ್ರಾವಿಶೇಷಾತ್ ಸದಾ ಆಪಿಷ್ಟಸ್ಯ ಅನಾಪಿಷ್ಟಸ್ಯ ಚ ಪ್ರತಿಬೋಧೇ ವಿಶೇಷೋ ನ ಸ್ಯಾತ್। ಸಂಘಾತವ್ಯತಿರಿಕ್ತೇ ತು ಪುನರ್ಭೋಕ್ತರಿ ಸಂಘಾತಸಂಬನ್ಧವಿಶೇಷಾನೇಕತ್ವಾತ್ ಪೇಷಣಾಪೇಷಣಕೃತವೇದನಾಯಾಃ ಸುಖದುಃಖಮೋಹಮಧ್ಯಮಾಧಮೋತ್ತಮಕರ್ಮಫಲಭೇದೋಪಪತ್ತೇಶ್ಚ ವಿಶೇಷೋ ಯುಕ್ತಃ। ನ ತು ಸಂಘಾತಮಾತ್ರೇ ಸಂಬನ್ಧಕರ್ಮಫಲಭೇದಾನುಪಪತ್ತೇರ್ವಿಶೇಷೋ ಯುಕ್ತಃ। ತಥಾ ಶಬ್ದಾದಿಪಟುಮಾನ್ದ್ಯಾದಿಕೃತಶ್ಚ। ಅಸ್ತಿ ಚಾಯಂ ವಿಶೇಷಃ, ಯಸ್ಮಾತ್ ಸ್ಪರ್ಶಮಾತ್ರೇಣ ಅಪ್ರತಿಬುಧ್ಯಮಾನಂ ಪುರುಷಂ ಸುಪ್ತಂ ಪಾಣಿನಾ ಆಪೇಷ

1. ಶಾಕಲ್ಯನು ದೇವತೆಗಳು ಎಷ್ಟು ಎಂದು ಪ್ರಾರಂಭಿಸಲು ೩೩೦೬ರಿಂದ ೧ರವರೆಗೂ ಕಡಿಮೆಮಾಡುತ್ತಾ ಬಂದು ಕೊನೆಯಲ್ಲಿ ಪ್ರಾಣನೊಬ್ಬನೇ ದೇವನು, ಮಿಕ್ಕವರೆಲ್ಲ ಅವನ ವಿಸ್ತರವೇ ಎಂದು ಯಾಜ್ಞವಲ್ಕ್ಯನು ಉತ್ತರಕೊಟ್ಟಿರುತ್ತಾನೆ.

2. ಈ ವಾಕ್ಯದ ಅಭಿಪ್ರಾಯವನ್ನು ಮುಂದಿನ ವಾಕ್ಯದಲ್ಲಿ ವಿವರಿಸಿದೆ, ಹೇಗೆ ಒಬ್ಬನಿಗೆ ಆದ ಅನುಭವದ ಸ್ಮೃತ್ಯಾದಿಗಳು ಮತ್ತೊಬ್ಬನಿಗೆ ಆಗಲಾರವೋ ಹಾಗೆಯೇ ಒಂದು ಕರಣವು ಅನುಭವಿಸಿದ್ದನ್ನು ಮತ್ತೊಂದು ಕರಣವು ಸ್ಮರಿಸುವದೇ ಮುಂತಾದದ್ದೆಂಬುದು ಆಗುವಂತಿಲ್ಲ. ಆ ಕರಣಗಳಲ್ಲೆಲ್ಲ ಅನುಗತವಾಗಿ ಒಬ್ಬನೇ ಭೋಕ್ತೃವಿದ್ದಾನೆ ಎಂದು ಒಪ್ಪಿದರೆ ಅವನು ಒಂದು ಕರಣದಿಂದ ಅನುಭವಿಸಿದ್ದನ್ನು ಮತ್ತೊಂದು ಕರಣದಿಂದ ಸ್ಮರಿಸುತ್ತಾನೆ ಎಂದುಮುಂತಾಗಿ ಹೇಳುವದಕ್ಕೆ ಬರುತ್ತದೆ ಎಂದರ್ಥ. ಪ್ರತಿಸಂಧಾನವೆಂದರೆ ಹಿಂದಿನದನ್ನೇ ಗುರುತಿಸಿ ಅರಿಯುವದು.

3. ಒಂದು ಕ್ಷಣಿಕವಿಜ್ಞಾನವು ಅರಿತದ್ದನ್ನು ಮತ್ತೊಂದು ವಿಜ್ಞಾನವು ಸ್ಮರಿಸುವದೇ ಮುಂತಾದದ್ದು ಆಗಲಾರದೆಂಬುದು ಸ್ಪಷ್ಟ.

ಮಾಪಿಷ್ಯಾಪಿಷ್ಯ ಬೋಧಯಾಂಚಕಾರ ಅಜಾತಶತ್ರುಃ। ತಸ್ಮಾತ್ ಯ ಆಪೇಷಣೇನ ಪ್ರತಿಬುಬುಧೇ ಜ್ವಲನ್ನಿವ ಸ್ಫುರನ್ನಿವ ಕುತಶ್ಚಿತ್ ಆಗತ ಇವ ಪಿಣ್ಡಂ ಚ ಪೂರ್ವವಿಪರೀತಂ ಬೋಧಚೇಷ್ಟಾಕಾರವಿಶೇಷಾದಿಮತ್ತ್ವೇನ ಆಪಾದಯನ್ ಸೋಽನ್ಯೋಽಸ್ತಿ ಗಾರ್ಗ್ಯಾಭಿಮತಬ್ರಹ್ಮಭ್ಯೋ ವ್ಯತಿರಿಕ್ತಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಸಂಘಾತವೇ ಭೋಕ್ತೃವಾಗಲಿ, (ಅದಕ್ಕಿಂತ) ಬೇರೆಯಾಗಿರುವ (ಭೋಕ್ತೃವನ್ನು) ಕಲ್ಪಿಸಿದ್ದರಿಂದ (ಆಗಬೇಕಾದದ್ದು) ಏನು ?

(ಪರಿಹಾರ) :- ಹಾಗಲ್ಲ. ಏಕೆಂದರೆ ಹೊರಳಿಸಿದ್ದರಲ್ಲಿ ವಿಶೇಷವು ಕಂಡುಬರುತ್ತದೆ. ಪ್ರಾಣಶರೀರಸಂಘಾತವೇ[1] ಭೋಕ್ತೃವಾಗಿದ್ದರೆ ಸಂಘಾತಮಾತ್ರವು (ಯಾವಾಗಲೂ) ಸಮಾನವಾಗಿರುವದರಿಂದ ಹೊರಳಿಸಲಿ ಹೊರಳಿಸದಿರಲಿ, ವಿಶೇಷವೇನೂ ಆಗುತ್ತಿರಲಿಲ್ಲ. ಸಂಘಾತಕ್ಕಿಂತ ಬೇರೆಯಾಗಿರುವ ಭೋಕ್ತೃ(ವಿರುವನೆಂಬ ನಮ್ಮ ಪಕ್ಷ)ದಲ್ಲಿಯಾದರೋ ಸಂಘಾತದಸಂಬಂಧವಿಶೇಷಗಳು ಅನೇಕವಾಗಿರುವದರಿಂದ ಹೊರಳಿಸುವದರಿಂದ ಅಥವಾ ಹೊರಳಿಸದಿರುವದರಿಂದ ಆದ ವೇದನೆಯಿಂದ, ಸುಖದುಃಖಮೋಹಗಳೆಂಬ ಮಧ್ಯಮ, ಅಧಮ, ಉತ್ತಮ –ಕರ್ಮಗಳ ಫಲಭೇದವುಂಟಾಗುವದು ಹೊಂದುವದರಿಂದ ವಿಶೇಷವಾಗುವದು ಯುಕ್ತ.[2] ಆದರೆ ಸಂಘಾತವೇ (ಭೋಕ್ತೃವೆಂಬ ಪಕ್ಷದಲ್ಲಿ) ಸಂಬಂಧವಾಗಲಿ ಕರ್ಮಫಲವಾಗಲಿ ಬೇರೆಯಾಗುವದಕ್ಕೆ ಕಾರಣವಿಲ್ಲದ್ದರಿಂದ ವಿಶೇಷವಾಗುವದು ಯುಕ್ತವಲ್ಲ.[3] ಹೀಗೆಯೇ ಶಬ್ದಾದಿಗಳು ಬಲವಾಗುವದು, ಕಡಿಮೆಯಾಗುವದು –ಮುಂತಾದದ್ದರಿಂದಾಗುವ (ವಿಶೇಷವೂ ಯುಕ್ತವಲ್ಲ).[4]

---

1. ಕರಣಗಳು, ಸಾಮಾನ್ಯಪ್ರಾಣ– ಎಲ್ಲವನ್ನೂ ಪ್ರಾಣ ಎಂದಿವೆ. ನಾಮರೂಪಗಳಿಂದ ಶರೀರದಿಂದ ಪ್ರಾಣನು ಮರೆಯಾಗುತ್ತಾನೆ ಎಂದು ಹಿಂದೆ ಹೇಳಿದ್ದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

2. ಹೊರಳಿಸದೆ ಇರುವಾಗಿನ ಅಸ್ಫುಟವೇದನೆಯೇ ಬೇರೆ, ಹೊರಳಿಸಿದಾಗ ಆಗುವ ಸ್ಫುಟವೇದನೆಯೇ ಬೇರೆ, ಮತ್ತು ಹೊರಳಿಸದಿರುವಾಗ ಸುಖದುಃಖಮೋಹಗಳೆಂಬ ವಿಶೇಷಫಲಗಳು ಹೊರಳಿಸದೆ ಇದ್ದಾಗ ಆಗದೆ ಇರುವದು –ಇದೆಲ್ಲವೂ ಸಂಘಾತಕ್ಕಿಂತ ವ್ಯತಿರಿಕ್ತನಾದ ಭೋಕ್ತೃವಿದ್ದರೆ ಯುಕ್ತ. ಏಕೆಂದರೆ ಆಗ ಭೋಕ್ತೃವು ಸುಪ್ತನಾಗಿದ್ದಾಗ ಅವನಿಗೆ ಎಚ್ಚರದಲ್ಲಿರುವ ಇಂದ್ರಿಯವಿಷಯಸಂಬಂಧವಿಶೇಷಗಳು ಇರುವದಿಲ್ಲ.

3. ಏಕೆಂದರೆ ಸುಪ್ತನಾಗಲಿ ಎಚ್ಚರವಾಗಲಿ ಸಂಘಾತವೇ ಇರುತ್ತದೆ; ಅದರಲ್ಲಿ ಸುಪ್ತಿ, ಜಾಗ್ರತ್ತುಗಳೆಂಬ ವಿಶೇಷಗಳಾಗಲಿ, ಎಚ್ಚರದಲ್ಲಿ ವಿಶೇಷವೇದನೆಗಳಾಗಲಿ ಸುಖದುಃಖಾದಿಗಳಾಗಿ ಬೇರೆಯಾಗಿ ತೋರಲು ಕಾರಣವಿರುವದಿಲ್ಲ.

4. ಮೊದಲು ಕೂಗುವಾಗ ಶಬ್ದವು ಮೆಲ್ಲಗಿದ್ದು ಆಮೇಲೆ ಬಲವಾದರೆ ಕೇಳುವದರಲ್ಲಿ ಹೆಚ್ಚುಕಡಿಮೆಯಾಗುವದು, ಸುಮ್ಮನೆ ಕೂಗುವದಕ್ಕಿಂತ ಹೊರಳಿಸಿದರೆ ಬೇರೆಯ ಬಗೆಯ ವೇದನೆಯಾಗುವದು– ಈ ಹೆಚ್ಚುಕಡಿಮೆಯನ್ನು ಅರಿಯುವ ಯೋಗ್ಯತೆ ಸಂಘಾತಕ್ಕೆ ಇರುವದಿಲ್ಲ, ವ್ಯತಿರಿಕ್ತಭೋಕ್ತೃವಿಗೇ ಇದೆ.

ಆದರೆ ಈ ವಿಶೇಷವು ಇದೆ. ಏಕೆಂದರೆ ಸುಮ್ಮನೆ ಮುಟ್ಟಿದ್ದರಿಂದ ಎಚ್ಚರದೆ ಇದ್ದ ಸುಪ್ತಪುರುಷನನ್ನು ಕೈಯಿಂದ ಹೊರಳಿಸಿಹೊರಳಿಸಿ ಅಜಾತಶತ್ರುವು ಎಚ್ಚರ ಗೊಳಿಸಿರುತ್ತಾನೆ. ಆದ್ದರಿಂದ ಯಾವನು ಹೊರಳಿಸಿದ್ದರಿಂದ ಉರಿಯುವವನಂತೆ, ಹೊಳೆಯುವವನಂತೆ, ಎಲ್ಲಿಂದಲೋ ಬಂದವನಂತೆ, ಎಚ್ಚತ್ತನೋ, ಶರೀರವನ್ನು ಕೂಡ ಮೊದಲಿಗಿಂತ ವಿಪರೀತವಾಗಿ ವಿಶೇಷವಾದ ಜ್ಞಾನ, ವ್ಯಾಪಾರ, ಆಕಾರ- ಮುಂತಾದ ವಿಶೇಷಗಳಿಂದ ಕೂಡಿರುವಂತೆ ಮಾಡುತ್ತಾ (ಎಚ್ಚತ್ತನೋ), ಗಾರ್ಗ್ಯಾಭಿಮತಬ್ರಹ್ಮಗಳಿಗಿಂತಲೂ ಬೇರೆಯಾದ ಆ ಮತ್ತೊಬ್ಬ (ಭೋಕ್ತೃ) ವಿರುತ್ತಾನೆ ಎಂದು ಸಿದ್ಧವಾಯಿತು.

## ಸಂಹತವಾಗಿರುವದರಿಂದ ಪ್ರಾಣವು ಭೋಕ್ತೃವಲ್ಲ

(ಭಾಷ್ಯ)

೨೮೫. ಸಂಹತತ್ವಾಚ್ಚ ಪಾರಾರ್ಥ್ಯೋಪಪತ್ತಿಃ ಪ್ರಾಣಸ್ಯ । ಗೃಹಸ್ಯ ಸ್ತಂಭಾದಿವತ್ ಶರೀರಸ್ಯಾಂತರುಪಷ್ಟಂಭಕಃ ಪ್ರಾಣಃ ಶರೀರಾದಿಭಿಃ ಸಂಹತಃ ಇತ್ಯವೋಚಾಮ । ಅರನೇಮಿವಚ್ಚ ನಾಭಿಸ್ಥಾನೀಯೇ ಏತಸ್ಮಿನ್ ಸರ್ವಮ್ ಇತಿ ಚ । ತಸ್ಮಾತ್ ಗೃಹಾದಿವತ್ ಸ್ವಾವಯವಸಮುದಾಯಜಾತೀಯವ್ಯತಿ ರಿಕ್ತಾರ್ಥಂ ಸಂಹನ್ಯತ ಇತ್ಯೇವಮವಗಚ್ಛಾಮಃ । ಸ್ತಂಭಕುಡ್ಯತೃಣಕಾಷ್ಠಾದಿ ಗೃಹಾವಯವಾನಾಂ ಸ್ವಾತ್ಮಜನ್ಮೋಪಚಯಾಪಚಯವಿನಾಶನಾಮಾಕೃತಿ ಕಾರ್ಯಧರ್ಮನಿರಪೇಕ್ಷಲಬ್ಧಸತ್ತಾದಿತದ್ವಿಷಯದ್ರಷ್ಟೃಶ್ರೋತೃಮನ್ತೃ ವಿಜ್ಞಾತ್ರರ್ಥತ್ವಂ ದೃಷ್ಟ್ವಾ ಮನ್ಯಾಮಹೇ ತತ್ಸಂಘಾತಸ್ಯ ಚ ತಥಾ ಪ್ರಾಣಾದ್ಯ ವಯವಾನಾಂ ತತ್ಸಂಘಾತಸ್ಯ ಚ ಸ್ವಾತ್ಮಜನ್ಮೋಪಚಯಾಪಚಯವಿನಾಶ ನಾಮಾಕೃತಿಕಾರ್ಯಧರ್ಮನಿರಪೇಕ್ಷಲಬ್ಧಸತ್ತಾದಿತದ್ವಿಷಯದ್ರಷ್ಟೃಶ್ರೋತೃ ಮನ್ತೃವಿಜ್ಞಾತ್ರರ್ಥತ್ವಂ ಭವಿತುಮರ್ಹತಿ ಇತಿ ॥

(ಭಾಷ್ಯಾರ್ಥ)

ಸಂಹತವಾಗಿರುವದರಿಂದಲೂ ಪ್ರಾಣವು ಪರಾರ್ಥವಾದದ್ದು ಎಂಬುದು ಯುಕ್ತ. (ಇದರ ವಿವರ): ಮನೆಯ ಕಂಬವೇ ಮುಂತಾದದ್ದರಂತೆ ಶರೀರದ ಒಳಗಿದ್ದು (ಅದನ್ನು) ಎತ್ತಿಹಿಡಿದುಕೊಂಡಿರುವ ಪ್ರಾಣವು ಶರೀರಾದಿ ಗಳೊಡನೆ ಸಂಹತವಾಗಿರುತ್ತದೆ ಎಂದು (ಭಾ. ಭಾ. ೨೮೩ರಲ್ಲಿ) ಹೇಳಿರುತ್ತೇವೆ. ಹಾರೆಕೋಲು, ಹಳಿ-ಇವುಗಳ ಹಾಗೆ ಗುಂಬದಂತಿರುವ ಈ ಪ್ರಾಣದಲ್ಲಿ ಎಲ್ಲವೂ ಸೇರಿಕೊಂಡಿದೆ ಎಂದೂ (ಭಾ. ಭಾ. ೨೮೩ರಲ್ಲಿ ಹೇಳಿರುತ್ತೇವೆ). ಆದ್ದರಿಂದ ಮನೆಯೇ ಮುಂತಾದದ್ದರಂತೆ ತನ್ನ ಅವಯವಗಳ ಸಮುದಾಯದ ಜಾತಿಗೆ (ಸೇರಿದ್ದು)ಕ್ಕಿಂತ ವ್ಯತಿರಿಕ್ತನಾದ (ಭೋಕ್ತೃ)ವಿಗಾಗಿ (ಇದು) ಸಂಹತವಾಗಿರು ತ್ತದೆ ಎಂದು, ನಾವು ನಿಶ್ಚಯಿಸಬೇಕಾಗಿದೆ. (ಹೇಗೆಂದರೆ) ಕಂಬ ಗೋಡೆ,

ಹುಲ್ಲುಕಡ್ಡಿ, ಕಟ್ಟಿಗೆ ಮುಂತಾದ ಮನೆಯ ಅವಯುಗಳೂ ಅವುಗಳ ಸಂಘಾತವಾದ (ಮನೆಯೂ) ತಮ್ಮ ಹುಟ್ಟು, ಬೆಳೆವಣಿಗೆ, ಕುಂದುವಿಕೆ, ನಾಶವಾಗುವಿಕೆ ಹೆಸರು, ಆಕಾರ, ಕಾರ್ಯ- ಎಂಬ ಧರ್ಮಗಳನ್ನು ಬಯಸದೆ ಸತ್ತಾದಿಗಳನ್ನು ಪಡೆದಿರುವ[1] ತಮ್ಮ ವಿಷಯದ ದ್ರಷ್ಟೃವೂ ಶ್ರೋತೃವೂ ಮಂತೃವೂ ವಿಜ್ಞಾತೃವೂ (ಆಗಿರುವವ)ನಿಗಾಗಿ[2] (ಇರುವದನ್ನು) ಕಂಡು, ಹಾಗೆಯೇ ಪ್ರಾಣಾದ್ಯವಯವಗಳೂ[3] ಅವುಗಳ ಸಂಘಾತ(ವಾದ ಶರೀರ)ವೂ ತಮ್ಮ ಹುಟ್ಟು, ಬೆಳೆಯುವಿಕೆ, ಕುಂದುವಿಕೆ, ನಾಶವಾಗುವಿಕೆ, ಹೆಸರು, ಆಕಾರ, ಕಾರ್ಯ- ಎಂಬ ಧರ್ಮಗಳನ್ನು ಬಯಸದೆ ಸತ್ತಾದಿಗಳನ್ನು ಪಡೆದಿರುವ[4] ತಮ್ಮ ವಿಷಯವಾದ ದ್ರಷ್ಟೃವೂ ಶ್ರೋತೃವೂ ಮಂತೃವೂ ವಿಜ್ಞಾತೃವೂ ಆದ (ಆತ್ಮ)ನಿಗಾಗಿ ಇರಬೇಕೆಂದು (ನಾವು) ತಿಳಿಯಬೇಕಾಗಿದೆ.[5]

## ಇಲ್ಲಿ ನಿರುಪಾಧಿಕಾತ್ಮಸ್ವರೂಪವನ್ನು ತಿಳಿಸುವದೇ ಉದ್ದೇಶ

(ಭಾಷ್ಯ)

೨೮೬. ದೇವತಾಚೇತನಾವತ್ತ್ವೇ ಚ ಸಮತ್ವಾತ್ ಗುಣಭಾವಾನುಪಗಮಃ ಇತಿ ಚೇತ್। ಪ್ರಾಣಸ್ಯ ವಿಶಿಷ್ಟೈರ್ನಾಮಭಿರಾಮನ್ತ್ರಣದರ್ಶನಾತ್ ಚೇತನಾವತ್ತ್ವಮ್ ಅಭ್ಯುಪಗತಮ್। ಚೇತನಾವತ್ತ್ವೇ ಚ ಪಾರಾರ್ಥ್ಯಾನುಪಗಮಃ ಸಮತ್ವಾತ್ ಅನುಪಪನ್ನಃ ಇತಿ ಚೇತ್। ನ। ನಿರುಪಾಧಿಕಸ್ಯ ಕೇವಲಸ್ಯ ವಿಜಿಜ್ಞಾಪಯಿಷಿತತ್ವಾತ್। ಕ್ರಿಯಾಕಾರಕಫಲಾತ್ಮಕತಾ ಹಿ ಆತ್ಮನೋ ನಾಮರೂಪೋಪಾಧಿಜನಿತಾವಿದ್ಯಾಧ್ಯಾರೋಪಿತಾ। ತನ್ನಿಮಿತ್ತೋ ಲೋಕಸ್ಯ ಕ್ರಿಯಾಕಾರಕಫಲಾಭಿಮಾನಲಕ್ಷಣಃ ಸಂಸಾರಃ। ಸ ನಿರುಪಾಧಿಕಾತ್ಮಸ್ವರೂಪವಿದ್ಯಯಾ ನಿವರ್ತಯಿತವ್ಯಃ ಇತಿ ತತ್ಸ್ವರೂಪವಿಜಿಜ್ಞಾಪಯಿಷಯಾ ಉಪನಿಷದಾರಬ್ಧಾ। "ಬ್ರಹ್ಮ ತೇ ಬ್ರವಾಣಿ" (೨-೧-೧) "ನೈತಾವತಾ ವಿದಿತಂ

1. ಅವುಗಳ ಹಂಗಿಲ್ಲದೆ ಇದ್ದುಕೊಂಡು ತೋರಿಕೊಳ್ಳುತ್ತಾ ಅವುಗಳ ಸಂಗವು ಒಂದಿಷ್ಟೂ ಇಲ್ಲದಿರುವ ಎಂದರ್ಥ.

2. ಅವುಗಳಿಗಿಂತ ವಿಲಕ್ಷಣನಾಗಿ ಅವುಗಳ ದ್ರಷ್ಟೃಶ್ರೋತೃಮಂತೃವಾಗಿರುವ ಮನೆಯೊಡೆಯನಿಗಾಗಿ ಎಂದರ್ಥ.

3. ಪ್ರಾಣವೂ ಇಂದ್ರಿಯಾದಿಗಳಂತೆಯೇ ಸಂಹತವಾಗಿರುತ್ತದೆ ಎಂದು ಭಾವ.

4. ಸ್ವತಃಸಿದ್ಧನಾಗಿ ತೋರಿಕೊಳ್ಳುತ್ತಾ ಪ್ರಾಣಾದಿಗಳ ಸಂಗವಿಲ್ಲದಿರುವ ಎಂದರ್ಥ.

5. ಸಂಹತವಾದದ್ದು ಮತ್ತೊಂದಕ್ಕಾಗಿರುತ್ತದೆ; ಪ್ರಾಣವೂ ಸಂಹತವಾಗಿರುವದರಿಂದ ಸ್ತಂಭಾದಿಗಳಂತೆ ತನಗಿಂತ ವ್ಯತಿರಿಕ್ತನಾದ ಅಸಂಹತನಾದ ಮತ್ತೊಬ್ಬ ಚೇತನನಿಗಾಗಿದೆ- ಎಂದು ಅನುಮಾನವನ್ನು ಇಲ್ಲಿ ತಿಳಿಸಿದೆ. ಆತ್ಮನು ಈ ಅನುಮಾನದಿಂದ ಸಿದ್ಧನಾಗುತ್ತಾನೆಂಬುದನ್ನು ತಳ್ಳಿಹಾಕುವದಕ್ಕಾಗಿ ಅವುಗಳ ಧರ್ಮವನ್ನು ಬಯಸದೆ ಸ್ವತಃಸಿ[illegible]ನಾಗಿರುತ್ತಾನೆಂದು ಹೇಳಿರುತ್ತದೆ.

ಭವತಿ" (೨-೧-೧೪) ಇತಿ ಚ ಉಪಕ್ರಮ್ಯ "ಏತಾವದರೇ ಖಲ್ವಮೃತತ್ವಮ್" (೪-೪-೧೫) ಇತಿ ಚೋಪಸಂಹಾರಾತ್। ನ ಚ ಅತೋಽನ್ಯತ್ ಅನ್ತರಾಲೇ ವಿವಕ್ಷಿತಮ್ ಉಕ್ತಂ ವಾ ಅಸ್ತಿ। ತಸ್ಮಾತ್ ಅನವಸರಃ ಸಮತ್ವಾತ್ ಗುಣಭಾವಾನುಪಗಮಃ ಇತಿ ಚೋದ್ಯಸ್ಯ। ಏವಂಸವತೋ ಹಿ ಸೋಪಾಧಿಕಸ್ಯ ಸಂವ್ಯವಹಾರಾರ್ಥೋ ಗುಣಗುಣಿಭಾವಃ, ನ ವಿಪರೀತಸ್ಯ। ನಿರುಪಾಖ್ಯೋ ಹಿ ವಿಜಿಜ್ಞಾಪಯಿಷಿತಃ ಸರ್ವಸ್ಯಾಮ್ ಉಪನಿಷದಿ। "ಸ ಏಷ ನೇತಿ ನೇತಿ" (೪-೫-೧೫) ಇತ್ಯುಪಸಂಹಾರಾತ್। ತಸ್ಮಾತ್ ಆದಿತ್ಯಾದಿಬ್ರಹ್ಮಭ್ಯ ಏತೇಭ್ಯೋಽವಿಜ್ಞಾನಮಯೇಭ್ಯೋ ವಿಲಕ್ಷಣೋಽನ್ಯೋಽಸ್ತಿ ವಿಜ್ಞಾನಮಯಃ ಇತ್ಯೇತತ್ ಸಿದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ) :– ದೇವತೆಯು ಚೇತನವಾಗಿರುವದರಿಂದ (ಇಬ್ಬರೂ) ಸಮವಾಗುವದರಿಂದ (ಪ್ರಾಣನು) ಗುಣನಾಗಿರುವನೆಂಬುದು[1] ಒಪ್ಪತಕ್ಕದ್ದಲ್ಲ. (ಇದರ ವಿವರ) : ಪ್ರಾಣನನ್ನು (ದೇವತೆಗೆ) ಅಸಾಧಾರಣವಾಗಿರುವ ಹೆಸರುಗಳಿಂದ ಕರೆದಿರುವದು ಕಂಡುಬರುವದರಿಂದ (ಅವನು) ಚೇತನನೆಂದು ಒಪ್ಪಿದಂತಾಗಿದೆ. (ಅವನು) ಚೇತನನಾಗಿರುವಲ್ಲಿ ಮತ್ತೊಬ್ಬನಿಗಾಗಿರುವನೆಂದು ಒಪ್ಪುವದು (ಪ್ರಾಣಾತ್ಮರುಗಳಿಬ್ಬರೂ) ಸಮರಾಗಿರುವದರಿಂದ ಸರಿಯಲ್ಲ.[2]

(ಪರಿಹಾರ) :– ಹಾಗಲ್ಲ. ಏಕೆಂದರೆ ನಿರುಪಾಧಿಕನಾದ ಕೇವಲ (ಆತ್ಮನನ್ನು) ತಿಳಿಸಿಕೊಡಬೇಕೆಂದಿರುತ್ತದೆ. (ಇದರ ವಿವರ) : ಆತ್ಮನು ಕ್ರಿಯಾಕಾರಕಫಲಸ್ವರೂಪನೆಂಬುದು ನಾಮರೂಪಗಳಿಂದುಂಟಾದ ಅವಿದ್ಯೆಯಿಂದ ಅಧ್ಯಾರೋಪಿತವಾದದ್ದು. ಅದರ ನಿಮಿತ್ತದಿಂದ ಜನರಿಗೆ (ತಾವು) ಕ್ರಿಯಾಕಾರಕಫಲ(ಸ್ವರೂಪರೆಂಬ) ಅಭಿಮಾನರೂಪವಾದ ಸಂಸಾರ(ವುಂಟಾಗಿರುತ್ತದೆ). ಆ (ಅಭಿಮಾನವನ್ನು) ನಿರುಪಾಧಿಕನಾದ ಆತ್ಮಸ್ವರೂಪದ ತಿಳಿವಳಿಕೆಯಿಂದ ತೊಲಗಿಸಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ಆ ಸ್ವರೂಪವನ್ನು ತಿಳಿಸಿಕೊಡುವದಕ್ಕಾಗಿ ಉಪನಿಷತ್ತನ್ನು ಪ್ರಾರಂಭಿಸಿರುತ್ತದೆ. "ಬ್ರಹ್ಮವನ್ನು ನಿನಗೆ ಹೇಳಿಕೊಡುವೆನು" (೨-೧-೧) ಎಂದೂ "ಇಷ್ಟರಿಂದಲೇ ಅರಿತದ್ದಾಗುವದಿಲ್ಲ" (೨-೧-೧೪) ಎಂದೂ ಉಪಕ್ರಮಿಸಿ "ಎಲೆ, ಅಮೃತತ್ವವು ಇಷ್ಟೇ" (೪-೫-೧೫) ಎಂದು ಉಪಸಂಹಾರಮಾಡಿರುವದರಿಂದಲೂ (ಹೀಗೆಂದು ತಿಳಿಯಬೇಕು).

---

1. ಗುಣವು ದ್ರವ್ಯಕ್ಕೆ ಅಧೀನವಾಗಿರುವಂತೆ ಚೇತನಕ್ಕೆ ಅಧೀನವಾಗಿ ಅದಕ್ಕೋಸ್ಕರ ಇದ್ದುಕೊಂಡಿರುವ ಅನಾತ್ಮವನ್ನು ಗುಣ ಎನ್ನುವರು. ಗುಣ, ಶೇಷ, ಭೋಗ್ಯ– ಇವುಗಳೆಲ್ಲ ಒಂದೇ ಅರ್ಥದ ಶಬ್ದಗಳು.

2. ಎರಡು ದೀಪಗಳಲ್ಲಿ ಒಂದು ಮತ್ತೊಂದಕ್ಕೆ ಅಧೀನವಲ್ಲದಿರುವಂತೆ ಒಂದು ಚೇತನವು ಮತ್ತೊಂದಕ್ಕೆ ಅಧೀನವಲ್ಲ.

ಮತ್ತೊಂದನ್ನು[1] (ಈ) ನಡುವೆ ಹೇಳಬೇಕೆಂದು ಹೊರಟಿಲ್ಲ, ಹೇಳಿರುವದೂ ಇಲ್ಲ. ಆದ್ದರಿಂದ ಸಮರಾಗಿರುವದರಿಂದ (ಪ್ರಾಣನು) ಗುಣವಾಗಿರುವನೆಂಬುದು ಒಪ್ಪತಕ್ಕದ್ದಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿರುವದಿಲ್ಲ.[2] ವಿಶೇಷಗಳುಳ್ಳ ಸೋಪಾಧಿಕನಾದ (ಆತ್ಮನಿ)ಗೇ ವ್ಯವಹಾರಕ್ಕಾಗಿ ಗುಣಗುಣಿಭಾವವು (ಉಕ್ತವಾಗಿದೆಯೇ ಹೊರತು ಅದಕ್ಕೆ)[3] ವಿಪರೀತನಾದ[4] (ಆತ್ಮನ ವಿಷಯದಲ್ಲಲ್ಲ). ಒಟ್ಟು ಉಪನಿಷತ್ತಿನಲ್ಲಿ ನಿರುಪಾಖ್ಯನಾದ[5] (ಆತ್ಮನನ್ನೇ) ತಿಳಿಸಬೇಕೆಂದು (ಹೊರಟಿದೆ). ಏಕೆಂದರೆ "ಆ ಇವನು ನೇತಿನೇತಿ ಎಂದ ಆತ್ಮನು" (೪-೫-೧೫) ಎಂದು ಉಪಸಂಹಾರಮಾಡಿರುತ್ತದೆ.

ಆದ್ದರಿಂದ ವಿಜ್ಞಾನಮಯರಲ್ಲದ ಈ ಆದಿತ್ಯಾದಿಬ್ರಹ್ಮಗಳಿಗಿಂತಲೂ ಬೇರೊಬ್ಬ ವಿಜ್ಞಾನಮಯನು ಇದಾನೆ ಎಂಬಿದು ಸಿದ್ಧವಾಯಿತು.[6]

## ಪ್ರಶ್ನೆ : ಸುಪ್ತಪುರುಷನ ಸ್ವರೂಪವೇನು ?

(ಉಪನಿಷತ್ತು)

**ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ ತದಾಭೂತ್ ಕುತ ಏತದಾಗಾದಿತಿ ತದು ಹ ನ ಮೇನೇ ಗಾರ್ಗ್ಯಃ ॥ ೧೬ ॥**

೧೬. ಆ ಅಜಾತಶತ್ರುವಿಂತೆಂದನು : ಈ ವಿಜ್ಞಾನಮಯ ಪುರುಷನಿದಾನಲ್ಲ, ಇವನು "ಯಾವಾಗ ಹೀಗೆ ಸುಪ್ತನಾಗಿದ್ದನೋ

---

1. ಆತ್ಮನಿಗಿಂತ ಬೇರೆಯಾಗಿ ದೇವತೆಗಳೂ ಇರುವರೆಂಬುದನ್ನು ಎಂದರ್ಥ. ಪ್ರಾಣಾದಿಗಳನ್ನು ಹೇಳಿರುವದೂ ಆತ್ಮಸ್ವರೂಪವನ್ನು ತಿಳಿಸಿಕೊಡುವದಕ್ಕಾಗಿಯೇ ಎಂದು ಭಾವ.

2. ಪ್ರಾಣವಿಶಿಷ್ಟಚೇತನವು ಪ್ರಾಣದೇವತೆ, ಕೇವಲಚೇತನವು ಆತ್ಮನು ; ಇಷ್ಟೇ ಹೊರತು ಆತ್ಮನಿಗಿಂತ ವ್ಯತಿರಿಕ್ತವಾದ ಮತ್ತೊಂದು ಚೇತನವಿಲ್ಲ. ಹೀಗಿರುವಲ್ಲಿ ಇಬ್ಬರೂ ಸಮರಾಗಿರುತ್ತಾರೆ ಎಂಬ ಅಭಿಪ್ರಾಯಕ್ಕೆ ಅವಕಾಶವೆಲ್ಲಿ ?

3. ಸೋಪಾಧಿಕನಾದ ಆತ್ಮನಲ್ಲಿ ವಿಜ್ಞಾನಾತ್ಮನು ಗುಣಿ, ಪ್ರಾಣವು ಗುಣ ಎಂದು ಗುಣಗುಣಿಭಾವವನ್ನು ಕಲ್ಪಿಸಬಹುದು ; ಜೀವೇಶ್ವರರೆಂಬ ಭೇದದಿಂದಲೂ ಗುಣಗುಣಿಭಾವವನ್ನು ಕಲ್ಪಿಸಬಹುದು. ಆದರೆ ಸೋಪಾಧಿಕತ್ವವು ಅವಿದ್ಯಾಕೃತವಾಗಿರುತ್ತದೆ ಎಂದು ಭಾವ.

4. ನಿರುಪಾಧಿಕನಾದ.

5. ನಿರ್ವಿಶೇಷನಾದ, ಹೀಗೆಂದು ವಿಶೇಷಗಳ ಮೂಲಕವಾಗಿ ತಿಳಿಸುವದಕ್ಕಾಗದ.

6. ಕೈಯಿಂದ ಹೊರಳಿಸಿದ ಮೇಲೆಯೇ ಎಚ್ಚತ್ತು ಅರಿತದ್ದರಿಂದ ಕಾರ್ಯಕರಣಸಂಘಾತಕ್ಕಿಂತ ವ್ಯತಿರಿಕ್ತನಾದ, ನಿರುಪಾಧಿಕಚೈತನ್ಯಸ್ವರೂಪನಾದ, ಆತ್ಮನು ಇದಾನೆಂದು ಸಿದ್ಧವಾಯಿತು ಎಂದರ್ಥ.

ಆಗ ಇವನು ಎಲ್ಲಿದ್ದನು ? ಏತರಿಂದ ಹೀಗೆ ಬಂದನು ?'' ಅದನ್ನು ಗಾರ್ಗ್ಯನು ಅರಿಯದಿದ್ದನು.

## ವಿಜ್ಞಾನಮಯಪುರುಷನು ಎಂದರೇನು ?

(ಭಾಷ್ಯ)

೨೮೭. ಸ ಏವಮ್ ಅಜಾತಶತ್ರುರ್ವ್ಯತಿರಿಕ್ತಾತ್ಮಾಸ್ತಿತ್ವಂ ಪ್ರತಿಪಾದ್ಯ ಗಾರ್ಗ್ಯಮ್ ಉವಾಚ । ಯತ್ರ ಯಸ್ಮಿನ್ ಕಾಲೇ ಏಷ ವಿಜ್ಞಾನಮಯಃ ಪುರುಷಃ ಏತತ್ ಸ್ವಪನಂ ಸುಪ್ತೋಽಭೂತ್ ಪ್ರಾಕ್ ಪಾಣಿಪೇಷಪ್ರತಿಬೋಧಾತ್ । ವಿಜ್ಞಾನಂ ವಿಜ್ಞಾಯತೇ ಅನೇನ ಇತಿ ಅನ್ತಃಕರಣಂ ಬುದ್ಧಿರುಚ್ಯತೇ । ತನ್ಮಯಃ ತತ್ಪ್ರಾಯಃ ವಿಜ್ಞಾನಮಯಃ । ಕಿಂ ಪುನಸ್ತತ್ಪ್ರಾಯತ್ವಮ್ ? ತಸ್ಮಿನ್ ಉಪಲಭ್ಯಮಾನತ್ವಮ್, ತೇನ ಚ ಉಪಲಭ್ಯತ್ವಮ್, ಉಪಲಬ್ಧೃತ್ವಂ ಚ । ಕಥಂ ಪುನರ್ಮಯಟೋಽನೇಕಾರ್ಥತ್ವೇ ಪ್ರಾಯಾರ್ಥತೈವ ಅವಗಮ್ಯತೇ ? "ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ" (೪-೪-೫) ಇತ್ಯೇವಮಾದೌ ಪ್ರಾಯಾರ್ಥ ಏವ ಪ್ರಯೋಗದರ್ಶನಾತ್ । ಪರವಿಜ್ಞಾನವಿಕಾರತ್ವಸ್ಯ ಅಪ್ರಸಿದ್ಧತ್ವಾತ್ 'ಯ ಏಷ ವಿಜ್ಞಾನಮಯಃ' ಇತಿ ಚ ಪ್ರಸಿದ್ಧವತ್ ಅನುವಾದಾತ್ ಅವಯವೋಪಮಾರ್ಥಯೋಶ್ಚ ಅತ್ರಾಸಂಭವಾತ್ । ಪಾರಿಶೇಷ್ಯಾತ್ ಪ್ರಾಯಾರ್ಥತೈವ । ತಸ್ಮಾತ್ ಸಂಕಲ್ಪವಿಕಲ್ಪಾದ್ಯಾತ್ಮಕಮ್ ಅನ್ತಃಕರಣಂ (ವಿಜ್ಞಾನಮ್)[1] ತನ್ಮಯಃ ಇತ್ಯೇತತ್ । ಪುರುಷಃ ಪುರಿ ಶಯನಾತ್ ॥

(ಭಾಷ್ಯಾರ್ಥ)

ಹೀಗೆ ವ್ಯತಿರಿಕ್ತಾತ್ಮನು ಇದಾನೆಂಬುದನ್ನು ತಿಳಿಸಿಕೊಟ್ಟು ಆ ಅಜಾತಶತ್ರುವು ಗಾರ್ಗ್ಯನನ್ನು (ಕುರಿತು) ಇಂತೆಂದನು : ಯಾವಾಗ ಯಾವ ಕಾಲದಲ್ಲಿ ಈ ವಿಜ್ಞಾನಮಯಪುರುಷನು ಕೈಯಿಂದ ಹೊರಳಾಡಿಸಿದ್ದರಿಂದ ಎಚ್ಚರುವ ಮುಂಚೆ ಹೀಗೆ ನಿದ್ರೆಯನ್ನು ಮಾಡುತ್ತಿದ್ದನಲ್ಲ—(ವಿಜ್ಞಾನಮಯ ಎಂಬಲ್ಲಿ) ಇದರಿಂದ ತಿಳಿಯುತ್ತಾರೆಂಬ ಕಾರಣದಿಂದ ಅಂತಃಕರಣವನ್ನು, ಬುದ್ಧಿಯನ್ನು, ವಿಜ್ಞಾನವೆಂದಿದೆ. ಆ (ಅಂತಃಕರಣ)ಮಯನು. ಎಂದರೆ ತತ್ಪ್ರಾಯನಾಗಿರುವವನು ವಿಜ್ಞಾನಮಯನು. **(ಹಾಗಾದರೆ) ತತ್ಪ್ರಾಯತ್ವವು ಎಂದರೇನು ? ಎಂದರೆ ಆ (ವಿಜ್ಞಾನದಲ್ಲಿ) ಅರಿಯಲ್ಪಡುವದು, ಅದರಿಂದ ಅರಿಯಲ್ಪಡುವದು, ಮತ್ತು ಅರಿಯುವವನಾಗಿರುವದು.**

---

1. ಇಲ್ಲಿ 'ವಿಜ್ಞಾನಮ್' ಎಂಬ ಮಾತು ಬಿಟ್ಟುಹೋಗಿದೆ, ಅಥವಾ ಅದನ್ನು ಅಧ್ಯಾಹಾರಮಾಡಿಕೊಳ್ಳಬೇಕು.

(ಆಕ್ಷೇಪ) :- ಮಯಟ್‌ಪ್ರತ್ಯಯಕ್ಕೆ ಅನೇಕ ಅರ್ಥಗಳಿರುವಲ್ಲಿ ಪ್ರಾಯಾರ್ಥವೆಂದೇ ನಿಶ್ಚಯಿಸುವದು ಹೇಗೆ ?

(ಪರಿಹಾರ) :- "ಆ ಈ ಆತ್ಮನು ಬ್ರಹ್ಮವು, ವಿಜ್ಞಾನಮಯನು, ಮನೋಮಯನು" (೪-೪-೫) ಎಂಬಿದೇ ಮುಂತಾದ (ವಾಕ್ಯಗಳಲ್ಲಿ) ಪ್ರಾಯಾರ್ಥದಲ್ಲಿಯೇ ಪ್ರಯೋಗಿಸಿರುವದು ಕಂಡುಬರುವದರಿಂದಲೂ, ಪರ (ಮಾತ್ಮನ) ವಿಜ್ಞಾನದ ವಿಕಾರವೆಂಬಿದು ಅಪ್ರಸಿದ್ಧವಾಗಿರುವದರಿಂದಲೂ 'ಈ ವಿಜ್ಞಾನಮಯನಿದಾನಲ್ಲ' ಎಂದು ಪ್ರಸಿದ್ಧವಾಗಿರುವಂತೆ (ಇಲ್ಲಿ ವಿಜ್ಞಾನ ಮಯತ್ವವನ್ನು) ಅನುವಾದಮಾಡಿಕೊಂಡಿರುವದರಿಂದಲೂ ಅವಯವ, ಉಪಮಾನ- ಎಂಬ (ಅರ್ಥಗಳು)[2] ಇಲ್ಲಿ ಸಂಭವಿಸುವಹಾಗಿಲ್ಲವಾದ್ದರಿಂದಲೂ ಪಾರಿಶೇಷ್ಯದಿಂದ (ಇಲ್ಲಿ) ಪ್ರಾಯಾರ್ಥವೇ (ತೆಗೆದುಕೊಳ್ಳತಕ್ಕದ್ದು). ಆದ್ದರಿಂದ ಸಂಕಲ್ಪವಿಕಲ್ಪಾದ್ಯಾತ್ಮಕವಾದ ಅಂತಃಕರಣವು (ವಿಜ್ಞಾನವು), ತನ್ಮಯನಾದವನು (ವಿಜ್ಞಾನಮಯನು) ಎಂದು ಅಭಿಪ್ರಾಯ. ಈ (ವಿಜ್ಞಾನಮಯನು) ಪುರುಷನು, ಏಕೆಂದರೆ ಪುರದಲ್ಲಿ[3] ಇರುತ್ತಾನೆ.

## ಇವನು ಆಗ ಎಲ್ಲಿದ್ದನು ? -ಎಂಬ ಪ್ರಶ್ನೆಯ ಅಭಿಪ್ರಾಯ

(ಭಾಷ್ಯ)

೨೮೮. ಕ್ವೈಷ ತದಾಭೂತ್ ಇತಿ ಪ್ರಶ್ನಃ ಸ್ವಭಾವವಿಜಿಜ್ಞಾಪಯಿಷಯಾ। ಪ್ರಾಕ್ ಪ್ರತಿಬೋಧಾತ್ ಕ್ರಿಯಾಕಾರಕಫಲವಿಪರೀತಸ್ವಭಾವ ಆತ್ಮಾ ಇತಿ ಕಾರ್ಯಾಭಾವೇನ ದಿದರ್ಶಯಿಷಿತಮ್। ನ ಹಿ ಪ್ರಾಕ್ ಪ್ರತಿಬೋಧಾತ್ ಕರ್ಮಾದಿಕಾರ್ಯಂ ಸುಖಾದಿ ಕಿಂಚನ ಗೃಹ್ಯತೇ। ತಸ್ಮಾತ್ ಅಕರ್ಮಪ್ರಯುಕ್ತತ್ವಾತ್ ತಥಾಸ್ವಾಭಾವ್ಯಮೇವ ಆತ್ಮನೋಽವಗಮ್ಯತೇ। ಯಸ್ಮಿನ್ ಸ್ವಾಭಾವ್ಯೇಽಭೂತ್ ಯತಶ್ಚ ಸ್ವಾಭಾವ್ಯಾತ್ ಪ್ರಚ್ಯುತಃ ಸಂಸಾರೀ ಸ್ವಭಾವವಿಲಕ್ಷಣಃ ಇತ್ಯೇತದ್ವಿವಕ್ಷಯಾ ಪೃಚ್ಛತಿ ಗಾರ್ಗ್ಯಂ ಪ್ರತಿಭಾನರಹಿತಂ ಬುದ್ಧಿವ್ಯುತ್ಪಾದನಾಯ 'ಕ್ವೈಷ ತದಾಭೂತ್ ಕುತ ಏತದಾಗಾತ್' ಇತಿ। ಏತದುಭಯಂ ಗಾರ್ಗ್ಯೇಣೈವ ಪ್ರಷ್ಟವ್ಯಮಾಸೀತ್। ತಥಾಪಿ ಗಾರ್ಗ್ಯೇಣ ನ ಪೃಷ್ಟಮ್ ಇತಿ ನೋದಾಸ್ತೇ ಅಜಾತಶತ್ರುಃ। ಬೋಧಯಿತವ್ಯ ಏವ ಇತಿ ಪ್ರವರ್ತತೇ। ಜ್ಞಪಯಿಷ್ಯಾಮ್ಯೇವ ಇತಿ ಪ್ರತಿಜ್ಞಾತತ್ವಾತ್। ಏವಮಸೌ ವ್ಯುತ್ಪಾದ್ಯಮಾನೋಽಪಿ ಗಾರ್ಗ್ಯೋ ಯತ್ರೈಷ ಆತ್ಮಾ ಅಭೂತ್ ಪ್ರಾಕ್

---

1. ಇದು ಭರ್ತೃಪ್ರಪಂಚರಿಗೆ ಸಮ್ಮತವಾದ ಅರ್ಥವು. ಮುಂದೆ ೨-೧-೨೦ರ ಭಾಷ್ಯದ ಚರ್ಚೆಯಲ್ಲಿ (ಭಾ. ಭಾ. ೩೧೨ವನ್ನು) ನೋಡಿ.
2. ಈ ಅರ್ಥಗಳನ್ನೂ ವೈಯಾಕರಣರು ಒಪ್ಪಿರುತ್ತಾರೆ.
3. ಶರೀರವಲ್ಲಿ ಎಂದರ್ಥ. ೨-೫-೧೮ನ್ನು ನೋಡಿ.

ಪ್ರತಿಬೋಧಾತ್ ಯತಶ್ಚ ಏತದಾಗಮನಮ್ ಆಗಾತ್ ತದುಭಯಂ ನ ವ್ಯುತ್ಪೇದೇ ವಕ್ತುಂ ವಾ ಪ್ರಷ್ಟುಂ ವಾ ಗಾರ್ಗ್ಯಃ ಹ ನ ವೇನೇ ನ ಜ್ಞಾತವಾನ್ ॥

(ಭಾಷ್ಯಾರ್ಥ)

ಇವನು ಆಗ ಎಲ್ಲಿದ್ದನು ?- ಎಂಬ ಪ್ರಶ್ನೆಯು (ವಿಜ್ಞಾನಮಯನ) ಸ್ವಭಾವವನ್ನು ತಿಳಿಸುವ ಇಚ್ಛೆಯಿಂದ (ಕೇಳಿದ್ದು)[1]. **ಎಚ್ಚರವಾಗುವ ಮುಂಚೆ- ಆತ್ಮನು ಕ್ರಿಯಾಕಾರಕಫಲಗಳಿಗೆ ವಿಪರೀತವಾದ ಸ್ವಭಾವದವ(ನಾಗಿದ್ದನು) ಎಂದು (ಅವುಗಳ) ಕಾರ್ಯವಿಲ್ಲದ್ದರಿಂದ (ನಿಶ್ಚಯಿಸಿ) ತಿಳಿಸುವದಕ್ಕೆ ಹೊರಟಿದೆ.** ಎಚ್ಚರವಾಗುವ ಮುಂಚೆ ಕರ್ಮವೇ ಮುಂತಾದವುಗಳ ಕಾರ್ಯವಾದ ಸುಖವೇ ಮುಂತಾದದ್ದು ಯಾವದೂ ಕಾಣಬರುವದಿಲ್ಲವಷ್ಟೆ. ಆದ್ದರಿಂದ ಕರ್ಮಪ್ರಯುಕ್ತವಾಗಿಲ್ಲದ್ದರಿಂದ ಅದೇ ಆತ್ಮನ ಸ್ವಭಾವವೆಂದು ನಿಶ್ಚಯವಾಗುತ್ತದೆ ; ಯಾವ ಸ್ವಭಾವದಲ್ಲಿ (ಆಗ) ಇದ್ದನೋ, ಯಾವ ಸ್ವಭಾವದಿಂದ ಜಾರಿದ್ದರಿಂದ (ಎಚ್ಚರದಲ್ಲಿ ಆ) ಸ್ವಭಾವಕ್ಕಿಂತ ವಿಲಕ್ಷಣ(ವಾದ ರೂಪವುಳ್ಳ) ಸಂಸಾರಿಯಾದನೋ ಅದನ್ನು ತಿಳಿಸಬೇಕೆಂಬ ಇಚ್ಛೆಯಿಂದ, (ಯಾವ ಉತ್ತರವೂ) ಹೊಳೆಯದೆ ಇದ್ದ ಗಾರ್ಗ್ಯನಿಗೆ (ಸರಿಯಾದ) ತಿಳಿವಳಿಕೆಯನ್ನುಂಟುಮಾಡಿಕೊಡುವದಕ್ಕಾಗಿ "ಇವನು ಆಗ ಎಲ್ಲಿದ್ದನು ? ಏತರಿಂದ ಹೀಗೆ ಬಂದನು ?" ಎಂದು (ಅಜಾತಶತ್ರುವು) ಕೇಳಿರುತ್ತಾನೆ. ಈ ಎರಡು (ಪ್ರಶ್ನೆಗಳನ್ನು) ಗಾರ್ಗ್ಯನೇ ಕೇಳಬೇಕಾಗಿತ್ತಾದರೂ ಗಾರ್ಗ್ಯನು ಕೇಳಲಿಲ್ಲ ಎಂದು ಅಜಾತಶತ್ರುವು ಸುಮ್ಮನಾಗಲಿಲ್ಲ, ಇವನಿಗೆ ತಿಳಿಸಿಕೊಡಬೇಕೆಂದೇ ಹೊರಟಿರುತ್ತಾನೆ; ಏಕೆಂದರೆ 'ವಿಜ್ಞಾಪನೆಮಾಡಿಕೊಳ್ಳುತ್ತೇನೆ' ಎಂದೇ ಪ್ರತಿಜ್ಞೆ ಮಾಡಿರುತ್ತಾನೆ[2]. ಹೀಗೆ ತಿಳಿಯಹೇಳಿದರೂ ಈ ಗಾರ್ಗ್ಯನು ಎಚ್ಚರುವದಕ್ಕಿಂತ ಮುಂಚೆ ಈ ಆತ್ಮನು ಎಲ್ಲಿದ್ದನು, ಮತ್ತು ಏತರಿಂದ ಹೀಗೆ ಬಂದನು- ಎಂಬೀ ಎರಡನ್ನೂ ಅರಿಯದೆ ಇದ್ದನು ; ಹೇಳುವದಕ್ಕಾಗಲಿ ಕೇಳುವದಕ್ಕಾಗಲಿ ತೋಚದೆ ಇದ್ದನು, ಅರಿಯದೆ ಇದ್ದನು.

---

1. 'ಆತ್ಮನು ಚೈತನ್ಯರೂಪನಾಗಿದ್ದರೂ ಕರಣಗಳೂ ಇದ್ದುಕೊಂಡಿರುವಲ್ಲಿ ಸ್ವಲ್ಪ ಹೊತ್ತು ಮಾತ್ರವೇ ಇವನಿಗೆ ಜ್ಞಾನವಿರುವದಕ್ಕೆ ಕಾರಣವೇನು ? ನಿದ್ರೆಯಲ್ಲೇಕೆ ಜ್ಞಾನವಿರುವದಿಲ್ಲ ?' ಎಂಬುದು ಒಂದು ಪ್ರಶ್ನೆ ; 'ಶರೀರವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೋಗಿದ್ದರೆ ಅಥವಾ ಇವನು ನಾಶವೇ ಆಗಿದ್ದರೆ ಮತ್ತೆ ಹೇಗೆ ಇಲ್ಲಿಗೆ ಬಂದನು ?' ಎಂಬುದು ಇನ್ನೊಂದು ಪ್ರಶ್ನೆ- ಎಂದು ಭರ್ತೃಪ್ರಪಂಚರು ಅಭಿಪ್ರಾಯಪಟ್ಟಿದ್ದರು. ಅದನ್ನು ವಾರ್ತಿಕದಲ್ಲಿ (೨೦೧-೨೦೪) ಖಂಡಿಸಿದೆ.

2. ಬ್ರಹ್ಮವನ್ನು ತಿಳಿಸುವದೇ ಪ್ರಕೃತವಾಗಿರುವದರಿಂದ ಆತ್ಮನ ಸ್ವಭಾವವಾದ ಬ್ರಹ್ಮತ್ವವನ್ನು ತಿಳಿಸುವದಕ್ಕೇ ಈ ಸಂದರ್ಭವು ಬಂದಿದೆ ಎಂಬುದು ಯುಕ್ತ ಎಂದು ಭಾವ.

## ಸುಷುಪ್ತನು ತನ್ನ ಆತ್ಮನಾದ ಬ್ರಹ್ಮದಲ್ಲಿರುತ್ತಾನೆ

( ಉಪನಿಷತ್ತು )

**ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷಸ್ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽನ್ತರ್ಹೃದಯ ಆಕಾಶ ಸ್ತಸ್ಮಿಞ್ಛೇತೇ ತಾನಿ ಯದಾ ಗೃಹ್ಣಾತ್ಯಥ ಹೈತತ್ಪುರುಷಃ ಸ್ವಪಿತಿ ನಾಮ ತದ್ಗೃಹೀತ ಏವ ಪ್ರಾಣೋ ಭವತಿ ಗೃಹೀತಾ ವಾಗ್ಗೃಹೀತಂ ಚಕ್ಷುರ್ಗೃಹೀತಗ್ಂ ಶ್ರೋತ್ರಂ ಗೃಹೀತಂ ಮನಃ ॥ ೧೭ ॥**

೧೭. ಆ ಅಜಾತಶತ್ರುವಿಂತೆಂದನು: ಈ ವಿಜ್ಞಾನಮಯ ಪುರುಷನಿದಾನಲ್ಲ, ಇವನು ಯಾವಾಗ ಹೀಗೆ ಸುಪ್ತನಾಗಿದ್ದನೋ ಆಗ ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ತೆಗೆದುಕೊಂಡು ಅನ್ತರ್ಹೃದಯದಲ್ಲಿ ಈ ಆಕಾಶವುಂಟಲ್ಲ, ಅಲ್ಲಿ ಮಲಗಿರುತ್ತಾನೆ. ಅವುಗಳನ್ನು ಯಾವಾಗ ಗ್ರಹಿಸುತ್ತಾನೋ ಆಗ ಈ ಪುರುಷನು 'ಸ್ವಪಿತಿ' ಎಂಬ ಹೆಸರುಳ್ಳವನಾಗುತ್ತಾನೆ. ಆಗ ಪ್ರಾಣವು ಗೃಹೀತವೇ ಆಗಿರುತ್ತದೆ; ವಾಕ್ಕು ಗೃಹೀತವಾಗಿರುತ್ತದೆ ; ಚಕ್ಷುಸ್ಸೂ ಗೃಹೀತ ವಾಗಿರುತ್ತದೆ; ಶ್ರೋತ್ರವೂ ಗೃಹೀತವಾಗಿರುತ್ತದೆ; ಮನಸ್ಸೂ ಗೃಹೀತವಾಗಿರುತ್ತದೆ.

## ಸುಷುಪ್ತಿಯಲ್ಲಿ ಆತ್ಮನು ನಿರ್ವಿಶೇಷನಾಗಿರುತ್ತಾನೆ

(ಭಾಷ್ಯ)

**೨೮. ಸ ಹೋವಾಚ ಅಜಾತಶತ್ರುಃ ವಿವಕ್ಷಿತಾರ್ಥಸಮರ್ಪಣಾಯ। ಯತ್ರೈಷ ಏತತ್ ಸುಪ್ತೋಽಭೂತ್ ಯ ಏಷ ವಿಜ್ಞಾನಮಯಃ ಪುರುಷಃ। ಕ್ವೈಷ ತದಾಭೂತ್ ಕುತ ಏತದಾಗಾತ್ ಇತಿ ಯದಪೃಚ್ಛಾಮ ತತ್ ಶೃಣು ಉಚ್ಯಮಾನಮ್ । ಯತ್ರೈಷ ಏತತ್ಸುಪ್ತೋಽಭೂತ್ ತತ್ ತದಾ ತಸ್ಮಿನ್ ಕಾಲೇ ಏಷಾಂ ವಾಗಾದೀನಾಂ ಪ್ರಾಣಾನಾಮ್ ವಿಜ್ಞಾನೇನ ಅನ್ತಃಕರಣ ಗತಾಭಿವ್ಯಕ್ತಿವಿಶೇಷವಿಜ್ಞಾನೇನ ಉಪಾಧಿಸ್ವಭಾವಜನಿತೇನ ಆದಾಯ ವಿಜ್ಞಾನಮ್ ವಾಗಾದೀನಾಂ ಸ್ವಸ್ವವಿಷಯಗತಸಾಮರ್ಥ್ಯಂ ಗೃಹೀತ್ವಾ ಯ ಏಷಃ ಅನ್ತಃ ಮಧ್ಯೇ ಹೃದಯೇ ಹೃದಯಸ್ಯ ಆಕಾಶಃ, ಯ ಆಕಾಶಶಬ್ದೇನ ಪರ ಏವ ಸ್ವ ಆತ್ಮಾ ಉಚ್ಯತೇ, ತಸ್ಮಿನ್ ಸ್ವೇ ಆತ್ಮನಿ ಆಕಾಶೇ ಶೇತೇ ಸ್ವಾಭಾವಿಕೇ**

ಅಸಂಸಾರಿಕೇ। ನ ಕೇವಲೇ ಆಕಾಶೇ ಏವ। ಶ್ರುತ್ಯಂತರಸಾಮರ್ಥ್ಯಾತ್ "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ.೬-೮-೧) ಇತಿ। ಲಿಙ್ಗೋಪಾಧಿಸಂಬನ್ಧಕೃತಂ ವಿಶೇಷಾತ್ಮಸ್ವರೂಪಮ್ ಉತ್ಸೃಜ್ಯ ಅವಿಶೇಷೇ ಸ್ವಾಭಾವಿಕೇ ಆತ್ಮನ್ಯೇವ ಕೇವಲೇ ವರ್ತತೇ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆ ಅಜಾತಶತ್ರುವು (ತಾನು) ಹೇಳಬೇಕೆಂದಿದ್ದ ವಿಷಯವನ್ನು (ತಿಳಿಸಿ) ಕೊಡುವದಕ್ಕಾಗಿ ಇಂತೆಂದನು : " ಈ ವಿಜ್ಞಾನಮಯಪುರುಷನಿದಾನಲ್ಲ, ಇವನು ಯಾವಾಗ ಹೀಗೆ ಸುಪ್ತನಾಗಿದ್ದನೋ ಆಗ ಇವನು ಎಲ್ಲಿದ್ದನು ? ಏತರಿಂದ ಹೀಗೆ ಬಂದನು? " ಎಂದು ಕೇಳಿದೆವಲ್ಲ, ಅದನ್ನು ಹೇಳುವೆವು ಕೇಳು. ಯಾವಾಗ ಇವನು ಹೀಗೆ ಸುಪ್ತನಾಗಿದ್ದನೋ (ತತ್=ತದಾ) ಆಗ ಆ ಕಾಲದಲ್ಲಿ **ಈ** ವಾಗಾದಿಪ್ರಾಣಗಳ ವಿಜ್ಞಾನವನ್ನು ವಾಗಾದಿಗಳ ಆಯಾ ವಿಷಯಗತವಾದ (ಪ್ರಕಾಶನ)ಸಾಮರ್ಥ್ಯವನ್ನು, ವಿಜ್ಞಾನದಿಂದ ಎಂದರೆ ಉಪಾಧಿಸ್ವಭಾವದಿಂದುಂಟಾದ ಅಂತಃಕರಣದ ಅಭಿವ್ಯಕ್ತಿವಿಶೇಷ(ರೂಪವಾದ) ವಿಜ್ಞಾನದಿಂದ, ತೆಗೆದುಕೊಂಡು ಎಂದರೆ ಹಿಡಿದುಕೊಂಡು[1] ಅಂತರ್ಹೃದಯದ ಆಕಾಶವಿದೆಯಲ್ಲ- **ಆಕಾಶಶಬ್ದದಿಂದ ಯಾವ ತನ್ನ ಪರಮಾತ್ಮನನ್ನೇ ಹೇಳಿದೆಯೋ- ಆ ತನ್ನ ಆತ್ಮನಾದ ಆಕಾಶದಲ್ಲಿ, ಸ್ವಾಭಾವಿಕವಾದ ಅಸಂಸಾರಿಯಾದ (ಆತ್ಮಾಕಾಶದಲ್ಲಿ) ಮಲಗಿರುತ್ತಾನೆ.** (ಇಷ್ಟೇ ಹೊರತು) ಬರಿಯ ಆಕಾಶದಲ್ಲಿಯೇ (ಮಲಗಿರುತ್ತಾನೆ) ಎಂದಲ್ಲ[2]. " ಆಗ ಎಲೈ ಸೋಮ್ಯನೆ, ಸತ್ತಿನೊಡನೆ ಸಂಪನ್ನನಾಗಿರುತ್ತಾನೆ " (ಛಾಂ.೬-೮-೧) ಎಂಬ ಮತ್ತೊಂದು

1. ಉಪಾಧಿರೂಪವಾಗಿರುವ ಅಂತಃಕರಣದಲ್ಲಿ ಆಯಾ ಇಂದ್ರಿಯದ ಮೂಲಕವಾದ ವಿಶೇಷವಿಜ್ಞಾನವು ಆಗುತ್ತಿರುತ್ತದೆ, ಆ ವಿಜ್ಞಾನದಲ್ಲಿಯೇ ಇಂದ್ರಿಯಗಳ ಅರಿವೆಂಬ ವಿಜ್ಞಾನವು ಇರುತ್ತದೆ. ಅಂತಃಕರಣಸಮೇತನಾಗಿಯೇ ಅಸಂಸಾರಿಸ್ವರೂಪವಾದ ಚಿನ್ಮಾತ್ರದಲ್ಲಿ ಅಡಗಿರುತ್ತಾನೆ ಎಂದರ್ಥ. ಉಪಾಧಿಸ್ವಭಾವ ಎಂದರೆ ಉಪಾದಾನವಾದ ಅಜ್ಞಾನವು ಎಂಬ ಅ॥ ಟೀಕೆಗೆ ಭಾಷ್ಯಾಧಾರವಿಲ್ಲ. ಪರಮಾತ್ಮನ ಚಿದಾಭಾಸಕರ್ತೃವಿನಿಂದ ಕರಣಶಕ್ತಿಗಳನ್ನು ತೆಗೆದುಕೊಳ್ಳುತ್ತಾನೆ; ಪ್ರಮಾತೃಜ್ಞಾನದೊಡನೆ ಕರಣಜ್ಞಾನಗಳನ್ನು ಉಪಸಂಹಾರಮಾಡಿಕೊಳ್ಳುತ್ತಾನೆ; ಪ್ರತ್ಯಕ್ಚೈತನ್ಯರೂಪನಾಗಿ ಕರಣಗಳನ್ನು ಉಪಸಂಹಾರಮಾಡಿಕೊಳ್ಳುತ್ತಾನೆ- ಎಂಬ ಮೂರು ಅರ್ಥಗಳನ್ನು ವಾರ್ತಿಕದಲ್ಲಿ ಬರೆದಿರುತ್ತದೆ.

2. ಹೃದಯಾಕಾಶವೆಂದರೆ ಇಲ್ಲಿ ಪರಮಾತ್ಮನೇ ಎಂಬುದಕ್ಕೆ ಛಾಂ.ಭಾ. ೩-೧೨-೯, ಮತ್ತು ೮-೧-೧ನ್ನು ನೋಡಿ. ಈ ಪ್ರಕರಣದಲ್ಲಿ ಜೀವನು ಸುಷುಪ್ತಿಯಲ್ಲಿ ತನ್ನ ಅಸಂಸಾರಿಸ್ವರೂಪದಲ್ಲಿಯೇ ಇರುತ್ತಾನೆಂದು ಸ್ಪಷ್ಟವಾಗಿ ಹೇಳಿರುವದನ್ನು ಲಕ್ಷಿಸಬೇಕು. ಹೀಗಿದ್ದರೂ ಸುಷುಪ್ತಿಯಲ್ಲಿ ಮೂಲಾವಿದ್ಯೆಯು ನಿಮಿತ್ತದಿಂದ ಜೀವಬ್ರಹ್ಮವಿಭಾಗವಿರುತ್ತದೆ ಎಂದು ಕೆಲವು ವ್ಯಾಖ್ಯಾನಕಾರರು ಹೇಳುತ್ತಿರುತ್ತಾರೆ. ಅದು ಭಾಷ್ಯಕ್ಕೂ ವೇದಾಂತಪ್ರಕ್ರಿಯೆಗೂ ವಿರುದ್ಧವೆಂಬುದು ಸ್ಪಷ್ಟ.

ಶ್ರುತಿಯ ಸಾಮರ್ಥ್ಯದಿಂದ (ಹೀಗೆಂದು ನಿಶ್ಚಯಿಸಬೇಕು). ಲಿಂಗೋಪಾಧಿಯ ಸಂಬಂಧದಿಂದ[1] ಆಗಿದ್ದ ವಿಶೇಷಾತ್ಮಸ್ವರೂಪವನ್ನು ಬಿಟ್ಟು (ಯಾವ) ವಿಶೇಷವೂ ಇಲ್ಲದ ಸ್ವಾಭಾವಿಕವಾದ ಕೇವಲ ಆತ್ಮನಲ್ಲಿಯೇ ಇದ್ದುಕೊಂಡಿರುತ್ತಾನೆ ಎಂದರ್ಥ[2].

## ಸ್ವಪಿತಿ ಎಂಬ ನಾಮದಿಂದ ಸುಪ್ತಾತ್ಮನ ಸ್ವರೂಪನಿರ್ಧಾರಣ

(ಭಾಷ್ಯ)

೨೯೦. ಯದಾ ಶರೀರೇನ್ದ್ರಿಯಾಧ್ಯಕ್ಷತಾಮ್ ಉತ್ಸೃಜತಿ ತದಾ ಅಸೌ ಸ್ವಾತ್ಮನಿ ವರ್ತತೇ ಇತಿ ಕಥಮ್ ಅವಗಮ್ಯತೇ? ನಾಮಪ್ರಸಿದ್ಧ್ಯಾ । ಕಾಸೌ ನಾಮಪ್ರಸಿದ್ಧಿರಿತಿ? ಆಹ। ತಾನಿ ವಾಗಾದೀನಿ ವಿಜ್ಞಾನಾನಿ ಯದಾ ಯಸ್ಮಿನ್ ಕಾಲೇ ಗೃಹ್ಣಾತಿ ಆದತ್ತೇ ಅಥ ತದಾ ಹ ಏತತ್ಪುರುಷಃ ಸ್ವಪಿತಿ ನಾಮ। ಏತನ್ನಾಮ ಅಸ್ಯ ಪುರುಷಸ್ಯ ತದಾ ಪ್ರಸಿದ್ಧಂ ಭವತಿ। ಗೌಣಮೇವ ಅಸ್ಯ ನಾಮ ಭವತಿ। ಸ್ವಮೇವ ಆತ್ಮಾನಮ್ ಅಪೀತಿ ಅಪಿಗಚ್ಛತೀತಿ ಸ್ವಪಿತೀತ್ಯುಚ್ಯತೇ ॥

(ಭಾಷ್ಯಾರ್ಥ)

(ಪ್ರಶ್ನೆ) :— ಯಾವಾಗ ಶರೀರೇಂದ್ರಿಯಗಳ ಒಡೆತನವನ್ನು ಬಿಟ್ಟುಬಿಡುತ್ತಾನೋ[3] ಆಗ ಇವನು ತನ್ನ ಆತ್ಮನಲ್ಲಿಯೇ ಇರುತ್ತಾನೆ ಎಂದು ಹೇಗೆ ಗೊತ್ತಾಗುತ್ತದೆ?

(ಉತ್ತರ) :— ನಾಮಪ್ರಸಿದ್ಧಿಯಿಂದ. ಈ ನಾಮಪ್ರಸಿದ್ಧಿಯು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ಆ ವಾಗಾದಿಗಳ ವಿಜ್ಞಾನವನ್ನು ಯಾವಾಗ ಯಾವ ಕಾಲದಲ್ಲಿ ಗ್ರಹಿಸುತ್ತಾನೋ ತೆಗೆದುಕೊಳ್ಳುತ್ತಾನೋ (ಅಥ= ತದಾ) ಆಗ ಈ ಪುರುಷನು ಸ್ವಪಿತಿ ಎನಿಸುತ್ತಾನೆ; ಈ (ಸ್ವಪಿತಿ) ಎಂಬ ಹೆಸರು ಈ ಪುರುಷನಿಗೆ ಆಗ ಪ್ರಸಿದ್ಧವಾಗಿರುತ್ತದೆ. ಇವನಿಗೆ (ಇದು) ಗೌಣನಾಮವೇ[4]

---

1. ಅಂತಃಕರಣವೆಂಬ ಉಪಾಧಿಯಿಂದ ಎಂದರ್ಥ.

2. ಸ್ವಾಭಾವಿಕವಾದ ಎಂದರೆ ತನ್ನ ಸ್ವರೂಪವೇ ಆದ ಎಂದರ್ಥ. ಸ್ಥೂಲಸೂಕ್ಷ್ಮೋಪಾಧಿಗಳು ಹೋದಬಳಿಕವೂ ಕಾರಣಾಜ್ಞಾನರೂಪವಾದ ಮತ್ತೊಂದು ಉಪಾಧಿಯೂ ಇರುತ್ತದೆ ಎಂಬ ಹೇಳಿಕೆಯು ಭಾಷ್ಯದಲ್ಲಿ ಸಿಕ್ಕುವದಿಲ್ಲ.

3. ಶರೀರೇಂದ್ರಿಯಗಳುಳ್ಳವನು ನಾನು ಎಂಬ ಅಭಿಮಾನವನ್ನು ಬಿಡುತ್ತಾನೋ ಎಂದರ್ಥ.

4. ಗುಣಕ್ಕೆ ತಕ್ಕಂತೆ ಹೇಳಿದ ನಾಮವೇ ಎಂದರ್ಥ. ತನ್ನಲ್ಲಿ ಸೇರಿಕೊಳ್ಳುವದೆಂಬುದಕ್ಕೆ ಹೊಂದುವಂತೆ ಸ್ವಪಿತಿ ಎಂಬ ಹೆಸರು ಬಂದಿದೆಯೆಂದು ಅಭಿಪ್ರಾಯ. ಸೂ. ಭಾ. ೧-೧-೯ (ಭಾ. ಭಾ. ೮೫) ನೋಡಿ.

ಆಗಿರುತ್ತದೆ. ಸ್ವ ಎಂದರೆ (ತನ್ನನ್ನೇ) ಆತ್ಮನನ್ನೇ 'ಅಪೀತಿ' (ಸೇರಿ ಅಡಗಿ ಕೊಳ್ಳುತ್ತಾನೆ, ತನ್ನಲ್ಲಿಯೇ) ಲಯವಾಗುತ್ತಾನೆ, ಆದ್ದರಿಂದ 'ಸ್ವಪಿತಿ' (ನಿದ್ರಿಸುತ್ತಾನೆ) ಎನಿಸಿಕೊಳ್ಳುತ್ತಾನೆ.

## ಸುಷುಪ್ತಾತ್ಮನು ಅಸಂಸಾರಿ ಎನ್ನುವದಕ್ಕೆ ಯುಕ್ತಿ

(ಭಾಷ್ಯ)

೨೯೧. ಸತ್ಯಂ ಸ್ವಪಿತೀತಿ ನಾಮಪ್ರಸಿದ್ಧ್ಯಾ ಆತ್ಮನಃ ಸಂಸಾರಧರ್ಮವಿಲಕ್ಷಣಂ ರೂಪಮ್ ಅವಗಮ್ಯತೇ, ನ ತ್ವತ್ರ ಯುಕ್ತಿರಸ್ತಿ ಇತ್ಯಾಶಙ್ಕ್ಯ ಆಹ। ತತ್ ತತ್ರ ಸ್ವಾಪಕಾಲೇ ಗೃಹೀತ ಏವ ಪ್ರಾಣೋ ಭವತಿ। ಪ್ರಾಣಃ ಇತಿ ಘ್ರಾಣೇನ್ದ್ರಿಯಮ್। ವಾಗಾದಿಪ್ರಕರಣಾತ್। ವಾಗಾದಿಸಂಬನ್ಧೇ ಹಿ ಸತಿ ತದುಪಾಧಿತ್ವಾತ್ ಅಸ್ಯ ಸಂಸಾರಧರ್ಮಿತ್ವಂ ಲಕ್ಷ್ಯತೇ। ವಾಗಾದಯಶ್ಚ ಉಪಸಂಹೃತಾ ಏವ ತದಾ ತೇನ। ಕಥಮ್ ? ಗೃಹೀತಾ ವಾಕ್ ಗೃಹೀತಂ ಚಕ್ಷುಃ, ಗೃಹೀತಂ ಶ್ರೋತ್ರಮ್, ಗೃಹೀತಂ ಮನಃ। ತಸ್ಮಾತ್ ಉಪಸಂಹೃತೇಷು ವಾಗಾದಿಷು ಕ್ರಿಯಾಕಾರಕಫಲಾತ್ಮತಾಭಾವಾತ್ ಸ್ವಾತ್ಮಸ್ಥ ಏವ ಆತ್ಮಾ ಭವತಿ ಇತ್ಯವಗಮ್ಯತೇ ॥

(ಭಾಷ್ಯಾರ್ಥ)

ನಿಜ, ಸ್ವಪಿತಿ ಎಂಬ ನಾಮದ ಪ್ರಸಿದ್ಧಿಯಿಂದ ಆತ್ಮನಿಗೆ ಸಂಸಾರಧರ್ಮಕ್ಕಿಂತ ವಿಲಕ್ಷಣವಾದ ರೂಪವು (ಆಗ ಇದೆ ಎಂದು) ನಿಶ್ಚಯವಾಗುತ್ತದೆ. ಆದರೆ ಇದಕ್ಕೆ ಯುಕ್ತಿಯಿಲ್ಲವಲ್ಲ! -ಎಂದು ಆಶಂಕಿಸಿ (ಶ್ರುತಿ) ಹೇಳುತ್ತಿದೆ. (ತತ್= ತತ್ರ) ಆ ನಿದ್ರೆಯ ಕಾಲದಲ್ಲಿ ಪ್ರಾಣವು ಗೃಹೀತವೇ ಆಗಿರುತ್ತದೆ. ಇಲ್ಲಿ ಪ್ರಾಣ ಎಂದರೆ ಘ್ರಾಣೇಂದ್ರಿಯವು; ಏಕೆಂದರೆ (ಇದು) ವಾಗಾದಿಗಳ ಪ್ರಕರಣವು. **ವಾಗಾದಿಗಳ ಸಂಬಂಧವುಂಟಾದರಲ್ಲವೆ, ಆ ಉಪಾಧಿಗಳಿಂದ ಇವನಿಗೆ ಸಂಸಾರಧರ್ಮಿತ್ವವು ಕಾಣಬರುತ್ತದೆ? ಆದರೆ ವಾಗಾದಿಗಳನ್ನು ಆಗ ಇವನು ಉಪಸಂಹಾರಮಾಡಿಕೊಂಡಿರುತ್ತಾನೆ.** ಹೇಗೆಂದರೆ, ವಾಕ್ಕು ಗೃಹೀತವಾಗಿರುತ್ತದೆ, ಚಕ್ಷುಸ್ಸು ಗೃಹೀತವಾಗಿರುತ್ತದೆ, ಶ್ರೋತ್ರವೂ ಗೃಹೀತವಾಗಿರುತ್ತದೆ, ಮನಸ್ಸೂ ಗೃಹೀತವಾಗಿರುತ್ತದೆ. ಆದ್ದರಿಂದ ವಾಗಾದಿಗಳು ಉಪಸಂಹಾರವಾಗಿರುವದರಿಂದ ಕ್ರಿಯಾಕಾರಕಫಲಸ್ವರೂಪವಿಲ್ಲದ್ದರಿಂದ ಆತ್ಮನು ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿರುತ್ತಾನೆ ಎಂದು ನಿಶ್ಚಯವಾಗುತ್ತದೆ[1].

---

1. ಎಚ್ಚರದಲ್ಲಿ ವಾಗಾದಿಗಳ ಸಂಬಂಧದಿಂದ ಸಂಸಾರಿಯಂತೆ ಕಂಡರೂ ಅಸಂಸಾರಿತ್ವವೇ ಅವನ ಸ್ವಾಭಾವಿಕರೂಪವೆಂಬುದು ಸುಷುಪ್ತಿಯ ಪರೀಕ್ಷೆಯಿಂದ ಗೊತ್ತಾಗುತ್ತದೆ ಎಂದರ್ಥ. ವಾಗಾದಿಗಳಿರುವಾಗ ನಿಜವಾಗಿ ಸಂಸಾರಿತ್ವವಿರುತ್ತದೆ ಎಂದೇನೂ ಅಭಿಪ್ರಾಯವಲ್ಲ.

## ಸ್ವಪ್ನದಲ್ಲಿ ಕಾಣುವ ಅನುಭವಗಳು ಮಿಥ್ಯೆ

(ಉಪನಿಷತ್ತು)

**ಸ ಯತ್ರೈತತ್ ಸ್ವಪ್ನ್ಯಯಾ ಚರತಿ ತೇ ಹಾಸ್ಯ ಲೋಕಾ ಸ್ತದುತೇವ ಮಹಾರಾಜೋ ಭವತ್ಯುತೇವ ಮಹಾಬ್ರಾಹ್ಮಣ ಉತೇವೋಚ್ಚಾವಚಂ ನಿಗಚ್ಛತಿ ಸ ಯಥಾ ಮಹಾರಾಜೋ ಜಾನಪದಾನ್ ಗೃಹೀತ್ವಾ ಸ್ವೇ ಜನಪದೇ ಯಥಾಕಾಮಂ ಪರಿವರ್ತೇತೈವಮೇವೈಷ ಏತತ್ ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ ॥ ೧೮ ॥**

೧೮. ಅವನು ಯಾವಾಗ ಹೀಗೆ ಸ್ವಪ್ನ್ಯ(ವೃತ್ತಿ)ಯಿಂದ ಚರಿಸುತ್ತಾನೋ (ಆಗ) ಇವು ಇವನ ಲೋಕಗಳು. ಅಲ್ಲಿ ಮಹಾರಾಜನಂತೆಯೂ ಇರುತ್ತಾನೆ, ಮಹಾಬ್ರಾಹ್ಮಣನಂತೆಯೂ ಇರುತ್ತಾನೆ, ಉಚ್ಚಾವಚ(ಸ್ಥಿತಿಯನ್ನು) ಪಡೆಯುವಂತೆಯೂ ಇರುತ್ತಾನೆ ; ಅದು ಹೇಗೆಂದರೆ ಮಹಾರಾಜನು ಜಾನಪದರನ್ನು ಕರೆದುಕೊಂಡು ತನ್ನ ಜನಪದದಲ್ಲಿ ಯಥಾಕಾಮವಾಗಿ ಸುತ್ತಾಡುತ್ತಾನಲ್ಲವೆ, ಹಾಗೆಯೇ ಇವನು ಹೀಗೆ ಪ್ರಾಣಗಳನ್ನು ಕರೆದುಕೊಂಡು ತನ್ನ ಶರೀರದಲ್ಲಿ ಯಥಾಕಾಮವಾಗಿ ಸುತ್ತಾಡುತ್ತಿರುತ್ತಾನೆ.

## ಕನಸಿನಲ್ಲಿ ಶೋಕಮೋಹಾದಿಗಳಿರುವವೆಂಬುದು ಭ್ರಾಂತಿ

(ಭಾಷ್ಯ)

೫೯೨. ನನು ದರ್ಶನಲಕ್ಷಣಾಯಾಂ ಸ್ವಪ್ನಾವಸ್ಥಾಯಾಂ ಕಾರ್ಯಕರಣವಿಯೋಗೇಽಪಿ ಸಂಸಾರಧರ್ಮಿತ್ವಮ್ ಅಸ್ಯ ದೃಶ್ಯತೇ ಯಥಾ ಚ ಜಾಗರಿತೇ ಸುಖೀ ದುಃಖೀ ಬನ್ಧುವಿಯುಕ್ತಃ ಶೋಚತಿ ಮುಹ್ಯತೇ ಚ। ತಸ್ಮಾತ್ ಶೋಕಮೋಹಧರ್ಮವಾನೇವ ಅಯಂ ನಾಸ್ಯ ಶೋಕಮೋಹಾದಯಃ ಸುಖದುಃಖಾದಯಶ್ಚ ಕಾರ್ಯಕರಣಸಂಯೋಗಜನಿತಭ್ರಾನ್ತ್ಯಾ ಅಧ್ಯಾರೋಪಿತಾ ಇತಿ। ನ। ಮೃಷಾತ್ವಾತ್। ಸ ಪ್ರಕೃತ ಆತ್ಮಾ ಯತ್ರ ಯಸ್ಮಿನ್ ಕಾಲೇ ದರ್ಶನಲಕ್ಷಣಯಾ ಸ್ವಪ್ನ್ಯಯಾ ಸ್ವಪ್ನವೃತ್ತ್ಯಾ ಚರತಿ ವರ್ತತೇ ತದಾ ತೇ ಹ ಅಸ್ಯ ಲೋಕಾಃ ಕರ್ಮಫಲಾನಿ। ಕೇ ತೇ ? ತತ್ ತತ್ರ ಉತ ಅಪಿ ಮಹಾರಾಜ ಇವ ಭವತಿ। ಸೋಽಯಂ ಮಹಾರಾಜತ್ವಮಿವ ಅಸ್ಯ ಲೋಕಃ, ನ ಮಹಾರಾಜತ್ವಮೇವ ಜಾಗರಿತ ಇವ। ತಥಾ ಮಹಾಬ್ರಾಹ್ಮಣ ಇವ ಉತ ಅಪಿ ಉಚ್ಚಾವಚಮ್ ಉಚ್ಚಂ ಚ ದೇವತ್ವಾದಿ ಅವಚಂ ಚ ತಿರ್ಯಕ್ತ್ವಾದಿ

ಉಚ್ಚಮಿವ ಅವಚಮಿವ ಚ ನಿಗಚ್ಛತಿ। ಮೃಷೈವ ಮಹಾರಾಜತ್ವಾದಯೋಽಸ್ಯ ಲೋಕಾಃ। ಇವಶಬ್ದಪ್ರಯೋಗಾತ್, ವ್ಯಭಿಚಾರದರ್ಶನಾಚ್ಚ। ತಸ್ಮಾತ್ ನ ಬನ್ಧುವಿಯೋಗಾದಿಜನಿತಶೋಕಮೋಹಾದಿಭಿಃ ಸ್ವಪ್ನೇ ಸಂಬಧ್ಯತ ಏವ ॥

(ಭಾಷ್ಯಾರ್ಥ)

(ಆಕ್ಷೇಪ) :- ದರ್ಶನರೂಪದ[1] ಸ್ವಪ್ನಾವಸ್ಥೆಯಲ್ಲಿ ಕಾರ್ಯಕರಣಗಳನ್ನು ಅಗಲಿದರೂ ಇವನಿಗೆ ಸಂಸಾರಧರ್ಮಿತ್ವವು ಕಂಡುಬರುತ್ತದೆಯಲ್ಲ! ಎಚ್ಚರದಲ್ಲಿ ಹೇಗೋ (ಹಾಗೆಯೇ ಅಲ್ಲಿಯೂ) ಸುಖಿಯೂ ದುಃಖಿಯೂ (ಆಗಿರುತ್ತಾನೆ); ನೆಂಟರನ್ನು ಅಗಲಿ ಶೋಕಿಸುತ್ತಾನೆ, ಮೋಹಗೊಳ್ಳುತ್ತಾನೆ. (ಅಲ್ಲವೆ)? ಆದ್ದರಿಂದ ಇವನು ಶೋಕಮೋಹಗಳೆಂಬ ಧರ್ಮವುಳ್ಳವನೇ, ಇವನ ಶೋಕಮೋಹಾದಿಗಳೂ ಸುಖದುಃಖಾದಿಗಳೂ ಕಾರ್ಯಕರಣಗಳ ಸಂಬಂಧದಿಂದುಂಟಾದ ಭ್ರಾಂತಿಯಿಂದ ಅಧ್ಯಾರೋಪಿತವಾದವುಗಳಲ್ಲ.

(ಪರಿಹಾರ) :- ಹಾಗಲ್ಲ. ಏಕೆಂದರೆ (ಅವು) ಹುಸಿ(ಯಾಗಿರುತ್ತವೆ: ಹೇಗೆಂದರೆ) ಆ ಪ್ರಕೃತನಾದ ಆತ್ಮನು ಯಾವಾಗ ಯಾವ ಕಾಲದಲ್ಲಿ ದರ್ಶನರೂಪದ ಸ್ವಪ್ನ್ಯದಿಂದ ಎಂದರೆ ಸ್ವಪ್ನವೃತ್ತಿಯಿಂದ ಚರಿಸುತ್ತಿರುವನೋ ಇದ್ದುಕೊಂಡಿರುವನೋ ಆಗ ಇವು ಇವನ ಲೋಕಗಳು; ಕರ್ಮಫಲಗಳು. ಇವು ಎಂದರೆ ಯಾವವು? (ತತ್=ತತ್ರ) ಅಲ್ಲಿ ಮಹಾರಾಜನಂತೆಯೂ (ಉತ=ಅಪಿ) ಆಗಿರುತ್ತಾನೆ. ಆ ಇದು ಇವನಿಗೆ ಮಹಾರಾಜತ್ವದಂತಿರುವ ಲೋಕವೇ ಹೊರತು ಎಚ್ಚರದಲ್ಲಿರುವಂತೆ ಮಹಾರಾಜತ್ವವೇ ಅಲ್ಲ. ಇದರಂತೆ ಮಹಾಬ್ರಾಹ್ಮಣನಂತೆಯೂ (ಉತ= ಅಪಿ), ಉಚ್ಚಾವಚವನ್ನು- ಉಚ್ಚವಾದ ದೇವತ್ವಾದಿಯನ್ನೂ ನೀಚವಾದ ತಿರ್ಯಕ್ತ್ವಾದಿಗಳನ್ನೂ (ಹೀಗೆ) ಉಚ್ಚಾವಚವನ್ನು- ಪಡೆಯುವಂತೆ (ಇರುತ್ತಾನೆ). ಮಹಾರಾಜತ್ವವೇ ಮುಂತಾದ ಇವನ (ಈ) ಲೋಕಗಳು ಹುಸಿಯೇ; ಏಕೆಂದರೆ (ಶ್ರುತಿಯಲ್ಲಿ) 'ಇವ' (ಅಂತೆ) ಎಂಬ ಶಬ್ದವನ್ನು ಪ್ರಯೋಗಿಸಿರುತ್ತದೆ ಮತ್ತು (ಎಚ್ಚರದಲ್ಲಿ ಅವು) ಇಲ್ಲವಾಗುವದೂ ಕಂಡುಬರುತ್ತದೆ. ಆದ್ದರಿಂದ ಬಂಧುಗಳನ್ನಗಲುವಿಕೆಯೇ ಮುಂತಾದದ್ದರಿಂದುಂಟಾದ ಶೋಕಮೋಹಾದಿಗಳಿಂದ (ನಿಜವಾಗಿ) ಸಂಬದ್ಧನೇ ಆಗುತ್ತಾನೆ ಎಂಬುದು (ಸರಿ)ಯಲ್ಲ.

---

1. ಸ್ವಪ್ನವೆಂಬ ಶಬ್ದವು ನಿದ್ರೆ, ಕನಸು -ಎರಡಕ್ಕೂ ಸಮಾನವಾಗಿದೆ. ಇಲ್ಲಿ ಕನಸನ್ನು ತೆಗೆದುಕೊಳ್ಳಬೇಕೆಂಬುದನ್ನು ಸೂಚಿಸುವದಕ್ಕಾಗಿ 'ದರ್ಶನಲಕ್ಷಣಾಯಾಂ' ಎಂಬ ವಿಶೇಷಣವನ್ನು ಕೊಟ್ಟಿದೆ.

2. ಎಚ್ಚರದಲ್ಲಿರುವದು ಸತ್ಯವೆಂದು ವ್ಯವಹಾರದೃಷ್ಟಿಯಿಂದ ಇಟ್ಟುಕೊಂಡು ಕನಸಿನಲ್ಲಿರುವದು ಹಾಗಲ್ಲವೆಂದು ತಿಳಿಸುವದಕ್ಕೆ ಇವಶಬ್ದವನ್ನು ಪ್ರಯೋಗಿಸಿದೆ ಎಂದು ಭಾವ.

## ಎಚ್ಚರದ ದೃಷ್ಟಾಂತದಿಂದ ಕನಸು ಸತ್ಯವೆಂಬ ಪೂರ್ವಪಕ್ಷ

(ಭಾಷ್ಯ)

೨೯೩. ನನು ಚ ಯಥಾ ಜಾಗರಿತೇ ಜಾಗ್ರತ್ಕಾಲಾವ್ಯಭಿಚಾರಿಣೋ ಲೋಕಾಃ ಏವಂ ಸ್ವಪ್ನೇಽಪಿ ತೇಽಸ್ಯ ಮಹಾರಾಜತ್ವಾದಯೋ ಲೋಕಾಃ ಸ್ವಪ್ನಕಾಲಭಾವಿನಃ ಸ್ವಪ್ನಕಾಲಾವ್ಯಭಿಚಾರಿಣಃ ಆತ್ಮಭೂತಾ ಏವ ನ ತು ಅವಿದ್ಯಾಧ್ಯಾರೋಪಿತಾ ಇತಿ । ನನು ಚ ಜಾಗ್ರತ್ಕಾರ್ಯಕರಣಾತ್ಮತ್ವಂ ದೇವತಾತ್ಮತ್ವಂ ಚ ಅವಿದ್ಯಾಧ್ಯಾರೋಪಿತಂ ನ ಪರಮಾರ್ಥತಃ ಇತಿ ವ್ಯತಿರಿಕ್ತ ವಿಜ್ಞಾನಮಯಾತ್ಮಪ್ರದರ್ಶನೇನ ಪ್ರದರ್ಶಿತಮ್ । ತತ್ ಕಥಂ ದೃಷ್ಟಾನ್ತತ್ವೇನ ಸ್ವಪ್ನಲೋಕಸ್ಯ ಮೃತ ಇವ ಉಜ್ಜೀವಿಷ್ಯನ್ ಪ್ರಾದುರ್ಭವಿಷ್ಯತಿ ? ಸತ್ಯಮ್, ವಿಜ್ಞಾನಮಯೇ ವ್ಯತಿರಿಕ್ತೇ ಕಾರ್ಯಕರಣದೇವತಾತ್ಮತ್ವದರ್ಶನಮ್ ಅವಿದ್ಯಾಧ್ಯಾರೋಪಿತಮ್, ಶುಕ್ತಿಕಾಯಾಮಿವ ರಜತತ್ವದರ್ಶನಮ್ ಇತ್ಯೇತತ್ ಸಿಧ್ಯತಿ ವ್ಯತಿರಿಕ್ತಾತ್ಮಾಸ್ತಿತ್ವಪ್ರದರ್ಶನನ್ಯಾಯೇನೈವ, ನ ತು ತದ್ವಿಶುದ್ಧಿಪರತಯೈವ ನ್ಯಾಯ ಉಕ್ತಃ ಇತಿ ಅಸನ್ನಪಿ ದೃಷ್ಟಾನ್ತಃ ಜಾಗ್ರತ್ಕಾರ್ಯಕರಣದೇವತಾತ್ಮತ್ವದರ್ಶನಲಕ್ಷಣಃ ಪುನರುದ್ಭಾವ್ಯತೇ । ಸರ್ವೋ ಹಿ ನ್ಯಾಯಃ ಕಿಂಚಿದ್ವಿಶೇಷಮಪೇಕ್ಷಮಾಣೋಽಪುನರುಕ್ತೋ ಭವತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಹೇಗೆ ಎಚ್ಚರದಲ್ಲಿ (ಕಾಣುವ) ಲೋಕಗಳು ಎಚ್ಚರದ ಕಾಲದಲ್ಲಿ ಮಾರ್ಪಡುವದಿಲ್ಲವೋ ಹಾಗೆ ಸ್ವಪ್ನದಲ್ಲಿಯೂ ಇವನ ಆ ಮಹಾರಾಜತ್ವವೇ ಮುಂತಾದ ಲೋಕಗಳು ಸ್ವಪ್ನಕಾಲದಲ್ಲಿ ಇರುವವಾದ್ದರಿಂದ ಸ್ವಪ್ನಕಾಲದಲ್ಲಿ ಮಾರ್ಪಡುವದಿಲ್ಲನಾಗಿ ಸ್ವರೂಪವೇ ಆಗಿರುವವೇ ಹೊರತು ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವದಿಲ್ಲವಲ್ಲ !

(ಪ್ರತ್ಯಾಕ್ಷೇಪ) :– ಎಚ್ಚರದ ಕಾರ್ಯಕರಣಗಳು ತಾನೆಂಬುದೂ ದೇವತೆಯು ತಾನೆಂಬುದೂ ಅವಿದ್ಯೆಯಿಂದ ಅವಿದ್ಯಾಧ್ಯಾರೋಪಿತವೇ ಹೊರತು ಪರಮಾರ್ಥವಲ್ಲ ಎಂದು ವ್ಯತಿರಿಕ್ತನಾದ ವಿಜ್ಞಾನಮಯಾತ್ಮನನ್ನು ತೋರಿಸಿ ಕೊಡುವ ಯುಕ್ತಿಯಿಂದ ತಿಳಿಸಿಕೊಟ್ಟದ್ದಾಯಿತಲ್ಲ[1] ! ಹೀಗಿರುವಲ್ಲಿ (ಎಚ್ಚರದ

1. ಕಾರ್ಯಕರಣವೇವತೆಗಳಿಗಿಂತ ವ್ಯತಿರಿಕ್ತನಾದ ನಿರ್ವಿಶೇಷಾತ್ಮನು ಇದಾನೆಂಬುದನ್ನು ಸುಪ್ತಪುರುಷದೃಷ್ಟಾಂತದಲ್ಲಿ ಹೇಳಿದೆ. ಕಾರ್ಯಕರಣಗಳು ಆತ್ಮನಲ್ಲವೆಂಬುದೂ ಅವುಗಳಿಲ್ಲದ ಸುಷುಪ್ತಿಯಲ್ಲಿ ಶುದ್ಧಾತ್ಮನು ಇದಾನೆಂಬುದೂ ಸಿದ್ಧವಾಗಿರುವದರಿಂದ ಕಾರ್ಯಕರಣಾದಿಗಳು ಅವಿದ್ಯಕವೆಂದೇ ಆಗುವದಿಲ್ಲವೆ ? ಹೀಗಿರುವಲ್ಲಿ ಎಚ್ಚರದ ಕಾರ್ಯಕರಣಾದಿಗಳಂತೆ ಕನಸಿನಲ್ಲಿಯೂ ತತ್ಕಾಲದಲ್ಲಿರುವವರಿಂದ ಅವೂ ಸತ್ಯ ಎಂದು ಹೇಳುವದಕ್ಕೆ ಎಚ್ಚರದ ಲೋಕಗಳ ದೃಷ್ಟಾಂತವನ್ನು ತೆಗೆದುಕೊಳ್ಳುವದು ಹೇಗೆ ? ಎಂದು ಆಕ್ಷೇಪ.

ಲೋಕವು) ಸ್ವಪ್ನಲೋಕಕ್ಕೆ ದೃಷ್ಟಾಂತವಾಗಿ, ಸತ್ತವನು ಮತ್ತೆ ಬದುಕಿದಂತೆ, ಮೇಲಕ್ಕೆದ್ದುಕೊಳ್ಳುವದು ಹೇಗೆ ?

(ಪ್ರಥಮಾಕ್ಷೇಪಕನ ಸಮಾಧಾನ) :- ವಿಜ್ಞಾನಮಯನು (ಕಾರ್ಯಕರಣಾದಿ)ವ್ಯತಿರಿಕ್ತನೆಂದಾಗಲು (ಅವ)ನಲ್ಲಿ ಕಾರ್ಯಕರಣದೇವತಾತ್ವವನ್ನು ಕಾಣುವದು ಕಪ್ಪೆಯಚಿಪ್ಪಿನಲ್ಲಿ ರಜತತ್ವವನ್ನು ಕಾಣುವಂತೆ ಅವಿದ್ಯಕವೇ ಎಂಬಿದು ವ್ಯತಿರಿಕ್ತನಾದ ಆತ್ಮನು ಇದಾನೆಂದು ತಿಳಿಸಿದ ಯುಕ್ತಿಯಿಂದಲೇ ಸಿದ್ಧವಾಗುತ್ತದೆ ಎಂಬುದು ನಿಜ. ಆದರೆ (ಇಲ್ಲಿ) ಆ (ಆತ್ಮನ) ವಿಶುದ್ಧಿಯನ್ನು (ತಿಳಿಸುವ) ತಾತ್ಪರ್ಯದಿಂದಲೇ ಯುಕ್ತಿಯನ್ನು ಹೇಳಿರುವದಿಲ್ಲ[1]. ಆದ್ದರಿಂದ ಎಚ್ಚರದಲ್ಲಿ ಕಾರ್ಯಕರಣದೇವತೆಗಳನ್ನು ತಾನೆಂದು ಕಾಣುವದೆಂಬ ದೃಷ್ಟಾಂತವು ಸರಿಯಲ್ಲವಾದರೂ (ಅದನ್ನು) ಮತ್ತೆ (ಇಲ್ಲಿ) ಹುಟ್ಟಿಹಾಕಿಕೊಂಡಿರುತ್ತದೆ. ಯಾವ ನ್ಯಾಯವೇ ಆಗಲಿ, ಯಾವದಾದರೊಂದಿಷ್ಟು ವಿಶೇಷವನ್ನು ಬಯಸುವದಾದರೆ ಪುನರುಕ್ತವಾಗುವದಿಲ್ಲವಷ್ಟೆ[2].

## ಕನಸಿನ ಕರ್ಮಫಲಗಳು ಮಿಥ್ಯೆಯೆನ್ನುವದಕ್ಕೆ ಕಾರಣ

(ಭಾಷ್ಯ)

೨೯೪. ನ ತಾವತ್ ಸ್ವಪ್ನೇ[3] ಅನುಭೂತಮಹಾರಾಜತ್ವಾದಯೋ ಲೋಕಾ ಆತ್ಮಭೂತಾಃ। ಆತ್ಮನೋಽನ್ಯಸ್ಯ ಜಾಗ್ರತ್ಪ್ರತಿಬಿಮ್ಬಭೂತಸ್ಯ ಲೋಕಸ್ಯ ದರ್ಶನಾತ್। ಮಹಾರಾಜ ಏವ ತಾವತ್ ವ್ಯಸ್ತಸುಪ್ತಾಸು ಪ್ರಕೃತಿಷು ಪರ್ಯಙ್ಕೇ ಶಯಾನಃ ಸ್ವಪ್ನಾನ್ ಪಶ್ಯನ್ ಉಪಸಂಹೃತಕರಣಃ ಪುನರುಪಗತಪ್ರಕೃತಿಂ ಮಹಾರಾಜಮಿವ ಆತ್ಮಾನಂ ಜಾಗರಿತೇ ಇವ ಪಶ್ಯತಿ ಯಾತ್ರಾಗತಂ ಭುಞ್ಜಾನಮಿವ ಚ ಭೋಗಾನ್ । ನ ಚ ತಸ್ಯ ಮಹಾರಾಜಸ್ಯ ಪರ್ಯಙ್ಕೇ ಶಯನಾತ್ ದ್ವಿತೀಯೋಽನ್ಯೋ ಪ್ರಕೃತ್ಯುಪೇತಃ ವಿಷಯೇ ಪರ್ಯಟನ್ ಅಹನಿ ಲೋಕೇ ಪ್ರಸಿದ್ಧೋಽಸ್ತಿ ಯಮ್ ಅಸೌ ಸುಪ್ತಃ ಪಶ್ಯತಿ। ನ ಚ ಉಪಸಂಹೃತಕರಣಸ್ಯ ರೂಪಾದಿಮತೋ ದರ್ಶನಮ್ ಉಪಪದ್ಯತೇ। ನ ಚ ದೇಹೇ ದೇಹಾನ್ತರಸ್ಯ ತತ್ತುಲ್ಯಸ್ಯ ಸಂಭವೋಽಸ್ತಿ । ದೇಹಸ್ಥಸ್ಯೈವ ಹಿ ಸ್ವಪ್ನದರ್ಶನಮ್॥

---

1. ಕಾರ್ಯಕರಣಗಳು ಅವಿದ್ಯಕವು ; ಆದ್ದರಿಂದ ಆತ್ಮನಿಗೆ ಅವುಗಳಿಂದ ಯಾವ ಲೇಪವೂ ಇಲ್ಲ ಎಂಬುದನ್ನು ತಿಳಿಸುವದಕ್ಕೆಂದೇ ಸುಪ್ತಪುರುಷದೃಷ್ಟಾಂತವು ಬಂದಿಲ್ಲ

2. ಒಂದೇ ಯುಕ್ತಿಯನ್ನು ಬೇರೆಬೇರೆಯ ದೃಷ್ಟಿಯಿಂದ ಮತ್ತೆಮತ್ತೆ ಉದಾಹರಿಸಬಹುದಾಗಿರುವಂತೆ, ಬೇರೊಂದು ವಿಶೇಷವನ್ನು ತಿಳಿಸುವದಕ್ಕಾಗಿ, ಮೊದಲೇ ಸಿದ್ಧವಾಗಿರುವದನ್ನು ಆಕ್ಷೇಪಿಸಿಕೊಂಡು ಪರಿಹಾರವನ್ನು ಹೇಳುವದು ಪುನರುಕ್ತಿಯಾಗುವದಿಲ್ಲ.

3. 'ಸ್ವಪ್ನೇ ಅನುಭೂತಾಃ' ಎಂದೋ 'ಸ್ವಪ್ನಾನುಭೂತಾಃ' ಎಂದೋ ಇದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

(ಭಾಷ್ಯಾರ್ಥ)

ಮೊದಲನೆಯದಾಗಿ ಸ್ವಪ್ನದಲ್ಲಿ ಅನುಭವಿಸುವ ಮಹಾರಾಜತ್ವವೇ ಮುಂತಾದ ಲೋಕಗಳು ತಾನೇ ಅಲ್ಲ. ಏಕೆಂದರೆ (ಅಲ್ಲಿ) ತನಗಿಂತ ವ್ಯತಿರಿಕ್ತವಾಗಿರುವ ಎಚ್ಚರದ (ಲೋಕದ) ಪ್ರತಿಬಿಂಬವಾಗಿರುವ ಲೋಕವು ಕಾಣುತ್ತಿರುತ್ತದೆ. ಮೊದಲನೆಯದಾಗಿ ಮಹಾರಾಜನೇ (ತನ್ನ) ಪ್ರಜೆಗಳು ಬೇರೆಬೇರೆಯಾಗಿ ನಿದ್ರಿಸುತ್ತಿರುವಲ್ಲಿ ಮಂಚದಮೇಲೆ ಮಲಗಿದ್ದುಕೊಂಡು ಕರಣಗಳನ್ನು ಉಪಸಂಹಾರಮಾಡಿಕೊಂಡು ಕನಸುಗಳನ್ನು ಕಾಣುತ್ತಿರುವಾಗ ಮತ್ತೆ ಎಚ್ಚರದಂತೆಯೇ ಪ್ರಜೆಗಳು ಬಳಿಸಂದಿರುವ ಮಹಾರಾಜನು ತಾನೆಂಬಂತೆಯೂ ಪ್ರಯಾಣಮಾಡುತ್ತಿರುವಂತೆಯೂ ಭೋಗಗಳನ್ನು ಅನುಭವಿಸುತ್ತಿರುವಂತೆಯೂ ಕಾಣುತ್ತಾನೆ. ಆ ಮಹಾರಾಜನಿಗೆ ಮಂಚದಲ್ಲಿ ಮಲಗಿರುವವನಿಗಿಂತಲೂ ಎರಡನೆಯವನಾಗಿ ಬೇರೊಬ್ಬನು ಪರಿವಾರಸಮೇತನಾಗಿ ದೇಶದಲ್ಲಿ ಹಗಲುಹೊತ್ತು ಸಂಚರಿಸುತ್ತಿರುವವನು (ಯಾರೂ) ಲೋಕದಲ್ಲಿ ಪ್ರಸಿದ್ಧನಾಗಿರುವದಿಲ್ಲ. (ಹಾಗಿದ್ದಿದ್ದರೆ) ಅವನನ್ನೇ ಕನಸಿನಲ್ಲಿ ಕಾಣುತ್ತಾನೆ (ಎನ್ನಬಹುದಾಗಿತ್ತು). ಕರಣಗಳನ್ನು ಉಪಸಂಹಾರಮಾಡಿಕೊಂಡಿರುವವನು ರೂಪಾದಿಗಳುಳ್ಳ (ವಸ್ತುವನ್ನು) ಕಾಣುವದಕ್ಕೂ ಆಗುವದಿಲ್ಲ. ದೇಹದಲ್ಲಿ ಅದಕ್ಕೆ ಸಮಾನವಾದ ಮತ್ತೊಂದು ದೇಹವು ಇರುವಂತೆಯೂ ಇಲ್ಲ. ದೇಹದಲ್ಲಿರುವವನಿಗೇ ಅಲ್ಲವೆ, ಸ್ವಪ್ನವು ಕಾಣಬರುವದು ?

## ಸ್ವಾಪ್ನಪದಾರ್ಥಗಳು ದೇಹಕ್ಕೆ ಹೊರಗೆ ಇರುವದಿಲ್ಲ

(ಭಾಷ್ಯ)

೨೯೫. ನನು ಪರ್ಯಙ್ಕೇ ಶಯಾನಃ ಪಥಿ ಪ್ರವೃತ್ತಮ್ ಆತ್ಮಾನಂ ಪಶ್ಯತಿ। ನ ಬಹಿಃ ಸ್ವಪ್ನಾನ್ ಪಶ್ಯತಿ ಇತ್ಯೇತದಾಹ। ಸಃ ಮಹಾರಾಜಃ ಜಾನಪದಾನ್ ಜನಪದೇ ಭವಾನ್ ರಾಜೋಪಕರಣಭೂತಾನ್ ಭೃತ್ಯಾನ್ ಅನ್ಯಾಂಶ್ಚ ಗೃಹೀತ್ವಾ ಉಪಾದಾಯ ಸ್ವೇ ಆತ್ಮೀಯೇ ಏವ ಜಯಾದಿನಾ ಉಪಾರ್ಜಿತೇ ಜನಪದೇ ಯಥಾಕಾಮಂ ಯೋ ಯಃ ಕಾಮೋಽಸ್ಯ ಯಥಾಕಾಮಮ್ ಇಚ್ಛಾತಃ ಯಥಾ ಪರಿವರ್ತೇತ ಇತ್ಯರ್ಥಃ। ಏವಮೇವ ಏಷ ವಿಜ್ಞಾನಮಯಃ। ಏತತ್ ಇತಿ ಕ್ರಿಯಾವಿಶೇಷಣಮ್। ಪ್ರಾಣಾನ್ ಗೃಹೀತ್ವಾ ಜಾಗರಿತಸ್ಥಾನೇಭ್ಯಃ ಉಪಸಂಹೃತ್ಯ ಸ್ವೇ ಶರೀರೇ ಸ್ವ ಏವ ದೇಹೇ ನ ಬಹಿಃ ಯಥಾಕಾಮಂ ಪರಿವರ್ತತೇ। ಕಾಮಕರ್ಮಭ್ಯಾಮ್ ಉದ್ಭಾಸಿತಾಃ ಪೂರ್ವಾನುಭೂತವಸ್ತುಸದೃಶೀಃ ವಾಸನಾಃ ಅನುಭವತಿ ಇತ್ಯರ್ಥಃ। ತಸ್ಮಾತ್ ಸ್ವಪ್ನೇ ಮೃಷಾಧ್ಯಾರೋಪಿತಾ ಏವ ಆತ್ಮಭೂತತ್ವೇನ ಲೋಕಾಃ ಅವಿದ್ಯಮಾನಾ ಏವ ಸನ್ತಿ। ತಥಾ ಜಾಗರಿತೇಽಪಿ ಇತಿ ಪ್ರತ್ಯೇತವ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಮಂಚದಮೇಲೆ ಮಲಗಿರುವವನು ಬೀದಿಯಲ್ಲಿ ತಾನು ಹೋಗುತ್ತಿದ್ದೇನೆಂದು (ಕನಸಿನಲ್ಲಿ) ಕಾಣುತ್ತಾನಲ್ಲ !

(ಪರಿಹಾರ) :- (ನಿಜವಾಗಿ) ಹೊರಗೆ ಕನಸನ್ನು ಕಾಣುವದಿಲ್ಲ ಎಂಬಿದನ್ನು (ಶ್ರುತಿ) ಹೇಳುತ್ತಿದೆ : ಆ ಮಹಾರಾಜನು ಜಾನಪದರನ್ನು ದೇಶದಲ್ಲಿದ್ದು ರಾಜನಿಗೆ ಉಪಕರಣವಾಗಿರುವ ಸೇವಕರನ್ನೂ ಮಿಕ್ಕವರನ್ನೂ ಕರೆದುಕೊಂಡು ಒಡಗೂಡಿ ತನ್ನ ಜಯವೇ ಮುಂತಾದದ್ದರಿಂದ ಸಂಪಾದಿಸಿಕೊಂಡಿರುವ ತನ್ನದೇ ಆಗಿರುವ ದೇಶದಲ್ಲಿ ಯಥಾಕಾಮವಾಗಿ, ತನಗೆ ಯಾವಯಾವ ಕಾಮವಿರುವದೋ ಹಾಗೆ ಯಥಾಕಾಮವಾಗಿ ಇಚ್ಛೆಯಿದ್ದಂತೆ, ಹೇಗೆ ಸುತ್ತಾಡುತ್ತಿರುವನೋ ಎಂದರ್ಥ. ಹಾಗೆಯೇ ಈ ವಿಜ್ಞಾನಮಯನು -ಏತತ್ (ಹೀಗೆ) ಎಂಬುದು ಕ್ರಿಯಾವಿಶೇಷಣವು- ಪ್ರಾಣಗಳನ್ನು ಗ್ರಹಿಸಿಕೊಂಡು ಎಚ್ಚರದ (ಆಯಾ) ಸ್ಥಾನಗಳಿಂದ ಉಪಸಂಹಾರಮಾಡಿಕೊಂಡು, ತನ್ನ ಶರೀರದಲ್ಲಿ— ತನ್ನ ದೇಹದಲ್ಲಿಯೇ, (ಅದರ) ಹೊರಗಲ್ಲ- ಯಥಾಕಾಮವಾಗಿ ಸುತ್ತಾಡುತ್ತಿರುತ್ತಾನೆ. ಕಾಮಕರ್ಮಗಳಿಂದ ತಲೆದೋರಿಕೊಂಡ ಹಿಂದೆ ಅನುಭವಿಸಿದ ವಸ್ತುಗಳಿಗೆ ಸಮಾನವಾದ ವಾಸನೆಗಳನ್ನು ಅನುಭವಿಸುತ್ತಾನೆ. ಆದ್ದರಿಂದ ಸ್ವಪ್ನದಲ್ಲಿ ಸುಳ್ಳಾಗಿಯೇ ಲೋಕಗಳು ತಾನೆಂದು, (ಅವು) ಇಲ್ಲದೆ ಇದ್ದರೂ, ಅಧ್ಯಾರೋಪಿತವಾಗಿರುತ್ತವೆ. **ಎಚ್ಚರದಲ್ಲಿಯೂ ಹಾಗೆಯೇ ಎಂದು ತಿಳಿಯಬೇಕು**[1].

## ಆತ್ಮನು ಕ್ರಿಯಾಕಾರಕಫಲಶೂನ್ಯನು

(ಭಾಷ್ಯ)

೨೯೬. ತಸ್ಮಾತ್ ವಿಶುದ್ಧಃ ಅಕ್ರಿಯಾಕಾರಕಫಲಾತ್ಮಕೋ ವಿಜ್ಞಾನಮಯಃ ಇತ್ಯೇತತ್ ಸಿದ್ಧಮ್ । ಯಸ್ಮಾತ್ ದೃಶ್ಯನ್ತೇ ದ್ರಷ್ಟುರ್ವಿಷಯಭೂತಾಃ ಕ್ರಿಯಾಕಾರಕಫಲಾತ್ಮಕಾಃ ಕಾರ್ಯಕರಣಲಕ್ಷಣಾ ಲೋಕಾಃ, ತಥಾ ಸ್ವಪ್ನೇಽಪಿ, ತಸ್ಮಾತ್ ಅನ್ಯೋಽಸೌ ದೃಶ್ಯೇಭ್ಯಃ ಸ್ವಪ್ನಜಾಗರಿತಲೋಕೇಭ್ಯೋ ದ್ರಷ್ಟಾ ವಿಜ್ಞಾನಮಯೋ ವಿಶುದ್ಧಃ ॥

---

1. ಸ್ವಪ್ನದಲ್ಲಿ ಕಾಣುವ ಕಾರ್ಯಕರಣಾದಿಗಳು ಅಧ್ಯಾರೋಪಿತವಾಗಿರುವವೇ, ಸತ್ಯವಲ್ಲ – ಎಂದು ತಿಳಿಸಿರುವದು ಎಚ್ಚರದಲ್ಲಿಯೂ ಹಾಗೆಯೇ ಎಂದು ತಿಳಿಸುವದಕ್ಕೆ. ಮಾಂ. ಕಾ. ವೈತಥ್ಯಪ್ರಕರಣವನ್ನು ನೋಡಿ.

(ಭಾಷ್ಯಾರ್ಥ)

ಆದ್ದರಿಂದ ವಿಜ್ಞಾನಮಯನು ವಿಶುದ್ಧನು, ಕ್ರಿಯಾಕಾರಕಫಲಾತ್ಮಕನಲ್ಲ ಎಂಬುದು ಸಿದ್ಧವಾಯಿತು[1]. ಏಕೆಂದರೆ ದ್ರಷ್ಟೃವಾದ (ಆತ್ಮನಿಗೆ) ವಿಷಯವಾಗಿಯೇ ಕ್ರಿಯಾಕಾರಕಫಲಾತ್ಮಕಗಳಾಗಿರುವ ಕಾರ್ಯಕರಣಗಳೆಂಬ ಲೋಕಗಳು ಕಾಣಬರುತ್ತವೆ, ಸ್ವಪ್ನದಲ್ಲಿಯೂ ಹಾಗೆಯೇ (ವಿಷಯವಾಗಿ ಕಾಣಿಸುತ್ತವೆ)ಯಷ್ಟೆ, ಆದ್ದರಿಂದ ಈ ದ್ರಷ್ಟೃವಾದ ವಿಜ್ಞಾನಮಯನು ದೃಶ್ಯವಾಗಿರುವ ಸ್ವಪ್ನಜಾಗರಿತಲೋಕಗಳಿಗಿಂತ ಬೇರೆಯಾಗಿರುತ್ತಾನೆ, ವಿಶುದ್ಧನು[2].

## ಸುಷುಪ್ತಿಯಲ್ಲಿ ಆತ್ಮನು ಅದ್ವಿತೀಯಾನಂದರೂಪನು

(ಉಪನಿಷತ್ತು)

**ಅಥ ಯದಾ ಸುಷುಪ್ತೋ ಭವತಿ ಯದಾ ನ ಕಸ್ಯಚನ ವೇದ ಹಿತಾ ನಾಮ ನಾಡ್ಯೋ ದ್ವಾಸಪ್ತತಿಃ ಸಹಸ್ರಾಣಿ ಹೃದಯಾತ್ ಪುರೀತತಮಭಿಪ್ರತಿಷ್ಠನ್ತೇ ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ ಸ ಯಥಾ ಕುಮಾರೋ ವಾ ಮಹಾರಾಜೋ ವಾ ಮಹಾಬ್ರಾಹ್ಮಣೋ ವಾತಿಘ್ನೀಮಾನನ್ದಸ್ಯ ಗತ್ವಾ ಶಯೀತೈವಮೇವೈಷ ಏತಚ್ಛೇತೇ ॥ ೧೯ ॥**

೧೯. ಇನ್ನು ಯಾವಾಗ ಸುಷುಪ್ತನಾಗುತ್ತಾನೋ ಯಾವಾಗ ಏನೊಂದನ್ನೂ ಅರಿಯದೆ ಇರುತ್ತಾನೋ, (ಆಗ) ಹಿತಗಳೆಂಬ ಎಪ್ಪತ್ತೆರಡು ಸಾವಿರ ನಾಡಿಗಳು ಹೃದಯದಿಂದ ಪುರೀತತ್ತಿನ ಸುತ್ತಲೂ ಹೊರಟಿರುವವಲ್ಲ, ಅವುಗಳಿಂದ ಹೋಗಿ ಪುರೀತತ್ತಿನಲ್ಲಿ ಮಲಗಿರುತ್ತಾನೆ. ಹೇಗೆಂದರೆ (ಹೇಗೆ) ಕುಮಾರನಾಗಲಿ ಮಹಾರಾಜನಾಗಲಿ ಮಹಾಬ್ರಾಹ್ಮಣನಾಗಲಿ ಆನಂದದ ಅತಿಘ್ನಿಯನ್ನು ಹೊಂದಿ ಮಲಗಿಕೊಂಡಿರುವನೋ ಹಾಗೆಯೇ ಇವನು ಹೀಗೆ ಮಲಗಿರುತ್ತಾನೆ.

---

1. ಇದನ್ನು ತಿಳಿಸುವದಕ್ಕಾಗಿಯೇ ಸ್ವಪ್ನವನ್ನು ಮಿಥ್ಯೆಯೆಂದು ತಿಳಿಸಿದ್ದು. ಸುಪ್ತಪುರುಷನ ದೃಷ್ಟಾಂತದಿಂದ ಇದು ಅರ್ಥಾತ್ ಸಿದ್ಧವಾಗಿತ್ತು.

2. ದೃಶ್ಯಕ್ಕಿಂತ ದೃಗ್ರೂಪನಾದ ಆತ್ಮನು ವಿಲಕ್ಷಣನು, ಮಿಥ್ಯೆಯಾಗಿರುವ ದೃಶ್ಯಧರ್ಮಗಳು ಅವನಿಗೆ ಒಂದಿಷ್ಟೂ ಅಂಟುವದಿಲ್ಲ.

# ಕಂಡಿಕೆಯ ಸಂಬಂಧ

(ಭಾಷ್ಯ)

೫೯೭. ದರ್ಶನವೃತ್ತೌ ಸ್ವಪ್ನೇ ವಾಸನಾರಾಶೇರ್ದೃಶ್ಯತ್ವಾತ್ ಅತದ್ಧರ್ಮತಾ ಇತಿ ವಿಶುದ್ಧತಾ ಅವಗತಾ ಆತ್ಮನಃ। ತತ್ರ "ಯಥಾಕಾಮಂ ಪರಿವರ್ತತೇ" ಇತಿ ಕಾಮವಶಾತ್ ಪರಿವರ್ತನಮ್ ಉಕ್ತಮ್। ದ್ರಷ್ಟುರ್ದೃಶ್ಯಸಂಬನ್ಧಶ್ಚ ಅಸ್ಯ ಸ್ವಾಭಾವಿಕಃ ಇತಿ ಅಶುದ್ಧತಾ ಶಙ್ಕ್ಯತೇ। ಅತಃ ತದ್ವಿಶುದ್ಧ್ಯರ್ಥಮ್ ಆಹ ॥

(ಭಾಷ್ಯಾರ್ಥ)

ದರ್ಶನವೃತ್ತಿಯಾದ ಸ್ವಪ್ನದಲ್ಲಿ ವಾಸನಾರಾಶಿಯು ದೃಶ್ಯವಾಗಿರುವದರಿಂದ (ಅದು) ಅವನ ಧರ್ಮವಲ್ಲವಾದ್ದರಿಂದ ಆತ್ಮನು ವಿಶುದ್ಧನೆಂದು ನಿಶ್ಚಯವಾಯಿತು. ಅಲ್ಲಿ "ಯಥಾಕಾಮವಾಗಿ ಸಂಚರಿಸುತ್ತಿರುತ್ತಾನೆ" ಎಂದು (ಹಿಂದಿನ ಕಂಡಿಕೆಯಲ್ಲಿ) ಕಾಮವಶದಿಂದ ಸುತ್ತಾಡುವಿಕೆಯನ್ನು ಹೇಳಿರುತ್ತದೆ. (ಆದ್ದರಿಂದ) ಈ ದ್ರಷ್ಟೃವಿಗೆ ದೃಶ್ಯಸಂಬಂಧವು ಸ್ವಾಭಾವಿಕವಾದದ್ದಾದ್ದರಿಂದ (ಇವನು) ಅಶುದ್ಧನು ಎಂದು ಶಂಕಿಸಬಹುದು. ಆದ್ದರಿಂದ ಆದರ ಅಶುದ್ಧಿಯಿಲ್ಲವೆಂಬುದನ್ನು (ತಿಳಿಸು)ವದಕ್ಕೆ (ಶ್ರುತಿ) ಹೀಗೆನ್ನುತ್ತಿದೆ[1]:

## ಸುಷುಪ್ತನಾಗುವದು ಯಾವಾಗ?

(ಭಾಷ್ಯ)

೫೯೮. ಅಥ ಯದಾ ಸುಷುಪ್ತೋ ಭವತಿ। ಯದಾ ಸ್ವಪ್ನ್ಯಯಾ ಚರತಿ ತದಾಪ್ಯಯಂ ವಿಶುದ್ಧ ಏವ। ಅಥ ಪುನಃ ಯದಾ ಹಿತ್ವಾ ದರ್ಶನವೃತ್ತಿಂ ಸ್ವಪ್ನಂ ಯದಾ ಯಸ್ಮಿನ್ ಕಾಲೇ ಸುಷುಪ್ತಃ ಸುಷ್ಠು ಸುಪ್ತಃ ಸಂಪ್ರಸಾದಂ ಸ್ವಾಭಾವ್ಯಂ ಗತಃ ಭವತಿ। ಸಲಿಲಮಿವ ಅನ್ಯಸಂಬನ್ಧಕಾಲುಷ್ಯಂ ಹಿತ್ವಾ ಸ್ವಾಭಾವ್ಯೇನ ಪ್ರಸೀದತಿ। ಕದಾ ಸುಷುಪ್ತೋ ಭವತಿ? ಯದಾ ಯಸ್ಮಿನ್ ಕಾಲೇ ನ ಕಸ್ಯಚನ ನ ಕಿಂಚನ ಇತ್ಯರ್ಥಃ। ವೇದ ವಿಜಾನಾತಿ। ಕಸ್ಯಚನ ವಾ ಶಬ್ದಾದೇಃ ಸಂಬನ್ಧಿ ವಸ್ತ್ವನ್ತರಂ ಕಿಂಚನ ನ ವೇದ ಇತ್ಯಧ್ಯಾಹಾರ್ಯಮ್। ಪೂರ್ವಂ ತು ನ್ಯಾಯ್ಯಮ್, ಸುಪ್ತೇ ತು ವಿಶೇಷವಿಜ್ಞಾನಾಭಾವಸ್ಯ ವಿವಕ್ಷಿತತ್ವಾತ್ ॥

---

1. ದ್ರಷ್ಟೃವಾದ ಆತ್ಮನಿಗೆ ದೃಶ್ಯದ ಸಂಬಂಧವಿಲ್ಲವೆಂಬುದು ದೃಶ್ಯಮಿಥ್ಯಾತ್ವದಿಂದ ಸಿದ್ಧವಾದರೂ ಇವೆರಡಕ್ಕೂ ಸಾಹಚರ್ಯವು ನಿತ್ಯವೆಂದು ಶಂಕಿಸಬಹುದೆಂದು ಮುಂದಿನ ಕಂಡಿಕೆಯು ಆರಂಭವಾಗಿದೆ ಎಂದು ಅಭಿಪ್ರಾಯ.

(ಭಾಷ್ಯಾರ್ಥ)

"ಅಥ ಯದಾ ಸುಷುಪ್ತೋ ಭವತಿ" (ಎಂಬ ಕಂಡಿಕೆಯ ಸಂಬಂಧ ವೇನೆಂದರೆ) : ಯಾವಾಗ ಸ್ವಪ್ನ(ವೃತ್ತಿಯಿಂದ) ಚರಿಸುತ್ತಿರುವನೋ ಆಗಲೂ ಇವನು ವಿಶುದ್ಧನೇ. ಇನ್ನು ಯಾವಾಗ ದರ್ಶನವೃತ್ತಿಯಾದ ಸ್ವಪ್ನವನ್ನು ಬಿಟ್ಟು ಯಾವಾಗ ಯಾವ ಕಾಲವಲ್ಲಿ ಸುಷುಪ್ತನಾಗುವನೋ, ಚೆನ್ನಾಗಿ ಸುಪ್ತ ನಾಗುವನೋ[1], ಸಂಪ್ರಸಾದವೆಂಬ ಸ್ವಾಭಾವ್ಯವನ್ನು ಪಡೆದುಕೊಳ್ಳುವನೋ[2] ನೀರಿನಂತೆ ಮತ್ತೊಂದರ ಸಂಬಂಧವನ್ನು ಬಿಟ್ಟು ಸ್ವಾಭಾವ್ಯ(ವನ್ನು ಹೊಂದಿ) ತಿಳಿಯಾಗುವನೋ[3], ಎಂಬರ್ಥ.

ಯಾವಾಗ ಸುಷುಪ್ತನಾಗುತ್ತಾನೆ ? ಎಂದರೆ ಯಾವಾಗ·ಯಾವ ಕಾಲ ದಲ್ಲಿ, ನ ಕಸ್ಯ ಚ ನ ಎಂದರೆ ಏನೊಂದನ್ನೂ ಇಲ್ಲ ಎಂದರ್ಥ. (ಯಾವಾಗ ಏನೊಂದನ್ನೂ) ಅರಿಯುವದಿಲ್ಲವೋ, ಅರಿತುಕೊಳ್ಳದೆ ಇರುವನೋ (ಆಗ). ಅಥವಾ ಕಸ್ಯಚನ ಎಂದರೆ ಶಬ್ದವೇ ಮುಂತಾದ ಯಾವದೊಂದರ ಸಂಬಂಧಿ ಯಾದ ಮತ್ತೊಂದು ವಸ್ತುವನ್ನು ಒಂದಿಷ್ಟೂ ತಿಳಿಯದೆ ಇರುತ್ತಾನೋ ಎಂದು ಅಧ್ಯಾಹಾರ(ವನ್ನು ಮಾಡಿಕೊಂಡು ವ್ಯಾಖ್ಯಾನಮಾಡಿಕೊಳ್ಳಬೇಕು). ಆದರೆ ಮೊದಲನೆಯ (ವ್ಯಾಖ್ಯಾನವೇ) ಯುಕ್ತವಾಗಿರುತ್ತದೆ; ಏಕೆಂದರೆ ಸುಷುಪ್ತಿಯಲ್ಲಿ ವಿಶೇಷವಿಜ್ಞಾನವು ಇರುವದಿಲ್ಲ ಎಂಬಿದೇ (ಇಲ್ಲಿ) ವಿವಕ್ಷಿತವಾಗಿರುತ್ತದೆ[4].

## ಸುಷುಪ್ತನಾಗುವ ಕ್ರಮ

(ಭಾಷ್ಯ)

೨೯೯. ಏವಂ ತಾವತ್ ವಿಶೇಷವಿಜ್ಞಾನಾಭಾವೇ ಸುಷುಪ್ತೋ ಭವತಿ ಇತ್ಯುಕ್ತಮ್ । ಕೇನ ಪುನಃ ಕ್ರಮೇಣ ಸುಷುಪ್ತೋ ಭವತೀತಿ ? ಉಚ್ಯತೇ ।

---

1. ಕನಸನ್ನು ಕಾಣದೆ ನಿದ್ರಿಸಿರುತ್ತಾನೋ ಎಂದರ್ಥ.

2. ಸಂಪ್ರಸಾದವೆಂಬುದು ವೇದದಲ್ಲಿ ಸುಷುಪ್ತಿಗೆ ಮತ್ತೊಂದು ಹೆಸರು. 'ಸುಷುಪ್ತ' ಎಂಬಲ್ಲಿರುವ ಸು ಎಂಬ ಮಾತು ಸಂಪ್ರಸಾದಾವಸ್ಥೆಯನ್ನು ಪಡೆದಿರುವ ನೆಂದು ತಿಳಿಸುತ್ತದೆ ಎಂದು ಭಾವ.

3. ಸಂಪ್ರಸಾದವೆಂದರೆ ಚೆನ್ನಾಗಿ ತಿಳಿಯಾಗಿರುವದು ; ಅನಾತ್ಮಸಂಬಂಧವನ್ನು ಬಿಟ್ಟು ನಿರ್ಮಲವಾಗಿರುವದರಿಂದ ಬಗ್ಗಡವಿಲ್ಲದ ತಿಳಿಯು ನೀರಿಗೆ ಹೋಲಿಸಿದಂತಾಗಿದೆ ಎಂದು ಅಭಿಪ್ರಾಯ.

4. ಎರಡನೆಯ ವ್ಯಾಖ್ಯಾನದಲ್ಲಿ ವಿಷಯಜ್ಞಾನವಿಲ್ಲವೆಂದಿಷ್ಟೇ ಅರ್ಥವಾಗುತ್ತದೆ ; ಮೊದಲನೆಯ ವ್ಯಾಖ್ಯಾನದಲ್ಲಿ ಯಾವ ವಿಶೇಷವಿಜ್ಞಾನವೂ ಇಲ್ಲವೆಂಬರ್ಥವು ಹೊರಡುತ್ತದೆ. ಕಸ್ಯಚನ ಎಂಬ ಷಷ್ಠೀವಿಭಕ್ತಿಯನ್ನು ಹಾಗೆಯೇ ಇಟ್ಟುಕೊಂಡು ವಸ್ತುವನ್ನು ಎಂದು ಅಧ್ಯಾಹಾರಮಾಡಿಕೊಂಡಿರುವದು ಎರಡನೆಯ ವ್ಯಾಖ್ಯಾನವು ; ಷಷ್ಠೀವಿಭಕ್ತಿಯನ್ನು ದ್ವಿತೀಯಾರ್ಥದಲ್ಲಿ ಪ್ರಯೋಗಿಸಿದೆ ಎಂದಿಟ್ಟುಕೊಳ್ಳುವದು ಮೊದಲನೆಯ ವ್ಯಾಖ್ಯಾನವು.

ಹಿತಾ ನಾಮ ಹಿತಾಃ ಇತ್ಯೇವಂನಾಮ್ನ್ಯಃ ನಾಡ್ಯಃ ಶಿರಾ ದೇಹಸ್ಯ ಅನ್ನರಸ ವಿಪರಿಣಾಮಭೂತಾಃ। ತಾಶ್ಚ ದ್ವಾಸಪ್ತತಿಃ ಸಹಸ್ರಾಣಿ ದ್ವೇ ಸಹಸ್ರೇ ಅಧಿಕೇ ಸಪ್ತತಿಶ್ಚ ಸಹಸ್ರಾಣಿ। ತಾಃ ದ್ವಾಸಪ್ತತಿಃ ಸಹಸ್ರಾಣಿ ಹೃದಯಾತ್। ಹೃದಯಂ ನಾಮ ಮಾಂಸಪಿಣ್ಡಃ, ತಸ್ಮಾತ್ ಮಾಂಸಪಿಣ್ಡಾತ್ ಪುಣ್ಡರೀಕಾಕಾರಾತ್। ಪುರೀತತಂ (ಪುರೀತತ್ ಇತಿ)[1] ಹೃದಯಪರಿವೇಷ್ಟನಮ್ ಆಚಕ್ಷತೇ। ತದುಪ ಲಕ್ಷಿತಂ ಶರೀರಮ್ ಇಹ ಪುರೀತಚ್ಛಬ್ದೇನ ಅಭಿಪ್ರೇತಮ್। ಪುರೀತತಮ್ ಅಭಿಪ್ರತಿಷ್ಠನ್ತೇ ಇತಿ ಶರೀರಂ ಕೃತ್ಸ್ನಂ ವ್ಯಾಪ್ನುವತ್ಯಃ ಅಶ್ವತ್ಥಪರ್ಣರಾಜಯ ಇವ ಬಹಿರ್ಮುಖ್ಯಃ ಪ್ರವೃತ್ತಾಃ ಇತ್ಯರ್ಥಃ। ತತ್ರ ಬುದ್ಧೇಃ ಅನ್ತಃಕರಣಸ್ಯ ಹೃದಯಂ ಸ್ಥಾನಮ್। ತತ್ರಸ್ಥಬುದ್ಧಿತನ್ತ್ರಾಣಿ ಚ ಇತರಾಣಿ ಬಾಹ್ಯಾನಿ ಕರಣಾನಿ। ತೇನ ಬುದ್ಧಿಃ ಕರ್ಮವಶಾತ್ ಶ್ರೋತ್ರಾದೀನಿ ತಾಭಿರ್ನಾಡೀಭಿಃ ಮತ್ಸ್ಯಜಾಲವತ್ ಕರ್ಣಶಷ್ಕುಲ್ಯಾದಿಸ್ಥಾನೇಭ್ಯಃ ಪ್ರಸಾರಯತಿ। ಪ್ರಸಾರ್ಯ ಚ ಅಧಿತಿಷ್ಠತಿ ಜಾಗರಿತಕಾಲೇ। ತಾಂ ವಿಜ್ಞಾನಮಯೋಽಭಿವ್ಯಕ್ತಸ್ವಾತ್ಮ ಚೈತನ್ಯಾವಭಾಸತಯಾ ವ್ಯಾಪ್ನೋತಿ। ಸಂಕೋಚನಕಾಲೇ ಚ ತಸ್ಯಾ ಅನು ಸಂಕುಚತಿ। ಸೋಽಸ್ಯ ವಿಜ್ಞಾನಮಯಸ್ಯ ಸ್ವಾಪಃ। ಜಾಗ್ರದ್ವಿಕಾಸಾನುಭವೋ ಭೋಗಃ। ಬುದ್ಧ್ಯುಪಾಧಿಸ್ವಭಾವಾನುವಿಧಾಯೀ ಹಿ ಸಃ। ಚನ್ದ್ರಾದಿಪ್ರತಿ ಬಿಮ್ಬ ಇವ ಜಲಾದ್ಯನುವಿಧಾಯೀ। ತಸ್ಮಾತ್ ತಸ್ಯಾ ಬುದ್ಧೇಃ ಜಾಗ್ರದ್ವಿಷ ಯಾಯಾಃ ತಾಭಿರ್ನಾಡೀಭಿಃ ಪ್ರತ್ಯವಸರ್ಪಣಮ್ ಅನು ಪ್ರತ್ಯವಸೃಪ್ಯ ಪುರೀ ತತಿ ಶರೀರೇ ಶೇತೇ ತಿಷ್ಠತಿ। ತಪ್ತಮಿವ ಲೋಹಪಿಣ್ಡಂ ಅವಿಶೇಷೇಣ ಸಂವ್ಯಾಪ್ಯ ಅಗ್ನಿವತ್ ಶರೀರಂ ಸಂವ್ಯಾಪ್ಯ ವರ್ತತೇ ಇತ್ಯರ್ಥಃ। ಸ್ವಾಭಾವಿಕೇ ಏವ ಸ್ವಾತ್ಮನಿ ವರ್ತಮಾನೋಽಪಿ ಕರ್ಮಾನುಗತಬುದ್ಧ್ಯನುವೃತ್ತಿತ್ವಾತ್ ಪುರೀತತಿ ಶೇತೇ ಇತ್ಯುಚ್ಯತೇ। ನ ಹಿ ಸುಷುಪ್ತಿಕಾಲೇ ಶರೀರಸಂಬನ್ಧೋಽಸ್ತಿ "ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ" (೪-೩-೨೨) ಇತಿ ಹಿ ವಕ್ಷ್ಯತಿ ॥

(ಭಾಷ್ಯಾರ್ಥ)

ಹೀಗೆ ವಿಶೇಷವಿಜ್ಞಾನವು ಇಲ್ಲವಾಗಲು ಸುಷುಪ್ತನಾಗುತ್ತಾನೆ- ಎಂದು ಹೇಳಿದ್ದಾಯಿತಷ್ಟೆ. ಇನ್ನು ಯಾವ ಕ್ರಮದಿಂದ ಸುಷುಪ್ತನಾಗುತ್ತಾನೆ ? ಎಂದರೆ (ಶ್ರುತಿ) ಹೇಳುತ್ತದೆ. ಹಿತಗಳೆಂಬ, ಹಿತ ಎಂಬೀ ಹೆಸರುಳ್ಳ ನಾಡಿಗಳು, ದೇಹದ ಅನ್ನರಸದ ವಿಪರಿಣಾಮವಾಗಿರುವ ನಾಡಿಗಳು – ಅವು ಎಪ್ಪತ್ತೆರಡು ಸಾವಿರ, ಎಪ್ಪತ್ತುಸಾವಿರದ ಮೇಲೆ ಎರಡು ಸಾವಿರವಿರುವವು. ಆ ಎಪ್ಪತ್ತೆರಡು ಸಾವಿರ (ನಾಡಿಗಳು)– ಹೃದಯದಿಂದ, ಹೃದಯವೆಂಪರೆ (ಒಂದಾನೊಂದು) ಮಾಂಸಪಿಂಡವು, ಆ ಕಮಲದಾಕಾರದ ಮಾಂಸಪಿಂಡದಿಂದ, ಪುರೀತತ್ತನ್ನು

1. ಈ ಎರಡು ಮಾತುಗಳು ಇಲ್ಲದಿದ್ದರೆ ಚೆನ್ನಾಗಿ ಅನ್ವಯವಾಗುತ್ತದೆ.

ಸುತ್ತಿಕೊಂಡಿರುತ್ತವೆ. ಪುರೀತತ್ತು ಎಂದು ಹೃದಯವನ್ನು ಮುಚ್ಚಿಕೊಂಡಿರುವ ಪೊರೆಯನ್ನು ಕರೆಯುತ್ತಾರೆ; ಆ (ಪುರೀತತ್ತೆಂಬ) ಉಪಲಕ್ಷಣವುಳ್ಳ ಶರೀರವೇ ಇಲ್ಲಿ ಪುರೀತತ್ತೆಂಬ ಶಬ್ದದಿಂದ ಅಭಿಪ್ರೇತ(ವಾಗಿರುತ್ತದೆ). ಪುರೀತತ್ತನ್ನು ಸುತ್ತಿಕೊಂಡು ಹೊರಟಿವೆ ಎಂದರೆ ಅರಳಿಯೆಲೆಯ ನೀರುಗಳಂತೆ ಶರೀರವನ್ನೆಲ್ಲ ವ್ಯಾಪಿಸಿಕೊಂಡು ಹೊರಮುಖವಾಗಿ ಹೊರಟಿರುತ್ತವೆ ಎಂದರ್ಥ.

ಇಲ್ಲಿ ಬುದ್ಧಿಗೆ ಎಂದರೆ ಅಂತಃಕರಣಕ್ಕೆ ಹೃದಯವು ಸ್ಥಾನವು. ಉಳಿದ ಹೊರಗಿನ ಕರಣಗಳು ಅಲ್ಲಿರುವ ಬುದ್ಧಿಗೆ ಅಧೀನವಾಗಿರುತ್ತವೆ. ಆದ್ದರಿಂದ ಬುದ್ಧಿಯು ಕರ್ಮವಶದಿಂದ ಶ್ರೋತ್ರಾದಿಗಳನ್ನು ಆ ನಾಡಿಗಳಿಂದ ಮೀನುಬಲೆಯಂತೆ ಕಿವಿಯುಗೂಡು ಮುಂತಾದ ಸ್ಥಾನಗಳಿಂದ ಹರಡಿರುತ್ತದೆ; (ಹೀಗೆ) ಹರಡಿಕೊಂಡು (ಅವನ್ನು) ಎಚ್ಚರದ ಕಾಲದಲ್ಲಿ ಆಳುತ್ತದೆ. **ಅದನ್ನು ವಿಜ್ಞಾನಮಯನು ತನ್ನ ಚೈತನ್ಯದ ಹೊಳಪು (ಅದರಲ್ಲಿ) ಅಭಿವ್ಯಕ್ತವಾಗಿರುವದರಿಂದ ವ್ಯಾಪಿಸಿಕೊಂಡಿರುತ್ತಾನೆ; ಸಂಕೋಚವಾಗುವ ಕಾಲದಲ್ಲಿ ಅದನ್ನನುಸರಿಸಿ ಸಂಕೋಚವಾಗುತ್ತಾನೆ. ಅದೇ ಈ ವಿಜ್ಞಾನಮಯನ ನಿದ್ರೆಯು, ಎಚ್ಚರದಲ್ಲಿ ವಿಕಾಸವನ್ನು ಅನುಭವಿಸುವದೇ ಭೋಗವು.** ಚಂದ್ರಾದಿಗಳ ಪ್ರತಿಬಿಂಬವು ನೀರೇ ಮುಂತಾದದ್ದನ್ನು ಅನುಸರಿಸಿಕೊಂಡಿರುವಂತೆ ಆ (ಜೀವನು) ಬುದ್ಧಿಯೇ ಮುಂತಾದವುಗಳನ್ನು ಅನುಸರಿಸಿಕೊಂಡಿರುವನಲ್ಲವೆ? ಆದ್ದರಿಂದ ಎಚ್ಚರದ ವಿಷಯದ ಆ ಬುದ್ಧಿಯು ಆ ನಾಡಿಗಳಿಂದ ಹಿಂತಿರುಗಿ ಬರುವದನ್ನನುಸರಿಸಿ, ಪುರೀತತ್ತಿನಲ್ಲಿ ಎಂದರೆ ಶರೀರದಲ್ಲಿ ಮಲಗಿರುತ್ತಾನೆ, ಇರುತ್ತಾನೆ. ಕಾಯಿಸಿದ ಕಬ್ಬಿಣದ ಗಟ್ಟಿಯನ್ನು ಬೆಂಕಿಯು ಸಾಮಾನ್ಯರೂಪದಿಂದ ವ್ಯಾಪಿಸಿಕೊಳ್ಳುವಂತೆ ಶರೀರವನ್ನೆಲ್ಲ ವ್ಯಾಪಿಸಿಕೊಂಡು ಇರುತ್ತಾನೆ ಎಂದರ್ಥ. **ಸ್ವಾಭಾವಿಕವಾದ ತನ್ನ ಸ್ವರೂಪದಲ್ಲಿಯೇ ಇರುತ್ತಿದ್ದರೂ ಕರ್ಮವನ್ನು ಅನುಸರಿಸುವ ಬುದ್ಧಿಯನ್ನನುಸರಿಸುವನಾದ್ದರಿಂದ ಪುರೀತತ್ತಿನಲ್ಲಿ ಮಲಗಿರುತ್ತಾನೆ ಎಂದಿದೆ(ಎಂದು ತಿಳಿಯಬೇಕು). ಏಕೆಂದರೆ ಸುಷುಪ್ತಿಕಾಲದಲ್ಲಿ ಶರೀರಸಂಬಂಧವು ಇರುವದಿಲ್ಲ.** "ಆಗ ಹೃದಯದ ಶೋಕಗಳೆಲ್ಲವನ್ನೂ ದಾಟಿರುತ್ತಾನಲ್ಲವೆ?" (೪-೩-೨೨) ಎಂದಲ್ಲವೆ, ಮುಂದೆ (ಶ್ರುತಿಯು) ಹೇಳುವದು?

## ಸುಷುಪ್ತಿಯಲ್ಲಿ ಸಂಸಾರದುಃಖಗಳಿರುವದಿಲ್ಲ

**(ಭಾಷ್ಯ)**

೩೦೦. **ಸರ್ವಸಂಸಾರದುಃಖವಿಯುಕ್ತಾ ಇಯಮವಸ್ಥಾ ಇತ್ಯತ್ರ ದೃಷ್ಟಾನ್ತಃ। ಸ ಯಥಾ ಕುಮಾರೋ ವಾ ಅತ್ಯನ್ತಬಾಲೋ ವಾ ಮಹಾರಾಜೋ ವಾ ಅತ್ಯನ್ತವಶ್ಯಪ್ರಕೃತಿಃ, ಯಥೋಕ್ತಕೃತ್ ಮಹಾಬ್ರಾಹ್ಮಣೋ ವಾ ಅತ್ಯನ್ತ**

ಪರಿಪಕ್ವವಿದ್ಯಾವಿನಯಸಂಪನ್ನಃ, ಅತಿಘ್ನೀಮ್ ಅತಿಶಯೇನ ದುಃಖಂ ಹನ್ತಿ ಇತಿ ಅತಿಘ್ನೀ ಆನನ್ದಸ್ಯ ಅವಸ್ಥಾ ಸುಖಾವಸ್ಥಾ ತಾಂ ಪ್ರಾಪ್ಯ ಗತ್ವಾ ಶಯೀತ ಅವತಿಷ್ಠೇತ। ಏಷಾಂ ಚ ಕುಮಾರಾದೀನಾಂ ಸ್ವಭಾವಸ್ಥಾನಾಂ ಸುಖಂ ನಿರತಿಶಯಂ ಪ್ರಸಿದ್ಧಂ ಲೋಕೇ। ವಿಕ್ರಿಯಮಾಣಾನಾಂ ಹಿ ತೇಷಾಂ ದುಃಖಂ ನ ಸ್ವಭಾವತಃ। ತೇನ ತೇಷಾಂ ಸ್ವಾಭಾವಿಕೀ ಅವಸ್ಥಾ ದೃಷ್ಟಾನ್ತತ್ವೇನ ಉಪಾದೀಯತೇ ಪ್ರಸಿದ್ಧತ್ವಾತ್, ನ ತೇಷಾಂ ಸ್ವಾಪ ಏವಾಭಿಪ್ರೇತಃ। ಸ್ವಾಪಸ್ಯ ದಾರ್ಷ್ಟಾನ್ತಿಕತ್ವೇನ ವಿವಕ್ಷಿತತ್ವಾತ್ ವಿಶೇಷಾಭಾವಾಚ್ಚ। ವಿಶೇಷೇ ಹಿ ಸತಿ ದೃಷ್ಟಾನ್ತದಾರ್ಷ್ಟಾನ್ತಿಕಭೇದಃ ಸ್ಯಾತ್। ತಸ್ಮಾತ್ ನ ತೇಷಾಂ ಸ್ವಾಪೋ ದೃಷ್ಟಾನ್ತಃ। ಏವಮೇವ ಯಥಾ ಅಯಂ ದೃಷ್ಟಾನ್ತಃ ಏಷ ವಿಜ್ಞಾನಮಯಃ ಏತತ್ ಶಯನಂ ಶೇತೇ ಇತಿ ಏತಚ್ಛಬ್ದಃ ಕ್ರಿಯಾವಿಶೇಷಣಾರ್ಥಃ ॥

(ಭಾಷ್ಯಾರ್ಥ)

**ಈ ಅವಸ್ಥೆಯು ಯಾವ ಸಂಸಾರದುಃಖವೂ ಇಲ್ಲದ್ದು ಎಂಬುದಕ್ಕೆ (ಇದು) ದೃಷ್ಟಾಂತವು.**[1] ಅದು ಹೇಗೆಂದರೆ (ಹೇಗೆ) ಕ್ಷೀರ (ಸಣ್ಣ) ಕೂಸಾಗಿರುವ ಕುಮಾರನಾಗಲಿ, ಅತ್ಯಂತವಾಗಿ ಪ್ರಜೆಗಳು ಸ್ವಾಧೀನದಲ್ಲಿರುವ ಮಹಾರಾಜನಾಗಲಿ, (ಶಾಸ್ತ್ರದಲ್ಲಿ) ಹೇಳಿರುವಂತೆ (ಕರ್ಮಗಳನ್ನು ಅನುಷ್ಠಾನ) ಮಾಡಿರುವ ಅತ್ಯಂತಪರಿಪಕ್ವವಾದ ವಿದ್ಯಾವಿನಯಗಳಿಂದೊಡಗೂಡಿರುವ ಮಹಾಬ್ರಾಹ್ಮಣನಾಗಲಿ ಅತಿಘ್ನಿಯಾದ, ಅತಿಶಯವಾಗಿ ದುಃಖವನ್ನು ನಾಶಮಾಡುವದರಿಂದ ಅತಿಘ್ನೀ ಎನಿಸುವ ಆನಂದದ ಅವಸ್ಥೆಯು ಸುಖಾವಸ್ಥೆಯು, ಅದನ್ನು ಹೊಂದಿ ಪಡೆದು ಮಲಗಿರುವನೋ, ಎಂದರೆ (ಶಯೀತ=ಅವತಿಷ್ಠೇತ) ಇದ್ದುಕೊಂಡಿರುವನೋ ಎಂದರ್ಥ. ಈ ಕುಮಾರನೇ ಮುಂತಾದವರು (ತಮ್ಮ) ಸ್ವಭಾವದಲ್ಲಿರುವಾಗ ಮಿಗಿಲಿಲ್ಲದ ಸುಖವು (ಇರುವದೆಂದು) ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ವಿಕಾರವಾದರೇ ಅವರಿಗೆ ದುಃಖವಾಗುವದೇ ಹೊರತು ಸ್ವಭಾವದಿಂದಲೇ (ಆಗುವ)ದಿಲ್ಲ. ಆದ್ದರಿಂದ ಅವರ ಸ್ವಾಭಾವಿಕಾವಸ್ಥೆಯನ್ನು ದೃಷ್ಟಾಂತವೆಂದು (ಇಲ್ಲಿ) ತೆಗೆದುಕೊಂಡಿದೆ; ಏಕೆಂದರೆ ಅದು ಪ್ರಸಿದ್ಧವಾಗಿರುತ್ತದೆ.[2] (ಶಯೀತ ಎಂಬ ಮಾತಿನಿಂದ) ಅವರ ನಿದ್ರೆಯೇ (ಇಲ್ಲಿ) ಅಭಿಪ್ರೇತವಲ್ಲ; ಏಕೆಂದರೆ ಸುಷುಪ್ತಿಯನ್ನು ದಾರ್ಷ್ಟಾಂತಿಕವಾಗಿ ಹೇಳಬೇಕೆಂದು ಹೊರಟಿರುತ್ತದೆ.[3] (ಸುಷುಪ್ತಿಯಲ್ಲಿ ಯಾವ) ವಿಶೇಷವೂ ಇರುವದಿಲ್ಲವಾದ್ದ

1. ಸುಷುಪ್ತಿಯಲ್ಲಿಯೂ ಜೀವಬ್ರಹ್ಮವಿಭಾಗವಿರುವದೆಂಬ ವ್ಯಾಖ್ಯಾನಪ್ರಸ್ಥಾನವು ಈ ಭಾಷ್ಯಕ್ಕೆ ವಿರುದ್ಧವಾಗಿದೆ.

2. ಪ್ರಸಿದ್ಧವಾದದ್ದೇ ದೃಷ್ಟಾಂತವಾಗಿರುತ್ತದೆ.

3. ತಾನೇ ದೃಷ್ಟಾಂತ, ತಾನೇ ದಾರ್ಷ್ಟಾಂತಿಕ– ಹೀಗೆ ಇರುವದಿಲ್ಲ.

ರಿಂದಲೂ ( ಸುಷುಪ್ತಿಯು ಇಲ್ಲಿ ದೃಷ್ಟಾಂತವಲ್ಲ). ವಿಶೇಷವಿದ್ದರಲ್ಲವೆ, (ಸುಷುಪ್ತಿಗಳಲ್ಲಿ) ದೃಷ್ಟಾಂತದಾರ್ಷ್ಟಾಂತಿಕ- ಎಂಬ ಭೇದವು ಆದೀತು ?[1] ಆದ್ದರಿಂದ ಅವರ ಸುಷುಪ್ತಿಯು ದೃಷ್ಟಾಂತವಲ್ಲ.

ಹೀಗೆಯೇ, ಈ ದೃಷ್ಟಾಂತವು ಹೇಗೋ ಹಾಗೆಯೇ ಈ ವಿಜ್ಞಾನಮಯನು ಇಂಥ ನಿದ್ರೆಯನ್ನು ನಿದ್ರಿಸುತ್ತಿರುತ್ತಾನೆ ಎಂದು ಏತತ್ (ಹೀಗೆ) ಎಂಬ ಶಬ್ದವನ್ನು ಕ್ರಿಯಾವಿಶೇಷಣಾರ್ಥಕವಾಗಿ (ತೆಗೆದುಕೊಳ್ಳಬೇಕು).

## ಮುಂದಿನ ಕಂಡಿಕೆಯ ಸಂಬಂಧ

(ಭಾಷ್ಯ)

೩೦೧. ಏವಮಯಂ ಸ್ವಾಭಾವಿಕೇ ಸ್ವೇ ಆತ್ಮನಿ ಸರ್ವಸಂಸಾರಧರ್ಮಾತೀತೋ ವರ್ತತೇ ಸ್ವಾಪಕಾಲೇ ಇತಿ "ಕ್ವೈಷ ತದಾಭೂತ್? '' (೨-೧-೧೬) ಇತಿ ಪ್ರಶ್ನಸ್ಯ ಪ್ರತಿವಚನಮುಕ್ತಮ್ । ಅನೇನ ಚ ಪ್ರಶ್ನನಿರ್ಣಯೇನ ವಿಜ್ಞಾನಮಯಸ್ಯ ಸ್ವಭಾವತೋ ವಿಶುದ್ಧಿಃ ಅಸಂಸಾರಿತ್ವಂ ಚ ಉಕ್ತಮ್ । " ಕುತ ಏತದಾಗಾತ್ '' ಇತ್ಯಸ್ಯ ಪ್ರಶ್ನಸ್ಯ ಅಪಾಕರಣಾರ್ಥ ಆರಮ್ಭಃ ॥

(ಭಾಷ್ಯಾರ್ಥ)

ಹೀಗೆ ಇವನು ಸುಷುಪ್ತಿಕಾಲದಲ್ಲಿ ಎಲ್ಲಾ ಸಂಸಾರಧರ್ಮಗಳನ್ನೂ ದಾಟಿ ಸ್ವಾಭಾವಿಕವಾದ ತನ್ನ ಸ್ವರೂಪದಲ್ಲಿ ಇದ್ದುಕೊಂಡಿರುತ್ತಾನೆ[2] ಎಂದು "ಇವನು ಆಗ ಎಲ್ಲಿದ್ದನು ?'' (೨-೧-೧೬) ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಿದ್ದಾಯಿತು. ಈ ಪ್ರಶ್ನೆಯ ಉತ್ತರದಿಂದ ವಿಜ್ಞಾನಮಯನು ಸ್ವಭಾವದಿಂದಲೇ ವಿಶುದ್ಧನಾಗಿರುತ್ತಾನೆ, ಅಸಂಸಾರಿಯೂ ಆಗಿರುತ್ತಾನೆ –ಎಂದು ಹೇಳಿದಂತಾಯಿತು[3]. ಇನ್ನು "ಎತರಿಂದ ಹೀಗೆ ಬಂದನು?" (೨-೧-೧೬) ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಈ (ಮುಂದಿನ ವಾಕ್ಯವನ್ನು ಪ್ರಾರಂಭಿಸಿರುತ್ತದೆ.

---

1. ಸುಷುಪ್ತಿಯಲ್ಲಿ ಬೇರೆಬೇರೆಯ ಬಗೆಯ ವಿಶೇಷಗಳಿದ್ದರೆ ಒಂದನ್ನು ಇನ್ನೊಂದಕ್ಕೆ ಹೋಲಿಸಬಹುದಾಗಿತ್ತು. ಸುಷುಪ್ತಿಯಲ್ಲಿ ಆನಂದಮಯಕೋಶವೆಂಬ ಸವಿಶೇಷತತ್ತ್ವವಿರುವದೆಂದು ಹೇಳುವವರ ಮತವು ಭಾಷ್ಯದ ಆಧಾರವಿಲ್ಲದ್ದು; ಅನುಭವಕ್ಕೆ ವಿರುದ್ಧವಾದದ್ದು.

2. ಟೀಕೆಯಲ್ಲಿ ಈ ವಾಕ್ಯಭಾಗವನ್ನು ಹಿಂದಕ್ಕೇ ಅನ್ವಯಿಸಿದೆಯಾದರೂ ಅರ್ಥವು ಮುಂದಿನ ವಾಕ್ಯಕ್ಕೇ ಹೆಚ್ಚು ಹೊಂದುತ್ತದೆಯಾದ್ದರಿಂದ ನಾವು ವಾರ್ತಿಕವನ್ನು ಅನುಸರಿಸಿ ಇದರ ಅನ್ವಯವನ್ನು ಮಾಡಿರುತ್ತೇವೆ.

3. ಸುಷುಪ್ತಿಯಲ್ಲಿ ಮಾತ್ರವಲ್ಲ, ಯಾವಾಗಲೂ ಅಸಂಸಾರಿತ್ವವೇ ಇವನ ಸ್ವಭಾವವು ; ಜಾಗ್ರತ್ಸ್ವಪ್ನಗಳಲ್ಲಿ ಉಪಾಧಿವಶದಿಂದಲೇ ಇವನು ಸಂಸಾರಿಯೆಂಬ ಭ್ರಾಂತಿಯುಂಟಾಗುತ್ತದೆ ಎಂದು ಹೇಳಿದಂತೆ ಆಯಿತು.

# ಕುತ ಏತದಾಗಾತ್? ಎಂಬ ಪ್ರಶ್ನೆಯ ಚರ್ಚೆ

(ಭಾಷ್ಯ)

೩೦೨. ನನು ಯಸ್ಮಿನ್ ಗ್ರಾಮೇ ನಗರೇ ವಾ ಯೋ ಭವತಿ, ಸೋಽನ್ಯತ್ರ ಗಚ್ಛನ್ ತತ ಏವ ಗ್ರಾಮಾತ್ ನಗರಾದ್ವಾ ಆಗಚ್ಛತಿ ನಾನ್ಯತಃ। ತಥಾ ಸತಿ "ಕ್ವೈಷ ತದಾಭೂತ್" ಇತ್ಯೇತಾವಾನೇವ ಅಸ್ತು ಪ್ರಶ್ನಃ। ಯತ್ರಾಭೂತ್ ತತ ಏವ ಆಗಮನಂ ಪ್ರಸಿದ್ಧಂ ಸ್ಯಾತ್ ನಾನ್ಯತಃ ಇತಿ 'ಕುತ ಏತದಾಗಾತ್' ಇತಿ ಪ್ರಶ್ನೋ ನಿರರ್ಥಕ ಏವ। ಕಿಂ ಶ್ರುತಿರುಪಾಲಭ್ಯತೇ ಭವತಾ? ನ। ಕಿಂ ತರ್ಹಿ ದ್ವಿತೀಯಸ್ಯ ಪ್ರಶ್ನಸ್ಯ ಅರ್ಥಾನ್ತರಂ ಶ್ರೋತುಮ್ ಇಚ್ಛಾಮಿ, ಅತ ಆನರ್ಥಕ್ಯಂ ಚೋದಯಾಮಿ। ಏವಂ ತರ್ಹಿ ಕುತಃ ಇತ್ಯಪಾದಾನಾರ್ಥತಾ ನ ಗೃಹ್ಯತೇ। ಅಪಾದಾನಾರ್ಥತ್ವೇ ಹಿ ಪುನರುಕ್ತತಾ ನಾನ್ಯಾರ್ಥತ್ವೇ। ಅಸ್ತು ತರ್ಹಿ ನಿಮಿತ್ತಾರ್ಥಃ ಪ್ರಶ್ನಃ। ಕುತ ಏತದಾಗಾತ್ ಕಿಂ ನಿಮಿತ್ತಮ್ ಇಹಾಗಮನಮ್ ಇತಿ। ನ ನಿಮಿತ್ತಾರ್ಥತಾಪಿ। ಪ್ರತಿವಚನವೈರೂಪ್ಯಾತ್। ಆತ್ಮನಶ್ಚ ಸರ್ವಸ್ಯ ಜಗತಃ ಅಗ್ನಿವಿಸ್ಫುಲಿಙ್ಗಾದಿವತ್[1] ಉತ್ಪತ್ತಿಃ ಪ್ರತಿವಚನೇ ಶ್ರೂಯತೇ। ನ ಹಿ ವಿಸ್ಫುಲಿಙ್ಗಾನಾಂ ವಿದ್ರವಣೇ ಅಗ್ನಿರ್ನಿಮಿತ್ತಮ್। ಅಪಾದಾನಮೇವ ತು ಸಃ। ತಥಾ ಪರಮಾತ್ಮಾ ವಿಜ್ಞಾನಮಯಸ್ಯ ಆತ್ಮನೋಽಪಾದಾನತ್ವೇನೈವ[2] ಶ್ರೂಯತೇ "ಅಸ್ಮಾದಾತ್ಮನಃ" ಇತಿ ಏತಸ್ಮಿನ್ ವಾಕ್ಯೇ। ತಸ್ಮಾತ್ ಪ್ರತಿವಚನವೈಲೋಮ್ಯಾತ್ 'ಕುತಃ?' ಇತಿ ಪ್ರಶ್ನಸ್ಯ ನಿಮಿತ್ತಾರ್ಥತಾ ನ ಶಕ್ಯತೇ ವರ್ಣಯಿತುಮ್। ನನು ಅಪಾದಾನಪಕ್ಷೇಽಪಿ ಪುನರುಕ್ತತಾದೋಷಃ ಸ್ಥಿತ ಏವ। ನೈಷ ದೋಷಃ। ಪ್ರಶ್ನಾಭ್ಯಾಮ್ ಆತ್ಮನಿ ಕ್ರಿಯಾಕಾರಕಫಲಾತ್ಮತಾಪೋಹಸ್ಯ ವಿವಕ್ಷಿತತ್ವಾತ್। ಇಹ ಹಿ ವಿದ್ಯಾವಿದ್ಯಾವಿಷಯೌ ಉಪನ್ಯಸ್ತೌ 'ಆತ್ಮೇತ್ಯೇವೋಪಾಸೀತ' (೧-೪-೭), 'ಆತ್ಮಾನಮೇವಾವೇತ್' (೧-೪-೧೦), 'ಆತ್ಮಾನಮೇವ ಲೋಕಮುಪಾಸೀತ' (೧-೪-೧೫) ಇತಿ ವಿದ್ಯಾವಿಷಯಃ। ತಥಾ ಅವಿದ್ಯಾವಿಷಯಶ್ಚ ಪಾಙ್ಕ್ತಂ ಕರ್ಮ ತತ್ಫಲಂ ಚ ಅನ್ನತ್ರಯಂ ನಾಮರೂಪಕರ್ಮಾತ್ಮಕಮಿತಿ। ತತ್ರ ಅವಿದ್ಯಾವಿಷಯೇ ವಕ್ತವ್ಯಂ ಸರ್ವಮ್ ಉಕ್ತಮ್। ವಿದ್ಯಾವಿಷಯಸ್ತು ಆತ್ಮಾ ಕೇವಲ ಉಪನ್ಯಸ್ತಃ, ನ ನಿರ್ಣೀತಃ ತನ್ನಿರ್ಣಯಾಯ ಚ 'ಬ್ರಹ್ಮ ತೇ ಬ್ರವಾಣಿ' ಇತಿ ಪ್ರಕ್ರಾನ್ತಮ್, ಜ್ಞಪಯಿಷ್ಯಾಮಿ ಇತಿ ಚ। ಅತಃ ತದ್ ಬ್ರಹ್ಮ ವಿದ್ಯಾವಿಷಯಭೂತಂ ಜ್ಞಾಪಯಿತವ್ಯಂ ಯಾಥಾತ್ಮ್ಯತಃ। ತಸ್ಯ ಚ ಯಾಥಾತ್ಮ್ಯಂ ಕ್ರಿಯಾ

---

1. ಅಗ್ನೇರ್ವಿಸ್ಫುಲಿಙ್ಗಾದಿವತ್ ಎಂದಿದ್ದರೆ ಚೆನ್ನಾಗಿರುತ್ತಿತ್ತೆಂದು ಕಾಣುತ್ತದೆ. ಅನುವಾದವನ್ನೂ ಟಿಪ್ಪಣಿಯನ್ನೂ ನೋಡಿರಿ.

2. 'ಅಪಾದಾನತ್ವೇನ' ಎಂಬುದಕ್ಕಿಂತ ಈ ಪಾಠವು ಮೇಲು.

ಕಾರಕಫಲಭೇದಶೂನ್ಯಮ್ ಅತ್ಯನ್ತಶುದ್ಧಮ್ ಅದ್ವೈತಮ್ ಇತ್ಯೇತದ್ ವಿವಕ್ಷಿತಮ್ । ಅತಃ ತದನುರೂಪೌ ಪ್ರಶ್ನೌ ಉತ್ಥಾಪ್ಯೇತೇ ಶ್ರುತ್ಯಾ 'ಕ್ವೈಷ ತದಾಭೂತ್ ಕುತ ಏತದಾಗಾತ್' ಇತಿ । ತತ್ರ ಯತ್ರ ಭವತಿ ತತ್ ಅಧಿಕರಣಮ್, ಯದ್ ಭವತಿ ತದ್ ಅಧಿಕರ್ತವ್ಯಮ್ । ತಯೋಶ್ಚ ಅಧಿಕರಣಾಧಿಕರ್ತವ್ಯಯೋರ್ಭೇದೋ ದೃಷ್ಟೋ ಲೋಕೇ । ತಥಾ ಯತ ಆಗಚ್ಛತಿ ತತ್ ಅಪಾದಾನಮ್ । ಯ ಆಗಚ್ಛತಿ ಸ ಕರ್ತಾ ತಸ್ಮಾತ್ ಅನ್ಯೋ ದೃಷ್ಟಃ । ತಥಾ ಆತ್ಮಾ ಕ್ವಾಪಿ ಅಭೂತ್ ಅನ್ಯಸ್ಮಿನ್ ಅನ್ಯಃ, ಕುತಶ್ಚಿತ್ ಆಗಾತ್ ಅನ್ಯಸ್ಮಾತ್ ಅನ್ಯಃ ಕೇನಚಿತ್ ಭಿನ್ನೇನ ಸಾಧನಾನ್ತರೇಣ ಇತ್ಯೇವಂ ಲೋಕವತ್ ಪ್ರಾಪ್ತಾ ಬುದ್ಧಿಃ । ಸಾ ಪ್ರತಿವಚನೇನ ನಿವರ್ತಯಿತವ್ಯಾ ಇತಿ । ನಾಯಮ್ ಆತ್ಮಾ ಅನ್ಯಃ ಅನ್ಯತ್ರ ಬಭೂವ, ಅನ್ಯೋ ವಾ ಅನ್ಯಸ್ಮಾತ್ ಆಗತಃ । ಸಾಧನಾನ್ತರಂ ವಾ ಆತ್ಮನಿ ಅಸ್ತಿ । ಕಿಂ ತರ್ಹಿ ಸ್ವಾತ್ಮನ್ಯೇವ ಅಭೂತ್ । "ಸ್ವಮಾತ್ಮಾನಮಪೀತೋ ಭವತಿ" (ಛಾಂ. ೬-೮-೧), [1] "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬-೮-೧), "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ" (೪-೩-೨೧), "ಪರ ಆತ್ಮನಿ ಸಂಪ್ರತಿಷ್ಠತೇ" (ಪ್ರ. ೪-೯) ಇತ್ಯಾದಿಶ್ರುತಿಭ್ಯಃ । ಅತ ಏವ ನಾನ್ಯೋಽನ್ಯಸ್ಮಾತ್ ಆಗಚ್ಛತಿ । ತತ್ ಶ್ರುತ್ಯೈವ ಪ್ರದರ್ಶ್ಯತೇ "ಅಸ್ಮಾದಾತ್ಮನಃ" ಇತಿ । ಆತ್ಮವ್ಯತಿರೇಕೇಣ ವಸ್ತ್ವನ್ತರಾಭಾವಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಯಾವನು ಯಾವ ಹಳ್ಳಿಯಲ್ಲಿ ಅಥವಾ ನಗರದಲ್ಲಿ ಇರುತ್ತಾನೋ ಅವನು ಮತ್ತೊಂದು ಕಡೆಗೆ ಹೋಗುವಾಗ ಅದೇ ಹಳ್ಳಿಯಿಂದಲೇ ಅಥವಾ (ಅದೇ) ನಗರದಿಂದಲೇ ಹೋಗುತ್ತಾನೆಯೇ ಹೊರತು ಮತ್ತೊಂದರಿಂದ ಹೋಗುವದಿಲ್ಲ. ಹೀಗಾದಲ್ಲಿ 'ಇವನು ಆಗ ಎಲ್ಲಿದ್ದನು ?' ಎಂದಿಷ್ಟೇ ಪ್ರಶ್ನೆ ಸಾಕು. ಎಲ್ಲಿದ್ದನೋ ಅಲ್ಲಿಂದಲೇ ಬರುವಿಕೆಯು ಎಂದು ಪ್ರಸಿದ್ಧವಾಗಿರುವದೇ ಆದೀತೇ ಹೊರತು ಮತ್ತೊಂದು ಕಡೆಯಿಂದ (ಬರುತ್ತಾನೆಂದು ಆಗ)ಲಾರದು; ಆದ್ದರಿಂದ 'ಏತರಿಂದ ಹೀಗೆ ಬಂದನು ?' ಎಂಬ ಪ್ರಶ್ನೆಯು ನಿರರ್ಥಕವೇ.

(ಪ್ರತ್ಯಾಕ್ಷೇಪ) :- ಶ್ರುತಿಯನ್ನೂ ನೀನು ಆಕ್ಷೇಪಿಸುವೆಯೋನು ?

(ಆಕ್ಷೇಪಕನ ಸಮಾಧಾನ) :- ಹಾಗಲ್ಲ. ಮತ್ತೇನೆಂದರೆ ಎರಡನೆಯ ಪ್ರಶ್ನೆಗೆ ಮತ್ತೊಂದು ಅರ್ಥವನ್ನು ಕೇಳಬಯಸುತ್ತೇನೆ ; ಆದ್ದರಿಂದ (ಅದು) ವ್ಯರ್ಥವಾಗುವದೆಂದು ಆಕ್ಷೇಪಿಸಿರುತ್ತೇನೆ.

---

1. ಇದು ಶ್ರುತಿಯ ಅರ್ಥ. ಶ್ರುತಿಯಲ್ಲಿ 'ಆತ್ಮಾನಮ್' ಎಂಬ ಮಾತಿಲ್ಲ.

(ಏಕದೇಶಿಯ ಪರಿಹಾರ) :- ಹೀಗಾದರೆ 'ಏತರಿಂದ ?' ಎಂಬುದನ್ನು ಅಪಾದಾನಾರ್ಥದಲ್ಲಿ ತೆಗೆದುಕೊಳ್ಳಬಾರದು. ಅಪಾದಾನಾರ್ಥವಾದರಲ್ಲವೆ, ಪುನರುಕ್ತಿ ? ಮತ್ತೊಂದು ಅರ್ಥವಾದರೆ (ಪುನರುಕ್ತಿ)ಯಾಗದು. ಆದ್ದರಿಂದ 'ಏತರಿಂದ ಹೀಗೆ ಬಂದನು ?' ಎಂದರೆ ಯಾವ ನಿಮಿತ್ತದಿಂದ ಇಲ್ಲಿಗೆ ಬರುವಿಕೆ ಯಾಯಿತು ? ಎಂದು (ಈ) ಪ್ರಶ್ನೆಯು ನಿಮಿತ್ತಾರ್ಥವೆಂದಾಗಲಿ.

(ಆಕ್ಷೇಪ) :- ನಿಮಿತ್ತಾರ್ಥವೂ (ಇಲ್ಲಿ ಆಗು)ವದಿಲ್ಲ. ಏಕೆಂದರೆ (ಅದು) ಉತ್ತರಕ್ಕೆ ಅನನುಗುಣವಾಗುತ್ತದೆ. (ಇದರ ವಿವರ) : ಆತ್ಮನಿಂದ ಜಗತ್ತೆಲ್ಲವೂ ಬೆಂಕಿಯ ಕಿಡಿಗಳೇ ಮುಂತಾದವುಗಳಂತೆ[1] ಉತ್ಪನ್ನ(ವಾಗು ವದೆಂದು) ಉತ್ತರವಾಕ್ಯದಲ್ಲಿ ಶ್ರುತಿಯುಲ್ಲಿದೆ. ಕಿಡಿಗಳು ಸಿಡಿದುಬರುವದಕ್ಕೆ ಬೆಂಕಿಯು ನಿಮಿತ್ತವಲ್ಲ, ಅದು ಅಪಾದಾನವೇ. ಹಾಗೆಯೇ ಪರಮಾತ್ಮನು ವಿಜ್ಞಾನಮಯಾತ್ಮನಿಗೆ ಅಪಾದಾನವು ಎಂದೇ 'ಅಸ್ಮಾದಾತ್ಮನಃ' ಎಂಬೀ ವಾಕ್ಯದಲ್ಲಿ ಶ್ರುತಿ ಹೇಳುತ್ತದೆ.[2] ಆದ್ದರಿಂದ ಉತ್ತರಕ್ಕೆ ಅನುಗುಣವಲ್ಲವಾದ್ದ ರಿಂದ 'ಏತರಿಂದ ?' ಎಂಬ ಪ್ರಶ್ನೆಗೆ ನಿಮಿತ್ತಾರ್ಥವನ್ನು ವರ್ಣಿಸುವದು ಆಗಲಾರದು.

( ಪ್ರತ್ಯಾಕ್ಷೇಪ ) :- ಅಪಾದಾನಪಕ್ಷದಲ್ಲಿಯೂ ಪುನರುಕ್ತಿದೋಷವು ಇದ್ದೇ ಇದೆಯಲ್ಲ !

(ಸಿದ್ಧಾಂತಿಯ ಪರಿಹಾರ) :- ಇದು ದೋಷವಲ್ಲ. ಏಕೆಂದರೆ (ಈ) ಎರಡು ಪ್ರಶ್ನೆಗಳಿಂದ ಆತ್ಮನಲ್ಲಿ ಕ್ರಿಯಾಕಾರಕಫಲಾತ್ಮತ್ವವನ್ನು ಅಲ್ಲಗಳೆಯು ವದೇ ವಿವಕ್ಷಿತವಾಗಿರುತ್ತದೆ. (ಇದರ ವಿವರ) : ಇಲ್ಲಿ ವಿದ್ಯಾವಿದ್ಯೆಗಳ ವಿಷಯ ಗಳನ್ನು ಉಪಕ್ರಮದಲ್ಲಿ ಹೇಳಿರುತ್ತದೆ.[3] "ಆತ್ಮನೆಂದೇ ಉಪಾಸನೆಮಾಡ ಬೇಕು" (೧-೪-೭), "ತನ್ನನ್ನೇ ಅರಿತುಕೊಂಡಿತು" (೧-೪-೧೦), "ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು" (೧-೪-೧೫)- ಎಂಬದು ವಿದ್ಯೆಯ ವಿಷಯವು. ಇದರಂತೆ ಪಾಙ್ಕ್ತಕರ್ಮವೂ, ಅದರ ಫಲವಾದ ನಾಮರೂಪ ಕರ್ಮಾತ್ಮಕವಾದ ಅನ್ನತ್ರಯವೂ ಅವಿದ್ಯೆಯ ವಿಷಯವು. ಇವುಗಳಲ್ಲಿ ಅವಿದ್ಯೆ ಯ ವಿಷಯದಲ್ಲಿ ಹೇಳತಕ್ಕದ್ದೆಲ್ಲವನ್ನೂ ಹೇಳಿದ್ದಾಯಿತು. ಆದರೆ ವಿದ್ಯೆಗೆ

---

1. ಅಗ್ನೇಃ ಎಂಬ ಪಾಠವಿದ್ದರೆ "ಬೆಂಕಿಯಿಂದ" ಎಂದು ಕನ್ನಡಿಸಬಹುದಾಗು ವದು ; ಇದು ಉತ್ತರವಾಕ್ಯದ ಶ್ರುತಿಗೆ ಅನುಗುಣವೂ ಆಗುವದು.

2. ಅಲ್ಲಿ ನಿಮಿತ್ತವನ್ನೇನೂ ಹೇಳಿಲ್ಲ.

3. ಮೊದಲು ಈ ಪಕ್ಷವನ್ನು ದುಷ್ಟವೆಂದು ಬಿಡಲಿಲ್ಲವೆ ? ಎಂದು ಏಕದೇಶಿ ಎಚ್ಚರಿಸಿರುತ್ತಾನೆ. ಎರಡು ಪಕ್ಷಗಳಲ್ಲಿಯೂ ದೋಷವಿರುವದರಿಂದ ಮತ್ತೊಂದು ಅರ್ಥ ವನ್ನು ಹೇಳಬೇಕೆಂದು ಇದರಿಂದ ಸಿದ್ಧವಾಗುತ್ತದೆ.

ವಿಷಯನಾದ ಕೇವಲಾತ್ಮನನ್ನು[1] ಉಪಕ್ರಮದಲ್ಲಿ ಹೇಳಿದೆಯೇ ಹೊರತು ನಿರ್ಣಯಿಸಿರುವದಿಲ್ಲ. ಅಪರ ನಿರ್ಣಯಕ್ಕಾಗಿ "ಬ್ರಹ್ಮವನ್ನು ನಿನಗೆ ಹೇಳುವೆನು" (೨-೧-೧೧) ಎಂದೂ "ವಿಜ್ಞಾಪನೆಮಾಡಿಕೊಳ್ಳುವೆನು" (೨-೧-೧೫) ಎಂದೂ ಉಪಕ್ರಮದಲ್ಲಿ ಹೇಳಿದೆ. ಆದ್ದರಿಂದ ವಿದ್ಯೆಗೆ ವಿಷಯವಾಗಿರುವ ಆ ಬ್ರಹ್ಮವನ್ನು ಯಾಥಾತ್ಮ್ಯಕ್ಕೆ ತಕ್ಕಂತೆ ತಿಳಿಸಿಕೊಡಬೇಕಾಗಿದೆ. ಮತ್ತು ಅದರ ಯಾಥಾತ್ಮ್ಯವು ಕ್ರಿಯಾಕಾರಕಫಲಗಳೆಂಬ ಭೇದವಿಲ್ಲದ್ದು, ಅತ್ಯಂತ ವಿಶುದ್ಧವಾದ ಅದ್ವೈತವು ಎಂಬಿದು ವಿವಕ್ಷಿತವಾಗಿರುತ್ತದೆ. ಆದ್ದರಿಂದ ಅದಕ್ಕೆ ಅನುರೂಪವಾಗಿ "ಇವನು ಆಗ ಎಲ್ಲಿದ್ದನು, ಎತರಿಂದ ಹೀಗೆ ಬಂದನು?" ಎಂಬೀ (ಎರಡು) ಪ್ರಶ್ನೆಗಳನ್ನು ಶ್ರುತಿಯು ಎಬ್ಬಿಸಿರುತ್ತದೆ.

ಇಲ್ಲಿ ಯಾವದರಲ್ಲಿ ಇರುತ್ತದೆಯೋ ಅದು ಅಧಿಕರಣವು, ಯಾವದು ಇರುತ್ತದೆಯೋ ಅದು ಅಧಿಕರ್ತವ್ಯವು; ಆ ಅಧಿಕರಣಾಧಿಕರ್ತವ್ಯಗಳೆರಡಕ್ಕೂ ಭೇದವಿರುವದು ಲೋಕದಲ್ಲಿ ಕಂಡಿರುತ್ತದೆ. ಹಾಗೆಯೇ ಎಲ್ಲಿಂದ ಬರುತ್ತಾನೋ ಅದು ಅಪಾದಾನವು, ಯಾವನು ಬರುತ್ತಾನೋ ಅವನು ಅದಕ್ಕಿಂತ ಬೇರೆಯಾಗಿರುವ ಕರ್ತೃ ಎಂದೂ ಕಂಡುಬರುತ್ತದೆ. **ಹೀಗೆಯೇ ಆತ್ಮನು ಎಲ್ಲಿಯೋ ಮತ್ತೊಂದರಲ್ಲಿ (ತಾನು) ಬೇರೆಯಾಗಿ ಇದ್ದನು, ಮತ್ತೆ ಯಾವದೋ ಒಂದು ಬೇರೆಯ (ವಸ್ತು)ವಿನಿಂದ (ತಾನು) ಬೇರೆಯಾಗಿಯೇ (ಇದ್ದು) ಬಂದಿರುತ್ತಾನೆ, ಯಾವದೋ ಒಂದು (ತನಗಿಂತ) ಬೇರೆಯಾದ ಸಾಧನದಿಂದ ಬಂದನು ಎಂದಿಂತು ಲೋಕದಂತೆ ಬುದ್ಧಿಯು ಪ್ರಾಪ್ತವಾಗುತ್ತದೆ.[2] ಅದನ್ನು ಉತ್ತರದಿಂದ ತೊಲಗಿಸಬೇಕಾಗಿರುತ್ತದೆ.** ಈ ಆತ್ಮನು (ತಾನು) ಬೇರೆಯಾಗಿ ಮತ್ತೊಂದರಲ್ಲಿ ಇರಲಿಲ್ಲ, ತಾನು ಬೇರೆಯಾಗಿ (ಬೇರೆಯಾದ) ಮತ್ತೊಂದರಿಂದ ಬಂದಿಲ್ಲ, ಆತ್ಮನಲ್ಲಿ ಮತ್ತೊಂದು ಸಾಧನವೂ ಇರುವದಿಲ್ಲ, ಮತ್ತೇನೆಂದರೆ ತನ್ನ ಆತ್ಮದಲ್ಲಿಯೇ ಇದ್ದನು; "ತನ್ನ ಆತ್ಮನಲ್ಲಿ ಲಯವಾಗಿರುತ್ತಾನೆ" (ಛಾಂ. ೬-೮-೧), "ಸೋಮ್ಯನೆ, ಆಗ ಸತ್ತಿನೊಡನೆ ಸಂಪನ್ನನಾಗಿರುತ್ತಾನೆ" (ಛಾಂ. ೬-೮-೧), "ಪ್ರಾಜ್ಞನಾದ ಆತ್ಮನಿಂದ ಆಲಿಂಗಿತನಾಗಿರುತ್ತಾನೆ" (೪-೩-೨೧), "ಪರ ಆತ್ಮನಲ್ಲಿ ಒಂದಾಗಿರುತ್ತಾನೆ" (ಪ್ರ. ೪-೭)- ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ) : ಆದ್ದರಿಂದಲೇ ಬೇರೊಬ್ಬನು ಬೇರೆ ಒಂದರಿಂದ ಬಂದಿರುವ

1. ಕೇವಲಃ ಎಂಬ ಮೂಲಾನುಸಾರವಾಗಿ ಹೀಗೆ ಕನ್ನಡಿಸಿದೆ; 'ಕೇವಲಂ' ಎಂಬ ಪಾಠವಿದ್ದರೆ "ಸುಮ್ಮನೆ ಹೇಳಿದೆಯೇ ಹೊರತು ನಿರ್ಣಯಿಸಲಿಲ್ಲ" ಎಂದು ಕನ್ನಡಿಸಬೇಕಾಗುವದು.

2. ಹೀಗೆಂದು ದೃಷ್ಟಾಂತದ ಬಲದಿಂದ ಅನುಮಾನಿಸಬಹುದಾಗಿರುತ್ತದೆ ಎಂದರ್ಥ.

ದಿಲ್ಲ; ಅದನ್ನು ಶ್ರುತಿಯೇ "ಈ ಆತ್ಮನಿಂದ" ಎಂದು ತಿಳಿಸುತ್ತಲಿದೆ. ಏಕೆಂದರೆ ಆತ್ಮನಿಗಿಂತ ಬೇರೆಯಾಗಿ ವಸ್ತುವಿರುವದಿಲ್ಲ.[1]

## ಆತ್ಮನಿಂದಲೇ ಪ್ರಾಣಾದಿಗಳ ಉತ್ಪತ್ತಿ

(ಉಪನಿಷತ್ತು)

**ಸ ಯಥೋರ್ಣನಾಭಿಸ್ತನ್ತುನೋಚ್ಚರೇದ್ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾವ್ಯುಚ್ಚರನ್ತ್ಯೇವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರನ್ತಿ ತಸ್ಯೋಪನಿಷತ್ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್ ॥ ೨೦ ॥**

೨೦. ಅದು (ಹೇಗೆಂದರೆ), ಹೇಗೆ ಊರ್ಣನಾಭಿಯು ದಾರವಾಗಿ ಮುಂದುವರಿಯುವದೋ, ಹೇಗೆ ಬೆಂಕಿಯಿಂದ ಸಣ್ಣ ಕಿಡಿಗಳು ಸಿಡಿಯುವವೋ ಹಾಗೆಯೇ ಈ ಆತ್ಮನಿಂದ ಎಲ್ಲಾ ಪ್ರಾಣಗಳೂ ಲೋಕಗಳೂ ಎಲ್ಲಾ ದೇವತೆಗಳೂ ಎಲ್ಲಾ ಭೂತಗಳೂ ಸಿಡಿಯುತ್ತವೆ. ಅವನ ಉಪನಿಷತ್ತು 'ಸತ್ಯದ ಸತ್ಯವು' ಎಂದು. ಪ್ರಾಣಗಳೇ ಸತ್ಯವು, ಅವುಗಳಿಗೆ ಇವನು ಸತ್ಯವು.

## ಆತ್ಮನಿಗಿಂತ ಬೇರೆಯಾದ ವಸ್ತುವಿಲ್ಲ

(ಭಾಷ್ಯ)

೩೦೩. ನನು ಅಸ್ತಿ ಪ್ರಾಣಾದಿ ಆತ್ಮವ್ಯತಿರಿಕ್ತಂ ವಸ್ತ್ವನ್ತರಮ್ । ನ। ಪ್ರಾಣಾದೇಸ್ತತ ಏವ ನಿಷ್ಪತ್ತೇಃ । ತತ್ಕಥಮಿತಿ ? ಉಚ್ಯತೇ। ತತ್ರ ದೃಷ್ಟಾನ್ತಃ, ಸ ಯಥಾ ಲೋಕೇ ಊರ್ಣನಾಭಿಃ ಲೂತಾಕೀಟಃ ಏಕ ಏವ ಪ್ರಸಿದ್ಧಃ ಸನ್ ಸ್ವಾತ್ಮಾಪ್ರವಿಭಕ್ತೇನ ತನ್ತುನಾ ಉಚ್ಚರೇತ್ ಉದ್ಗಚ್ಛೇತ್ । ನ ಚಾಸ್ತಿ ತಸ್ಯ ಉದ್ಗಮನೇ ಸ್ವತೋಽತಿರಿಕ್ತಂ ಕಾರಕಾನ್ತರಮ್ । ಯಥಾ ಚ ಏಕರೂಪಾತ್ ಏಕಸ್ಮಾತ್ ಅಗ್ನೇಃ ಕ್ಷುದ್ರಾ ಅಲ್ಪಾಃ ವಿಸ್ಫುಲಿಙ್ಗಾಃ ತ್ರುಟಯಃ ಅಗ್ನ್ಯವಯವಾಃ ವ್ಯುಚ್ಚರನ್ತಿ ವಿವಿಧಂ ನಾನಾ ವಾ ಉಚ್ಚರನ್ತಿ। ಯಥಾ

---

1. ಆತ್ಮನು ಅದ್ವಿತೀಯನೆಂದೂ ಕ್ರಿಯಾಕಾರಕಫಲರಹಿತನೆಂದೂ ಸುಷುಪ್ತಿ ಪರೀಕ್ಷೆಯಿಂದ ಏರ್ಪಡುತ್ತದೆ. ಏಕೆಂದರೆ ಆತ್ಮನಲ್ಲಿ ಆಗ ಯಾವ ವಿಶೇಷವೂ ಕಾಣುವದಿಲ್ಲ. ಆದ್ದರಿಂದ ಜಾಗ್ರತ್ತಿನಲ್ಲಿ ತೋರುವ ಕ್ರಿಯಾಕಾರಕಫಲಭಾವವು ಅವನಲ್ಲಿ ಕಲ್ಪಿತವಾಯಿತು ಎಂಬುದನ್ನು ಈ ಚರ್ಚೆಯಿಂದ ಸ್ಫುಟಗೊಳಿಸಿದಂತಾಯಿತು.

ಇಮೌ ದೃಷ್ಟಾನ್ತೌ ಕಾರಕಭೇದಾಭಾವೇಽಪಿ ಪ್ರವೃತ್ತಿಂ ದರ್ಶಯತಃ, ಪ್ರಾಕ್ ಪ್ರವೃತ್ತೇಶ್ಚ ಸ್ವಭಾವತ ಏಕತ್ವಮ್, ಏವಮೇವ ಅಸ್ಮಾತ್ ಆತ್ಮನಃ ವಿಜ್ಞಾನ ಮಯಸ್ಯ ಪ್ರಾಕ್ ಪ್ರತಿಬೋಧಾತ್ ಯತ್ ಸ್ವರೂಪಂ ತಸ್ಮಾತ್ ಇತ್ಯರ್ಥಃ। ಸರ್ವೇ ಪ್ರಾಣಾಃ ವಾಗಾದಯಃ ಸರ್ವೇ ಲೋಕಾಃ ಭೂರಾದಯಃ ಸರ್ವಾಣಿ ಕರ್ಮಫಲಾನಿ ಸರ್ವೇ ದೇವಾಃ ಪ್ರಾಣಲೋಕಾಧಿಷ್ಠಾತಾರೋಽಗ್ನ್ಯಾದಯಃ ಸರ್ವಾಣಿ ಭೂತಾನಿ ಬ್ರಹ್ಮಾದಿಸ್ತಮ್ಬಪರ್ಯನ್ತಾನಿ ಪ್ರಾಣಿಜಾತಾನಿ। 'ಸರ್ವ ಏತ ಆತ್ಮಾನಃ' ಇತ್ಯಸ್ಮಿನ್ ಪಾಠೇ ಉಪಾಧಿಸಂಪರ್ಕಜನಿತಪ್ರಬುಧ್ಯಮಾನ ವಿಶೇಷಾತ್ಮಾನ ಇತ್ಯರ್ಥಃ। ವ್ಯುಚ್ಚರನ್ತಿ ॥

(ಭಾಷ್ಯಾರ್ಥ)

(ಆಕ್ಷೇಪ):– ಆತ್ಮನಿಗಿಂತ ವ್ಯತಿರಿಕ್ತವಾಗಿ ಪ್ರಾಣಗಳೇ ಮುಂತಾದ ಮತ್ತೊಂದು ವಸ್ತುವೂ ಇದೆಯಲ್ಲ!

(ಪರಿಹಾರ):– ಹಾಗಲ್ಲ. ಏಕೆಂದರೆ ಪ್ರಾಣಾದಿಗಳು ಆದರಿಂದಲೇ ಉಂಟಾಗುತ್ತವೆ. ಅದು ಹೇಗೆ ? ಎಂದರೆ ಶ್ರುತಿ ಹೇಳುತ್ತಿದೆ.

ಇದಕ್ಕೆ ದೃಷ್ಟಾಂತವಿದು. ಹೇಗೆ ಲೋಕದಲ್ಲಿ ಊರ್ಣನಾಭಿಯು ಜೇಡರಹುಳುವು ತಾನೊಂದೇ ಎಂದು ಪ್ರಸಿದ್ಧವಾಗಿದ್ದು ತನ್ನ ಸ್ವರೂಪಕ್ಕಿಂತ ಬೇರೆಯಲ್ಲದ ದಾರವಾಗಿ ಮುಂದುವರಿಯುವದೋ ಹೊರಟುಬರುವದೋ, (ಹಾಗೆ) ಹೊರಟುಬರುವದಕ್ಕೆ ಅದಕ್ಕೆ ತನಗಿಂತ ಬೇರೆಯಾದ ಮತ್ತೊಂದು ಕಾರಕವೂ (ಹೇಗೆ) ಇರುವದಿಲ್ಲವೋ, ಮತ್ತು ಒಂದೇ ರೂಪವಾಗಿ ಒಂದೇ ಆಗಿರುವ ಬೆಂಕಿಯಿಂದ ಸಣ್ಣ ಅಲ್ಪವಾದ ಕಿಡಿಗಳು, ಬೆಂಕಿಯ ಅವಯವ ಗಳಾದ ಕಣಗಳು ಸಿಡಿಯುವವೋ, (ವ್ಯುಚ್ಚರನ್ತಿ ಎಂಬ ಮೂಲವನ್ನು) ವಿವಿಧ ವಾಗಿ ಅಥವಾ ಅನೇಕವಾಗಿ[1] ಹಾರುವವೋ (ಎಂದು ವಿವರಿಸಬಹುದು). ಹೇಗೆ ಈ ಎರಡು ದೃಷ್ಟಾಂತಗಳು ಬೇರೆಯ ಕಾರಕಗಳಿಲ್ಲದಿದ್ದರೂ ಪ್ರವೃತ್ತಿ ಯನ್ನೂ ಪ್ರವೃತ್ತಿಗಿಂತ ಪೂರ್ವದಲ್ಲಿ ಸ್ವಭಾವದಿಂದ ಏಕತ್ವ(ವಿರುವದೆಂಬು) ದನ್ನೂ ತಿಳಿಸಿಕೊಡುವವೋ, ಹಾಗೆಯೇ ಈ ಆತ್ಮನಿಂದ, ಎಚ್ಚರವಾಗುವ ಮುಂಚೆ ವಿಜ್ಞಾನಮಯನ ಸ್ವರೂಪವಿರುವದಲ್ಲ ಅದರಿಂದ ಎಂದರ್ಥ. (ಈ ಆತ್ಮನಿಂದ) ವಾಗಾದಿಯಾದ ಎಲ್ಲಾ ಪ್ರಾಣಗಳೂ ಭೂರಾದಿಯಾದ ಎಲ್ಲಾ ಲೋಕಗಳೂ ಎಲ್ಲಾ ಕರ್ಮಫಲಗಳೂ ಪ್ರಾಣಗಳಿಗೂ ಲೋಕಗಳಿಗೂ

1. ಆತ್ಮರುಗಳು ನಿಜವಾಗಿ ಅನೇಕರಲ್ಲ, ಆತ್ಮನು ಹುಟ್ಟುವದೂ ಇಲ್ಲ; ಹೀಗಿರು ವಲ್ಲಿ ಆತ್ಮರುಗಳು ಹುಟ್ಟುತ್ತಾರೆ ಎಂದು ಇಲ್ಲಿ ಹೇಳಿರುವದನ್ನು ಹೇಗೆ ಹೊಂದಿಸಿಕೊಳ್ಳ ಬೇಕು ಎಂಬ ಆಕ್ಷೇಪಕ್ಕೆ ಉತ್ತರವಿದು. ಸೂ.ಭಾ. ೨-೩-೧೭ (ಭಾ.ಭಾ. ೨-೧೨೨ನ್ನು) ನೋಡಿ.

ಅಧಿಷ್ಠಾತೃಗಳಾದ ಅಗ್ನಿಯೇ ಮೊದಲಾದ ಎಲ್ಲಾ ದೇವತೆಗಳೂ, ಎಲ್ಲಾ ಭೂತಗಳೂ ಎಂದರೆ ಬ್ರಹ್ಮನಿಂದ ಮೊದಲಾಗಿ ಸ್ತಂಬದವರೆಗಿನ ಪ್ರಾಣಿಜಾತಗಳೂ– 'ಸರ್ವ ಏತೇ ಆತ್ಮಾನಃ' ಎಂಬ (ಮಾಧ್ಯಂದಿನ)ಪಾಠದಲ್ಲಿ ಉಪಾಧಿಸಂಪರ್ಕದಿಂದುಂಟಾಗಿ ಎಚ್ಚರುವ ವಿಶೇಷಾತ್ಮರುಗಳು ಎಂದರ್ಥ– (ಎಲ್ಲವೂ) ಹಿಡಿಯುತ್ತವೆ.

## ಬ್ರಹ್ಮದ ರಹಸ್ಯಾಭಿಧಾನ

(ಭಾಷ್ಯ)

೩೦೪. ಯಸ್ಮಾತ್ ಆತ್ಮನಃ ಸ್ಥಾವರಜಙ್ಗಮಂ ಜಗದಿದಮ್ ಅಗ್ನಿವಿಸ್ಫುಲಿಙ್ಗವತ್ ವ್ಯುಚ್ಚರತಿ ಅನಿಶಮ್, ಯಸ್ಮಿನ್ನೇವ ಚ ಪ್ರಲೀಯತೇ ಜಲಬುದ್ಬುದವತ್, ಯದಾತ್ಮಕಂ ಚ ವರ್ತತೇ ಸ್ಥಿತಿಕಾಲೇ, ತಸ್ಯಾಸ್ಯ ಆತ್ಮನೋ ಬ್ರಹ್ಮಣಃ ಉಪನಿಷತ್। ಉಪ ಸಮೀಪಂ ನಿಗಮಯತಿ ಇತಿ ಅಭಿಧಾಯಕಃ ಶಬ್ದಃ ಉಪನಿಷತ್ ಇತ್ಯುಚ್ಯತೇ। ಶಾಸ್ತ್ರಪ್ರಾಮಾಣ್ಯಾತ್ ಏತಚ್ಛಬ್ದಗತೋ ವಿಶೇಷೋಽಧ್ಯವಸೀಯತೇ ಉಪನಿಗಮಯಿತೃತ್ವಂ ನಾಮ। ಕಾಸೌ ಉಪನಿಷತ್ ಇತಿ ? ಆಹ। ಸತ್ಯಸ್ಯ ಸತ್ಯಮ್ ಇತಿ। ಸಾ ಹಿ ಸರ್ವತ್ರ ಚ ಉಪನಿಷತ್ ಅಲೌಕಿಕಾರ್ಥತ್ವಾತ್ ದುರ್ವಿಜ್ಞೇಯಾರ್ಥಾ ಇತಿ ತದರ್ಥಮ್ ಆಚಷ್ಟೇ। ಪ್ರಾಣಾ ವೈ ಸತ್ಯಮ್ ತೇಷಾಮೇಷ ಸತ್ಯಮ್ ಇತಿ। ಏತಸ್ಯೈವ ವಾಕ್ಯಸ್ಯ ವ್ಯಾಖ್ಯಾನಾಯ ಉತ್ತರಂ ಬ್ರಾಹ್ಮಣದ್ವಯಂ ಭವಿಷ್ಯತಿ ॥

(ಭಾಷ್ಯಾರ್ಥ)

ಯಾವ ಆತ್ಮನಿಂದ ಸ್ಥಾವರಜಂಗಮ(ರೂಪ)ವಾದ ಈ ಜಗತ್ತು ಬೆಂಕಿಯಕಿಡಿಗಳಂತೆ ಯಾವಾಗಲೂ ಹಿಡಿದುಬರುತ್ತಿರುವದೋ ಮತ್ತು ಯಾವದರಲ್ಲಿಯೇ ನೀರಿನಲ್ಲಿ ಗುಳ್ಳೆಗಳಂತೆ ಅಡಗುತ್ತಿರುವದೋ, ಮತ್ತು ಯಾವದರ ರೂಪವಾಗಿಯೇ ಸ್ಥಿತಿಕಾಲದಲ್ಲಿ ಇದ್ದುಕೊಂಡಿರುವದೋ, ಆ ಈ ಆತ್ಮನ, ಬ್ರಹ್ಮದ, ಉಪನಿಷತ್ತು. (ಉಪ) ಹತ್ತಿರಕ್ಕೆ ನಿಷತ್ (ಒಯ್ಯುತ್ತದೆ) ಎಂಬ (ವ್ಯುತ್ಪತ್ತಿಯಿಂದ) ಹೆಸರಿಸುವ ಶಬ್ದವನ್ನು ಉಪನಿಷತ್ತು ಎಂದು ಕರೆದಿದೆ. ಈ (ಉಪನಿಷತ್ತು ಎಂಬ) ಶಬ್ದದಲ್ಲಿರುವ ಸಮೀಪಕ್ಕೆ ಒಯ್ಯುವಿಕೆ ಎಂಬ ವಿಶೇಷವನ್ನು ಶಾಸ್ತ್ರಪ್ರಾಮಾಣ್ಯದಿಂದ ನಿಶ್ಚಯಿಸಬೇಕಾಗಿದೆ. ಈ ಉಪನಿಷತ್ತು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. 'ಸತ್ಯದ ಸತ್ಯವು' ಎಂಬಿದೇ (ಉಪನಿಷತ್ತು). ಈ ಉಪನಿಷತ್ತು ಎಂಬಿದಕ್ಕೆ ಎಲ್ಲೆಲ್ಲಿಯೂ ಅಲೌಕಿಕಾರ್ಥ[1] ವಿರುವದರಿಂದ ಇದರ ಅರ್ಥವನ್ನು ತಿಳಿಯುವದು ಕಷ್ಟವಾದ್ದರಿಂದ (ಶ್ರುತಿಯು) "ಪ್ರಾಣಗಳೇ ಸತ್ಯವಷ್ಟೆ, ಅವುಗಳಿಗೆ ಇವನು ಸತ್ಯವು" ಎಂದು ಹೇಳಿಕೊಡು

1. ಲೋಕದಲ್ಲಿ ಪ್ರಸಿದ್ಧವಲ್ಲದ ಅರ್ಥ.

ತ್ತಿದೆ. ಈ ವಾಕ್ಯವನ್ನು ವ್ಯಾಖ್ಯಾನಮಾಡುವದಕ್ಕಾಗಿಯೇ ಮುಂದಿನ ಎರಡು ಬ್ರಾಹ್ಮಣಗಳು (ವಿನಿಯುಕ್ತ)ವಾಗುವವು.

# ಅವನ ಉಪನಿಷತ್ತು ಎಂಬುದರ ವಿಷಯಕ್ಕೆ ಚರ್ಚೆ

## ಸಂಶಯಪ್ರಯೋಜನಗಳು

(ಭಾಷ್ಯ)

೩೦೫. ಭವತು ತಾವತ್ ಉಪನಿಷದ್ವ್ಯಾಖ್ಯಾನಾಯ ಉತ್ತರಂ ಬ್ರಾಹ್ಮಣದ್ವಯಮ್। ತಸ್ಯೋಪನಿಷತ್ ಇತ್ಯುಕ್ತಮ್। ತತ್ರ ನ ಜಾನೀಮಃ ಕಿಂ ಪ್ರಕೃತಸ್ಯ ಆತ್ಮನೋ ವಿಜ್ಞಾನಮಯಸ್ಯ ಪಾಣಿಪೇಷಣೋತ್ಥಿತಸ್ಯ ಸಂಸಾರಿಣಃ ಶಬ್ದಾದಿಭುಜಃ ಇಯಮ್ ಉಪನಿಷತ್, ಆಹೋಸ್ವಿತ್ ಅಸಂಸಾರಿಣಃ ಕಸ್ಯಚಿತ್ ? ಕಿಂಚಾತಃ ? ಯದಿ ಸಂಸಾರಿಣಃ ತದಾ ಸಂಸಾರ್ಯೇವ ವಿಜ್ಞೇಯಃ, ತದ್ವಿಜ್ಞಾನಾದೇವ ಸರ್ವಪ್ರಾಪ್ತಿಃ, ಸ ಏವ ಬ್ರಹ್ಮಶಬ್ದವಾಚ್ಯಃ, ತದ್ವಿದ್ಯೈವ ಬ್ರಹ್ಮವಿದ್ಯಾ ಇತಿ। ಅಥ ಅಸಂಸಾರಿಣಃ, ತದಾ ತದ್ವಿಷಯಾ ವಿದ್ಯಾ ಬ್ರಹ್ಮವಿದ್ಯಾ, ತಸ್ಮಾಚ್ಚ ಬ್ರಹ್ಮವಿಜ್ಞಾನಾತ್ ಸರ್ವಭಾವಾಪತ್ತಿಃ। ಸರ್ವಮೇತತ್ ಶಾಸ್ತ್ರಪ್ರಾಮಾಣ್ಯಾತ್ ಭವಿಷ್ಯತಿ। ಕಿಂ ತು ಅಸ್ಮಿನ್ ಪಕ್ಷೇ "ಆತ್ಮೇತ್ಯೇವೋಪಾಸೀತ" (೧-೪-೭), "ಆತ್ಮಾನಮೇವಾವೇದಹಂ ಬ್ರಹ್ಮಾಸ್ಮಿ[1]" (೧-೪-೧೦) ಇತಿ ಪರಬ್ರಹ್ಮೈಕತ್ವಪ್ರತಿಪಾದಿಕಾಃ ಶ್ರುತಯಃ ಕುಪ್ಯೇರನ್। ಸಂಸಾರಿಣಶ್ಚ ಅನ್ಯಸ್ಯ ಅಭಾವೇ ಉಪದೇಶಾನರ್ಥಕ್ಯಾತ್। ಯತ ಏವಂ ಪಣ್ಡಿತಾನಾಮಪಿ ಏತನ್ಮಹಾಮೋಹಸ್ಥಾನಮ್ ಅನುಕ್ತಪ್ರತಿವಚನಪ್ರಶ್ನವಿಷಯಮ್, ಅತೋ ಯಥಾಶಕ್ತಿ ಬ್ರಹ್ಮವಿದ್ಯಾಪ್ರತಿಪಾದಕವಾಕ್ಯೇಷು ಬ್ರಹ್ಮವಿಜಿಜ್ಞಾಸೂನಾಂ ಬುದ್ಧಿವ್ಯುತ್ಪಾದನಾಯ ವಿಚಾರಯಿಷ್ಯಾಮಃ ॥

(ಭಾಷ್ಯಾರ್ಥ)

(ಸಂಶಯ) :- ಉಪನಿಷತ್ತನ್ನು ವ್ಯಾಖ್ಯಾನಮಾಡುವದಕ್ಕೇ ಮುಂದಿನ ಬ್ರಾಹ್ಮಣದ್ವಯವು (ಬಂದಿದೆ) ಎಂದೇ ಆಗಲಿ. 'ಅವನ ಉಪನಿಷತ್ತು' ಎಂದು ಹೇಳಿದೆಯಲ್ಲ, ಅಲ್ಲಿ ಈ ಉಪನಿಷತ್ತು ಪ್ರಕೃತವಾಗಿರುವ ವಿಜ್ಞಾನಮಯಾತ್ಮನ, ಕೈಯಿಂದ ಹೊರಳಾಡಿಸಿದ್ದರಿಂದ ಎಚ್ಚತ್ತು, ಶಬ್ದಾದಿಗಳನ್ನು ಭೋಗಿಸುತ್ತಿರುವ ಸಂಸಾರಿಯದೊ, ಅಥವಾ ಅಸಂಸಾರಿಯಾದ ಯಾವನೋ ಒಬ್ಬನದೊ, ನಮಗೆ ತಿಳಿಯುವದಿಲ್ಲವಲ್ಲ !

(ಪ್ರಯೋಜನ) :- ಇದರ (ವಿಚಾರ)ದಿಂದ ಏನು (ಪ್ರಯೋಜನ)? -ಎಂದರೆ, ಸಂಸಾರಿಯು (ಉಪನಿಷತ್ತಿಂದಾ)ದರೆ ಆಗ ಸಂಸಾರಿಯನ್ನೇ ಅರಿತು

---

1 ಇಲ್ಲೊಂದು ಇತಿಯಿದ್ದಿರಬೇಕೆಂದು ತೋರುತ್ತದೆ.

ಕೊಳ್ಳಬೇಕಾಗುತ್ತದೆ, ಅವನ ಜ್ಞಾನದಿಂದಲೇ ಸರ್ವಾತ್ಮವು ಪ್ರಾಪ್ತವಾಗುವದು, ಅವನೇ ಬ್ರಹ್ಮಶಬ್ದವಾಚ್ಯನು, ಅವನ ವಿದ್ಯೆಯೇ ಬ್ರಹ್ಮವಿದ್ಯೆ (ಎಂದಾಗುವದು). ಹಾಗಿಲ್ಲದೆ (ಇದು) ಅಸಂಸಾರಿಯುದಾದರೆ, ಆಗ ಅವನ ವಿಷಯದ ವಿದ್ಯೆಯೇ ಬ್ರಹ್ಮವಿದ್ಯೆ, ಮತ್ತು ಆ ಬ್ರಹ್ಮವಿಜ್ಞಾನದಿಂದಲೇ ಸರ್ವಭಾವವನ್ನು ಪಡೆಯಬಹುದು (ಎಂದಾಗುವದು). ಇದೆಲ್ಲವೂ ಶಾಸ್ತ್ರಪ್ರಾಮಾಣ್ಯದಿಂದ ಆಗುವದು. ಆದರೆ ಈ (ಎರಡನೆಯ) ಪಕ್ಷದಲ್ಲಿ "ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೭), "ತನ್ನನ್ನೇ ನಾನು ಬ್ರಹ್ಮವೆಂದು ಅರಿತುಕೊಂಡಿತು" (೧-೪-೧೦) ಎಂಬ ಪರಬ್ರಹ್ಮೈಕತ್ವವನ್ನು ಹೇಳುವ[1] ಶ್ರುತಿಗಳಿಗೆ ವಿರೋಧವಾಗುವದು; ಏಕೆಂದರೆ ಸಂಸಾರಿಯಾದವನು (ಬ್ರಹ್ಮಕ್ಕಿಂತ) ಬೇರೆಯಾಗಿ ಇಲ್ಲವಾದರೆ ಉಪದೇಶವು ವ್ಯರ್ಥವಾಗುವದು.[2] ಹೀಗೆ ಪಂಡಿತರಿಗೂ ಇದು ದೊಡ್ಡ ಭ್ರಾಂತಿಯನ್ನುಂಟುಮಾಡುವ ಸ್ಥಾನವಾಗಿರುತ್ತದೆ, ಉತ್ತರವನ್ನು (ಯಾರೂ) ಹೇಳದಿರುವ ಪ್ರಶ್ನೆಯ ವಿಷಯವಾಗಿರುತ್ತದೆ; ಆದ್ದರಿಂದ ಯಥಾಶಕ್ತಿಯಾಗಿ ಬ್ರಹ್ಮವಿದ್ಯೆಯನ್ನು ತಿಳಿಸುವ ವಾಕ್ಯದಲ್ಲಿ ಬ್ರಹ್ಮವನ್ನು ಅರಿತುಕೊಳ್ಳಲಿಚ್ಛಿಸುವವರಿಗೆ ಬುದ್ಧಿವ್ಯುತ್ಪತ್ತಿಯನ್ನು ಮಾಡಿಕೊಡುವದಕ್ಕಾಗಿ ವಿಚಾರಮಾಡುವೆವು.

## ಪೂರ್ವಪಕ್ಷ: ವಿಜ್ಞಾನಮಯನ ಉಪನಿಷತ್ತು ಇದು

(ಭಾಷ್ಯ)

೩೦೬. ನ ತಾವತ್ ಅಸಂಸಾರೀ ಪರಃ । ಪಾಣಿಪೇಷಣಪ್ರತಿಬೋಧಿತಾತ್ ಶಬ್ದಾದಿಭುಜಃ ಅವಸ್ಥಾನ್ತರವಿಶಿಷ್ಟಾತ್ ಉತ್ಪತ್ತಿಶ್ರುತೇಃ । ನ ಪ್ರಶಾಸಿತಾ ಅಶನಾಯಾದಿವರ್ಜಿತಃ ಪರೋ ವಿದ್ಯತೇ । ಕಸ್ಮಾತ್ ? ಯಸ್ಮಾತ್ "ಬ್ರಹ್ಮ ಜ್ಞಪಯಿಷ್ಯಾಮಿ" (೨-೧-೧೫) ಇತಿ ಪ್ರತಿಜ್ಞಾಯ ಸುಪ್ತಂ ಪುರುಷಂ ಪಾಣಿಪೇಷಂ ಬೋಧಯಿತ್ವಾ ತಂ ಶಬ್ದಾದಿಭೋಕ್ತೃತ್ವವಿಶಿಷ್ಟಂ ದರ್ಶಯಿತ್ವಾ ತಸ್ಯೈವ ಸ್ವಪ್ನದ್ವಾರೇಣ ಸುಷುಪ್ತ್ಯಾಖ್ಯಮ್ ಅವಸ್ಥಾನ್ತರಮ್ ಉನ್ನೀಯ ತಸ್ಮಾದೇವ ಆತ್ಮನಃ ಸುಷುಪ್ತ್ಯವಸ್ಥಾವಿಶಿಷ್ಟಾತ್ ಅಗ್ನಿವಿಸ್ಫುಲಿಙ್ಗೋರ್ಣ

---

1. ಆತ್ಮನು ಪರಬ್ರಹ್ಮದೊಡನೆ ಒಂದಾಗಿರುವನೆಂದು ಹೇಳುವ –ಎಂದರ್ಥ. ಸಂಸಾರಿಯಾದ ಆತ್ಮನೇ ಇಲ್ಲದಿದ್ದರೆ ಯಾವನಿಗೆ ಈ ಏಕತ್ವವನ್ನು ಹೇಳಬೇಕು ? –ಎಂದು ಭಾವ.

2. 'ಆನರ್ಥಕ್ಯಾತ್' ಎಂಬ ಪಾಠಕ್ಕೆ ಅನುವಾದವಿದು. ವ್ಯರ್ಥವಾಗುವದರಿಂದ ಏಕತ್ವವನ್ನು ಹೇಳುವ ಶ್ರುತಿಗಳಿಗೆ ವಿರೋಧವಾಗುವದು ಎಂದು ಅನ್ವಯಿಸಬೇಕು. 'ಆನರ್ಥಕ್ಯಮ್' ಎಂಬ ಪಾಠವಿದ್ದರೆ ಬ್ರಹ್ಮವೊಂದೇ ಇದ್ದರೆ ತನ್ನನ್ನೇ ಉಪಾಸನೆಮಾಡಬೇಕೆನ್ನುವ ಶ್ರುತಿಗಳಿಗೆ ವಿರೋಧವೂ ಆಗುವದು, ಬ್ರಹ್ಮಕ್ಕೆ ಉಪದೇಶವು ಬೇಕಿಲ್ಲವಾದ್ದರಿಂದ ಉಪದೇಶವೂ ವ್ಯರ್ಥವಾಗುವದು ಎಂದು ಅಭಿಪ್ರಾಯ.

ನಾಭಿದೃಷ್ಟಾನ್ತಾಭ್ಯಾಮ್ ಉತ್ಪತ್ತಿಂ ದರ್ಶಯತಿ ಶ್ರುತಿಃ "ಏವಮೇವಾಸ್ಮಾತ್" ಇತ್ಯಾದಿನಾ । ನ ಚಾನ್ಯೋ ಜಗದುತ್ಪತ್ತಿಕಾರಣಮ್ ಅನ್ತರಾಲೇ ಶ್ರುತೋಽಸ್ತಿ ವಿಜ್ಞಾನಮಯಸ್ಯೈವ ಹಿ ಪ್ರಕರಣಮ್ । ಸಮಾನಪ್ರಕರಣೇ ಚ ಶ್ರುತ್ಯನ್ತರೇ ಕೌಷೀತಕಿನಾಮ್ ಆದಿತ್ಯಾದಿಪುರುಷಾನ್ ಪ್ರಸ್ತುತ್ಯ "ಸ ಹೋವಾಚ ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚೈತತ್ ಕರ್ಮ ಸ ವೈ[1] ವೇದಿತವ್ಯಃ" (ಕೌ. ೪-೧೯) ಇತಿ ಪ್ರಬುದ್ಧಸ್ಯೈವ ವಿಜ್ಞಾನಮಯಸ್ಯ ವೇದಿತವ್ಯತಾಂ ದರ್ಶಯತಿ ನಾರ್ಥಾನ್ತರಸ್ಯ । ತಥಾ ಚ "ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ" (೨-೪-೫) ಇತ್ಯುಕ್ತ್ವಾ ಯ ಏವ ಆತ್ಮಾ ಪ್ರಿಯಃ ಪ್ರಸಿದ್ಧಃ ತಸ್ಯೈವ ದ್ರಷ್ಟವ್ಯಶ್ರೋತವ್ಯಮನ್ತವ್ಯನಿದಿಧ್ಯಾಸಿತವ್ಯತಾಂ ದರ್ಶಯತಿ । ತಥಾ ಚ ವಿದ್ಯೋಪನ್ಯಾಸಕಾಲೇ "ಆತ್ಮೇತ್ಯೇವೋಪಾಸೀತ" (೧-೪-೭) ಪ್ರೇಯಃ "ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ (೧-೪-೮), "ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮಿ[2]" (೧-೪-೧೦) ಇತ್ಯೇವಮಾದಿವಾಕ್ಯಾನಾಮ್ ಆನುಲೋಮ್ಯಂ ಸ್ಯಾತ್ ಪರಾಭಾವೇ । ವಕ್ಷ್ಯತಿ ಚ "ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ" (೪-೪-೧೨) ಇತಿ । ಸರ್ವವೇದಾನ್ತೇಷು ಚ ಪ್ರತ್ಯಗಾತ್ಮವೇದ್ಯತೈವ ಪ್ರದರ್ಶ್ಯತೇ 'ಅಹಮ್' ಇತಿ ನ ಬಹಿರ್ವೇದ್ಯತಾ ಪ್ರದರ್ಶ್ಯತೇ ಶಬ್ದಾದಿವತ್ 'ಅಸೌ ಬ್ರಹ್ಮ' ಇತಿ । ತಥಾ ಕೌಷೀತಕಿನಾಮೇವ "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" (ಕೌ. ೩-೮) ಇತ್ಯಾದಿನಾ ವಾಗಾದಿಕರಣೈರ್ವ್ಯಾಪೃತಸ್ಯ ಕರ್ತುರೇವ ವೇದಿತವ್ಯತಾಂ ದರ್ಶಯತಿ ॥

(ಭಾಷ್ಯಾರ್ಥ)

ಮೊದಲನೆಯದಾಗಿ ಅಸಂಸಾರಿಯಾದ ಪರ(ಮಾತ್ಮನು) ಇಲ್ಲ[3] ; ಏಕೆಂದರೆ ಕೈಯಿಂದ ಹೊರಳಾಡಿಸಿ ಎಚ್ಚರಿಸಿದ ಶಬ್ದಾದಿಗಳನ್ನು ಭೋಗಿಸುವವನಾದ ಅವಸ್ಥಾಂತರವಿಶಿಷ್ಟನಾದ (ಸಂಸಾರಿ)ಯಿಂದಲೇ ಉತ್ಪತ್ತಿಯನ್ನು ಶ್ರುತಿ(ಯಲ್ಲಿ ಹೇಳಿರುತ್ತದೆ. ಇದರ ವಿವರ) : ಹಸಿವು ಮುಂತಾದವುಗಳಿಲ್ಲದ (ಎಲ್ಲವನ್ನೂ) ಆಳುವ ಪರ(ಮಾತ್ಮ)ನು ಇಲ್ಲ ; ಏಕೆ ? ಎಂದರೆ "ಬ್ರಹ್ಮವನ್ನು ಅರಿಕೆಮಾಡಿಕೊಳ್ಳುವೆನು" (೨-೧-೧೫) ಎಂದು ಪ್ರತಿಜ್ಞೆಮಾಡಿ ನಿದ್ರಿಸುತ್ತಿದ್ದ ಪುರುಷನನ್ನು ಕೈಯಿಂದ ಹೊರಳಾಡಿಸಿ ಎಚ್ಚರಿಸಿ ಅವನನ್ನು ಶಬ್ದಾದಿಗಳ ಭೋಕ್ತೃತ್ವ

---

1. ಇಲ್ಲಿ ವೈ ಎಂಬ ಶಬ್ದವು ನಿ॥ ಪಾಠದಲ್ಲಿಲ್ಲ ; ಆನಂದಾಶ್ರಮದ ಶಾಂಖಾಯನಾರಣ್ಯಕದ ಪಾಠದಲ್ಲಿವೆ. 2. ಇಲ್ಲೊಂದು ಇತಿಯು ಬಿಟ್ಟುಹೋಗಿದೆ.

3. ಜಗದುತ್ಪತ್ತಿಕಾರಣವೇ ಬ್ರಹ್ಮವೆಂಬುದು ವೇದಾಂತಸಿದ್ಧಾಂತವು ; ಇಲ್ಲಿ ಸುಷುಪ್ತಿಗತವಿಜ್ಞಾನಮಯನನ್ನೇ ಜಗತ್ಕಾರಣನೆಂದು ಹೇಳಿದೆ. ಈ ಪ್ರಕರಣವೆಲ್ಲ ವಿಜ್ಞಾನಮಯನಿಗೇ ಆಗಿರುವದೆಂಬುದೂ ಈ ಅಭಿಪ್ರಾಯಕ್ಕೆ ಬೆಂಬಲವಾಗಿದೆ ಎಂದು ಭಾವ.

ದಿಂದೊಡಗೂಡಿದವನೆಂದು ತೋರಿಸಿಕೊಟ್ಟು ಅವನಿಗೇ ಸ್ವಪ್ನದ್ವಾರದಿಂದ ಸುಷುಪ್ತಿ ಎಂಬ ಮತ್ತೊಂದು ಅವಸ್ಥೆಯನ್ನು ಊಹಿಸಿ ಆ ಸುಷುಪ್ತ್ಯವಸ್ಥಾ ವಿಶಿಷ್ಟನಾದ ಆತ್ಮನಿಂದಲೇ ಬೆಂಕಿಯ ಕಿಡಿಗಳು, ಜೇಡರಹುಳು- ಎಂಬ (ಎರಡು) ದೃಷ್ಟಾಂತಗಳಿಂದ "ಹೀಗೆಯೇ ಈ (ಆತ್ಮ)ನಿಂದ" ಎಂದು ಮುಂತಾಗಿರುವ ವಾಕ್ಯದಿಂದ (ಜಗತ್ತಿಗೆ) ಉತ್ಪತ್ತಿಯನ್ನು ಶ್ರುತಿಯು ತಿಳಿಸಿರುತ್ತದೆ. ಜಗತ್ತಿಗೆ ಕಾರಣನೆಂದು (ಅವನಿಗಿಂತ) ಬೇರೆಯಾದವನನ್ನು ನಡುವೆ ಶ್ರುತಿಯಲ್ಲಿ ಹೇಳಿರುವದೂ ಇಲ್ಲ; ವಿಜ್ಞಾನಮಯನದೇ ಅಲ್ಲವೆ, (ಈ) ಪ್ರಕರಣವು? ಕೌಷೀತಕಿಗಳ ಶ್ರುತ್ಯಂತರದಲ್ಲಿ ಸಮಾನಪ್ರಕರಣದಲ್ಲಿ[1] ಆದಿತ್ಯಾದಿಪುರುಷರನ್ನು ಪ್ರಾರಂಭಿಸಿ "ಅವನು ಹೇಳಿದನೇನೆಂದರೆ ಬಾಲಾಕಿಯೆ, ಯಾವನು ಈ ಪುರುಷರ ಕರ್ತನೋ, ಯಾವನಿಗೆ ಇದು ಕರ್ಮವೋ, ಅವನನ್ನೇ ತಿಳಿಯಬೇಕು" (ಕೌ. ೪-೧೯) ಎಂದು ಎಚ್ಚತ್ತ ವಿಜ್ಞಾನಮಯನನ್ನೇ ತಿಳಿಯತಕ್ಕದ್ದೆಂದು ಹೇಳಿದೆಯೇ ಹೊರತು ಮತ್ತೊಂದು ವಸ್ತುವನ್ನು ತಿಳಿಯತಕ್ಕದ್ದೆಂದು ಹೇಳಿರುವದಿಲ್ಲ. ಇದರಂತೆ (ಮುಂದೆ ಇಲ್ಲಿಯೂ) "ಆದರೆ ಆತ್ಮನ ಕಾಮಕ್ಕಾಗಿ ಸರ್ವವೂ ಪ್ರಿಯವಾಗಿರುತ್ತದೆ" (೨-೪-೫) ಎಂದು ಹೇಳಿ "ಯಾವ ಪುರುಷನು ಪ್ರಿಯನೆಂದು ಪ್ರಸಿದ್ಧನಾಗಿರುವನೋ ಅವನನ್ನೇ ಕಾಣತಕ್ಕದ್ದು, ಕೇಳತಕ್ಕದ್ದು, ಮನನಮಾಡತಕ್ಕದ್ದು, ಧ್ಯಾನಮಾಡತಕ್ಕದ್ದು"- ಎಂದು (೨-೪-೫) ಹೇಳಿರುತ್ತದೆ. ಹೀಗಿರುವದರಿಂದ ವಿದ್ಯೆಯನ್ನು ಉಪಕ್ರಮಿಸಿರುವ ಕಾಲದಲ್ಲಿ "ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೭), "ಆ ಇದು ಪುತ್ರನಿಗಿಂತ ಪ್ರಿಯವಾದದ್ದು, ವಿತ್ತಕ್ಕಿಂತ ಪ್ರಿಯವಾದದ್ದು" (೧-೪-೮), "ಅದು ನಾನು ಬ್ರಹ್ಮವಾಗಿದೇನೆಂದು ತನ್ನನ್ನೇ ಅರಿತುಕೊಂಡಿತು" (೧-೪-೧೦)- ಇವೇ ಮುಂತಾದ ವಾಕ್ಯಗಳಿಗೆ ಪರಮಾತ್ಮ(ನೊಬ್ಬನು) ಇಲ್ಲವೆಂಬ (ಪಕ್ಷ)ದಲ್ಲಿಯೇ ಆನುಗುಣ್ಯವುಂಟಾಗುವದು. "ಪುರುಷನು ನಾನೇ ಆತ್ಮನು ಎಂದು ಅರಿತುಕೊಂಡನಾದರೆ (ಶರೀರವನ್ನನುಸರಿಸಿ ಏತಕ್ಕೆ ತಾಪಗೊಳ್ಳುವನು?)" (೪-೪-೧೨) ಎಂದು ಮುಂದೆ ಹೇಳಿಯೂ ಇದೆ.[2]

ಎಲ್ಲಾ ವೇದಾಂತಗಳಲ್ಲಿಯೂ 'ನಾನು' ಎಂದು ಒಳಗಿನ ಆತ್ಮನೇ (ಬ್ರಹ್ಮವೆಂದು) ತಿಳಿದುಕೊಳ್ಳಬೇಕೆಂದು ಹೇಳಿದೆಯೇ ಹೊರತು, ಶಬ್ದಾದಿಗಳಂತೆ 'ಇದು ಬ್ರಹ್ಮ' ಎಂದು ಹೊರಗೆ ತಿಳಿದುಕೊಳ್ಳಬೇಕೆಂದು ತಿಳಿಸಿರುವದಿಲ್ಲ.

---

1. ಶ್ರುತಿ, ಲಿಂಗ, ಪ್ರಕರಣ- ಇವುಗಳೇ ಅಲ್ಲದೆ ಸಮಾಖ್ಯೆಯ ಬೆಂಬಲವೂ ತನಗೆ ಇದೆ ಎಂದು ವಿಜ್ಞಾನಮಯವಾದಿಯು ಹೇಳುತ್ತಿದಾನೆ. ಸೂ.ಭಾ. ೧-೪ರಲ್ಲಿ ಜಗದ್ವಾಚಿತ್ವಾಧಿಕರಣವನ್ನು ನೋಡಿ.

2. ಉಪಕ್ರಮೋಪಸಂಹಾರಗಳಿಂದ ಈ ಉಪನಿಷತ್ತಿನಲ್ಲಿ ವಿಜ್ಞಾನಮಯನೇ ವೇದ್ಯನೆಂದು ಸಿದ್ಧವಾಗುತ್ತದೆ ಎಂದು ಭಾವ.

ಇದಕ್ಕೆ ತಕ್ಕಂತೆ ಕೌಷೀತಕಿಗಳ (ಉಪನಿಷತ್ತಿನಲ್ಲಿ)ಯೇ "ವಾಕ್ಕನ್ನು ಅರಿತು ಕೊಳ್ಳಲೆಳಸಬಾರದು, ವಕ್ತೃವನ್ನೇ ಅರಿತುಕೊಳ್ಳಬೇಕು" (ಕೌ. ೩-೮) ಎಂದು ಮುಂತಾಗಿರುವ (ವಾಕ್ಯ)ದಿಂದ ವಾಗಾದಿಕರಣಗಳಿಂದ ಕೆಲಸಮಾಡುತ್ತಿರುವ ಕರ್ತೃವನ್ನೇ ಅರಿತುಕೊಳ್ಳಬೇಕೆಂದು ಹೇಳಿದೆ[1].

(ಭಾಷ್ಯ)

೩೦೭. ಅವಸ್ಥಾನ್ತರವಿಶಿಷ್ಟಃ ಅಸಂಸಾರೀ ಇತಿ ಚೇತ್ । ಅಥಾಪಿ ಸ್ಯಾತ್, ಯೋ ಜಾಗರಿತೇ ಶಬ್ದಾದಿಭುಕ್ ವಿಜ್ಞಾನಮಯಃ ಸ ಏವ ಸುಷುಪ್ತಾಖ್ಯಮ್ ಅವಸ್ಥಾನ್ತರಂ ಗತಃ ಅಸಂಸಾರೀ ಪರಃ ಪ್ರಶಾಸಿತಾ ಅನ್ಯಃ ಸ್ಯಾತ್ ಇತಿ ಚೇತ್। ನ। ಅದೃಷ್ಟತ್ವಾತ್। ನ ಹಿ ಏವಂಧರ್ಮಕಃ ಪದಾರ್ಥೋಽನ್ಯತ್ರ ದೃಷ್ಟೋಽನ್ಯತ್ರ ವೈನಾಶಿಕಸಿದ್ಧಾನ್ತಾತ್। ನ ಹಿ ಲೋಕೇ ಗೌಃ ತಿಷ್ಠನ್ ಗಚ್ಛನ್ ವಾ ಗೌರ್ಭವತಿ, ಶಯಾನಸ್ತು ಅಶ್ವಾದಿಜಾತ್ಯನ್ತರಮ್ ಇತಿ। ನ್ಯಾಯಾಚ್ಚ। ಯದ್ಧರ್ಮಕೋ ಯಃ ಪದಾರ್ಥಃ ಪ್ರಮಾಣೇನಾವಗತೋ ಭವತಿ ಸ ದೇಶಕಾಲಾವಸ್ಥಾನ್ತರೇಷ್ವಪಿ ತದ್ಧರ್ಮಕ ಏವ ಭವತಿ। ಸ ಚೇತ್ ತದ್ಧರ್ಮಕತ್ವಂ ವ್ಯಭಿಚರತಿ, ಸರ್ವಃ ಪ್ರಮಾಣವ್ಯವಹಾರೋ ಲುಪ್ಯೇತ। ತಥಾ ಚ ನ್ಯಾಯವಿದಃ ಸಾಂಖ್ಯಮೀಮಾಂಸಕಾದಯಃ ಅಸಂಸಾರಿಣೋಽಭಾವಂ ಯುಕ್ತಿಶತೈಃ ಪ್ರತಿಪಾದಯನ್ತಿ ॥

(ಭಾಷ್ಯಾರ್ಥ)

(ಆಕ್ಷೇಪ) :- ಅವಸ್ಥಾಂತರವಿಶಿಷ್ಟನಾದ (ವಿಜ್ಞಾನಮಯನೇ) ಅಸಂಸಾರಿ ಎನ್ನಬಹುದಲ್ಲ! (ಇದರ ವಿವರ): ಎಚ್ಚರದಲ್ಲಿ ಶಬ್ದಾದಿಗಳನ್ನು ಅನುಭವಿಸುವ ವಿಜ್ಞಾನಮಯನಿದಾನಲ್ಲ, ಅವನೇ ಸುಷುಪ್ತವೆಂಬ ಅವಸ್ಥಾಂತರವನ್ನು ಹೊಂದಿದರೆ ಅಸಂಸಾರಿಯಾದ ಪರಮಾತ್ಮನೂ ಆಳುವವನೂ ಮತ್ತೊಬ್ಬನಾಗ ಬಹುದಲ್ಲ[2] !

(ಪರಿಹಾರ) :- ಹಾಗಲ್ಲ. ಏಕೆಂದರೆ (ಹೀಗೆ) ಕಂಡಿಲ್ಲ. ವೈನಾಶಿಕರ ಸಿದ್ಧಾಂತವನ್ನು ಬಿಟ್ಟರೆ[3] ಮತ್ತೆಲ್ಲಿಯೂ ಇಂಥ ಧರ್ಮವುಳ್ಳ ಪದಾರ್ಥವು

---

1. ಎಲ್ಲಾ ಉಪನಿಷತ್ತುಗಳಲ್ಲಿಯೂ ಒಳಗಿನ ಆತ್ಮನನ್ನೇ ಅರಿಯಬೇಕೆಂದು ಹೇಳಿರುವದರಿಂದ ವಿಜ್ಞಾನಮಯನಿಗಿಂತ ಬೇರೆಯಾದ ಈಶ್ವರನಿಲ್ಲವೆಂದು ಸಿದ್ಧವಾಗುತ್ತದೆ ಎಂದು ಭಾವ.

2. ಸುಷುಪ್ತಾತ್ಮನು ಜಗತ್ಕಾರಣನೆಂದು ಶ್ರುತಿಯಲ್ಲಿ ಹೇಳಿರುವದರಿಂದ ಜಾಗ್ರತ್ಸ್ವಪ್ನಾತ್ಮನು ವಿಜ್ಞಾನಮಯನು, ಅವನೇ ಸುಷುಪ್ತಿಯಲ್ಲಿ ಪರಮಾತ್ಮನೆಂಬ ಮತ್ತೊಬ್ಬನಾಗುತ್ತಾನೆ ಎಂದೇಕೆ ಕಲ್ಪಿಸಬಾರದು ? -ಎಂದು ಆಕ್ಷೇಪ.

3. ಬೌದ್ಧರ ಸಿದ್ಧಾಂತದಲ್ಲಿ ವಿಜ್ಞಾನವೇ ಅಥವಾ ಶೂನ್ಯವೇ ಬೇರೆಬೇರೆಯ ವಸ್ತುಗಳಾಗುತ್ತದೆ ಎಂದು ಒಪ್ಪುತ್ತಾರೆ; ಅದು ಅಯುಕ್ತ. ಎಲ್ಲಕ್ಕೂ ನಾಶವನ್ನು ಹೇಳುವ ಬೌದ್ಧರನ್ನು ಬಿಟ್ಟರೆ ಮಿಕ್ಕವರು ಯಾರೂ ಒಂದು ಪದಾರ್ಥವು ತನ್ನ ಸ್ವಭಾವವನ್ನು ಬಿಟ್ಟು ಮತ್ತೊಂದಾಗುವದೆಂಬುದನ್ನು ಒಪ್ಪುವದಿಲ್ಲ ಎಂದು ಅಭಿಪ್ರಾಯ.

ಕಂಡುಬಂದಿಲ್ಲ. ಲೋಕದಲ್ಲಿ[1] ಎತ್ತು ನಿಂತಿದ್ದರೆ ಅಥವಾ ನಡೆಯುತ್ತಿದ್ದರೆ ಎತ್ತಾಗಿರುತ್ತದೆ, ಆದರೆ ಮಲಗಿರುವಾಗ ಕುದುರೆಯೋ ಮುಂತಾದ ಮತ್ತೊಂದು ಜಾತಿಯ(ದಾಗುತ್ತದೆ) ಎಂಬುದಿಲ್ಲವಷ್ಟೆ? ನ್ಯಾಯದಿಂದಲೂ (ಈ ನಿಮ್ಮ ಕಲ್ಪನೆಯು ಸರಿಯಲ್ಲವೆನ್ನಬೇಕಾಗುತ್ತದೆ): ಯಾವ ಪದಾರ್ಥವು ಯಾವ ಧರ್ಮವುಳ್ಳದ್ದೆಂದು ಪ್ರಮಾಣದಿಂದ ನಿಶ್ಚಿತವಾಗಿರುವದೋ ಅದು ಬೇರೆಯ ದೇಶಕಾಲಾವಸ್ಥೆಗಳಲ್ಲಿಯೂ ಅದೇ ಧರ್ಮವುಳ್ಳದ್ದೇ ಆಗಿರುತ್ತದೆ. ಅದು ಆ ಧರ್ಮದ್ದಾಗಿರುವದು ಬದಲಾಯಿಸಿದರೆ ಎಲ್ಲಾ ಪ್ರಮಾಣವ್ಯವಹಾರವೂ ಲೋಪವಾಗಬೇಕಾದೀತು. ಆದ್ದರಿಂದಲೇ **ಸಾಂಖ್ಯರು, ಮೀಮಾಂಸಕರು**-ಮುಂತಾದ ತರ್ಕವನ್ನು ತಿಳಿದವರು[2] ಅಸಂಸಾರಿಯಾದ (ಈಶ್ವರನು) ಇಲ್ಲವೆಂದು ನೂರಾರು ಯುಕ್ತಿಗಳಿಂದ ಪ್ರತಿಪಾದಿಸುತ್ತಿದಾರೆ.

(ಭಾಷ್ಯ)

೩೦೮. ಸಂಸಾರಿಣೋಽಪಿ ಜಗದುತ್ಪತ್ತಿಸ್ಥಿತಿಲಯಕ್ರಿಯಾಕರ್ತೃತ್ವವಿಜ್ಞಾನಸ್ಯ ಅಭಾವಾತ್ ಅಯುಕ್ತಮ್ ಇತಿ ಚೇತ್। ಯತ್ ಮಹತಾ ಪ್ರಪಞ್ಚೇನ ಸ್ಥಾಪಿತಂ ಭವತಾ ಶಬ್ದಾದಿಭುಕ್ ಸಂಸಾರ್ಯೇವ ಅವಸ್ಥಾನ್ತರವಿಶಿಷ್ಟೋ ಜಗತ ಇಹ ಕರ್ತಾ ಇತಿ, ತದಸತ್। ಯತೋ ಜಗದುತ್ಪತ್ತಿಸ್ಥಿತಿಲಯಕ್ರಿಯಾಕರ್ತೃತ್ವವಿಜ್ಞಾನಶಕ್ತಿಸಾಧನಾಭಾವಃ ಸರ್ವಲೋಕಪ್ರತ್ಯಕ್ಷಃ ಸಂಸಾರಿಣಃ। ಸ ಕಥಮ್ ಅಸ್ಮದಾದಿಃ ಸಂಸಾರೀ ಮನಸಾಪಿ ಚಿನ್ತಯಿತುಮ್ ಅಶಕ್ಯಂ ಪೃಥಿವ್ಯಾದಿವಿನ್ಯಾಸವಿಶಿಷ್ಟಂ ಜಗತ್ ನಿರ್ಮಿನುಯಾತ್। ಅತೋಽಯುಕ್ತಮ್ ಇತಿ ಚೇತ್। ನ। ಶಾಸ್ತ್ರಾತ್। ಶಾಸ್ತ್ರಂ ಸಂಸಾರಿಣಃ "ಏವಮೇವಾಸ್ಮಾದಾತ್ಮನಃ" ಇತಿ ಜಗದುತ್ಪತ್ತ್ಯಾದಿ ದರ್ಶಯತಿ। ತಸ್ಮಾತ್ ಸರ್ವಂ ಶ್ರದ್ಧೇಯಮ್ ಇತಿ ಸ್ಯಾತ್ ಅಯಮೇಕಃ ಪಕ್ಷಃ ॥

(ಭಾಷ್ಯಾರ್ಥ)

(ಆಕ್ಷೇಪ):- ಸಂಸಾರಿಗೂ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ -ಎಂಬ ಕ್ರಿಯೆಗಳನ್ನು ಮಾಡುವ ವಿಜ್ಞಾನವು ಇಲ್ಲದಿರುವದರಿಂದ[3] (ಇದು) ಸರಿಯಲ್ಲ. (ಇದರ ವಿವರ): ಶಬ್ದವೇ ಮುಂತಾದವುಗಳನ್ನು ಭೋಗಿಸುತ್ತಿರುವ ಸಂಸಾರಿ

---

1. ಹೀಗೆನ್ನುವದು ಲೋಕಾನುಭವಕ್ಕೂ ವಿರುದ್ಧ ಎಂದು ಭಾವ.

2. ಆತ್ಮನೇ ಪರಮೇಶ್ವರನಾಗುವನು ಎಂಬುದು ಯುಕ್ತಿವಿರುದ್ಧವಾದ್ದರಿಂದಲೂ ಈಶ್ವರನು ಬೇರೆ ಇದಾನೆ ಎಂಬುದಕ್ಕೆ ಪ್ರಮಾಣವಿಲ್ಲದ್ದರಿಂದಲೂ ಅಸಂಸಾರಿಯಾದ ಈಶ್ವರನೇ ಇಲ್ಲ ಎಂದು ನಿರೀಶ್ವರವಾದಿಗಳು ಹೇಳುತ್ತಿದಾರೆ ಎಂದು ಅಭಿಪ್ರಾಯ.

3. ವಿಜ್ಞಾನವಿಲ್ಲ ಎಂದರೆ ಸೃಷ್ಟ್ಯಾದಿಗಳನ್ನು ಮಾಡುವ ತಿಳಿವಳಿಕೆಯು ಅವನಿಗಿಲ್ಲ ಎಂದರ್ಥ.

ಯೋ ಅವಸ್ಥಾಂತರವಿಶಿಷ್ಟನಾಗಿ ಜಗತ್ತಿಗೆ ಕರ್ತೃ(ವಾಗುವ)ನೆಂದು ನೀನು ಬಹಳ ವಿವರವಾಗಿ (ವಾದಿಸಿ) ಸ್ಥಾಪಿಸಿದೆಯಲ್ಲ, ಅದು ಸರಿಯಲ್ಲ. ಏಕೆಂದರೆ ಸಂಸಾರಿಗೆ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ– ಎಂಬ ಕ್ರಿಯೆಗಳನ್ನು ಮಾಡುವ ವಿಜ್ಞಾನ, ಶಕ್ತಿ, ಸಾಧನಗಳು[1] (ಇವು ಯಾವವೂ) ಇರುವದಿಲ್ಲ ಎಂಬುದು ಎಲ್ಲಾ ಜನರಿಗೂ ಪ್ರತ್ಯಕ್ಷವಾಗಿರುತ್ತದೆ.[2] ನಮ್ಮಂಥ ಆ ಸಂಸಾರಿಯು ಮನಸ್ಸಿನಿಂದ ಕೂಡ ಚಿಂತಿಸುವದಕ್ಕಾಗದ[3] ಪೃಥಿವಿಯೇ ಮುಂತಾದ ವಿನ್ಯಾಸಳಿಂದೊಡಗೂಡಿದ ಜಗತ್ತನ್ನು ನಿರ್ಮಿಸಿಯಾನು ? ಆದ್ದರಿಂದ (ಇದು) ಸರಿಯಲ್ಲ.

(ಪರಿಹಾರ) :– ಹಾಗಲ್ಲ. ಏಕೆಂದರೆ ಶಾಸ್ತ್ರವಿದೆ. ಶಾಸ್ತ್ರವು 'ಹೀಗೆಯೇ ಈ ಆತ್ಮನಿಂದ' (ಪ್ರಾಣಾದಿಗಳುಂಟಾಗುವವು) ಎಂದು ಸಂಸಾರಿಯಿಂದಲೇ ಜಗತ್ತಿನ ಉತ್ಪತ್ತ್ಯಾದಿಗಳನ್ನು ತಿಳಿಸುತ್ತಿದೆ. ಆದ್ದರಿಂದ ಎಲ್ಲವನ್ನೂ ನಂಬಬೇಕು. ಹೀಗೆಂದು ಒಂದು ಪಕ್ಷವಾಗಿರಬಹುದು.[4]

## ಪೂರ್ವಪಕ್ಷ : ಜೀವವ್ಯತಿರಿಕ್ತೇಶ್ವರನ ಉಪನಿಷತ್ತಿದು

(ಭಾಷ್ಯ)

೩೦೯. "ಯಃ ಸರ್ವಜ್ಞಃ" (ಮುಂ ೧-೧-೯, ೨-೨-೭), "ಯೋಽಶನಾಯಾ ಪಿಪಾಸೇ ಅತ್ಯೇತಿ" (೩-೫-೧), "ಅಸಙ್ಗೋ ನ ಹಿ ಸಜ್ಜತೇ" (೩-೯-೨೬), "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ" (೩-೮-೯), "ಯಃ ಸರ್ವೇಷು ಭೂತೇಷು ತಿಷ್ಠನ್....ಅನ್ತರ್ಯಾಮ್ಯಮೃತಃ" (೩-೭-೧೫), "ಸ ಯಸ್ತಾನ್ ಪುರುಷಾನ್ ನಿರುಹ್ಯಾತ್ಯಕ್ರಾಮತ್" (೩-೯-೨೬), "ಸ ವಾ ಏಷ ಮಹಾನಜ ಆತ್ಮಾ" (೪-೪-೨೨), "ಏಷ ಸೇತುರ್ವಿಧರಣಃ" (೪-೪-೨೨), "ಸರ್ವಸ್ಯ ವಶೀ ಸರ್ವಸ್ಯೇಶಾನಃ" (೪-೪-೨೨), "ಯ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುಃ" (ಛಾಂ. ೮-೭-೧, ೩), "ತತ್ತೇಜೋಽಸೃಜತ"

---

1. ಹಿಂದಿನ ವಾಕ್ಯದಲ್ಲಿ ಹೇಳಿರುವ ವಿಜ್ಞಾನವು ಉಪಲಕ್ಷಣಕ್ಕಾಗಿ. ಜ್ಞಾನ, ಶಕ್ತಿ, ಕಾರಕಗಳು –ಇವುಗಳೆಲ್ಲವೂ ಸೃಷ್ಟಿಕ್ರಿಯೆಗೆ ಬೇಕು ಎಂದು ಭಾವ.

2. ಅನುಭವದಲ್ಲಿರುತ್ತದೆ.

3. ಹೀಗೆ ಸೃಷ್ಟಿಯಾಗಿರಬೇಕೆಂದು ಮನಸ್ಸಿನಿಂದ ಚಿಂತಿಸುವದಕ್ಕೇ ಆಗದಿರುವಾಗ ಜಗತ್ತನ್ನು ಸೃಜಿಸುವದೆಲ್ಲಿ ಬಂತು ? ಎಂದು ಭಾವ. ಸೂ. ಭಾ. ೧–೧–೨ರಲ್ಲಿ ಜಗತ್ತಿನ ವರ್ಣನೆಯನ್ನು ನೋಡಿ.

4. ಸಂಸಾರಿಯ ಪ್ರಕರಣವಿದು ; ಸಂಸಾರಿಯನ್ನು ತಿಳಿಸುವ ಶ್ರುತಿಲಿಂಗಸವಾಖ್ಯೆಗಳಿವೆ ; ಈ ಉಪನಿಷತ್ತಿನ ಉಪಕ್ರಮೋಪಸಂಹಾರಗಳೂ ಇವೆ. ಆದ್ದರಿಂದ ಸಂಸಾರಿಯನ್ನೇ ಜಗತ್ಕಾರಣಬ್ರಹ್ಮವೆಂದು ಶಾಸ್ತ್ರಪ್ರಮಾಣದಿಂದ ಉಪಾಸನೆಮಾಡಬೇಕು ಎಂಬುದು ಈ ಪೂರ್ವಪಕ್ಷಿಯ ಭಾವ.

(ಛಾಂ. ೬-೨-೩), "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" (ಐ. ೧-೧), "ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೨-೨-೧೧) ಇತ್ಯಾದಿಶ್ರುತಿಶತೇಭ್ಯಃ, ಸ್ಮೃತೇಶ್ಚ "ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ" (ಗೀ. ೧೦-೮) ಇತಿ. ಪರೋಽಸ್ತ್ಯಸಂಸಾರೀ। ಶ್ರುತಿಸ್ಮೃತಿನ್ಯಾಯೇಭ್ಯಶ್ಚ[1] ಸ ಚ ಕಾರಣಂ ಜಗತಃ। ನನು 'ಏವಮೇವಾಸ್ಮಾದಾತ್ಮನಃ' ಇತಿ ಸಂಸಾರಿಣ ಏವ ಉತ್ಪತ್ತಿಂ ದರ್ಶಯತಿ ಇತ್ಯುಕ್ತಮ್। ನ। "ಯ ಏಷೋಽನ್ತರ್ಹೃದಯ ಆಕಾಶಃ" (೨-೧-೧೭) ಇತಿ ಪರಸ್ಯ ಪ್ರಕೃತತ್ವಾತ್ 'ಅಸ್ಮಾದಾತ್ಮನಃ' ಇತಿ ಯುಕ್ತಃ ಪರಸ್ಯೈವ ಪರಾಮರ್ಶಃ। "ಕ್ವೈಷ ತದಾಭೂತ್" (೨-೧-೧೬) ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನತ್ವೇನ ಆಕಾಶಶಬ್ದವಾಚ್ಯಃ ಪರ ಆತ್ಮಾ ಉಕ್ತಃ "ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ" (೨-೧-೧೭) ಇತಿ। "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ ೬-೮-೧), "ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿನ್ದನ್ತಿ" (ಛಾಂ.೮-೩-೨) "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ" (೪-೩-೨೧), "ಪರ ಆತ್ಮನಿ ಸಂಪ್ರತಿಷ್ಠತೇ" (ಪ್ರ. ೪-೭) ಇತ್ಯಾದಿಶ್ರುತಿಭ್ಯ ಆಕಾಶಶಬ್ದಃ ಪರ ಆತ್ಮಾ ಇತಿ ನಿಶ್ಚೀಯತೇ। "ದಹರೋಽಸ್ಮಿನ್ನನ್ತರಾಕಾಶಃ" (ಛಾಂ. ೮-೧-೧) ಇತಿ ಪ್ರಸ್ತುತ್ಯ ತಸ್ಮಿನ್ನೇವ ಆತ್ಮಶಬ್ದಪ್ರಯೋಗಾಚ್ಚ ಪ್ರಕೃತ ಏವ ಪರ ಆತ್ಮಾ। ತಸ್ಮಾತ್ ಯುಕ್ತಮ್ 'ಏವಮೇವಾಸ್ಮಾದಾತ್ಮನಃ' ಇತಿ ಪರಮಾತ್ಮನ ಏವ ಸೃಷ್ಟಿರಿತಿ। ಸಂಸಾರಿಣಃ ಸೃಷ್ಟಿಸ್ಥಿತಿಸಂಹಾರಜ್ಞಾನಸಾಮರ್ಥ್ಯಾಭಾವಂ ಚ ಅವೋಚಾಮ ॥

(ಭಾಷ್ಯಾರ್ಥ)

"ಯಾವನು ಸರ್ವಜ್ಞನೋ ಸರ್ವವಿದನೋ" (ಅವನಿಂದ ಜಗತ್ತು ಹುಟ್ಟುತ್ತದೆ), (ಮುಂ. ೧-೧-೯, ೨-೨-೭), "ಯಾವನು ಹಸಿವುಬಾಯಾರಿಕೆಗಳನ್ನು ಮೀರಿರುವನೋ (ಅವನು ಸರ್ವಾಂತರನಾದ ಆತ್ಮನು)" (೩-೫-೧) "ಅಸಂಗನು ಸಕ್ತನಾಗುವದಿಲ್ಲ" (೩-೯-೨೬), "ಈ ಅಕ್ಷರದ ಕಟ್ಟಪ್ಪಣೆಯಲ್ಲಿಯೇ (ಸೂರ್ಯಚಂದ್ರರು ಹಿಡಿದುನಿಲ್ಲಿಸಲ್ಪಟ್ಟಿರುತ್ತಾರೆ)" (೩-೮-೯), "ಯಾವನು ಸರ್ವಭೂತಗಳಲ್ಲಿಯೂ ಇರುತ್ತಾನೋ.....(ಇವನೇ ನಿನ್ನ ಆತ್ಮನಾದ) ಅಮೃತ ಅಂತರ್ಯಾಮಿಯು" (೩-೭-೧೫), "ಯಾವಾತನು ಆ ಪುರುಷರನ್ನು ಹೊರಕ್ಕೆ ಒಯ್ದು.....ಅತಿಕ್ರಮಿಸಿರುವನೋ" (೩-೯-೨೬), "ಅವನೇ ಈ ಮಹಾನ್ ಅಜ ಆತ್ಮನು" (೪-೪-೨೨), "ಇವನೇ ವಿಶೇಷವಾಗಿ ತಡೆದಿಟ್ಟಿರುವ ಸೇತು" (೪-೪-೨೨), "ಎಲ್ಲವನ್ನೂ ವಶದಲ್ಲಿಟ್ಟುಕೊಂಡಿರುವವನು, ಎಲ್ಲವನ್ನೂ ಆಳು

1. ಈ ವಾಕ್ಯವು ಇಲ್ಲಿ ಇಲ್ಲದಿದ್ದರೂ ಸಾಗುತ್ತಿತ್ತು; ಅನುವಾದದ ಟಿಪ್ಪಣಿಯನ್ನು ನೋಡಿ.

ತ್ತಿರುವವನು" (೪-೪-೨೨), "ಯಾವನು ಅಪಹತಪಾಪ್ಮನಾದ ಆತ್ಮನೋ, ಮುಪ್ಪಿಲ್ಲದವನೋ, ಮರಣವಿಲ್ಲದವನೋ" (ಛಾಂ. ೮-೭-೧, ೩), "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩), "ಇದು ಮೊದಲು ಆತ್ಮನೊಂದೇ ಆಗಿತ್ತು" (ಐ. ೧-೧), "ಲೋಕದುಃಖದಿಂದ ಲಿಪ್ತನಾಗುವದಿಲ್ಲ, (ಏಕೆಂದರೆ) ಹೊರಚ್ಚಾಗಿರುತ್ತಾನೆ" (ಕ. ೨-೨-೧೧) –ಮುಂತಾದ ನೂರಾರು ಶ್ರುತಿಗಳ (ಪ್ರಮಾಣ)ದಿಂದಲೂ "ನಾನು ಎಲ್ಲಕ್ಕೂ ಕಾರಣನು, ನನ್ನಿಂದ ಎಲ್ಲವೂ ಕೆಲಸ ಮಾಡುತ್ತಿರುವದು" (ಗೀ. ೧೦-೮) ಎಂಬ ಸ್ಮೃತಿ(ಪ್ರಮಾಣದಿಂದಲೂ) ಅಸಂಸಾರಿಯಾದ ಪರ(ಮಾತ್ಮನೊಬ್ಬನು) ಇರುತ್ತಾನೆ. ಶ್ರುತಿಸ್ಮೃತಿನ್ಯಾಯ ಗಳಿಂದ[1] ಅವನೇ ಜಗತ್ತಿಗೆ ಕಾರಣನಾಗಿರುತ್ತಾನೆ.

(ವಿಜ್ಞಾನಮಯವಾದಿ) :- 'ಹೀಗೆಯೇ ಈ ಆತ್ಮನಿಂದ' (ಪ್ರಾಣಾದಿಗಳು ಹೊರಟುಬರುತ್ತಾರೆ) ಎಂಬ (ವಾಕ್ಯವು) ಸಂಸಾರಿಯಿಂದಲೇ (ಜಗತ್ತಿನ) ಉತ್ಪತ್ತಿಯನ್ನು ತಿಳಿಸುತ್ತದೆ ಎಂದು ಹೇಳಿದ್ದೆವಲ್ಲ !

(ಈಶ್ವರವಾದಿ) :- ಹಾಗಲ್ಲ. "ಹೃದಯದೊಳಗೆ ಈ ಆಕಾಶವಿದೆಯಲ್ಲ, (ಅದರಲ್ಲಿ ಮಲಗಿರುತ್ತಾನೆ)" (೨-೧-೧೭) ಎಂದು ಪರಮಾತ್ಮನು ಪ್ರಕೃತವಾಗಿರುವದರಿಂದ 'ಈ ಆತ್ಮನಿಂದ' ಎಂದು ಪರ(ಮಾತ್ಮ)ನನ್ನೇ ಪರಾಮರ್ಶೆ ಮಾಡಿದೆ (ಎಂಬುದು) ಯುಕ್ತವು. (ಇದರ ವಿವರ) : "ಆಗ ಇವನು ಎಲ್ಲಿದ್ದನು?" (೨-೧-೧೬) ಎಂಬೀ ಪ್ರಶ್ನೆಗೆ ಉತ್ತರವಾಗಿ ಆಕಾಶಶಬ್ದವಾಚ್ಯನಾದ ಪರಮಾತ್ಮನನ್ನು "ಹೃದಯದೊಳಗೆ ಈ ಆಕಾಶವಿದೆಯಲ್ಲ, ಅದರಲ್ಲಿ ಮಲಗಿರುತ್ತಾನೆ" (೨-೧-೧೭) ಎಂದು ಹೇಳಿರುತ್ತದೆ. "ಸೋಮ್ಯನೆ, ಆಗ ಸತ್ತಿನೊಡನೆ ಸಂಪನ್ನನಾಗಿರುತ್ತಾನೆ" (ಛಾಂ. ೬-೮-೧), "ದಿನದಿನವೂ ಹೋಗುತ್ತಿದ್ದರೂ ಈ ಬ್ರಹ್ಮಲೋಕವನ್ನು ಪಡೆದುಕೊಳ್ಳದೆ ಇರುವರು" (ಛಾಂ. ೮-೩-೨), "ಪ್ರಾಜ್ಞನಾದ ಆತ್ಮನಿಂದ ಆಲಿಂಗಿತನಾಗಿ" (೪-೩-೨೧), "ಪರಮಾತ್ಮನಲ್ಲಿ ಸೇರಿಹೋಗಿರುತ್ತಾನೆ" (ಪ್ರ. ೪-೭) ಮುಂತಾದ ಶ್ರುತಿಗಳಿಂದ ಆಕಾಶವೆಂಬ ಶಬ್ದದಿಂದ ಹೇಳಲ್ಪಟ್ಟಿರುವವನು ಪರಮಾತ್ಮನೇ ಎಂದು ನಿಶ್ಚಯವಾಗುತ್ತದೆ. "ಇದರೊಳಗೆ ಸಣ್ಣ ಆಕಾಶ(ವಿದೆ)ಯಲ್ಲ" (ಛಾಂ. ೮-೧-೧) ಎಂದು ಆರಂಭಿಸಿ ಆ (ಆಕಾಶ)ದಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಿಸಿರುವದರಿಂದಲೂ ಪರಮಾತ್ಮನು ಪ್ರಕೃತನೇ

---

1. ಈ ಮಾತನ್ನು ಹಿಂದಕ್ಕೆ ಅನ್ವಯಿಸುವಂತೆ ಅಚ್ಚಿನ ಪುಸ್ತಕದಲ್ಲಿ ಕಾಣುವ ಪಾಠದಲ್ಲಿ ಪುನರುಕ್ತಿಯಾಗುತ್ತದೆ; ಇಲ್ಲಿಗೇ ಅನ್ವಯಿಸಿದರೆ 'ಶ್ರುತಿಸ್ಮೃತಿನ್ಯಾಯೇಭ್ಯಃ' ಎಂದಿಷ್ಟೇ ಸಾಕು, ಚ ಹೆಚ್ಚಾಗುವದು; ಮುಂದೆ ಶ್ರುತಿಸ್ಮೃತಿನ್ಯಾಯಗಳನ್ನು ಉದಾಹರಿಸಿಯೂ ಇಲ್ಲ. ಆದ್ದರಿಂದ ಇದು ಲೇಖಕರ ಪ್ರಮಾದದಿಂದ ಇಲ್ಲಿಗೆ ಬಂದು ಸೇರಿದೆ ಎಂದು ಪರಿಗಣಿಸುವದೇ ಮೇಲೆಂದು ತೋರುತ್ತದೆ.

ಆಗಿರುತ್ತಾನೆ.[1] ಆದ್ದರಿಂದ 'ಈ ಆತ್ಮನಿಂದ' ಎಂದು ಪರಮಾತ್ಮನಿಂದಲೇ ಸೃಷ್ಟಿ ಎಂಬುದು ಯುಕ್ತ(ವಾಗಿರುತ್ತದೆ). ಸಂಸಾರಿಗೆ ಸೃಷ್ಟಿಸ್ಥಿತಿಲಯಗಳನ್ನು ಅರಿಯುವದೂ ಸಾಮರ್ಥ್ಯವೂ ಇಲ್ಲವೆಂದು ಆಗಲೆ (ಭಾ.ಭಾ. ೩೦೮ರಲ್ಲಿ) ಹೇಳಿರುತ್ತೇವೆ.

## ಪೂರ್ವಪಕ್ಷ : ಪರಮಾತ್ಮನ ಆರಾಧನೆಯಿಂದ ಮೋಕ್ಷ

(ಭಾಷ್ಯ)

೩೧೧. ಅತ್ರ ಚ "ಆತ್ಮೇತ್ಯೇವೋಪಾಸೀತ" (೧-೪-೭), "ಆತ್ಮಾನಮೇವಾವೇದಹಂ ಬ್ರಹ್ಮಾಸ್ಮಿ[2]" (೧-೪-೧೦) ಇತಿ ಬ್ರಹ್ಮವಿದ್ಯಾ ಪ್ರಸ್ತುತಾ। ಬ್ರಹ್ಮವಿಷಯಂ ಚ ಬ್ರಹ್ಮವಿಜ್ಞಾನಮ್ ಇತಿ "ಬ್ರಹ್ಮ ತೇ ಬ್ರವಾಣಿ"(೨-೧-೧) "ಬ್ರಹ್ಮ ಜ್ಞಪಯಿಷ್ಯಾಮಿ"(೨-೧-೧೫) ಇತಿ ಪ್ರಾರಬ್ಧಮ್। ತತ್ರ ಇದಾನೀಮ್ ಅಸಂಸಾರಿ ಬ್ರಹ್ಮ ಜಗತಃ ಕಾರಣಮ್ ಅಶನಾಯಾದ್ಯತೀತಂ ನಿತ್ಯಶುದ್ಧಬುದ್ಧಮುಕ್ತಸ್ವಭಾವಮ್। ತದ್ವಿಪರೀತಶ್ಚ ಸಂಸಾರೀ। ತಸ್ಮಾತ್ 'ಅಹಂ ಬ್ರಹ್ಮಾಸ್ಮಿ' ಇತಿ ನ ಗೃಹ್ಣೀಯಾತ್। ಪರಂ ಹಿ ದೇವಮ್ ಈಶಾನಂ ನಿಕೃಷ್ಟಃ ಸಂಸಾರೀ ಆತ್ಮತ್ವೇನ ಸ್ಮರನ್ ಕಥಂ ನ ದೋಷಭಾಕ್ ಸ್ಯಾತ್ ? ತಸ್ಮಾತ್ ನಾಹಂ ಬ್ರಹ್ಮಾಸ್ಮೀತಿ ಯುಕ್ತಮ್। ತಸ್ಮಾತ್ ಪುಷ್ಪೋದಕಾಞ್ಜಲಿಸ್ತುತಿನಮಸ್ಕಾರಬಲ್ಯುಪಹಾರಸ್ವಾಧ್ಯಾಯಧ್ಯಾನಯೋಗಾದಿಭಿಃ ಆರಿರಾಧಯಿಷೇತ। ಆರಾಧನೇನ ವಿದಿತ್ವಾ ಸರ್ವೇಶಿತೃ ಬ್ರಹ್ಮ ಭವತಿ। ನ ಪುನರಸಂಸಾರಿ ಬ್ರಹ್ಮ ಸಂಸಾರ್ಯಾತ್ಮತ್ವೇನ ಚಿನ್ತಯೇತ್ ಅಗ್ನಿಮಿವ ಶೀತತ್ವೇನ ಆಕಾಶಮಿವ (ಚ) ಮೂರ್ತಿಮತ್ತ್ವೇನ। ಬ್ರಹ್ಮಾತ್ಮತ್ವಪ್ರತಿಪಾದಕಮಪಿ ಶಾಸ್ತ್ರಮ್ ಅರ್ಥವಾದೋ ಭವಿಷ್ಯತಿ। ಸರ್ವತರ್ಕಶಾಸ್ತ್ರಲೋಕನ್ಯಾಯೈಶ್ಚ ಏವಮವಿರೋಧಃ ಸ್ಯಾತ್ ॥

(ಭಾಷ್ಯಾರ್ಥ)

ಇಲ್ಲಿ "ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೭), "ನಾನು ಬ್ರಹ್ಮವಾಗಿರುವೆನು ಎಂದು ತನ್ನನ್ನೇ ತಿಳಿದುಕೊಂಡಿತು" (೧-೪-೧೦) ಎಂದು ಬ್ರಹ್ಮವಿದ್ಯೆಯು ಪ್ರಕೃತವಾಗಿರುತ್ತದೆ.[3] ಬ್ರಹ್ಮವಿಜ್ಞಾನಕ್ಕೆ ಬ್ರಹ್ಮವೇ ವಿಷಯ

1. ಪ್ರಕೃತವಾಗಿರುವ ಆಕಾಶವನ್ನು (ಛಾಂ. ೮-೧-೫ರಲ್ಲಿ) ಆತ್ಮನೆಂದು ಕರೆದಿರುವದೂ ಇಲ್ಲಿ ಆಕಾಶವು ಪ್ರಕೃತನಲ್ಲ, ಪರಮಾತ್ಮನೇ ಪ್ರಕೃತ –ಎಂದು ದೃಢಪಡಿಸುತ್ತದೆ ಎಂದು ಅಭಿಪ್ರಾಯ. ಪರಮಾತ್ಮನು ವಿಜ್ಞಾನಾತ್ಮನಿಗಿಂತ ಬೇರೆಯಾದರೂ ಆತ್ಮನು ವಿಜ್ಞಾನಾತ್ಮ, ಪರಮಾತ್ಮ –ಎಂದು ಎರಡು ಬಗೆ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ.

2. ಇಲ್ಲೊಂದು ಇತಿ ಬೇಕಾಗಿದೆ.

3. ಪರಮಾತ್ಮನೇ ಪ್ರಕೃತ, ಜೀವನಲ್ಲ ಎಂದು ಅಭಿಪ್ರಾಯ.

ವಾಗಿರುವದರಿಂದ "ನಿನಗೆ ಬ್ರಹ್ಮವನ್ನು ಹೇಳಿಕೊಡುವೆನು" (೨-೧-೧) "ಬ್ರಹ್ಮವನ್ನು ಅರಿಕೆಮಾಡಿಕೊಳ್ಳುವೆನು" (೨-೧-೧೫) ಎಂದು ಪ್ರಾರಂಭಿಸಿರುತ್ತದೆ.[1] ಹೀಗಿರುವಲ್ಲಿ[2] ಈಗ[3] ಜಗತ್ತಿಗೆ ಕಾರಣವಾದದ್ದು ಅಸಂಸಾರಿ, ಹಸಿವು ಮುಂತಾದವುಗಳನ್ನು ಮೀರಿರುವ ನಿತ್ಯಶುದ್ಧಬುದ್ಧಮುಕ್ತಸ್ವಭಾವದ ಬ್ರಹ್ಮವು (ಎಂದಾಯಿತು). ಸಂಸಾರಿಯು ಅದಕ್ಕೆ ವಿಪರೀತ(ಸ್ವಭಾವದವ)ನು. **ಆದ್ದರಿಂದ ನಾನು ಬ್ರಹ್ಮವಾಗಿರುವೆನು ಎಂದು ಗ್ರಹಿಸಬಾರದು. ಪರದೇವನಾದ ಈಶ್ವರನನ್ನು ಕೀಳನಾದ ಸಂಸಾರಿಯು ತಾನೆಂದು ಸ್ಮರಿಸಿದರೆ ಹೇಗೆ ತಾನೆ ದೋಷಭಾಜನನಾಗದೆ ಇದ್ದಾನು?** ಆದ್ದರಿಂದ ನಾನು ಬ್ರಹ್ಮವಾಗಿರುವೆನು ಎಂಬುದು ಯುಕ್ತವಲ್ಲ.[4] **ಆದ್ದರಿಂದ ಪುಷ್ಪ, ಉದಕಾಂಜಲಿ, ಸ್ತುತಿ, ನಮಸ್ಕಾರ, ಬಲ್ಯುಪಹಾರ, ಸ್ವಾಧ್ಯಾಯ, ಧ್ಯಾನಯೋಗ-ಮುಂತಾದವುಗಳಿಂದ (ಆ ಪರಮೇಶ್ವರನನ್ನು) ಆರಾಧನೆಮಾಡುವದಕ್ಕೆ ಯತ್ನಿಸಬೇಕು. ಆರಾಧನೆಯಿಂದ ಅರಿತುಕೊಂಡು ಸರ್ವೇಶಿತೃವಾದ ಬ್ರಹ್ಮವೇ ಆಗುವನು.**[5] ಹೀಗಲ್ಲದೆ ಅಸಂಸಾರಿಯಾದ ಬ್ರಹ್ಮವನ್ನು ಸಂಸಾರಿಯು ತಾನೆಂದು- ಬೆಂಕಿಯನ್ನು ತಣ್ಣಗಿದೆಯೆಂದೂ ಆಕಾಶವು ಆಕಾರವುಳ್ಳದ್ದೆಂದೂ (ಅರಿಯುವವರಂತೆ)- ಚಿಂತಿಸಬಾರದು. ಬ್ರಹ್ಮಾತ್ಮತ್ವವನ್ನು

---

1. ಬಾಲಾಕಿಯೂ ಅಜಾತಶತ್ರುವೂ ಬ್ರಹ್ಮವನ್ನೇ ಹೇಳುತ್ತೇವೆಂದು ಬಾಯಿಬಿಟ್ಟು ನುಡಿದಿದ್ದಾರೆ; ಹೀಗೆ ಪ್ರಕರಣವೂ ಶ್ರುತಿಯೂ ಬ್ರಹ್ಮವನ್ನೇ ತಿಳಿಸುತ್ತವೆ ಎಂದು ಭಾವ.

2. ಬ್ರಹ್ಮವೇ ಇಲ್ಲಿ ಪ್ರಕೃತ, ಜೀವನಲ್ಲ -ಎಂದು ನಿಶ್ಚಿತವಾಗಿರುವಲ್ಲಿ.

3. ಈ ದೃಷ್ಟಿಯಿಂದ ನೋಡುವಾಗ 'ಏತಸ್ಮಾದಾತ್ಮನಃ' ಎಂದರೆ ಈ ಪರಮಾತ್ಮನಿಂದ ಎಂದು ಅರ್ಥವಾಗುವದರಿಂದ ಎಂದರ್ಥ. ತಸ್ಮಾತ್ ಎಂದು ಬೇರೆಯ ವಾಕ್ಯವು ಪ್ರಾರಂಭವಾಗಿರುವದರಿಂದ ವ್ಯಾಖ್ಯಾನದಲ್ಲಿ ಅನ್ವಯಿಸಿರುವಂತೆ 'ನ ಗೃಹ್ಣೀಯಾತ್' (ಗ್ರಹಿಸಬಾರದು) ಎಂಬುದಕ್ಕೆ ಈ ಮಾತನ್ನು ಅನ್ವಯಿಸುವದಕ್ಕೆ ಬರುವದಿಲ್ಲ; ಜಗತ್ಕಾರಣವು ಜೀವನಲ್ಲ, ಪರಮಾತ್ಮನೇ ಎಂದಾಯಿತು ಎಂದು ಪ್ರಕೃತಾರ್ಥವನ್ನು ಇಲ್ಲಿ ಉಪಸಂಹಾರಮಾಡಿದೆ ಎಂದಿಟ್ಟುಕೊಳ್ಳುವದೇ ಮೇಲು.

4. 'ಆತ್ಮನಂದೇ' ಎಂಬ ವಾಕ್ಯಕ್ಕೆ ಪರಮಾತ್ಮನನ್ನೇ ಉಪಸಂಹಾರಮಾಡಿಕೊಳ್ಳಬೇಕು ಎಂದೂ 'ತನ್ನನ್ನೇ ತಿಳಿದುಕೊಂಡಿತು' ಎಂಬುದಕ್ಕೆ ಬ್ರಹ್ಮವು ತನ್ನನ್ನೇ ಬ್ರಹ್ಮವೆಂದು ತಿಳಿದುಕೊಂಡಿತು ಎಂದೂ ಪೂರ್ವಪಕ್ಷಿಯ ಅರ್ಥ. ಆದ್ದರಿಂದ ಪರಮಾತ್ಮನೇ ನಾನೆಂಬ ವಸ್ತುತಂತ್ರಜ್ಞಾನದಿಂದ ಮುಕ್ತಿಯಲ್ಲ, ಎಂದು ಅವನ ಅಭಿಪ್ರಾಯ.

5. ಇದು ಭಾಗವತಮತ. ಸೂ. ಭಾ. ೨-೨-೪೨, (ಭಾ. ಭಾ. ೮೩) ಗೀ. ಭಾ. ೧೩-೨ (ಭಾ.ಭಾ. ೩೨೬), ಮಾಂ.ಕಾ.ಭಾ. ೩-೧ (ಭಾ.ಭಾ. ೧೨೪) ಇವನ್ನು ನೋಡಿರಿ. ಇಲ್ಲಿ ಆರಾಧನಾಕ್ರಮವನ್ನು ಖಂಡಿಸುವದೇನೂ ಭಾಷ್ಯಕ್ಕೆ ಇಷ್ಟವಲ್ಲ; ಸೂ. ಭಾ. ೨-೨-೪೨ (ಭಾ.ಭಾ. ೮೪), ಮಾಂ.ಕಾ.ಭಾ. ೩-೧೬ (ಭಾ.ಭಾ. ೧೫೯) -ಇವನ್ನು ನೋಡಿ.

ತಿಳಿಸುವ ಶಾಸ್ತ್ರವೂ ಅರ್ಥವಾದವೆಂದಾಗಬಹುದು.[1] ಹೀಗಾದರೆ ಎಲ್ಲಾ ತರ್ಕಶಾಸ್ತ್ರಗಳಿಗೂ ಲೋಕಕ್ಕೂ ನ್ಯಾಯಕ್ಕೂ ಅವಿರೋಧವಾಗುವದು.[2]

## ಸಿದ್ಧಾಂತ: ಎಲ್ಲರ ಆತ್ಮನಾದ ಬ್ರಹ್ಮದ ಉಪಪತ್ತಿದು

(ಭಾಷ್ಯ)

೩೧೧. ನ। ಮನ್ತ್ರಬ್ರಾಹ್ಮಣವಾದೇಭ್ಯಸ್ತಸ್ಯೈವ ಪ್ರವೇಶಶ್ರವಣಾತ್। "ಪುರಶ್ಚಕ್ರೇ" (೨-೫-೧೮) ಇತಿ ಪ್ರಕೃತ್ಯ "ಪುರಃ ಪುರುಷ ಆವಿಶತ್" (೨-೫-೧೮) ಇತಿ, "ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ" (೨-೫-೧೯), "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ ಯದಾಸ್ತೇ" (ತೈ. ಆ. ೩-೧೨-೭) ಇತಿ ಸರ್ವಶಾಖಾಸು ಸಹಸ್ರಶೋ ಮನ್ತ್ರವಾದಾಃ ಸೃಷ್ಟಿಕರ್ತುರೇವಾಸಂಸಾರಿಣಃ ಶರೀರಪ್ರವೇಶಂ ದರ್ಶಯನ್ತಿ। ತಥಾ ಬ್ರಾಹ್ಮಣವಾದಾಃ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨-೬), "ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ" (ಐ. ೧-೩), "ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ" (ಛಾಂ. ೬-೨-೩), "ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ" (ಕ. ೧-೩-೧೨) ಇತ್ಯಾದ್ಯಾಃ। ಸರ್ವಶ್ರುತಿಷು ಚ ಬ್ರಹ್ಮಣಿ ಆತ್ಮಶಬ್ದಪ್ರಯೋಗಾತ್, ಆತ್ಮಶಬ್ದಸ್ಯ ಚ ಪ್ರತ್ಯಗಾತ್ಮಾಭಿಧಾಯಕತ್ವಾತ್, "ಏಷ ಸರ್ವಭೂತಾನ್ತರಾತ್ಮಾ" (ಮುಂ. ೨-೧-೪) ಇತಿ ಚ ಶ್ರುತೇಃ ಪರಮಾತ್ಮವ್ಯತಿರೇಕೇಣ ಸಂಸಾರಿಣೋಽಭಾವಾತ್, "ಏಕಮೇವಾದ್ವಿತೀಯಮ್" (ಛಾಂ. ೬-೨-೧), "ಬ್ರಹ್ಮೈವೇದಮ್" (ಮುಂ. ೨-೨-೧೧), "ಆತ್ಮೈವೇದಮ್" (ಛಾಂ. ೭-೨೫-೨) ಇತ್ಯಾದಿಶ್ರುತಿಭ್ಯೋ ಯುಕ್ತಮೇವ ಅಹಂ ಬ್ರಹ್ಮಾಸ್ಮಿ ಇತ್ಯವಧಾರಯಿತುಮ್ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಮಂತ್ರಬ್ರಾಹ್ಮಣವಾದಗಳಿಂದ ಅವನೇ ಪ್ರವೇಶ ಮಾಡಿದನೆಂದು ಶ್ರುತಿಯಲ್ಲಿ ಹೇಳಿರುತ್ತದೆ. "(ಎರಡು ಕಾಲಿನ) ಪುರಗಳನ್ನು

1. ಬ್ರಹ್ಮೋಪಾಸನೆಯನ್ನು ಮಾಡಿದರೆ ಬ್ರಹ್ಮವೇ ಆಗುವನು ಎಂಬುದನ್ನು ಸ್ತುತಿಸುವ ಅರ್ಥವಾದವಿದು ಎಂದು ಭಾವ.

2. ತಾರ್ಕಿಕರು ಜೀವೇಶ್ವರರು ಬೇರೆ ಎನ್ನುತ್ತಾರೆ, ಲೋಕಾನುಭವದಲ್ಲಿ ನಾವು ಪರಿಚ್ಛಿನ್ನಜ್ಞಾನವುಳ್ಳ ಸಂಸಾರಿಗಳೇ ಎಂದು ತೋರುತ್ತಿದೆ, ಸಂಸಾರಿಯೇ ಅಸಂಸಾರಿಯನ್ನು ಉಪಾಸನೆಮಾಡಬೇಕು. ಅವನೇ ನಾನೆನ್ನುವದು ಸರಿಯಲ್ಲ ಎಂಬುದು ನ್ಯಾಯಕ್ಕೂ ಹೊಂದುಗೆಯಾಗುತ್ತದೆ –ಎಂದು ಅಭಿಪ್ರಾಯ.

ಮಾಡಿದನು" (೨-೫-೧೮) ಎಂದು ಪ್ರಕ್ರಮವಮಾಡಿ "ಪುರಗಳನ್ನು ಪುರುಷನು ಪ್ರವೇಶಿಸಿದನು" (೨-೫-೧೮) ಎಂದು (ಮಂತ್ರವು ಹೇಳುತ್ತದೆ). "ರೂಪ ರೂಪಕ್ಕೂ ಪ್ರತಿರೂಪನಾದನು; ಆ ಇವನ ರೂಪವು ಪ್ರಖ್ಯಾತಿಗೊಳಿಸುವದ ಕ್ಕಾಗಿ" (೨-೫-೧೦), "ಧೀರನು ಎಲ್ಲಾ ರೂಪಗಳನ್ನೂ ಮಾಡಿ (ಅವಕ್ಕೆ) ಹೆಸರುಗಳನ್ನು ಕೊಟ್ಟು ಆ (ಹೆಸರುಗಳಿಂದ) ಕರೆಯುತ್ತಿರುತ್ತಾನೆ" (ತೈ. ಆ. ೩-೧೨-೭) ಎಂದು ಎಲ್ಲಾ ಶಾಖೆಗಳಲ್ಲಿಯೂ ಸಾವಿರಾರು ಮಂತ್ರವಾದಗಳು ಸೃಷ್ಟಿಕರ್ತೃವಾದ ಅಸಂಸಾರಿಯೇ ಶರೀರದೊಳಗೆ ಹೊಕ್ಕಿರುತ್ತಾನೆಂದು ತಿಳಿಸು ತ್ತವೆ. ಹೀಗೆಯೇ "ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕಿತು" (ತೈ. ೨-೬), "ಅವನು ಇದೇ ಎಲ್ಲೆಯನ್ನು ಸೀಳಿಕೊಂಡು ಈ ದ್ವಾರದಿಂದ ಪ್ರವೇಶಿಸಿದನು" (ಐ. ೧-೩), "ಆ ಈ ದೇವತೆಯು ಈ ಮೂರು ದೇವತೆಗಳನ್ನು ಈ ಜೀವನ ರೂಪದಿಂದ ಒಳಹೊಕ್ಕು" (ಛಾಂ. ೬-೩-೩), "ಈ ಆತ್ಮನು ಎಲ್ಲಾ ಭೂತ ಗಳಲ್ಲಿ ಅಡಗಿದ್ದು ಬೆಳಗದಿರುವನು" (ಕ. ೧-೩-೧೨) ಮುಂತಾದ ಬ್ರಾಹ್ಮಣ ವಾದಗಳೂ (ತಿಳಿಸುತ್ತವೆ). ಎಲ್ಲಾ ಶ್ರುತಿಗಳಲ್ಲಿಯೂ ಬ್ರಹ್ಮವನ್ನು (ತಿಳಿಸು ವದಕ್ಕೆ) ಆತ್ಮಶಬ್ದವನ್ನು ಪ್ರಯೋಗಿಸಿರುವದರಿಂದಲೂ ಆತ್ಮಶಬ್ದವು ಪ್ರತ್ಯಗಾತ್ಮ ನನ್ನೇ ಹೇಳುವದರಿಂದಲೂ "ಇವನೇ ಎಲ್ಲಾ ಭೂತಗಳಿಗೂ ಅಂತರಾತ್ಮನು" (ಮುಂ. ೨-೧-೪)[1] ಎಂದು ಶ್ರುತಿಯಿರುವದರಿಂದ ಪರಮಾತ್ಮನಿಗಿಂತ ಬೇರೆ ಯಾಗಿ (ಮತ್ತೊಬ್ಬ) ಸಂಸಾರಿಯು ಇಲ್ಲದ್ದರಿಂದಲೂ "ಒಂದೇ ತನಗೆರಡನೆಯ ದಿಲ್ಲದ್ದು" (ಛಾಂ. ೬-೨-೧), "ಇದು ಬ್ರಹ್ಮವೇ" (ಮುಂ. ೨-೨-೧೧), "ಇದು ಆತ್ಮನೇ" (ಛಾಂ. ೭-೨೫-೨)- ಮುಂತಾದ ಶ್ರುತಿಗಳಿಂದ ನಾನು ಬ್ರಹ್ಮವಾಗಿರುವೆನು ಎಂದು ನಿಶ್ಚಯಿಸುವದು ಯುಕ್ತವೇ.

## ಪರಮಾತ್ಮನು ಎಲ್ಲರ ಆತ್ಮನೆಂಬುದಕ್ಕೆ ಆಕ್ಷೇಪ

(ಭಾಷ್ಯ)

೩೧೨ ಯದಾ ಏವಂ ಸ್ಥಿತಃ ಶಾಸ್ತ್ರಾರ್ಥಃ ತದಾ ಪರಮಾತ್ಮನಃ ಸಂಸಾರಿತ್ವಮ್ । ತಥಾ ಚ ಸತಿ ಶಾಸ್ತ್ರಾನರ್ಥಕ್ಯಮ್ । ಅಸಂಸಾರಿತ್ವೇ ಚ ಉಪದೇಶಾನರ್ಥಕ್ಯಂ ಸ್ಪಷ್ಟೋ ದೋಷಃ ಪ್ರಾಪ್ತಃ । ಯದಿ ತಾವತ್ ಪರಮಾತ್ಮಾ ಸರ್ವಭೂತಾನ್ತರಾತ್ಮಾ ಸರ್ವಶರೀರಸಂಪರ್ಕಜನಿತದುಃಖಾನಿ ಅನುಭವತೀತಿ ಸ್ಪಷ್ಟಂ ಪರಸ್ಯ ಸಂಸಾರಿತ್ವಂ ಪ್ರಾಪ್ತಮ್ । ತಥಾ ಚ ಪರಸ್ಯ ಅಸಂಸಾರಿತ್ವಪ್ರತಿಪಾದಿಕಾಃ ಶ್ರುತಯಃ ಕುಪ್ಯೇರನ್ । ಸ್ಮೃತಯಶ್ಚ, ಸರ್ವೇ

1. ಮುಂಡಕದಲ್ಲಿ ಇದು ಪ್ರಜಾಪತಿವಾಕ್ಯವಾಗಿ ಕಾಣಬರುತ್ತದೆಯಾದರೂ ಇದನ್ನು ಈಶ್ವರವಾಕ್ಯವೆಂದು ಹಿಡಿದು ಇಲ್ಲಿ ಉದಾಹರಿಸಿರುತ್ತದೆ. ಶ್ವೇ. ೬-೨೧ ಮುಂತಾದ ಶ್ರುತಿಗಳಿಗೆ ಅದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬಹುದು.

ಚ ನ್ಯಾಯಾಃ ! ಅಥ ಕಥಂಚಿತ್ ಪ್ರಾಣಿಶರೀರಸಂಬನ್ಧಜೈರ್ದುಃಖೈಃ ನ ಸಂಬಧ್ಯತ ಇತಿ ಶಕ್ಯಂ ಪ್ರತಿಪಾದಯಿತುಮ್, ಪರಮಾತ್ಮನಃ ಸಾಧ್ಯಪರಿಹಾರ್ಯಾಭಾವಾತ್ ಉಪದೇಶಾನರ್ಥಕ್ಯದೋಷೋ ನ ಶಕ್ಯತೇ ನಿವಾರಯಿತುಮ್ ॥

(ಭಾಷ್ಯಾರ್ಥ)

ಶಾಸ್ತ್ರದ ಅರ್ಥವು ಹೀಗೆ ನಿಲ್ಲುವದಾದರೆ, ಆಗ ಪರಮಾತ್ಮನಿಗೆ ಸಂಸಾರಿತ್ವವು (ಉಂಟಾಗುವದು). ಹಾಗಾದರೆ ಶಾಸ್ತ್ರವು ವ್ಯರ್ಥವು; (ಅವನು) ಅಸಂಸಾರಿಯೇ ಆದರೆ ಉಪದೇಶವು ವ್ಯರ್ಥವು ಎಂಬ ದೋಷವು ಸ್ಪಷ್ಟವಾಗಿರುತ್ತದೆ. (ಇದರ ವಿವರ) : ಮೊದಲನೆಯದಾಗಿ ಪರಮಾತ್ಮನು ಸರ್ವಭೂತಗಳಿಗೂ ಅಂತರಾತ್ಮನಾದರೆ ಎಲ್ಲರ ಶರೀರದ ಸಂಬಂಧದಿಂದಾದ ದುಃಖಗಳನ್ನು ಅನುಭವಿಸುತ್ತಾನೆಂದಾಗಿ ಪರ(ಮಾತ್ಮನಿಗೆ) ಸಂಸಾರಿತ್ವ(ವುಂಟಾಗುವದು) ಸ್ಪಷ್ಟವು. ಹಾಗಾದರೆ ಪರಮಾತ್ಮನು ಅಸಂಸಾರಿ ಎಂದು ತಿಳಿಸುವ ಶ್ರುತಿಗಳು ಕೋಪಗೊಳ್ಳುವವು; ಸ್ಮೃತಿಗಳೂ ಎಲ್ಲಾ ನ್ಯಾಯಗಳೂ ಕೋಪಗೊಳ್ಳುವವು.[1] ಹೀಗಲ್ಲದೆ ಪ್ರಾಣಿಗಳ ಶರೀರಸಂಬಂಧದಿಂದಾದ ದುಃಖಗಳು (ಅವನಿಗೆ) ಸೇರಿರುವದಿಲ್ಲ ಎಂದು ಹೇಗೋ ಪ್ರತಿಪಾದಿಸಬಹುದಾದರೆ, ಪರಮಾತ್ಮನಿಗೆ ಸಾಧಿಸಿಕೊಳ್ಳಬಹುದಾದದ್ದೂ ಪರಿಹರಿಸಿಕೊಳ್ಳಬೇಕಾದದ್ದೂ (ಏನೂ) ಇರುವದಿಲ್ಲವಾಗಿ (ಅವನಿಗೆ ನೀನು ಇಂಥವನು ಎಂದು) ಉಪದೇಶಿಸುವದು ವ್ಯರ್ಥವಾಗುವದೆಂಬ ದೋಷವನ್ನು ಪರಿಹರಿಸಿಕೊಳ್ಳುವದಕ್ಕೆ ಆಗಲಾರದು.[2]

## ಆಕ್ಷೇಪಕ್ಕೆ ಭೇದಾಭೇದವಾದಿಗಳ ಪರಿಹಾರ

(ಭಾಷ್ಯ)

೩೧೩. ಅತ್ರ ಕೇಚಿತ್ ಪರಿಹಾರಮ್ ಆಚಕ್ಷತೇ । ಪರಮಾತ್ಮಾ ನ ಸಾಕ್ಷಾತ್ ಭೂತೇಷು ಅನುಪ್ರವಿಷ್ಟಃ ಸ್ವೇನ ರೂಪೇಣ । ಕಿಂ ತರ್ಹಿ ವಿಕಾರಭಾವಮ್ ಆಪನ್ನಃ ವಿಜ್ಞಾನಾತ್ಮತ್ವಂ ಪ್ರತಿಪೇದೇ । ಸ ಚ ವಿಜ್ಞಾನಾತ್ಮಾ ಪರಸ್ಮಾತ್ ಅನ್ಯೋಽನನ್ಯಶ್ಚ । ಯೇನ ಅನ್ಯಃ ತೇನ ಸಂಸಾರಿತ್ವಸಂಬನ್ಧೀ, ಯೇನ ಅನನ್ಯಃ ತೇನ ಅಹಂ ಬ್ರಹ್ಮ ಇತ್ಯವಧಾರಣಾರ್ಹಃ । ಏವಂ ಸರ್ವಮ್ ಅವಿರುದ್ಧಂ ಭವಿಷ್ಯತೀತಿ ॥

---

1. ಅಸಂಸಾರಿತ್ವವನ್ನು ಹೇಳುವ ಶ್ರುತಿಸ್ಮೃತಿಗಳನ್ನು ಹಿಂದೆ ಉದಾಹರಿಸಿಯೇ ಇದೆ. ಪರಮಾತ್ಮನಿಗೆ ಸಂಸಾರಿತ್ವವನ್ನು ಹೇಳುವದು ವ್ಯಾಹತವಾದ್ದರಿಂದ ಇದು ನ್ಯಾಯವಿರುದ್ಧವೂ ಆಗಿರುತ್ತದೆ.

2. ಏಕೆಂದರೆ ಕೃತಾರ್ಥನಾದವನಿಗೆ ಯಾವ ಉಪದೇಶದಿಂದಲೂ ಏನೂ ಬೇಕಾಗಿರುವದಿಲ್ಲ.

(ಭಾಷ್ಯಾರ್ಥ)

ಇಲ್ಲಿ **ಕೆಲವರು**[1] ಪರಿಹಾರವನ್ನು ಹೇಳುತ್ತಾರೇನೆಂದರೆ: ಪರಮಾತ್ಮನು ನೇರಾಗಿ ತನ್ನ ರೂಪದಿಂದಲೇ ಭೂತಗಳಲ್ಲಿ ಒಳಹೊಕ್ಕಿರುವದಿಲ್ಲ. ಮತ್ತೇನೆಂದರೆ ವಿಕಾರಭಾವವನ್ನು ಹೊಂದಿ ವಿಜ್ಞಾನಾತ್ಮತ್ವವನ್ನು ಪಡೆದನು. ಆ ವಿಜ್ಞಾನಾತ್ಮನು ಪರಮಾತ್ಮನಿಂದ ಅನ್ಯನೂ ಅನನ್ಯನೂ (ಆಗಿರುತ್ತಾನೆ). ಯಾವ (ಅಂಶದಿಂದ) ಅನ್ಯನೋ ಅದರಿಂದ ಸಂಸಾರಿತ್ವದ ಸಂಬಂಧವುಳ್ಳವನಾಗಿರುತ್ತಾನೆ; ಯಾವ (ಅಂಶ)ದಿಂದ ಅನನ್ಯನೋ ಅದರಿಂದ ಬ್ರಹ್ಮವು ಎಂಬ ನಿಶ್ಚಯಕ್ಕೆ ತಕ್ಕವನಾಗಿರುತ್ತಾನೆ. ಹೀಗಾದರೆ ಯಾವದೂ ವಿರುದ್ಧವಾಗುವದಿಲ್ಲ.[2]

## ವಿಜ್ಞಾನಾತ್ಮನು ಪರಮಾತ್ಮನ ವಿಕಾರವೆಂಬವರ ಖಂಡನೆ

(ಭಾಷ್ಯ)

೩೧೮. ತತ್ರ ವಿಜ್ಞಾನಾತ್ಮನೋ ವಿಕಾರಪಕ್ಷೇ ಏತಾ ಗತಯಃ। ಪೃಥಿವೀದ್ರವ್ಯವತ್ ಅನೇಕದ್ರವ್ಯಸಮಾಹಾರಸ್ಯ ಸಾವಯವಸ್ಯ ಪರಮಾತ್ಮನಃ ಏಕದೇಶವಿಪರಿಣಾಮೋ ವಿಜ್ಞಾನಾತ್ಮಾ ಘಟಾದಿವತ್। ಪೂರ್ವಸಂಸ್ಥಾನಾವಸ್ಥಸ್ಯ ವಾ ಪರಸ್ಯ ಏಕದೇಶೋ ವಿಕ್ರಿಯತೇ ಕೇಶೋಷರಾದಿವತ್। ಸರ್ವ ಏವ ವಾ ಪರಃ ಪರಿಣಮೇತ್ ಕ್ಷೀರಾದಿವತ್। ತತ್ರ ಸಮಾನಜಾತೀಯಾನೇಕದ್ರವ್ಯಸಮೂಹಸ್ಯ ಕಶ್ಚಿತ್ ದ್ರವ್ಯವಿಶೇಷೋ ವಿಜ್ಞಾನಾತ್ಮತ್ವಂ ಪ್ರತಿಪದ್ಯತೇ ಯದಾ, ತದಾ ಸಮಾನಜಾತೀಯತ್ವಾತ್ ಏಕತ್ವಮ್ ಉಪಚರಿತಮೇವ, ನ ತು ಪರಮಾರ್ಥತಃ। ತಥಾ ಚ ಸತಿ ಸಿದ್ಧಾಂತವಿರೋಧಃ। ಅಥ ನಿತ್ಯಾಯುತಸಿದ್ಧಾವಯವಾನುಗತೋಽವಯವೀ ಪರ ಆತ್ಮಾ। ತಸ್ಯ ತದವಸ್ಥಸ್ಯ ಏಕದೇಶೋ ವಿಜ್ಞಾನಾತ್ಮಾ ಸಂಸಾರೀ, ತದಾಪಿ ಸರ್ವಾವಯವಾನುಗತತ್ವಾತ್ ಅವಯವಿನ ಏವ ಅವಯವಗತೋ ದೋಷೋ ಗುಣೋ ವಾ ಇತಿ ವಿಜ್ಞಾನಾತ್ಮನಃ ಸಂಸಾರಿತ್ವದೋಷೇಣ ಪರ ಏವಾತ್ಮಾ ಸಂಬಧ್ಯತ ಇತಿ ಇಯಮಪ್ಯನಿಷ್ಟಾ ಕಲ್ಪನಾ। ಕ್ಷೀರವತ್ ಸರ್ವಪರಿಣಾಮಪಕ್ಷೇ ಸರ್ವಶ್ರುತಿಸ್ಮೃತಿಕೋಪಃ। ಸ ಚಾನಿಷ್ಟಃ। "ನಿಷ್ಕಲಂ ನಿಷ್ಕ್ರಿಯಂ ಶಾನ್ತಮ್" (ಶ್ವೇ. ೬-೧೯), "ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-

---

1. ಇದು ಯಾರ ಪಕ್ಷವೆಂಬುದನ್ನು ವಾರ್ತಿಕಕಾರರಾಗಲಿ ಟೀಕಾಕಾರರಾಗಲಿ ಇಲ್ಲಿ ಬಾಯಿಬಿಟ್ಟು ಹೇಳಿಲ್ಲ; ಆದರೂ ಇದು ಭರ್ತೃಪ್ರಪಂಚರ ಮತವೆಂದು ಈ ಭಾಷ್ಯದಲ್ಲಿ ಬೇರೆಯ ಕಡೆಯಲ್ಲಿರುವ ಆ ಮತದ ಅನುವಾದದಿಂದ ಊಹಿಸಬಹುದಾಗಿದೆ.

2. ನಾನು ಬ್ರಹ್ಮವು ಎಂದುಮುಂತಾಗಿರುವ ವೇದೋಪದೇಶವೂ ಹೊಂದುಗೆಯಾಗುತ್ತದೆ, ನಾನು ದುಃಖಿ ಎಂಬ ಪ್ರತ್ಯಕ್ಷಾನುಭವಕ್ಕೂ ವಿರೋಧವಾಗುವದಿಲ್ಲ –ಎಂದು ಅಭಿಪ್ರಾಯ.

೧-೨), "ಆಕಾಶವತ್ ಸರ್ವಗತಶ್ಚ ನಿತ್ಯಃ" (ಶತ. ಬ್ರಾ. ೧೦-೬-೩-೨), "ಸ ವಾ ಏಷ ಮಹಾನಜ ಆತ್ಮಾಽಜರೋಽಮೃತಃ'' (೪-೪-೨೫), "ನ ಜಾಯತೇ ಮ್ರಿಯತೇ ವಾ ಕದಾಚಿತ್" (ಗೀ. ೨-೨೦), "ಅವ್ಯಕ್ತೋಽಯಮ್" (ಗೀ.೨-೨೫) ಇತ್ಯಾದಿಶ್ರುತಿಸ್ಮೃತಿನ್ಯಾಯ[1] ವಿರುದ್ಧಾ ಏತೇ ಸರ್ವೇ ಪಕ್ಷಾಃ ॥

(ಭಾಷ್ಯಾರ್ಥ)

ಇಲ್ಲಿ ವಿಜ್ಞಾನಾತ್ಮನು (ಪರಮಾತ್ಮನ) ವಿಕಾರವೆನ್ನುವ ಪಕ್ಷದಲ್ಲಿ ಇಷ್ಟು ಗತಿಗಳು[2] : (೧) ಪೃಥಿವಿ ಎಂಬ ದ್ರವ್ಯದಂತೆ ಅನೇಕದ್ರವ್ಯಗಳ ಒಟ್ಟಾಗಿರುವ ಸಾವಯವನಾದ ಪರಮಾತ್ಮನ ಒಂದಂಶದ ವಿಪರಿಣಾಮವೇ ಗಡಿಗೆ ಮುಂತಾದದ್ದರಂತೆ ಇರುವ ವಿಜ್ಞಾನಾತ್ಮನು ; (೨) ಅಥವಾ ಹಿಂದಿನ ಆಕಾರದಲ್ಲಿಯೇ ಇರುವ ಪರಮಾತ್ಮನ ಒಂದು ಭಾಗವು ಮಾತ್ರ ಕೂದಲು, ಚೌಳುನೆಲ ಮುಂತಾದವುಗಳಂತೆ (ವಿಜ್ಞಾನಾತ್ಮನಾಗಿ) ವಿಕಾರವಾಗಬಹುದು ; (೩) ಅಥವಾ ಪರಮಾತ್ಮನು ಸಂಪೂರ್ಣವಾಗಿ ಹಾಲು ಮುಂತಾದವುಗಳಂತೆ (ವಿಜ್ಞಾನಾತ್ಮನಾಗಿ) ಪರಿಣಮಿಸಬಹುದು. ಈ (ಮೂರು ವಿಕಲ್ಪ)ಗಳಲ್ಲಿ ಸಮಾನಜಾತೀಯವಾದ ಅನೇಕದ್ರವ್ಯಗಳ ಸಮೂಹವಾಗಿರುವ (ಪರಮಾತ್ಮನಲ್ಲಿ) ಒಂದಾನೊಂದು ದ್ರವ್ಯವು ವಿಜ್ಞಾನಾತ್ಮತ್ವವನ್ನು ಪಡೆಯುತ್ತದೆ ಎಂದು ಯಾವಾಗ (ಹೇಳುವರೋ) ಆಗ ಸಮಾನಜಾತೀಯವಾಗಿರುವದರಿಂದ (ಅವು) ಒಂದು ಎಂಬುದು ಉಪಚರಿತವೇ ಹೊರತು ಪರಮಾರ್ಥವಾಗಿ (ಅವು) ಒಂದಲ್ಲ. ಹಾಗಾದರೆ ಸಿದ್ಧಾಂತವಿರೋಧವು[3].

ಇನ್ನು ಪರಮಾತ್ಮನು ಯಾವಾಗಲೂ ಅಯುತಸಿದ್ಧವಾಗಿರುವ ಅವಯವಗಳಲ್ಲಿ ಅನುಗತವಾಗಿರುವ ಅವಯವಿಯು ; ಅವನು ಅದೇ ಅವಸ್ಥೆಯಲ್ಲಿರುವಾಗ (ಅವನ) ಒಂದು ಭಾಗವು ಮಾತ್ರ ವಿಜ್ಞಾನಾತ್ಮನೆಂಬ ಸಂಸಾರಿಯು-ಎಂದರೆ, ಆಗಲೂ (ಪರಮಾತ್ಮನು ತನ್ನ) ಅವಯವಗಳಲ್ಲೆಲ್ಲ ಅನುಗತವಾಗಿರುವದರಿಂದ ಅವಯವದಲ್ಲಿರುವ ದೋಷವಾಗಲಿ ಗುಣವಾಗಲಿ ಅವಯವಿಗೇ ಸೇರಿದ್ದಾದ್ದರಿಂದ ವಿಜ್ಞಾನಾತ್ಮನ ಸಂಸಾರಿತ್ವವೆಂಬ ದೋಷದಿಂದ ಪರಮಾತ್ಮನೇ ಸಂಬದ್ಧನಾಗುತ್ತಾನಾಗಿ ಈ ಕಲ್ಪನೆಯೂ (ನಿಮಗೆ) ಅನಿಷ್ಟನಾದದ್ದೇ.[4]

---

1. ಈ ಮಾತು ಇಲ್ಲದಿದ್ದರೂ ಆಗುತ್ತಿತ್ತು. 2. ವಿಕಲ್ಪಗಳಾಗಬಹುದು.

3. ಮಣ್ಣಿನ ಅವಯವಗಳು ಮಡಕೆಯಾದಂತೆ ಪರಮಾತ್ಮನ ಒಂದು ಅವಯವ ಸಮೂಹವು ಜೀವನಾಗುತ್ತದೆ ಎಂದರೆ ಪರಮಾತ್ಮನು ನಿಜವಾಗಿ ಏಕನಲ್ಲವೆಂದೇ ಆಗುತ್ತದೆ. ಪರಮಾತ್ಮನ ಏಕತ್ವವೂ ಪರಮಾರ್ಥ, ಅನೇಕತ್ವವೂ ಪರಮಾರ್ಥ ಎಂಬುದೇ ಈ ಪಕ್ಷದವರ ಸಿದ್ಧಾಂತವಾದ್ದರಿಂದ ಆ ಸಿದ್ಧಾಂತಕ್ಕೆ ಈ ಕಲ್ಪವು ವಿರುದ್ಧವಾಗುತ್ತದೆ.

4. ಸೂ. ಭಾ. ೨-೧-೨೬ರಲ್ಲಿ ಪೂರ್ವಪಕ್ಷವನ್ನು ನೋಡಿ.

ಕ್ಷೀರದಂತೆ ಸಂಪೂರ್ಣವಾಗಿ ಪರಿಣಾಮವಾಗುತ್ತಾನೆಂಬ (ಮೂರನೆಯ) ಪಕ್ಷದಲ್ಲಿ ಎಲ್ಲಾ ಶ್ರುತಿಸ್ಮೃತಿಗಳಿಗೂ ಕೋಪವುಂಟಾಗುವದು ; ಅದೂ (ನಿಮಗೆ) ಅನಿಷ್ಟವು.[1]

"ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ" (ಶ್ವೇ. ೬-೧೯), "ಪುರುಷನು ದಿವ್ಯನು, ಅಮೂರ್ತನು, ಹೊರಗೂ ಒಳಗೂ ಸಹ ಅಜನೇ" (ಮುಂ ೨-೧-೨), "ಆಕಾಶದಂತೆ ಸರ್ವಗತನೂ ನಿತ್ಯನೂ" (ಶತ. ಬ್ರಾ. ೧೦-೬-೩-೨), "ಆ ಈ ಮಹಾನ್ ಅಜನಾದ ಆತ್ಮನು ಮುಪ್ಪಿಲ್ಲದವನು, ಸಾವಿಲ್ಲದವನು, ಅಮೃತನು" (೪-೪-೨೫), "ಯಾವಾಗಲೂ ಹುಟ್ಟುವದಿಲ್ಲ, ಸಾಯುವದೂ ಇಲ್ಲ" (ಗೀ. ೨-೨೦), "ಇವನು ಅವ್ಯಕ್ತನು...." (ಗೀ. ೨-೨೫) ಮುಂತಾದ ಶ್ರುತಿಸ್ಮೃತಿ ನ್ಯಾಯಗಳಿಗೆ ಈ ಎಲ್ಲಾ ಪಕ್ಷಗಳೂ ವಿರುದ್ಧವಾಗಿರುವವು.[2]

## ಜೀವನು ಕಿಡಿಯಂತೆ ಪರಮಾತ್ಮನ ಅಂಶವೆಂಬ ಮತದ ಖಂಡನೆ

(ಭಾಷ್ಯ)

೩೧೫. ಅಚಲಸ್ಯ ಪರಮಾತ್ಮನ ಏಕದೇಶಪಕ್ಷೇ ವಿಜ್ಞಾನಾತ್ಮನಃ ಕರ್ಮಫಲವದ್ದೇಶಸಂಸರಣಾನುಪಪತ್ತಿಃ । ಪರಸ್ಯ ವಾ ಸಂಸಾರಿತ್ವಮ್ ಇತ್ಯುಕ್ತಮ್ । ಪರಸ್ಯ ಏಕದೇಶೋಽಗ್ನಿವಿಸ್ಫುಲಿಙ್ಗವತ್ ಸ್ಫುಟಿತೋ ವಿಜ್ಞಾನಾತ್ಮಾ ಸಂಸರತಿ ಇತಿ ಚೇತ್ ತಥಾಪಿ ಪರಸ್ಯ ಅವಯವಸ್ಫುಟನೇನ ಕ್ಷತಪ್ರಾಪ್ತಿಃ । ತತ್ಸಂಸರಣೇ ಚ ಪರಮಾತ್ಮಪ್ರದೇಶಾನ್ತರಾವಯವವ್ಯೂಹೇ ಛಿದ್ರತಾಪ್ರಾಪ್ತಿಃ । ಅವ್ರಣತ್ವವಾಕ್ಯವಿರೋಧಶ್ಚ । ಆತ್ಮಾವಯವಭೂತಸ್ಯ ವಿಜ್ಞಾನಾತ್ಮನಃ ಸಂಸರಣೇ ಪರಮಾತ್ಮಶೂನ್ಯಪ್ರದೇಶಾಭಾವಾತ್ ಅವಯವಾನ್ತರನೋದನವ್ಯೂಹನಾಭ್ಯಾಂ ಹೃದಯಶೂಲೇನೇವ ಪರಮಾತ್ಮನೋ ದುಃಖಿತ್ವಪ್ರಾಪ್ತಿಃ । ಅಗ್ನಿವಿಸ್ಫುಲಿಙ್ಗಾದಿದೃಷ್ಟಾನ್ತಶ್ರುತೇರ್ನ ದೋಷಃ ಇತಿ ಚೇನ್ನ । ಶ್ರುತೇರ್ಜ್ಞಾಪಕ

---

1. ಏಕೆಂದರೆ ಬ್ರಹ್ಮವು ನಿರವಯವವೆಂಬುದೇ ಪೂರ್ವಪಕ್ಷಿಗಳಿಗೆ ಇಷ್ಟವು. ವಿಕಾರಾವಯವಪಕ್ಷಗಳಲ್ಲಿರುವ ದೋಷವನ್ನು ಸೂ. ಭಾ. ೪-೩-೧೪ (ಭಾ. ಭಾ. ೫೬೪) ರಲ್ಲಿಯೂ ಹೇಳಿದೆ.

2. ಮಣ್ಣಿನಿಂದ ಮಡಕೆಯಾಗುವಂತೆ ಸಲಕ್ಷಣಕಾರ್ಯವಾಗಿ ಪರಮಾತ್ಮನ ಒಂದು ಭಾಗವು ಪರಿಣಮಿಸುವವೆಂದರೂ ನೆಲವು ಚೌಳಾಗಿ ಅಥವಾ ಪುರುಷಶರೀರವು ಕೂದಲು ಉಗುರು ಮುಂತಾದವಾಗುವಂತೆ ವಿಲಕ್ಷಣವಾಗಿ ಪರಿಣಮಿಸುವದೆಂದರೂ ಅಥವಾ ಹಾಲು ಮೊಸರಾಗುವಂತೆ ಸಂಪೂರ್ಣವಾಗಿಯೇ ಪರಿಣಮಿಸುವದೆಂದರೂ ಪರಮಾತ್ಮನು ನಿರವಯವನೆಂದು ಹೇಳುವ ಈ ಶ್ರುತಿಸ್ಮೃತಿಗಳಿಗೆ ವಿರೋಧವಾಗುವದು– ಎಂದರ್ಥ. ಈ ವಾಕ್ಯದಲ್ಲಿ ಮೂಲದಲ್ಲಿರುವ ನ್ಯಾಯ ಎಂಬ ಮಾತನ್ನು ನಾವು ಕನ್ನಡಿಸಿದ್ದೇವಾದರೂ ಅದು ಬೇಕಿಲ್ಲವೆಂದು ತೋರುತ್ತಿದೆ; ಏಕೆಂದರೆ ಯುಕ್ತಿಯನ್ನು ಮೊದಲೇ ಹೇಳಿ ಎಲ್ಲಾ ಪಕ್ಷಗಳೂ ಶ್ರುತಿಸ್ಮೃತಿವಿರುದ್ಧವೆಂದೇ ಇಲ್ಲಿ ಉಪಸಂಹಾರಮಾಡಿರುತ್ತದೆ.

ತ್ವಾತ್ । ನ ಶಾಸ್ತ್ರಂ ಪದಾರ್ಥಾನ್ ಅನ್ಯಥಾ ಕರ್ತುಂ ಪ್ರವೃತ್ತಮ್ । ಕಿಂ ತರ್ಹಿ ಯಥಾ ಭೂತಾನಾಮ್ ಅಜ್ಞಾತಾನಾಂ ಜ್ಞಾಪನೇ । ಕಿಂ ಚಾತಃ ? ಶೃಣ್ವತೋ ಯದ್ ಭವತಿ । ಯಥಾಭೂತಾ ಮೂರ್ತಾಮೂರ್ತಾದಿಪದಾರ್ಥಧರ್ಮಾ ಲೋಕೇ ಪ್ರಸಿದ್ಧಾಃ । ತದ್ದೃಷ್ಟಾನ್ತೋಪಾದಾನೇನ ತದವಿರೋಧ್ಯೇವ ವಸ್ತ್ವನ್ತರಂ ಜ್ಞಾಪಯಿತುಂ ಪ್ರವೃತ್ತಂ ಶಾಸ್ತ್ರಮ್ ನ ಲೌಕಿಕವಸ್ತುವಿರೋಧಜ್ಞಾಪನಾಯ ಲೌಕಿಕಮೇವ ದೃಷ್ಟಾನ್ತಮ್ ಉಪಾದತ್ತೇ । ಉಪಾದೀಯಮಾನೋಽಪಿ ದೃಷ್ಟಾನ್ತಃ ಅನರ್ಥಕಃ ಸ್ಯಾತ್ । ದಾರ್ಷ್ಟಾನ್ತಿಕಾಸಙ್ಗತೇಃ । ನ ಹಿ ಅಗ್ನಿಃ ಶೀತಃ, ಆದಿತ್ಯೋ ನ ತಪತಿ ಇತಿ ವಾ ದೃಷ್ಟಾನ್ತಶತೇನಾಪಿ ಪ್ರತಿಪಾದಯಿತುಂ ಶಕ್ಯಮ್ । ಪ್ರಮಾಣಾನ್ತರೇಣ ಅನ್ಯಥಾ ಅಧಿಗತತ್ವಾತ್ ವಸ್ತುನಃ । ನ ಚ ಪ್ರಮಾಣಂ ಪ್ರಮಾಣಾನ್ತರೇಣ ವಿರುಧ್ಯತೇ । ಪ್ರಮಾಣಾನ್ತರಾವಿಷಯಮೇವ ಹಿ ಪ್ರಮಾಣಾನ್ತರಂ ಜ್ಞಾಪಯತಿ । ನ ಚ ಲೌಕಿಕಪದಪದಾರ್ಥಾಶ್ರಯಣವ್ಯತಿರೇಕೇಣ ಆಗಮೇನ ಶಕ್ಯಮ್ ಅಜ್ಞಾತಂ ವಸ್ತ್ವನ್ತರಮ್ ಅವಗಮಯಿತುಮ್ । ತಸ್ಮಾತ್ ಪ್ರಸಿದ್ಧನ್ಯಾಯಮ್ ಅನುಸರತಾ ನ ಶಕ್ಯಾ ಪರಮಾತ್ಮನಃ ಸಾವಯವಾಂಶಾಂಶಿತ್ವಕಲ್ಪನಾ ಪರಮಾರ್ಥತಃ ಪ್ರತಿಪಾದಯಿತುಮ್ ।

(ಭಾಷ್ಯಾರ್ಥ)

ವಿಜ್ಞಾನಾತ್ಮನು ಅಚಲನಾದ ಪರಮಾತ್ಮನ ಏಕದೇಶವೆಂದು (ಕಲ್ಪಿಸುವ) ಪಕ್ಷದಲ್ಲಿ (ಅವನು) ಕರ್ಮಫಲವಿರುವ ದೇಶಕ್ಕೆ ಹೋಗಿಬರುತ್ತಾನೆಂಬುದು ಹೊಂದುವದಿಲ್ಲ. ಅಥವಾ ಪರಮಾತ್ಮನೇ ಸಂಸಾರಿಯಾಗುವನು ಎಂದು (ಭಾ. ಭಾ. ೩೧ಳರಲ್ಲಿ) ಹೇಳಿದ್ದಾಗಿದೆ.

(ಆಕ್ಷೇಪ) :– ಪರಮಾತ್ಮನ ಏಕದೇಶವು ಕಿಡಿಯಂತೆ ಸಿಡಿದುಬಂದು ವಿಜ್ಞಾನಾತ್ಮನಾಗಿ ಸಂಸಾರಿಯಾಗಿರಬಾರದೇಕೆ ?

(ಪರಿಹಾರ) :– ಹಾಗಾದರೂ[1] ಪರಮಾತ್ಮನಿಗೆ ಅವಯವವು ಸಿಡಿದು ಹೋದದ್ದರಿಂದ ಗಾಯವಾಗಬೇಕು. ಆ (ವಿಜ್ಞಾನಮಯನು) ಒಂದು ಕಡೆ ಸಂಸಾರದಲ್ಲಿ ತೊಳಲುತ್ತಿದ್ದರೆ, ಪರಮಾತ್ಮನ ಪ್ರದೇಶಾಂತರದಲ್ಲಿರುವ ಅವಯವಗಳ ಒಟ್ಟಿನಲ್ಲಿ ರಂಧ್ರವಾಗಬೇಕಾಗುವದು[2], (ಪರಮಾತ್ಮನು) ಅವ್ರಣನೆಂಬ ವಾಕ್ಯಕ್ಕೆ[3] ವಿರೋಧವೂ (ಆಗುವದು). ಆತ್ಮನ ಅವಯವವಾಗಿರುವ ವಿಜ್ಞಾನಾತ್ಮನು ಸಂಸಾರದಲ್ಲಿ ತೊಳಲುತ್ತಿದ್ದರೆ ಪರಮಾತ್ಮನಿಲ್ಲದ ಪ್ರದೇಶವೇ ಇಲ್ಲದ್ದ

1. ಪರಮಾತ್ಮನು ಸಾವಯವನೇ ಎಂದೂ ಅವನ ಭಾಗವೊಂದು ಕಿಡಿಯಂತೆ ಹಾರಿಬಂದಿರುವದೆಂದೂ ಒಪ್ಪಿದರೂ ಎಂದರ್ಥ.

2. ಯಾವ ಬ್ರಹ್ಮಪ್ರದೇಶದಿಂದ ಇತ್ತ ಸಿಡಿದುಬಂದಿತೋ ಅಲ್ಲಿ ರಂಧ್ರವಾಗಬೇಕು.

3. ಈ. ೧–೮ಕ್ಕೆ.

ರಿಂದ ಮಿಕ್ಕ ಅವಯುವಗಳನ್ನು ತಳ್ಳುವದು, ಒತ್ತರಿಸುವದು- ಇವುಗಳಿಂದ ಹೊಟ್ಟೆಯನೋವಿನಿಂದ (ಸಂಕಟಪಡುತ್ತಿರುವವನಂತೆ) ಪರಮಾತ್ಮನು ದುಃಖಿಯು ಎಂದಾಗುವದು.

(ಪೂರ್ವಪಕ್ಷಿ) :- ಬೆಂಕಿಯು ಕಿಡಿಯೇ ಮುಂತಾದ ದೃಷ್ಟಾಂತದ ಶ್ರುತಿಗಳಿರುವದರಿಂದ ದೋಷವಿಲ್ಲ[1].

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ **ಶ್ರುತಿಯು ಜ್ಞಾಪಕವಾಗಿರುತ್ತದೆ**[2]. ಶಾಸ್ತ್ರವು ಪದಾರ್ಥಗಳನ್ನು ಬೇರೊಂದು ರೀತಿಯಾಗಿ ಮಾರ್ಪಡಿಸುವದಕ್ಕೆ ಬಂದಿಲ್ಲ, ಮತ್ತೇನೆಂದರೆ ಇದ್ದಂತೆ ಇರುವ ಅಜ್ಞಾತ(ಪದಾರ್ಥಗಳನ್ನು) ತಿಳಿಯಪಡಿಸುವದಕ್ಕಾಗಿ (ಬಂದಿರುತ್ತದೆ).

(ಪೂರ್ವಪಕ್ಷಿ) :- ಇದರಿಂದೇನಾಗುವದು ?

(ಸಿದ್ಧಾಂತಿ) :- ಇದರಿಂದ ಏನಾಗುವದೆಂಬುದನ್ನು (ಹೇಳುವೆವು), ಕೇಳು. **ಅಮೂರ್ತ, ಮೂರ್ತ -ಮುಂತಾದ ಪದಾರ್ಥಗಳ ಧರ್ಮಗಳು ಲೋಕದಲ್ಲಿ ಎಂಥವೆಂದು ಪ್ರಸಿದ್ಧವಾಗಿರುವವೋ, ಅವುಗಳ ದೃಷ್ಟಾಂತವನ್ನು ತೆಗೆದುಕೊಂಡು ಅದಕ್ಕೆ ಅವಿರೋಧಿಯಾದ ಮತ್ತೊಂದು ವಸ್ತುವನ್ನು ತಿಳಿಸಿಕೊಡುವದಕ್ಕೆ ಶಾಸ್ತ್ರವು ಹೊರಟಿರುತ್ತದೆ.** (ಅದು) **ಲೌಕಿಕವಸ್ತುಗಳಿಗೆ ವಿರೋಧವಾದದ್ದನ್ನು ತಿಳಿಸುವದಕ್ಕೆ ಲೌಕಿಕ ದೃಷ್ಟಾಂತವನ್ನೇ ತೆಗೆದುಕೊಳ್ಳಲಾರದು.** (ಒಂದು ವೇಳೆ) ತೆಗೆದುಕೊಂಡರೂ (ಅದು) ವ್ಯರ್ಥವಾಗುತ್ತದೆ; ಏಕೆಂದರೆ (ಆಗ) ದಾರ್ಷ್ಟಾಂತಿಕಕ್ಕೆ (ಅದು) ಹೊಂದುವದಿಲ್ಲ. ಬೆಂಕಿಯು ತಣ್ಣಗಿದೆ, ಸೂರ್ಯನು ತಪಿಸುವದಿಲ್ಲ- ಎಂದು ನೂರು ದೃಷ್ಟಾಂತಗಳಿಂದ ಕೂಡ ತೋರಿಸಿಕೊಡುವದಕ್ಕೆ ಆಗಲಾರದಲ್ಲವೆ? ಏಕೆಂದರೆ ಮತ್ತೊಂದು ಪ್ರಮಾಣದಿಂದ ವಸ್ತುವು ಹಾಗಿಲ್ಲವೆಂದು ಗೊತ್ತಾಗಿಬಿಟ್ಟಿರುತ್ತದೆ. ಒಂದು ಪ್ರಮಾಣವು ಮತ್ತೊಂದು ಪ್ರಮಾಣಕ್ಕೆ ವಿರುದ್ಧವಾಗಿರುವದೂ ಇಲ್ಲ; ಏಕೆಂದರೆ ಮತ್ತೊಂದು ಪ್ರಮಾಣಕ್ಕೆ ವಿಷಯವಲ್ಲದ್ದನ್ನೇ (ಅದು) ತಿಳಿಸುತ್ತದೆ.[3] ಲೋಕದ ಪದ, ಪದಾರ್ಥ- ಇವುಗಳನ್ನು ಆಶ್ರಯಿಸದೆ (ಜನರಿಗೆ) ತಿಳಿಯದಿರುವ ಮತ್ತೊಂದು ವಸ್ತುವನ್ನು ತಿಳಿಸುವದಕ್ಕೆ

---

1. ಶ್ರುತಿಯ ಪ್ರಮಾಣದಿಂದ ಇದನ್ನು ಒಪ್ಪಬೇಕು; ಅದಕ್ಕೆ ವಿರುದ್ಧವಾಗಿ ತರ್ಕವನ್ನು ಹೂಡಬಾರದು ಎಂದು ಭಾವ.

2. ಇದ್ದದ್ದನ್ನು ತಿಳಿಸುವದು, ಇಲ್ಲದ ಧರ್ಮವನ್ನುಂಟುಮಾಡುವದಲ್ಲ.

3. ಅನೇಕ ಪ್ರಮಾಣಗಳು ಒಂದೇ ವಿಷಯವನ್ನು ಹೇಳುವವೆಂಬುದು ನೈಯಾಯಿಕರೇ ಮುಂತಾದವರ ಮತವು; ಈ ಪ್ರಮಾಣಸಂಪ್ಲವವಾದವನ್ನು ಭಾಷ್ಯಕಾರರು ಅಲ್ಲಲ್ಲಿ ತಿರಸ್ಕರಿಸಿರುತ್ತಾರೆ.

ಆಗುವದೂ ಇಲ್ಲ.[1] ಆದ್ದರಿಂದ ಪ್ರಸಿದ್ಧನ್ಯಾಯವನ್ನು ಅನುಸರಿಸುವವನು ಪರಮಾತ್ಮನಿಗೆ ಸಾವಯವತ್ವ, ಅಂಶಾಂಶಿತ್ವ -ಮುಂತಾದ ಕಲ್ಪನೆಯನ್ನು ಪರಮಾರ್ಥವೆಂದು ತೋರಿಸಿಕೊಡುವದು ಆಗಲಾರದು.[2]

## ಅಂಶವಾಕ್ಯಕ್ಕೆ ಗತಿ

(ಭಾಷ್ಯ)

೩೧೬. "ಕ್ಷುದ್ರಾ ವಿಸ್ಫುಲಿಙ್ಗಾಃ" (೨-೧-೨೦), "ಮಮೈವಾಂಶಃ" (೧೫-೭) ಇತಿ ಚ ಶ್ರೂಯತೇ ಸ್ಮರ್ಯತೇ ಚ ಇತಿ ಚೇತ್। ನ। ಏಕತ್ವ ಪ್ರತ್ಯಯಾರ್ಥಪರತ್ವಾತ್। ಅಗ್ನೇರ್ಹಿ ವಿಸ್ಫುಲಿಙ್ಗಃ ಅಗ್ನಿರೇವ ಇತ್ಯೇಕತ್ವ ಪ್ರತ್ಯಯಾರ್ಹೋ ದೃಷ್ಟೋ ಲೋಕೇ। ತಥಾ ಚ ಅಂಶಃ ಅಂಶಿನಾ ಏಕತ್ವ ಪ್ರತ್ಯಯಾರ್ಹಃ। ತತ್ರ ಏವಂ ಸತಿ ವಿಜ್ಞಾನಾತ್ಮನಃ ಪರಮಾತ್ಮವಿಕಾರಾಂಶತ ವಾಚಕಾಃ ಶಬ್ದಾಃ ಪರಮಾತ್ಮೈಕತ್ವಪ್ರತ್ಯಯಾಧಿತ್ಸವಃ। ಉಪಕ್ರಮೋಪ ಸಂಹಾರಾಭ್ಯಾಂ ಚ। ಸರ್ವಾಸು ಹಿ ಉಪನಿಷತ್ಸು ಪೂರ್ವಮ್ ಏಕತ್ವಂ ಪ್ರತಿಜ್ಞಾಯ, ದೃಷ್ಟಾನ್ತೈರ್ಹೇತುಭಿಶ್ಚ ಪರಮಾತ್ಮನೋ ವಿಕಾರಾಂಶಾದಿತ್ವಂ ಜಗತಃ ಪ್ರತಿಪಾದ್ಯ, ಪುನರೇಕತ್ವಮ್ ಉಪಸಂಹರತಿ। ತದ್ ಯಥಾ ಇಹೈವ ತಾವತ್। "ಇದಂ ಸರ್ವಂ ಯದಯಮಾತ್ಮಾ" (೨-೪-೬) ಇತಿ ಪ್ರತಿಜ್ಞಾಯ, ಉತ್ಪತ್ತಿಸ್ಥಿತಿಲಯಹೇತುದೃಷ್ಟಾನ್ತೈಃ ವಿಕಾರವಿಕಾರಿತ್ವಾದ್ಯೇಕತ್ವಪ್ರತ್ಯಯ ಹೇತೂನ್ ಪ್ರತಿಪಾದ್ಯ "ಅನನ್ತರಮಬಾಹ್ಯಮ್" (೨-೫-೯), "ಅಯಮಾತ್ಮಾ ಬ್ರಹ್ಮ" (೨-೫-೧೯) ಇತಿ ಉಪಸಂಹರಿಷ್ಯತಿ। ತಸ್ಮಾತ್ ಉಪಕ್ರಮೋಪ ಸಂಹಾರಾಭ್ಯಾಮ್ ಅಯಮರ್ಥೋ ನಿಶ್ಚೀಯತೇ ಪರಮಾತ್ಮೈಕತ್ವಪ್ರತ್ಯಯ ದ್ರಢಿಮ್ನೇ ಉತ್ಪತ್ತಿಸ್ಥಿತಿಲಯಪ್ರತಿಪಾದಕಾನಿ ವಾಕ್ಯಾನಿ ಇತಿ। ಅನ್ಯಥಾ ವಾಕ್ಯಭೇದಪ್ರಸಙ್ಗಾಚ್ಚ। ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತೇ ಇತಿ ಅವಿಪ್ರತಿಪತ್ತಿಃ ಸರ್ವೇಷಾಮ್ ಉಪನಿ ಷದ್ವಾದಿನಾಮ್। ತದ್ವಿಧ್ಯೇಕವಾಕ್ಯಯೋಗೇ ಚ ಸಂಭವತಿ ಉತ್ಪತ್ತ್ಯಾದಿ ವಾಕ್ಯಾನಾಂ ವಾಕ್ಯಾನ್ತರತ್ವಕಲ್ಪನಾಯಾಂ ನ ಪ್ರಮಾಣಮ್ ಅಸ್ತಿ। ಫಲಾ ನ್ತರಂ ಚ ಕಲ್ಪಯಿತವ್ಯಂ ಸ್ಯಾತ್। ತಸ್ಮಾತ್ ಉತ್ಪತ್ತ್ಯಾದಿಶ್ರುತಯಃ ಆತ್ಮೈ ಕತ್ವಪ್ರತಿಪಾದನಪರಾಃ। ಅತ್ರ ಚ ಸಂಪ್ರದಾಯವಿದಃ ಆಖ್ಯಾಯಿಕಾಂ ಸಂಪ್ರ ಚಕ್ಷತೇ। ಕಶ್ಚಿತ್ ಕಿಲ ರಾಜಪುತ್ರಃ ಜಾಯಮಾನ ಏವ ಮಾತಾಪಿತೃಭ್ಯಾಮ್ ಅಪವಿದ್ಧಃ ವ್ಯಾಧಗೃಹೇ ಸಂವರ್ಧಿತಃ। ಸ ಅಮುಷ್ಯವಂಶತಾಮ್ ಅಜಾನನ್

1. ಲೋಕದಲ್ಲಿ ಯಾವ ಪದಕ್ಕೆ ಯಾವದು ಅರ್ಥವೋ ಅದಕ್ಕೆ ವೇದದಲ್ಲಿಯೂ ಅದೇ ಅರ್ಥವಿರಬೇಕೆಂಬುದು ಸಾಮಾನ್ಯನಿಯಮವು.

2. ಹಾಗೆಂದು ತಿಳಿಸಿದರೆ ಪರಮಾತ್ಮನಿಗೆ ಅನಿತ್ಯತ್ವಾದಿದೋಷಗಳು ಬರುವವು.

ವ್ಯಾಧಜಾತಿಪ್ರತ್ಯಯಃ ವ್ಯಾಧಜಾತಿಕರ್ಮಾಣ್ಯೇವ ಅನುವರ್ತತೇ ನ ರಾಜಾಸ್ಮಿ ಇತಿ ರಾಜಜಾತಿಕರ್ಮಾಣಿ ಅನುವರ್ತತೇ। ಯದಾ ಪುನಃ ಕಶ್ಚಿತ್ ಪರಮ ಕಾರುಣಿಕಃ ರಾಜಪುತ್ರಸ್ಯ ರಾಜಶ್ರೀಪ್ರಾಪ್ತಿಯೋಗ್ಯತಾಮ್ ಜಾನನ್ ಅಮುಷ್ಯ ಪುತ್ರತಾಂ ಬೋಧಯತಿ 'ನ ತ್ವಂ ವ್ಯಾಧಃ, ಅಮುಷ್ಯ ರಾಜ್ಞಃ ಪುತ್ರಃ, ಕಥಂ ಚಿತ್ ವ್ಯಾಧಗೃಹಮ್ ಅನುಪ್ರವಿಷ್ಟಃ' ಇತಿ। ಸ ಏವಂ ಬೋಧಿತಃ ತ್ಯಕ್ತ್ವಾ ವ್ಯಾಧಜಾತಿಪ್ರತ್ಯಯಕರ್ಮಾಣಿ ಪಿತೃಪೈತಾಮಹೀಮ್ ಆತ್ಮನಃ ಪದವೀಮ್ ಅನುವರ್ತತೇ 'ರಾಜಾಹಮಸ್ಮಿ' ಇತಿ। ತಥಾ ಕಿಲ ಅಯಂ ಪರಸ್ಮಾತ್ ಅಗ್ನಿವಿಸ್ಫುಲಿಙ್ಗಾದಿವತ್ ತಜ್ಜಾತಿರೇವ ವಿಭಕ್ತಃ ಇಹ ದೇಹೇನ್ದ್ರಿಯಾದಿಗಹನೇ ಪ್ರವಿಷ್ಟಃ ಅಸಂಸಾರೀ ಸನ್ ದೇಹೇನ್ದ್ರಿಯಾದಿಸಂಘಾತಧರ್ಮಮನುವರ್ತತೇ 'ದೇಹೇನ್ದ್ರಿಯಸಂಘಾತೋಽಸ್ಮಿ ಕೃಶಃ ಸ್ಥೂಲಃ ಸುಖೀ ದುಃಖೀ' ಇತಿ ಪರಮಾತ್ಮತಾಮ್ ಅಜಾನನ್ ಆತ್ಮನಃ। 'ನ ತ್ವಮ್ ಏತದಾತ್ಮಕಃ ಪರಮೇವ ಬ್ರಹ್ಮಾಸಿ ಅಸಂಸಾರೀ' ಇತಿ ಪ್ರತಿಬೋಧಿತ ಆಚಾರ್ಯೇಣ ಹಿತ್ವಾ ಏಷಣಾ ತ್ರಯಾನುವೃತ್ತಿಂ 'ಬ್ರಹ್ಮೈವಾಸ್ಮಿ' ಇತಿ ಪ್ರತಿಪದ್ಯತೇ। ಅತ್ರ ರಾಜಪುತ್ರಸ್ಯ ರಾಜಪ್ರತ್ಯಯವತ್ ಬ್ರಹ್ಮಪ್ರತ್ಯಯೋ ದೃಢೀಭವತಿ ವಿಸ್ಫುಲಿಙ್ಗವದೇವ ತ್ವಂ ಪರಸ್ಮಾತ್ ಬ್ರಹ್ಮಣೋ ಭ್ರಷ್ಟಃ ಇತ್ಯುಕ್ತೇ। ವಿಸ್ಫುಲಿಙ್ಗಸ್ಯ ಪ್ರಾಗಗ್ನೇ ರ್ಭ್ರಂಶಾತ್ ಏಕತ್ವದರ್ಶನಾತ್। ತಸ್ಮಾತ್ ಏಕತ್ವಪ್ರತ್ಯಯದಾರ್ಢ್ಯಾಯ ಸುವರ್ಣಮಣಿಲೋಹಾಗ್ನಿವಿಸ್ಫುಲಿಙ್ಗದೃಷ್ಟಾನ್ತಾಃ ನೋತ್ಪತ್ತ್ಯಾದಿಭೇದಪ್ರತಿ ಪಾದನಪರಾಃ। ಸೈನ್ಧವಘನವತ್ ಪ್ರಜ್ಞಪ್ತ್ಯೇಕರಸನೈರನ್ತರ್ಯಾವಧಾರಣಾತ್ "ಏಕಧೈವಾನುದ್ರಷ್ಟವ್ಯಮ್" (೪-೪-೨೦) ಇತಿ ಚ। ಯದಿ ಚ ಬ್ರಹ್ಮಣಶ್ಚಿತ್ರ ಪಟವತ್ ವೃಕ್ಷಸಮುದ್ರಾದಿವಚ್ಚ ಉತ್ಪತ್ತ್ಯಾದ್ಯನೇಕಧರ್ಮವಿಚಿತ್ರತಾ ವಿಜಿ ಗ್ರಾಹಯಿಷಿತಾ ಏಕರಸಂ ಸೈನ್ಧವಘನವತ್, ಅನನ್ತರಮಬಾಹ್ಯಮ್ ಇತಿ ನೋಪಸಮಹರಿಷ್ಯತ್ ಏಕಧೈವಾನುದ್ರಷ್ಟವ್ಯಮ್ ಇತಿ ಚ ನ ಪ್ರಾಯೋಕ್ಷ್ಯತ। "ಯ ಇಹ ನಾನೇವ ಪಶ್ಯತಿ" (೪-೪-೧೯) ಇತಿ ಚ ನಿನ್ದಾವಚನಂ ಚ। ತಸ್ಮಾತ್ ಏಕರೂಪೈಕತ್ವಪ್ರತ್ಯಯದಾರ್ಢ್ಯಾಯೈವ ಸರ್ವವೇದಾನ್ತೇಷು ಉತ್ಪತ್ತಿಸ್ಥಿತಿಲಯಾದಿಕಲ್ಪನಾ ನ ತತ್ಪ್ರತ್ಯಯಕರಣಾಯ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :- "ಸಣ್ಣ ಕಿಡಿಗಳು" (೨-೧-೨೦), "ನನ್ನದೇ ಅಂಶವು" (ಗೀ. ೧೫-೭) ಎಂದೂ ಶ್ರುತಿಯಲ್ಲಿದೆಯಲ್ಲ, ಸ್ಮೃತಿಯಲ್ಲಿಯೂ ಇದೆಯಲ್ಲ!

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ಏಕತ್ವಜ್ಞಾನವನ್ನುಂಟುಮಾಡುವದ ಕ್ಕಾಗಿ (ಹಾಗೆ ಹೇಳಿದೆ). ಹೇಗೆಂದರೆ ಬೆಂಕಿಯ ಕಿಡಿಯು ಬೆಂಕಿಯೇ ಆಗಿರು ವದರಿಂದ ಏಕತ್ವಜ್ಞಾನಕ್ಕೆ ತಕ್ಕದ್ದೆಂದು ಲೋಕದಲ್ಲಿ ಕಂಡುಬಂದಿದೆ. ಹೀಗಿರು

ವದರಿಂದ ಅಂಶವು ಅಂಶಿಯೊಡನೆ ಒಂದಾಗಿರುವದೆಂಬ ಜ್ಞಾನಕ್ಕೆ ತಕ್ಕದ್ದು. ಇದು ಹೀಗಿರುವಲ್ಲಿ **ವಿಜ್ಞಾನಾತ್ಮನು ಪರಮಾತ್ಮನ ವಿಕಾರ, ಅಂಶ- ಎಂದು ಹೇಳುವ ಶಬ್ದಗಳು (ವಿಜ್ಞಾನಾತ್ಮನೂ) ಪರಮಾತ್ಮನೂ ಒಬ್ಬನೇ ಎಂಬ ಜ್ಞಾನವನ್ನುಂಟುಮಾಡಬೇಕೆಂದು (ಬಂದವುಗಳು ಎಂದು ಗೊತ್ತಾಗುತ್ತದೆ).** ಉಪಕ್ರಮೋಪಸಂಹಾರಗಳಿಂದಲೂ (ಹೀಗೆಂದು ಗೊತ್ತಾಗುತ್ತದೆ. ಇದರ ವಿವರ): **ಉಪನಿಷತ್ತುಗಳಲ್ಲೆಲ್ಲ ಮೊದಲು ಏಕತ್ವವನ್ನು ಹೇಳಿ, ದೃಷ್ಟಾಂತಗಳಿಂದಲೂ ಹೇತುಗಳಿಂದಲೂ ಜಗತ್ತು ಪರಮಾತ್ಮನ ವಿಕಾರವು, ಅಂಶ- ಎಂದು ಮುಂತಾಗಿ ತಿಳಿಸಿಕೊಟ್ಟು ಮತ್ತೆ ಏಕತ್ವವನ್ನೇ ಉಪಸಂಹಾರಮಾಡಿರುತ್ತದೆ.** ಅದು ಹೇಗೆಂದರೆ ಮೊದಲನೆಯದಾಗಿ ಇಲ್ಲಿಯೇ (ನೋಡಿ) : "ಇದೆಲ್ಲವೂ ಈ ಆತ್ಮನೆಂಬುದೇ" (೨-೪-೬) ಎಂದು ಹೇಳಿ, ಉತ್ಪತ್ತಿಲಯಹೇತುದೃಷ್ಟಾಂತಗಳಿಂದ ವಿಕಾರವಿಕಾರಿತ್ವವೇ ಮುಂತಾದ ಏಕತ್ವಜ್ಞಾನದ ಹೇತುಗಳನ್ನು ತಿಳಿಸಿಕೊಟ್ಟು "ಒಳಗಿಲ್ಲದ ಹೊರಗಿಲ್ಲದ" (೨-೫-೯) "ಈ ಆತ್ಮನು ಬ್ರಹ್ಮವು" (೨-೫-೧೯) ಎಂದು ಉಪಸಂಹಾರಮಾಡಿರುತ್ತದೆ. ಆದ್ದರಿಂದ ಉಪಕ್ರಮೋಪಸಂಹಾರಗಳಿಂದ ಪರಮಾತ್ಮೈಕತ್ವವನ್ನು ಗಟ್ಟಿಗೊಳಿಸುವದಕ್ಕೇ ಉತ್ಪತ್ತಿಸ್ಥಿತಿಲಯಗಳನ್ನು ಹೇಳುವ ವಾಕ್ಯಗಳು (ಬಂದಿವೆ) ಎಂದು ನಿಶ್ಚಯವಾಗುತ್ತದೆ. ಹೀಗಲ್ಲದಿದ್ದರೆ ವಾಕ್ಯಭೇದವುಂಟಾಗುವದಾದ್ದರಿಂದಲೂ (ಹೀಗೆಂದು ನಿಶ್ಚಯವಾಗುತ್ತದೆ). ಹೇಗೆಂದರೆ **ಎಲ್ಲಾ ಉಪನಿಷತ್ತುಗಳಲ್ಲಿಯೂ ವಿಜ್ಞಾನಾತ್ಮನಿಗೂ ಪರಮಾತ್ಮನಿಗೂ ಏಕತ್ವಪ್ರತ್ಯಯವನ್ನೇ ಉಪದೇಶಿಸಿದೆ ಎಂಬ ವಿಷಯದಲ್ಲಿ ಉಪನಿಷದ್ವಾದಿಗಳಲ್ಲಿ ಯಾರಿಗೂ ವಿರುದ್ಧಾಭಿಪ್ರಾಯವಿರುವದಿಲ್ಲ.**[1] ಆ ಜ್ಞಾನವಿಧಿಗೂ (ಉತ್ಪತ್ತ್ಯಾದಿವಾಕ್ಯಗಳಿಗೂ) ಏಕವಾಕ್ಯತೆಯು ಸಂಭವಿಸುತ್ತಿರುವಲ್ಲಿ ಉತ್ಪತ್ತ್ಯಾದಿವಾಕ್ಯಗಳು ವಾಕ್ಯಾಂತರವೆಂದು ಕಲ್ಪಿಸುವದಕ್ಕೆ[2] (ಯಾವ) ಪ್ರಮಾಣವೂ ಇರುವದಿಲ್ಲ. (ಹಾಗೆ ಕಲ್ಪಿಸಿದರೆ) ಫಲಾಂತರವನ್ನು (ಅವುಗಳಿಗೆ)[3] ಕಲ್ಪಿಸ

---

1. ಆಚಾರ್ಯರ ಕಾಲಕ್ಕೆ ಉಪನಿಷದ್ವಾದಿಗಳೆಲ್ಲರೂ ಅದ್ವೈತಿಗಳೇ ಎಂಬುದಕ್ಕೆ ಇದೊಂದು ಗಮಕವಾಕ್ಯವಾಗಿರುತ್ತದೆ.

2. ಉತ್ಪತ್ತಿಯೇ ಮುಂತಾದವನ್ನು ತಾತ್ಪರ್ಯದಿಂದ ತಿಳಿಸುತ್ತವೆ ಎಂಬುದಕ್ಕೆ ಎಂದರ್ಥ. ಒಂದೇ ತಾತ್ಪರ್ಯದಿಂದ ಏಕವಾಕ್ಯತೆಯಾಗುತ್ತಿರುವಲ್ಲಿ ವಾಕ್ಯಾಂತರವನ್ನು ಕಲ್ಪಿಸುವದು ಯುಕ್ತವಲ್ಲವೆಂಬುದು ಮೀಮಾಂಸಕರ ನ್ಯಾಯವು.

3. ಶ್ರುತಿಯಲ್ಲಿ ಹೇಳದೆ ಇರುವ ಫಲವನ್ನು ಕಲ್ಪಿಸಬೇಕು; ಈಗ ಇರುವಂತೆ ಆತ್ಮೈಕತ್ವಜ್ಞಾನಕ್ಕೆ ಫಲವನ್ನು ಹೇಳುತ್ತಿರುವದರಿಂದ ಅದನ್ನು ಹೇಳುವ ವಾಕ್ಯಕ್ಕೆ ಉತ್ಪತ್ತ್ಯಾದಿವಾಕ್ಯಗಳು ಅಂಗವೆಂಬುದು ಯುಕ್ತವೆಂದು ಭಾವ. ಸೂ. ಭಾ. ೨-೧-೧೪ (ಭಾ. ಭಾ. ೪೩೯).

ಬೇಕಾಗುವದು. ಆದ್ದರಿಂದ ಉತ್ಪತ್ತ್ಯಾದಿಶ್ರುತಿಗಳು ಆತ್ಮೈಕತ್ವವನ್ನು ಪ್ರತಿಪಾದಿಸುವದರಲ್ಲಿಯೇ ತಾತ್ಪರ್ಯವುಳ್ಳವುಗಳಾಗಿರುತ್ತವೆ.

**ಇಲ್ಲಿ ಸಂಪ್ರದಾಯವನ್ನು ಬಲ್ಲವರು**[1] ಒಂದು ಆಖ್ಯಾಯಿಕೆಯನ್ನು ಹೇಳುತ್ತಾರೆ. ಯಾವನೋ ಒಬ್ಬ ರಾಜಪುತ್ರನು ಹುಟ್ಟಿದಂದಿನಿಂದಲೇ ತಾಯಿ ತಂದೆಗಳನ್ನು ಅಗಲಿ ವ್ಯಾಧರ ಮನೆಯಲ್ಲಿ ಬೆಳೆದನಂತೆ. ಅವನು (ತಾನು) ಇಂಥವರ ವಂಶದವನು ಎಂಬುದನ್ನು ಅರಿಯದೆ ವ್ಯಾಧಜಾತಿಯವನೆಂಬ ನಂಬಿಕೆಯಿಂದ ವ್ಯಾಧಜಾತಿಯ ಕರ್ಮಗಳನ್ನೇ ಅನುಸರಿಸಿಕೊಂಡಿದ್ದನು, ರಾಜನಾಗಿದೇನೆ ಎಂದು ರಾಜಜಾತಿಯ ಕರ್ಮಗಳನ್ನು ಅನುಸರಿಸುತ್ತಿರಲಿಲ್ಲ. ಆದರೆ ಯಾವಾಗ ಯಾವನೋ ಒಬ್ಬ ಪರಮಕಾರುಣಿಕನು[2] (ಆ) ರಾಜಪುತ್ರನು, ರಾಜಶ್ರೀಪ್ರಾಪ್ತಿಗೆ ತಕ್ಕವನೆಂದು (ತಿಳಿದು) "ನೀನು ವ್ಯಾಧನಲ್ಲ, ಇಂಥ ರಾಜನ ಮಗನು; ಹೇಗೋ ವ್ಯಾಧರ ಮನೆಯನ್ನು ಸೇರಿರುವೆ" ಎಂದು ಇಂಥವರ ವಂಶದವನೆಂದು ತಿಳಿಸಿಕೊಟ್ಟನೋ (ಆಗ) ಅವನು ಈ ಜ್ಞಾನವನ್ನು ಪಡೆದು (ತಾನು) ವ್ಯಾಧಜಾತಿಯವನೆಂಬ ಭಾವನೆಯನ್ನೂ (ಆ ಜಾತಿಯ) ಕರ್ಮಗಳನ್ನೂ ಬಿಟ್ಟು ಅಪ್ಪಅಜ್ಜಂದಿರ (ಕಾಲ)ದಿಂದ ಬಂದಿದ್ದ ತನ್ನ ಪದವಿಯನ್ನೇ 'ನಾನು ರಾಜನಾಗಿರುವೆನು' ಎಂದು ಅನುವರ್ತಿಸಿಕೊಂಡು ಹೋದನಂತೆ. ಹಾಗೆಯೇ ಈ (ಜೀವನು) ಪರಮಾತ್ಮನಿಂದ ಬೆಂಕಿಯ ಕಿಡಿಯೇ ಮುಂತಾದವುಗಳಂತೆ ಅದೇ ಜಾತಿಯವನಾಗಿದ್ದರೂ (ಅವನಿಗಿಂತ) ಬೇರೆಯಾಗಿ ಈ ದೇಹೇಂದ್ರಿಯಾದಿಗಳೆಂಬ ಕಗ್ಗಾಡಿನಲ್ಲಿ ಹೊಕ್ಕು (ನಿಜವಾಗಿ ತಾನು) ಅಸಂಸಾರಿಯಾಗಿದ್ದರೂ ದೇಹೇಂದ್ರಿಯಸಂಘಾತವಾಗಿರುತ್ತೇನೆ, ಬಡಕಲಾಗಿರುವೆನು, ದಪ್ಪಗಿರುವೆನು, ಸುಖಿಯಾಗಿರುವೆನು, ದುಃಖಿಯಾಗಿರುವೆನು– ಎಂದು ತಾನು ಪರಮಾತ್ಮನೆಂಬುದನ್ನರಿಯದೆ ದೇಹೇಂದ್ರಿಯಗಳೇ ಮುಂತಾದವುಗಳ ಸಂಸಾರಧರ್ಮವನ್ನು ಅನುಸರಿಸಿಕೊಂಡು ಬಂದಿರುತ್ತಾನೆ. 'ನೀನು ಈ ಸ್ವರೂಪದವನಲ್ಲ, ಅಸಂಸಾರಿಯಾದ ಪರಬ್ರಹ್ಮವೇ ಆಗಿರುವೆ' ಎಂದು ಆಚಾರ್ಯನು ತಿಳಿಯಹೇಳಲು ಏಷಣಾತ್ರಯವನ್ನು ಅನುಸರಿಸುವದನ್ನು ಬಿಟ್ಟು 'ಬ್ರಹ್ಮವೇ ಆಗಿರುತ್ತೇನೆ' ಎಂದು ಅರಿತುಕೊಳ್ಳುತ್ತಾನಂತೆ.[3]

---

1. ದ್ರವಿಡಾಚಾರ್ಯರು. ಇವರ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ಸಂಸಾರಿಗಳ ಅಜ್ಞಾನವನ್ನು ಕಂಡು ಮರುಕದಿಂದ ತತ್ತ್ವವನ್ನು ಬೋಧಿಸುವ ಕರುಣಾನಿಧಿಯಾದ ಆಚಾರ್ಯನು ಹೀಗೆ ಅದೃಷ್ಟವಶದಿಂದ ದೊರಕುವನೆಂಬುದನ್ನು ಈ ವಿಶೇಷಣವು ಸೂಚಿಸುತ್ತದೆ.

3. ಹೀಗೆ ಸಂಪ್ರದಾಯವನ್ನು ಬಲ್ಲವರು ಅರ್ಥಮಾಡಿರುವದರಿಂದ ನಮ್ಮ ವ್ಯಾಖ್ಯಾನವು ಆಗಮಾನುಸಾರಿ ಎಂದು ಭಾವ.

ಇಲ್ಲಿ ರಾಜಪುತ್ರನಿಗೆ (ತಾನು) ರಾಜನೆಂಬ ಪ್ರತ್ಯಯದಂತೆಯೇ 'ಕಿಡಿಯಂತೆಯೇ ನೀನು ಪರಬ್ರಹ್ಮದಿಂದ ಸಿಡಿದುಬಂದಿರುವೆ' ಎಂದು ಹೇಳಿದರೆ '(ನಾನು) ಬ್ರಹ್ಮವಾಗಿರುತ್ತೇನೆ' ಎಂಬ ತಿಳಿವಳಿಕೆಯು ಗಟ್ಟಿಯಾಗುತ್ತದೆ; ಏಕೆಂದರೆ ಕಿಡಿಯು ಬೆಂಕಿಯಿಂದ ಸಿಡಿದುಬರುವ ಮುಂಚೆ (ಅದು) ಅಗ್ನಿಯೊಡನೆ ಒಂದಾಗಿತ್ತೆಂದು ಕಂಡಿರುತ್ತದೆ. ಆದ್ದರಿಂದ **ಏಕತ್ವಜ್ಞಾನವು ಗಟ್ಟಿಯಾಗುವದಕ್ಕಾಗಿಯೇ ಸುವರ್ಣಮಣಿ, ಲೋಹ, ಅಗ್ನಿವಿಸ್ಫುಲಿಂಗ-(ಈ) ದೃಷ್ಟಾಂತಗಳು**[1] (ಇವುಗಳಿಗೆ) **ಉತ್ಪತ್ತಿಯೇ ಮುಂತಾದ ಭೇದಗಳನ್ನು ಹೇಳುವದರಲ್ಲಿ ತಾತ್ಪರ್ಯವಿಲ್ಲ**; ಏಕೆಂದರೆ ಉಪ್ಪಿನ ಹರಳಿನಂತೆ ಚೈತನ್ಯೈಕರಸವೇ ಆಗಿ ನಿರಂತರವಾಗಿರುವದೆಂದೂ[2] ಒಂದೇ ಪ್ರಕಾರವಾಗಿ ಕಂಡುಕೊಳ್ಳತಕ್ಕದ್ದು[3] ಎಂದೂ (ಶ್ರುತಿಯಲ್ಲಿ) ಅವಧಾರಣೆಮಾಡಿರುತ್ತದೆ. ಬ್ರಹ್ಮವು ರತ್ನಗಂಬಳಿಯಂತೆಯೂ ಮರ, ಸಮುದ್ರ -ಮುಂತಾದವುಗಳಂತೆಯೂ ಉತ್ಪತ್ತಿಯೇ ಮುಂತಾದ ಅನೇಕ ಧರ್ಮಗಳಿಂದ ವಿಚಿತ್ರವಾಗಿರುವದೆಂದು[4] ತಿಳಿಸಿಕೊಡುವ ಇಚ್ಛೆಯಿದ್ದರೆ ಉಪ್ಪಿನ ಹರಳಿನಂತೆ ಒಳಗಿಲ್ಲದ ಹೊರಗಿಲ್ಲದ ಏಕರಸವು -ಎಂದು ಉಪಸಂಹಾರಮಾಡುತ್ತಿರಲಿಲ್ಲ. "ಒಂದೇ ಪ್ರಕಾರವಾಗಿ ಕಂಡುಕೊಳ್ಳತಕ್ಕದ್ದು" (೪-೪-೨೦) ಎಂದು ಪ್ರಯೋಗಿಸುತ್ತಿರಲಿಲ್ಲ; "ಯಾವನು ಇಲ್ಲಿ ನಾನಾ ಇರುವಂತೆ ಕಾಣುತ್ತಾನೋ" (ಅವನು ಸಾವಿನಿಂದ ಸಾವನ್ನು ಪಡೆಯುತ್ತಾನೆ)" (೪-೪-೨೦) ಎಂದು ನಿಂದಾವಚನವನ್ನೂ ಪ್ರಯೋಗಿಸುತ್ತಿರಲಿಲ್ಲ.[5] ಆದ್ದರಿಂದ **ಒಂದೇ ರೂಪವಾಗಿರುವ ಏಕತ್ವಜ್ಞಾನವು ಗಟ್ಟಿಯಾಗಲೆಂದೇ ಎಲ್ಲಾ ವೇದಾಂತಗಳಲ್ಲಿಯೂ ಉತ್ಪತ್ತಿಸ್ಥಿತಿಲಯಾದಿಗಳನ್ನು ಕಲ್ಪಿಸಿದೆಯೇ ಹೊರತು ಅವುಗಳ ಜ್ಞಾನವನ್ನೇ ಉಂಟುಮಾಡಬೇಕೆಂದಲ್ಲ.**

---

1. ದೃಷ್ಟಾಂತಗಳಿಗೂ ದಾರ್ಷ್ಟಾಂತಿಕಕ್ಕೂ ಏನಾದರೊಂದು ಸಾಮ್ಯವಿರಬೇಕು, ಕಿಡಿಯು ಬೆಂಕಿಯೇ ಆಗಿರುವಂತೆ ಜೀವನು ಪರಮಾತ್ಮನು ಎಂಬುದೇ ಪ್ರಕೃತದಲ್ಲಿ ಸಾಮ್ಯವು. ಇದು ಶ್ರುತಿಗೂ ಹೊಂದಿಕೆಯಾಗುತ್ತದೆ ಎಂದು ಭಾವ. ಮಾಂ. ಕಾ. ಭಾ. ೩-೧೫ನ್ನು ನೋಡಿ.

2. ಬೃ. ೨-೪-೧೨. ಬ್ರಹ್ಮವು ಏಕರಸವೆಂಬುದಕ್ಕೇ ಇಲ್ಲಿ ಹೋಲಿಕೆಯನ್ನು ಕೊಟ್ಟಿದೆ.

3. ಬೃ. ೪-೪-೨೦. ಏಕರಸಬ್ರಹ್ಮವೇ ವಿವಕ್ಷಿತವೆಂಬುದು ಇಲ್ಲಿ ಸುಸ್ಪಷ್ಟವಾಗಿದೆ.

4. ಇದು ಭರ್ತೃಪ್ರಪಂಚರ ಅಭಿಪ್ರಾಯ. ಬ್ರಹ್ಮವು ನಾನಾರಸವಾಗಿರುವದೆಂದು ಹೇಳುವದೇ ಶ್ರುತಿಯ ಉದ್ದೇಶವೆಂದು ಅವರು ಹೇಳುತ್ತಿದ್ದರು. ೫-೧-೧ರ ಭಾಷ್ಯವನ್ನು ನೋಡಿ.

5. ಆದ್ದರಿಂದ ನಾನಾರಸಬ್ರಹ್ಮವಾದವು ಶ್ರುತಿವಿರುದ್ಧವಾಗಿರುತ್ತದೆ.

## ಆತ್ಮನಲ್ಲಿ ಭಾಗವನ್ನು ಕಲ್ಪಿಸುವದು ಯುಕ್ತವಲ್ಲ

(ಭಾಷ್ಯ)

೩೧೭. ನ ಚ ನಿರವಯವಸ್ಯ ಪರಮಾತ್ಮನಃ ಅಸಂಸಾರಿಣಃ ಸಂಸಾರ್ಯೇಕದೇಶಕಲ್ಪನಾ ನ್ಯಾಯ್ಯಾ। ಸ್ವತೋಽದೇಶತ್ವಾತ್ ಪರಮಾತ್ಮನಃ। ಅದೇಶಸ್ಯ ಪರಸ್ಯ ಏಕದೇಶಸಂಸಾರಿತ್ವಕಲ್ಪನಾಯಾಂ ಪರ ಏವ ಸಂಸಾರೀ ಇತಿ ಕಲ್ಪಿತಂ ಭವೇತ್। ಅಥ ಪರೋಪಾಧಿಕೃತ ಏಕದೇಶಃ ಪರಸ್ಯ ಘಟಕರಕಾದ್ಯಾಕಾಶವತ್। ನ ತದಾ ತತ್ರ ವಿವೇಕಿನಾಂ ಪರಮಾತ್ಮೈಕದೇಶಃ ಪೃಥಕ್ಸಂವ್ಯವಹಾರಭಾಗಿತಿ ಬುದ್ಧಿರುತ್ಪದ್ಯತೇ। ಅವಿವೇಕಿನಾಂ ವಿವೇಕಿನಾಂ ಚ ಉಪಚರಿತಾ ಬುದ್ಧಿರ್ದೃಷ್ಟಾ ಇತಿ ಚೇತ್। ನ। ಅವಿವೇಕಿನಾಂ ಮಿಥ್ಯಾಬುದ್ಧಿತ್ವಾತ್। ವಿವೇಕಿನಾಂ ಚ ಸಂವ್ಯವಹಾರಮಾತ್ರಾಲಮ್ಬನಾರ್ಥತ್ವಾತ್। ಯಥಾ 'ಕೃಷ್ಣೋ ರಕ್ತಶ್ಚ ಆಕಾಶಃ' ಇತಿ ವಿವೇಕಿನಾಮಪಿ ಕದಾಚಿತ್ ಕೃಷ್ಣತಾ ರಕ್ತತಾ ಚ ಆಕಾಶಸ್ಯ ಸಂವ್ಯವಹಾರಮಾತ್ರಾಲಮ್ಬನಾರ್ಥತ್ವಂ ಪ್ರತಿಪದ್ಯತೇ ಇತಿ ನ ಪರಮಾರ್ಥತಃ ಕೃಷ್ಣೋ ರಕ್ತೋ ವಾ ಆಕಾಶೋ ಭವಿತುಮರ್ಹತಿ। ಅತೋ ನ ಪಣ್ಡಿತೈಃ ಬ್ರಹ್ಮಸ್ವರೂಪಪ್ರತಿಪತ್ತಿವಿಷಯೇ ಬ್ರಹ್ಮಣಃ ಅಂಶಾಂಶ್ಯೇಕದೇಶ್ಯೈಕದೇಶಿವಿಕಾರವಿಕಾರಿತ್ವಕಲ್ಪನಾ ಕಾರ್ಯಾ। ಸರ್ವಕಲ್ಪನಾಪನಯನಾರ್ಥಸಾರಪರತ್ವಾತ್ ಸರ್ವೋಪನಿಷದಾಮ್। ಅತೋ ಹಿತ್ವಾ ಸರ್ವಕಲ್ಪನಾಮ್ ಆಕಾಶಸ್ಯೇವ ನಿರ್ವಿಶೇಷತಾ ಪ್ರತಿಪತ್ತವ್ಯಾ। "ಆಕಾಶವತ್ ಸರ್ವಗತಶ್ಚ ನಿತ್ಯಃ" (ಶತ.ಬ್ರಾ. ?) "ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೨-೨-೧೧) ಇತ್ಯಾದಿಶ್ರುತಿಶತೇಭ್ಯಃ ॥

(ಭಾಷ್ಯಾರ್ಥ)

ನಿರವಯವನಾದ ಅಸಂಸಾರಿಪರಮಾತ್ಮನಿಗೆ ಸಂಸಾರಿ ಎಂಬ ಏಕದೇಶವನ್ನು ಕಲ್ಪಿಸುವದು ಯುಕ್ತವೂ ಅಲ್ಲ; ಏಕೆಂದರೆ ಪರಮಾತ್ಮನಿಗೆ ಸ್ವತಃ ದೇಶವಿರುವದಿಲ್ಲ. ಪರಮಾತ್ಮನ ಏಕದೇಶವು ಸಂಸಾರಿ ಎಂದು ಕಲ್ಪಿಸಿದರೆ ಪರಮಾತ್ಮನೇ ಸಂಸಾರಿ ಎಂದು ಕಲ್ಪಿಸಿದಂತೆ ಆಗುವದು.[1] ಹಾಗಲ್ಲದೆ (ಆಕಾಶಕ್ಕೆ) ಗಡಿಗೆಯ ಆಕಾಶ, ಕುಡಿಕೆಯ ಆಕಾಶ- ಮುಂತಾದವುಗಳು (ಏಕದೇಶವಾಗಿರು)ವಂತೆ ಮತ್ತೊಂದು ಉಪಾಧಿಯಿಂದ ಪರ(ಮಾತ್ಮ)ನಿಗೆ

1. ಒಂದು ಮರದ ತೊಲೆಯನ್ನು ಈ ಕಡೆ ಗಟ್ಟಿಯಾಗಿದೆ ಆ ಕಡೆ ಲಡ್ಡಾಗಿದೆ ಎಂದು ಮುಂತಾಗಿ ವ್ಯವಹರಿಸಬಹುದು; ಆದರೆ ಪರಮಾತ್ಮನಿಗೆ ಈ ಕಡೆಯಲ್ಲಿ ಸಂಸಾರವಿದೆ, ಆ ಕಡೆಯಲ್ಲಿಲ್ಲ- ಎನ್ನುವದಕ್ಕೆ ಬರುವದಿಲ್ಲ. ಪರಮಾತ್ಮನಿಗೆ ಸಂಸಾರವುಂಟು, ಅಥವಾ ಇಲ್ಲ- ಈ ಎರಡರಲ್ಲಿ ಒಂದು ವಿಕಲ್ಪವನ್ನು ಅಂಗೀಕರಿಸಲೇಬೇಕಾಗುತ್ತದೆ ಎಂದು ಭಾವ.

(ಜೀವನು) ಏಕದೇಶವು (ಎನ್ನುವದಾದರೆ), ಆಗ ವಿವೇಕಿಗಳಾದವರಿಗೆ ಪರಮಾತ್ಮನ ಏಕದೇಶವು ಬೇರೆ ಎಂಬ ಸಂವ್ಯವಹಾರಕ್ಕೆ ತಕ್ಕದ್ದೆಂಬ ಬುದ್ಧಿಯು ಉಂಟಾಗಲಾರದು.[1]

(ಆಕ್ಷೇಪ) :- ಅವಿವೇಕಿಗಳಿಗೆ (ಆ) ಬುದ್ಧಿಯುಂಟಾಗುವದು ಕಂಡಿದೆ, ವಿವೇಕಿಗಳಿಗೂ ಉಪಚಾರಕ್ಕೆ (ಆ ಬುದ್ಧಿಯುಂಟಾಗುವದು ಕಂಡಿದೆ)ಯಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ ಅವಿವೇಕಿಗಳ (ಬುದ್ಧಿಯು) ಮಿಥ್ಯಾಬುದ್ಧಿಯಾಗಿರುತ್ತದೆ. ವಿವೇಕಿಗಳಿಗೆ ಸಂವ್ಯವಹಾರಮಾತ್ರಕ್ಕೆ ವಿಷಯವಾಗಿರುವ ಅರ್ಥವುಳ್ಳದ್ದಾಗಿರುತ್ತದೆ. ಹೇಗೆ 'ಆಕಾಶವು ಕಪ್ಪು ಕೆಂಪು (ಆಗಿರುತ್ತದೆ)' ಎಂದು ವಿವೇಕಿಗಳಿಗೂ ಒಂದೊಂದು ವೇಳೆ ಕಪ್ಪು ಕೆಂಪು ಸಂವ್ಯವಹಾರಮಾತ್ರಕ್ಕೆ ವಿಷಯವಾಗಿರುವ ಅರ್ಥವಾಗಿರುತ್ತದೆ ಎಂಬ ಕಾರಣದಿಂದ ಆಕಾಶವು ನಿಜವಾಗಿಯೂ ಕರಿಯದೂ ಕೆಂಪನೆಯದೂ ಆಗಿರಲಾರದಷ್ಟೆ. ಆದ್ದರಿಂದ ಪಂಡಿತರಾದವರು ಬ್ರಹ್ಮಸ್ವರೂಪದ ಜ್ಞಾನದ ವಿಷಯಕ್ಕೆ ಅಂಶಾಂಶಿತ್ವ, ಏಕದೇಶೈಕದೇಶಿತ್ವ,[2] ವಿಕಾರವಿಕಾರಿತ್ವ- ಎಂಬ ಕಲ್ಪನೆಯನ್ನು ಮಾಡಿಕೊಳ್ಳತಕ್ಕದ್ದಲ್ಲ. ಏಕೆಂದರೆ **ಎಲ್ಲಾ ಉಪನಿಷತ್ತುಗಳಿಗೂ ಕಲ್ಪನೆಗಳನ್ನೆಲ್ಲ ಅಲ್ಲಗಳೆಯುವದೆಂಬ ಅರ್ಥವೇ ಸಾರವೆಂಬುದರಲ್ಲಿ ತಾತ್ಪರ್ಯವಿರುತ್ತದೆ.**[3] ಆದ್ದರಿಂದ ಎಲ್ಲಾ ಕಲ್ಪನೆಗಳನ್ನೂ ಬಿಟ್ಟು ಆಕಾಶದಂತೆ ನಿರ್ವಿಶೇಷತ್ವವನ್ನೇ (ಇಲ್ಲಿ) ತಿಳಿಯಬೇಕು. "ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುತ್ತಾನೆ" (ಶತ. ಬ್ರಾ. ?), "ಲೋಕದುಃಖದಿಂದ ಲಿಪ್ತನಾಗುವದಿಲ್ಲ, ಏಕೆಂದರೆ (ಅದಕ್ಕೆ) ಹೊರಚ್ಚಾಗಿರುತ್ತಾನೆ'' (ಕ. ೨-೨-೧೧) ಮುಂತಾದ ನೂರಾರು ಶ್ರುತಿಗಳಿಂದ (ಹೀಗೆಂದು ಸಿದ್ಧವಾಗುತ್ತದೆ).

## ಆತ್ಮನು ಬ್ರಹ್ಮವಿಲಕ್ಷಣನೆಂದು ಕಲ್ಪಿಸುವದೂ ಸರಿಯಲ್ಲ

(ಭಾಷ್ಯ)

೩೧೮. ನಾತ್ಮಾನಂ ಬ್ರಹ್ಮವಿಲಕ್ಷಣಂ ಕಲ್ಪಯೇತ್ ಉಷ್ಣಾತ್ಮಕ ಇವಾಗ್ನೌ ಶೀತೈಕದೇಶವ್, ಪ್ರಕಾಶಾತ್ಮಕೇ ವಾ ಸವಿತರಿ ತಮಏಕದೇಶವ್ । ಸರ್ವ

---

1. ಉಪಾಧಿಗಳು ಅವಿದ್ಯಾಕೃತವೆಂಬ ಪರಮಸಿದ್ಧಾಂತವನ್ನು ಬದಿಗಿಟ್ಟು ಉಪಾಧಿಕೃತವಾದದ್ದು ಉಪಹಿತದ ಧರ್ಮವಾಗಲಾರದು ಎಂದಿಷ್ಟೇ ಇಲ್ಲಿ ಹೇಳಿದೆ.

2. ಅಂಶ, ಏಕದೇಶ- ಈ ಎರಡನ್ನೂ ಪರ್ಯಾಯಶಬ್ದಗಳೆಂದು ಭಾವಿಸಬೇಕಾದದ್ದೇನೂ ಇಲ್ಲ; ಭಾ. ಭಾ. ೩೧೪ರಲ್ಲಿ ಹೇಳಿರುವ ಗಡಿಗೆ, ಬೆದ್ದಲು ನೆಲ- ಇವುಗಳಂತೆ ಅಂಶ, ಭಾಗ- ಎಂದು ಅರ್ಥಮಾಡಿಕೊಳ್ಳಬಹುದು.

3. ಸರ್ವಕಲ್ಪನಾತೀತನಾದ ಪರಮಾತ್ಮನನ್ನು ಲಕ್ಷಣೆಯಿಂದ ತಿಳಿಸುವದರಲ್ಲಿಯೇ ಶ್ರುತಿಗಳಿಗೆ ಪರಮತಾತ್ಪರ್ಯವಿರುತ್ತದೆ ಎಂದು ಅರ್ಥ.

ಕಲ್ಪನಾಪನಯನಾರ್ಥಸಾರಪರತ್ವಾತ್ ಸರ್ವೋಪನಿಷದಾಮ್ । ತಸ್ಮಾತ್ ನಾಮರೂಪೋಪಾಧಿನಿಮಿತ್ತಾ ಏವ ಆತ್ಮನಿ ಅಸಂಸಾರಧರ್ಮಿಣಿ ಸರ್ವೇ ವ್ಯವಹಾರಾಃ । "ರೂಪಂ ರೂಪಂ ಪ್ರತಿರೂಪೋ ಬಭೂವ"(೨-೫-೧೯) "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ ಯದಾಸ್ತೇ"(ತೈ.ಆ. ೩-೧೨) ಇತ್ಯೇವಮಾದಿಮನ್ತ್ರವರ್ಣೇಭ್ಯಃ । ನ ಸ್ವತ ಆತ್ಮನಃ ಸಂಸಾರಿತ್ವಮ್ ಅಲಕ್ತಕಾದ್ಯುಪಾಧಿಸಂಯೋಗಜನಿತರಕ್ತಸ್ಫಟಿಕಾದಿಬುದ್ಧಿವತ್ ಭ್ರಾನ್ತಮೇವ ನ ಪರಮಾರ್ಥತಃ । "ಧ್ಯಾಯತೀವ ಲೇಲಾಯತೀವ" (೪-೩-೭), "ನ ಕರ್ಮಣಾ ವರ್ಧತೇ ನೋ ಕನೀಯಾನ್"(೪-೪-೨೩), "ನ ಕರ್ಮಣಾ ಲಿಪ್ಯತೇ ಪಾಪಕೇನ" (೪-೪-೨೩), "ಸಮಂ ಸರ್ವೇಷು ಭೂತೇಷು ತಿಷ್ಠನ್ತಮ್" (ಗೀ. ೧೩-೨೭), "ಶುನಿ ಚೈವ ಶ್ವಪಾಕೇ ಚ" (ಗೀ. ೫-೧೦), ಇತ್ಯಾದಿಶ್ರುತಿಸ್ಮೃತಿಭ್ಯಃ[1] ಪರಮಾತ್ಮನೋಽಸಂಸಾರಿತ್ವೈವ। ಅತಃ ಏಕದೇಶಃ, ವಿಕಾರಃ, ಶಕ್ತಿರ್ವಾ ವಿಜ್ಞಾನಾತ್ಮಾ ಅನ್ಯೋ ವಾ ಇತಿ ವಿಕಲ್ಪಯಿತುಂ ನಿರವಯವತ್ವಾಭ್ಯುಪಗಮೇ ವಿಶೇಷತೋ ನ ಶಕ್ಯತೇ । ಅಂಶಾದಿಶ್ರುತಿಸ್ಮೃತಿವಾದಾಶ್ಚ ಏಕತ್ವಾರ್ಥಾಃ, ನ ತು ಭೇದಪ್ರತಿಪಾದಕಾಃ। ವಿವಕ್ಷಿತಾರ್ಥೈಕವಾಕ್ಯಯೋಗಾತ್ ಇತ್ಯವೋಚಾಮ ॥

(ಭಾಷ್ಯಾರ್ಥ)

ಬಿಸಿಯ ಸ್ವರೂಪನಾಗಿರುವ ಬೆಂಕಿಯಲ್ಲಿ ತಣ್ಣಗಿರುವ ಒಂದು ಕಡೆಯನ್ನು (ಕಲ್ಪಿಸು)ವಂತೆ ಅಥವಾ ಬೆಳಗುತ್ತಿರುವ ಸ್ವರೂಪದ ಸೂರ್ಯನಲ್ಲಿ ಕತ್ತಲೆಯಾಗಿರುವ ಒಂದು ಕಡೆಯನ್ನು (ಕಲ್ಪಿಸು)ವಂತೆ, ಆತ್ಮನು ಬ್ರಹ್ಮವಿಲಕ್ಷಣವಾಗಿರುವ (ಏಕದೇಶ)ವೆಂದು ಕಲ್ಪಿಸಬಾರದು. ಏಕೆಂದರೆ ಎಲ್ಲಾ ಉಪನಿಷತ್ತುಗಳಿಗೂ ಸರ್ವಕಲ್ಪನೆಗಳನ್ನೂ ಅಲ್ಲಗಳೆಯುವದೆಂಬ ಪದಾರ್ಥವೇ ಸಾರವೆಂಬುದರಲ್ಲಿ ತಾತ್ಪರ್ಯವಿರುತ್ತದೆ. **ಆದ್ದರಿಂದ ಸಂಸಾರಧರ್ಮಗಳಿಲ್ಲದ ಆತ್ಮನಲ್ಲಿ ನಾಮರೂಪಗಳಿಂದಾಗಿರುವ ಉಪಾಧಿಗಳ ನಿಮಿತ್ತದಿಂದಲೇ ಎಲ್ಲಾ ವ್ಯವಹಾರಗಳೂ ಉಂಟಾಗಿರುತ್ತವೆ.** "ರೂಪರೂಪಕ್ಕೂ ಪ್ರತಿರೂಪನಾದನು" (೨-೫-೧೯), "ಧೀರನಾದ (ಪರಮಾತ್ಮನು) ಎಲ್ಲಾ ರೂಪಗಳನ್ನೂ ಮಾಡಿ ಅವುಗಳಿಗೆ ಹೆಸರನ್ನಿಟ್ಟು ಕರೆಯುತ್ತಾ ಇರುವನಷ್ಟೆ" (ತೈ.ಆ. ೩-೧೨)- ಎಂಬಿವೇ ಮುಂತಾದ ಮಂತ್ರವರ್ಣಗಳಿಂದ(ಇದು ಸಿದ್ಧವಾಗಿರುತ್ತದೆ). **ಆತ್ಮನಿಗೆ ಸ್ವತಃ ಸಂಸಾರಿತ್ವವಿರುವದಿಲ್ಲ ; ಅರಗು ಮುಂತಾದ ಉಪಾಧಿಗಳ ಸಂಯೋಗದಿಂದುಂಟಾಗಿರುವ ಕೆಂಪುಸ್ಫಟಿಕ ಎಂಬುದೇ ಮುಂತಾದ ಬುದ್ಧಿಗಳಂತೆ (ಅದು) ಭ್ರಾಂತಿಯಿಂದಲೇ ಆಗಿರುತ್ತದೆ, ಪರ**

1. 'ನ್ಯಾಯೇಭ್ಯಃ' ಎಂಬುದನ್ನು ಬಿಟ್ಟುಬಿಟ್ಟಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

**ಪೂರ್ಣವಾಗಿ ಆಗಿರುವದಿಲ್ಲ.** "ಧ್ಯಾನಮಾಡುವಂತಿರುತ್ತಾನೆ, ಚಲಿಸುವಂತಿರುತ್ತಾನೆ" (೪-೩-೭), "ಕರ್ಮದಿಂದ ಬೆಳೆಯುವದಿಲ್ಲ, ಕುಂದುವದಿಲ್ಲ" (೪-೪-೨೩), "ಪಾಪಕರ್ಮದಿಂದ ಲಿಪ್ತನಾಗುವದಿಲ್ಲ" (೪-೪-೧೨), "ಸರ್ವಭೂತಗಳಲ್ಲಿಯೂ ಸಮನಾಗಿರುವ" (ಗೀ. ೧೩-೨೭), "ನಾಯಿಯಲ್ಲಿಯೂ ಚಂಡಾಲನಲ್ಲಿಯೂ" (ಪಂಡಿತರು ಸಮದರ್ಶಿಗಳಾಗಿರುವರು ಗೀ. ೫-೧೦) ಮುಂತಾದ ಶ್ರುತಿಸ್ಮೃತಿಗಳಿಂದ[1] ಪರಮಾತ್ಮನು ಅಸಂಸಾರೀಯೇ. ಆದ್ದರಿಂದ (ಪರಮಾತ್ಮನು) ನಿರವಯವನೆಂದು ಒಪ್ಪಿದಮೇಲೆ ವಿಜ್ಞಾನಾತ್ಮನು (ಪರಮಾತ್ಮನ) ಏಕದೇಶ, ವಿಕಾರ, ಶಕ್ತಿ ಅಥವಾ (ಪರಮಾತ್ಮನಿಗಿಂತ) ಬೇರೆ ಎಂದು ವಿಶೇಷವಾಗಿ ವಿಕಲ್ಪಿಸುವದಕ್ಕೆ ಆಗುವದೇ ಇಲ್ಲ. ಅಂಶವೇ ಮುಂತಾದವುಗಳೆಂದು ಹೇಳುವ ಶ್ರುತಿಸ್ಮೃತಿವಾಕ್ಯಗಳು ಏಕತ್ವವನ್ನು ತಿಳಿಸುವದಕ್ಕೇ ಹೊರತು ಭೇದವನ್ನು ತಿಳಿಸುವವಲ್ಲ ; ಏಕೆಂದರೆ (ಈ ಪಕ್ಷದಲ್ಲಿಯೇ) ವಿವಕ್ಷಿತವಾದ ಅರ್ಥವನ್ನು (ತಿಳಿಸುವ) ಏಕವಾಕ್ಯತೆಯುಂಟಾಗುತ್ತದೆ ಎಂದು (ಹಿಂದಿನ ಭಾ. ಭಾ. ದಲ್ಲಿ) ಹೇಳಿರುತ್ತೇವೆ.

## ಉಪನಿಷತ್ತುಗಳಲ್ಲಿ ವಿಜ್ಞಾನಾತ್ಮಭೇದವನ್ನು ಹೇಳಿರುವದಕ್ಕೆ ಗತಿ

### ಪೂರ್ವಪಕ್ಷ : ಶಾಸ್ತ್ರಪ್ರಾಮಾಣ್ಯಕ್ಕೆ ಭೇದವು ಬೇಕು

(ಭಾಷ್ಯ)

೩೧೯. ಸರ್ವೋಪನಿಷದಾಂ ಪರಮಾತ್ಮೈಕತ್ವಜ್ಞಾಪನಪರತ್ವೇ ಅಥ ಕಿಮರ್ಥಂ ತತ್ಪ್ರತಿಕೂಲೋಽರ್ಥೋ ವಿಜ್ಞಾನಾತ್ಮಭೇದಃ ಪರಿಕಲ್ಪ್ಯತ ಇತಿ । ಕರ್ಮಕಾಣ್ಡಪ್ರಾಮಾಣ್ಯವಿರೋಧಪರಿಹಾರಾಯ ಇತ್ಯೇಕೇ । ಕರ್ಮಪ್ರತಿಪಾದಕಾನಿ ಹಿ ವಾಕ್ಯಾನಿ ಅನೇಕಕ್ರಿಯಾಕಾರಕಫಲಭೋಕ್ತೃಕರ್ತ್ರಾಶ್ರಯಾಣಿ । ವಿಜ್ಞಾನಾತ್ಮಭೇದಾಭಾವೇ ಹ್ಯಸಂಸಾರಿಣ ಏವ ಪರಮಾತ್ಮನ ಏಕತ್ವೇ, ಕಥಮ್ ಇಷ್ಟಫಲಾಸು ಕ್ರಿಯಾಸು ಪ್ರವರ್ತಯೇಯುಃ, ಅನಿಷ್ಟಫಲಾಭ್ಯೋ ವಾ ಕ್ರಿಯಾಭ್ಯೋ ನಿವರ್ತಯೇಯುಃ ? ಕಸ್ಯ ವಾ ಬದ್ಧಸ್ಯ ಮೋಕ್ಷಾಯ ಉಪ

---

1. ಮೂಲದಲ್ಲಿ 'ನ್ಯಾಯೇಭ್ಯಃ' ಎಂಬುದು ಬೇಕಿಲ್ಲವೆಂದು ಬಿಟ್ಟಿದೆ. ಏಕೆಂದರೆ ಶ್ರುತಿಸ್ಮೃತಿಗಳನ್ನು ಮಾತ್ರ ಈ ವಾಕ್ಯದಲ್ಲಿ ಹೇಳಿದೆಯೇ ಹೊರತು ನ್ಯಾಯಗಳನ್ನು ಹೇಳಿಲ್ಲ. ಆತ್ಮನು ಕೂಟಸ್ಥನು, ಅಸಂಗನು ಎಂಬಿವೇ ಮುಂತಾದ ನ್ಯಾಯಗಳನ್ನು ಇಲ್ಲಿ ಸೂಚಿಸಿದೆ– ಎಂದು ಟೀಕಾಕಾರರು ಬರೆದಿರುತ್ತಾರೆ. ಪರಮಾತ್ಮನು ನಿರವಯವನು, ಅವನಲ್ಲಿ ಸ್ವತಃ ಯಾವ ದೇಶಾದಿಗಳೂ ಇಲ್ಲ ಎಂಬ ನ್ಯಾಯವನ್ನು ಪ್ರಕೃತಭಾಷ್ಯದಲ್ಲಿಯೇ ಹೇಳಿರುತ್ತದೆ.

ನಿಷದಾರಭ್ಯೇತ ? ಅಪಿ ಚ ಪರಮಾತ್ಮೈಕತ್ವವಾದಿಪಕ್ಷೇ ಕಸ್ಮೈ[1] ಪರಮಾತ್ಮೈಕತ್ವೋಪದೇಶಃ ಕಸ್ಯ[2] ವಾ ತದುಪದೇಶಗ್ರಹಣಫಲಮ್ ? ಬದ್ಧಸ್ಯ ಹಿ ಬನ್ಧನಾಶಾಯ ಉಪದೇಶಃ। ತದಭಾವೇ ಉಪನಿಷಚ್ಛಾಸ್ತ್ರಂ ನಿರ್ವಿಷಯಮೇವ। ಏವಂ ತರ್ಹಿ ಉಪನಿಷದ್ವಾದಿಪಕ್ಷಸ್ಯ ಕರ್ಮಕಾಣ್ಡವಾದಿಪಕ್ಷೇಣ ಚೋದ್ಯಪರಿಹಾರಯೋಃ ಸಮಾನಃ ಪನ್ಥಾಃ। ಯೇನ ಭೇದಾಭಾವೇ ಕರ್ಮಕಾಣ್ಡಂ ನಿರಾಲಮ್ಬನಮ್ ಆತ್ಮಾನಂ ನ ಲಭತೇ ಪ್ರಾಮಾಣ್ಯಂ ಪ್ರತಿ, ತಥಾ ಉಪನಿಷದಪಿ । ಏವಂ ತರ್ಹಿ ಯಸ್ಯ ಪ್ರಾಮಾಣ್ಯೇ ಸ್ವಾರ್ಥವಿಘಾತೋ ನಾಸ್ತಿ ತಸ್ಯೈವ ಕರ್ಮಕಾಣ್ಡಸ್ಯಾಸ್ತು ಪ್ರಾಮಾಣ್ಯಮ್ । ಉಪನಿಷದಾಂ ತು ಪ್ರಾಮಾಣ್ಯಕಲ್ಪನಾಯಾಂ ಸ್ವಾರ್ಥವಿಘಾತೋ ಭವೇತ್ ಇತಿ ಮಾ ಭೂತ್ ಪ್ರಾಮಾಣ್ಯಮ್ । ನ ಹಿ ಕರ್ಮಕಾಣ್ಡಂ ಪ್ರಮಾಣಂ ಸತ್ ಅಪ್ರಮಾಣಂ ಭವಿತುಮರ್ಹತಿ । ನ ಹಿ ಪ್ರದೀಪಃ ಪ್ರಕಾಶ್ಯಂ ಪ್ರಕಾಶಯತಿ ನ ಪ್ರಕಾಶಯತಿ ಚ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :- ಎಲ್ಲಾ ಉಪನಿಷತ್ತುಗಳಿಗೂ ಪರಮಾತ್ಮನು ಒಬ್ಬನೇ (ತತ್ತ್ವವು) ಎಂಬಿದನ್ನು ತಿಳಿಸುವದರಲ್ಲಿ ತಾತ್ಪರ್ಯವಿರುವಾಗ ಅದಕ್ಕೆ ಪ್ರತಿಕೂಲವಾಗಿರುವ ವಿಜ್ಞಾನಾತ್ಮಭೇದವನ್ನು[3] ಕಲ್ಪಿಸಿರುವದು ಏತಕ್ಕೆ ?

(ಏಕದೇಶಿಗಳ ಪರಿಹಾರ) :- ಕರ್ಮಕಾಂಡದ ಪ್ರಾಮಾಣ್ಯಕ್ಕೆ ವಿರೋಧವಾಗುವದರ ಪರಿಹಾರಕ್ಕಾಗಿ (ಈ ಭೇದವನ್ನು ಕಲ್ಪಿಸಿದೆ) ಎಂದು **ಕೆಲವರು**[4] (ಹೇಳುತ್ತಾರೆ. ಇದರ ವಿವರ) : ಕರ್ಮವನ್ನು ಪ್ರತಿಪಾದಿಸುವ ವಾಕ್ಯಗಳು ಅನೇಕ ಕ್ರಿಯೆಗಳು, ಕಾರಕಗಳು, ಫಲಗಳು, ಭೋಕ್ತೃಗಳು, ಕರ್ತೃಗಳು- ಇವನ್ನು ಆಶ್ರಯಿಸಿಕೊಂಡಿರುತ್ತವೆ. ವಿಜ್ಞಾನಾತ್ಮಭೇದವು ಇಲ್ಲದಿದ್ದರೆ, ಅಸಂಸಾರಿಯಾದ ಪರಮಾತ್ಮನು ಒಬ್ಬನೇ ಎಂದಾದರೆ, (ಕರ್ಮಿಗಳು) ಇಷ್ಟಫಲವುಳ್ಳ ಕ್ರಿಯೆಗಳಲ್ಲಿ ಹೇಗೆ ಪ್ರವರ್ತಿಸಿಯಾರು ? ಅನಿಷ್ಟಫಲವುಳ್ಳ ಕ್ರಿಯೆಗಳಿಂದ ಹೇಗೆತಾನೆ ಹಿಮ್ಮೆಟ್ಟಿಯಾರು[5] ?

---

1, 2. ಈ ಪಾಠಾಂತರಗಳು ಮುಂದಿನ ಭಾಷ್ಯಕ್ಕನುಗುಣವಾಗಿವೆ.

3. ವಿಜ್ಞಾನಾತ್ಮನು ಪರಮಾತ್ಮನಿಗಿಂತ ಬೇರೆ, ವಿಜ್ಞಾನಾತ್ಮರು ಅನೇಕರು- ಎಂಬ ಭೇದವನ್ನು.

4. ಇವರು ಯಾರೆಂಬುದು ಸ್ಪಷ್ಟವಾಗಿಲ್ಲ ; ಭೇದಾಭೇದವಾದಿಗಳೇ ಆಗಿರಬಹುದು. ಸೂ. ಭಾ. ೨-೧-೧೪, ಭಾ. ಭಾ. ೪೩೫ ನೋಡಿ.

5. ಆತ್ಮನು ಒಬ್ಬನೇ ಪರಮಾರ್ಥವು ಎಂಬ ಪಕ್ಷದಲ್ಲಿ ಇಷ್ಟಫಲ, ಅನಿಷ್ಟಫಲ, ಇಷ್ಟಫಲಕ್ಕಾಗಿ ಪ್ರವರ್ತಿಸುವವರು, ಅನಿಷ್ಟಫಲದಿಂದ ಹಿಂಜರಿಯುವವರು -ಎಂಬ ಭೇದವೇ ಇರುವಂತಿಲ್ಲ.

ಅಥವಾ (ಈ ಪಕ್ಷದಲ್ಲಿ) ಯಾವ ಬದ್ಧನಿಗೆ ಮೋಕ್ಷಕ್ಕಾಗಿ ಉಪನಿಷತ್ತು ಪ್ರಾರಂಭವಾಗಬೇಕು ? ಇದೇ ಅಲ್ಲದೆ ಪರಮಾತ್ಮನು ಒಬ್ಬನೇ (ತತ್ತ್ವವು) ಎಂಬ ವಾದಿಯ ಪಕ್ಷದಲ್ಲಿ ಪರಮಾತ್ಮನು ಒಬ್ಬನೇ (ತತ್ತ್ವವು) ಎಂಬ ಉಪದೇಶವು ಯಾರಿಗೆ? ಆ ಉಪದೇಶವನ್ನು ಗ್ರಹಿಸುವದರ ಫಲವುತಾನೆ ಯಾರಿಗೆ ? ಬದ್ಧನಿಗಲ್ಲವೆ, ಬಂಧನಾಶಕ್ಕಾಗಿ ಉಪದೇಶ(ಮಾಡುವದು) ? ಅವನಿಲ್ಲದೆ ಹೋದರೆ ಉಪನಿಷಚ್ಛಾಸ್ತ್ರಕ್ಕೆ ವಿಷಯವೇ ಇಲ್ಲದೆ ಹೋಗುವದು[1].

ಹೀಗಿರುವದರಿಂದ ಉಪನಿಷದ್ವಾದಿಯ ಪಕ್ಷಕ್ಕೆ ಕರ್ಮಕಾಂಡವಾದಿಯ ಪಕ್ಷದಂತೆಯೇ ಚೋದ್ಯಪರಿಹಾರಗಳ ವಿಷಯದಲ್ಲಿ ಮಾರ್ಗವು ಸಮಾನವಾಗಿದೆ ಎಂದಾಯಿತು. ಏಕೆಂದರೆ ಭೇದಗಳಿಲ್ಲದೆ ಕರ್ಮಕಾಂಡಕ್ಕೆ ವಿಷಯವಿಲ್ಲವೆಂದಾಗಿ (ಅದು) ಪ್ರಾಮಾಣ್ಯಕ್ಕೆ ತಾನೇ ಇಲ್ಲವಾಗುತ್ತದೆ; ಉಪನಿಷತ್ತೂ ಹಾಗೆಯೇ[2]. ಹೀಗಿರುವದರಿಂದ ಯಾವದು ಪ್ರಮಾಣವೆಂದಾದರೆ ಸ್ವಾರ್ಥವಿಘಾತವು ಇರುವದಿಲ್ಲವೋ ಆ ಕರ್ಮಕಾಂಡಕ್ಕೇ ಪ್ರಾಮಾಣ್ಯವಿರಲಿ; ಉಪನಿಷತ್ತುಗಳು ಪ್ರಮಾಣವೆಂದು ಕಲ್ಪಿಸಿದರೋ ಸ್ವಾರ್ಥವಿಘಾತವಾಗುವದಾದ್ದರಿಂದ (ಅವುಗಳಿಗೆ) ಪ್ರಾಮಾಣ್ಯವಿರುವದು ಬೇಡ.[3] ಕರ್ಮಕಾಂಡವು ಪ್ರಮಾಣವಾಗಿದ್ದದ್ದು ಅಪ್ರಮಾಣವಾಗುವದು ಯುಕ್ತವಲ್ಲವಲ್ಲವೆ ? ಪ್ರದೀಪವು ಬೆಳಗತಕ್ಕ ವಸ್ತುವನ್ನು ಬೆಳಗಿಯೂ ಬೆಳಗುತ್ತದೆ, ಬೆಳಗುವದೂ ಇಲ್ಲ (ಎಂಬುದು ಸರಿ)ಯಾಗಲಾರದಷ್ಟೆ ?

## ಪೂ. ಪ. ಆತ್ಮೈಕತ್ವವಾದದಲ್ಲಿ ಪ್ರತ್ಯಕ್ಷಾದಿವಿರೋಧ

(ಭಾಷ್ಯ)

೩೨೦. ಪ್ರತ್ಯಕ್ಷಾದಿಪ್ರಮಾಣವಿಪ್ರತಿಷೇಧಾಚ್ಚ । ನ ಕೇವಲಮ್ ಉಪನಿಷದೋ ಬ್ರಹ್ಮೈಕತ್ವಂ ಪ್ರತಿಪಾದಯನ್ತ್ಯಃ ಸ್ವಾರ್ಥವಿಘಾತಂ ಕರ್ಮಕಾಣ್ಡಪ್ರಾಮಾಣ್ಯವಿಘಾತಂ ಚ ಕುರ್ವನ್ತಿ । ಪ್ರತ್ಯಕ್ಷಾದಿನಿಶ್ಚಿತಭೇದಪ್ರತಿಪ್ರತ್ತ್ಯರ್ಥ

---

1. ಉಪದೇಶಕ್ಕೆ ಬದ್ಧನೆಂಬ ಅಧಿಕಾರಿ, ಉಪದೇಶ, ಉಪದೇಶವನ್ನು ಗ್ರಹಿಸುವದರ ಫಲ– ಎಂಬ ಭೇದವೂ ಆತ್ಮೈಕತ್ವವಾದಿಪಕ್ಷದಲ್ಲಿ ಇರಲಾರದು.

2. ಕರ್ಮಕಾಂಡದಂತೆ ಉಪನಿಷತ್ತಿಗೂ ಪ್ರಾಮಾಣ್ಯವುಂಟಾಗುವದಕ್ಕೆ ಭೇದವು ಅವಶ್ಯ; ಭೇದವಿಲ್ಲದೆ ಇದ್ದರೆ ಎರಡಕ್ಕೂ ಪ್ರಾಮಾಣ್ಯವುಂಟಾಗುವದಿಲ್ಲ.

3. ಪ್ರಾಮಾಣ್ಯವೇ ಬೇಡ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯವಲ್ಲ; ಆತ್ಮೈಕತ್ವಬೋಧಕತ್ವದಲ್ಲಿ ಪ್ರಾಮಾಣ್ಯವು ಬೇಡ ಎಂಬುದೇ ಅವನ ಭಾವವು. ಕರ್ಮಕಾಂಡಕ್ಕೆ ಶೇಷವೆಂದೋ ಉಪಾಸನಾದಿಪರವೆಂದೋ ಅವುಗಳಿಗೆ ಅರ್ಥವನ್ನು ಕಲ್ಪಿಸಿದರೆ ಪ್ರಾಮಾಣ್ಯವೂ ಬರಬಹುದು ಎಂದು ಅವನ ಅಭಿಪ್ರಾಯವಿದೆ. ಇದು ಮುಂದಿನ ಭಾ. ಭಾ. ದಲ್ಲಿ ಸ್ಪಷ್ಟವಾಗುವದು.

ಪ್ರಮಾಣೈಶ್ಚ ವಿರುಧ್ಯನ್ತೇ। ತಸ್ಮಾತ್ ಅಪ್ರಾಮಾಣ್ಯಮೇವೋಪನಿಷದಾಮ್। ಅನ್ಯಾರ್ಥತಾ ವಾಸ್ತು ನ ತ್ವೇವ ಬ್ರಹ್ಮೈಕತ್ವಪ್ರತಿಪತ್ತ್ಯರ್ಥತಾ ॥

(ಭಾಷ್ಯಾರ್ಥ)

ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಗೆ ವಿರೋಧವಾಗುವದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ) : ಉಪನಿಷತ್ತುಗಳು ಬ್ರಹ್ಮೈಕತ್ವವನ್ನು ತಿಳಿಸುತ್ತವೆ ಎಂದರೆ ಸ್ವಾರ್ಥವಿಘಾತವನ್ನೂ ಕರ್ಮಕಾಂಡದ ಪ್ರಾಮಾಣ್ಯಕ್ಕೆ ವಿಘಾತವನ್ನೂ ಮಾಡುತ್ತವೆ ಎಂಬುದಿಷ್ಟೇ ಅಲ್ಲ; ನಿಶ್ಚಿತವಾಗಿಯೂ ಭೇದಜ್ಞಾನವನ್ನುಂಟುಮಾಡುವದಕ್ಕೆ (ಬಂದಿರುವ) ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಗೂ (ಇವು) ವಿರುದ್ಧವಾಗುತ್ತವೆ. ಆದ್ದರಿಂದ ಉಪನಿಷತ್ತುಗಳಿಗೆ ಪ್ರಾಮಾಣ್ಯವೇ ಇಲ್ಲವೆಂದು, ಅಥವಾ ಬೇರೊಂದು ಅರ್ಥ (ವನ್ನು ಅವು ತಿಳಿಸುವವು) ಎಂದು ಆಗಲಿ; ಆದರೆ ಬ್ರಹ್ಮೈಕತ್ವವನ್ನು ತಿಳಿಸುವದಕ್ಕಾಗಿ (ಬಂದಿವೆ) ಎಂದು ಮಾತ್ರ ಎಂದಿಗೂ ಆಗಬಾರದು.

## ಸಿದ್ಧಾಂತ : ಉಪನಿಷತ್ತುಗಳಿಗೆ ಪ್ರಾಮಾಣ್ಯವು ಪ್ರತ್ಯಕ್ಷವಾಗಿದೆ

(ಭಾಷ್ಯ)

೩೨೧. ನ। ಉಕ್ತೋತ್ತರತ್ವಾತ್। ಪ್ರಮಾಣಸ್ಯ ಹಿ ಪ್ರಮಾಣತ್ವಮ್ ಅಪ್ರಮಾಣತ್ವಂ ವಾ ಪ್ರಮೋತ್ಪಾದನಾನುತ್ಪಾದನನಿಮಿತ್ತಮ್। ಅನ್ಯಥಾ ಚೇತ್ ಸ್ತಮ್ಭಾದೀನಾಂ ಪ್ರಾಮಾಣ್ಯಪ್ರಸಙ್ಗಾತ್ ಶಬ್ದಾದೌ ಪ್ರಮೇಯೇ। ಕಿಂ ಚಾತಃ? ಯದಿ ತಾವತ್ ಉಪನಿಷದೋ ಬ್ರಹ್ಮೈಕತ್ವಪ್ರತಿಪತ್ತಿಪ್ರಮಾಂ ಕುರ್ವನ್ತಿ ಕಥಮಪ್ರಮಾಣಂ ಭವೇಯುಃ? ನ ಕುರ್ವನ್ತ್ಯೇವೇತಿ ಚೇತ್ ಯಥಾ 'ಅಗ್ನಿಃ ಶೀತ' ಇತಿ। ಸ ಭವಾನ್ ಏವಂ ವದನ್ ವಕ್ತವ್ಯಃ ಉಪನಿಷತ್ಪ್ರಾಮಾಣ್ಯಪ್ರತಿಷೇಧಾರ್ಥಂ ಭವತೋ ವಾಕ್ಯಮ್ ಉಪನಿಷತ್ಪ್ರಾಮಾಣ್ಯಪ್ರತಿಷೇಧಂ ಕಿಂ ನ ಕರೋತ್ಯೇವ, ಅಗ್ನಿರ್ವಾ ರೂಪಪ್ರಕಾಶಮ್ ಅಥ ಕರೋತಿ? ಯದಿ ಕರೋತಿ ಭವತು ತದಾ ಪ್ರತಿಷೇಧಾರ್ಥಂ ಪ್ರಮಾಣಂ ಭವದ್ವಾಕ್ಯಮ್, ಅಗ್ನಿಶ್ಚ ರೂಪಪ್ರಕಾಶಕೋ ಭವೇತ್। ಪ್ರತಿಷೇಧವಾಕ್ಯಪ್ರಾಮಾಣ್ಯೇ ಭವತ್ಯೇವ ಉಪನಿಷದಾಂ ಪ್ರಾಮಾಣ್ಯಮ್। ಅತ್ರ ಭವನ್ತೋ ಬ್ರುವನ್ತು ಕಃ ಪರಿಹಾರ ಇತಿ। ನನ್ವತ್ರ ಪ್ರತ್ಯಕ್ಷಾ ಮದ್ವಾಕ್ಯೇ ಉಪನಿಷತ್ಪ್ರಾಮಾಣ್ಯಪ್ರತಿಷೇಧಾರ್ಥಪ್ರತಿಪತ್ತಿಃ ಅಗ್ನೌ ಚ ರೂಪಪ್ರಕಾಶನಪ್ರತಿಪತ್ತಿಃ ಪ್ರಮಾ। ಕಸ್ತರ್ಹಿ ಭವತಃ ಪ್ರದ್ವೇಷೋ ಬ್ರಹ್ಮೈಕತ್ವಪ್ರತ್ಯಯೇ ಪ್ರಮಾಂ ಪ್ರತ್ಯಕ್ಷಂ ಕುರ್ವತೀಷೂಪನಿಷತ್ಸು ಉಪಲಭ್ಯಮಾನಾಸು? ಪ್ರತಿ

ಷೇಧಾನುಪಪತ್ತೇಃ[1] । ಶೋಕಮೋಹಾದಿನಿವೃತ್ತಿಶ್ಚ ಪ್ರತ್ಯಕ್ಷಂ ಫಲಂ ಬ್ರಹ್ಮೈಕತ್ವಪ್ರತಿಪತ್ತಿಪಾರಮ್ಪರ್ಯಜನಿತಮ್ ಇತ್ಯವೋಚಾಮ । ತಸ್ಮಾತ್ ಉಕ್ತೋತ್ತರತ್ವಾತ್ ಉಪನಿಷದಂ ಪ್ರತಿ ಅಪ್ರಾಮಾಣ್ಯಶಙ್ಕಾ ತಾವನ್ನಾಸ್ತಿ ॥

(ಭಾಷ್ಯಾರ್ಥ)

(ಇದು ಸರಿ)ಯಲ್ಲ. ಏಕೆಂದರೆ (ಇದಕ್ಕೆ) ಉತ್ತರವನ್ನು ಹೇಳಿದ್ದಾಗಿದೆ (ಇದರ ವಿವರ) : ಪ್ರಮಾಣವು (ನಿಜವಾದ) ಪ್ರಮಾಣವೆಂಬುದಾಗಲಿ ಪ್ರಮಾಣವಲ್ಲವೆಂಬುದಾಗಲಿ, ಪ್ರಮೆಯನ್ನುಂಟುಮಾಡುವದು, ಅಥವಾ ಉಂಟುಮಾಡದಿರುವದು ಎಂಬ ನಿಮಿತ್ತದಿಂದ (ಗೊತ್ತಾಗತಕ್ಕದ್ದು).[2] ಹಾಗಲ್ಲದಿದ್ದರೆ ಶಬ್ದಾದಿ ಎಂಬ ಪ್ರಮೇಯದ ವಿಷಯಕ್ಕೆ ಕಂಬವೇ ಮುಂತಾದವೂ ಪ್ರಮಾಣವೆಂದಾದೀತು.

(ಪ್ರಶ್ನೆ) :– ಇದರಿಂದ ಏನಾಯಿತು ?

(ಉತ್ತರ) :– **ಮೊದಲನೆಯದಾಗಿ ಉಪನಿಷತ್ತುಗಳು ಬ್ರಹ್ಮೈಕತ್ವಜ್ಞಾನವೆಂಬ ಪ್ರಮೆಯನ್ನುಂಟುಮಾಡುತ್ತವೆಯಾದರೆ, ಹೇಗೆ ತಾನೆ ಅಪ್ರಮಾಣವಾದಾವು?**[3]

(ಆಕ್ಷೇಪ) :– (ಅವು ಪ್ರಮೆಯನ್ನು) ಉಂಟುಮಾಡುವದೇ ಇಲ್ಲ; ಬೆಂಕಿಯು ತಣ್ಣಗಿದೆ ಎಂಬ (ವಾಕ್ಯವು) ಹೇಗೆ (ಉಂಟುಮಾಡುವದಿಲ್ಲವೋ ಹಾಗೆಯೇ ಇದು).[4]

(ಪರಿಹಾರ) :– ಹೀಗೆನ್ನುವ ನಿನ್ನನ್ನು ಕೇಳುತ್ತೇವೆ. ಉಪನಿಷತ್ಪ್ರಾಮಾಣ್ಯವನ್ನು ಅಲ್ಲಗಳೆಯುವದಕ್ಕೆ (ಪ್ರಯೋಗಿಸಿರುವ ಈ) ನಿನ್ನ ವಾಕ್ಯವು ಉಪನಿಷತ್ಪ್ರಾಮಾಣ್ಯವನ್ನು ಅಲ್ಲಗಳೆಯುವದೊ, ಇಲ್ಲವೊ? ಬೆಂಕಿಯು ರೂಪವನ್ನು ಬೆಳಗುವದೊ, ಅಥವಾ (ಬೆಳಗುವದೆಂಬ ಕೆಲಸವನ್ನು) ಮಾಡುವದಿಲ್ಲವೊ? ಮಾಡುತ್ತದೆಯಾದರೆ ನಿನ್ನ ವಾಕ್ಯವು ಪ್ರತಿಷೇಧಾರ್ಥದಲ್ಲಿ ಪ್ರಮಾಣವೆಂದಾಗಲಿ, ಬೆಂಕಿಯೂ ರೂಪಪ್ರಕಾಶಕವೆಂದಾಗಲಿ. (ಈ) ಪ್ರತಿಷೇಧವಾಕ್ಯವು

---

1. ಈ ವಾಕ್ಯವು ಇಲ್ಲಿಲ್ಲದಿದ್ದರೂ ಸಾಗುತ್ತದೆ.

2. ೧–೪–೭ರ ಭಾಷ್ಯದಲ್ಲಿ ವಸ್ತುಸ್ವರೂಪವನ್ನು ಹೇಳಿದರೂ ವಾಕ್ಯವು ಪ್ರಮಾಣವಾಗಬಹುದೆಂಬುದಕ್ಕೆ (ಭಾ.ಭಾ. ೧೪೧ರಲ್ಲಿ) ಹೇಳಿರುವದೇ ಇದು.

3. ಉಪನಿಷತ್ತಿನಿಂದ ಅರಿವು ಉಂಟಾಗುತ್ತಿರುವಲ್ಲಿ ಅಪ್ರಮಾಣವೆನ್ನಲಾಗದು ಎಂದು ಭಾವ.

4. ಪ್ರತ್ಯಕ್ಷಕ್ಕೆ ಈ ವಾಕ್ಯಾರ್ಥವು ವಿರುದ್ಧವಾಗಿದೆ; ಇದರಂತೆ ಉಪನಿಷತ್ತು ಹೇಳುವ ಆತ್ಮೈಕ್ಯವು ಆತ್ಮನಾನಾತ್ವಕ್ಕೆ ವಿರುದ್ಧವಾಗಿದೆ ಎಂದು ಪೂರ್ವಪಕ್ಷಿಯ ಭಾವ.

ಪ್ರಮಾಣವೆಂದಾದರೆ ಉಪನಿಷತ್ತುಗಳಿಗೂ ಪ್ರಾಮಾಣ್ಯವುಂಟಾಗುತ್ತದೆ. ಇಲ್ಲಿ ಪರಿಹಾರವು ಹೇಗೆ ಎಂಬುದನ್ನು ತಾವು ಹೇಳಬೇಕು[1].

(ಪೂರ್ವಪಕ್ಷ) :- ಇಲ್ಲಿ ನನ್ನ ವಾಕ್ಯವು ಉಪನಿಷತ್ಪ್ರಾಮಾಣ್ಯವನ್ನು ಅಲ್ಲಗಳೆಯುವದೆಂಬರ್ಥದ ಜ್ಞಾನವು ಪ್ರತ್ಯಕ್ಷವಾಗಿದೆ, ಬೆಂಕಿಯು ರೂಪವನ್ನು ಬೆಳಗುವದೆಂಬ ಜ್ಞಾನವೂ ಪ್ರಮೆ ಎಂಬುದು (ಪ್ರತ್ಯಕ್ಷವಾಗಿದೆಯಲ್ಲ) !

(ಸಿದ್ಧಾಂತಿ) :- ಹಾಗಾದರೆ ಬ್ರಹ್ಮೈಕತ್ವಜ್ಞಾನದ ವಿಷಯದಲ್ಲಿ ಉಪನಿಷತ್ತುಗಳು ಪ್ರಮೆಯನ್ನುಂಟುಮಾಡುತ್ತಿರುವವೆಂಬುದು ಪ್ರತ್ಯಕ್ಷವಾಗಿರುವಲ್ಲಿ ನಿನಗೆ (ಅವುಗಳಲ್ಲಿ) ಪ್ರದ್ವೇಷವೇನು ? ಏಕೆಂದರೆ (ಉಪನಿಷತ್ತುಗಳು ಪ್ರಮೆಯನ್ನುಂಟುಮಾಡುವದು ಪ್ರತ್ಯಕ್ಷವಾಗಿ ಕಂಡುಬರುತ್ತಿರುವಲ್ಲಿ ಅವುಗಳ ಪ್ರಾಮಾಣ್ಯವನ್ನು) ಅಲ್ಲಗಳೆಯುವದು ಸರಿಯಾಗುವದಿಲ್ಲ[2]. ಶೋಕಮೋಹಾದಿಗಳನ್ನು ತೊಲಗಿಸುವದೆಂಬುದು ಬ್ರಹ್ಮೈಕತ್ವಜ್ಞಾನದಿಂದ ಪರಂಪರೆಯಿಂದಾಗುವ ಪ್ರತ್ಯಕ್ಷಫಲವು ಎಂದು (ಹಿಂದೆಯೇ) ಹೇಳಿರುತ್ತೇವೆ[3]. ಆದ್ದರಿಂದ (ಇದಕ್ಕೆ) ಉತ್ತರವನ್ನು ಹೇಳಿದ್ದಾಗಿರುವದರಿಂದ ಮೊದಲನೆಯದಾಗಿ[4] ಉಪನಿಷತ್ತಿನ ವಿಷಯದಲ್ಲಿ ಅಪ್ರಾಮಾಣ್ಯದ ಶಂಕೆಯಂತೂ ಬರುವದಿಲ್ಲ.

## ಉಪನಿಷತ್ತುಗಳು ಸ್ವಾರ್ಥವಿಘಾತಕವೆಂಬುದು ತಪ್ಪು

(ಭಾಷ್ಯ)

೩-೨೨. ಯಚ್ಚೋಕ್ತಮ್ ಸ್ವಾರ್ಥವಿಘಾತಕತ್ವಾತ್[5] ಅಪ್ರಾಮಾಣ್ಯಮಿತಿ । ತದಪಿ ನ । ತದರ್ಥಪ್ರತಿಪತ್ತೇರ್ಬಾಧಕಾಭಾವಾತ್ । ನ ಹಿ ಉಪನಿಷದ್ಭ್ಯೋ ಬ್ರಹ್ಮ ಏಕಮೇವಾದ್ವಿತೀಯಮ್, ನೈವ ಚ ಇತಿ ಪ್ರತಿಪತ್ತಿರಸ್ತಿ ।

---

1. ಅರಿವನ್ನುಂಟುಮಾಡುವದೇ ಪ್ರಮಾಣತ್ವಕ್ಕೆ ಗುರುತು; ನಿನ್ನ ವಾಕ್ಯವು ಉಪನಿಷತ್ತು ಪ್ರಮಾಣವಲ್ಲವೆಂಬುದನ್ನು ಬೋಧಿಸಿದರೆ ಉಪನಿಷತ್ತು ಆತ್ಮೈಕ್ಯವನ್ನು ಬೋಧಿಸುವದಿಲ್ಲ ಎನ್ನುವದಕ್ಕೇನು ಕಾರಣ ?- ಎಂದು ಪ್ರಶ್ನೆ. ಸಿದ್ಧಾಂತಿಯು ಪ್ರಮಾಣಗಳು ಒಂದಕ್ಕೊಂದು ವಿರುದ್ಧವಾದರೆ ಹೇಗೆ ?- ಎಂಬುದನ್ನು ಮುಂದೆ ಪರಿಹರಿಸುತ್ತಾನೆ.

2. ಇಲ್ಲಿ ಕಂಸದಲ್ಲಿ ಹಾಕಿರುವಷ್ಟು ಭಾಗವನ್ನು ಸೇರಿಸಿಕೊಳ್ಳಬೇಕಾಗಿದೆ. ಪ್ರತಿಷೇಧಾನುಪಪತ್ತೇಃ ಎಂಬುದಿಲ್ಲದಿದ್ದರೆ ಈ ಕ್ಲೇಶವುಂಟಾಗುವದಿಲ್ಲ.

3. ೧-೪-೭ (ಭಾ.ಭಾ. ೧೪೧)ನ್ನು ನೋಡಿ. ಅನುಭವವೆಂಬ ನಿಶ್ಚಿತವಾದ ಫಲವುಂಟಾದಮೇಲೆ ಪ್ರಾಮಾಣ್ಯದ ವಿಷಯಕ್ಕೆ ಶಂಕೆಯುಂಟಾಗಲು ಕಾರಣವಿಲ್ಲ ಎಂದರ್ಥ.

4. ಇನ್ನುಮುಂದೆ ನೀವು ಹೇಳಿದ ಇತರ ಆಕ್ಷೇಪಗಳಿಗೂ ಪರಿಹಾರವನ್ನು ಹೇಳುತ್ತೇವೆ ಎಂಬುದನ್ನು ಈ ಮಾತು ಸೂಚಿಸುತ್ತದೆ.

5. "ವಿಘಾತಕರತ್ವಾತ್" ಬೇಕಿಲ್ಲ.

ಯಥಾ ಅಗ್ನಿರುಷ್ಣಃ ಶೀತಶ್ಚ ಇತ್ಯಸ್ಮಾತ್ ವಾಕ್ಯಾತ್ ವಿರುದ್ಧಾರ್ಥದ್ವಯ ಪ್ರತಿಪತ್ತಿಃ । ಅಭ್ಯುಪಗಮ್ಯ ಚೈತದವೋಚಾಮ । ನ ತು ವಾಕ್ಯಪ್ರಾಮಾಣ್ಯ ಸಮಯ ಏಷ ನ್ಯಾಯೋ ಯದುತ ಏಕಸ್ಯ ವಾಕ್ಯಸ್ಯ ಅನೇಕಾರ್ಥತ್ವಮ್ । ಸತಿ ಚ ಅನೇಕಾರ್ಥತ್ವೇ ಸ್ವಾರ್ಥಶ್ಚ ಸ್ಯಾತ್ ತದ್ವಿಘಾತಕೃಚ್ಚ ವಿರುದ್ಧೋಽ ನ್ಯೋಽರ್ಥಃ । ನ ತ್ವೇತದ್ವಾಕ್ಯಪ್ರಮಾಣಕಾನಾಂ ವಿರುದ್ಧಮ್ ಅವಿರುದ್ಧಂ ಚೈಕಂ ವಾಕ್ಯಮ್ ಅನೇಕಮರ್ಥಂ ಪ್ರತಿಪಾದಯತಿ ಇತ್ಯೇಷ ಸಮಯಃ । ಅರ್ಥೈಕತ್ವಾದ್ಧಿ ಏಕವಾಕ್ಯತಾ । ನ ಚ ಕಾನಿಚಿದುಪನಿಷದ್ವಾಕ್ಯಾನಿ ಬ್ರಹ್ಮೈ ಕತ್ವಪ್ರತಿಷೇಧಂ ಕುರ್ವನ್ತಿ । ಯತ್ತು ಲೌಕಿಕಂ ವಾಕ್ಯಮ್ ಅಗ್ನಿರುಷ್ಣಃ ಶೀತಶ್ಚ । ಇತಿ ನ ತತ್ರ ಏಕವಾಕ್ಯತಾ । ತದೇಕದೇಶಸ್ಯ ಪ್ರಮಾಣಾನ್ತರ ವಿಷಯಾನುವಾದಿತ್ವಾತ್ । ಅಗ್ನಿಃ ಶೀತ ಇತ್ಯೇತದೇಕಂ ವಾಕ್ಯಮ್ । ಅಗ್ನಿ ರುಷ್ಣಃ ಇತಿ ತು ಪ್ರಮಾಣಾನ್ತರಾನುಭವಸ್ಮಾರಕಮ್, ನ ತು ಸ್ವಯಮರ್ಥಾವ ಬೋಧಕಮ್ । ಅತೋ ನಾಗ್ನಿಃ ಶೀತ ಇತ್ಯನೇನ ಏಕವಾಕ್ಯತಾ । ಪ್ರಮಾ ಣಾನ್ತರಾನುಭವಸ್ಮಾರಣೇನೈವ ಉಪಕ್ಷೀಣತ್ವಾತ್ । ಯತ್ತು ವಿರುದ್ಧಾರ್ಥ ಪ್ರತಿಪಾದಕಮಿದಂ ವಾಕ್ಯಮ್ ಇತಿ ಮನ್ಯತೇ, ತತ್ ಶೀತೋಷ್ಣಪದಾಭ್ಯಾಮ್ ಅಗ್ನಿಪದಸಾಮಾನಾಧಿಕರಣ್ಯಪ್ರಯೋಗನಿಮಿತ್ತಭ್ರಾನ್ತಿರ್ನತ್ವೇವೈಕಸ್ಯ ವಾಕ್ಯಸ್ಯ ಅನೇಕಾರ್ಥತ್ವಂ ಲೌಕಿಕಸ್ಯ ವೈದಿಕಸ್ಯ ವಾ ॥

(ಭಾಷ್ಯಾರ್ಥ)

ಇನ್ನು (ಉಪನಿಷತ್ತುಗಳು) ಸ್ವಾರ್ಥವಿಘಾತಕವಾಗಿರುವದರಿಂದ ಪ್ರಮಾಣ ವಲ್ಲ ಎಂದು (ಪೂರ್ವಪಕ್ಷ ಭಾ. ಭಾ. ೩೧೯ರಲ್ಲಿ) ಹೇಳಿತ್ತಷ್ಟೆ. ಅದೂ ಸರಿಯಲ್ಲ. ಏಕೆಂದರೆ ಅವುಗಳ ಅರ್ಥವನ್ನು ತಿಳಿಯುವದಕ್ಕೆ ಬಾಧಕವಿರುವದಿಲ್ಲ. ಉಪ ನಿಷತ್ತುಗಳಿಂದ ಬ್ರಹ್ಮವು ಒಂದೇ ಅದ್ವಿತೀಯವು, ಹಾಗಿಲ್ಲವೂ ಇಲ್ಲ– ಎಂಬ ಜ್ಞಾನ(ವೇನೂ) ಆಗುವದಿಲ್ಲವಷ್ಟೆ. ಹೇಗೆ ಬೆಂಕಿಯು ಬೆಚ್ಚಗೂ ತಣ್ಣಗೂ ಇದೆ ಎಂಬೀ ವಾಕ್ಯದಿಂದ ವಿರುದ್ಧವಾದ ಎರಡು ಅರ್ಥಗಳ ಜ್ಞಾನವಾಗು ವದೋ (ಹಾಗೇನೂ ಇಲ್ಲಿ ಆಗುವದಿಲ್ಲವಷ್ಟೆ).

(ಉದಾಹರಣೆಯನ್ನು ಸರಿ ಎಂದು) ಒಪ್ಪಿಕೊಂಡು ಇದನ್ನು ಹೇಳಿದೆವು. ಆದರೆ ವಾಕ್ಯಪ್ರಾಮಾಣ್ಯಸಮಯದಲ್ಲಿ[1] ಒಂದು ವಾಕ್ಯಕ್ಕೆ ಅನೇಕಾರ್ಥಗಳಿವೆ ಎಂಬೀ ನ್ಯಾಯವಿರುವದಿಲ್ಲ. (ಒಂದು ವಾಕ್ಯಕ್ಕೆ) ಅನೇಕಾರ್ಥಗಳು ಇದ್ದಿದ್ದರೆ

1. ವಾಕ್ಯವನ್ನು ಪ್ರಮಾಣವೆಂದು ವ್ಯವಹರಿಸುವ ಮೀಮಾಂಸಕರ ಒಪ್ಪಿಗೆಯಂತೆ ಎಂದರ್ಥ. ಎಲ್ಲಿಯವರೆಗೆ ಒಂದೇ ತಾತ್ಪರ್ಯವಿರುವ ಪದಸಮೂಹವಿರುವದೋ ಅಷ್ಟೂ ಆ ವಿಷಯದಲ್ಲಿ ಹೇಳಬೇಕಾಗಿರುವದರಿಂದ ಒಂದು ವಾಕ್ಯವು. ಮತ್ತೊಂದು ಆಕಾಂಕ್ಷೆ ಯುಂಟಾದರೆ ಅದು ಬೇರೆಯ ವಾಕ್ಯವು– ಎಂದು ಅವರ ಮತ.

ಸ್ವಾರ್ಥವೂ ಇದೆ, ಅದನ್ನು ವಿಘಾತಗೊಳಿಸುವ (ಅದಕ್ಕೆ) ವಿರುದ್ಧವಾದ ಮತ್ತೊಂದು ಅರ್ಥವೂ ಇದೆ (ಎನ್ನಬಹುದಾಗಿತ್ತು)[1]. ಆದರೆ ವಾಕ್ಯಪ್ರಮಾಣಕರಾದವರಿಗೆ ವಿರುದ್ಧವೂ ಅವಿರುದ್ಧವೂ ಆಗಿರುವ ಅನೇಕಾರ್ಥಗಳನ್ನು ಒಂದೇ ವಾಕ್ಯವು ತಿಳಿಸುತ್ತದೆ ಎಂಬ ಒಪ್ಪಿಗೆಯಿರುವದಿಲ್ಲ. ಒಂದು ಅರ್ಥವಿರುವದರಿಂದಲೇ ಅಲ್ಲವೆ, ಏಕವಾಕ್ಯತೆಯು ? ಯಾವ ಉಪನಿಷದ್ವಾಕ್ಯಗಳೂ ಬ್ರಹ್ಮೈಕತ್ವವನ್ನು ಅಲ್ಲಗಳೆಯುವದೂ ಇಲ್ಲ[2]. ಇನ್ನು 'ಬೆಂಕಿಯು ಬೆಚ್ಚಗೂ ತಣ್ಣಗೂ ಇದೆ' ಎಂಬ ಲೌಕಿಕವಾಕ್ಯವಿದೆಯಲ್ಲ, ಅಲ್ಲಿ ಏಕವಾಕ್ಯತೆಯೇ ಇಲ್ಲ; ಏಕೆಂದರೆ ಅದರಲ್ಲಿ ಒಂದು ಭಾಗವು ಪ್ರಮಾಣಾಂತರದ ವಿಷಯವನ್ನೇ ಅನುವಾದ ಮಾಡುತ್ತದೆ. (ಇದರ ವಿವರ) : ಬೆಂಕಿಯು ತಣ್ಣಗಿದೆ ಎಂಬಿದು ಒಂದು ವಾಕ್ಯವು[3]; 'ಬೆಂಕಿಯು ಬೆಚ್ಚಗಿದೆ' ಎಂಬುದೋ ಎಂದರೆ (ಅದು) ಪ್ರಮಾಣಾಂತರದಿಂದಾದ ಅನುಭವವನ್ನು ನೆನಪಿಗೆ ತರುತ್ತದೆಯೇ ಹೊರತು ತಾನೇ (ಒಂದು ಹೊಸ) ಅರ್ಥವನ್ನು ತಿಳಿಸಿಕೊಡುತ್ತಿಲ್ಲ. ಆದ್ದರಿಂದ 'ಬೆಂಕಿಯು ತಣ್ಣಗಿದೆ' ಎಂಬ ವಾಕ್ಯದೊಡನೆ ಅದಕ್ಕೆ ಏಕವಾಕ್ಯತೆಯಿಲ್ಲ[4].' ಏಕೆಂದರೆ (ಅದು) ಮತ್ತೊಂದು ಪ್ರಮಾಣದಿಂದಾದ ಅನುಭವವನ್ನು ನೆನಪಿಗೆ ತರುವದರಿಂದಲೇ ಕೊನೆಗಂಡಿದೆ. ಆದರೆ ಈ ವಾಕ್ಯವು ವಿರುದ್ಧಾರ್ಥಗಳನ್ನು ತಿಳಿಸು

---

1. ಉಪನಿಷತ್ತು ಸ್ವಾರ್ಥವಿಘಾತವಾಕ್ಯವು ಎನ್ನುವವರಿಗೆ ವಾಕ್ಯಭೇದವನ್ನು ಕಲ್ಪಿಸಿದ ದೋಷವು ಗಂಟುಬೀಳುತ್ತದೆ ಎಂದು ಭಾವ.

2. ಉಪನಿಷತ್ತೆಲ್ಲ ಬ್ರಹ್ಮೈಕತ್ವವೆಂಬ ಒಂದೇ ಅರ್ಥವನ್ನು ತಾತ್ಪರ್ಯದಿಂದ ತಿಳಿಸುತ್ತದೆ; ಇನ್ನೊಂದರ್ಥವನ್ನು ತಿಳಿಸುವದೇ ಇಲ್ಲ. ಆದ್ದರಿಂದ ಎರಡನೆಯರ್ಥವೇ ಇಲ್ಲದ್ದರಿಂದ ವಿರುದ್ಧಾರ್ಥಕವದು ಎಂಬುದು ಸರಿಯಲ್ಲ ಎಂದರ್ಥ. ಉಪನಿಷತ್ತಿನಲ್ಲಿ ಬಂಧ, ಮೋಕ್ಷ, ಮೋಕ್ಷೋಪದೇಶ- ಮುಂತಾದವುಗಳನ್ನು ತಾತ್ಪರ್ಯದಿಂದ ಹೇಳಿಲ್ಲ; ಬ್ರಹ್ಮೈಕತ್ವವೊಂದನ್ನೇ ಹೇಳುತ್ತವೆ ಎಂಬರ್ಥವು ಇವರಲ್ಲದಗಿದೆ. ಒಂದೊಂದು ಉಪನಿಷತ್ತು ಒಂದೊಂದು ಅರ್ಥವನ್ನು ತಾತ್ಪರ್ಯದಿಂದ ಹೇಳಬಹುದಲ್ಲ ಎಂದು ಕಲ್ಪಿಸುವದಕ್ಕೂ ಬರುವದಿಲ್ಲ; ಏಕೆಂದರೆ ಬ್ರಹ್ಮೈಕತ್ವವು ನಿಜವಾಗಿಲ್ಲ ಎಂದು ಎಲ್ಲಿಯೂ ಹೇಳಿಲ್ಲ; ಬ್ರಹ್ಮೈಕತ್ವವನ್ನೇ ಎಲ್ಲೆಲ್ಲಿಯೂ ಹೇಳಿವೆ. ಆದ್ದರಿಂದಲೂ ಸ್ವಾರ್ಥವಿಘಾತಕತ್ವವಿಲ್ಲ.

3. ಬೆಂಕಿಯು ತಣ್ಣಗಿದೆ ಎಂದರೆ ಅದರ ಬಿಸಿಯು ಕೈಗೆ ತೋರುವದಿಲ್ಲ ಎಂದರ್ಥ. ಚಳಿಗಾಲದ ಅನುಭವದಿಂದ ತಣ್ಣಗೆ ಎಂಬ ಶಬ್ದವನ್ನು ಗೌಣಾರ್ಥದಲ್ಲಿ ಹಿಡಿದು ಪ್ರಯೋಗಿಸಿದ ವಾಕ್ಯವಿದು ಎಂದು ವಾರ್ತಿಕದಲ್ಲಿದೆ. ಅಕ್ಷರಾರ್ಥವನ್ನೇ ತೆಗೆದುಕೊಂಡರೂ ಇದು ಪ್ರಮಾಣಾಂತರವಿರುದ್ಧಾರ್ಥವನ್ನು ತಿಳಿಸುವದರಿಂದ ಅಪ್ರಮಾಣ ಎಂದೂ ಹೇಳಬಹುದು; ಆಗಲೂ ಎರಡು ಪ್ರಮಾಣವಾಕ್ಯಗಳಿಗೆ ವಿರೋಧವನ್ನು ಈ ವಾಕ್ಯದಿಂದ ತಿಳಿಸಿದಂತೆ ಆಗುವದಿಲ್ಲ.

4. ಒಂದು ಅನುವಾದವಾಕ್ಯ, ಒಂದು ಬೋಧಕವಾಕ್ಯ, ಆದ್ದರಿಂದ ಅವೆರಡಕ್ಕೂ ಏಕವಾಕ್ಯತೆಯಿಲ್ಲ.

ತ್ತದೆ ಎಂದು ಬಗೆಯುತ್ತಾರಷ್ಟೆ, ಅವು 'ತಣ್ಣಗೆ', 'ಬೆಚ್ಚಗೆ' ಎಂಬ ಎರಡು ಪದಗಳೊಡನೆ ಬೆಂಕಿ ಎಂಬ ಪದವನ್ನು ಸಮಾನಾಧಿಕರಣವಾಗಿ ಪ್ರಯೋಗಿಸಿದ ನಿಮಿತ್ತದಿಂದ ಆದ ಭ್ರಾಂತಿಯೇ. (ನಿಜವಾಗಿ) ಲೌಕಿಕ(ವಾಕ್ಯವೇ ಆಗಲಿ), ವೈದಿಕ(ವಾಕ್ಯವೇ ಆಗಲಿ), ಒಂದೇ ವಾಕ್ಯಕ್ಕೆ ಅನೇಕಾರ್ಥಗಳು ಇರುವದೇ ಇಲ್ಲ.

## ಉಪನಿಷದ್ವಾಕ್ಯವು ಕರ್ಮಕಾಂಡದ ಪ್ರಾಮಾಣ್ಯಕ್ಕೆ ಬಾಧಕವಲ್ಲ

(ಭಾಷ್ಯ)

೩೨೩. ಯಚ್ಚೋಕ್ತಮ್ ಕರ್ಮಕಾಣ್ಡಪ್ರಾಮಾಣ್ಯವಿಘಾತಕೃತ್ ಉಪನಿಷದ್ವಾಕ್ಯಮಿತಿ । ತನ್ನ । ಅನ್ಯಾರ್ಥತ್ವಾತ್ । ಬ್ರಹ್ಮೈಕತ್ವಪ್ರತಿಪಾದನಪರಾ ಹಿ ಉಪನಿಷದೋ ನೇಷ್ಟಾರ್ಥಪ್ರಾಪ್ತೌ ಸಾಧನೋಪದೇಶಂ ತಸ್ಮಿನ್ ವಾ ಪುರುಷನಿಯೋಗಂ ವಾರಯನ್ತಿ ಅನೇಕಾರ್ಥತ್ವಾನುಪಪತ್ತೇರೇವ । ನ ಚ ಕರ್ಮಕಾಣ್ಡವಾಕ್ಯಾನಾಂ ಸ್ವಾರ್ಥೇ ಪ್ರಮಾ ನೋತ್ಪದ್ಯತೇ । ಅಸಾಧಾರಣೇ ಚೇತ್ ಸ್ವಾರ್ಥೇ ಪ್ರಮಾಮ್ ಉತ್ಪಾದಯತಿ ವಾಕ್ಯಮ್, ಕುತೋಽನ್ಯೇನ ವಿರೋಧಃ ಸ್ಯಾತ್ ? ಬ್ರಹ್ಮೈಕತ್ವೇ ನಿರ್ವಿಷಯತ್ವಾತ್ ಪ್ರಮಾ ನೋತ್ಪದ್ಯತ ಏವೇತಿ ಚೇತ್ । ನ । ಪ್ರತ್ಯಕ್ಷತ್ವಾತ್ ಪ್ರಮಾಯಾಃ । "ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ" (?), "ಬ್ರಾಹ್ಮಣೋ ನ ಹನ್ತವ್ಯಃ" (?) ಇತ್ಯೇವಮಾದಿವಾಕ್ಯೇಭ್ಯಃ ಪ್ರತ್ಯಕ್ಷಾ ಪ್ರಮಾ ಜಾಯಮಾನಾ । ಸಾ ನೈವ ಭವಿಷ್ಯತಿ ಯದ್ಯುಪನಿಷದೋ ಬ್ರಹ್ಮೈಕತ್ವಂ ಬೋಧಯಿಷ್ಯನ್ತಿ ಇತ್ಯನುಮಾನಮ್ । ನ ಚಾನುಮಾನಂ ಪ್ರತ್ಯಕ್ಷವಿರೋಧೇ ಪ್ರಾಮಾಣ್ಯಂ ಲಭತೇ । ತಸ್ಮಾತ್ ಅಸದೇವೈತದ್ ಗೀಯತೇ ಪ್ರಮೈವ ನೋತ್ಪದ್ಯತ ಇತಿ ॥

(ಭಾಷ್ಯಾರ್ಥ)

ಇನ್ನು ಉಪನಿಷದ್ವಾಕ್ಯವು ಕರ್ಮಕಾಂಡದ ಪ್ರಾಮಾಣ್ಯವನ್ನು ಬಾಧಿಸುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ ; ಅದೂ ಸರಿಯಲ್ಲ. ಏಕೆಂದರೆ (ಅದಕ್ಕೆ) ಬೇರೆಯ ಅರ್ಥವಿದೆ. (ಇದರ ವಿವರ): ಉಪನಿಷತ್ತುಗಳು ಬ್ರಹ್ಮೈಕತ್ವವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳವುಗಳೇ ಹೊರತು ಇಷ್ಟಾರ್ಥಪ್ರಾಪ್ತಿಗೆ ಸಾಧನೋಪದೇಶವನ್ನಾಗಲಿ, ಆ (ಸಾಧನದಲ್ಲಿ) ಪುರುಷನನ್ನು ನಿಯೋಜಿಸಿರುವದನ್ನಾಗಲಿ[1] ತಪ್ಪಿಸುವದಿಲ್ಲ. ಏಕೆಂದರೆ (ಒಂದು ವಾಕ್ಯಕ್ಕೆ)

---

1. ವಿಧಿವಾಕ್ಯಗಳು ಪುರುಷಾರ್ಥೋಪಾಯವನ್ನು ಬೋಧಿಸುತ್ತವೆ ಎಂಬುದು ಒಂದು ಮತ, ಪುರುಷನನ್ನು ಆಯಾ ಸಾಧನದಲ್ಲಿ ತೊಡಗಿಸುತ್ತವೆ ಎಂಬುದು ಇನ್ನೊಂದು ಮತ. ಈ ಎರಡು ಪಕ್ಷಗಳನ್ನೂ ಇಲ್ಲಿ ಪರಾಮರ್ಶಿಸಿದೆ.

ಅನೇಕಾರ್ಥವಿರಲಾರದೆಂಬುದೇ (ಇಲ್ಲಿಯೂ ಕಾರಣವಾಗಿರುತ್ತದೆ)[1]. ಕರ್ಮ ಕಾಂಡವಾಕ್ಯಗಳಿಗೆ ತಮ್ಮ ಅರ್ಥದಲ್ಲಿ ಪ್ರಮೆಯುಂಟಾಗುವದಿಲ್ಲವೆಂಬುದೂ ಇಲ್ಲ. ವಾಕ್ಯವು ತನ್ನ ಅಸಾಧಾರಣವಾದ ಅರ್ಥದಲ್ಲಿ ಪ್ರಮೆಯನ್ನು ಉಂಟುಮಾಡುವ ದೆಂದಾದರೆ ಮತ್ತೊಂದರಿಂದ (ಅದಕ್ಕೆ) ವಿರೋಧವು ಏತಕ್ಕೆ ಆದೀತು[2] ?

(ಆಕ್ಷೇಪ) :- ಬ್ರಹ್ಮವೊಂದೇ (ತತ್ತ್ವ)ವಾಗಿರುವಲ್ಲಿ (ಕರ್ಮವಾಕ್ಯಕ್ಕೆ) ವಿಷಯವಿಲ್ಲದಿರುವದರಿಂದ ಪ್ರಮೆಯು ಹುಟ್ಟುವದೇ ಇಲ್ಲವಲ್ಲ[3] !

(ಪರಿಹಾರ) :- ಹಾಗಲ್ಲ. ಏಕೆಂದರೆ ಪ್ರಮೆಯು ಪ್ರತ್ಯಕ್ಷವಾಗಿರುತ್ತದೆ. (ಇದರ ವಿವರ): "ಸ್ವರ್ಗಕಾಮನಾದವನು ದರ್ಶಪೂರ್ಣಮಾಸಗಳಿಂದ ಯಾಗ ಮಾಡಬೇಕು" (?), "ಬ್ರಾಹ್ಮಣನನ್ನು ಕೊಲ್ಲತಕ್ಕದ್ದಲ್ಲ"(?) ಎಂಬಿವೇ ಮುಂತಾದ ವಾಕ್ಯಗಳಿಂದ ಪ್ರಮೆಯುಂಟಾಗುತ್ತಿರುವದು ಪ್ರತ್ಯಕ್ಷವಾಗಿರುತ್ತದೆ. ಉಪನಿಷತ್ತುಗಳು ಬ್ರಹ್ಮೈಕತ್ವವನ್ನು ತಿಳಿಸುವದಾದರೆ ಆ ಪ್ರಮೆಯು ಉಂಟಾಗುವದಿಲ್ಲ ಎಂಬಿದು ಅನುಮಾನವು. ಆದರೆ ಅನುಮಾನವು ಪ್ರತ್ಯಕ್ಷಕ್ಕೆ ವಿರುದ್ಧವಾದರೆ (ಅದಕ್ಕೆ) ಪ್ರಾಮಾಣ್ಯವು ದೊರೆಯುವದಿಲ್ಲ[4]. ಆದ್ದರಿಂದ ಪ್ರಮೆಯೇ ಉಂಟಾಗುವದಿಲ್ಲ ಎಂದು ಹೇಳಿದ್ದಿದು ಸುಳ್ಳೇ.

## ಕರ್ಮವಾಕ್ಯಕ್ಕೆ ಪುರುಷಾರ್ಥೋಪಾಯವನ್ನು ತಿಳಿಸುವದರಲ್ಲಿಯೇ ತಾತ್ಪರ್ಯ

(ಭಾಷ್ಯ)

೩೨೮. ಅಪಿ ಚ ಯಥಾಪ್ರಾಪ್ತಸ್ಯೈವ ಅವಿದ್ಯಾಪ್ರತ್ಯುಪಸ್ಥಾಪಿತಸ್ಯ ಕ್ರಿಯಾಕಾರಕಫಲಸ್ಯ ಆಶ್ರಯಣೇನ ಇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯ

1. ಬ್ರಹ್ಮೈಕತ್ವವನ್ನು ಬೋಧಿಸುವದು, ವಿಧಿವಾಕ್ಯದ ತಾತ್ಪರ್ಯವನ್ನು ಇಲ್ಲವೆನ್ನುವದು –ಎಂಬ ಎರಡರ್ಥಗಳನ್ನು ಒಂದೇ ಉಪನಿಷದ್ವಾಕ್ಯಕ್ಕೆ ಕಲ್ಪಿಸುವದು ಯುಕ್ತವಲ್ಲ ಎಂದು ಅಭಿಪ್ರಾಯ.

2. ಕರ್ಮವಾಕ್ಯವು ತನ್ನ ವಿಷಯವನ್ನು ತಿಳಿಸಿದಮಾತ್ರದಿಂದ ಪ್ರಮಾಣವೆನಿಸುತ್ತದೆ.

3. ಬ್ರಹ್ಮವೊಂದೇ ತತ್ತ್ವವು ಎಂದು ಅರಿತುಕೊಂಡವನಿಗೆ ಕ್ರಿಯಾಕಾರಕಫಲಗಳು ಸತ್ಯವಾಗಿರುವದಿಲ್ಲ ; ಆಗ ಕರ್ಮಕಾಂಡವು ಅಪ್ರಮಾಣವಾಗುವದಿಲ್ಲವೆ ? ಎಂದು ಪೂರ್ವಪಕ್ಷಿಯು ಕೇಳುತ್ತಿದ್ದಾನೆ.

4. ಕರ್ಮಕಾಂಡದ ವಾಕ್ಯವು ಕರ್ಮವನ್ನು ಮಾಡುವವನಿಗಾದ್ದರಿಂದ ಜ್ಞಾನಿಯನ್ನು ಇಲ್ಲಿ ಉದಾಹರಿಸಬೇಕಾಗಿಲ್ಲ. ಕರ್ಮವನ್ನು ಮಾಡಬೇಕೆನ್ನುವವರಿಗೆ ವಿಧಿನಿಷೇಧ ವಾಕ್ಯಗಳು ಮಾಡಬೇಕಾದದ್ದನ್ನೂ ಮಾಡಬಾರದ್ದನ್ನೂ ತಿಳಿಸಿಯೇ ತಿಳಿಸುತ್ತವೆ ; ಅವರಿಗೆ ಈ ಪ್ರಮೆಯು ಪ್ರತ್ಯಕ್ಷ; ಬ್ರಹ್ಮೈಕತ್ವದಿಂದ ಈ ವಾಕ್ಯದ ಪ್ರಾಮಾಣ್ಯವು ಹೋಗುತ್ತದೆ ಎಂಬುದು ಅನುಮಾನಮಾತ್ರಗಮ್ಯವಾದ್ದರಿಂದ ದುರ್ಬಲವಾಗಿದೆ– ಎಂಬುದು ಸಿದ್ಧಾಂತಿಯ ಉತ್ತರ.

ಸಾಮಾನ್ಯೇ ಪ್ರವೃತ್ತಸ್ಯ ತದ್ವಿಶೇಷಮಜಾನತಃ ತದಾಚಕ್ಷಾಣಾ ಶ್ರುತಿಃ ಕ್ರಿಯಾಕಾರಕಫಲಭೇದಸ್ಯ ಲೋಕಪ್ರಸಿದ್ಧಸ್ಯ ಸತ್ಯತಾಮ್ ಅಸತ್ಯತಾಂ ವಾ ನಾಚಷ್ಟೇ ನ ಚ ವಾರಯತಿ। ಇಷ್ಟಾನಿಷ್ಟಫಲಪ್ರಾಪ್ತಿಪರಿಹಾರೋಪಾಯವಿಧಿಪರತ್ವಾತ್। ಯಥಾ ಕಾಮ್ಯೇಷು ಪ್ರವೃತ್ತಾ ಶ್ರುತಿಃ ಕಾಮಾನಾಂ ಮಿಥ್ಯಾಜ್ಞಾನಪ್ರಭವತ್ವೇ ಸತ್ಯಪಿ ಯಥಾಪ್ರಾಪ್ತಾನೇವ ಕಾಮಾನ್ ಉಪಾದಾಯ ತತ್ಸಾಧನಾನ್ಯೇವ ವಿಧತ್ತೇ, ನ ತು ಕಾಮಾನಾಂ ಮಿಥ್ಯಾಜ್ಞಾನಪ್ರಭವತ್ವಂ[1] ಅನರ್ಥರೂಪತ್ವಂ ಚ ಇತಿ ನ ವಿದಧಾತಿ, ತಥಾ ನಿತ್ಯಾಗ್ನಿಹೋತ್ರಾದಿ ಶಾಸ್ತ್ರಮಪಿ ಮಿಥ್ಯಾಜ್ಞಾನಪ್ರಭವಂ ಕ್ರಿಯಾಕಾರಕಭೇದಂ ಯಥಾಪ್ರಾಪ್ತಮೇವ ಆದಾಯ ಇಷ್ಟವಿಶೇಷಪ್ರಾಪ್ತಿಮ್ ಅನಿಷ್ಟವಿಶೇಷಪರಿಹಾರಂ ವಾ ಕಿಮಪಿ ಪ್ರಯೋಜನಂ ಪಶ್ಯತ್ ಅಗ್ನಿಹೋತ್ರಾದೀನಿ ಕರ್ಮಾಣಿ ವಿಧತ್ತೇ ನಾವಿದ್ಯಾಗೋಚರಾಸದ್ವಸ್ತುವಿಷಯಮಿತಿ ನ ಪ್ರವರ್ತತೇ। ಯಥಾ ಕಾಮ್ಯೇಷು[2]। ನ ಚ ಪುರುಷಾ ನ ಪ್ರವರ್ತೇರನ್ ಅವಿದ್ಯಾವನ್ತಃ। ದೃಷ್ಟತ್ವಾತ್, ಯಥಾ ಕಾಮಿನಃ। ವಿದ್ಯಾವತಾಮೇವ ಕರ್ಮಾಧಿಕಾರಃ ಇತಿ ಚೇತ್। ನ। ಬ್ರಹ್ಮೈಕತ್ವವಿದ್ಯಾಯಾಂ ಕರ್ಮಾಧಿಕಾರವಿರೋಧಸ್ಯ ಉಕ್ತತ್ವಾತ್। ಏತೇನ ಬ್ರಹ್ಮೈಕತ್ವೇ ನಿರ್ವಿಷಯತ್ವಾತ್ ಉಪದೇಶೇನ ತದ್ಗ್ರಹಣಫಲಾಭಾವದೋಷಪರಿಹಾರ ಉಕ್ತೋ ವೇದಿತವ್ಯಃ। ಪುರುಷೇಚ್ಛಾರಾಗಾದಿವೈಚಿತ್ರ್ಯಾಚ್ಚ। ಅನೇಕಾ ಹಿ ಪುರುಷಾಣಾಮ್ ಇಚ್ಛಾ। ರಾಗಾದಯಶ್ಚ ದೋಷಾ ವಿಚಿತ್ರಾಃ। ತತಶ್ಚ ಬಾಹ್ಯವಿಷಯರಾಗಾದ್ಯಪಹೃತಚೇತಸೋ ನ ಶಾಸ್ತ್ರಂ ನಿವರ್ತಯಿತುಂ ಶಕ್ತಮ್। ನಾಪಿ ಸ್ವಭಾವತೋ ಬಾಹ್ಯವಿಷಯವಿರಕ್ತಚೇತಸೋ ವಿಷಯೇಷು ಪ್ರವರ್ತಯಿತುಂ ಶಕ್ತಮ್। ಕಿಂ ತು ಶಾಸ್ತ್ರಾತ್ ಏತಾವದೇವ ಭವತಿ ಇಷ್ಟಸಾಧನಮಿದಮ್, ಅನಿಷ್ಟಸಾಧನಮಿದಮ್ ಇತಿ ಸಾಧ್ಯಸಾಧನಸಂಬನ್ಧವಿಶೇಷಾಭಿವ್ಯಕ್ತಿಃ। ಪ್ರದೀಪಾದಿವತ್ ತಮಸಿ ರೂಪಾದಿಜ್ಞಾನಮ್। ನ ತು ಶಾಸ್ತ್ರಂ ಭೃತ್ಯಾನಿವ ಬಲಾತ್ ನಿವರ್ತಯತಿ ನಿಯೋಜಯತಿ ವಾ। ದೃಶ್ಯನ್ತೇ ಹಿ ಪುರುಷಾ ರಾಗಾದಿಗೌರವಾತ್ ಶಾಸ್ತ್ರಮಪಿ ಅತಿಕ್ರಾಮನ್ತಃ। ತಸ್ಮಾತ್ ಪುರುಷಮತಿವೈಚಿತ್ರ್ಯಮ್ ಅಪೇಕ್ಷ್ಯ ಸಾಧ್ಯಸಾಧನಸಂಬನ್ಧವಿಶೇಷಾನ್ ಅನೇಕಧಾ ಉಪದಿಶತಿ। ತತ್ರ ಪುರುಷಾಃ ಸ್ವಯಮೇವ ಯಥಾರುಚಿ ಸಾಧನವಿಶೇಷೇಷು ಪ್ರವರ್ತನ್ತೇ। ಶಾಸ್ತ್ರಂ ತು ಸವಿತೃಪ್ರದೀಪಾದಿವತ್ ಉದಾಸ್ತ ಏವ। ತಥಾ ಕಸ್ಯಚಿತ್ ಪರೋಽಪಿ ಪುರುಷಾರ್ಥೋಽಪುರುಷಾರ್ಥವತ್ ಅವಭಾಸತೇ।

---

1. ಅನ್ವಯಕ್ಕೋಸ್ಕರ ಹೀಗೆ ತಿದ್ದಿಕೊಂಡಿದೆ. 'ಮಿಥ್ಯಾಜ್ಞಾನಪ್ರಭವತ್ವಾತ್ ಅನರ್ಥರೂಪತ್ವಮಿತಿ' ಎಂದಿದ್ದರೂ ಅನ್ವಯವಾಗುತ್ತದೆ. 'ಮಿಥ್ಯಾಜ್ಞಾನಪ್ರಭವತ್ವಾತ್ ಅನರ್ಥರೂಪತ್ವಾಚ್ಚ ನ ವಿದಧಾತಿ' ಎಂದೂ ಇರಬಹುದು.

2. ಈ ಮಾತು ಇಲ್ಲದಿದ್ದರೂ ಆಗಿತ್ತು; ಟಿಪ್ಪಣಿಯನ್ನು ನೋಡಿ.

ಯಸ್ಯ ಯಥಾ ಅವಭಾಸಃ ಸ ತಥಾರೂಪಂ ಪುರುಷಾರ್ಥಂ ಪಶ್ಯತಿ ತದನುರೂಪಾಣಿ ಸಾಧನಾನಿ ಉಪಾದಿತ್ಸತೇ। ತಥಾ ಚ ಅರ್ಥವಾದೋಽಪಿ "ತ್ರಯಾಃ ಪ್ರಾಜಾಪತ್ಯಾಃ ಪ್ರಜಾಪತೌ ಪಿತರಿ ಬ್ರಹ್ಮಚರ್ಯಮೂಷುಃ" (೫-೨-೧) ಇತ್ಯಾದಿಃ। ತಸ್ಮಾತ್ ನ ಬ್ರಹ್ಮೈಕತ್ವಂ ಜ್ಞಾಪಯಿಷ್ಯನ್ತೋ ವೇದಾನ್ತಾ ವಿಧಿಶಾಸ್ತ್ರಸ್ಯ ಬಾಧಕಾಃ ॥

(ಭಾಷ್ಯಾರ್ಥ)

ಇದಲ್ಲದೆ **ಅವಿದ್ಯೆಯು ತಂದು ಮುಂದೊಡ್ಡಿರುವ ಕ್ರಿಯಾಕಾರಕ ಫಲವನ್ನು ಹೇಗೆ ಒದಗಿದೆಯೋ ಹಾಗೆಯೇ ಆಶ್ರಯಿಸಿಕೊಂಡು[1] ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಗಳಿಗೆ ಉಪಾಯಸಾಮಾನ್ಯವನ್ನು (ಕೈಕೊಳ್ಳುವದ)ರಲ್ಲಿ ಮುಂದುವರಿಯುತ್ತಾ ಆ ಉಪಾಯವು ಇಂಥದ್ದೆಂದು (ಗೊತ್ತಾಗಿ) ತಿಳಿಯದೆ ಇರುವವನಿಗೆ[2] ಅದನ್ನು ಶ್ರುತಿಯು ಹೇಳಿಕೊಡುತ್ತದೆಯಾದ್ದರಿಂದ ಲೋಕಪ್ರಸಿದ್ಧವಾದ[3] ಕ್ರಿಯಾಕಾರಕಫಲಭೇದವು ಸತ್ಯವೆಂದಾಗಲಿ ಅಸತ್ಯವೆಂದಾಗಲಿ ಹೇಳುವದಿಲ್ಲ, ಅಲ್ಲಗಳೆಯುವದೂ ಇಲ್ಲ; ಏಕೆಂದರೆ (ಆ ವಾಕ್ಯಕ್ಕೆ) ಇಷ್ಟಾನಿಷ್ಟಫಲಗಳ ಪ್ರಾಪ್ತಿಪರಿಹಾರಗಳಿಗೆ ಉಪಾಯವನ್ನು ವಿಧಿಸುವದರಲ್ಲಿಯೇ ತಾತ್ಪರ್ಯವಿರುತ್ತದೆ.[4]** ಹೇಗೆ ಕಾಮ್ಯಕರ್ಮಗಳನ್ನು (ತಿಳಿಸುವದಕ್ಕೆ) ಬಂದಿರುವ ಶ್ರುತಿಯು ಕಾಮಗಳು ಮಿಥ್ಯಾಜ್ಞಾನದಿಂದ ಉಂಟಾಗುವವಾದರೂ ಕಾಮಗಳು ಹೇಗೆ ಬಂದೊದಗಿರುತ್ತವೆಯೋ ಹಾಗೆಯೇ ಇಟ್ಟುಕೊಂಡು ಅವುಗಳಿಗೆ ಸಾಧನಗಳನ್ನು ಮಾತ್ರ ಹೇಳುತ್ತದೆಯೋ, ಆದರೆ ಕಾಮಗಳು ಮಿಥ್ಯಾಜ್ಞಾನದಿಂದುಂಟಾಗಿವೆ, ಅನರ್ಥರೂಪವಾಗಿಯೂ ಇವೆ ಎಂದು (ಆ ಸಾಧನಗಳನ್ನು) ವಿಧಿಸದೆ ಬಿಡುವದಿಲ್ಲವೋ, ಹಾಗೆ ನಿತ್ಯಾಗ್ನಿಹೋತ್ರವೇ ಮುಂತಾದವುಗಳನ್ನು (ವಿಧಿಸುವ) ಶಾಸ್ತ್ರವು ಕೂಡ ಮಿಥ್ಯಾಜ್ಞಾನದಿಂದುಂಟಾದ ಕ್ರಿಯಾಕಾರಕಭೇದವನ್ನು ಹೇಗೆ ಬಂದೊದಗಿದೆಯೋ ಹಾಗೆಯೇ ಇಟ್ಟುಕೊಂಡು ಆಯಾ ಇಷ್ಟದ ಪ್ರಾಪ್ತಿಯನ್ನೋ ಆಯಾ ಅನಿಷ್ಟದ ಪರಿಹಾರವನ್ನೋ, ಯಾವದೋ ಒಂದು ಪ್ರಯೋಜನವನ್ನು ಕಂಡು ಅಗ್ನಿಹೋತ್ರವೇ ಮುಂತಾದ

---

1. ಬರಿಯ ತೋರಿಕೆಯವಾಗಿದ್ದರೂ ಅವನ್ನು ಹಾಗೆಯೇ ಇಟ್ಟುಕೊಂಡು ಎಂದರ್ಥ.

2. ಇಷ್ಟವಾಗಬೇಕು, ಅನಿಷ್ಟವಾಗಬಾರದು– ಎಂದು ಅದಕ್ಕೆ ಉಪಾಯವನ್ನು ಹುಡುಕುತ್ತಿರುವವನಾಗಿ ಆ ಉಪಾಯವು ಯಾವದೆಂಬುದನ್ನು ಅರಿಯದಿರುವವನಿಗೆ ಎಂದರ್ಥ.

3. ಲೋಕದಲ್ಲಿರುವ ಸಾಮಾನ್ಯಜನರಿಗೆ ಸತ್ಯವೆಂದು ತೋರುವ.

4. ವಿಧಿಪ್ರತಿಷೇಧಶಾಸ್ತ್ರಕ್ಕೆ ಸಾಧ್ಯಸಾಧನಗಳ ಸಂಬಂಧವನ್ನು ತಿಳಿಸುವದರಲ್ಲಿ ಮಾತ್ರ ತಾತ್ಪರ್ಯವಿರುತ್ತದೆ. ತೈ. ಭಾ. ೧-೧೧, ಭಾ. ಭಾ. ೭೯.

ಕರ್ಮಗಳನ್ನು ವಿಧಿಸುತ್ತದೆ. '(ಇದು) ಅವಿದ್ಯಾಗೋಚರವಾದ ಅಸದ್ವಸ್ತು ವಿಷಯವಾದದ್ದು ಎಂದು (ವಿಧಿಸುವದರಲ್ಲಿ) ತೊಡಗದೆ ಬಿಡುವದಿಲ್ಲ; ಕಾಮ್ಯ ಕರ್ಮಗಳನ್ನು (ವಿಧಿಸುವದರಲ್ಲಿ) ಹೇಗೆ (ತೊಡಗದೆಇರುವದಿಲ್ಲವೋ) ಹಾಗೆಯೇ (ಇದು).[1] ಅವಿದ್ಯಾವಂತರಾದ ಪುರುಷರು (ನಿತ್ಯಕರ್ಮಗಳಲ್ಲಿ) ತೊಡಗುವದಿಲ್ಲ ವೆಂಬುದೂ ಇಲ್ಲ; ಏಕೆಂದರೆ ಕಾಮಿಗಳು (ಕಾಮ್ಯಕರ್ಮಗಳಲ್ಲಿ ತೊಡಗು) ವಂತೆಯೇ (ಅವರು ತೊಡಗುವದು) ಕಂಡುಬಂದಿದೆ.[2]

(ಆಕ್ಷೇಪ) :– ವಿದ್ಯಾವಂತರಿಗೇ ಕರ್ಮಗಳಲ್ಲಿ ಅಧಿಕಾರವಲ್ಲವೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ ಬ್ರಹ್ಮೈಕತ್ವವಿದ್ಯೆಯುಂಟಾದರೆ ಕರ್ಮಾಧಿಕಾರಕ್ಕೆ ವಿರೋಧವಾಗುತ್ತದೆ ಎಂದು (ಭಾ.ಭಾ.೫೬) ಹೇಳಿದ್ದಾಗಿದೆ. ಇದರಿಂದ ಬ್ರಹ್ಮವೊಂದೇ (ತತ್ತ್ವವೆಂಬ ಪಕ್ಷದಲ್ಲಿ) ವಿಷಯವೇ ಇಲ್ಲದ್ದರಿಂದ ಉಪದೇಶ, ಅದನ್ನು ಗ್ರಹಿಸುವದೆಂಬ ಫಲ– ಇವುಗಳು ಇರುವದಿಲ್ಲ ಎಂಬ (ಭಾ.ಭಾ. ೩೧೯) ದೋಷಕ್ಕೂ ಪರಿಹಾರವನ್ನು ಹೇಳಿದಂತಾಯಿತೆಂದು ತಿಳಿಯಬೇಕು.

ಪುರುಷರ ಇಚ್ಛೆ, ರಾಗಾದಿಗಳ ವೈಚಿತ್ರ್ಯ– ಇವುಗಳಿಂದಲೂ (ಶಾಸ್ತ್ರೀಯ ಪ್ರವೃತ್ತಿಯುಂಟಾಗಬಹುದಾಗಿದೆ. (ಇದರ ವಿವರ): ಪುರುಷರ ಇಚ್ಛೆಯು ಅನೇಕವಾಗಿರುತ್ತದೆ, ರಾಗಾದಿದೋಷಗಳೂ ಬಗೆಬಗೆಯಾಗಿರುತ್ತವೆಯಲ್ಲವೆ ? ಆದರಿಂದ ಹೊರಗಿನ ವಿಷಯಗಳಲ್ಲಿ ರಾಗಾದಿಗಳು (ಯಾರ) ಚಿತ್ತ ವನ್ನು ಸೆಳೆಯುವವೋ (ಅವರನ್ನು) ಶಾಸ್ತ್ರವು ಹಿಮ್ಮೆಟ್ಟಿಸಲಾರದು ; ಸ್ವಭಾವದಿಂದ ಹೊರಗಿನ ವಿಷಯಗಳಲ್ಲಿ ವಿರಕ್ತವಾಗಿರುವ ಚಿತ್ತ ವುಳ್ಳವರನ್ನು ವಿಷಯಗಳಲ್ಲಿ ತೊಡಗಿಸಲೂ ಆರದು. ಮತ್ತೇನೆಂದರೆ ಶಾಸ್ತ್ರದಿಂದ ಇಷ್ಟುಮಾತ್ರ ಆಗುತ್ತದೆ, 'ಇದು ಇಷ್ಟಕ್ಕೆ ಸಾಧನವು, ಇದು ಅನಿಷ್ಟಕ್ಕೆ ಸಾಧನವು' ಎಂದು ಸಾಧ್ಯಸಾಧನಗಳ ಆಯಾ ಸಂಬಂಧದ ಅರಿವು, ಕತ್ತಲೆಯಲ್ಲಿ ಪ್ರದೀಪಾದಿಗಳಿಂದ ರೂಪಾದಿಗಳ ಜ್ಞಾನವು ಹೇಗೆ ಆಗುವದೋ ಹಾಗೆ, (ಆಗಬಹುದು.) ಇಷ್ಟೇ ಹೊರತು ಶಾಸ್ತ್ರವು ಸಂಬಳದಾಳುಗಳನ್ನು (ದಣಿಯು ಕೆಲಸದಿಂದ ತಪ್ಪಿಸುವಂತೆ

1. ಯಥಾ ಕಾಮ್ಯೇಷು ಎಂಬುದು ಇಲ್ಲದಿದ್ದರೂ ಆಗುತ್ತದೆ ; ಉಪಕ್ರಮದಲ್ಲಿರುವ ಈ ಮಾತುಗಳು ಬಲುದೂರದಲ್ಲಿವೆಯೆಂದು ಅನ್ವಯವನ್ನು ಸ್ಪಷ್ಟಗೊಳಿಸುವದಕ್ಕಾಗಿ ಮತ್ತೆ ಬರೆದುಕೊಂಡಂತೆ ಕಾಣುತ್ತದೆ.

2. ಕಾಮಿಗಳಲ್ಲದವರು ತೊಡಗದಿದ್ದರೂ ಕಾಮಿಗಳು ಕಾಮ್ಯಕರ್ಮಗಳಲ್ಲಿ ತೊಡಗುವಂತೆ ಏಕತ್ವವನ್ನರಿತವರು ತೊಡಗದಿದ್ದರೂ ಕರ್ಮಿಗಳು ನಿತ್ಯಕರ್ಮಗಳಲ್ಲಿ ತೊಡಗಬಹುದಾಗಿದೆ ಎಂದು ಅಭಿಪ್ರಾಯ.

**ಅಥವಾ ಕೆಲಸವನ್ನು ಮಾಡಿಸುವಂತೆ) ಬಲಾತ್ಕಾರದಿಂದ (ಕರ್ಮದಿಂದ) ಹಿಂತಿರುಗಿಸುವದೂ ಇಲ್ಲ, (ಕರ್ಮದಲ್ಲಿ) ನಿಯೋಜಿಸುವದೂ ಇಲ್ಲ.**[1] ರಾಗಾದಿಗಳು ಬಲವಾದರೆ ಶಾಸ್ತ್ರವನ್ನು ಕೂಡ ಮೀರುವ ಪುರುಷರೂ ಕಾಣಬರುತ್ತಾರಷ್ಟೆ. ಆದ್ದರಿಂದ ಪುರುಷರ ಮತಿವೈಚಿತ್ರ್ಯದ ಅಪೇಕ್ಷೆಯಿಂದ **ಸಾಧ್ಯಸಾಧನಗಳಿರುವ ಆಯಾ ಸಂಬಂಧಗಳನ್ನು (ಶಾಸ್ತ್ರವು) ಅನೇಕ ಪ್ರಕಾರವಾಗಿ ಉಪದೇಶಿಸುತ್ತದೆ.**[2] **ಅವುಗಳೊಳಗೆ ಪುರುಷರು ತಾವೇ (ಅವರವರ) ಅಭಿರುಚಿಯಂತೆ ಆಯಾ ಸಾಧನಗಳಲ್ಲಿ ತೊಡಗುತ್ತಾರೆ. ಶಾಸ್ತ್ರವಾದರೋ ಸೂರ್ಯ, ದೀಪ- ಮುಂತಾದವುಗಳಂತೆ ಉದಾಸೀನವಾಗಿಯೇ ಇರುತ್ತದೆ.**[3] ಹೀಗೆಯೇ ಒಬ್ಬೊಬ್ಬನಿಗೆ ಪರಮಪುರುಷಾರ್ಥವೂ ಪುರುಷಾರ್ಥವಲ್ಲವೆಂದೇ ತೋರುತ್ತದೆ.[4] ಯಾವನಿಗೆ ಹೇಗೆ ತೋರುತ್ತದೆಯೋ ಅವನು ಅಂಥದ್ದನ್ನು ಪುರುಷಾರ್ಥವೆಂದು ತಿಳಿಯುತ್ತಾನೆ; ಅದಕ್ಕನುಗುಣವಾದ ಸಾಧನಗಳನ್ನು ಕೈಕೊಳ್ಳುವದಕ್ಕೆ ಹೋಗುತ್ತಾನೆ. ಹಾಗೆಂದು "ಪ್ರಜಾಪತಿಯ ಮಕ್ಕಳಾದ ಮೂರು ಬಗೆಯ (ಪ್ರಜೆಗಳು) ತಂದೆಯಾದ ಪ್ರಜಾಪತಿಯಲ್ಲಿ ಬ್ರಹ್ಮಚರ್ಯವನ್ನು ಮಾಡಿಕೊಂಡಿದ್ದರು" (೫-೨-೧) ಎಂದು ಮುಂತಾಗಿರುವ ಅರ್ಥವಾದವೂ ಹೇಳುತ್ತದೆ. ಆದ್ದರಿಂದ ಬ್ರಹ್ಮೈಕತ್ವವನ್ನು ತಿಳಿಸಿಕೊಡುವ ವೇದಾಂತಗಳು ವಿಧಿಶಾಸ್ತ್ರವನ್ನು ಬಾಧಿಸುವದಿಲ್ಲ.[5]

## ಪ್ರಮಾಣಗಳಿಗೆ ಪರಸ್ಪರವಿರೋಧವೆಂಬುದೇ ಇಲ್ಲ

(ಭಾಷ್ಯ)

೩೨೫. ನ ಚ ವಿಧಿಶಾಸ್ತ್ರಮ್ ಏತಾವತಾ ನಿರ್ವಿಷಯಂ ಸ್ಯಾತ್ । ನಾಪ್ಯುಕ್ತಕಾರಕಾದಿಭೇದಂ ವಿಧಿಶಾಸ್ತ್ರಮ್ ಉಪನಿಷದಾಂ ಬ್ರಹ್ಮೈಕತ್ವಂ ಪ್ರತಿ ಪ್ರಾಮಾಣ್ಯಂ ನಿವರ್ತಯತಿ । ಸ್ವವಿಷಯಶೂರಾಣಿ ಹಿ ಪ್ರಮಾಣಾನಿ

---

1. ಶಾಸ್ತ್ರವು ಸ್ವತಃ ಪ್ರವರ್ತಕವೂ ಅಲ್ಲ, ನಿವರ್ತಕವೂ ಅಲ್ಲ. ಪ್ರವೃತ್ತಿನಿವೃತ್ತಿಗಳಿಗೆ ಮನಸ್ಸಿನ ಸ್ಥಿತಿಯೇ ಕಾರಣ.

2. ಆದರೆ ಅವುಗಳನ್ನು ಮಾಡಿಯೇತೀರಬೇಕು ಎಂಬ ಆಗ್ರಹವೇನೂ ಅದಕ್ಕೆ ಇಲ್ಲ.

3. ಸೂರ್ಯಾದಿಗಳ ಬೆಳಕಿನಲ್ಲಿ ಜನರು ತಮ್ಮತಮ್ಮ ಇಚ್ಛೆಯಂತೆ ವ್ಯವಹಾರವನ್ನು ಮಾಡುವರು ಅಥವಾ ಬಿಡುವರು; ಬೆಳಕು ಅವರಿಗೆ ಆ ವ್ಯವಹಾರಕ್ಕೆ ಅನುಕೂಲವಾಗಿದ್ದರೂ ಮಾಡಲೇಬೇಕೆಂದು ಅಥವಾ ಬಿಡಲೇಬೇಕೆಂದೇನೂ ಬಲಾತ್ಕರಿಸುವದಿಲ್ಲ. ಸಾಧನಗಳನ್ನುಪದೇಶಿಸುವ ಶಾಸ್ತ್ರವೂ ಹೀಗೆಯೇ ಎಂದು ಅಭಿಪ್ರಾಯ.

4. ಆದ್ದರಿಂದ ಅವನು ಮೋಕ್ಷಕ್ಕಾಗಿ ಪ್ರಯತ್ನಿಸದೆ ಕರ್ಮವನ್ನೇ ಮಾಡುವದಕ್ಕೆ ಪ್ರಯತ್ನಿಸುತ್ತಾನೆ.

5. ಏಕೆಂದರೆ ಅವುಗಳು ಭಿನ್ನಭಿನ್ನರಾದ ಅಧಿಕಾರಿಗಳ ವಿಷಯವಾಗಿರುತ್ತವೆ.

ಶ್ರೋತ್ರಾದಿವತ್। ತತ್ರ ಪಣ್ಡಿತಂಮನ್ಯಾಃ ಕೇಚಿತ್ಸ್ವಚಿತ್ತವಶಾತ್ ಸರ್ವಂ ಪ್ರಮಾಣಮ್ ಇತರೇತರವಿರುದ್ಧಂ ಮನ್ಯನ್ತೇ। ತಥಾ ಪ್ರತ್ಯಕ್ಷಾದಿವಿರೋಧಮಪಿ ಚೋದಯನ್ತಿ ಬ್ರಹ್ಮೈಕತ್ವೇ। ಶಬ್ದಾದಯಃ ಕಿಲ ಶ್ರೋತ್ರಾದಿವಿಷಯಾ ಭಿನ್ನಾಃ ಪ್ರತ್ಯಕ್ಷತ ಉಪಲಭ್ಯನ್ತೇ। ಬ್ರಹ್ಮೈಕತ್ವಂ ಬ್ರುವತಾಂ ಪ್ರತ್ಯಕ್ಷವಿರೋಧಃ ಸ್ಯಾತ್। ತಥಾ ಶ್ರೋತ್ರಾದಿಭಿಃ ಶಬ್ದಾದ್ಯುಪಲಬ್ಧಾರಃ ಕರ್ತಾರಶ್ಚ ಧರ್ಮಾಧರ್ಮಯೋಃ ಪ್ರತಿಶರೀರಮ್ ಭಿನ್ನಾ ಅನುಮೀಯನ್ತೇ ಸಂಸಾರಿಣಃ। ತತ್ರ ಬ್ರಹ್ಮೈಕತ್ವಂ ಬ್ರುವತಾಮ್ ಅನುಮಾನವಿರೋಧಶ್ಚ। ತಥಾ ಚ ಆಗಮವಿರೋಧಂ ವದನ್ತಿ। 'ಗ್ರಾಮಕಾಮೋ ಯಜೇತ' (ತೈ.ಸಂ. ೧೭-೧೦-೪), "ಪಶುಕಾಮೋ ಯಜೇತ" (ತೈ. ಸಂ. ೧೬-೧೨-೮), "ಸ್ವರ್ಗಕಾಮೋ ಯಜೇತ" (ತೈ. ಸಂ. ೧೬-೩-೩) ಇತ್ಯೇವಮಾದಿವಾಕ್ಯೇಭ್ಯೋ ಗ್ರಾಮಪಶುಸ್ವರ್ಗಾದಿಕಾಮಾಃ ತತ್ಸಾಧನಾದ್ಯನುಷ್ಠಾತಾರಶ್ಚ ಭಿನ್ನಾ ಅವಗಮ್ಯನ್ತೇ। ಅತ್ರೋಚ್ಯತೇ। ತೇ ತು ಕುತರ್ಕದೂಷಿತಾನ್ತಃಕರಣಾ ಬ್ರಾಹ್ಮಣಾದಿವರ್ಣಾಪಸದಾ ಅನುಕಮ್ಪನೀಯಾಃ ಆಗಮಾರ್ಥವಿಚ್ಛಿನ್ನಸಂಪ್ರದಾಯಬುದ್ಧಯಃ ಇತಿ। ಕಥಮ್ ? ಶ್ರೋತ್ರಾದಿದ್ವಾರೈಃ ಶಬ್ದಾದಿಭಿಃ ಪ್ರತ್ಯಕ್ಷತಃ ಉಪಲಭ್ಯಮಾನೈಃ ಬ್ರಹ್ಮಣ ಏಕತ್ವಂ ವಿರುಧ್ಯತ ಇತಿ ವದನ್ತೋ ವಕ್ತವ್ಯಾಃ– ಕಿಂ ಶಬ್ದಾದಿನಾಂ ಭೇದೇನ ಆಕಾಶೈಕತ್ವಂ ವಿರುಧ್ಯತ ಇತಿ। ಅಥ ನ ವಿರುಧ್ಯತೇ ನ ತರ್ಹಿ ಪ್ರತ್ಯಕ್ಷವಿರೋಧಃ। ಯಚ್ಚೋಕ್ತಂ ಪ್ರತಿಶರೀರಂ ಶಬ್ದಾದ್ಯುಪಲಬ್ಧಾರೋ ಧರ್ಮಾಧರ್ಮಯೋಶ್ಚ ಕರ್ತಾರೋ ಭಿನ್ನಾ ಅನುಮೀಯನ್ತೇ ತಥಾ ಚ ಬ್ರಹ್ಮೈಕತ್ವೇಽನುಮಾನವಿರೋಧ ಇತಿ। ಭಿನ್ನಾಃ ಕೈರನುಮೀಯನ್ತ ಇತಿ ಪ್ರಷ್ಟವ್ಯಾಃ। ಅಥ ಯದಿ ಬ್ರೂಯುಃ ಸರ್ವೈರಸ್ಮಾಭಿರನುಮಾನಕುಶಲೈರಿತಿ। ಕೇ ಯೂಯಮನುಮಾನಕುಶಲಾ ಇತ್ಯೇವಂ ಪೃಷ್ಟಾನಾಂ ಕಿಮುತ್ತರಮ್ ? ಶರೀರೇನ್ದ್ರಿಯಮನಆತ್ಮಸು ಚ ಪ್ರತ್ಯೇಕಮ್ ಅನುಮಾನಕೌಶಲಪ್ರತ್ಯಾಖ್ಯಾನೇ ಶರೀರೇನ್ದ್ರಿಯಮನಃಸಾಧನಾ ಆತ್ಮಾನೋ ವಯಮನುಮಾನಕುಶಲಾಃ, ಅನೇಕಕಾರಕಸಾಧ್ಯತ್ವಾತ್ ಕ್ರಿಯಾಣಾಮ್ ಇತಿ ಚೇತ್। ಏವಂ ತರ್ಹಿ ಅನುಮಾನಕೌಶಲೇ ಭವತಾಮ್ ಅನೇಕತ್ವಪ್ರಸಙ್ಗಃ। ಅನೇಕಕಾರಕಸಾಧ್ಯಾ ಹಿ ಕ್ರಿಯಾ ಇತಿ ಭವದ್ಭಿರೇವ ಅಭ್ಯುಪಗತಮ್। ತತ್ರ ಅನುಮಾನಂ ಚ ಕ್ರಿಯಾ। ಸಾ ಶರೀರೇನ್ದ್ರಿಯಮನಃಸಾಧನೈಃ[1] ಕಾರಕೈಃ ಆತ್ಮಕರ್ತೃಕಾ ನಿರ್ವರ್ತ್ಯತ ಇತ್ಯೇತತ್ ಪ್ರತಿಜ್ಞಾತಮ್। ತತ್ರ ವಯಮ್ ಅನುಮಾನಕುಶಲಾಃ ಇತ್ಯೇವಂ ವದದ್ಭಿಃ ಶರೀರೇನ್ದ್ರಿಯಮನಃಸಾಧನಾ

1. 'ಆತ್ಮಸಾಧನೈಃ' ಎಂಬ ಪಾಠದಲ್ಲಿ ಆತ್ಮ ಎಂಬುದು ಹೆಚ್ಚು; ಏಕೆಂದರೆ ಪೂರ್ವಪಕ್ಷಿಯು ಆತ್ಮನು ಕರ್ತೃವೆಂದೂ ಮನಸ್ಸಿನವರೆಗಿರುವವು ಸಾಧನಗಳೆಂದೂ ಹೇಳಿರುತ್ತಾನೆ, ಆತ್ಮನೂ ಸಾಧನವೆಂದೇನೂ ಹೇಳಿಲ್ಲ.

ಆತ್ಮಾನಃ ಪ್ರತ್ಯೇಕಂ ವಯಮನೇಕೇ ಇತ್ಯಭ್ಯುಪಗತಂ ಸ್ಯಾತ್ । ಅಹೋ ಅನುಮಾನಕೌಶಲಂ ದರ್ಶಿತಮಪುಚ್ಛಶೃಙ್ಗೈಸ್ತಾರ್ಕಿಕಬಲೀವರ್ದೈಃ । ಯೋ ಹಿ ಆತ್ಮಾನಮೇವ ನ ಜಾನಾತಿ ಸ ಕಥಂ ಮೂಢಃ ತದ್ಗತಂ ಭೇದಮ್ ಅಭೇದಂ ವಾ ಜಾನೀಯಾತ್? ತತ್ರ ಕಿಮನುಮಿನೋತಿ? ಕೇನ ವಾ ಲಿಙ್ಗೇನ? ನ ಹಿ ಆತ್ಮನಃ ಸ್ವತೋ ಭೇದಪ್ರತಿಪಾದಕಂ ಕಿಂಚಿತ್ ಲಿಙ್ಗಮಸ್ತಿ ಯೇನ ಲಿಙ್ಗೇನ ಆತ್ಮಭೇದಂ ಸಾಧಯೇತ್ । ಯಾನಿ ಲಿಙ್ಗಾನಿ ಆತ್ಮಭೇದಸಾಧನಾಯ ನಾಮರೂಪವನ್ತಿ ಉಪನ್ಯಸ್ಯನ್ತಿ ತಾನಿ ನಾಮರೂಪಗತಾನಿ ಉಪಾಧಯ ಏವಾತ್ಮನಃ ಘಟಕರಕಾಪವರಕಭೂಚ್ಛಿದ್ರಾಣೀವ ಆಕಾಶಸ್ಯ । ಯದಾ ಆಕಾಶಸ್ಯ ಭೇದಲಿಙ್ಗಂ ಪಶ್ಯತಿ ತದಾ ಆತ್ಮನೋಽಪಿ ಭೇದಲಿಙ್ಗಂ ಲಭೇತ ಸಃ । ನ ಹಿ ಆತ್ಮನಃ ಪರತೋ ವಿಶೇಷಮ್ ಅಭ್ಯುಪಗಚ್ಛದ್ಭಿಃ ತಾರ್ಕಿಕಶತೈರಪಿ ಭೇದಲಿಙ್ಗಮ್ ಆತ್ಮನೋ ದರ್ಶಯಿತುಂ ಶಕ್ಯತೇ । ಸ್ವತಸ್ತು ದೂರಾದಪನೀತಮೇವ । ಅವಿಷಯತ್ವಾತ್ ಆತ್ಮನಃ । ಯದ್ಯತ್ ಪರಃ ಆತ್ಮಧರ್ಮತ್ವೇನ ಅಭ್ಯುಪಗಚ್ಛತಿ ತಸ್ಯ ತಸ್ಯ ನಾಮರೂಪಾತ್ಮಕತ್ವಾಭ್ಯುಪಗಮಾತ್ ನಾಮರೂಪಾಭ್ಯಾಂ ಚ ಆತ್ಮನೋಽನ್ಯತ್ವಾಭ್ಯುಪಗಮಾತ್ । "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ" (ಛಾಂ. ೮-೧೪-೧) ಇತಿ ಶ್ರುತೇಃ । "ನಾಮರೂಪೇ ವ್ಯಾಕರವಾಣಿ" (ಛಾಂ.೬-೩-೨) ಇತಿ ಚ । ಉತ್ಪತ್ತಿಪ್ರಲಯಾತ್ಮಕೇ ಹಿ ನಾಮರೂಪೇ, ತದ್ವಿಲಕ್ಷಣಂ ಚ ಬ್ರಹ್ಮ । ಅತೋಽನುಮಾನಸ್ಯೈವ ಅವಿಷಯತ್ವಾತ್ ಕುತೋಽನುಮಾನವಿರೋಧಃ ? ಏತೇನ ಆಗಮವಿರೋಧಃ ಪ್ರತ್ಯುಕ್ತಃ ॥

(ಭಾಷ್ಯಾರ್ಥ)

ಇಷ್ಟುಮಾತ್ರದಿಂದ ವಿಧಿಶಾಸ್ತ್ರಕ್ಕೆ ವಿಷಯವಿಲ್ಲದೆ ಹೋಗುವದಿಲ್ಲ ; (ಮೇಲೆ) ಹೇಳಿದ ಕಾರಕಾದಿಭೇದವನ್ನು (ಒಪ್ಪಿರುವ) ವಿಧಿಶಾಸ್ತ್ರವು ಉಪನಿಷತ್ತುಗಳು ಬ್ರಹ್ಮೈಕತ್ವಕ್ಕೆ ಪ್ರಮಾಣವೆಂಬುದನ್ನೂ ತೊಲಗಿಸಲಾರದು.[1] ಏಕೆಂದರೆ ಶ್ರೋತ್ರವೇ ಮುಂತಾದವುಗಳಂತೆ, ಪ್ರಮಾಣಗಳು ತಮ್ಮತಮ್ಮ ವಿಷಯದಲ್ಲಿ ಶೂರವಾಗಿರುತ್ತವೆ.

ಹೀಗಿರುವಲ್ಲಿ (ತಾವೇ) ಪಂಡಿತರೆಂದು ತಿಳಿದುಕೊಂಡಿರುವ ಕೆಲವರು ತಮ್ಮ ಚಿತ್ತಕ್ಕೆ ವಶರಾಗಿ ಪ್ರಮಾಣವೆಲ್ಲವೂ ಒಂದಕ್ಕೊಂದು ವಿರುದ್ಧವಾಗಿರ

1. ಏಕೆಂದರೆ ಲೋಕಸಿದ್ಧವಾದ ಕ್ರಿಯಾಕಾರಕಗಳನ್ನು ಇಟ್ಟುಕೊಂಡು ಪುರುಷಾರ್ಥಕ್ಕೆ ಉಪಾಯವನ್ನು ತಿಳಿಸುವದು ವಿಧಿಶಾಸ್ತ್ರದ ಕೆಲಸವು, ಬ್ರಹ್ಮವೊಂದೇ ಸತ್ಯವು ಎಂದು ಪ್ರತಿಪಾದಿಸುವದು ಉಪನಿಷತ್ತಿನ ಕೆಲಸವು. ಹೀಗೆ ಎರಡಕ್ಕೂ ಭಿನ್ನಭಿನ್ನ ವಿಷಯಗಳಿವೆ.

2. ಪ್ರಮಾಣಸಂಪ್ಲವವಾದಿಗಳಾದ ತಾರ್ಕಿಕರ ಮತವಿದು.

ಬಹುದೆಂದು ಎಣಿಸಿರುತ್ತಾರೆ. ಹೀಗೆಯೇ ಬ್ರಹ್ಮೈಕತ್ವವು (ಶಾಸ್ತ್ರಪ್ರತಿಪಾದ್ಯವೆಂದರೆ) ಪ್ರತ್ಯಕ್ಷಾದಿವಿರೋಧವೂ (ಆಗುವದೆಂದು) ಆಕ್ಷೇಪಿಸುತ್ತಾರೆ. (ಅವರ ಅಭಿಪ್ರಾಯವೇನೆಂದರೆ) : ಶ್ರೋತ್ರಾದಿಗಳಿಗೆ ವಿಷಯವಾಗಿರುವ ಶಬ್ದಾದಿಗಳು ಬೇರೆಬೇರೆಯೆಂದು ಪ್ರತ್ಯಕ್ಷದಿಂದ ಕಂಡುಬರುತ್ತದೆ; (ಆದ್ದರಿಂದ) ಬ್ರಹ್ಮವೊಂದೇ (ತತ್ತ್ವವು) ಎಂದು ಹೇಳುವವರಿಗೆ **ಪ್ರತ್ಯಕ್ಷವಿರೋಧವಾಗುತ್ತದೆ** ಯಂತೆ. ಹೀಗೆಯೇ ಶ್ರೋತ್ರಾದಿಗಳಿಂದ ಶಬ್ದಾದಿಗಳನ್ನು ಅರಿಯುತ್ತಲೂ ಧರ್ಮಾಧರ್ಮಗಳನ್ನು ಮಾಡುತ್ತಲೂ ಇರುವ ಸಂಸಾರಿಗಳು ಒಂದೊಂದು ಶರೀರಕ್ಕೂ ಬೇರೆಬೇರೆಯಾಗಿರುವರೆಂದು ಅನುಮಾನದಿಂದ ಗೊತ್ತುಪಡಿಸಬಹುದಾಗಿದೆ.[1] ಹೀಗಿರುವಲ್ಲಿ ಬ್ರಹ್ಮೈಕತ್ವವನ್ನು ಹೇಳುವವರಿಗೆ **ಅನುಮಾನವಿರೋಧವೂ** (ಗಂಟುಬೀಳುತ್ತದೆಯಂತೆ). ಇದರಂತೆ **ಆಗಮವಿರೋಧ**ವನ್ನು (ಅವರು) ಹೇಳುತ್ತಾರೆ. (ಹೇಗೆಂದರೆ). "ಗ್ರಾಮಕಾಮನಾದವನು (ಈ) ಯಾಗ(ವನ್ನು) ಮಾಡಬೇಕು" (ತೈ. ಆ. ೧೭-೧೦-೪), "ಪಶುಕಾಮನಾದವನು (ಈ) ಯಾಗ(ವನ್ನು) ಮಾಡಬೇಕು" (ತೈ. ಆ. ೧೭-೧೨-೮), "ಸ್ವರ್ಗಕಾಮನಾದವನು (ಈ) ಯಾಗ(ವನ್ನು) ಮಾಡಬೇಕು" (ತೈ.ಆ. ೧೭-೩-೩) ಎಂಬಿವೇ ಮುಂತಾದ ವಾಕ್ಯಗಳಿಂದ ಗ್ರಾಮ, ಪಶುಗಳು, ಸ್ವರ್ಗ-ಮುಂತಾದ ಕಾಮಗಳೂ ಅವುಗಳಿಗೆ ಸಾಧನ(ವಾದ ಕರ್ಮ)ಗಳೇ ಮುಂತಾದವುಗಳನ್ನು ಅನುಷ್ಠಾನಮಾಡುವವರೂ ಬೇರೆಬೇರೆ ಎಂದು ನಿಶ್ಚಯವಾಗುತ್ತದೆ. (ಆದ್ದರಿಂದ ಆಗಮವಿರೋಧವೂ ಆಗುವದಂತೆ).

ಇಲ್ಲಿ (ನಾವು) ಹೇಳುವದೇನೆಂದರೆ, ಅವರು ಕುತರ್ಕದ ದೋಷದಿಂದ ಕೂಡಿದ ಅಂತಃಕರಣವುಳ್ಳವರು,[2] ಬ್ರಾಹ್ಮಣಾದಿವರ್ಣಗಳಲ್ಲಿ ನೀಚರಾದವರು[3] ಆಗಮಾರ್ಥವಿಷಯಸಂಪ್ರದಾಯವು ವಿಚ್ಛಿನ್ನವಾಗಿರುವ ಬುದ್ಧಿಯವರು.[4]

---

1. ಈ ಶರೀರದಲ್ಲಿ ಶಬ್ದಾದಿಗಳನ್ನು ನಾನು ಹೇಗೆ ಅನುಭವಿಸುತ್ತಿರುವೆನೋ ಹಾಗೆಯೇ ಒಂದೊಂದು ಶರೀರದಲ್ಲಿಯೂ ಅವುಗಳನ್ನು ಅನುಭವಿಸುವ ಆತ್ಮರು ಬೇರೆಬೇರೆಯಾಗಿ ಇರಬೇಕು, ನಾನು ಹೇಗೆ ಧರ್ಮಾಧರ್ಮಗಳನ್ನು ಮಾಡಿ ಈ ಶರೀರವನ್ನು ಪಡೆದಿರುವೆನೋ, ಹಾಗೆಯೇ ಈಗ ಧರ್ಮಾಧರ್ಮಗಳನ್ನು ಮಾಡಿ ಮುಂದಿನ ಜನ್ಮದ ಶರೀರವನ್ನು ಪಡೆಯುವ ಬೇರೆಯ ಕರ್ತೃಗಳಿರಬೇಕು– ಎಂದು ಸಾಮಾನ್ಯತೋದೃಷ್ಟಾನುಮಾನದಿಂದ ಆತ್ಮಭೇದವನ್ನು ನಿಶ್ಚಯಿಸಬಹುದು– ಎಂದು ಭಾವ.

2. ಪ್ರಮಾಣರಹಿತವಾದ ತರ್ಕವು ಅಂತಃಕರಣದಲ್ಲಿ ದೋಷವನ್ನುಂಟುಮಾಡುತ್ತದೆ

3. ವರ್ಣಾಶ್ರಮಧರ್ಮಗಳನ್ನು ಅನುಸರಿಸುವವರು ವೇದವಿರುದ್ಧವಾದ ತರ್ಕವನ್ನು ಅವಲಂಬಿಸಲಾರರು.

4. ಬ್ರಹ್ಮೈಕತ್ವವನ್ನು ಶಾಸ್ತ್ರವು ತಾತ್ಪರ್ಯದಿಂದ ತಿಳಿಸುತ್ತದೆ ಎಂಬ ಆಚಾರ್ಯಪರಂಪರೆಯು ತಪ್ಪಿಹೋದವರು.

ಆದ್ದರಿಂದ (ಅವರ ವಿಷಯಕ್ಕೆ) ಮರುಗಬೇಕಾಗಿದೆ. ಹೇಗೆಂದರೆ, ಶ್ರೋತ್ರಾದಿಗಳ ಮೂಲಕ ಶಬ್ದಾದಿಗಳು (ಬೇರೆಬೇರೆ ಎಂದು) ಪ್ರತ್ಯಕ್ಷವಾಗಿ ಕಂಡುಬರುತ್ತಿರುವದಕ್ಕೆ ಬ್ರಹ್ಮದ ಏಕತ್ವವು ವಿರುದ್ಧವಾಗುತ್ತದೆ ಎಂದು ಹೇಳುವವರನ್ನು (ಹೀಗೆಂದು) ಕೇಳಬೇಕು. ಶಬ್ದಾದಿಗಳು ಬೇರೆಬೇರೆಯಾದರೆ ಆಕಾಶದ ಏಕತ್ವವು (ಅದಕ್ಕೆ) ವಿರುದ್ಧವಾಗುತ್ತದೆಯೇನು ? ವಿರುದ್ಧವಾಗುವದಿಲ್ಲ ಎಂದರೆ ಹಾಗಾದರೆ ಪ್ರತ್ಯಕ್ಷವಿರೋಧವಿಲ್ಲ.[1]

ಇನ್ನು ಒಂದೊಂದು ಶರೀರಕ್ಕೂ ಶಬ್ದಾದಿಗಳನ್ನು ಅರಿಯುವ, ಮತ್ತು ಧರ್ಮಾಧರ್ಮಗಳನ್ನು ಮಾಡುವ (ಆತ್ಮರು) ಬೇರೆಬೇರೆ ಎಂದು ಅನುಮಾನಿಸಬಹುದು. ಆದ್ದರಿಂದ ಬ್ರಹ್ಮೈಕತ್ವವೆಂದರೆ (ಈ) ಅನುಮಾನಕ್ಕೆ ವಿರುದ್ಧವಾಗುತ್ತದೆ ಎಂಬವರಲ್ಲ, (ಅವರನ್ನು) ಬೇರೆಬೇರೆ ಎಂದು ಅನುಮಾನಿಸುವವರು ಯಾರು ? ಎಂದು ಕೇಳಬೇಕು.

(ತಾರ್ಕಿಕ) :- ಇದಕ್ಕೆ (ಅವರು) ಅನುಮಾನಕುಶಲರಾದ ನಾವೆಲ್ಲರೂ (ಹೀಗೆ ಅನುಮಾನಿಸುತ್ತೇವೆ) ಎಂದರೊ ?

(ಸಿದ್ಧಾಂತಿ) :- (ಈ) ಅನುಮಾನಕುಶಲರೆಂಬ ನೀವು ಯಾರು ಎಂದು ಕೇಳಿದರೆ (ಅವರ) ಉತ್ತರವೇನು ?[2]

(ತಾರ್ಕಿಕ) :- ಶರೀರ, ಇಂದ್ರಿಯಗಳು, ಮನಸ್ಸು, ಆತ್ಮ- ಇವರಲ್ಲಿ ಒಬ್ಬೊಬ್ಬರಿಗೇ ಅನುಮಾನಕೌಶಲವು ಇಲ್ಲ ಎಂದು ತೋರಿಸಿಕೊಟ್ಟ ಬಳಿಕ,[3] ಶರೀರ, ಇಂದ್ರಿಯಗಳು, ಮನಸ್ಸು- ಎಂಬ ಸಾಧನಗಳಿಂದೊಡಗೂಡಿದ ಆತ್ಮರುಗಳಾದ ನಾವೇ ಅನುಮಾನಕುಶಲರು ; ಏಕೆಂದರೆ ಕ್ರಿಯೆಗಳು ಅನೇಕಕಾರಕಗಳಿಂದ ಆಗಬೇಕಾಗಿರುತ್ತದೆ[4] (ಎಂಬುದೇ ಉತ್ತರವು).

(ಸಿದ್ಧಾಂತಿ) :- ಹಾಗಾದರೆ ಅನುಮಾನಕೌಶಲದ ವಿಷಯದಲ್ಲಿ ನೀವು ಅನೇಕರು ಎಂದಾಗುವದು. (ಇದರ ವಿವರ) : ಕ್ರಿಯೆಯು ಅನೇಕಕಾರಕಗಳಿಂದ ಆಗತಕ್ಕದ್ದು ಎಂದು ನೀವೇ ಒಪ್ಪಿರುತ್ತೀರಿ. ಇಲ್ಲಿ ಅನುಮಾನ

---

1. ಆತ್ಮನನ್ನು ಅನುಮಾನಿಸುವದಕ್ಕೆ ಅನುಮಾತೃವಾಗಿ ಮತ್ತೊಬ್ಬ ಆತ್ಮನು ಇರುವದಿಲ್ಲವಲ್ಲ !- ಎಂಬುದು ಸಿದ್ಧಾಂತಿಯ ಹೃದಯ. ಐ.ಭಾ.ಭಾ.೬೩ರಿಂದ ಮುಂದಿನ ಗ್ರಂಥಭಾಗವನ್ನು ನೋಡಿ. ಆತ್ಮನು ಅನುಮೇಯನಲ್ಲವೆಂಬುದನ್ನು ಅಲ್ಲಿಯೂ ತೋರಿಸಿಕೊಟ್ಟಿದೆ.

2. ಅನುಮಾತೃವಿಶೇಷವನ್ನು ಕೇಳುವ ಪ್ರಶ್ನೆ ಇದು.

3. ಶರೀರಾದಿಗಳು ಅಚೇತನವಾದ್ದರಿಂದಲೂ ಕೇವಲಾತ್ಮನಿಗೆ ವಿಶೇಷಜ್ಞಾನವೇ ಆಗುವಂತಿಲ್ಲವಾದ್ದರಿಂದಲೂ ಎಂದರ್ಥ.

4. ಶರೀರಾದಿಗಳಿಂದೊಡಗೂಡಿದ ಆತ್ಮನೇ ಅನುಮಾತೃ ಎಂದು ಭಾವ.

ವೆಂಬುದೂ (ಒಂದು) ಕ್ರಿಯೆ. ಆ ಕ್ರಿಯೆಯು ಶರೀರ, ಇಂದ್ರಿಯಗಳು, ಮನಸ್ಸು- ಎಂಬ ಸಾಧನಗಳಾದ ಕಾರಕಗಳಿಂದ ಆತ್ಮರೆಂಬ ಕರ್ತೃಗಳಿಂದ ಆಗುತ್ತದೆ ಎಂದು ಪ್ರತಿಜ್ಞೆಮಾಡಿರುತ್ತೀರಿ. ಹೀಗಿರುವಲ್ಲಿ ನಾವು ಅನುಮಾನ ಕುಶಲರು ಎಂದು ಹೇಳುವದರಿಂದ ಶರೀರ, ಇಂದ್ರಿಯಗಳು, ಮನಸ್ಸು- ಎಂಬ ಸಾಧನಗಳುಳ್ಳ ಆತ್ಮರುಗಳಾದ ನಾವು ಪ್ರತಿಯೊಬ್ಬರೂ ಅನೇಕರು ಎಂದು ಒಪ್ಪಿದಂತೆ ಆಗುವದು.[1] ಆಹ! ಬಾಲಕೋಡುಗಳಿಲ್ಲದ ತಾರ್ಕಿಕರೆಂಬ ಎತ್ತುಗಳು ಅನುಮಾನಕೌಶಲವನ್ನು ತೋರಿಸಿದಂತಾಯಿತಲ್ಲ![2] ಯಾವನು ತನ್ನನ್ನೇ ತಾನರಿಯನೋ ಆ ಮೂಢನು ಆ (ತನ್ನ ಆತ್ಮನಲ್ಲಿರುವ) ಭೇದ ವನ್ನಾಗಲಿ ಅಭೇದವನ್ನಾಗಲಿ ಹೇಗೆತಾನೆ ತಿಳಿದುಕೊಂಡಾನು?[3] ಇಲ್ಲಿ ಏನನ್ನು ಅನುಮಾನಮಾಡಿಯಾನು, ಯಾವ ಲಿಂಗದಿಂದ ತಾನೆ (ಅನುಮಾನಮಾಡಿ ಯಾನು)? ಆತ್ಮನ ಸ್ವರೂಪದಲ್ಲಿ ಭೇದವನ್ನು ತಿಳಿಸುವ ಯಾವ ಲಿಂಗವೂ ಇಲ್ಲವಷ್ಟೆ; (ಹಾಗಿದ್ದರಲ್ಲವೆ), ಆ ಲಿಂಗದಿಂದ ಆತ್ಮರು ಬೇರೆಬೇರೆ ಎಂದು (ಅನುಮಾನದಿಂದ) ಸಾಧಿಸಬಹುದಿತ್ತು?[4] ಯಾವ(ಯಾವ) ನಾಮರೂಪ ಗಳುಳ್ಳ ಲಿಂಗಗಳನ್ನು ಆತ್ಮಭೇದವನ್ನು ಸಾಧಿಸುವದಕ್ಕೆಂದು (ತಾರ್ಕಿಕರು) ಮುಂದಿಡುತ್ತಾರೋ ಅವು ಆಕಾಶಕ್ಕೆ ಗಡಿಗೆ, ಕೋಣೆ, ನೆಲದ ಭಾಗ (ಮುಂತಾ ದವುಗಳ) ಛಿದ್ರಗಳಂತೆ- ಆತ್ಮನಿಗೆ ಉಪಾಧಿಗಳೇ.[5] ಯಾವಾಗ ಆಕಾಶಕ್ಕೆ ಭೇದಲಿಂಗವನ್ನು ಕಾಣುವನೋ ಆಗ ಅವನಿಗೆ ಆತ್ಮನಿಗೂ ಭೇದಲಿಂಗವು ದೊರಕೀತು. **ಆತ್ಮನಿಗೆ ಮತ್ತೊಂದರಿಂದ ವಿಶೇಷವಿರುವದೆಂದು ಒಪ್ಪುವ**

---

1. ಶರೀರಾದಿಗಳಲ್ಲಿ ಪ್ರತಿಯೊಂದೂ ಕಾರಕವಾಗಿರುವದರಿಂದ ಕ್ರಿಯೆಯನ್ನು ಉಂಟುಮಾಡಬೇಕಷ್ಟೆ; ಹೀಗಿರುವದರಿಂದ ಪ್ರತಿಯೊಂದೂ ಅನೇಕವಾಗಿರಬೇಕಾಯಿತು. ಇಲ್ಲದಿದ್ದರೆ ಅದು ಯಾವ ಕ್ರಿಯೆಯನ್ನೂ ಮಾಡಲಾರದು.

2. ಆತ್ಮರು ಭಿನ್ನರಾದ್ದರಿಂದ ಬ್ರಹ್ಮೈಕತ್ವವು ಅನುಮಾನವಿರುದ್ಧವೆಂದು ತೋರಿಸಿಕೊಡುವದಕ್ಕೆ ಹೊರಟಿರುವ ತಾರ್ಕಿಕರು ಒಬ್ಬೊಬ್ಬ ಆತ್ಮನೂ ಸಕ್ರಿಯ ನಾದ್ದರಿಂದ ಅನೇಕಾತ್ಮಕನು; ದೇಹೇಂದ್ರಿಯಮನಸ್ಸುಗಳಲ್ಲಿ ಒಂದೊಂದೂ ಅನೇಕಾತ್ಮಕ ವೇ ಎಂದು ದೃಷ್ಟವಿರುದ್ಧವಾಗಿ ಅನುಮಾನಿಸಿದ್ದರಿಂದ ಅವನನ್ನು ಅನುಮಾನಕುಶಲನೆನ್ನು ವದಕ್ಕಿಂತ ಏನೂ ಅರಿಯದ ಪಶು ಎನ್ನುವದೇ ಯುಕ್ತ ಎಂದು ಭಾವ.

3. ಆತ್ಮನ ಸ್ವರೂಪವನ್ನೇ ತರ್ಕದಿಂದ ನಿರ್ಧರಿಸುವದಾಗಲಿಲ್ಲ; ಇನ್ನು ಆತ್ಮಗತ ಭೇದವನ್ನು ಸಾಧಿಸುವದು ಎಲ್ಲಿ ಬಂತು?

4. ಆತ್ಮನು ಅನುಮಾನಕ್ಕೆ ವಿಷಯನೂ ಅಲ್ಲ, ಅವನನ್ನು ಸಾಧಿಸುವದಕ್ಕೆ ಲಿಂಗವೂ ಇಲ್ಲ. ಇದನ್ನು ಇನ್ನುಮುಂದೆ ವಿವರಿಸಲಾಗುವದು.

5. ಗಡಿಗೆ ಮುಂತಾದವುಗಳು ಉಪಾಧಿಗಳು, ಗಡಿಗೆ ಮುಂತಾದವುಗಳ ಛಿದ್ರಗಳ ವಿಶೇಷಗಳು; ಹೀಗಿರುವಲ್ಲಿ ಛಿದ್ರಗಳಂತೆ ಉಪಾಧಿಗಳು ಎಂದದ್ದು ಸರಿಯಾಗುವದಿಲ್ಲ. ಈ ವಾಕ್ಯವು ಮೂಲದಲ್ಲಿ ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುತ್ತದೆ.

**ತಾರ್ಕಿಕರು ನೂರುಗಟ್ಟಲೆ (ಸೇರಿ)ದರೂ ಆತ್ಮನಲ್ಲಿ ಭೇದಲಿಂಗವನ್ನು ತೋರಿಸಿಕೊಡುವದಕ್ಕೆ ಆಗುವಂತಿಲ್ಲ; (ಆತ್ಮನ) ಸ್ವರೂಪದಲ್ಲಂತೂ (ಭೇದಕಲಿಂಗವು) ದೂರದಿಂದಲೇ ಆಚೆಗೆ ಹೋಯಿತು, ಏಕೆಂದರೆ ಆತ್ಮನು (ಏತಕ್ಕೂ) ವಿಷಯನೇ ಅಲ್ಲ.** ಯಾವಯಾವದನ್ನು ಪರ(ವಾದಿಯು) ಆತ್ಮನ ಧರ್ಮವೆಂದು ಒಪ್ಪುವನೋ ಅದದು ನಾಮರೂಪಾತ್ಮಕವೆಂದು (ನಾವು) ಒಪ್ಪಿರುವದರಿಂದಲೂ (ಆ) ನಾಮರೂಪಗಳು ಆತ್ಮನಿಗಿಂತ ಬೇರೆ ಎಂದು ಒಪ್ಪಿರುವದರಿಂದಲೂ (ಅದಕ್ಕೆ ಯಾವ ಲಿಂಗವೂ ಇಲ್ಲ). "ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಹಣಮಾಡತಕ್ಕದ್ದು, ಅವುಗಳೊಳಗೆ ಇರುವದಲ್ಲ, ಅದು ಬ್ರಹ್ಮವು'' (ಛಾಂ. ೮-೧೪-೧) ಎಂದೂ, ''ನಾಮರೂಪಗಳನ್ನು ವ್ಯಾಕರಣಮಾಡುವೆನು (ಎಂದು ಯೋಚಿಸಿ ನೋಡಿತು)" (ಛಾಂ. ೬-೩-೨) ಎಂದೂ ಶ್ರುತಿಯಿರುವದರಿಂದ (ಹೀಗೆಂದು ತಿಳಿಯಬೇಕು). ನಾಮರೂಪಗಳು ಉತ್ಪತ್ತಿಪ್ರಲಯವುಳ್ಳ ಸ್ವರೂಪದವು; ಬ್ರಹ್ಮವು ಅವಕ್ಕಿಂತ ವಿಲಕ್ಷಣವಾಗಿರತಕ್ಕದ್ದು.[1] ಆದ್ದರಿಂದ ಅನುಮಾನಕ್ಕೇ ವಿಷಯವಲ್ಲವಾದ್ದರಿಂದ ಅನುಮಾನವಿರೋಧವೆಲ್ಲಿ ಬಂತು ? ಇದರಿಂದ ಆಗಮವಿರೋಧವನ್ನೂ ತಿರಸ್ಕರಿಸಿದಂತೆ ಆಯಿತು.[2]

## ಬ್ರಹ್ಮೈಕತ್ವವಾದದಲ್ಲಿ ಉಪದೇಶಾನರ್ಥಕ್ಯವಿಲ್ಲ

(ಭಾಷ್ಯ)

೩೨೬. ಯದುಕ್ತಮ್ ಬ್ರಹ್ಮೈಕತ್ವೇ ಯಸ್ಮೈ ಉಪದೇಶಃ, ಯಸ್ಯ ಚ ಉಪದೇಶಗ್ರಹಣಫಲಮ್, ತದಭಾವಾತ್ ಏಕತ್ವೋಪದೇಶಾನರ್ಥಕ್ಯಮಿತಿ। ತದಪಿ ನ। ಅನೇಕಕಾರಕಸಾಧ್ಯತ್ವಾತ್ ಕ್ರಿಯಾಣಾಂ ಕಶ್ಚೋದ್ಯೋ ಭವತಿ ? ಏಕಸ್ಮಿನ್ ಬ್ರಹ್ಮಣಿ ನಿರುಪಾಧಿಕೇ ನೋಪದೇಶಃ, ನೋಪದೇಷ್ಟಾ, ನ ಚ ಉಪದೇಶಗ್ರಹಣಫಲಮ್। ತಸ್ಮಾತ್ ಉಪನಿಷದಾಂ ಚ ಆನರ್ಥಕ್ಯಮ್ ಇತ್ಯೇತದಭ್ಯುಪಗತಮೇವ। ಅಥಾನೇಕಕಾರಕವಿಷಯಾನರ್ಥಕ್ಯಂ ಚೋದ್ಯತೇ। ನ। ಸ್ವತೋಽಭ್ಯುಗಮವಿರೋಧಾತ್ ಆತ್ಮವಾದಿನಾಮ್ ॥

---

1. ಆದ್ದರಿಂದ ಅದಕ್ಕೆ ಯಾವದೂ ಲಿಂಗವಿಲ್ಲ ಎಂದರ್ಥ. ಆತ್ಮನು ಪ್ರತ್ಯಕ್ಷನೆಂದೂ ಅನುಮೇಯನೆಂದೂ ತಾರ್ಕಿಕಾದಿಗಳು ಭ್ರಾಂತಿಯಿಂದ ತಿಳಿಯುವದಕ್ಕೆ ಕಾರಣವೇನೆಂಬುದನ್ನು ಭಾ. ಭಾ. ೪ರಲ್ಲಿಯೇ ತಿಳಿಸಿದೆ.

2. ಏಕೆಂದರೆ ಆಗಮವು ಗ್ರಾಮಾದಿಗಳೆಂಬ ಭೇದವು ಸತ್ಯವೆಂದೇನೂ ಹೇಳುವದಿಲ್ಲ; ಆಯಾ ಕಾಮವುಳ್ಳವರಿಗೆ ಆಯಾ ಕರ್ಮವು ಸಾಧನವು ಎಂದಿಷ್ಟೇ ಹೇಳುತ್ತದೆ. ಆದ್ದರಿಂದ ಆ ಆಗಮಕ್ಕೆ ಬ್ರಹ್ಮವು ವಿಷಯವಲ್ಲವಾದ್ದರಿಂದ ಬ್ರಹ್ಮೈಕ್ಯವು ಆಗಮವಿರುದ್ಧವೂ ಅಲ್ಲ ಎಂದು ಭಾವ.

(ಭಾಷ್ಯಾರ್ಥ)

ಇನ್ನು ಬ್ರಹ್ಮೈಕತ್ವ(ವು ನಿಜವಾದರೆ) ಯಾವನಿಗೆ ಉಪದೇಶವೋ, ಯಾವನಿಗೆ ಉಪದೇಶವನ್ನು ಗ್ರಹಿಸಿದ್ದರಿಂದ ಫಲವಾಗಬೇಕೋ ಅವ(ರಿಬ್ಬರೂ) ಇಲ್ಲದ್ದರಿಂದ ಏಕತ್ವವನ್ನು ಉಪದೇಶಿಸಿದ್ದು ವ್ಯರ್ಥವಾಗುವದು ಎಂದು (ಭಾ. ಭಾ. ೩೧೮ರಲ್ಲಿ) ಹೇಳಿತ್ತಷ್ಟೆ; ಅದೂ ಸರಿಯಲ್ಲ. ಏಕೆಂದರೆ, ಕ್ರಿಯೆಗಳು ಅನೇಕಕಾರಕಸಾಧ್ಯವಾಗಿರುವದರಿಂದ ಯಾರನ್ನು ಆಕ್ಷೇಪಿಸುವದಾದೀತು?[1] **ನಿರುಪಾಧಿಕವು ಬ್ರಹ್ಮವು ಒಂದೇ (ತತ್ತ್ವವು ಎಂಬ ಸ್ಥಿತಿಯಲ್ಲಿ) ಉಪದೇಶವಿಲ್ಲ, ಉಪದೇಶಮಾಡುವವನೂ ಇಲ್ಲ, ಉಪದೇಶಗ್ರಹಣದ ಫಲವೂ ಇಲ್ಲ. ಆದ್ದರಿಂದ ಉಪನಿಷತ್ತುಗಳೂ ವ್ಯರ್ಥವು ಎಂಬುದನ್ನು ಒಪ್ಪಿಯೇ ಇರುತ್ತೇವೆ.**[2] ಹಾಗಲ್ಲದೆ ಅನೇಕಕಾರಕಗಳಿಗೆ ವಿಷಯವಾಗಿರುವದೆಂಬುದನ್ನೇ ಆಕ್ಷೇಪಿಸುತ್ತೇವೆಂದರೆ (ಅದು) ಸರಿಯಲ್ಲ; ಏಕೆಂದರೆ ಆತ್ಮವಾದಿಗಳು ತಾವೇ ಒಪ್ಪಿರುವದಕ್ಕೆ ವಿರೋಧವಾಗುತ್ತದೆ.[3]

## ಉಪಸಂಹಾರ: ಅದ್ವೈತವಾದವು ನಿರ್ದುಷ್ಟ

(ಭಾಷ್ಯ)

೩೨೨. ತಸ್ಮಾತ್ ತಾರ್ಕಿಕಚಾಟಭಟರಾಜಾಪ್ರವೇಶ್ಯಮಭಯಂ ದುರ್ಗಮಿದಮ್ ಅಲ್ಪಬುದ್ಧ್ಯಗಮ್ಯಂ ಶಾಸ್ತ್ರಗುರುಪ್ರಸಾದರಹಿತೈಶ್ಚ । "ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ" (ಕ.೧-೨-೨೧), "ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ" (ಕ.೧-೧-೨೧), "ನೈಷಾ ತರ್ಕೇಣ ಮತಿರಾಪನೇಯಾ" (ಕ. ೧-೨-೯) ಇತ್ಯಾದಿಶ್ರುತಿಭ್ಯಃ । ವರಪ್ರಸಾದಲಭ್ಯತ್ವಶ್ರುತಿಭ್ಯಶ್ಚ (?) ।[4]

---

1. ಆಕ್ಷೇಪವೆಂಬುದೊಂದು ಕ್ರಿಯೆ; ಅದಕ್ಕೆ ಕರ್ತೃ, ಕರ್ಮ- ಮುಂತಾದ ಅನೇಕ ಕಾರಕಗಳಿರಬೇಕು; ಕಾರಕರಹಿತವಾಗಿರುವ ಬ್ರಹ್ಮದಲ್ಲಿ ಆಕ್ಷೇಪಕನು ಯಾರು? ಆಕ್ಷೇಪ್ತವ್ಯನು ಯಾರು?

2. ಅದ್ವೈತಬ್ರಹ್ಮವೇ ತತ್ತ್ವವೆಂದಾದರೆ ಉಪದೇಶರೂಪವಾದ ಉಪನಿಷತ್ತು ನಿಷ್ಪ್ರಯೋಜನವಲ್ಲವೆ?- ಎಂದರೆ ಅದನ್ನು ಒಪ್ಪಿಯೇ ಇದುತ್ತೇವೆ; ಏಕೆಂದರೆ ಉಪದೇಶಾದಿಗಳು ಕಲ್ಪಿತವೇ ಎಂದರ್ಥ. ಮಾಂ.ಕಾ.ಭಾ. ೧-೧೮ನ್ನು ನೋಡಿ.

3. ಉಪದೇಶಕಾಲದಲ್ಲಿ ಅನೇಕಕಾರಕಗಳಿಂದ ಉಪದೇಶವು ಆಗಬೇಕಲ್ಲವೆ?- ಎಂದರೆ ನಿಜ; ಅದನ್ನು ಆತ್ಮವಾದಿಗಳಾದ ದ್ವೈತಿಗಳೆಲ್ಲರೂ ಒಪ್ಪಿಯೇ ಇರುತ್ತಾರೆ. ಆದ್ದರಿಂದ ಅದನ್ನು ಆಕ್ಷೇಪಿಸಿದರೆ ತಾವು ಒಪ್ಪಿದ್ದಕ್ಕೆ ವಿರೋಧವಾಗುತ್ತದೆ ಎಂದರ್ಥ. ನಾವು ಕ್ರಿಯಾಕಾರಕಫಲಭೇದವು ಅವಿದ್ಯಾಕೃತವೆಂದು ಒಪ್ಪಿರುವದರಿಂದ ವ್ಯವಹಾರದಲ್ಲಿ ಅದನ್ನು ಅಂಗೀಕರಿಸಿರುವದು ಸಿದ್ಧಾಂತಕ್ಕೆ ವಿರುದ್ಧವಲ್ಲ ಎಂದು ಭಾವ.

4. "ವರಪ್ರಸಾದಲಭ್ಯತ್ವಶ್ರುತಿಸ್ಮೃತಿವಾದೇಭ್ಯಶ್ಚ" ಎಂಬ ಮೂಲವನ್ನು ಹೀಗೆಂದು ತಿದ್ದಿಕೊಂಡಿದೆ. ಈಗಿರುವಂತೆ ವಾಕ್ಯವು ಸರಿಯಾಗಿ ಅನ್ವಯವಾಗುವದಿಲ್ಲ; ಇಲ್ಲಿ ಸ್ಮೃತಿಗಳನ್ನು ಉದಾಹರಿಸಿಯೂ ಇಲ್ಲ.

"ತದೇಜತಿ ತನ್ನೈಜತಿ ತದ್ದೂರೇ ತದ್ವನ್ತಿಕೇ" (ಈ. ೫) ಇತ್ಯಾದಿವಿರುದ್ಧ ಧರ್ಮಸಮವಾಯಿತ್ವಪ್ರಕಾಶಕಮನ್ತ್ರವರ್ಣೇಭ್ಯಶ್ಚ। ಗೀತಾಸು ಚ "ಮತ್ಸ್ಥಾನಿ ಸರ್ವಭೂತಾನಿ" (ಗೀ. ೯-೪) ಇತ್ಯಾದಿ। ತಸ್ಮಾತ್ ಪರಬ್ರಹ್ಮವ್ಯತಿರೇಕೇಣ ಸಂಸಾರೀ ನಾಮ ನಾನ್ಯದ್ವಸ್ತ್ವನ್ತರಮಸ್ತಿ। ತಸ್ಮಾತ್ ಸುಷ್ಠೂಚ್ಯತೇ "ಬ್ರಹ್ಮ ವಾ ಇದಮಗ್ರ ಆಸೀತ್ ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ" (೧-೪-೧೦), "ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ" (೩-೮-೧೧) ಇತ್ಯಾದಿಶ್ರುತಿಶತೇಭ್ಯಃ। ತಸ್ಮಾತ್ ಪರಸ್ಯೈವ ಬ್ರಹ್ಮಣಃ ಸತ್ಯಸ್ಯ ಸತ್ಯಂ ನಾಮ ಉಪನಿಷತ್ ಪರಾ ॥

(ಭಾಷ್ಯಾರ್ಥ)

ಆದ್ದರಿಂದ ತಾರ್ಕಿಕರೆಂಬ ಚಾಟಭಟರ ರಾಜರು[1] ಒಳಹೊಗುವದಕ್ಕೆ ಅಸಾಧ್ಯವಾಗಿರುವ ಅಭಯವಾದ ದುರ್ಗವಿದು, ಅಲ್ಪಬುದ್ಧಿಗಳಿಗೆ ತಿಳಿಯ ತಕ್ಕದ್ದಲ್ಲ, ಶಾಸ್ತ್ರಗುರುಪ್ರಸಾದವಿಲ್ಲದವರಿಗೂ (ತಿಳಿಯತಕ್ಕದ್ದಲ್ಲ). "ಆ ಮದಾ ಮದನಾದ ದೇವನನ್ನು ನನ್ನ ಹೊರತು ಮತ್ತೊಬ್ಬನು ಯಾವನು ತಿಳಿದು ಕೊಂಡಾನು?" (ಕ.೧-೨-೨೧), "ಹಿಂದೆ ದೇವತೆಗಳು ಕೂಡ ಈ (ವಿಷಯದಲ್ಲಿ) ಸಂಶಯವುಳ್ಳವರಾಗಿದ್ದರು" (ಕ. ೧-೧-೨೫), "ಈ ಮತಿಯು ತರ್ಕದಿಂದ ಪಡೆದುಕೊಳ್ಳತಕ್ಕದ್ದಲ್ಲ" (೧-೨-೯) ಮುಂತಾದ ಶ್ರುತಿಗಳಿಂದ ವರಪ್ರಸಾದ ಲಭ್ಯ(ವಿದೆಂಬ) ಶ್ರುತಿಯಿಂದಲೂ[2] (ಹೀಗೆಂದು ತಿಳಿಯಬೇಕು). "ಅದು ಚಲಿಸುತ್ತದೆ, ಚಲಿಸುವದಿಲ್ಲ; ಅದು ದೂರದಲ್ಲಿ(ದೆ), ಅದು ಹತ್ತಿರವೂ (ಇದೆ)" (ಈ. ೫) ಎಂದುಮುಂತಾಗಿರುವ ವಿರುದ್ಧಧರ್ಮಗಳ ಸಂಬಂಧವುಳ್ಳದ್ದೆಂದು ತಿಳಿಸುವ ಮಂತ್ರವರ್ಣಗಳಿಂದಲೂ (ಇದು ಸಿದ್ಧವಾಗುತ್ತದೆ). ಗೀತೆಗಳಲ್ಲಿಯೂ "ಸರ್ವಭೂತಗಳೂ ನನ್ನಲ್ಲಿವೆ, (ನನ್ನಲ್ಲಿಲ್ಲವೂ ಇಲ್ಲ)" (ಗೀ. ೯-೪) ಎಂದು ಮುಂತಾಗಿ (ಹೇಳಿದೆ).[3]

ಆದ್ದರಿಂದ ಪರಬ್ರಹ್ಮಕ್ಕಿಂತ ವ್ಯತಿರಿಕ್ತವಾಗಿ ಸಂಸಾರಿ ಎಂಬ ಮತ್ತೊಂದು ವಸ್ತುವಿಲ್ಲ. ಆದ್ದರಿಂದ "ಇದು ಮೊದಲು ಬ್ರಹ್ಮವೇ ಆಗಿತ್ತು; ಅದು ನಾನು

---

1. ಬಿಲ್ಲುಬಾಣವನ್ನು ಹಿಡಿದ ಗುಡ್ಡಗಾಡಿನ ಸಾಮಾನ್ಯಸೈನಿಕರು ಚಾಟಭಟರು, ತಾರ್ಕಿಕರು ಅವೈದಿಕವಾದ ಕುಯುಕ್ತಿಗಳನ್ನು ತರುವದರಲ್ಲಿ ಅಗ್ರೇಸರರಾದ್ದರಿಂದ ಅವರನ್ನು ಚಾಟಭಟರಾಜರು ಎಂದು ಕರೆದಿದೆ.

2. ನಚಿಕೇತನಿಗೆ ಯಮನು ಕೊಟ್ಟ ವರಪ್ರಸಾದದಿಂದಲೇ ಈ ಜ್ಞಾನವು ದೊರೆಯಿ ತೆಂದು ಶ್ರುತಿ ಹೇಳಿರುವದರಿಂದ ಸಾಮಾನ್ಯಮನುಷ್ಯರ ತರ್ಕಕ್ಕೆ ಇದು ನಿಲುಕತಕ್ಕದ್ದಲ್ಲ ವೆಂದು ನಿಶ್ಚಯವಾಗುತ್ತದೆ.

3 ಆದ್ದರಿಂದಲೂ ತರ್ಕಮಾತ್ರಕ್ಕೆ ಇದು ನಿಲುಕತಕ್ಕದ್ದಲ್ಲ, ಶಾಸ್ತ್ರಗುರುಪ್ರಸಾದ ದಿಂದಲೇ ತಿಳಿದುಕೊಳ್ಳಬೇಕಾದದ್ದು ಎಂದಾಯಿತು.

ಬ್ರಹ್ಮವಾಗಿರುವೆನು ಎಂದು ತನ್ನನ್ನೇ ತಿಳಿದುಕೊಂಡಿತು" (೧-೪-೧೦)[1], "ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ, ಇದಕ್ಕಿಂತ ಬೇರೆಯಾದ ಶ್ರೋತೃವಿಲ್ಲ" (೩-೮-೧) -ಎಂದು ಮುಂತಾಗಿರುವ ನೂರಾರು ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದ ಸತ್ಯದ ಸತ್ಯವು ಎಂಬ (ಈ) ಮುಂದಿನ ಉಪನಿಷತ್ತು ಪರಬ್ರಹ್ಮದ್ದೇ.[2]



1. ಬ್ರಹ್ಮಕ್ಕಿಂತ ಮೊದಲು ಯಾವ ಸಂಸಾರಿಯೂ ಇರಲಿಲ್ಲ; ನಾನು ಬ್ರಹ್ಮವು ಎಂದು ಅರಿತುಕೊಂಡಾಗಲೂ ಹಾಗೆ ಅರಿತುಕೊಂಡದ್ದು ಬ್ರಹ್ಮವೇ ಆಗಿತ್ತು ಎಂದದ್ದರಿಂದ ಬ್ರಹ್ಮಕ್ಕಿಂತ ಬೇರೆಯ ಸಂಸಾರಿಯಿಲ್ಲವೆಂದಾಯಿತು ಎಂದರ್ಥ.

2. ಕೇವಲ ಸಂಸಾರಿಯ ಉಪನಿಷತ್ತಲ್ಲ, ಸಂಸಾರಿಗಿಂತ ವ್ಯತಿರಿಕ್ತನಾದ ತಟಸ್ಥೇಶ್ವರನ ಉಪನಿಷತ್ತೂ ಅಲ್ಲ; ಸಂಸಾರಿಯ ಪರಮಾರ್ಥವಾದ ಆತ್ಮನೇ ಆಗಿರುವ ಪರಬ್ರಹ್ಮಕ್ಕೆ ಈ "ಸತ್ಯಸ್ಯ ಸತ್ಯಮ್" ಎಂದು ಉಪನಿಷತ್ತು ಬಂದಿದೆ. ಇದನ್ನೇ ಮುಂದಿನ ಗ್ರಂಥದಲ್ಲಿ ವಿವರಿಸುತ್ತದೆ; ಇದರ ಜ್ಞಾನದಿಂದಲೇ ಪರಮಪುರುಷಾರ್ಥವು ಎಂಬುದೇ ಸಿದ್ಧಾಂತ.

# ಒಂದನೆಯ ಬ್ರಾಹ್ಮಣದ ಸಾರ

೧. ದೃಪ್ತಬಾಲಾಕಿ ಗಾರ್ಗ್ಯ ಎಂಬ ಒಬ್ಬ ವಾಗ್ಮಿಯಿದ್ದನು. ಅವನು ಒಮ್ಮೆ ಕಾಶಿರಾಜನಾದ ಅಜಾತಶತ್ರುವಿನ ಬಳಿಗೆ ಬಂದು "ನಿನಗೆ ಬ್ರಹ್ಮವನ್ನು ಹೇಳಿಕೊಡುವೆನು" ಎಂದನು. ರಾಜನು ಈ ಸೂಚನೆಯಿಂದ ಬ್ರಾಹ್ಮಣನು ತನಗೂ ಜನಕನ ಸ್ಥಾನವನ್ನು ಕೊಟ್ಟಂತಾಯಿತೆಂದು ಸಂತೋಷದಿಂದ ಆ ಬ್ರಾಹ್ಮಣನನ್ನು ಸ್ವಾಗತಿಸಿದನು.

೨-೧೩. ಗಾರ್ಗ್ಯನು ಅಧಿದೈವತವಾದ ಆದಿತ್ಯ, ಚಂದ್ರ, ಮಿಂಚು, ಆಕಾಶ, ವಾಯು, ಅಗ್ನಿ, ಅಪ್ಪು, ಕನ್ನಡಿ, ನಡೆಯುತ್ತಿರುವವನ ಹಿಂದೆ ಕೇಳಿಬರುವ ಶಬ್ದ, ದಿಕ್ಕುಗಳು, ಹೊರಗಿನ ಕತ್ತಲೆ– ಇವುಗಳಲ್ಲಿರುವ ಪುರುಷರು, ಅಧ್ಯಾತ್ಮವಾಗಿ ಚಕ್ಷುಸ್ಸು, ಮನಸ್ಸು, ತ್ವಕ್ಕು, ಪ್ರಾಣ, ವಾಕ್ಕು, ರೇತಸ್ಸು, ಸತ್ತ್ವಶುದ್ಧಿಯುಕ್ತವಾದ ಹೃದಯ, ಪ್ರಾಣ, ಕರ್ಣಗಳು, ಅಜ್ಞಾನ– ಇವುಗಳ ಮೂಲಕ ಹೃದಯದಲ್ಲಿ ಕರ್ತೃಭೋಕ್ತೃವಾಗಿರುವವರೆಂದು ಉಪಾಸನೆಮಾಡಬೇಕು, ಅದೇ ಬ್ರಹ್ಮವು ಎಂದು ಹೇಳಿದನು. ಅಜಾತಶತ್ರುವು ಈ ಆದಿತ್ಯಪುರುಷಾದಿಗಳ ಉಪಾಸನೆಯನ್ನೂ ಅವರ ಗುಣವಿಶೇಷಗಳನ್ನೂ ಉಪಾಸನೆಯ ಫಲವನ್ನೂ ತಾನು ಸಂಪೂರ್ಣವಾಗಿ ಬಲ್ಲೆನೆಂದೂ ಗಾರ್ಗ್ಯನು ಹೊಸದಾಗಿ ಏನನ್ನೂ ಹೇಳಿದಂತಾಗಲಿಲ್ಲವೆಂದೂ ತಿಳಿಸುತ್ತಾಬಂದನು. ಕೊನೆಗೆ ಗಾರ್ಗ್ಯನು ಪ್ರಜಾಪತಿಯ ಬುದ್ಧಿಯಲ್ಲಿರುವ ಪುರುಷನೇ ಅಧ್ಯಾತ್ಮವಾಗಿ ಬುದ್ಧಿಯ ಮೂಲಕ ಹೃದಯದಲ್ಲಿರುವ ಕರ್ತೃಭೋಕ್ತೃವಾಗಿರುವ ಬ್ರಹ್ಮವೆಂದು ತನ್ನ ಬ್ರಹ್ಮವಿಜ್ಞಾನವನ್ನು ಉಪಸಂಹಾರಮಾಡಿದನು. ಸಮಷ್ಟಿವ್ಯಷ್ಟಿರೂಪನಾದ ಪ್ರಾಣನೇ ಬ್ರಹ್ಮವೆಂಬುದು ಅವನ ಮತ.

೧೪-೧೫. ಆಗ ಅಜಾತಶತ್ರುವು "ಇಷ್ಟೇಯೆ, ನಿನಗೆ ತಿಳಿದಿರುವದು ?" ಎಂದು ಕೇಳಲು ಗಾರ್ಗ್ಯನು 'ಇಷ್ಟೇ' ಎಂದನು. ಅಜಾತಶತ್ರುವು "ಇಷ್ಟರಿಂದಲೇ ಬ್ರಹ್ಮವನ್ನು ಅರಿತುಕೊಂಡಂತೆ ಆಗುವದಿಲ್ಲ" ಎಂದನು. ಗಾರ್ಗ್ಯನು "ಹಾಗಾದರೆ ನನಗೆ ನಿಜವಾದ ಬ್ರಹ್ಮಜ್ಞಾನವನ್ನು ತಿಳಿಸಿಕೊಡು, ನಿನ್ನ ಶಿಷ್ಯನಾಗಿ ಬಂದಿದೇನೆ" ಎನ್ನಲು ಅವನು "ಬ್ರಾಹ್ಮಣನು ಕ್ಷತ್ರಿಯನ ಬಳಿಗೆ ಶಿಷ್ಯವೃತ್ತಿಗಾಗಿ ಬರುವದು ತಕ್ಕದ್ದಲ್ಲ ; ಆದ್ದರಿಂದ ನಿನಗೆ ವಿಜ್ಞಾಪನೆಯನ್ನೇ ಮಾಡಿಕೊಳ್ಳುವೆನು" ಎಂದು ಕೈಹಿಡಿದುಕೊಂಡು ಒಬ್ಬ ಸುಪ್ತಪುರುಷನ ಬಳಿಗೆ ಬಂದನು. ಆಗ ಅಜಾತಶತ್ರುವು "ಬೃಹನ್, ಪಾಂಡರವಾಸ, ಸೋಮರಾಜನ್" ಎಂದು ಮುಂತಾಗಿ ಪ್ರಾಣನಾಮಗಳಿಂದ ಕರೆದರೂ ಆ ಸುಪ್ತನು ಎಚ್ಚರಲಿಲ್ಲ ; ಆಗ ಅವನನ್ನು ಕೈಯಿಂದ ಹೊರಳಿಸಿ ಎಬ್ಬಿಸಲು ಅವನು ಎಚ್ಚತ್ತನು. ದೇವತಾತ್ಮನಾದ ಪ್ರಾಣನಿಗಿಂತ ವ್ಯತಿರಿಕ್ತನಾದವನೇ ಈ ಕಾರ್ಯಕಾರಣಸಂಘಾತದಲ್ಲಿ ಕರ್ತೃಭೋಕ್ತೃವಾಗಿರುವನೆಂದು ಇದರಿಂದ ಸ್ಪಷ್ಟವಾಯಿತು.

೧೬-೧೯. ಬಳಿಕ ಅಜಾತಶತ್ರುವು ಪರಬ್ರಹ್ಮವನ್ನೇ ಗಾರ್ಗ್ಯನಿಗೆ ತಿಳಿಸಿಕೊಡಬೇಕೆಂದು "ಈ ಪುರುಷನು ಹೀಗೆ ನಿದ್ರಿಸುತ್ತಿದ್ದನಲ್ಲ, ಆಗ ಎಲ್ಲಿದ್ದನು ? ಈಗ ಎಲ್ಲಿಂದ ಬಂದನು ?– ಎಂದು ಕೇಳಿದನು. ಗಾರ್ಗ್ಯನಿಗೆ ಇದು ತಿಳಿದಿರಲಿಲ್ಲ. ಅಜಾತಶತ್ರುವು ಈ ತತ್ತ್ವವನ್ನು ಹೀಗೆಂದು ತಿಳಿಸಿಕೊಟ್ಟನು : "ಈ ವಿಜ್ಞಾನಮಯಪುರುಷನು ನಿದ್ರಿಸು-

ತ್ತಿದ್ದನಲ್ಲ, ಆಗ ಅಂತಃಕರಣದಲ್ಲಿರುವ ವಿಶೇಷವಿಜ್ಞಾನದಿಂದ ವಾಗಾದಿಪ್ರಾಣಗಳ ವಿಷಯ ವಿಶೇಷಪ್ರಕಾಶನಸಾಮರ್ಥ್ಯವನ್ನು ಹಿಡಿದೆಳೆದುಕೊಂಡು ಹೃದಯದೊಳಗೆ ಇರುವ ಆಕಾಶ ನೆಂಬ ಹೆಸರಿನ ಪರಮಾತ್ಮನ ರೂಪದಲ್ಲಿದ್ದುಕೊಂಡಿರುತ್ತಾನೆ. ಆಗ ಅವನಿಗೆ 'ಸ್ವಪಿತಿ' (ತನ್ನಲ್ಲಿ ಸೇರಿರುತ್ತಾನೆ) ಎಂಬ ಹೆಸರು ಸಲ್ಲುತ್ತದೆ. ಅವನು ಕನಸುಕಾಣುತ್ತಿರುವನಲ್ಲ' ಆಗ ಮಹಾರಾಜನೊಬ್ಬನು ತನ್ನ ದೇಶದಲ್ಲಿ ಸಪರಿವಾರನಾಗಿ ಸ್ವೇಚ್ಛೆಯಿಂದ ಸಂಚರಿಸು ತ್ತಿರುವಂತೆ ಸಕಲಪ್ರಾಣಗಳೊಂದಿಗೆ ತನ್ನ ಶರೀರದಲ್ಲಿಯೇ ಸಂಚರಿಸುತ್ತಿರುತ್ತಾನೆ. ಅವನು ಯಾವಾಗ ಸುಷುಪ್ತಿಯನ್ನು ಹೊಂದುತ್ತಾನೋ ಆಗ ಏನೊಂದನ್ನೂ ಅರಿಯು ವದಿಲ್ಲ; ಏನೂ ಅರಿಯದ ಬಾಲಕನೊಬ್ಬನು, ಸುತೃಪ್ತನಾದ ಮಹಾರಾಜನೊಬ್ಬನು, ಅಥವಾ ಸದಾಚಾರನಿಷ್ಠನಾದ ಬ್ರಾಹ್ಮಣನೊಬ್ಬನು ಹೇಗೆ ಸ್ವಸ್ಥನಾಗಿರುವನೋ ಅದರಂತೆ ಇವನು ಮಿಗಿಲಿಲ್ಲದ ಆನಂದದಲ್ಲಿದ್ದುಕೊಂಡಿರುತ್ತಾನೆ.

೨೦. ಹೇಗೆ ಜೇಡರಹುಳು ನೂಲಿನ ರೂಪದಿಂದ ಹೊರಕ್ಕೆ ಬರುವದೋ, ಹೇಗೆ ಬೆಂಕಿಯು ಸಣ್ಣ ಕಿಡಿಗಳಾಗಿ ಸಿಡಿದುಬರುವದೋ ಹಾಗೆಯೇ ಸುಷುಪ್ತಿಯಲ್ಲಿರುವ ಈ ಆತ್ಮನಿಂದ ವಾಗಾದಿಸರ್ವಪ್ರಾಣಗಳೂ ಸರ್ವಲೋಕಗಳೂ ಪ್ರಾಣಲೋಕಗಳಿಗೆ ಅಧಿಷ್ಠಾತೃಗಳಾದ ಸರ್ವದೇವತೆಗಳೂ ಬ್ರಹ್ಮಾದಿಸ್ತಂಬಪರ್ಯಂತವಾದ ಸರ್ವಪ್ರಾಣಿಗಳೂ ಎಲ್ಲಾ ವಿಶೇಷಾತ್ಮಗೂ ಹೊರಕ್ಕೆ ಬರುತ್ತಾರೆ. ಈ ಪರಮಾತ್ಮನಿಗೆ ಸತ್ಯದ ಸತ್ಯವು ಎಂಬುದು ಉಪನಿಷತ್ತು, ಎಂದರೆ ರಹಸ್ಯಾಭಿಧಾನವು. ಪ್ರಾಣಗಳೇ ಸತ್ಯವು, ಈತನು ಅವುಗಳ ಸತ್ಯವು.

---

# ಎರಡನೆಯ ಅಧ್ಯಾಯ - ಎರಡನೆಯ ಬ್ರಾಹ್ಮಣ

## (ಪ್ರಾಣವಿಚಾರ)

## ಮುಂದಿನ ಬ್ರಾಹ್ಮಣದ್ವಯದ ಸಂಬಂಧ

(ಭಾಷ್ಯ)

೩೨೮. "ಬ್ರಹ್ಮ ಜ್ಞಪಯಿಷ್ಯಾಮಿ" (೨-೧-೧೫) ಇತಿ ಪ್ರಸ್ತುತಮ್ । ತತ್ರ ಯತೋ ಜಗತ್ ಜಾತಮ್, ಯನ್ಮಯಮ್ ಯಸ್ಮಿಂಶ್ಚ ಲೀಯತೇ ತದೇಕಂ ಬ್ರಹ್ಮ ಇತಿ ಜ್ಞಾಪಿತಮ್ । ಕಿಮಾತ್ಮಕಂ ಪುನಸ್ತಜ್ಜಗತ್ ಜಾಯತೇ ಲೀಯತೇ ಚ ? ಪಞ್ಚಭೂತಾತ್ಮಕಮ್ ಭೂತಾನಿ ಚ ನಾಮರೂಪಾತ್ಮಕಾನಿ । "ನಾಮರೂಪೇ ಸತ್ಯಮ್" (೧-೬-೩) ಇತಿ ಹಿ ಉಕ್ತಮ್ । ತಸ್ಯ ಸತ್ಯಸ್ಯ ಪಞ್ಚಭೂತಾತ್ಮಕಸ್ಯ ಸತ್ಯಂ ಬ್ರಹ್ಮ । ಕಥಂ ಪುನರ್ಭೂತಾನಿ ಸತ್ಯಮ್ ? ಇತಿ ಮೂರ್ತಾಮೂರ್ತಬ್ರಾಹ್ಮಣಮ್ । ಮೂರ್ತಾಮೂರ್ತಭೂತಾತ್ಮಕತ್ವಾತ್ ಕಾರ್ಯಕರಣಾತ್ಮಕಾನಿ ಭೂತಾನಿ ಪ್ರಾಣಾ ಅಪಿ ಸತ್ಯಮ್ । ತೇಷಾಂ ಕಾರ್ಯಕರಣಾತ್ಮಕಾನಾಂ ಭೂತಾನಾಂ ಸತ್ಯತ್ವನಿರ್ಧಾರಯಿಷಯಾ ಬ್ರಾಹ್ಮಣದ್ವಯಮ್ ಆರಭ್ಯತೇ । ಸೈವ ಉಪನಿಷದ್ವ್ಯಾಖ್ಯಾ । ಕಾರ್ಯಕರಣಸತ್ಯತ್ವಾವಧಾರಣದ್ವಾರೇಣ[1] ಹಿ ಸತ್ಯಸ್ಯ ಸತ್ಯಂ ಬ್ರಹ್ಮ ಅವಧಾರ್ಯತೇ । ಅತ್ರೋಕ್ತಮ್ "ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್" (೨-೧-೨೦) ಇತಿ । ತತ್ರ ಕೇ ಪ್ರಾಣಾಃ ? ಕಿಯತ್ಯೋ ವಾ ಪ್ರಾಣವಿಷಯಾ ಉಪನಿಷದಃ ? ಕಾಃ? ಇತಿ ಚ ಬ್ರಹ್ಮೋಪನಿಷತ್ಪ್ರಸಙ್ಗೇನ ಕರಣಾನಾಂ ಪ್ರಾಣಾನಾಂ ಸ್ವರೂಪಮ್ ಅವಧಾರಯತಿ । ಪಥಿಗತಕೂಪಾರಾಮಾದ್ಯವಧಾರಣವತ್ ॥

(ಭಾಷ್ಯಾರ್ಥ)

"ಬ್ರಹ್ಮವನ್ನು ವಿಜ್ಞಾಪಿಸಿಕೊಳ್ಳುವೆನು" (೨-೧-೧೫) ಎಂದು ಪ್ರಾರಂಭವಾಯಿತು. ಅಲ್ಲಿ ಯಾವದರಿಂದ ಜಗತ್ತು ಹುಟ್ಟುತ್ತದೆಯೋ, ಯಾವದರ ಸ್ವರೂಪವಾಗಿರುತ್ತದೆಯೋ, ಯಾವದರಲ್ಲಿ ಲಯವಾಗುತ್ತದೆಯೋ, ಅದೇ ಅದ್ವಿತೀಯವಾದ ಬ್ರಹ್ಮವು ಎಂದು ತಿಳಿಸಿದ್ದಾಯಿತು. ಇನ್ನು ಯಾವ ರೂಪವಾಗಿ ಆ ಜಗತ್ತು ಹುಟ್ಟುತ್ತದೆ, ಮತ್ತು ಲಯವಾಗುತ್ತದೆ ? ಎಂದರೆ ಪಂಚಭೂತಾತ್ಮಕವಾಗಿ ಭೂತಗಳು ನಾಮರೂಪಾತ್ಮಕವಾಗಿರುತ್ತವೆ. "ನಾಮ

1. "ಸತ್ಯತ್ವಾವಧಾರಣದ್ವಾರೇಣ" ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

ರೂಪಗಳು ಸತ್ಯವು'' (೧-೬-೩) ಎಂದಲ್ಲವೆ, ಹೇಳಿದೆ? ಆ ಪಂಚಭೂತಾತ್ಮಕವಾದ (ಜಗತ್ತೆಂಬ) ಸತ್ಯಕ್ಕೆ ಸತ್ಯವಾದದ್ದು ಬ್ರಹ್ಮವು. ಹಾಗಾದರೆ ಪಂಚಭೂತಗಳು ಸತ್ಯವೆಂಬುದು ಹೇಗೆ ? ಎಂಬಿ(ದನ್ನು ತಿಳಿಸುವದಕ್ಕೆ) ಮೂರ್ತಾಮೂರ್ತಬ್ರಾಹ್ಮಣವು (ಪ್ರಾರಂಭವಾಗುವದು). ಮೂರ್ತಾಮೂರ್ತಭೂತಾತ್ಮಕವಾಗಿರುವದರಿಂದ ಕಾರ್ಯಕರಣಾತ್ಮಕವಾಗಿರುವ ಭೂತಗಳಾದ ಪ್ರಾಣವೂ ಸತ್ಯವು. ಆ ಕಾರ್ಯಕರಣಾತ್ಮಕವಾದ ಭೂತಗಳ ಸತ್ಯತ್ತ್ವವನ್ನು ಗೊತ್ತುಪಡಿಸುವದಕ್ಕಾಗಿ (ಈ) ಬ್ರಾಹ್ಮಣದ್ವಯವನ್ನು ಆರಂಭಿಸಿರುತ್ತದೆ. ಅದೇ (ಸತ್ಯದ ಸತ್ಯವು) ಎಂಬ ಉಪನಿಷತ್ತಿನ ವ್ಯಾಖ್ಯಾನವು. ಕಾರ್ಯಕರಣಗಳು ಸತ್ಯವೆಂದು ನಿಶ್ಚಯಿಸುವದರಿಂದಲೇ ಅಲ್ಲವೆ, ಸತ್ಯಕ್ಕೂ ಸತ್ಯವಾದ ಬ್ರಹ್ಮವನ್ನು ನಿಶ್ಚಯಿಸಿವಹಾಗಾಗುತ್ತದೆ ? ಇಲ್ಲಿ "ಪ್ರಾಣಗಳೇ ಸತ್ಯವು, ಅವುಗಳಿಗೆ ಇವನು ಸತ್ಯವು" (೨-೧-೨೦) ಎಂದು ಹೇಳಿದೆ(ಯಷ್ಟೆ). ಅಲ್ಲಿ ಪ್ರಾಣಗಳು ಯಾವವು? ಪ್ರಾಣವಿಷಯಕವಾದ ಉಪನಿಷತ್ತುಗಳಾದರೂ ಎಷ್ಟು, ಯಾವವು ? ಎಂಬಿದನ್ನೂ ಬ್ರಹ್ಮದ ಉಪನಿಷತ್ತಿನ (ವಿವರಣೆಯ) ಪ್ರಸಂಗದಿಂದ ಕರಣವಾಗಿರುವ ಪ್ರಾಣಗಳ ಸ್ವರೂಪವನ್ನು ಗೊತ್ತುಮಾಡಲಾಗುತ್ತದೆ. ದಾರಿಯಲ್ಲಿರುವ ಭಾವಿ, ತೋಟ- ಮುಂತಾದವುಗಳನ್ನು ನಿಶ್ಚಯಿಸುವಂತೆಯೇ ಇದು.[1]

## ಶಿಶುಸಂಜ್ಞಕಪ್ರಾಣನ ಉಪಾಸನೆ

(ಉಪನಿಷತ್ತು)

**ಯೋ ಹ ವೈ ಶಿಶುಗ್ಂ ಸಾಧಾನಗ್ಂ ಸಪ್ರತ್ಯಾಧಾನಗ್ಂ ಸಸ್ಥೂಣಗ್ಂ ಸ ದಾಮಂ ವೇದ ಸಪ್ತ ಹ ದ್ವಿಷತೋ ಭ್ರಾತೃವ್ಯಾನವರುಣದ್ಧಿ। ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಸ್ತಸ್ಯೇದಮೇವಾಧಾನಮಿದಂ ಪ್ರತ್ಯಾಧಾನಂ ಪ್ರಾಣಃ ಸ್ಥೂಣಾನ್ನಂ ದಾಮ ॥ ೧ ॥**

೧. ಯಾವನು ಶಿಶುವನ್ನು (ಅದರ) ಆಧಾನದೊಡನೆ ಪ್ರತ್ಯಾಧಾನದೊಡನೆ ಸ್ಥೂಣಸಹಿತವಾಗಿ ದಾಮಸಹಿತವಾಗಿ ಅರಿತುಕೊಂಡಿರುವನೋ ಅವನು (ತನ್ನನ್ನು) ದ್ವೇಷಮಾಡುವ ಏಳು

---

1. ಊರ್ಣನಾಭಿದೃಷ್ಟಾಂತದಲ್ಲಿ ಪ್ರಾಣಗಳನ್ನು ಮೊದಲು ಹೇಳಿರುವದು ಅವುಗಳ ಮೂಲಕವಾಗಿ ಬ್ರಹ್ಮವನ್ನು ತಿಳಿದುಕೊಳ್ಳಬೇಕೆಂದು ತಿಳಿಸುವದಕ್ಕೆ. ಕಾರ್ಯಕರಣಗಳಿಗಿಂತ ವಿಲಕ್ಷಣವಾಗಿ ಕಾರ್ಯಕರಣಗಳಿಗೂ ಸತ್ತೆಯನ್ನು ಕೊಡುವ ಬ್ರಹ್ಮವನ್ನು ತಿಳಿಸುವದೇ ಈ ಬ್ರಾಹ್ಮಣದ್ವಯದ ಗುರಿ. ಪ್ರಾಣಗಳ ವಿವರಣೆಯು ಪ್ರಾಸಂಗಿಕ ಎಂದು ಅಭಿಪ್ರಾಯ.

ದಾಯಾದರನ್ನು ಅವರೋಧಗೊಳಿಸುವನು. ಈ ಮಧ್ಯಮಪ್ರಾಣವಿದೆಯಲ್ಲ, ಇದೇ ಶಿಶು. ಅದಕ್ಕೆ ಇದೇ ಆಧಾನವು, ಇದೇ ಪ್ರತ್ಯಾಧಾನವು, ಪ್ರಾಣವು ಸ್ಥೂಣವು, ಅನ್ನವು ದಾಮವು.

## ಶಿಶುವಿಜ್ಞಾನದ ಫಲ

(ಭಾಷ್ಯ)

೩೨೯. ಯೋ ಹ ವೈ ಶಿಶುಂ ಸಾಧಾನಂ ಸಪ್ರತ್ಯಾಧಾನಂ ಸಸ್ಥೂಣಂ ಸದಾಮಂ ವೇದ ತಸ್ಯೇದಂ ಫಲಮ್ । ಕಿಂ ತತ್ ? ಸಪ್ತ ಸಪ್ತಸಂಖ್ಯಾಕಾನ್ ಹ ದ್ವಿಷತೋ 'ದ್ವೇಷಕರ್ತೄನ್ ಭ್ರಾತೃವ್ಯಾನ್ । ಭ್ರಾತೃವ್ಯಾ ಹಿ ದ್ವಿವಿಧಾ ಭವನ್ತಿ ದ್ವಿಷನ್ತೋಽದ್ವಿಷನ್ತಶ್ಚ । ತತ್ರ ದ್ವಿಷನ್ತೋ ಯೇ ಭ್ರಾತೃವ್ಯಾಃ ತಾನ್ ದ್ವಿಷತೋ ಭ್ರಾತೃವ್ಯಾನ್ ಅವರುಣದ್ಧಿ । ಸಪ್ತ ಯೇ ಶೀರ್ಷಣ್ಯಾಃ ಪ್ರಾಣಾಃ ವಿಷಯೋಪಲಬ್ಧಿದ್ವಾರಾಣಿ ತತ್ಪ್ರಭವಾ ವಿಷಯರಾಗಾಃ ಸಹಜತ್ವಾತ್ ಭ್ರಾತೃವ್ಯಾಃ । ತೇ ಹಿ ಅಸ್ಯ ಸ್ವಾತ್ಮಸ್ಥಾಂ ದೃಷ್ಟಿಂ ವಿಷಯವಿಷಯಾಂ ಕುರ್ವನ್ತಿ । ತೇನ ತೇ ದ್ವೇಷ್ಟಾರೋ ಭ್ರಾತೃವ್ಯಾಃ । ಪ್ರತ್ಯಗಾತ್ಮೇಕ್ಷಣಪ್ರತಿಷೇಧಕರತ್ವಾತ್ । ಕಾಠಕೇ ಚೋಕ್ತಮ್ "ಪರಾಞ್ಚಿ ಖಾನಿ ವ್ಯತೃಣತ್ ಸ್ವಯಮ್ಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾನ್ತರಾತ್ಮನ್" (ಕ. ೨-೧-೧) ಇತ್ಯಾದಿ । ತತ್ರ ಯಃ ಶಿಶ್ವಾದೀನ್ ವೇದ ತೇಷಾಂ ಯಾಥಾತ್ಮ್ಯಮ್ ಅವಧಾರಯತಿ ಸ ಏತಾನ್ ಭ್ರಾತೃವ್ಯಾನ್ ಅವರುಣದ್ಧಿ ಅಪಾವೃಣೋತಿ ವಿನಾಶಯತಿ ॥

(ಭಾಷ್ಯಾರ್ಥ)

ಯಾವಾತನು ಶಿಶುವನ್ನು ಆಧಾನದೊಡನೆ, ಪ್ರತ್ಯಾಧಾನದೊಡನೆ, ಸ್ಥೂಣಸಹಿತ, ದಾಮಸಹಿತವಾಗಿ, ಅರಿತುಕೊಳ್ಳುವನೋ ಅವನಿಗೆ ಇದು ಫಲವು. ಅದು ಯಾವದು ? ಎಂದರೆ ಏಳು, ಏಳು ಸಂಖ್ಯೆಯ (ತನ್ನನ್ನು) ದ್ವೇಷಮಾಡುವ ಹಗೆಮಾಡುತ್ತಿರುವ ದಾಯಾದರನ್ನು– ದಾಯಾದರು ಹಗೆ ಮಾಡುವವರು, ಹಗೆಮಾಡದವರು ಎಂದು ಎರಡು ಬಗೆಯವರಿರುತ್ತಾರಷ್ಟೆ. ಅವರಲ್ಲಿ ಹಗೆಮಾಡುತ್ತಿರುವ ದಾಯಾದರಿರುತ್ತಾರಲ್ಲ, ಆ ಹಗೆಮಾಡುವ ದಾಯಾದರನ್ನು – ಅವರೋಧಗೊಳಿಸುತ್ತಾನೆ. ತಲೆಯಲ್ಲಿರುವ ಏಳು ಪ್ರಾಣಗಳು, ವಿಷಯಗಳನ್ನು ಅನುಭವಿಸುವ ದ್ವಾರಗಳು, ಎಂದರೆ ಅವುಗಳಿಂದುಂಟಾಗುವ ವಿಷಯರಾಗಗಳು ತನ್ನೊಡನೆ ಹುಟ್ಟಿದವಾದ್ದರಿಂದ ದಾಯಾದರು ; ಅವು ಇವನ ಆತ್ಮನಲ್ಲಿರುವ ದೃಷ್ಟಿಯನ್ನು ವಿಷಯಗಳನ್ನೇ ವಿಷಯವಾಗಿಸುವಂತೆ ಮಾಡುತ್ತವೆಯಲ್ಲವೆ ? ಆದ್ದರಿಂದ ಅವು ದ್ವೇಷಮಾಡುವ ದಾಯಾದರು ; ಏಕೆಂದರೆ ಪ್ರತ್ಯಗಾತ್ಮನನ್ನು

**ನೋಡದಂತೆ ತಡೆಗಟ್ಟುತ್ತಾನೆ.** ಕಾಠಕದಲ್ಲಿಯೂ "ಸ್ವಯಂಭುವು ಇಂದ್ರಿಯಗಳನ್ನು ಹೊರಗಡೆಗೆ ಕೊರೆದಿರುತ್ತಾನೆ; ಆದ್ದರಿಂದ (ಮನುಷ್ಯನು) ಹೊರಕ್ಕೆ ನೋಡುತ್ತಾನೆಯೇ ಹೊರತು ಒಳಗೆ ನೋಡುವದಿಲ್ಲ" (ಕ. ೨-೧-೧) ಎಂದು ಹೇಳಿದೆ. ಇಲ್ಲಿ ಯಾವನು ಶಿಶುವೇ ಮುಂತಾದವುಗಳನ್ನು ಅರಿತುಕೊಳ್ಳುವನೋ, ಅವುಗಳ ನಿಜವನ್ನು ಗೊತ್ತುಮಾಡಿಕೊಳ್ಳುವನೋ, ಅವನು ಈ ದಾಯಾದರನ್ನು ಅವರೋಧಗೊಳಿಸುತ್ತಾನೆ, ತೆಗೆದುಹಾಕುತ್ತಾನೆ, ವಿನಾಶಗೊಳಿಸುತ್ತಾನೆ.

## ಸೋಽಪಕರಣಶಿಶುವಿನ ಜ್ಞಾನ

(ಭಾಷ್ಯ)

೩೩೦. ತಸ್ಮೈ ಫಲಶ್ರವಣೇನ ಅಭಿಮುಖೀಭೂತಾಯ ಆಹ– ಅಯಂ ವಾವ ಶಿಶುಃ । ಕೋಽಸೌ? ಯೋಽಯಂ ಮಧ್ಯಮಃ ಪ್ರಾಣಃ । ಶರೀರಮಧ್ಯೇ ಯಃ ಪ್ರಾಣಃ ಲಿಙ್ಗಾತ್ಮಾ ಯಃ ಪಞ್ಚಧಾ ಶರೀರಮ್ ಆವಿಷ್ಟಃ 'ಬೃಹನ್ ಪಾಣ್ಡರವಾಸಃ ಸೋಮರಾಜನ್'(೨-೧-೧೫) ಇತ್ಯುಕ್ತಃ। ಯಸ್ಮಿನ್ ವಾಙ್ಮನಃಪ್ರಭೃತೀನಿ ಕರಣಾನಿ ವಿಷಕ್ತಾನಿ, ಪಡ್ವೀಶಶಙ್ಕುನಿದರ್ಶನಾತ್ । ಸ ಏಷ ಶಿಶುರಿವ । ವಿಷಯೇಷು ಇತರಕರಣವತ್ ಅಪಟುತ್ವಾತ್ । ಶಿಶುಂ ಸಾಧಾನಮ್ ಇತ್ಯುಕ್ತಮ್ । ಕಿಂ ಪುನಸ್ತಸ್ಯ ಶಿಶೋರ್ವತ್ಸಸ್ಥಾನೀಯಸ್ಯ ಕರಣಾತ್ಮನಃ ಆಧಾನಮ್ । ತಸ್ಯ ಇದಮೇವ ಶರೀರಮ್ ಆಧಾನಂ ಕಾರ್ಯಾತ್ಮಕಮ್ । ಆಧೀಯತೇಽಸ್ಮಿನ್ ಇತಿ ಆಧಾನಮ್ । ತಸ್ಯ ಹಿ ಶಿಶೋಃ ಪ್ರಾಣಸ್ಯ ಇದಂ ಶರೀರಮ್ ಅಧಿಷ್ಠಾನಮ್ । ಅಸ್ಮಿನ್ ಹಿ ಕರಣಾನಿ ಅಧಿಷ್ಠಿತಾನಿ ಲಬ್ಧಾತ್ಮಕಾನಿ ಉಪಲಬ್ಧಿದ್ವಾರಾಣಿ ಭವನ್ತಿ । ನ ತು ಪ್ರಾಣಮಾತ್ರೇ ವಿಷಕ್ತಾನಿ । ತಥಾ ಹಿ ದರ್ಶಿತಮ್ ಅಜಾತಶತ್ರುಣಾ । ಉಪಸಂಹೃತೇಷು ಕರಣೇಷು ವಿಜ್ಞಾನಮಯೋ ನೋಪಲಭ್ಯತೇ । ಶರೀರದೇಶವ್ಯೂಢೇಷು ತು ಕರಣೇಷು ವಿಜ್ಞಾನಮಯಃ ಉಪಲಭಮಾನ ಉಪಲಭ್ಯತೇ । ತಚ್ಚ ದರ್ಶಿತಂ ಪಾಣಿಪೇಷಣಪ್ರತಿಬೋಧನೇನ । ಇದಂ ಪ್ರತ್ಯಾಧಾನಮ್ । ಶಿರಃಪ್ರದೇಶವಿಶೇಷೇಷು ಪ್ರತಿ ಪ್ರತಿ ಆಧೀಯತ ಇತಿ ಪ್ರತ್ಯಾಧಾನಮ್ । ಪ್ರಾಣಃ ಸ್ಥೂಣಾ । ಅನ್ನಪಾನಜನಿತಾ ಶಕ್ತಿಃ ಪ್ರಾಣಃ ಬಲಮ್ ಇತಿ ಪರ್ಯಾಯಾಃ । ಬಲಾವಷ್ಟಮ್ಭೋ ಹಿ ಪ್ರಾಣೋಽಸ್ಮಿನ್ ಶರೀರೇ । "ಸ ಯತ್ರಾಯಮಾತ್ಮಾಽಬಲ್ಯಂ ನ್ಯೇತ್ಯ ಸಂಮೋಹಮಿವ" (೪-೪-೧) ಇತಿ ದರ್ಶನಾತ್ । ಯಥಾ ವತ್ಸಃ ಸ್ಥೂಣಾವಷ್ಟಮ್ಭಃ ಏವಂ ಶರೀರಪಕ್ಷಪಾತೀ ವಾಯುಃ ಪ್ರಾಣಃ ಸ್ಥೂಣಾ ಇತಿ ಕೇಚಿತ್ । ಅನ್ನಂ ದಾಮ । ಅನ್ನಂ ಹಿ ಭುಕ್ತಂ ತ್ರೇಧಾ[1] ಪರಿಣಮತೇ । ಯಃ ಸ್ಥೂಲಃ

1. ಇದರ ಮುಂದೆ 'ಅನ್ನಂ ದಾಮ' ಎಂದು ಆ॥ ಪಾಠದ ಪುಸ್ತಕದಲ್ಲಿ ಅಚ್ಚಾಗಿರುವದು ಹಿಂದಕ್ಕೆ ಬರಬೇಕು.

ಪರಿಣಾಮಃ ಸ ಏತದ್ದ್ವಯಂ ಭೂತ್ವಾ ಇಮಾಮುಷ್ಯೇತಿ ಮೂತ್ರಂ ಚ ಪುರೀಷಂ ಚ । ಯೋ ಮಧ್ಯಮೋ ರಸಃ ಸ ರಸೋ ಲೋಹಿತಾದಿಕ್ರಮೇಣ ಸ್ವಕಾರ್ಯಂ ಶರೀರಂ ಸಾಪ್ತಧಾತುಕಮ್ ಉಪಚಿನೋತಿ । ಸ್ವಯೋನ್ಯನ್ನಾಗಮೇ ಹಿ ಶರೀರಮ್ ಉಪಚೀಯತೇ । ಅನ್ನಮಯತ್ವಾತ್ । ವಿಪರ್ಯಯೇ ಅಪಕ್ಷೀಯತೇ ಪತತಿ । ಯಸ್ತು ಅಣಿಷ್ಠೋ ರಸಃ ಅಮೃತಮ್ ಊರ್ಕ್ ಪ್ರಭಾವಃ ಇತಿ ಚ ಕಥ್ಯತೇ ಸ ನಾಭೇರೂರ್ಧ್ವಂ ಹೃದಯದೇಶಮ್ ಆಗತ್ಯ ಹೃದಯಾತ್ ವಿಪ್ರಸೃತೇಷು ದ್ವಾಸಪ್ತತಿನಾಡೀಸಹಸ್ರೇಷು ಅನುಪ್ರವಿಶ್ಯ ಯತ್ತತ್ ಕರಣಸಂಘಾತರೂಪಂ ಲಿಙ್ಗಂ ಶಿಶುಸಂಜ್ಞಕಂ ತಸ್ಯ ಶರೀರೇ ಸ್ಥಿತಿಕಾರಣಂ ಭವತಿ । ಬಲಮ್ ಉಪಜನಯತ್ ಸ್ಥೂಣಾಖ್ಯಂ ತೇನ ಅನ್ನಮ್ ಉಭಯತಃ ಪಾಶವತ್ ಸತ್ ದಾಮವತ್[1] ಪ್ರಾಣಶರೀರಯೋರ್ನಿಬನ್ಧನಂ ಭವತಿ ॥

(ಭಾಷ್ಯಾರ್ಥ)

ಫಲಶ್ರವಣದಿಂದ ಅಭಿಮುಖನಾದ ಆ (ಶ್ರೋತೃವಿಗೆ ಇದನ್ನು ಶ್ರುತಿ) ಹೇಳುತ್ತದೆ: ಇದೇ ಶಿಶು. ಅದು ಯಾವದು ? ಎಂದರೆ ಈ ಮಧ್ಯಮ ಪ್ರಾಣನಿದಾನಲ್ಲ, ಶರೀರದೊಳಗೆ ಪ್ರಾಣನೆಂಬ ಲಿಂಗಾತ್ಮನಿದಾನಲ್ಲ, ಶರೀರವನ್ನು ಐದು ಪ್ರಕಾರದಿಂದ ಒಳಹೊಕ್ಕಿರುವನಲ್ಲ, "ಬೃಹನ್, ಪಾಂಡರವಾಸನೆ, ಸೋಮರಾಜನೆ" (೨-೧-೧೫) ಎಂದು (ಹಿಂದೆ) ಹೇಳಿತ್ತಲ್ಲ, ವಾಕ್ಕು ಮನಸ್ಸು -ಮುಂತಾದವುಗಳು (ಅದರಲ್ಲಿ) ಸೇರಿಕೊಂಡಿರುವವೆಂದು ಕಾಲುಗೂಟಗಳ ನಿದರ್ಶನದಿಂದ (೬-೧-೧೩ ಗೊತ್ತಾಗಿರುವದಲ್ಲ), ಆ ಇದು ಶಿಶುವಿದ್ದಂತೆ ; ಏಕೆಂದರೆ ಇತರ ಕರಣಗಳಂತೆ (ಈ ಪ್ರಾಣವು) ವಿಷಯಗಳಲ್ಲಿ ಪಟುವಾಗಿರುವದಿಲ್ಲ.[2] "ಆಧಾನದೊಡನಿರುವ ಶಿಶುವನ್ನು" ಎಂದು ಹೇಳಿತ್ತಷ್ಟೆ. ಆ ಶಿಶುವಿಗೆ ಕರುವಿನಂತಿರುವ (ಆ) ಕರಣಾತ್ಮನಿಗೆ ಆಧಾನವು ಯಾವದು ? ಎಂದರೆ ಅದಕ್ಕೆ ಇದೇ ಕಾರ್ಯಾತ್ಮಕವಾದ (ಈ) ಶರೀರವೇ ಆಧಾನವು; (ಪ್ರಾಣನನ್ನು) ಇದರಲ್ಲಿ ನಿಲ್ಲಿಸಿದೆಯಾದ್ದರಿಂದ (ಇದಕ್ಕೆ) ಆಧಾನ(ವೆಂದು ಹೆಸರು).[3] ಆ ಪ್ರಾಣನೆಂಬ ಶಿಶುವಿಗೆ ಈ ಶರೀರವೇ ಆಶ್ರಯಸ್ಥಾನವಲ್ಲವೆ ? ಇದರಲ್ಲಲ್ಲವೆ, ಕರಣಗಳು

---

1. 'ಸದಾಮವತ್' ಎಂಬ ಪಾಠಕ್ಕಿಂತ ಇದು ಮೇಲು.

2. ಪ್ರಾಣಕ್ಕೆ ಯಾವ ವಿಶೇಷವಿಷಯವೂ ಇಲ್ಲ. ಸೂ. ಭಾ. ೨-೪-೧೧ ಭಾ. ಭಾ. ೧೯೩ನ್ನು ನೋಡಿ.

3. ಕರುವಿಗೆ ದನದ ಕೊಟ್ಟಿಗೆಯಂತೆ ಆಶ್ರಯಸ್ಥಾನವು.

ಇದ್ದುಕೊಂಡು (ತಮ್ಮ) ಸ್ವರೂಪವನ್ನು ಪಡೆದುಕೊಂಡು[1] ಅನುಭವದ್ವಾರಗಳಾಗಿರುವವು, ಬರಿಯ ಪ್ರಾಣದಲ್ಲಿ ಸೇರಿಕೊಂಡಿದ್ದರೆ (ಅನುಭವದ್ವಾರಗಳಾಗಿರುವದೇ) ಇಲ್ಲ.[2] ಹಾಗೆಂದಲ್ಲವೆ, ಅಜಾತಶತ್ರುವು ತೋರಿಸಿಕೊಟ್ಟದ್ದು ? ಕರಣಗಳು ಉಪಸಂಹೃತವಾಗಿರುವಲ್ಲಿ ವಿಜ್ಞಾನಮಯನು ಕಾಣಬರುವದಿಲ್ಲ, (ಅವು) ಶರೀರದ (ಬೇರೆಬೇರೆಯ) ಕಡೆಗಳಲ್ಲಿ ವಿಂಗಡಿಸಿಕೊಂಡಿದ್ದರೆ ಮಾತ್ರ ವಿಜ್ಞಾನಮಯನು ( ವಿಷಯಗಳನ್ನು ) ಅನುಭವಿಸುವವನಾಗಿ ಕಂಡುಬರುತ್ತಾನೆ- (ಎಂದು)? ಇದನ್ನು ಕೈಯಿಂದ ಹೊರಳಾಡಿಸಿ (ಸುಪ್ತಪುರುಷನನ್ನು) ಎಚ್ಚರಗೊಳಿಸಿದ್ದರಿಂದ (೨-೧-೧೫) ತೋರಿಸಿದ್ದಾಗಿದೆ.[3]

ಈ ಶಿರಸ್ಸು ಪ್ರತ್ಯಾಧಾನವು, ಬೇರೆಬೇರೆಯ ಪ್ರದೇಶವಿಶೇಷಗಳಲ್ಲಿ ಪ್ರತ್ಯೇಕವಾಗಿ (ಈ ಪ್ರಾಣವನ್ನು) ಇಟ್ಟಿದೆಯಾದ್ದರಿಂದ[4] (ಶಿರಸ್ಸು) ಪ್ರತ್ಯಾಧಾನವು. ಪ್ರಾಣವು ಸ್ಥೂಣವು ; ಅನ್ನಪಾನಗಳಿಂದಾಗಿರುವ ಶಕ್ತಿಯು, ಪ್ರಾಣವು, ಬಲವು ಎಂದು ಪರ್ಯಾಯಶಬ್ದಗಳು. ಈ ಶರೀರದಲ್ಲಿ ಬಲವನ್ನಾಶ್ರಯಿಸಿಕೊಂಡಲ್ಲವೆ, ಪ್ರಾಣವು ಇದ್ದುಕೊಂಡಿರುತ್ತದೆ? "ಆ ಈ ಆತ್ಮನು ಎಲ್ಲಿ ಅಬಲತ್ವವನ್ನು ಹೊಂದಿ ಸಮ್ಮೋಹವನ್ನು (ಹೊಂದಿ)ದಂತೆ ಆಗುವನೋ" (೪-೪-೧) ಎಂಬ ಶ್ರುತಿಯಿಂದ (ಹೀಗೆಂದು ಸಿದ್ಧವಾಗುತ್ತದೆ). ಕರುವು ಹೇಗೆ ಗೂಟವನ್ನು ಆಶ್ರಯಿಸಿಕೊಂಡಿರುವದೋ ಹಾಗೆಯೇ (ಇದು), ಶರೀರಪಕ್ಷಪಾತಿಯಾದ ವಾಯುವೇ ಪ್ರಾಣವು, (ಅದೇ ಇಲ್ಲಿ) ಗೂಟವು ಎಂದು ಕೆಲವರು[5]

---

1. ಕರಣಗಳಾಗಿ ತೋರಿಕೊಂಡು.

2. ಶರೀರಸಂಬಂಧವಿಲ್ಲದೆ ಬರಿಯ ಪ್ರಾಣದೊಡನೆ ಒಂದಾಗಿದ್ದರೆ ಶಬ್ದಾದಿಗಳನ್ನು ಅನುಭವಿಸುವ ದ್ವಾರಗಳಾಗಿರುವದಿಲ್ಲ.

3. ಸುಷುಪ್ತನಾಗಿದ್ದಾಗ ವಿಷಯಗಳನ್ನು ವಿಶೇಷರೂಪದಿಂದ ಅರಿಯಲಿಲ್ಲ, ಕೈಯಿಂದ ಹೊರಳಾಡಿಸಿದಮೇಲೆಯೇ ಅರಿತನು- ಎಂಬುದರಿಂದ ಶರೀರದಲ್ಲಿರುವ ಪ್ರಾಣಗಳೇ ವಿಷಯವಿಶೇಷಗಳನ್ನು ಅರಿಯುತ್ತವೆಯೆಂದೂ ಅವುಗಳ ಮೂಲಕವೇ ಆತ್ಮನು ವಿಜ್ಞಾನಮಯನು ಎನ್ನಿಸಿಕೊಳ್ಳುತ್ತಾನೆಂದೂ ಸುಪ್ತಪುರುಷದೃಷ್ಟಾಂತದಿಂದ ಅಜಾತಶತ್ರುವು ಗಾರ್ಗ್ಯನಿಗೆ ತೋರಿಸಿಕೊಟ್ಟಿರುತ್ತಾನೆ.

4. ಕೊಟ್ಟಿಗೆಯಲ್ಲಿ ಬೇರೆಬೇರೆಯ ಗೊಂತುಗಳಂತೆ ಇರುವ ಕರಣಗೋಳಕಗಳಲ್ಲಿಟ್ಟಿರುತ್ತದೆಯಾದ್ದರಿಂದ.

5. "ಪ್ರಾಣವೆಂದರೆ ಉಚ್ಛ್ವಾಸನಿಶ್ವಾಸಗಳೆಂಬ ಕೆಲಸಗಳನ್ನು ಮಾಡುವ ಶರೀರಪಕ್ಷಪಾತಿಯಾದ ವಾಯುವನ್ನು ಗ್ರಹಿಸಬೇಕು ; ಈ ಗೂಟದಲ್ಲಿರುವ ಕರುವೆಂದರೆ ಲಿಂಗಪಕ್ಷಪಾತಿಯಾದ ಕರಣದೇವತೆಯನ್ನು ಗ್ರಹಿಸಬೇಕು ; ಆ ದೇವನಾದ ಪ್ರಾಣನು ಈ ಹೊರಗಿನ ಪ್ರಾಣದಲ್ಲಿ ಬದ್ಧನಾಗಿರುತ್ತಾನೆ" ಎಂದು ಭರ್ತೃಪ್ರಪಂಚರ ಭಾಷ್ಯ. ಆ॥ ಟೀ॥ ಯನ್ನು ನೋಡಿ.

(ಅಭಿಪ್ರಾಯವುಪಟ್ಟಿರುತ್ತಾರೆ). ಅನ್ನವೇ ದಾಮವು. ಏಕೆಂದರೆ ಉಂಡ ಅನ್ನವು ಮೂರು ಬಗೆಯಾಗಿ ಪರಿಣಮಿಸುತ್ತದೆ. (ಅವುಗಳಲ್ಲಿ) ಸ್ಥೂಲವಾದ ಪರಿಣಾಮವುಂಟಲ್ಲ, ಅದು ಮೂತ್ರ, ಪುರೀಷ- ಎಂಬೀ ಎರಡಾಗಿ ಈ (ಭೂಮಿಯಲ್ಲಿ) ಸೇರಿಹೋಗುತ್ತದೆ. ಮಧ್ಯಮವಾದ ರಸವಿರುತ್ತದೆಯಲ್ಲ, ಆ ರಸವು ರಕ್ತವೇ ಮುಂತಾದ ಕ್ರಮದಿಂದ ತನ್ನ ಕಾರ್ಯವಾದ ಏಳು ಧಾತುಗಳ ಶರೀರವನ್ನು ಬೆಳೆಯಿಸುತ್ತದೆ[1]. ತನ್ನ ಯೋನಿಯಾದ ಅನ್ನವು ಬಂದರಷ್ಟೆ, ಶರೀರವು ಬೆಳೆಯುತ್ತದೆ? ಏಕೆಂದರೆ (ಶರೀರವು) ಅನ್ನಮಯವಾಗಿರುತ್ತದೆ. ಹಾಗಿಲ್ಲದಿದ್ದರೆ (ಅದು) ಸೊರಗಿಬೀಳುತ್ತದೆ. (ಇನ್ನು) ತೀರ ಸೂಕ್ಷ್ಮವಾದ ರಸವಿದೆಯಲ್ಲ, ಅದು 'ಅಮೃತ', 'ಊರ್ಕ್', 'ಪ್ರಭಾವ' ಎನ್ನಿಸುತ್ತದೆ. ಅದು ಹೊಕ್ಕುಳಿನಿಂದ ಮೇಲಕ್ಕೆ ಹೃದಯದಕಡೆಗೆ ಬಂದು ಹೃದಯದಿಂದ ಎಲ್ಲಾ ಕಡೆಗೂ ಹೊರಟಿರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಒಳಹೊಕ್ಕು ಸ್ಥೂಣವೆಂಬ ಹೆಸರಿನ ಬಲವನ್ನುಂಟುಮಾಡಿ ಕರಣಸಂಘಾತರೂಪವಾದ ಶಿಶುವೆಂಬ ಹೆಸರಿನ ಲಿಂಗವಿದೆಯಲ್ಲ, ಅದು ಶರೀರದಲ್ಲಿ ನಿಂತಿರುವದಕ್ಕೆ ಕಾರಣವಾಗುತ್ತದೆ[2]. ಆದ್ದರಿಂದ ಅನ್ನವು ಇಕ್ಕುಣಿಕೆಯ ಕರುವಿನ ಹಗ್ಗದಂತೆ ಇದ್ದುಕೊಂಡು ಪ್ರಾಣಶರೀರಗಳೆರಡಕ್ಕೂ ಸಂಬಂಧವನ್ನುಂಟುಮಾಡುತ್ತದೆ.

## ಪ್ರಾಣಕ್ಕೆ ನೇತ್ರದಲ್ಲಿ ಏಳು ಅಕ್ಷಿತಿಗಳು

(ಉಪನಿಷತ್ತು)

**ತಮೇತಾಃ ಸಪ್ತಾಕ್ಷಿತಯ ಉಪತಿಷ್ಠನ್ತೇ ತದ್ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಸ್ತಾಭಿರೇನಗ್ಂ ರುದ್ರೋಽನ್ವಾಯತ್ತೋಽಥ ಯಾ ಅಕ್ಷನ್ನಾಪಸ್ತಾಭಿಃ ಪರ್ಜನ್ಯೋ ಯಾ ಕನೀನಕಾ ತಯಾಽಽದಿತ್ಯೋ ಯತ್ಕೃಷ್ಣಂ ತೇನಾಗ್ನಿರ್ಯಚ್ಛುಕ್ಲಂ ತೇನೇನ್ದ್ರೋಽಧರಯೈನಂ ವರ್ತನ್ಯಾ ಪೃಥಿವ್ಯನ್ವಾಯತ್ತಾ ದ್ಯೌರುತ್ತರಯಾ ನಾಸ್ಯಾನ್ನಂ ಕ್ಷೀಯತೇ ಯ ಏವಂ ವೇದ ॥೨॥**

೨. ಅದನ್ನು ಈ ಏಳು ಅಕ್ಷಿತಿಗಳು ಸ್ತೋತ್ರಮಾಡುತ್ತಿರುವವು. ಇಲ್ಲಿ ಕಣ್ಣಿನಲ್ಲಿರುವ ಈ ಕೆಂಪುಗೀರುಗಳಿವೆಯಲ್ಲ, ಅವುಗಳ ಮೂಲಕ ರುದ್ರನು ಇದಕ್ಕೆ ಅಧೀನನಾಗಿರುವನು. ಕಣ್ಣಿನಲ್ಲಿರುವ

1. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ರೇತಸ್ಸು- ಹೀಗೆ ಪರಿಣಾಮವಾಗಿ ಶರೀರವನ್ನು ಬೆಳೆಯಿಸುತ್ತದೆ.

2. ಈ ವಿವರಣೆಯು ಎಲ್ಲಿಂದ ತೆಗೆದುಕೊಂಡದ್ದೆಂಬುದು ತಿಳಿಯದು; ಶತ. ಬ್ರಾ. ದಲ್ಲಿರಬಹುದು. ಛಾಂ. ೬-೮-೨ರಿಂದ ಳನ್ನು ನೋಡಿ.

ನೀರಿರುವದಲ್ಲ, ಅವುಗಳ ಮೂಲಕ ಪರ್ಜನ್ಯನು; ಕಣ್ಣುಗುಡ್ಡೆಯಿದೆಯಲ್ಲ, ಅದರ ಮೂಲಕ ಆದಿತ್ಯನು. ಕಪ್ಪು(ಭಾಗ)ವಿದೆಯಲ್ಲ, ಅದರ ಮೂಲಕ ಅಗ್ನಿಯು; ಬಿಳಿಯ (ಭಾಗ)ವಿದೆಯಲ್ಲ, ಅದರ ಮೂಲಕ ಇಂದ್ರನು. ಕೆಳಗಿನ ಕಣ್ಣುಪೊರೆಯಿದೆಯಲ್ಲ, ಅದರ ಮೂಲಕ ಇದಕ್ಕೆ ಪೃಥಿವಿಯು ಅಧೀನವಾಗಿರುವದು; ದ್ಯುಲೋಕವು ಮೇಲಿನ ಪೊರೆಯ ಮೂಲಕ. ಯಾವನು ಹೀಗೆಂದು ತಿಳಿಯುವನೋ ಅವನ ಅನ್ನವು ಕ್ಷಯವಾಗುವದಿಲ್ಲ.

## ಪ್ರಾಣನ ಕೆಲವು ಉಪಾಸನೆಗಳು

(ಭಾಷ್ಯ)

೩೩೧. ಇದಾನೀಂ ತಸ್ಯೈವ ಶಿಶೋಃ ಪ್ರತ್ಯಾಧಾನೇ ಊಢಸ್ಯ ಚಕ್ಷುಷಿ ಕಾಶ್ಚನ ಉಪನಿಷದ ಉಚ್ಯನ್ತೇ । ತಮೇತಾಃ ಸಪ್ತ ಅಕ್ಷಿತಯಃ ಉಪತಿಷ್ಠನ್ತೇ । ತಂ ಕರಣಾತ್ಮಕಂ ಪ್ರಾಣಂ ಶರೀರೇ ಅನ್ನಬನ್ಧನಂ ಚಕ್ಷುಷಿ ಊಢಮ್ ಏತಾ ವಕ್ಷ್ಯಮಾಣಾ ಸಪ್ತಾ ಸಪ್ತಸಂಖ್ಯಾಕಾ ಅಕ್ಷಿತಯಃ ಅಕ್ಷಿತಿಹೇತುತ್ವಾತ್ ಉಪತಿಷ್ಠನ್ತೇ । ಯದ್ಯಪಿ ಮನ್ತ್ರಕರಣೇ ತಿಷ್ಠತಿಃ ಉಪಪೂರ್ವಃ ಆತ್ಮನೇಪದೀ ಭವತಿ । ಇಹಾಪಿ ಸಪ್ತ ದೇವತಾಭಿಧಾನಾನಿ ಮನ್ತ್ರಸ್ಥಾನೀಯಾನಿ ಕರಣಾನಿ ತಿಷ್ಠತೇಃ । ಅತಃ ಅತ್ರಾಪಿ ಆತ್ಮನೇಪದಂ ನ ವಿರುದ್ಧಮ್ । ಕಾಸ್ತಾ ಅಕ್ಷಿತಯ ಇತಿ ? ಉಚ್ಯನ್ತೇ । ತತ್ ತತ್ರ ಯಾ ಇಮಾಃ ಪ್ರಸಿದ್ಧಾಃ ಅಕ್ಷನ್ ಅಕ್ಷಣಿ ಲೋಹಿನ್ಯಃ ಲೋಹಿತಾ ರಾಜಯಃ ರೇಖಾಃ ತಾಭಿಃ ದ್ವಾರಭೂತಾಭಿಃ ಏನಂ ಮಧ್ಯಮಂ ಪ್ರಾಣಂ ರುದ್ರಃ ಅನ್ವಾಯತ್ತಃ ಅನುಗತಃ । ಅಥ ಯಾ ಅಕ್ಷನ್ ಅಕ್ಷಣಿ ಆಪಃ ಧೂಮಾದಿಸಂಯೋಗೇನ ಅಭಿವ್ಯಜ್ಯಮಾನಾಃ ತಾಭಿರದ್ಭಿಃ ದ್ವಾರಭೂತಾಭಿಃ ಪರ್ಜನ್ಯಃ ದೇವತಾತ್ಮಾ ಅನ್ವಾಯತ್ತಃ ಅನುಗತಃ ಉಪತಿಷ್ಠತೇ ಇತ್ಯರ್ಥಃ । ಸ ಚ ಅನ್ನಭೂತೋಽಕ್ಷಿತಿಃ ಪ್ರಾಣಸ್ಯ । "ಪರ್ಜನ್ಯೇ ವರ್ಷತ್ಯಾನನ್ದಿನಃ ಪ್ರಾಣಾ ಭವನ್ತಿ" (ಪ್ರ. ೨-೧೦)[1] ಇತಿ ಶ್ರುತ್ಯನ್ತರಾತ್। ಯಾ ಕನೀನಕಾ ದೃಕ್ಶಕ್ತಿಃ ತಯಾ ಕನೀನಕಯಾ ದ್ವಾರೇಣ ಆದಿತ್ಯಃ ಮಧ್ಯಮಂ ಪ್ರಾಣಮ್ ಉಪತಿಷ್ಠತೇ । ಯತ್ ಕೃಷ್ಣಂ ಚಕ್ಷುಷಿ ತೇನ ಏನಮ್ ಅಗ್ನಿರುಪತಿಷ್ಠತೇ । ಯತ್ ಶುಕ್ಲಂ ಚಕ್ಷುಷಿ ತೇನ ಇನ್ದ್ರೋಽಧರಯಾ ವರ್ತನ್ಯಾ ಪಕ್ಷ್ಮಣಾ ಏನಂ ಪೃಥಿವೀ ಅನ್ವಾಯತ್ತಾ । ಅಧರತ್ವಸಾಮಾನ್ಯಾತ್ । ದ್ಯೌಃ ಉತ್ತರಯಾ । ಊರ್ಧ್ವತ್ವಸಾಮಾನ್ಯಾತ್ । ಏತಾಃ ಸಪ್ತ ಅನ್ನಭೂತಾಃ ಪ್ರಾಣಸ್ಯ ಸನ್ತತಮ್ ಉಪತಿಷ್ಠನ್ತೇ ಇತ್ಯೇವಂ ಯೋ ವೇದ ತಸ್ಯ ಏತತ್ ಫಲಮ್ ನಾಸ್ಯ ಅನ್ನಂ ಕ್ಷೀಯತೇ ಯ ಏವಂ ವೇದ ॥

1. ಇದು ಶ್ರುತಿಯ ಅರ್ಥಮಾತ್ರ.

(ಭಾಷ್ಯಾರ್ಥ)

ಈಗ (ತನ್ನ) ಗೊಂತಿನಲ್ಲಿ ನಿಂತಿರುವ ಆ ಕರುವಿಗೇ[1] ಚಕ್ಷುಃ(ಸ್ಥಾನ)ದಲ್ಲಿ ಕೆಲವು ಉಪನಿಷತ್ತುಗಳನ್ನು ಹೇಳಲಾಗುತ್ತದೆ. "ತಮೇತಾಃ ಸಪ್ತಾಕ್ಷಿತಯಃ ಉಪತಿಷ್ಠನ್ತೇ" (ಎಂಬ ಕಂಡಿಕೆಯ ಅರ್ಥವೇನೆಂದರೆ) ಶರೀರಕ್ಕೆ ಅನ್ನದಿಂದ ಕಟ್ಟಿಹಾಕಿರುವ, ಚಕ್ಷುಸ್ಸಿನಲ್ಲಿ ನಿಂತಿರುವ ಆ ಕರಣಾತ್ಮಕನಾದ ಪ್ರಾಣನನ್ನು ಈ ಮುಂದೆ ಹೇಳುವ ಏಳು, ಏಳು ಸಂಖ್ಯೆಯು, ಅಕ್ಷಿತಿಗಳು ಅಕ್ಷಯಕ್ಕೆ ಕಾರಣವಾಗಿರುವದರಿಂದ (ಅಕ್ಷಿತಿಗಳೆನಿಸಿರುವವುಗಳು), ಸ್ತೋತ್ರ ಮಾಡುತ್ತಿರುವವು. ಸ್ಥಾ ಎಂಬ ಧಾತುವು ಉಪ ಎಂಬ (ಉಪಸರ್ಗ)ಪೂರ್ವಕವಾಗಿದ್ದರೆ ಮಂತ್ರದಿಂದ ಸ್ತೋತ್ರಮಾಡುವ (ಸಂದರ್ಭದಲ್ಲಿ ಮಾತ್ರ) ಆತ್ಮನೇಪದಿಯಾಗುತ್ತದೆ ಎಂಬುದು ನಿಜ[2]; (ಆದರೆ) ಇಲ್ಲಿಯೂ ದೇವತೆಗಳ ಏಳು ಹೆಸರುಗಳು ಮಂತ್ರಸ್ಥಾನೀಯವಾಗಿ ಉಪಸ್ಥಾನಕ್ಕೆ ಕರಣವಾಗಿವೆ[3]. ಆದ್ದರಿಂದ ಆತ್ಮನೇಪದವು (ಬಂದಿರುವದು) ವಿರುದ್ಧವಲ್ಲ.

ಆ ಅಕ್ಷಿತಿಗಳು ಯಾವವು ? ಎಂದರೆ (ಶ್ರುತಿ) ಹೇಳುತ್ತದೆ. (ತತ್=ತತ್ರ) ಅಲ್ಲಿ ಈ ಪ್ರಸಿದ್ಧವಾದ (ಅಕ್ಷನ್=ಅಕ್ಷಣಿ) ಕಣ್ಣಿನಲ್ಲಿರುವ (ಲೋಹಿನ್ಯಃ=ಲೋಹಿತಾಃ) ಕೆಂಪುಗೀರುಗಳಿರುವವಲ್ಲ, ಗೆರೆಗಳಿರುವವಲ್ಲ, ಅವುಗಳ ಮೂಲಕ ಈ ಮಧ್ಯಮಪ್ರಾಣನಿಗೆ ರುದ್ರನು ಅಧೀನನಾಗಿರುತ್ತಾನೆ, ಅನುಸರಿಸಿಕೊಂಡಿರುತ್ತಾನೆ. ಇನ್ನು (ಅಕ್ಷನ್=ಅಕ್ಷಣಿ) ಕಣ್ಣಿನಲ್ಲಿ ಹೊಗೆಯೇ ಮುಂತಾದದ್ದರ ಸಂಯೋಗದಿಂದ ತೋರಿಕೊಳ್ಳುವ ನೀರಿರುವದಲ್ಲ, ಆ ನೀರಿನ ಮೂಲಕ ಪರ್ಜನ್ಯನೆಂಬ ದೇವತಾತ್ಮನು ಅಧೀನನಾಗಿರುತ್ತಾನೆ, ಅನುಸರಿಸಿಕೊಂಡಿರುತ್ತಾನೆ, ಸ್ತೋತ್ರಮಾಡುತ್ತಾನೆ ಎಂದರ್ಥ. ಮತ್ತು ಅವನು ಪ್ರಾಣಕ್ಕೆ ಅನ್ನರೂಪನಾಗಿರುವ ಅಕ್ಷಿತಿಯು. ಏಕೆಂದರೆ ಪರ್ಜನ್ಯನು ಮಳೆಗರೆಯಲಾಗಿ ಪ್ರಾಣಗಳು ಆನಂದಿಗಳಾಗುತ್ತವೆ ಎಂದು (ಪ್ರ. ೨-೧೦) ಬೇರೊಂದು ಶ್ರುತಿಯಲ್ಲಿದೆ. ನೋಡುವ ಶಕ್ತಿಯುಳ್ಳ ಕಣ್ಣುಗುಡ್ಡೆಯಿದೆಯಲ್ಲ, ಆ ಕಣ್ಣುಗುಡ್ಡೆಯ ಮೂಲಕ ಆದಿತ್ಯನು ಮಧ್ಯಮಪ್ರಾಣನನ್ನು ಸ್ತೋತ್ರಮಾಡುತ್ತಿರುತ್ತಾನೆ. ಕಣ್ಣಿನಲ್ಲಿ ಕಪ್ಪು(ಭಾಗ)ವಿದೆಯಲ್ಲ, ಅದರ ಮೂಲಕ ಅಗ್ನಿಯು ಸ್ತೋತ್ರಮಾಡುತ್ತಿರುತ್ತಾನೆ. ಕಣ್ಣಿನಲ್ಲಿ ಬಿಳಿಯ (ಭಾಗ)ವಿದೆಯಲ್ಲ, ಅದರ ಮೂಲಕ ಇಂದ್ರನು ಕೆಳಗಿನ ಪೊರೆಯಿಂದ ಎಂದರೆ ರೆಪ್ಪೆಯಿಂದ ಇದನ್ನು ಪೃಥಿವಿಯು ಅನುಸರಿಸುತ್ತಿದೆ; ಏಕೆಂದರೆ ಕೆಳಗಿರುವದೆಂಬುದು (ಎರಡಕ್ಕೂ)

1. ಚಕ್ಷುಸ್ಸಿನಲ್ಲಿರುವ ಪ್ರಾಣನಿಗೇ ಎಂದರ್ಥ.

2. ಮಿಕ್ಕ ಕಡೆಯಲ್ಲಿ ಇದು ಆತ್ಮನೇಪದವಲ್ಲ; ಪಾ. ೧-೩-೨೨.

3. ಈ ಹೆಸರುಗಳನ್ನು ಮಂತ್ರಗಳಂತೆ ಉಪಸ್ಥಾನಕ್ಕೆ ಉಪಯೋಗಿಸಬೇಕೆಂದು ಇಲ್ಲಿ ವಿವಕ್ಷಿತವಾಗಿದೆ.

ಸಮಾನವಾಗಿರುತ್ತದೆ. ದ್ಯುಲೋಕವು ಮೇಲಿನ ಪೊರೆಯಿಂದ (ಅನುಸರಿಸುತ್ತದೆ); ಏಕೆಂದರೆ ಮೇಲಿರುವದೆಂಬುದು (ಎರಡಕ್ಕೂ) ಸಮಾನವಾಗಿದೆ.

ಈ ಏಳೂ ಪ್ರಾಣಕ್ಕೆ ಅನ್ನವಾಗಿದ್ದುಕೊಂಡು ಸಂತತವಾಗಿ ಸ್ತೋತ್ರ ಮಾಡುತ್ತಿರುವವು ಎಂದು ಯಾವನು ಅರಿತುಕೊಳ್ಳುವನೋ ಅವನಿಗೆ ಇದು ಫಲವು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನ ಅನ್ನವು ಕ್ಷಯವಾಗುವದಿಲ್ಲ.

## ಪ್ರಾಣಗಳಿಂದ ಕೂಡಿರುವ ಶಿರಸ್ಸಿನಲ್ಲಿ ಚಮಸದೃಷ್ಟಿ

( ಉಪನಿಷತ್ತು )

**ತದೇಷ ಶ್ಲೋಕೋ ಭವತಿ । ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮ್ । ತಸ್ಯಾಸತ ಋಷಯಃ ಸಪ್ತತೀರೇ ವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ । ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನ ಇತೀದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮಿತಿ ಪ್ರಾಣಾ ವೈ ಯಶೋ ವಿಶ್ವರೂಪಂ ಪ್ರಾಣಾನೇತದಾಹ ತಸ್ಯಾಸತ ಋಷಯಃ ಸಪ್ತತೀರ ಇತಿ ಪ್ರಾಣಾ ವಾ ಋಷಯಃ ಪ್ರಾಣಾನೇತದಾಹ ವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ ವಾಗ್ಘ್ಯಷ್ಟಮೀ ಬ್ರಹ್ಮಣಾ ಸಂವಿತ್ತೇ॥**

೩. ಇಲ್ಲಿ ಈ ಶ್ಲೋಕವಿರುತ್ತದೆ: "ಕೆಳಗೆ ಬಿಲವುಳ್ಳ ಮೇಲುಗಡೆ ಉಬ್ಬುಳ್ಳ ಚಮಸ(ವಿದೆ). ಅದರಲ್ಲಿ ವಿಶ್ವರೂಪವಾದ ಯಶಸ್ಸು ಇಡಲ್ಪಟ್ಟಿದೆ. ಅದರ ತೀರದಲ್ಲಿ ಏಳು (ಜನ) ಋಷಿಗಳು ಕುಳಿತಿರುತ್ತಾರೆ, ಬ್ರಹ್ಮದೊಡನೆ ಸಂವಾದವುಳ್ಳ ವಾಕ್ಕು ಎಂಟನೆಯದು." ಕೆಳಗಡೆ ಬಿಲವೂ ಮೇಲುಗಡೆ ಉಬ್ಬೂ ಉಳ್ಳ 'ಚಮಸ' ಎಂಬಲ್ಲಿ ಇದೇ ಆ ಶಿರಸ್ಸು; ಇದೇ ಅಲ್ಲವೆ, ಕೆಳಗಡೆ ಬಿಲವೂ ಮೇಲುಗಡೆ ಉಬ್ಬೂ ಇರುವ ಚಮಸವು? 'ಅದರಲ್ಲಿ ವಿಶ್ವರೂಪವಾದ ಯಶಸ್ಸು ಇಡಲ್ಪಟ್ಟಿದೆ' ಎಂಬಲ್ಲಿ ಪ್ರಾಣಗಳೇ ವಿಶ್ವರೂಪವಾದ ಯಶಸ್ಸು. ಇದು ಪ್ರಾಣಗಳನ್ನು ಹೇಳುತ್ತದೆ. "ಅದರ ತೀರದಲ್ಲಿ ಏಳು (ಜನ) ಋಷಿಗಳು ಕುಳಿತಿರುತ್ತಾರೆ." ಪ್ರಾಣಗಳೇ ಋಷಿಗಳು, ಇದು ಪ್ರಾಣಗಳನ್ನು ಹೇಳುತ್ತದೆ. "ಬ್ರಹ್ಮದೊಡನೆ ಸಂವಾದವುಳ್ಳ ವಾಕ್ಕು ಎಂಟನೆಯದು" ಎಂದಿದೆ(ಯಷ್ಟೆ); ವಾಕ್ಕೇ ಅಲ್ಲವೆ, ಎಂಟನೆಯದಾಗಿ ಬ್ರಹ್ಮದೊಡನೆ ಸಂವಾದಮಾಡಿಕೊಂಡಿರುತ್ತದೆ ?

# ಶಿರಸ್ಸು ಚಮಸವೆಂಬುದು ಹೇಗೆ ?

(ಭಾಷ್ಯ)

೩೩.೨. ತತ್ ತತ್ರ ಏತಸ್ಮಿನ್ ಅರ್ಥೇ ಏಷ ಶ್ಲೋಕಃ ಮನ್ತ್ರೋ ಭವತಿ 'ಅರ್ವಾಗ್ಬಿಲಶ್ಚಮಸ' ಇತ್ಯಾದಿಃ। ತತ್ರ ಮನ್ತ್ರಾರ್ಥಮ್ ಆಚಷ್ಟೇ ಶ್ರುತಿಃ। ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನ ಇತಿ। ಕಃ ಪುನರಸಾವರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ? ಇದಂ ತಚ್ಛಿರಃ। ಚಮಸಾಕಾರಂ ಹಿ ತತ್। ಕಥಮ್ ? ಏಷ ಹಿ ಅರ್ವಾಗ್ಬಿಲಃ। ಮುಖಸ್ಯ ಬಿಲರೂಪತ್ವಾತ್। ಶಿರಸೋ ಬುಧ್ನಾಕಾರತ್ವಾತ್ ಊರ್ಧ್ವಬುಧ್ನಃ। ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮಿತಿ। ಯಥಾ ಸೋಮಶ್ಚಮಸೇ ಏವಂ ತಸ್ಮಿನ್ ಶಿರಸಿ ವಿಶ್ವರೂಪಂ ನಾನಾರೂಪಂ (ಯಶಃ) ನಿಹಿತಂ ಸ್ಥಿತಂ ಭವತಿ। ಕಿಂ ಪುನಸ್ತದ್ಯಶಃ? ಪ್ರಾಣಾ ವೈ ಯಶೋ ವಿಶ್ವರೂಪಮ್। ಪ್ರಾಣಾಃ ಶ್ರೋತ್ರಾದಯಃ ವಾಯವಶ್ಚ ಮರುತಃ ಸಪ್ತಧಾ ತೇಷು ಪ್ರಸೃತಾಃ ಯಶಃ ಇತ್ಯೇತದಾಹ ಮನ್ತ್ರಃ। ಶಬ್ದಾದಿಜ್ಞಾನಹೇತುತ್ವಾತ್। ತಸ್ಯಾಸತ ಋಷಯಃ ಸಪ್ತ ತೀರ ಇತಿ। ಪ್ರಾಣಾಃ ಪರಿಸ್ಪನ್ದಾತ್ಮಕಾಃ ತ ಏವ ಚ ಋಷಯಃ ಪ್ರಾಣಾನೇತದಾಹ ಮನ್ತ್ರಃ। ವಾಗಷ್ಟಮೀ ಬ್ರಹ್ಮಣಾ ಸಂವಿದಾನೇತಿ। ಬ್ರಹ್ಮಣಾ ಸಂವಾದಂ ಕುರ್ವತೀ ಅಷ್ಟಮೀ ಭವತಿ। ತದ್ಧೇತುಮಾಹ- ವಾಗ್ಘಿ ಬ್ರಹ್ಮಣಾ ಸಂವಿತ್ತ ಇತಿ॥

(ಭಾಷ್ಯಾರ್ಥ)

(ತತ್= ತತ್ರ) ಇಲ್ಲಿ ಈ ಅರ್ಥದಲ್ಲಿ ಈ ಶ್ಲೋಕವು 'ಅರ್ವಾಗ್ಬಿಲಶ್ಚಮಸಃ' ಮುಂತಾದ (ಈ) ಮಂತ್ರವು ಇರುತ್ತದೆ. ಇಲ್ಲಿ ಶ್ರುತಿಯು ಮಂತ್ರದ ಅರ್ಥವನ್ನು ಹೇಳುತ್ತಿದೆ: 'ಕೆಳಗೆ ಬಿಲವುಳ್ಳ ಮೇಲುಗಡೆ ಉಬ್ಬುಳ್ಳ ಚಮಸವು' ಎಂದು (ಮಂತ್ರವು). ಕೆಳಗಡೆ ಬಿಲವೂ ಮೇಲುಗಡೆ ಉಬ್ಬೂ ಉಳ್ಳ ಚಮಸವು ಯಾವದು ? ಈ ಶಿರಸ್ಸೇ ಅದು. ಇದು ಚಮಸದ ಆಕಾರವಾಗಿದೆಯಲ್ಲವೆ? ಹೇಗೆಂದರೆ ಇದು ಕೆಳಗೆ ಬಿಲವುಳ್ಳದ್ದಾಗಿದೆಯಲ್ಲವೆ ? ಏಕೆಂದರೆ ಮುಖವು ಬಿಲದ ಆಕಾರವಾಗಿರುತ್ತದೆ, ಶಿರಸ್ಸು ಉಬ್ಬಿಕೊಂಡಿರುವ ಆಕಾರವುಳ್ಳದ್ದಾಗಿರುವದರಿಂದ ಮೇಲುಗಡೆ ಉಬ್ಬುಳ್ಳದ್ದಾಗಿದೆ. 'ಅದರಲ್ಲಿ ವಿಶ್ವರೂಪವಾದ ಯಶಸ್ಸು ಇದೆ' ಎಂದು (ಮಂತ್ರವು). ಸೋಮವು ಹೇಗೆ ಚಮಸ್ಸಿನಲ್ಲಿಟ್ಟಿರುತ್ತದೆಯೋ ಹಾಗೆ ಆ ಶಿರಸ್ಸಿನಲ್ಲಿ ವಿಶ್ವರೂಪವಾದ ನಾನಾರೂಪವಾದ (ಯಶಸ್ಸನ್ನು)[1] ಇಟ್ಟಿರುತ್ತದೆ, ಇರುತ್ತದೆ. ಆ ಯಶಸ್ಸು ಯಾವದು ? ಪ್ರಾಣಗಳೇ

1. ಇಲ್ಲಿ 'ಯಶಃ' ಎಂಬ ಮಾತು ಮೂಲದಲ್ಲಿ ಬಿಟ್ಟುಹೋಗಿದೆ ಎಂದು ಕಲ್ಪಿಸಿದೆ. ಮಾ॥ ಪಾಠದಂತೆ ಕಿಂ ತತ್ ? ಯಶಃ। ಎಂಬ ಪಾಠವನ್ನು ಕಲ್ಪಿಸಿದರೆ ನಾನಾರೂಪವದ್ದು ಇಟ್ಟಿರುತ್ತದೆ ; ಅದು ಯಾವದು ? ಎಂದರೆ ಯಶಸ್ಸು -ಎಂದು ಕನ್ನಡಿಸಬೇಕಾಗುವದು. ಆದರೆ ಮಂತ್ರದಲ್ಲಿಯೇ ಯಶಃ ಎಂಬ ಮಾತಿರುವದರಿಂದ ಆ ಯಶಸ್ಸು ಯಾವದು ಎಂಬಿದನ್ನೇ ಬ್ರಾಹ್ಮಣದಲ್ಲಿ ವಿವರಿಸಿದೆ- ಎಂದಿಟ್ಟುಕೊಳ್ಳುವದೇ ಯುಕ್ತವೆಂದು ನಮ್ಮ ಅಭಿಪ್ರಾಯ.

ವಿಶ್ವರೂಪವಾದ ಯಶಸ್ಸು. ಪ್ರಾಣಗಳು ಎಂದರೆ ಶ್ರೋತ್ರಾದಿಗಳು ಮತ್ತು ಅವುಗಳಲ್ಲಿ ಏಳು ವಿಧವಾಗಿ ಹರಡಿಕೊಂಡಿವೆಯಲ್ಲ, ಆ ವಾಯುಗಳು, ಮರುತ್ತುಗಳೂ[1] ಯಶಸ್ಸು ಎಂದು ಮಂತ್ರವು ಹೇಳುತ್ತದೆ; ಏಕೆಂದರೆ (ಅವು) ಶಬ್ದವೇ ಮುಂತಾದ ಅರಿವಿಗೆ ಕಾರಣವಾಗಿರುತ್ತವೆ[2]. "ಅದರ ಬಳಿಯಲ್ಲಿ ಏಳು ಜನ ಋಷಿಗಳು ಕುಳಿತಿದ್ದಾರೆ" ಎಂದು (ಮಂತ್ರವು); ಚಲನಾತ್ಮಕವಾದ ಪ್ರಾಣಗಳಿ(ವೆಯಲ್ಲ), ಅವೇ ಋಷಿಗಳು. ಈ ಮಂತ್ರ(ಭಾಗವು ಆ) ಪ್ರಾಣಗಳನ್ನೇ (ಋಷಿಗಳು ಎಂದು) ತಿಳಿಸುತ್ತದೆ. 'ಬ್ರಹ್ಮದೊಡನೆ ಸಂವಾದವುಳ್ಳ ವಾಕ್ಕು ಎಂಟನೆಯದು' ಎಂದು (ಮಂತ್ರವು). ಬ್ರಹ್ಮದೊಡನೆ ಸಂವಾದವನ್ನು ಮಾಡುವಾಗ ಎಂಟನೆಯದಾಗುತ್ತದೆ[3]; 'ಎಂಟನೆಯ ವಾಕ್ಕಲ್ಲವೆ, ಬ್ರಹ್ಮದೊಡನೆ ಸಂವಾದಮಾಡುತ್ತಿರುವದು? ಎಂದು ಅದಕ್ಕೆ ಹೇತುವನ್ನು (ಬ್ರಾಹ್ಮಣವು) ಹೇಳಿರುತ್ತದೆ.

## ಶ್ರೋತ್ರಾದಿಗಳಲ್ಲಿ ಋಷಿದೃಷ್ಟಿ

(ಉಪನಿಷತ್ತು)

**ಇಮಾವೇವ ಗೋತಮಭರದ್ವಾಜಾವಯಮೇವ ಗೋತಮೋಽಯಂ ಭರದ್ವಾಜ ಇಮಾವೇವ ವಿಶ್ವಾಮಿತ್ರಜಮದಗ್ನೀ ಅಯಮೇವ ವಿಶ್ವಾಮಿತ್ರೋಽಯಂ ಜಮದಗ್ನಿರಿಮಾವೇವ ವಸಿಷ್ಠಕಶ್ಯಪಾವಯಮೇವ ವಸಿಷ್ಠೋಽಯಂ ಕಶ್ಯಪೋ ವಾಗೇವಾತ್ರಿರ್ವಾಚಾ ಹ್ಯನ್ನಮದ್ಯತೇಽತ್ತಿ ರ್ಹವೈ ನಾಮೈತದ್ಯದತ್ರಿರಿತಿ ಸರ್ವಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಂ ವೇದ ॥ ೪ ॥**

---

1. ಕರಣಗಳನ್ನೂ ಅವುಗಳಲ್ಲಿರುವ ವ್ಯಾಪಾರಗಳನ್ನೂ ಪ್ರಾಣಗಳು ಎಂದು ತಿಳಿಯಬೇಕು. ಈ ಪ್ರಾಣಗಳೇ ಚಮಸದಲ್ಲಿಟ್ಟಿರುವ ಯಶಸ್ಸು ಎಂದು ಮಂತ್ರವು ಹೇಳುತ್ತದೆ ಎಂದು ಬ್ರಾಹ್ಮಣವಾಕ್ಯದ ಅರ್ಥ. ಆ ಯಶಸ್ಸು ಯಾವದು? ಎಂಬ ಪ್ರಶ್ನೆಗೆ ಉತ್ತರವಿದು.

2. ಶಬ್ದವೇ ಮುಂತಾದ ಅರಿವಿಗೆ ಕಾರಣವಾಗಿರುವದರಿಂದ ಯಶಸ್ಸು ಎಂದಿದೆ ಎಂದರ್ಥ. ಏಕೆಂದರೆ ಯಶಸ್ಸಿನಿಂದ ದೂರದಲ್ಲಿರುವವರು ಯಶಸ್ವಿಖ್ಯಾತನನ್ನು ಅರಿಯುತ್ತಾರೆ, ಆ ಯಶಸ್ಸಿನಿಂದ ಅವನು ಅಲ್ಲಿ ವ್ಯಾಪಿಸಿಕೊಂಡಿರುತ್ತಾನೆ.

3. ಮುಂದಿನ ಕಂಡಿಕೆಯಲ್ಲಿ ಪ್ರಾಣಗಳು ಏಳನ್ನು ಏಳು ಋಷಿಗಳೆಂದು ಹೇಳಿದೆ. ಅಲ್ಲಿ ಏಳನೆಯದಾದ ವಾಕ್ಕನ್ನು ಅತ್ರಿ ಎಂದು ಕರೆದಿದೆ. ಬ್ರಹ್ಮದೊಡನೆ ಸಂವಾದಮಾಡುವ ಎಂದರೆ ಶಬ್ದರಾಶಿಯನ್ನು ಹೊರಗೆಡಹುವ ವಾಕ್ಕನ್ನು ಅಲ್ಲಿ ಎಂಟನೆಯದೆಂದಿದೆ ಎಂದು ಭಾವ.

೪. ಇವೆರಡೇ ಗೋತಮಭರದ್ವಾಜರು ; ಇದೇ ಗೋತಮ, ಇದೇ ಭರದ್ವಾಜ. ಇವೆರಡೇ ವಿಶ್ವಾಮಿತ್ರಜಮದಗ್ನಿಗಳು ; ಇದೇ ವಿಶ್ವಾಮಿತ್ರ, ಇದೇ ಜಮದಗ್ನಿ. ಇವೆರಡೇ ವಸಿಷ್ಠಕಶ್ಯಪರು ; ಇದೇ ವಸಿಷ್ಠ, ಇದು ಕಶ್ಯಪ. ವಾಕ್ಕೇ ಅತ್ರಿ ; ವಾಕ್ಕಿನಿಂದಲಲ್ಲವೆ, ಅನ್ನವನ್ನು ತಿನ್ನುತ್ತಾರೆ? ಈ ಅತ್ರಿ ಎಂಬುದಿದೆಯಲ್ಲ, ಇದು ಅತ್ತಿ ಎಂಬುದೇ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಅತ್ತೃವಾಗುವನು, ಅವನಿಗೆ ಎಲ್ಲವೂ ಅನ್ನವಾಗುವದು.

## ಶ್ರೋತ್ರಾದಿಋಷಿಗಳ ವಿವರಣೆ

(ಭಾಷ್ಯ)

೩೩೩. ಕೇ ಪುನಸ್ತಸ್ಯ ಚಮಸಸ್ಯ ತೀರೇ ಆಸತೇ ಋಷಯ ಇತಿ। ಇಮಾವೇವ ಗೋತಮಭರದ್ವಾಜೌ ಕರ್ಣೌ। ಅಯಮೇವ ಗೋತಮಃ ಅಯಂ ಭರದ್ವಾಜಃ। ದಕ್ಷಿಣಶ್ಚೋತ್ತರಶ್ಚ, ವಿಪರ್ಯಯೇಣ ವಾ। ತಥಾ ಚಕ್ಷುಷೀ ಉಪದಿಶನ್ ಉವಾಚ ಇಮಾವೇವ ವಿಶ್ವಾಮಿತ್ರಜಮದಗ್ನೀ। ದಕ್ಷಿಣಂ ವಿಶ್ವಾಮಿತ್ರಃ ಉತ್ತರಂ ಜಮದಗ್ನಿಃ। ವಿಪರ್ಯಯೇಣ ವಾ। ಇಮಾವೇವ ವಸಿಷ್ಠಕಶ್ಯಪೌ (ಇತಿ)[1] ನಾಸಿಕೇ ಉಪದಿಶನ್ನುವಾಚ। ದಕ್ಷಿಣಃ ಪುಟೋ ಭವತಿ ವಸಿಷ್ಠಃ, ಉತ್ತರಃ ಕಶ್ಯಪಃ ಪೂರ್ವವತ್[2]। ವಾಗೇವಾತ್ರಿಃ ಅದನಕ್ರಿಯಾಯೋಗಾತ್ ಸಪ್ತಮಃ। ವಾಚಾ ಹಿ ಅನ್ನಮ್ ಅದ್ಯತೇ। ತಸ್ಮಾತ್ ಅತ್ತಿರ್ಹ ವೈ ಪ್ರಸಿದ್ಧಂ ನಾಮೈತತ್ ಅತ್ತೃತ್ವಾದತ್ತಿಃ ಇತಿ। ಅತ್ತಿರೇವ ಸನ್ ಯದತ್ರಿರಿತ್ಯುಚ್ಯತೇ ಪರೋಕ್ಷೇಣ। ಸರ್ವಸ್ಯ ಏತಸ್ಯ ಅನ್ನಜಾತಸ್ಯ ಪ್ರಾಣಸ್ಯ ಅತ್ರಿನಿರ್ವಚನವಿಜ್ಞಾನಾತ್ ಅತ್ತಾ ಭವತಿ। ಅತ್ತೈವ ಭವತಿ ನಾಮುಷ್ಮಿನ್ನನ್ಯೇನ ಪುನಃ ಪ್ರತ್ಯದ್ಯತೇ ಇತ್ಯೇತದುಕ್ತಂ ಭವತಿ ಸರ್ವಮಸ್ಯಾನ್ನಂ ಭವತಿ ಇತಿ। ಯ ಏವಮೇತದ್ ಯಥೋಕ್ತಂ ಪ್ರಾಣಯಾಥಾತ್ಮ್ಯಂ ವೇದ ಸ ಏವಂ ಮಧ್ಯಮಃ ಪ್ರಾಣೋ ಭೂತ್ವಾ ಆಧಾನಪ್ರತ್ಯಾಧಾನಗತೋ ಭೋಕ್ತೈವ ಭವತಿ ನ ಭೋಜ್ಯಮ್। ನ ಭೋಜ್ಯತ್ವಮಾವರ್ತತ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಚಮಸದ ತೀರದಲ್ಲಿ ಕುಳಿತಿದ್ದಾರೆಂದು (ಹೇಳಿತಲ್ಲ), ಆ ಋಷಿಗಳು ಯಾರು ? ಎಂದರೆ (ಶ್ರುತಿ ಹೇಳುತ್ತದೆ). ಇವೇ (ಈ) ಕಿವಿಗಳೇ ಗೋತಮ

---

1. ಇಲ್ಲೊಂದು ಇತಿ ಇದ್ದರೆ ಸ್ಪಷ್ಟತರವಾಗಿರುತ್ತದೆ.
2. 'ಪೂರ್ವವದ್ವಾ' ಎಂಬ ಪಾಠವೂ ಇಲ್ಲಿದೆ.

ಭರದ್ವಾಜರು; ಇದು ಗೋತಮನು, ಇದು ಭರದ್ವಾಜನು. ಎಂದರೆ (ಕ್ರಮವಾಗಿ) ಬಲ ಮತ್ತು ಎಡದ ಕಿವಿಗಳು; ಅಥವಾ ಇದಕ್ಕೆ ವಿಪರೀತವಾಗಿ ಎಂದಾದರೂ (ಆಗಬಹುದು)[1]. ಹೀಗೆಯೇ ಕಣ್ಣುಗಳನ್ನು ತೋರಿಸಿ (ಶ್ರುತಿ) ಹೇಳುತ್ತದೆ. ಇವೇ ವಿಶ್ವಾಮಿತ್ರಜಮದಗ್ನಿಗಳು, ಬಲಗಣ್ಣು ವಿಶ್ವಾಮಿತ್ರನು, ಎಡಗಣ್ಣು ಜಮದಗ್ನಿಯು. ಅಥವಾ ಇದಕ್ಕೆ ವಿಪರೀತವಾಗಿ ಎಂದಾದರೂ (ಆಗಬಹುದು. ಹೀಗೆಯೇ) ಇವೇ ವಸಿಷ್ಠಕಶ್ಯಪರು ಎಂದು ಮೂಗಿನ ಸೊಳ್ಳೆಗಳನ್ನು ತೋರಿಸಿಹೇಳಿರುತ್ತದೆ. ಬಲಸೊಳ್ಳೆಯು ವಸಿಷ್ಠನಾಗಿರುತ್ತದೆ, ಎಡಸೊಳ್ಳೆಯು ಕಶ್ಯಪ ಎಂದು ಮೊದಲಿನಂತೆ (ವ್ಯಾಖ್ಯಾನಮಾಡಬೇಕು)[2].

ವಾಕ್ಕೇ ಅತ್ರಿಯು; ಏಕೆಂದರೆ ಇದಕ್ಕೆ ಅದನ (ತಿನ್ನುವದು) ಎಂಬ ಕ್ರಿಯೆಯ ಸಂಬಂಧವಿದೆ. (ಇದು) ಏಳನೆಯದು[3]. ವಾಕ್ಕಿನಿಂದಲೇ ಅಲ್ಲವೆ, ಅನ್ನವನ್ನು ತಿನ್ನುವದು? ಆದ್ದರಿಂದ (ಇದಕ್ಕೆ) 'ಅತ್ತಿ' ಎಂಬುದು ಪ್ರಸಿದ್ಧವಾದ ಹೆಸರು. ಅತ್ತೃವಾಗಿರುವದರಿಂದಲೇ ಅತ್ತಿ ಎಂದು (ಹೆಸರಾಗಿದೆ). ಏಕೆಂದರೆ ಅತ್ತಿಯೇ ಆಗಿದ್ದರೂ 'ಅತ್ರಿ' ಎಂದು ಪರೋಕ್ಷವಾಗಿ (ಇದನ್ನು) ಕರೆದಿರುತ್ತದೆ[4]. ಪ್ರಾಣನ (ಹೆಸರಾದ) ಅತ್ರಿಶಬ್ದದ (ಈ) ನಿರ್ವಚನವನ್ನು ತಿಳಿದುಕೊಂಡದ್ದರಿಂದ ಈ ಅನ್ನಸಮೂಹಕ್ಕೆಲ್ಲ ಅತ್ತೃವಾಗುತ್ತಾನೆ. ಅವನಿಗೆ ಎಲ್ಲವೂ ಅನ್ನವಾಗುತ್ತದೆ ಎಂದು (ಹೇಳಿದ್ದರಿಂದ, ಅತ್ತೃವಾಗುತ್ತಾನೆಯೇ ಹೊರತು ಅಲ್ಲಿ ಮತ್ತೊಬ್ಬರಿಂದ ತಿನ್ನಲ್ಪಡುವದಿಲ್ಲ ಎಂದು ಹೇಳಿದಂತೆ ಆಯಿತು.

ಯಾವನು ಈ ಮೇಲೆ ಹೇಳಿದ ಪ್ರಾಣಯಾಥಾತ್ಮ್ಯವನ್ನು ಅರಿತುಕೊಳ್ಳುವನೋ ಅವನು ಹೀಗೆ ಮಧ್ಯಮಪ್ರಾಣನಾಗಿ ಆಧಾನಪ್ರತ್ಯಾಧಾನಗಳಲ್ಲಿದ್ದುಕೊಂಡು ಭೋಕ್ತೃವೇ ಆಗಿರುತ್ತಾನೆ, ಭೋಜ್ಯವಾಗುವದಿಲ್ಲ; ಭೋಜ್ಯತ್ವದಿಂದ ತಪ್ಪಿಸಿಕೊಳ್ಳುತ್ತಾನೆ ಎಂದರ್ಥ.

---

1. ಎಡದಕಿವಿಯೇ ಗೋತಮನು, ಬಲದ್ದೇ ಭರದ್ವಾಜನು ಎಂದೂ ಆಗಬಹುದು; ಶ್ರುತಿಯಲ್ಲಿ ಸ್ಪಷ್ಟವಾಗಿ ಹೀಗೆಯೇ ಎಂದು ಹೇಳಿಲ್ಲ ಎಂದರ್ಥ.

2. ವಿಪರೀತಕ್ರಮದಿಂದಲೂ ಆಗಬಹುದು ಎಂದು ಭಾವ.

3. ಕರ್ಣಗಳು ಎರಡು, ಚಕ್ಷುಸ್ಸುಗಳು ಎರಡು, ನಾಸಿಕಾಪುಟಗಳು ಎರಡು; ಇವಕ್ಕೆ ಏಳನೆಯದು ವಾಕ್ಕು. ಪ್ರಾಣಗಳು ಏಳೆಂಬ ನಿಯಮವೇನೂ ಇಲ್ಲಿಲ್ಲ; ಉಪಾಸನಾರ್ಥವಾಗಿ ಏಳು ಪ್ರಾಣಗಳನ್ನು ಋಷಿಗಳೆಂದಿದೆ, ಅಷ್ಟೆ. ೨-೪-೭, ಭಾ. ಭಾ. ೧೮೩.

4. ಉಪಾಸ್ಯದೇವತೆಗಳನ್ನು ಪರೋಕ್ಷನಾಮದಿಂದ ಕರೆಯುವದು ವೈದಿಕರೂಢಿ. ಐ. ೧-೩-೧೪.

# ಎರಡನೆಯ ಬ್ರಾಹ್ಮಣದ ಸಾರ

೧. ಪರಮಾತ್ಮನಿಗೆ ಸತ್ಯದ ಸತ್ಯವೆಂಬ ಅಭಿಧಾನವನ್ನು ಹೇಳಿ ಪ್ರಾಣಗಳೇ ಸತ್ಯವು, ಪರಮಾತ್ಮನು ಅವುಗಳ ಸತ್ಯವು ಎಂದು ಹಿಂದೆ ೨-೧-೨೦ರಲ್ಲಿ ತಿಳಿಸಿತ್ತಷ್ಟೆ. ಈ ಬ್ರಾಹ್ಮಣದಲ್ಲಿ ಆ ಪ್ರಾಣಗಳು ಯಾವವು ಎಂಬುದನ್ನೂ ಅವುಗಳ ರಹಸ್ಯಾಭಿಧಾನಗಳನ್ನೂ ಉಪಾಸನೆಗಾಗಿ ತಿಳಿಸಿರುತ್ತದೆ. ಯಾವನು ಪ್ರಾಣವೆಂಬ ಕರು, ಅದರ ಕೊಟ್ಟಿಗೆ, ಗೊಂತು, ಗೂಟ, ಹಗ್ಗ -ಇವುಗಳನ್ನರಿತು ಕರುವನ್ನು ಉಪಾಸನೆಮಾಡುವನೋ ಅವನು ಏಳು ತಲೆಯವರೆಗಿನ ತನ್ನ ಹಗೆಗಳಾದ ದಾಯಾದರನ್ನು ಕೊಂದವನಾಗುತ್ತಾನೆ. ನಡುವಿನ ಪ್ರಾಣವೇ ಕರು, ಶರೀರವೇ ಅದರ ಕೊಟ್ಟಿಗೆ, ತಲೆಯೇ ಗೊಂತು, ಬಲವೇ ಗೂಟ, ಅನ್ನವೇ ಹಗ್ಗ.

೨. ಈ ಪ್ರಾಣವನ್ನು ಏಳು ಅಕ್ಷಿತಿಗಳು (ಅಕ್ಷಯಕಾರಣರಾದ ದೇವತೆಗಳು) ಸೇವಿಸುತ್ತಿರುವರೆಂದು ಉಪಾಸನೆಮಾಡಬೇಕು. ಕಣ್ಣಿನಲ್ಲಿರುವ ಕೆಂಪುಗೆರೆಗಳ ಮೂಲಕ ರುದ್ರನು, ಅದರಲ್ಲಿರುವ ಕಪ್ಪಿನ ಮೂಲಕವಾಗಿ ಅಗ್ನಿ, ಬಿಳುಪಿನ ಮೂಲಕವಾಗಿ ಇಂದ್ರ, ಕೆಳರೆಪ್ಪೆಯ ಮೂಲಕ ಪೃಥಿವಿ, ಮೇಲುರೆಪ್ಪೆಯ ಮೂಲಕ ದ್ಯುಲೋಕ -ಈ ದೇವತೆಗಳು ಪ್ರಾಣನನ್ನು ಸೇವಿಸುತ್ತಿರುವರು, ಹೀಗೆಂದು ಉಪಾಸನೆಮಾಡಿದವನ ಅನ್ನವು ಕ್ಷಯವಾಗುವದಿಲ್ಲ.

೩. ಕೆಳಗಡೆ ಬಿಲವುಳ್ಳ ಮೇಲೆ ಉಬ್ಬಿರುವ ಒಂದು ಚಮಸವುಂಟು ; ಇದೇ ಶಿರಸ್ಸು, ಈ ಚಮಸದಲ್ಲಿ ಬಗೆಬಗೆಯ ರೂಪದ ಯಶಸ್ಸನ್ನು ಇಟ್ಟಿರುತ್ತದೆ. ಪ್ರಾಣಗಳು ಎಂದರೆ ಶ್ರೋತ್ರಾದಿಗಳೂ ಅವುಗಳಲ್ಲಿರುವ ಸಪ್ತವಾಯುಗಳೂ ಆ ಯಶಸ್ಸು. ಅದರ ಬಳಿಯಲ್ಲಿ ಏಳು ಜನ ಋಷಿಗಳು ಕುಳಿತಿರುವರು. ಪ್ರಾಣಗಳೇ ಆ ಋಷಿಗಳು ; ವೇದದೊಡನೆ ಸಂವಾದಮಾಡುತ್ತಿರುವ ವಾಕ್ಕು ಈ ಪ್ರಾಣಗಳಿಗೆ ಎಂಟನೆಯದು. ಋಷಿಗಳ ವಿವರವಿದು: ಕರ್ಣಗಳೇ ಗೋತಮಭರದ್ವಾಜರು, ಚಕ್ಷುಸ್ಸುಗಳೇ ವಿಶ್ವಾಮಿತ್ರಜಮದಗ್ನಿಗಳು, ನಾಸಿಕೆಗಳೇ ವಸಿಷ್ಠಕಶ್ಯಪರುಗಳು, ವಾಕ್ಕೇ ತಿನ್ನುವ ಅತ್ರಿಯು ; ಅತ್ರಿಯು ಅತ್ತಿ ತಿನ್ನುವದು ಎಂದು ಉಪಾಸನೆಮಾಡಿದವನು ಭೋಕ್ತೃವಾಗಿರುತ್ತಾನೆಯೇ ಹೊರತು ಯಾರಿಗೂ ಭೋಜ್ಯನಾಗುವದಿಲ್ಲ.

# ಎರಡನೆಯ ಅಧ್ಯಾಯ-ಮೂರನೆಯ ಬ್ರಾಹ್ಮಣ

(ಬ್ರಹ್ಮದ ಮೂರ್ತಾಮೂರ್ತರೂಪಗಳ ವರ್ಣನೆ)

## ಬ್ರಹ್ಮದ ಎರಡು ರೂಪಗಳು

(ಉಪನಿಷತ್ತು)

**ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ ಮರ್ತ್ಯಂ ಚಾಮೃತಂ ಚ ಸ್ಥಿತಂ ಚ ಯಚ್ಚ ಸಚ್ಚ ತ್ಯಚ್ಚ[1] ||೧||**

೧. ಬ್ರಹ್ಮಕ್ಕೆ ಎರಡೇ ರೂಪಗಳು -ಮೂರ್ತ, ಮತ್ತು ಅಮೂರ್ತ. (ಇವು) ಮರ್ತ್ಯ ಮತ್ತು ಅಮೃತ ; ಸ್ಥಿತ ಮತ್ತು ಯತ್; ಸತ್ ಮತ್ತು ತ್ಯತ್.

## ಈ ಬ್ರಾಹ್ಮಣದ ಸಂಬಂಧ

(ಭಾಷ್ಯ)

೩೩೪. ತತ್ರ 'ಪ್ರಾಣಾ ವೈ ಸತ್ಯಮ್' (೨-೧-೨೦) ಇತ್ಯುಕ್ತಮ್ । ಯಾಃ ಪ್ರಾಣಾನಾಮ್ ಉಪನಿಷದಃ ತಾ ಬ್ರಹ್ಮೋಪನಿಷತ್ಪ್ರಸಙ್ಗೇನ ವ್ಯಾಖ್ಯಾತಾ ಏತೇ ತೇ ಪ್ರಾಣಾಃ ಇತಿ ಚ। ತೇ ಕಿಮಾತ್ಮಕಾಃ ? ಕಥಂ ವಾ ತೇಷಾಂ ಸತ್ಯತ್ವಮ್ ? ಇತಿ ಚ ವಕ್ತವ್ಯಮ್ ಇತಿ ಪಞ್ಚಭೂತಾನಾಂ ಸತ್ಯಾನಾಂ ಕಾರ್ಯಕರಣಾತ್ಮಕಾನಾಂ ಸ್ವರೂಪಾವಧಾರಣಾರ್ಥಮ್ ಇದಂ ಬ್ರಾಹ್ಮಣಮ್ ಆರಭ್ಯತೇ। ಯದುಪಾಧಿವಿಶೇಷಾಪನಯದ್ವಾರೇಣ ನೇತಿ ನೇತಿ (೨-೩-೬) ಇತಿ ಬ್ರಹ್ಮಣಃ ಸತತ್ತ್ವಂ ನಿರ್ದಿಧಾರಯಿಷಿತಮ್ ॥

(ಭಾಷ್ಯಾರ್ಥ)

ಅಲ್ಲಿ 'ಪ್ರಾಣಗಳೇ ಸತ್ಯವು' ಎಂದು (೨-೧-೨೦) ಎಂದು ಹೇಳಲಾಗಿತ್ತು. ಪ್ರಾಣಗಳ ಉಪನಿಷತ್ತುಗಳಿವೆಯಲ್ಲ, ಅವನ್ನು ಬ್ರಹ್ಮದ ಉಪನಿಷತ್ತಿನ (ವಿವರಣೆಯ) ಪ್ರಸಂಗದಿಂದ ಹೇಳಿದ್ದಾಯಿತು.[2] ಇವೇ ಆ ಪ್ರಾಣಗಳು

1. 'ತ್ಯಂ ಚ' ಎಂಬ ಪಾಠವನ್ನು ಬಿಟ್ಟು ಇದನ್ನೇ ಅನುಸರಿಸಿದೆ; ಮುಂದಿನ ಕಂಡಿಕೆಯಲ್ಲಿಯೂ ಹೀಗೆಯೇ ತಿಳಿಯಬೇಕು.

2. ಬ್ರಹ್ಮದ ಉಪನಿಷತ್ತನ್ನು ಹೇಳಿರುವದು ಅದರ ನಿಜವನ್ನು ಗೊತ್ತುಪಡಿಸುವದಕ್ಕಾಗಿ. ಪ್ರಾಣಗಳನ್ನು ಬ್ರಹ್ಮತತ್ತ್ವಕ್ಕೆ ಉಪಾಯವಾಗಿಯೇ ಹೇಳಿದ್ದರೂ ಅವುಗಳ ಉಪನಿಷತ್ತುಗಳಲ್ಲಿ ಉಪಾಸನೆಗಾಗಿ ಹೇಳಿದೆ ; ಇದು ಉಪಾಸನಾವಿಧಿಯ ಪ್ರಕರಣವಲ್ಲವಾದ್ದರಿಂದ ಪ್ರಸಂಗದಿಂದ ಹೇಳಿದೆ ಎಂದಿದೆ.

ಎಂಬುದನ್ನು ತಿಳಿಸಿದ್ದಾಯಿತು. (ಇನ್ನು) ಅವು ಯಾವ ಸ್ವರೂಪದವು, ಅವು ಸತ್ಯವೆಂಬುದಾದರೂ ಹೇಗೆ? ಎಂಬುದನ್ನು ಹೇಳಬೇಕಾದದ್ದಿದೆಯಾದ್ದರಿಂದ ಕಾರ್ಯಕರಣಾತ್ಮಕವಾಗಿರುವ ಈ ಸತ್ಯಪಂಚಭೂತಗಳ ಸ್ವರೂಪವನ್ನು ನಿಶ್ಚಯಿಸುವದಕ್ಕಾಗಿ ಈ ಬ್ರಾಹ್ಮಣವನ್ನು ಪ್ರಾರಂಭಿಸಿರುತ್ತದೆ. ಈ ಉಪಾಧಿಗಳನ್ನು ತೆಗೆದುಹಾಕುವದರ ಮೂಲಕ 'ನೇತಿ ನೇತಿ' (೨-೩-೬) ಎಂದು ಬ್ರಹ್ಮದ ತತ್ತ್ವವನ್ನು ನಿರ್ಧರಿಸಬೇಕೆಂದು (ಶ್ರುತಿಯ) ಉದ್ದೇಶ.

## ಕಂಡಿಕೆಯ ಸಂಬಂಧ

(ಭಾಷ್ಯ)

೩೩೫. ತತ್ರ ದ್ವಿರೂಪಂ ಬ್ರಹ್ಮ ಪಞ್ಚಭೂತಜನಿತಕಾರ್ಯಕರಣಸಂಬದ್ಧಂ ಮೂರ್ತಾಮೂರ್ತಾಖ್ಯಂ ಮರ್ತ್ಯಾಮೃತಸ್ವಭಾವಂ ತಜ್ಜನಿತವಾಸನಾರೂಪಂ ಚ ಸರ್ವಜ್ಞಂ ಸರ್ವಶಕ್ತಿ ಸೋಪಾಖ್ಯಂ ಭವತಿ। ಕ್ರಿಯಾಕಾರಕಫಲಾತ್ಮಕಂ ಚ ಸರ್ವವ್ಯವಹಾರಾಸ್ಪದಮ್। ತದೇವ ಬ್ರಹ್ಮ ವಿಗತಸರ್ವೋಪಾಧಿವಿಶೇಷಂ ಸಮ್ಯಗ್ದರ್ಶನವಿಷಯಮ್ ಅಜಮ್ ಅಜರಮ್ ಅಮೃತಮ್ ಅಭಯಮ್ ವಾಙ್ಮನಸಯೋರಪ್ಯವಿಷಯಮ್ ಅದ್ವೈತತ್ವಾತ್ ನೇತಿ ನೇತಿ ಇತಿ ನಿರ್ದಿಶ್ಯತೇ ॥

(ಭಾಷ್ಯಾರ್ಥ)

ಈಗ ಬ್ರಹ್ಮವು ದ್ವಿರೂಪವಾಗಿರುತ್ತದೆ. ಪಂಚಭೂತಗಳಿಂದುಂಟಾಗಿರುವ ಕಾರ್ಯಕರಣಗಳಿಗೆ ಸಂಬದ್ಧವಾಗಿ ಮರ್ತ್ಯಾಮೃತಸ್ವಭಾವವುಳ್ಳದ್ದೂ ಅದರಿಂದಾದ ವಾಸನಾರೂಪವೂ ಆಗಿರುವ ಮೂರ್ತಾಮೂರ್ತವೆಂಬ ಹೆಸರಿನ (ಬ್ರಹ್ಮವು) ಸರ್ವಜ್ಞವೂ ಸರ್ವಶಕ್ತಿಯುಳ್ಳದ್ದೂ (ಆಗಿರುವ) ಸೋಪಾಖ್ಯ (ಬ್ರಹ್ಮವಾಗಿರುತ್ತದೆ). (ಅದು) ಕ್ರಿಯಾಕಾರಕಫಲಾತ್ಮಕವಾದದ್ದು ಎಲ್ಲಾ ವ್ಯವಹಾರಗಳಿಗೂ ಆಶ್ರಯವಾಗಿರುತ್ತದೆ. ಅದೇ ಬ್ರಹ್ಮವು ಯಾವದೊಂದು ಉಪಾಧಿಯೂ ಇಲ್ಲದೆ ಸಮ್ಯಗ್ದರ್ಶನಕ್ಕೆ ವಿಷಯವಾಗಿ ಅಜವೂ ಅಜರವೂ ಅಮೃತವೂ ಅಭಯವೂ ವಾಙ್ಮನಸ್ಸುಗಳಿಗೂ ಗೋಚರವಾಗದೆ ಅದ್ವೈತವಾಗಿರುವದರಿಂದ ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದು ಅದನ್ನು ತಿಳಿಸಲಾಗುತ್ತದೆ.[1]

## ಕಂಡಿಕೆಯ ಅರ್ಥ

(ಭಾಷ್ಯ)

೩೩೬. ತತ್ರ ಯದಪೋಹದ್ವಾರೇಣ ನೇತಿ ನೇತೀತಿ ನಿರ್ದಿಶ್ಯತೇ ಬ್ರಹ್ಮ ತೇ ಏತೇ ದ್ವೇ ವಾವ। ವಾವಶಬ್ದೋಽವಧಾರಣಾರ್ಥಃ। ದ್ವೇ ಏವ ಇತ್ಯರ್ಥಃ।

---

1. ಹೀಗೆ ತಿಳಿಸುವದಕ್ಕೆ ಈ ಕಂಡಿಕೆಯು ಅವತರಣಿಕೆ ಎಂದು ಭಾವ.

ಬ್ರಹ್ಮಣಃ ಪರಮಾತ್ಮನಃ ರೂಪೇ। ರೂಪ್ಯತೇ ಯಾಭ್ಯಾಮ್ ಅರೂಪಂ ಪರಂ ಬ್ರಹ್ಮ ಅವಿದ್ಯಾಧ್ಯಾರೋಪ್ಯಮಾಣಾಭ್ಯಾಮ್। ಕೇ ತೇ ದ್ವೇ? ಮೂರ್ತಂ ಚೈವ ಮೂರ್ತಮೇವ ಚ। ತಥಾ ಅಮೂರ್ತಂ ಚ ಅಮೂರ್ತಮೇವ ಚ ಇತ್ಯರ್ಥಃ। ಅನ್ತರ್ಗೀತಸ್ವಾತ್ಮವಿಶೇಷಣೇ ಮೂರ್ತಾಮೂರ್ತೇ 'ದ್ವೇ ಏವ' ಇತ್ಯವಧಾರ್ಯೇತೇ। ಕಾನಿ ಪುನಸ್ತಾನಿ ವಿಶೇಷಣಾನಿ ಮೂರ್ತಾಮೂರ್ತಯೋರಿತಿ। ಉಚ್ಯತೇ[1]। ಮರ್ತ್ಯಂ ಚ। ಮರ್ತ್ಯಂ ಮರಣಧರ್ಮಿ। ಅಮೃತಂ ಚ ತದ್ವಿಪರೀತಮ್। ಸ್ಥಿತಂ ಚ ಪರಿಚ್ಛಿನ್ನಂ ಗತಿಪೂರ್ವಕಂ ಯತ್ ಸ್ಥಾಸ್ನು। ಯಚ್ಚ ಯಾತೀತಿ ಯತ್ ವ್ಯಾಪಿ ಅಪರಿಚ್ಛಿನ್ನಮ್, ಸ್ಥಿತವಿಪರೀತಮ್। ಸಚ್ಚ। ಸದಿತಿ ಅನ್ಯೇಭ್ಯೋ ವಿಶೇಷ್ಯಮಾಣಾಸಾಧಾರಣಧರ್ಮವಿಶೇಷವತ್। ತ್ಯಚ್ಚ ತದ್ವಿಪರೀತಮ್। ತ್ಯದ್ ಇತ್ಯೇವ ಸರ್ವದಾ ಪರೋಕ್ಷಾಭಿಧಾನಾರ್ಹಮ್ ॥

(ಭಾಷ್ಯಾರ್ಥ)

ಇಲ್ಲಿ ಯಾವದನ್ನು ತೆಗೆದುಹಾಕಿ ಬ್ರಹ್ಮವನ್ನು 'ಹೀಗಲ್ಲ, ಹೀಗಲ್ಲ' ಎಂದು ತಿಳಿಸಬೇಕಾಗಿದೆಯೋ ಆ ಇವು ಎರಡೇ. ವಾವ ಎಂಬ ಶಬ್ದವು ಅವಧಾರಣೆ(ಮಾಡುವದ)ಕ್ಕಾಗಿ (ಬಂದಿದೆ). ದ್ವೇ ಏವ, ಎರಡೇ ಎಂದು ಅರ್ಥ. ಬ್ರಹ್ಮದ, ಪರಮಾತ್ಮನ, ರೂಪಗಳು ಅರೂಪವಾಗಿರುವ ಪರಬ್ರಹ್ಮವು ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವ ಯಾವವುಗಳಿಂದ ಗೊತ್ತುಮಾಡಲ್ಪಡುವದೋ (ಆ ಇವು ಬ್ರಹ್ಮದ ರೂಪಗಳು)[2]. ಆ ಎರಡು ಯಾವವು? ಎಂದರೆ 'ಮೂರ್ತಂ ಚೈವ', ಮೂರ್ತವೆಂಬುದೂ; ಹೀಗೆಯೇ 'ಅಮೂರ್ತಂ ಚ' ಎಂದರೆ ಅಮೂರ್ತವೆಂಬುದೂ (ಇವೆರಡೇ) ಎಂದರ್ಥ. ತಮ್ಮ ಒಳವಿಶೇಷಣಗಳಿಂದೊಡಗೂಡಿರುವ ಮೂರ್ತಾಮೂರ್ತಗಳನ್ನು (ಇಲ್ಲಿ) ಎರಡೇ ಎಂದು ಅವಧಾರಣೆಮಾಡಿರುತ್ತದೆ.

ಮೂರ್ತಾಮೂರ್ತಗಳ ಆ (ವಿಶೇಷಣಗಳು) ಯಾವವು? ಎಂದರೆ (ಶ್ರುತಿ) ಹೇಳುತ್ತದೆ. 'ಮರ್ತ್ಯವು' ಮರ್ತ್ಯವೆಂದರೆ ಸಾವು ಎಂಬ ಧರ್ಮವುಳ್ಳದ್ದು; ಮತ್ತು ಅಮೃತವು ಎಂದರೆ ಅದಕ್ಕೆ ವಿಪರೀತವಾಗಿರುವದು. ಸ್ಥಿತವಾದದ್ದು ಎಂದರೆ ಪರಿಚ್ಛಿನ್ನವಾದದ್ದು, ಮೊದಲು ಚಲಿಸಿ (ಆ ಬಳಿಕ) ನಿಲ್ಲು

1. 'ಉಚ್ಯನ್ತೇ' ಎಂಬ ಪಾಠವನ್ನು ಬಿಟ್ಟು 'ಉಚ್ಯತೇ' ಎಂದೇ ಇಟ್ಟುಕೊಂಡಿದೆ.

2. ಬ್ರಹ್ಮಕ್ಕೆ ನಿಜವಾದ ರೂಪಗಳಿಲ್ಲವಾದರೂ ರೂಪಗಳಿಂದ ರೂಪಿದ್ರವ್ಯವು ನಿರೂಪಿತವಾಗುವಂತೆ ಮೂರ್ತಾಮೂರ್ತಗಳಿಂದ ಬ್ರಹ್ಮವು ನಿರೂಪಿತವಾಗುತ್ತದೆ, ಅವುಗಳ ಮೂಲಕ ಅದನ್ನು ತಿಳಿದುಕೊಳ್ಳಬಹುದಾಗಿದೆ. ಆದ್ದರಿಂದ ಅವನ್ನು ಅದರ ರೂಪಗಳೆಂದು ಕರೆದಿದೆ.

ವದಷ್ಟೆ, ಅದು; ಮತ್ತು ಯತ್ (ಯಾತಿ) ಹೋಗುತ್ತದೆ, (ಎಲ್ಲೆಲ್ಲಿಗೂ) ವ್ಯಾಪಿಸಿಕೊಂಡಿದ್ದು ಪರಿಚ್ಛಿನ್ನವಾಗಿರುವದು, ಸ್ಥಿತಕ್ಕೆ ವಿಪರೀತವಾದದ್ದು. ಸತ್ ಎಂಪರೆ ಮಿಕ್ಕವುಗಳಿಗಿಂತ ಬೇರೆಯಾದ ಒಂದಾನೊಂದು ಅಸಾಧಾರಣ ಧರ್ಮವುಳ್ಳದ್ದು; ಮತ್ತು ತ್ಯತ್[1] ಎಂದರೆ ಅದಕ್ಕೆ ವಿಪರೀತವಾದದ್ದು, ತ್ಯತ್ (ಅದು) ಎಂದೇ ಯಾವಾಗಲೂ ಪರೋಕ್ಷವಾಗಿ ಹೇಳುವದಕ್ಕೆ ತಕ್ಕದ್ದು.[2]

## ಮೂರ್ತವೂ ಅದರ ರಸವೂ

( ಉಪನಿಷತ್ತು )

**ತದೇತನ್ಮೂರ್ತಂ ಯದನ್ಯದ್ವಾಯೋಶ್ಚಾನ್ತರಿಕ್ಷಾಚ್ಚೈತನ್ಮರ್ತ್ಯ ಮೇತತ್ ಸ್ಥಿತಮೇತತ್ ಸತ್ತಸ್ಯೈತಸ್ಯ ಮೂರ್ತಸ್ಯೈತಸ್ಯ ಸ್ಥಿತಸ್ಯೈತಸ್ಯ ಸತ ಏಷ ರಸೋ ಯ ಏಷ ತಪತಿ ಸತೋ ಹ್ಯೇಷ ರಸಃ ॥ ೨ ॥**

೨. ವಾಯುವಿಗಿಂತಲೂ ಅಂತರಿಕ್ಷಕ್ಕಿಂತಲೂ ಅನ್ಯವಾಗಿರುವದಲ್ಲ, ಆ ಇದೇ ಮೂರ್ತವು. ಇದೇ ಮರ್ತ್ಯವು, ಇದೇ ಸ್ಥಿತವು, ಇದೇ ಸತ್. ಆ ಈ ಮೂರ್ತಕ್ಕೆ, ಈ ಮರ್ತ್ಯಕ್ಕೆ, ಈ ಸ್ಥಿತಕ್ಕೆ, ಈ ಸತ್ತಿಗೆ, ಈ ತಪಿಸುತ್ತಿದಾನಲ್ಲ ಇವನೇ ರಸವು. ಇವನು ಸತ್ತಿನ ರಸವಷ್ಟೆ.

## ಮೂರ್ತದ ವರ್ಣನೆ

(ಭಾಷ್ಯ)

೩೩೭. ತತ್ರ ಚತುಷ್ಟಯವಿಶೇಷಣವಿಶಿಷ್ಟಂ ಮೂರ್ತಮ್ । ತಥಾ ಅಮೂರ್ತಂ ಚ । ತತ್ರ ಕಾನಿ ಮೂರ್ತವಿಶೇಷಣಾನಿ, ಕಾನಿ ಚೇತರಾಣಿ ಇತಿ ವಿಭಜ್ಯನ್ತೇ । ತದೇತತ್ ಮೂರ್ತಮ್ ಮೂರ್ಛಿತಾವಯವಮ್ । ಇತರೇತರಾನುಪ್ರವಿಷ್ಟಾವಯವಮ್, ಘನಂ ಸಂಹತಮ್ ಇತ್ಯರ್ಥಃ । ಕಿಂ ತತ್ ? ಯದನ್ಯತ್ । ಕಸ್ಮಾತ್ ? ಅನ್ಯದ್ ವಾಯೋಶ್ಚ ಅನ್ತರಿಕ್ಷಾಚ್ಚ ಭೂತದ್ವಯಾತ್ । ಪರಿಶೇಷಾತ್ ಪೃಥಿವ್ಯಾದಿಭೂತತ್ರಯಮ್ । ಏತತ್ ಮರ್ತ್ಯಂ

---

1. 'ಸತ್ಯಮ್' ಎಂಬುದರ ಎರಡು ಭಾಗವೆಂದು ಎಣಿಸುವಾಗ ಸತ್ ತ್ಯಮ್ ಎಂಬ ಪಾಠವೂ ಹೊಂದುತ್ತದೆ; ತ್ಯತ್ ಎಂಬ ಪಾಠವೂ ಇರುವದರಿಂದ ಎಲ್ಲಾ ಕಡೆಯಲ್ಲಿಯೂ ಅದನ್ನೇ ನಾವು ಹಿಡಿದಿದ್ದೇವೆ.

2. ಸಂಸ್ಕೃತದಲ್ಲಿ ಯಾವಾಗಲೂ ಪರೋಕ್ಷವಾಗಿರುವ ವಸ್ತುವೆಂದು ತಿಳಿಸುವದಕ್ಕೆ ತ್ಯತ್ ಎಂಬ ಶಬ್ದವನ್ನೇ ಉಪಯೋಗಿಸುವರು.

ಯದೇತತ್ ಮೂರ್ತಾಖ್ಯಮ್ ಭೂತತ್ರಯಮ್ ಇದಂ ಮರ್ತ್ಯಮ್, ಮರಣಧರ್ಮಿ । ಕಸ್ಮಾತ್ ? ಯಸ್ಮಾತ್ ಸ್ಥಿತಮೇತತ್ । ಪರಿಚ್ಛಿನ್ನಂ ಹಿ ಅರ್ಥಾನ್ತರೇಣ ಸಂಪ್ರಯುಜ್ಯಮಾನಂ ವಿರುಧ್ಯತೇ । ಯಥಾ ಘಟಃ ಸ್ತಮ್ಭ ಕುಡ್ಯಾದಿನಾ ತಥಾ ಮೂರ್ತಂ ಸ್ಥಿತಮ್ ಪರಿಚ್ಛಿನ್ನಮ್ ಅರ್ಥಾನ್ತರಸಂಬನ್ಧಿ । ತತೋಽರ್ಥಾನ್ತರವಿರೋಧಾತ್ ಮರ್ತ್ಯಮೇತತ್, ಸತ್ ವಿಶೇಷ್ಯಮಾಣಾ ಸಾಧಾರಣಧರ್ಮವತ್ । ತಸ್ಮಾದ್ ಹಿ ಪರಿಚ್ಛಿನ್ನಮ್, ಪರಿಚ್ಛಿನ್ನತ್ವಾತ್ ಮರ್ತ್ಯಮ್ ಅತೋ ಮೂರ್ತಮ್ । ಮೂರ್ತತ್ವಾದ್ ವಾ ಮರ್ತ್ಯಮ್, ಮರ್ತ್ಯತ್ವಾತ್ ಸ್ಥಿತಮ್, ಸ್ಥಿತತ್ವಾತ್ ಸತ್ । ಅತೋಽನ್ಯೋನ್ಯಾವ್ಯಭಿಚಾರಾತ್ ಚತುರ್ಣಾಂ ಧರ್ಮಾಣಾಂ ಯಥೇಷ್ಟಂ ವಿಶೇಷಣವಿಶೇಷ್ಯಭಾವೋ ಹೇತುಹೇತುಮದ್ಭಾವಶ್ಚ ದರ್ಶಯಿತವ್ಯಃ । ಸರ್ವಥಾಪಿ ತು ಭೂತತ್ರಯಂ ಚತುಷ್ಟಯವಿಶೇಷಣವಿಶಿಷ್ಟಂ ಮೂರ್ತಂ ರೂಪಂ ಬ್ರಹ್ಮಣಃ । ತತ್ರ ಚತುರ್ಣಾಮ್ ಏಕಸ್ಮಿನ್ ಗೃಹೀತೇ ವಿಶೇಷಣೇ ಇತರತ್ ಗೃಹೀತಮೇವ ವಿಶೇಷಣಮ್ ಇತ್ಯಾಹ– ತಸ್ಯೈತಸ್ಯ ಮೂರ್ತಸ್ಯ ಏತಸ್ಯ ಮರ್ತ್ಯಸ್ಯ, ಏತಸ್ಯ ಸ್ಥಿತಸ್ಯ, ಏತಸ್ಯ ಸತಃ, ಚತುಷ್ಟಯವಿಶೇಷಣಸ್ಯ ಭೂತತ್ರಯಸ್ಯ ಇತ್ಯರ್ಥಃ । ಏಷ ರಸಃ ಸಾರಃ ಇತ್ಯರ್ಥಃ । ತ್ರಯಾಣಾಂ ಹಿ ಭೂತಾನಾಂ ಸಾರಿಷ್ಠಃ ಸವಿತಾ । ಏತತ್ಸಾರಾಣಿ ತ್ರೀಣಿ ಭೂತಾನಿ ಯತಃ ಏತತ್ಕೃತವಿಭಜ್ಯಮಾನ ರೂಪವಿಶೇಷಣಾನಿ ಭವನ್ತಿ । ಆಧಿದೈವಿಕಸ್ಯ ಕಾರ್ಯಸ್ಯ ಏತದ್ ರೂಪಂ ಯತ್ ಸವಿತಾ ಯದೇತನ್ಮಣ್ಡಲಂ ತಪತಿ । ಸತೋ ಭೂತತ್ರಯಸ್ಯ ಹಿ ಯಸ್ಮಾತ್ ಏಷ ರಸಃ ಇತ್ಯೇತತ್ ಗೃಹ್ಯತೇ । ಮೂರ್ತೋ ಹಿ ಏಷ ಸವಿತಾ ತಪತಿ । ಸಾರಿಷ್ಠಶ್ಚ । ಯತ್ತು ಆಧಿದೈವಿಕಂ ಕರಣಂ ಮಣ್ಡಲಸ್ಯ ಅಭ್ಯನ್ತರಂ ತದ್ ವಕ್ಷ್ಯಾಮಃ ॥

(ಭಾಷ್ಯಾರ್ಥ)

ಇಲ್ಲಿ ಮೂರ್ತವು ನಾಲ್ಕು ವಿಶೇಷಣಗಳಿಂದ ಕೂಡಿರುತ್ತದೆ. ಅಮೂರ್ತವೂ ಹಾಗೆಯೇ (ನಾಲ್ಕು ವಿಶೇಷಣಗಳಿಂದ ಕೂಡಿರುತ್ತದೆ). ಇವುಗಳಲ್ಲಿ ಯಾವವು ಮೂರ್ತದ ವಿಶೇಷಣಗಳು, ಮಿಕ್ಕವು ಯಾವವು ?– ಎಂದು (ಈಗ) ವಿಂಗಡಿಸಲಾಗುತ್ತದೆ. ಆ ಇದು ಮೂರ್ತವು; ಮುದ್ದೆಯಾಗಿ ಮಾಡಿದ ಅವಯವಗಳುಳ್ಳದ್ದು, ಒಂದರೊಳಗೊಂದು ಸೇರಿಕೊಂಡಿರುವ ಅವಯವಗಳುಳ್ಳದ್ದು, ಗಟ್ಟಿಯಾದದ್ದು, ಸಂಹತವಾದದ್ದು ಎಂದರ್ಥ. ಅದು ಯಾವದು ? ಅನ್ಯವಾಗಿದೆಯಲ್ಲ (ಅದು) ; ಯಾವದಕ್ಕಿಂತ (ಅನ್ಯವು) ? ವಾಯುವಿಗಿಂತಲೂ, ಅಂತರಿಕ್ಷಕ್ಕಿಂತಲೂ, ಈ ಭೂತದ್ವಯಕ್ಕಿಂತಲೂ ಅನ್ಯವು ; ಪರಿಶೇಷದಿಂದ ಪೃಥಿವ್ಯಾದಿ ಭೂತತ್ರಯವು (ಎಂದಾಯಿತು).

ಇದು ಮರ್ತ್ಯವು. ಈ ಮೂರ್ತವೆಂಬ ಹೆಸರಿನ ಭೂತತ್ರಯವಿದೆಯಲ್ಲ, ಇದು ಮರ್ತ್ಯವು, ಸಾವೆಂಬ ಧರ್ಮವುಳ್ಳದ್ದು. ಏಕೆ ? ಎಂದರೆ ಇದು ಸ್ಥಿತವಾಗಿರುವದರಿಂದ. ಯಾವದು ಪರಿಚ್ಛಿನ್ನವಾಗಿರುವದೋ ಅದು ಮತ್ತೊಂದು ಪದಾರ್ಥದೊಡನೆ ಸಂಯೋಗವಾದರೆ (ಅದಕ್ಕೆ) ವಿರುದ್ಧವಾಗಿರುತ್ತದೆ; ಉದಾಹರಣೆಗೆ ಗಡಿಗೆಯು ಕಂಬ ಗೋಡೆ ಮುಂತಾದವುಗಳಿಗೆ ವಿರುದ್ಧವಾಗಿರುತ್ತದೆ. ಹಾಗೆಯೇ ಮೂರ್ತವು ಸ್ಥಿತವು, ಪರಿಚ್ಛಿನ್ನವು, ಮತ್ತೊಂದರ ಸಂಬಂಧವುಳ್ಳದ್ದು; ಆದ್ದರಿಂದ ಮತ್ತೊಂದು ಪದಾರ್ಥಕ್ಕೆ ವಿರುದ್ಧವಾಗಿರುವದರಿಂದ ಮರ್ತ್ಯವು.

ಇದು ಸತ್ತು, ವಿಶೇಷವಾಗಿ ಹೇಳಬಹುದಾದ ಅಸಾಧಾರಣಧರ್ಮವುಳ್ಳದ್ದು. ಆದ್ದರಿಂದಲೇ ಅಲ್ಲವೆ, ಅದು ಪರಿಚ್ಛಿನ್ನವು, ಪರಿಚ್ಛಿನ್ನವಾಗಿರುವದರಿಂದ ಮರ್ತ್ಯವು, ಆದ್ದರಿಂದ ಮೂರ್ತವು.

ಅಥವಾ ಮೂರ್ತವಾಗಿರುವದರಿಂದ ಮರ್ತ್ಯವು, ಮರ್ತ್ಯವಾಗಿರುವದರಿಂದ ಸ್ಥಿತವು, ಸ್ಥಿತವಾಗಿರುವದರಿಂದ ಸತ್. ಆದ್ದರಿಂದ (ಈ) ನಾಲ್ಕು ಧರ್ಮಗಳೂ ಒಂದನ್ನು ಬಿಟ್ಟು ಒಂದು ಇರುವದಿಲ್ಲ. (ನಮಗೆ) ಇಷ್ಟ ಬಂದಂತೆ ವಿಶೇಷಣವಿಶೇಷ್ಯಭಾವವನ್ನೂ ಹೇತುಹೇತುಮದ್ಭಾವವನ್ನೂ ತಿಳಿಸಬಹುದು. ಹೇಗೇ ಆಗಲಿ, ನಾಲ್ಕು ವಿಶೇಷಣಗಳಿಂದ ಕೂಡಿದ ಭೂತತ್ರಯವು ಬ್ರಹ್ಮದ ಮೂರ್ತರೂಪವು.

ಈ ನಾಲ್ಕರಲ್ಲಿ ಒಂದು ವಿಶೇಷಣವನ್ನು ತೆಗೆದುಕೊಂಡರೆ ಉಳಿದದ್ದನ್ನು ತೆಗೆದುಕೊಂಡಂತೆಯೇ. ಆದ್ದರಿಂದ ಶ್ರುತಿ (ಹೀಗೆಂದು) ಹೇಳುತ್ತಿದೆ: ಆ ಈ ಮೂರ್ತಕ್ಕೆ, ಈ ಮರ್ತ್ಯಕ್ಕೆ, ಈ ಸ್ಥಿತಕ್ಕೆ, ಈ ಸತ್ತಿಗೆ; ನಾಲ್ಕು ವಿಶೇಷಣಗಳುಳ್ಳ (ಈ) ಭೂತತ್ರಯಕ್ಕೆ ಎಂದರ್ಥ. (ಇದಕ್ಕೆ) ಇದು ರಸವು, ಸಾರವು ಎಂದರ್ಥ; ಏಕೆಂದರೆ ಸೂರ್ಯನು (ಈ) ಮೂರು ಭೂತಗಳ ಪರಮಸಾರವಾಗಿರುತ್ತಾನೆ. ಮೂರು ಭೂತಗಳೂ ಇದನ್ನೇ ಸಾರವಾಗಿ ಉಳ್ಳವುಗಳು; ಏಕೆಂದರೆ ಈ (ಸೂರ್ಯ)ನಿಂದಾದ ವಿಂಗಡವಾಗಿರುವ (ಒಂದೊಂದು) ರೂಪವು (ಅವುಗಳಿಗೆ) ವಿಶೇಷಣವಾಗಿರುತ್ತದೆ.[1] ಆಧಿದೈವಿಕಕಾರ್ಯಕ್ಕೆ ಈ ಸೂರ್ಯನೇ, ಇಗೊ ತಪಿಸುತ್ತಿದೆಯಲ್ಲ, ಈ ಮಂಡಲವೇ ರೂಪವು, "ಇವನು ಸತ್ತಿನ ಭೂತತ್ರಯದ ರಸವಲ್ಲವೆ ? (ಆ ಕಾರಣದಿಂದ)" ಎಂಬಲ್ಲಿ ಈ ಮಂಡಲವನ್ನೇ ಗ್ರಹಿಸಬೇಕು; ಏಕೆಂದರೆ ಈ ಸೂರ್ಯ(ಮಂಡಲವು) ಮೂರ್ತವೂ ಆಗಿದೆ,[2]

---

1. ಕೆಂಪು ತೇಜಸ್ಸಿನ, ಬಿಳುಪು ಅಪ್ಪಿನ, ಕಪ್ಪು ಪೃಥಿವಿಯ ರೂಪವು ಎಂದು ಛಾಂ. ೬-೪-೧ರಲ್ಲಿ ವರ್ಣಿಸಿದೆ.

2. ಮೂರ್ತ, ಮರ್ತ್ಯ, ಸ್ಥಿತ, ಸತ್- ಎಂಬ ನಾಲ್ಕು ಧರ್ಮಗಳಿಂದೊಡಗೂಡಿದ್ದೂ ಆಗಿದೆ ಎಂದರ್ಥ.

ಸಾರಿಷ್ಠವೂ ಆಗಿದೆ. ಇನ್ನು ಈ ಮಂಡಲದ ಒಳಗೆ ಇರುವ ಆಧಿದೈವಿಕ ಕರಣವಿದೆಯಲ್ಲ, ಅದನ್ನು (ಮುಂದೆ) ಹೇಳುವೆವು.

## ಅಮೂರ್ತವೂ ಅದರ ರಸವೂ

(ಉಪನಿಷತ್ತು)

**ಅಥಾಮೂರ್ತಂ ವಾಯುಶ್ಚಾನ್ತರಿಕ್ಷಂ ಚೈತದಮೃತಮೇತದ್ಯ ದೇತತ್ತ್ಯತ್ತಸ್ಯೈತಸ್ಯಾಮೂರ್ತಸ್ಯೈತಸ್ಯಾಮೃತಸ್ಯೈತಸ್ಯ ಯತ ಏತಸ್ಯ ತ್ಯಸ್ಯೈಷ ರಸೋ ಯ ಏಷ ಏತಸ್ಮಿನ್ ಮಣ್ಡಲೇ ಪುರುಷ ಸ್ತ್ಯಸ್ಯ ಹ್ಯೇಷ ರಸ ಇತ್ಯಧಿದೈವತಮ್ ॥ ೩ ॥**

೩. ಇನ್ನು ಅಮೂರ್ತವು. ವಾಯುವೂ ಅಂತರಿಕ್ಷವೂ (ಅಮೂರ್ತವು). ಇದು ಅಮೃತವು, ಇದು ಯತ್, ಇದು ತ್ಯತ್– ಆ ಈ ಅಮೂರ್ತಕ್ಕೆ ಈ ಅಮೃತಕ್ಕೆ, ಈ ಯತ್ತಿಗೆ, ಈ ತ್ಯತ್ತಿಗೆ, ಈ ಮಂಡಲದಲ್ಲಿರುವ ಪುರುಷನಿದಾನಲ್ಲ, ಇವನು ರಸವು. ಇವನು ತ್ಯತ್ತಿನ ರಸವಲ್ಲವೆ ? ಹೀಗೆ ಅಧಿದೈವತ(ವಾಯಿತು).

(ಭಾಷ್ಯ)

೩೩೮. 'ಅಥಾಮೂರ್ತಮ್ ।' ಅಥ ಅಧುನಾ ಅಮೂರ್ತಮ್ ಉಚ್ಯತೇ । ವಾಯುಶ್ಚ ಅನ್ತರಿಕ್ಷಂ ಚ ಯತ್ ಪರಿಶೇಷಿತಂ ಭೂತದ್ವಯಮ್ । ಏತದಮೃತಮ್ । ಅಮೂರ್ತತ್ವಾತ್ ಅಸ್ಥಿತಮ್ । ಅತೋಽವಿರುಧ್ಯಮಾನಂ ಕೇನಚಿತ್ ಅಮೃತಮ್ ಅಮರಣಧರ್ಮಿ । ಏತತ್ ಯತ್ ಸ್ಥಿತವಿಪರೀತಮ್ ವ್ಯಾಪಿ ಅಪರಿಚ್ಛಿನ್ನಮ್ । ಯಸ್ಮಾತ್ ಏತತ್ ಅನ್ಯೇಭ್ಯೋಽಪ್ರವಿಭಜ್ಯಮಾನ ವಿಶೇಷಮ್ ಅತಃ ತ್ಯತ್ ತ್ಯದಿತಿ ಪರೋಕ್ಷಾಭಿಧಾನಾರ್ಹಮೇವ ಪೂರ್ವವತ್। ತಸ್ಯೈತಸ್ಯ ಅಮೂರ್ತಸ್ಯ ಏತಸ್ಯ ಅಮೃತಸ್ಯ, ಏತಸ್ಯ ಯತಃ, ಏತಸ್ಯ ತ್ಯಸ್ಯ ಚತುಷ್ಟಯವಿಶೇಷಣಸ್ಯ ಅಮೂರ್ತಸ್ಯ ಏಷ ರಸಃ। ಕೋಽಸೌ ? ಯ ಏಷ ಏತಸ್ಮಿನ್ ಮಣ್ಡಲೇ ಪುರುಷಃ ಕರಣಾತ್ಮಕೋ ಹಿರಣ್ಯಗರ್ಭಃ ಪ್ರಾಣಃ ಇತ್ಯಭಿಧೀಯತೇ ಯಃ ಸ ಏಷಃ ಅಮೂರ್ತಸ್ಯ ಭೂತದ್ವಯಸ್ಯ ರಸಃ ಪೂರ್ವವತ್ ಸಾರಿಷ್ಠಃ । ಏತತ್ಪುರುಷಸಾರಂ ಚ ಅಮೂರ್ತಂ ಭೂತದ್ವಯಮ್ । ಹೈರಣ್ಯಗರ್ಭಲಿಙ್ಗಾರಮ್ಭಾಯ ಹಿ ಭೂತದ್ವಯಾಭಿವ್ಯಕ್ತಿರವ್ಯಾಕೃತಾತ್ । ತಸ್ಮಾತ್ ತಾದರ್ಥ್ಯಾತ್ ತತ್ಸಾರಂ ಭೂತದ್ವಯಮ್ । ತ್ಯಸ್ಯ ಹಿ ಏಷ ರಸಃ। ಯಸ್ಮಾತ್ ಯೋ ಮಣ್ಡಲಸ್ಥಃ ಪುರುಷಃ ಮಣ್ಡಲವತ್ ನ ಗೃಹ್ಯತೇ ಸಾರಶ್ಚ ಭೂತದ್ವಯಸ್ಯ । ತಸ್ಮಾತ್ ಅಸ್ತಿ ಮಣ್ಡಲಸ್ಥಸ್ಯ ಪುರುಷಸ್ಯ ಭೂತದ್ವಯಸ್ಯ

ಚ ಸಾಧರ್ಮ್ಯಾತ್। ತಸ್ಮಾತ್ ಯುಕ್ತಂ ಪ್ರಸಿದ್ಧವತ್ ಹೇತ್ವುಪಾದಾನಂ 'ತ್ಯಸ್ಯ ಹ್ಯೇಷ ರಸಃ' ಇತಿ ॥

(ಭಾಷ್ಯಾರ್ಥ)

'ಇನ್ನು ಅಮೂರ್ತವು', ಇನ್ನು ಈಗ ಅಮೂರ್ತವನ್ನು ಹೇಳಲಾಗುವದು. ವಾಯುವೂ ಅಂತರಿಕ್ಷವೂ, ಉಳಿಸಿಕೊಂಡಿದ್ದ[1] ಭೂತದ್ವಯವಿದೆಯಲ್ಲ (ಅದು ಅಮೂರ್ತವು). ಅದು ಅಮೃತವು. ಅಮೂರ್ತವಾಗಿರುವದರಿಂದ ಸ್ಥಿತವಲ್ಲ, ಆದ್ದರಿಂದ ಏತಕ್ಕೂ ವಿರುದ್ಧವಲ್ಲವಾಗಿ ಅಮೃತವು, ಸಾವೆಂಬ ಧರ್ಮವಿಲ್ಲದ್ದು. ಇದು ಯತ್ ಸ್ಥಿತಕ್ಕೆ ವಿಪರೀತವಾದದ್ದು, ವ್ಯಾಪಿಯು, ಅಪರಿಚ್ಛಿನ್ನವು. ಇದು ಮಿಕ್ಕ ವಸ್ತುಗಳಿಂದ ಪ್ರವಿಭಕ್ತವಾಗಿರುವ ವಿಶೇಷ (ಸ್ವರೂಪ)ವುಳ್ಳದ್ದಲ್ಲವಷ್ಟೆ, ಆದ್ದರಿಂದ ತ್ಯತ್ತು; ತ್ಯತ್ (ಅದು) ಎಂದು ಪರೋಕ್ಷವಾಗಿ ಕರೆಯುವದಕ್ಕೆ ತಕ್ಕದ್ದೇ ಎಂದು ಹಿಂದಿನ (ಕಂಡಿಕೆಯಂತೆ)ಯೇ (ವ್ಯಾಖ್ಯಾನಮಾಡಬೇಕು).

ಆ ಈ ಅಮೂರ್ತಕ್ಕೆ, ಈ ಅಮೃತಕ್ಕೆ, ಈ ಯತ್ತಿಗೆ, ಈ ತ್ಯತ್ತಿಗೆ- ನಾಲ್ಕು ವಿಶೇಷಣಗಳುಳ್ಳ (ಈ) ಅಮೃತಕ್ಕೆ- ಇದು ರಸವು. ಇದು : (ಎಂದರೆ) ಯಾವದು ? ಈ ಮಂಡಲದಲ್ಲಿರುವ ಪುರುಷನಿದ್ದಾನಲ್ಲ, ಕರಣಾತ್ಮನಾಗಿರುವ ಹಿರಣ್ಯಗರ್ಭ, ಪ್ರಾಣ- ಎಂದು ಕರೆಯಿಸಿಕೊಳ್ಳುವನಲ್ಲ[2], ಆ ಇದೇ ಅಮೂರ್ತವಾದ ಭೂತದ್ವಯಕ್ಕೆ 'ರಸವು', ಸಾರಿಷ್ಠವು ಎಂದು ಹಿಂದಿನ (ಕಂಡಿಕೆಯಂತೆ ವ್ಯಾಖ್ಯಾನಮಾಡಬೇಕು). ಅಮೂರ್ತವಾದ ಭೂತದ್ವಯವು ಈ ಪುರುಷನನ್ನೇ ಸಾರವಾಗಿ ಉಳ್ಳದ್ದು. ಹಿರಣ್ಯಗರ್ಭಲಿಂಗ(ಶರೀರ)ವನ್ನುಂಟುಮಾಡುವದಕ್ಕಲ್ಲವೆ, ಭೂತದ್ವಯವು ಅವ್ಯಾಕೃತದಿಂದ ಹೊರತೋರಿಕೊಂಡಿರುವದು[3] ? ಆದ್ದರಿಂದ ಅದಕ್ಕಾಗಿ (ಇರುವದರಿಂದ)

---

1. ಹಿಂದಿನ ಕಂಡಿಕೆಯಲ್ಲಿ ವಾಯು, ಅಂತರಿಕ್ಷ- ಇವುಗಳಿಗಿಂತ ಬೇರೆಯಾದದ್ದೇ ಮೂರ್ತವು ಎಂದು ಹೇಳಿತ್ತು ; ಈಗ ಅಲ್ಲಿ ಉಳಿಸಿದ್ದ ಭೂತದ್ವಯವನ್ನು ಹೇಳಿದೆ ಎಂದು ಅಭಿಪ್ರಾಯ.

2. ಇಲ್ಲಿ ಉಪಾಧಿಯಾದ ಆಧಿದೈವಿಕಶರೀರಲಿಂಗವನ್ನೇ ಈ ಹೆಸರುಗಳಿಂದ ಕರೆದಿದೆ.

3. ಸೂರ್ಯಮಂಡಲವು ಭೂತತ್ರಯಸಾರವಾದ ಆಧಿದೈವಿಕಕಾರ್ಯವು ; ಅದರೊಳಗಿನ ಪುರುಷನು, ಎಂದರೆ ಹಿರಣ್ಯಗರ್ಭನ ಲಿಂಗಶರೀರವು ಆಧಿದೈವಿಕಕರಣವು. ನಮ್ಮಲ್ಲಿಯೂ ಕಾರ್ಯಕರಣಗಳಿರುವವಾದರೂ ಸೂರ್ಯನಲ್ಲಿರುವಷ್ಟು ಉತ್ಕೃಷ್ಟವಾಗಿರುವದಿಲ್ಲ. ಆದ್ದರಿಂದ ಸೂರ್ಯನಲ್ಲಿರುವ ಕಾರ್ಯಕರಣಗಳೇ ಭೂತಗಳ ಸಾರವು ಎಂದು ಅಭಿಪ್ರಾಯ. ಕಾರ್ಯಕರಣಗಳೆರಡರಲ್ಲಿಯೂ ಎಲ್ಲಾ ಭೂತಗಳೂ ಇರುವವಾದರೂ ಕಾರ್ಯದಲ್ಲಿ ಭೂತತ್ರಯಕ್ಕೂ ಕರಣಗಳಲ್ಲಿ ಭೂತದ್ವಯಕ್ಕೂ ಪ್ರಾಧಾನ್ಯವಿರುತ್ತದೆ.

ಭೂತದ್ವಯವು ಆ (ಲಿಂಗಶರೀರವೇ) ಸಾರವಾಗಿ ಉಳ್ಳದ್ದು. ಇದು ತ್ಯತ್ತಿನ ರಸವಲ್ಲವೆ? ಏಕೆಂದರೆ ಮಂಡಲದಲ್ಲಿರುವ ಪುರುಷನಿದಾನಲ್ಲ, (ಅದು) ಮಂಡಲದಂತೆ ಕಾಣುವದಿಲ್ಲ, ಭೂ ತ ದ್ವ ಯ ಕ್ಕೆ ಸಾರವೂ ಆಗಿರುತ್ತದೆ; ಆದ್ದರಿಂದ ಮಂಡಲದೊಳಗಿರುವ ಪುರುಷನಿಗೂ ಭೂತದ್ವಯಕ್ಕೂ (ಈ) ಹೋಲಿಕೆಯಿದೆ. ಆದ್ದರಿಂದ ಇದು ತ್ಯತ್ತಿನ ರಸವಲ್ಲವೆ? ಎಂದು ಪ್ರಸಿದ್ಧವಾಗಿರುವಂತೆ ಹೇತುವನ್ನು ಹೇಳಿದ್ದು ಯುಕ್ತವಾಗಿದೆ.

## ಭರ್ತೃಪ್ರಪಂಚರ ವ್ಯಾಖ್ಯಾನದ ಖಂಡನೆ

(ಭಾಷ್ಯ)

೩೩೯. ರಸಃ ಕಾರಣಂ ಹಿರಣ್ಯಗರ್ಭವಿಜ್ಞಾನಾತ್ಮಾ ಚೇತನ ಇತಿ ಕೇಚಿತ್ । ತತ್ರ ಚ ಕಿಲ ಹಿರಣ್ಯಗರ್ಭವಿಜ್ಞಾನಾತ್ಮನಃ ಕರ್ಮ ವಾಯ್ವನ್ತರಿಕ್ಷಯೋಃ ಪ್ರಯೋಕ್ತೃ ತತ್ಕರ್ಮ ವಾಯ್ವನ್ತರಿಕ್ಷಾಧಾರಂ ಸತ್ ಅನ್ಯೇಷಾಂ ಭೂತಾನಾಂ ಪ್ರಯೋಕ್ತೃ ಭವತಿ। ತೇನ ಸ್ವಕರ್ಮಣಾ ವಾಯ್ವನ್ತರಿಕ್ಷಯೋಃ ಪ್ರಯೋಕ್ತಾ ಇತಿ ತಯೋಃ ರಸಃ ಕಾರಣಮುಚ್ಯತ ಇತಿ। ತನ್ನ। ಮೂರ್ತರಸೇನ ಅತುಲ್ಯತ್ವಾತ್। ಮೂರ್ತಸ್ಯ ತು ಭೂತತ್ರಯಸ್ಯ ರಸಃ ಮೂರ್ತಮೇವ ಮಣ್ಡಲಂ ದೃಷ್ಟಂ ಭೂತತ್ರಯಸಮಾನಜಾತೀಯಮ್, ನ ಚೇತನಃ । ತಥಾ ಅಮೂರ್ತಯೋರಪಿ ಭೂತಯೋಃ ತತ್ಸಮಾನಜಾತೀಯೇನೈವ ಅಮೂರ್ತರಸೇನ ಯುಕ್ತಂ ಭವಿತುಮ್ । ವಾಕ್ಯಪ್ರವೃತ್ತೇಸ್ತುಲ್ಯತ್ವಾತ್। ಯಥಾ ಹಿ ಮೂರ್ತಾಮೂರ್ತೇ ಚತುಷ್ಟಯಧರ್ಮವತೀ ವಿಭಜ್ಯೇತೇ, ತಥಾ ರಸರಸವತೋರಪಿ ಮೂರ್ತಾಮೂರ್ತಯೋಃ ತುಲ್ಯೇನೈವ ನ್ಯಾಯೇನ ಯುಕ್ತೋ ವಿಭಾಗಃ। ನ ಚಾರ್ಥವೈಶಸಮ್[1] । ಮೂರ್ತರಸೇಽಪಿ ಮಣ್ಡಲೋಪಾಧಿಶ್ಚೇತನೋ ವಿವಕ್ಷ್ಯತ ಇತಿ ಚೇತ್ । ಅತ್ಯಲ್ಪಮಿದಮುಚ್ಯತೇ। ಸರ್ವತ್ರೈವ ತು ಮೂರ್ತಾಮೂರ್ತಯೋರ್ಬ್ರಹ್ಮರೂಪತ್ವೇನ[2] ವಿವಕ್ಷಿತತ್ವಾತ್। ಪುರುಷಶಬ್ದೋಽಚೇತನೇಽ[3]ನುಪಪನ್ನಃ ಇತಿ ಚೇತ್। ನ । ಪಕ್ಷಪುಚ್ಛಾದಿವಿಶಿಷ್ಟಸ್ಯೈವ ಲಿಙ್ಗಸ್ಯ ಪುರುಷಶಬ್ದದರ್ಶನಾತ್ । “ನ ವಾ ಇತ್ಥಂ ಸನ್ತಃ ಶಕ್ಷ್ಯಾಮಃ ಪ್ರಜಾಃ ಪ್ರಜನಯಿತುಮಿಮಾನ್ ಸಪ್ತಪುರುಷಾನೇಕಂ ಪುರುಷಂ ಕರವಾಮೇತಿ ತ ಏತಾನ್ ಸಪ್ತಪುರುಷಾನೇಕಂ ಪುರುಷಮಕುರ್ವನ್” (ಶತ.ಬ್ರಾ. ೬-೧-೧-೩)

---

1. ‘ನ ತ್ವರ್ಥವೈಶಸಮ್’ ಎಂಬ ಪಾಠಕ್ಕೂ ಇದೇ ಅರ್ಥ.
2. ಬ್ರಹ್ಮರೂಪೇಣ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.
3. ಅಚೇತನೋ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ. ಮಾ॥ ಪಾಠವು ಹೀಗೇ ಇದೆ.

ಇತ್ಯಾದೌ। ಅನ್ನರಸಮಯಾದಿಷು ಚ ಶ್ರುತ್ಯನ್ತರೇ ಪುರುಷಶಬ್ದಪ್ರಯೋಗಾತ್। 'ಇತ್ಯಧಿದೈವತಮ್' ಇತ್ಯುಕ್ತ್ಯೋಪಸಂಹಾರಃ ಅಧ್ಯಾತ್ಮವಿಭಾಗೋಕ್ತ್ಯರ್ಥಃ ॥

(ಭಾಷ್ಯಾರ್ಥ)

ರಸವೆಂದರೆ ಕಾರಣವು[1], **ಹಿರಣ್ಯಗರ್ಭವಿಜ್ಞಾನಾತ್ಮ**ನೆಂಬ ಚೇತನನು, ಎಂದು ಕೆಲವರು (ವ್ಯಾಖ್ಯಾನಮಾಡಿರುತ್ತಾರೆ). ಆದರಲ್ಲಿಯೂ ಹಿರಣ್ಯಗರ್ಭ ವಿಜ್ಞಾನಾತ್ಮನ ಕರ್ಮವು ವಾಯ್ವಂತರಿಕ್ಷಗಳಿಗೆ ಪ್ರಯೋಕ್ತೃವು; ಆ ಕರ್ಮವು ವಾಯ್ವಂತರಿಕ್ಷಗಳ ಆಧಾರದಲ್ಲಿದ್ದುಕೊಂಡು ಮಿಕ್ಕ ಭೂತಗಳಿಗೆ ಪ್ರಯೋಕ್ತೃ ವಾಗುತ್ತದೆ.[2] ಆದ್ದರಿಂದ ತನ್ನ ಕರ್ಮದಿಂದ ವಾಯ್ವಂತರಿಕ್ಷಗಳಿಗೆ ಪ್ರಯೋಕ್ತೃವಾಗಿರುತ್ತಾನಾದ್ದರಿಂದ ಅವನನ್ನು ಅವುಗಳ ರಸವು, ಕಾರಣವು ಎಂದಿರುತ್ತದೆ ಎಂದು (ಅವರ ಅಭಿಪ್ರಾಯ).

ಇದು (ಸರಿ)ಯಲ್ಲ. ಏಕೆಂದರೆ ಮೂರ್ತರಸಕ್ಕೆ ಸಮಾನವಾಗಿರುವದಿಲ್ಲ. (ಇದರ ವಿವರ) : ಮೂರ್ತವಾದ ಭೂತತ್ರಯಕ್ಕೆ ರಸವು ಮೂರ್ತವೇ ಆಗಿರುವ, ಭೂತತ್ರಯಸಮಾನಜಾತೀಯವಾದ ಮಂಡಲವೇ ಹೊರತು ಚೇತನವಲ್ಲ. ಹಾಗೆಯೇ ಅಮೂರ್ತವಾಗಿರುವ ಭೂತಗಳಿಗೂ ಅವುಗಳಿಗೆ ಸಮಾನಜಾತೀಯ ವಾದ ರಸವೇ ಇರಬೇಕೆಂದು ಯುಕ್ತವು. ಏಕೆಂದರೆ (ಎರಡು ಕಡೆಯಲ್ಲಿಯೂ) ವಾಕ್ಯಪ್ರವೃತ್ತಿಯು ಸಮಾನವಾಗಿರುತ್ತದೆ. ಹೇಗೆ ಮೂರ್ತಾಮೂರ್ತಗಳನ್ನು ನಾಲ್ಕು ಧರ್ಮಗಳುಳ್ಳವಾಗಿ ವಿಂಗಡಿಸಿರುತ್ತದೆಯೋ, ಹಾಗೆಯೇ ರಸ, ರಸ ವುಳ್ಳದ್ದು –ಎಂಬ ಮೂರ್ತಾಮೂರ್ತಗಳನ್ನು ಅದೇ ನ್ಯಾಯದಿಂದಲೇ ವಿಭಾಗ ಮಾಡತಕ್ಕದ್ದು ಯುಕ್ತವಾಗಿರುತ್ತದೆ. (ಇಷ್ಟೇ ಹೊರತು) ಅರ್ಧವೈಶಸವು (ಯುಕ್ತ)ವಲ್ಲ.[3]

---

1. ಕಾರಣವೇ ಕಾರ್ಯಕ್ಕೆ ರಸವು; ಭೂತದ್ವಯಕ್ಕೆ ಚೇತನನಾದ ಹಿರಣ್ಯಗರ್ಭನು ಕಾರಣ ಎಂದು ಅಭಿಪ್ರಾಯ.

2 "ಈ ಮಂಡಲದಲ್ಲಿರುವ ವಿಜ್ಞಾನಾತ್ಮನಿದಾನಲ್ಲ, ಇವನು ಅವಿದ್ಯಾಕರ್ಮಪೂರ್ವ ಪ್ರಜ್ಞೆಗಳಿಂದ ಪರಿಷ್ಕೃತನಾಗಿ ವಿಜ್ಞಾನಾತ್ಮನಾಗಿರುತ್ತಾನೆ; ಇದೇ ವಿಜ್ಞಾನಾತ್ಮನ ಕರ್ಮದ ರೂಪವು, ಅದು ವಾಯ್ವಂತರಿಕ್ಷಗಳಿಗೆ ಪ್ರಯೋಕ್ತೃವಾಗಿರುತ್ತದೆ" ಎಂದು ಭರ್ತೃಪ್ರಪಂಚ ವಚನವು. ಅವಿದ್ಯಾಕರ್ಮಪೂರ್ವಪ್ರಜ್ಞೆಗಳಿಂದೊಡಗೂಡಿದ ಹಿರಣ್ಯಗರ್ಭವಿಜ್ಞಾನಾತ್ಮನು ಭೂತದ್ವಯವನ್ನು ಸೃಜಿಸುತ್ತಾನೆ ಎಂಬುದು ಅವರ ಮತವು.

3. ಮೂರ್ತ, ಮರ್ತ್ಯ, ಸ್ಥಿತ, ಸತ್ –ಎಂಬ ನಾಲ್ಕು ವಿಶೇಷಣಗಳುಳ್ಳದ್ದು ಒಂದು ವರ್ಗ : ಅಮೂರ್ತ, ಅಮೃತ, ಯತ್, ತ್ಯತ್ –ಎಂಬ ವಿಶೇಷಣಗಳುಳ್ಳದ್ದು ಇನ್ನೊಂದು ವರ್ಗ. ಇವೆರಡೂ ಅಚೇತನವೇ. ಹೀಗಿರುವಲ್ಲಿ ಮೂರ್ತದ ರಸವು ಅಚೇತನ, ಅಮೂರ್ತದ ರಸವು ಮಾತ್ರ ಚೇತನ ಎಂಬುದಕ್ಕೆ ನ್ಯಾಯವಿಲ್ಲ. ಹಾಗೆ ಮಾಡಿದರೆ ಅರ್ಧವೈಶಸ; ಪ್ರಾಣಿಯ ಅರ್ಧವನ್ನು ಕೊಂದು, ಉಳಿದರ್ಧವನ್ನು ಮೊಟ್ಟೆ ಇಡುವದ ಕ್ಕೆಂದು ಉಳಿಸಿಕೊಳ್ಳುವೆನೆಂಬಂತೆ ಆಗುವದು ಎಂದು ಅಭಿಪ್ರಾಯ.

(ಭರ್ತೃಪ್ರಪಂಚ) :- ಮೂರ್ತರಸದಲ್ಲಿಯೂ ಮಂಡಲವೆಂಬ ಉಪಾಧಿಯುಳ್ಳ ಚೇತನನೇ ವಿವಕ್ಷಿತನಾಗಿರುತ್ತಾನಲ್ಲ[1] !

(ಸಿದ್ಧಾಂತಿ):- ಇದು ಅತ್ಯಲ್ಪವಾಗಿ ಹೇಳಿದ್ದಾಯಿತು. ಏಕೆಂದರೆ ಎಲ್ಲೆಲ್ಲಿಯೂ ಮೂರ್ತಾಮೂರ್ತಗಳು ಬ್ರಹ್ಮದ ರೂಪವೆಂದೇ ವಿವಕ್ಷಿತವಾಗಿದೆ.[2]

(ಭರ್ತೃ.) :- ಪುರುಷಶಬ್ದವು ಅಚೇತನಕ್ಕೆ ಹೊಂದುವದಿಲ್ಲವಲ್ಲ !

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ "ಹೀಗಿದ್ದುಕೊಂಡು ಪ್ರಜೆಗಳನ್ನುಂಟುಮಾಡುವದಕ್ಕೆ ಶಕ್ತರಾಗಲಾರೆವು ; ಈ ಏಳು ಪುರುಷರನ್ನು[3] ಒಬ್ಬ ಪುರುಷನನ್ನಾಗಿ[4] ಮಾಡೋಣ!" (ಶತ. ಬ್ರಾ. ೬-೧-೧-೩) ಮುಂತಾದ (ವಾಕ್ಯದಲ್ಲಿ) ಪಕ್ಷಪುಚ್ಛಾದಿವಿಶಿಷ್ಟನಾಗಿರುವ ಲಿಂಗಕ್ಕೇ[5] ಪುರುಷಶಬ್ದವನ್ನು ಪ್ರಯೋಗಿಸಿರುವದು ಕಂಡುಬರುತ್ತದೆ. ಬೇರೊಂದು ಶ್ರುತಿಯಲ್ಲಿ[6] ಅನ್ನರಸಮಯಾದಿಗಳಲ್ಲಿ ಪುರುಷಶಬ್ದವನ್ನು ಪ್ರಯೋಗಮಾಡಿರುವದರಿಂದಲೂ (ಅಚೇತನಕ್ಕೂ ಪುರುಷಶಬ್ದವುಂಟೆಂದು ಗೊತ್ತಾಗುತ್ತದೆ).

'ಹೀಗೆ ಅಧಿದೈವತ(ವಾಯಿತು)' ಎಂದು (ಹಿಂದೆ) ಹೇಳಿರುವದನ್ನು ಉಪಸಂಹಾರಮಾಡಿಕೊಂಡಿರುವದು (ಮುಂದೆ) ಅಧ್ಯಾತ್ಮವನ್ನು ವಿಂಗಡಿಸಿ ಹೇಳುವದಕ್ಕಾಗಿ.

## ಅಧ್ಯಾತ್ಮಮೂರ್ತವೂ ಮೂರ್ತರಸವೂ

(ಉಪನಿಷತ್ತು)

**ಅಥಾಧ್ಯಾತ್ಮಮಿದಮೇವ ಮೂರ್ತಂ ಯದನ್ಯತ್ ಪ್ರಾಣಾಚ್ಚ ಯಶ್ಚಾಯಮನ್ತರಾತ್ಮನ್ನಾಕಾಶ ಏತನ್ಮರ್ತ್ಯಮೇತತ್ಸ್ಥಿತಮೇತತ್ಸತ್ತಸ್ಯೈತಸ್ಯ ಮೂರ್ತಸ್ಯೈತಸ್ಯ ಮರ್ತ್ಯಸ್ಯೈತಸ್ಯ ಸ್ಥಿತಸ್ಯೈತಸ್ಯ ಸತ ಏಷ ರಸೋ ಯಚ್ಚಕ್ಷುಃ ಸತೋ ಹ್ಯೇಷ ರಸಃ ॥೪॥**

---

1. ಆದ್ದರಿಂದ ಇಲ್ಲಿ ಅರ್ಥನ್ಯೈಶಸನ್ಯಾಯವಿಲ್ಲವಲ್ಲ !

2. ಮೂರ್ತಾಮೂರ್ತಗಳು ತಮ್ಮ ಸ್ವರೂಪದಿಂದ ಪರಮಾರ್ಥವಲ್ಲ, ಬ್ರಹ್ಮರೂಪದಿಂದಲೇ ಪರಮಾರ್ಥ -ಎಂದು ತಿಳಿಸುವದಕ್ಕೆ ಪ್ರಕರಣವು ಬಂದಿದೆ. ಆದರೂ ಕಲ್ಪಿತ ರೂಪದಿಂದ ಅವನ್ನು ನೋಡುವಾಗ ಒಂದು ಅಚೇತನ, ಮತ್ತೊಂದು ಚೇತನ -ಎಂಬುದು ಸರಿಯಾಗುವದಿಲ್ಲ - ಎಂದು ಭಾವ.

3. ತ್ವಕ್‌ಚಕ್ಷುಃಶ್ರೋತ್ರಜಿಹ್ವಾಘ್ರಾಣವಾಙ್ಮನಸ್ಸುಗಳೆಂಬ ಏಳು ಪುರುಷರನ್ನು.

4. ಲಿಂಗಶರೀರವನ್ನಾಗಿ ಎಂದರ್ಥ.

5. ಇಬ್ಬರು ಪುರುಷರು ದಕ್ಷಿಣೋತ್ತರಪಕ್ಷಗಳಾದರು, ಒಬ್ಬರು ಪುಚ್ಛವಾದನು- ಎಂದು ಪ್ರಾಣಗಳನ್ನೇ ಪುರುಷರೆಂದು ಕರೆದಿದೆ ; ತದ್ವಿಶಿಷ್ಟವಾದ ಮಧ್ಯಮಪ್ರಾಣಾಖ್ಯಲಿಂಗವನ್ನು ಪುರುಷನೆಂದಿದೆ.

6. ತೈತ್ತಿರೀಯದ ಆನಂದವಲ್ಲಿಯಲ್ಲಿ.

೪. ಇನ್ನು ಅಧ್ಯಾತ್ಮವು ಪ್ರಾಣಕ್ಕಿಂತ ಅನ್ಯವಾಗಿರುವದಲ್ಲ, ಮತ್ತು ಆತ್ಮದ ಒಳಗೆ ಇರುವ ಆಕಾಶ(ಕ್ಕಿಂತ ಅನ್ಯವಾಗಿರುವದಲ್ಲ) ಇದೇ ಮೂರ್ತವು. ಇದು ಮರ್ತ್ಯವು, ಇದು ಸ್ಥಿತವು, ಇದು ಸತ್. ಆ ಈ ಮೂರ್ತಕ್ಕೆ, ಈ ಮರ್ತ್ಯಕ್ಕೆ ಈ ಸ್ಥಿತಕ್ಕೆ, ಈ ಸತ್ತಿಗೆ, ಈ ಕಣ್ಣಿದೆಯಲ್ಲ, ಇದೇ ರಸವು. ಇದು ಸತ್ತಿನ ರಸವಲ್ಲವೆ?

(ಭಾಷ್ಯ)

೩೪೦. ಅಥ ಅಧುನಾ ಅಧ್ಯಾತ್ಮಂ ಮೂರ್ತಾಮೂರ್ತಯೋರ್ವಿಭಾಗ ಉಚ್ಯತೇ। ಕಿಂ ತನ್ಮೂರ್ತಮ್ ? ಇದಮೇವ। ಕಿಂ ಚೇದಮ್ ? ಯದನ್ಯತ್ ಪ್ರಾಣಾಚ್ಚ ವಾಯೋಃ। ಯಶ್ಚಾಯಮನ್ತಃ ಅಭ್ಯನ್ತರೇ ಆತ್ಮನ್ ಆತ್ಮನಿ ಆಕಾಶಃ ಖಮ್। ಶರೀರಸ್ಥಶ್ಚ ಯಃ ಪ್ರಾಣಃ ಏತದ್ ದ್ವಯಂ ವರ್ಜಯಿತ್ವಾ ಯದನ್ಯತ್ ಶರೀರಾರಮ್ಭಕಂ ಭೂತತ್ರಯಮ್ 'ಏತನ್ಮರ್ತ್ಯಮ್' ಇತ್ಯಾದಿ ಸಮಾನಮನ್ಯತ್ ಪೂರ್ವೇಣ। ಏತಸ್ಯ[1] ಸತಃ ಹಿ ಏಷ ರಸಃ ಯಚ್ಚಕ್ಷುರಿತಿ। ಆಧ್ಯಾತ್ಮಿಕಸ್ಯ ಶರೀರಾರಮ್ಭಕಸ್ಯ ಕಾರ್ಯಸ್ಯ ಏಷ ರಸಃ ಸಾರಃ। ತೇನ ಹಿ ಸಾರೇಣ ಸಾರವದಿದಂ ಶರೀರಂ ಸಮಸ್ತಮ್, ಯಥಾ ಅಧಿದೈವತಮ್ ಆದಿತ್ಯ ಮಣ್ಡಲೇನ। ಪ್ರಾಥಮ್ಯಾಚ್ಚ। 'ಚಕ್ಷುಷೀ ಏವ ಪ್ರಥಮೇ ಸಂಭವತಃ' ಸಂಭವತ[2] (ಶತ. ಬ್ರಾ. ೪-೨-೧-೨-೨೮) ಇತಿ। 'ತೇಜೋ ರಸೋ ನಿರವರ್ತ ತಾಗ್ನಿಃ' (೧-೨-೨) ಇತಿ ಲಿಙ್ಗಾತ್। ತೈಜಸಂ ಹಿ ಚಕ್ಷುಃ। ಏತತ್ಸಾರಮ್ ಆಧ್ಯಾತ್ಮಿಕಂ ಭೂತತ್ರಯಮ್। ಸತೋ ಹ್ಯೇಷ ರಸಃ ಇತಿ ಮೂರ್ತಸಾರತ್ವೇ ಹೇತ್ವರ್ಥಃ ॥

(ಭಾಷ್ಯಾರ್ಥ)

ಇನ್ನು ಈಗ ಅಧ್ಯಾತ್ಮವಾಗಿ ಮೂರ್ತಾಮೂರ್ತಗಳ ವಿಂಗಡವನ್ನು ಹೇಳಲಾಗುತ್ತದೆ. ಆ ಮೂರ್ತವು ಯಾವದು? ಇದೇ. ಇದು ಎಂದರೆ ಯಾವದು? ಪ್ರಾಣಕ್ಕಿಂತಲೂ ವಾಯುವಿಗಿಂತಲೂ ಮತ್ತು (ಆತ್ಮನ್= ಆತ್ಮನಿ) ಶರೀರದಲ್ಲಿ ಆಕಾಶವಿದೆಯಲ್ಲ, ಆ ಆಕಾಶ ಮತ್ತು ಶರೀರದಲ್ಲಿರುವ ಪ್ರಾಣ[3] -ಇವೆರಡನ್ನೂ ಬಿಟ್ಟುಕಳೆದು ಬೇರೆ(ಉಳಿದ) ಶರೀರಕ್ಕೆ ಕಾರಣವಾಗಿರುವ ಭೂತತ್ರಯವಿದೆ

1. ಮೂಲದಲ್ಲಿಲ್ಲದಿದ್ದರೂ ಇದನ್ನು ಭಾಷ್ಯಕಾರರು ಸೇರಿಸಿಕೊಂಡಿರುತ್ತಾರೆಂದು ಭಾವಿಸಬಹುದು.

2. 'ಶಶ್ವದ್ಧ್ವೈ ರೇತಸಃ ಸಿಕ್ತಸ್ಯ ಚಕ್ಷುಷೀ ಏವ ಪ್ರಥಮೇ ಸಂಭವತಃ' ಎಂಬುದು ಶ್ರುತಿ. ಇಲ್ಲಿರುವ ಇನ್ನೊಂದು ಸಂಭವತಃ ಎಂಬ ಮಾತು ಭಾಷ್ಯಕಾರರು ಸೇರಿಸಿಕೊಂಡದ್ದು.

3. 'ಪ್ರಾಣಾಚ್ಚ' ಎಂಬ ಶ್ರುತಿಯು ಆಧ್ಯಾತ್ಮಿಕಪ್ರಾಣವನ್ನೇ ತಿಳಿಸುತ್ತದೆ ಎಂಬುದನ್ನು ಸ್ಪಷ್ಟಪಡಿಸುವದಕ್ಕೂ ಅನ್ವಯವನ್ನು ಸೂಚಿಸುವದಕ್ಕೂ ಮತ್ತೆ ಈ ಮಾತನ್ನು ಭಾಷ್ಯದಲ್ಲಿ ಬರೆದುಕೊಂಡಿದೆ.

ಯಲ್ಲ (ಅದು). ಏತನ್ಮರ್ತ್ಯಮ್ ಮುಂತಾದ ಮಿಕ್ಕ (ಗ್ರಂಥಭಾಗವು) ಹಿಂದಿನ ದಕ್ಕೆ ಸಮಾನವಾಗಿ (ವ್ಯಾಖ್ಯಾನಮಾಡತಕ್ಕದ್ದು).

ಈ ಸತ್ತಿಗೆ, ಈ ಚಕ್ಷುಸ್ಸಿದೆಯಲ್ಲ, ಇದೇ ರಸವು. ಆಧ್ಯಾತ್ಮಿಕವಾದ ಶರೀರಾರಂಭಕವಾದ[1] ಕಾರ್ಯಕ್ಕೆ ಇದು ರಸವು, ಸಾರವು. ಈ ಸಾರದಿಂದಲೇ ಅಲ್ಲವೆ, ಈ ಸಮಸ್ತಶರೀರವೂ ಆಧಿದೈವತ(ಕಾರ್ಯವು) ಸೂರ್ಯಮಂಡಲ ದಿಂದ (ಸಾರವತ್ತಾಗಿರು)ವಂತೆ ಸಾರವತ್ತಾಗಿರುತ್ತದೆ ? ಪ್ರಥಮವಾಗಿರುವದ ರಿಂದಲೂ (ಇದು ಸಾರವು). ಹುಟ್ಟುವ (ಪ್ರಾಣಿಗೆ) 'ಚಕ್ಷುಸ್ಸುಗಳೇ ಅಲ್ಲವೆ, ಮೊದಲು ಹುಟ್ಟುತ್ತವೆ ?' (ಶತ. ಬ್ರಾ. ೪-೨-೧-೨೮). ಆದ್ದರಿಂದ (ಅವು ಸಾರ). "ತೇಜಸ್ಸೆಂಬ ರಸವು, ಅಗ್ನಿಯು ಹೊರಕ್ಕೆ ಬಂತು" (೧-೨-೨) ಎಂಬ (ಶ್ರುತಿಯ) ಲಿಂಗದಿಂದಲೂ ಹೀಗೆಂದು (ತಿಳಿಯಬಹುದು); ಚಕ್ಷುಸ್ಸು ತೈಜಸವಷ್ಟೆ[2] ? ಆಧ್ಯಾತ್ಮಿಕಭೂತತ್ರಯವು ಇದನ್ನು ಸಾರವಾಗಿ ಉಳ್ಳದ್ದು. 'ಇದು ಸತ್ತಿನ ರಸವಲ್ಲವೆ ?' ಎಂದು ಹೇಳಿರುವದು (ಚಕ್ಷುಸ್ಸು) ಮೂರ್ತ ತ್ರಯದ ಸಾರವೆಂಬುದಕ್ಕೆ ಹೇತುವನ್ನು (ತಿಳಿಸು)ವದಕ್ಕೋಸ್ಕರ (ಬಂದಿರು ತ್ತದೆ).[3]

## ಅಧ್ಯಾತ್ಮಮೂರ್ತವೂ ಅಮೂರ್ತರಸವೂ

(ಉಪನಿಷತ್ತು)

**ಅಥಾಽಮೂರ್ತಂ ಪ್ರಾಣಶ್ಚ ಯಶ್ಚಾಯಮನ್ತರಾತ್ಮನ್ನಾಕಾಶ ಏತದಮೃತಮೇತದ್ಯದೇತತ್ತ್ಯತ್ತಸ್ಯೈತಸ್ಯಾಮೂರ್ತಸ್ಯೈತ ಸ್ಯಾಮೃತಸ್ಯೈತಸ್ಯ ಯತ ಏತಸ್ಯ ತ್ಯಸ್ಯೈಷ ರಸೋ ಯೋಽಯಂ ದಕ್ಷಿಣೇಽಕ್ಷನ್ ಪುರುಷಸ್ತ್ಯಸ್ಯ ಹ್ಯೇಷ ರಸಃ ॥ ೫ ॥**

೫. ಇನ್ನು ಅಮೂರ್ತವು (ಯಾವದೆಂದರೆ) ಪ್ರಾಣವು ಮತ್ತು ಆತ್ಮದೊಳಗಿನ ಆಕಾಶವಿದೆಯಲ್ಲ (ಅದು). ಇದು ಅಮೃತವು, ಇದು ಯತ್, ಇದು ತ್ಯತ್ತು. ಆ ಈ ಅಮೂರ್ತಕ್ಕೆ, ಈ ಯತ್ತಿಗೆ, ಈ

---

1. ಈ ಮಾತು ಇಲ್ಲದಿದ್ದರೂ ಆಗುತ್ತದೆ.

2. ಆದ್ದರಿಂದ ಆಧಿದೈವಿಕವಾದ ಅಗ್ನಿಯಂತೆ ಚಕ್ಷುಸ್ಸು ಮೊದಲು ಸೃಷ್ಟಿಯಾಗುವ ದೆಂದು ಊಹಿಸಬಹುದು ಎಂದು ಭಾವ.

3. ಶ್ರುತಿಯಲ್ಲಿ ಮೂರ್ತಾಮೂರ್ತಗಳೆಂದು ಪಂಚಭೂತಗಳನ್ನೇ ವಿಂಗಡಿಸಿದ್ದರೂ ಮೂರ್ತವೆಂಬುದು ಪೃಥಿವಿಗೆ ಪೂರ್ಣವಾಗಿ ಹೊಂದುವ ಲಕ್ಷಣವು, ಅಮೂರ್ತವೆಂಬುದು ಅವ್ಯಾಕೃತಕ್ಕೆ ಹೊಂದುವ ಲಕ್ಷಣವು ಎಂದು ಭರ್ತೃಪ್ರಪಂಚರು ಬರೆದಿರುತ್ತಾರೆ. ಇದನ್ನು ವಾರ್ತಿಕಕಾರರು ಒಪ್ಪಿರುತ್ತಾರೆಂದು ಟೀಕಾಕಾರರ ಮತ; ಆದು ವಿಚಾರಣೀಯವಾಗಿದೆ.

ತ್ಯತ್ತಿಗೆ, ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ, ಇವನೇ ರಸವು. ಇವನು ತ್ಯತ್ತಿಗೆ ರಸವಲ್ಲವೆ?

(ಭಾಷ್ಯ)

೩೪೧. ಅಥ ಅಧುನಾ ಅಮೂರ್ತಮುಚ್ಯತೇ। ಯತ್ ಪರಿಶೇಷಿತಂ ಭೂತದ್ವಯಂ ಪ್ರಾಣಶ್ಚ ಯಶ್ಚಾಯಮ್ ಅನ್ತರಾತ್ಮನ್ ಆಕಾಶಃ, ಏತದಮೂರ್ತಮ್। ಅನ್ಯತ್ ಪೂರ್ವವತ್। ಏತಸ್ಯ ತ್ಯಸ್ಯ ಏಷ ರಸಃ ಸಾರಃ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ। 'ದಕ್ಷಿಣೇಽಕ್ಷನ್' ಇತಿ ವಿಶೇಷಣಗ್ರಹಣಂ ಶಾಸ್ತ್ರಪ್ರತ್ಯಕ್ಷತ್ವಾತ್। ಲಿಙ್ಗಸ್ಯ ಹಿ ದಕ್ಷಿಣೇ ಅಕ್ಷ್ಣಿ ವಿಶೇಷತೋಽಧಿಷ್ಠಾತೃತ್ವಂ ಶಾಸ್ತ್ರಸ್ಯ ಪ್ರತ್ಯಕ್ಷಮ್। ಸರ್ವಶ್ರುತಿಷು ತಥಾ ಪ್ರಯೋಗದರ್ಶನಾತ್। ತ್ಯಸ್ಯ ಹಿ ಏಷ ರಸಃ ಇತಿ ಪೂರ್ವವತ್ ವಿಶೇಷತೋಽಗ್ರಹಣಾತ್ ಅಮೂರ್ತಸಾರತ್ವೇ ಏವ ಹೇತ್ವರ್ಥಃ॥

(ಭಾಷ್ಯಾರ್ಥ)

ಇನ್ನು ಈಗ ಅಮೂರ್ತವನ್ನು ಹೇಳಲಾಗುತ್ತದೆ. ಪ್ರಾಣವೂ, ಈ ಶರೀರದೊಳಗಿನ ಆಕಾಶವೂ- ಯಾವ ಭೂತದ್ವಯವನ್ನು (ಹಿಂದೆ) ಉಳಿಸಿಕೊಂಡಿತ್ತೋ ಅದು ಅಮೂರ್ತವು. ಮಿಕ್ಕದ್ದು ಹಿಂದಿನಂತೆ[1] ಈ ತ್ಯತ್ತಿಗೆ ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ[2], ಇವನೇ ರಸವು, ಸಾರವು 'ಬಲಗಣ್ಣಿನಲ್ಲಿ' ಎಂದು (ಬಲಗಣ್ಣನ್ನು) ವಿಶೇಷವಾಗಿ ತೆಗೆದುಕೊಂಡಿರುವದು ಶಾಸ್ತ್ರಪ್ರತ್ಯಕ್ಷವಾಗಿರುವದರಿಂದ; (ಇದರ ವಿವರ): ಲಿಂಗ(ಶರೀರ)ವು ಬಲಗಣ್ಣಿನಲ್ಲಿ ವಿಶೇಷವಾಗಿ ಇದ್ದುಕೊಂಡಿರುವದೆಂಬುದು ಶಾಸ್ತ್ರಕ್ಕೆ ಪ್ರತ್ಯಕ್ಷವಾಗಿರುವದಲ್ಲವೆ? ಏಕೆಂದರೆ ಶ್ರುತಿಗಳಲ್ಲೆಲ್ಲ ಹಾಗೆಯೇ ಪ್ರಯೋಗವನ್ನು ಮಾಡಿರುವದು ಕಂಡುಬರುತ್ತದೆ. 'ಇವನು ತ್ಯತ್ತಿಗೆ ರಸವಲ್ಲವೆ?' ಎಂದು (ಹೇಳಿರುವದು) ಹಿಂದಿನಂತೆಯೇ ವಿಶೇಷರೂಪದಿಂದ ಕಾಣಬರುವದಿಲ್ಲವಾದ್ದರಿಂದ ಅಮೂರ್ತಸಾರವೆಂಬುದಕ್ಕೇ ಹೇತು(ವನ್ನು ತಿಳಿಸು)ವದಕ್ಕಾಗಿ (ಬಂದಿದೆ).

## ಲಿಂಗದ ಸ್ವರೂಪ, ಕೇವಲಾತ್ಮನ ಸ್ವರೂಪ

(ಉಪನಿಷತ್ತು)

**ತಸ್ಯ ಹೈತಸ್ಯ ಪುರುಷಸ್ಯ ರೂಪಮ್। ಯಥಾ ಮಾಹಾರಜನಂ ವಾಸೋ ಯಥಾ ಪಾಣ್ಡ್ವಾವಿಕಂ ಯಥೇನ್ದ್ರಗೋಪೋ ಯಥಾಗ್ನ್ಯರ್ಚಿರ್ಯಥಾ ಪುಣ್ಡರೀಕಂ ಯಥಾ ಸಕೃದ್ವಿದ್ಯುತ್ತಗ್ಂ ಸಕೃದ್ವಿದ್ಯುತ್ತೇವ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ**

1. ನೂರನೆಯ ಕಂಡಿಕೆಯ ಭಾಷ್ಯದಂತೆ ಅಕ್ಷರಾರ್ಥವನ್ನು ಮಾಡಿಕೊಳ್ಳಬೇಕು.
2. ಲಿಂಗಶರೀರವು.

**ವೇದಾಘಾತ ಆದೇಶೋ ನೇತಿನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತ್ಯಥ ನಾಮಧೇಯಗ್ಂ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್ ॥ ೬ ॥**

೬. ಆ ಈ ಪುರುಷನ ರೂಪವು (ಹೇಗಿರುವವೆಂದರೆ) ಹೇಗೆ ಮಾಹಾರಜನವಸ್ತ್ರವಿರುವದೋ, ಹೇಗೆ ಬಿಳಿಯ ಆವಿಕವಿರುವದೋ, ಹೇಗೆ ಇಂದ್ರಗೋಪವಿರುವದೋ, ಹೇಗೆ ಬೆಂಕಿಯ ಉರಿಯಿರುವದೋ, ಹೇಗೆ ಪುಂಡರೀಕವಿರುವದೋ, ಹೇಗೆ ಬಳ್ಳಿಮಿಂಚಿರುವದೋ (ಹಾಗೆ ಇರುತ್ತದೆ). ಯಾವನು ಹೀಗೆಂದು ಅರಿತುಕೊಳ್ಳುವನೋ ಅವನ ಶ್ರೀಯು ಬಳ್ಳಿಮಿಂಚಿನಂತೆ ಇರುವದು. ಇನ್ನು ಆದ್ದರಿಂದ ಆದೇಶವು 'ಹೀಗಲ್ಲ, ಹೀಗಲ್ಲ'; (ಈ) ಹೀಗಲ್ಲ ಎಂಬದಕ್ಕಿಂತ ಮತ್ತೊಂದು ಹೆಚ್ಚಿನದಿಲ್ಲವಷ್ಟೆ. ಇನ್ನು ನಾಮಧೇಯವು, 'ಸತ್ಯಕ್ಕೆ ಸತ್ಯವು' ಎಂದು ಪ್ರಾಣಗಳೇ ಸತ್ಯವು, ಅವಕ್ಕೆ ಇದು ಸತ್ಯವು.

## ಕಂಡಿಕೆಯ ಸಂಬಂಧ

(ಭಾಷ್ಯ)

೩೪೨. ಬ್ರಹ್ಮಣಃ ಉಪಾಧಿಭೂತಯೋಃ ಮೂರ್ತಾಮೂರ್ತಯೋಃ ಕಾರ್ಯಕರಣವಿಭಾಗೇನ ಅಧ್ಯಾತ್ಮಾಧಿದೈವತಯೋರ್ವಿಭಾಗೋ ವ್ಯಾಖ್ಯಾತಃ ಸತ್ಯಶಬ್ದವಾಚ್ಯಯೋಃ। ಅಥ ಇದಾನೀಂ ತಸ್ಯ ಹ ಏತಸ್ಯ ಪುರುಷಸ್ಯ ಕರಣಾತ್ಮನೋ ಲಿಙ್ಗಸ್ಯ ರೂಪಂ ವಕ್ಷ್ಯಾಮೋ ವಾಸನಾಮಯಂ ಮೂರ್ತಾಮೂರ್ತವಾಸನಾವಿಜ್ಞಾನಮಯಸಂಯೋಗಜನಿತಂ ವಿಚಿತ್ರಂ ಪಟಭಿತ್ತಿಚಿತ್ರವತ್ ಮಾಯೇನ್ದ್ರಜಾಲಮೃಗತೃಷ್ಣಿಕೋಪಮಂ ಸರ್ವವ್ಯಾಮೋಹಾಸ್ಪದಮ್। ಏತಾವನ್ಮಾತ್ರಮೇವ ಆತ್ಮಾ ಇತಿ ವಿಜ್ಞಾನವಾದಿನೋ ವೈನಾಶಿಕಾ ಯತ್ರ ಭ್ರಾನ್ತಾಃ। ಏತದೇವ ವಾಸನಾರೂಪಂ ಪಟರೂಪವತ್ ಆತ್ಮನೋ ದ್ರವ್ಯಸ್ಯ ಗುಣಃ ಇತಿ ನೈಯಾಯಿಕಾಃ ವೈಶೇಷಿಕಾಶ್ಚ ಸಂಪ್ರತಿಪನ್ನಾಃ। ಇದಮ್ ಆತ್ಮಾರ್ಥಂ ತ್ರಿಗುಣಂ ಸ್ವತನ್ತ್ರಂ ಪ್ರಧಾನಂ[1] ಪುರುಷಾರ್ಥೇನ ಹೇತುನಾ ಪ್ರವರ್ತತ ಇತಿ ಸಾಂಖ್ಯಾಃ ॥

(ಭಾಷ್ಯಾರ್ಥ)

ಬ್ರಹ್ಮಕ್ಕೆ ಉಪಾಧಿಯಾಗಿರುವ ಮೂರ್ತಾಮೂರ್ತಗಳನ್ನು ಕಾರ್ಯ, ಕರಣ- ಎಂದು ವಿಂಗಡಿಸಿಕೊಂಡು ಸತ್ಯಶಬ್ದವಾಚ್ಯವಾದ ಅಧ್ಯಾತ್ಮ, ಅಧಿ

1. ಮೂಲದಲ್ಲಿ 'ಪ್ರಧಾನಾಶ್ರಯಮ್' ಎಂಬುದನ್ನು ಹೀಗೆ ತಿದ್ದಿಕೊಂಡಿವೆ; ಅಥವಾ ಮೂಲಕ್ಕೇ ಪ್ರಧಾನವೆಂಬ ಎಂದು ಅನುವಾದಮಾಡಿಕೊಳ್ಳಬೇಕು.

ದೈವತ- ಇವುಗಳೆರಡನ್ನೂ ವ್ಯಾಖ್ಯಾನಮಾಡಲಾಯಿತು. ಇನ್ನು ಈಗ ಆ ಈ ಪುರುಷನ, ಕರಣಾತ್ಮಕವಾದ ಲಿಂಗದ, ರೂಪವನ್ನು ಹೇಳುವೆವು. (ಇದು) ವಾಸನಾಮಯವಾದದ್ದು, ಮೂರ್ತಾಮೂರ್ತಗಳ ವಾಸನೆ ಮತ್ತು ವಿಜ್ಞಾನ ಮಯ -ಇವುಗಳ ಸಂಯೋಗದಿಂದ ಉಂಟಾದದ್ದು; ಬಟ್ಟೆಯೆಂಬ ಭಿತ್ತಿಯಲ್ಲಿ (ಬರೆದ) ಚಿತ್ರದಂತೆ ವಿಚಿತ್ರತರವಾಗಿರತಕ್ಕದ್ದು. ಮಾಯೆ, ಇಂದ್ರಜಾಲ, ಮೃಗತೃಷ್ಣಿಕೆ- ಇವುಗಳಂತೆ ಎಲ್ಲರ ವ್ಯಾಮೋಹಕ್ಕೂ ಆಸ್ಪದವಾದದ್ದು. ಇದರ ವಿಷಯದಲ್ಲಿ **ವಿಜ್ಞಾನವಾದಿಗಳಾದ ವೈನಾಶಿಕರು** ಇಷ್ಟುಮಾತ್ರವೇ ಆತ್ಮನು ಎಂದು ಭ್ರಾಂತರಾಗಿರುವರು[1]. ಈ ವಾಸನಾರೂಪವೇ ಬಟ್ಟೆಯ ಬಣ್ಣದಂತೆ ಆತ್ಮನೆಂಬ ದ್ರವ್ಯದ ಗುಣವು ಎಂದು **ನೈಯಾಯಿಕರೂ ವೈಶೇಷಿಕರೂ** ಒಪ್ಪಿರುವರು[2]. ಇದು ಆತ್ಮಾರ್ಥವಾಗಿರುವ, ತ್ರಿಗುಣಾತ್ಮಕವಾದ ಸ್ವತಂತ್ರವಾದ[3] ಪ್ರಧಾನವೆಂಬ ಹೆಸರುಳ್ಳದ್ದು, ಪುರುಷಾರ್ಥವೆಂಬ ಹೇತುವಿನಿಂದ ಪ್ರವರ್ತಿಸುತ್ತದೆ -ಎಂದು ಸಾಂಖ್ಯರು (ಇಟ್ಟುಕೊಂಡಿರುವರು).

# ಭರ್ತೃಪ್ರಪಂಚರ ಪ್ರಕ್ರಿಯೆಯ ಚರ್ಚೆ

## ಪೂರ್ವಪಕ್ಷದ ಅನುವಾದ:
## ಪರಮಾತ್ಮೈಕದೇಶವನ್ನು ಕರ್ಮವು ಆಶ್ರಯಿಸುತ್ತದೆ

(ಭಾಷ್ಯ)

೩೪೩. ಔಪನಿಷದಂಮನ್ಯಾ ಅಪಿ ಕೇಚಿತ್ ಪ್ರಕ್ರಿಯಾಂ ರಚಯನ್ತಿ ಮೂರ್ತಾಮೂರ್ತರಾಶಿರೇಕಃ, ಪರಮಾತ್ಮರಾಶಿರುತ್ತಮಃ, ತಾಭ್ಯಾಮನ್ಯೋಽಯಂ ಮಧ್ಯಮಃ ಕಿಲ ತೃತೀಯಃ ಕರ್ತಾ ಭೋಕ್ತಾ ವಿಜ್ಞಾನಮಯೇನ ಅಜಾತಶತ್ರುಪ್ರತಿಬೋಧಿತೇನ ಸಹ ವಿದ್ಯಾಕರ್ಮಪೂರ್ವಪ್ರಜ್ಞಾಸಮುದಾಯಃ। ಪ್ರಯೋಕ್ತಾ ಕರ್ಮರಾಶಿಃ, ಪ್ರಯೋಜ್ಯಃ ಪೂರ್ವೋಕ್ತೋ ಮೂರ್ತಾಮೂರ್ತಭೂತರಾಶಿಃ, ಸಾಧನಂ ಚ ಇತಿ। ತತ್ರ ಚ ತಾರ್ಕಿಕೈಃ ಸಹ ಸಂಧಿಂ ಕುರ್ವನ್ತಿ। ಲಿಙ್ಗಾಶ್ರಯಶ್ಚೈಷ ಕರ್ಮರಾಶಿಃ ಇತ್ಯುಕ್ತ್ವಾ ಪುನಸ್ತತಸ್ತ್ರಸ್ಯನ್ತಃ ಸಾಂಖ್ಯತ್ವ

1. ವಿಜ್ಞಾನಕ್ಕೂ ಸಾಕ್ಷಿಯಾದ ಆತ್ಮನನ್ನು ಅರಿತುಕೊಳ್ಳಲಾರದೆ ಇರುವರು.

2. ಆತ್ಮನಿಗೆ ದೃಶ್ಯವಾದದ್ದಾದ್ದರಿಂದ ಅವನಿಗೆ ಸಂಬದ್ಧವಾಗಿಲ್ಲ ಎಂಬುದನ್ನು ತಿಳಿದುಕೊಳ್ಳಲಾರದೆ ಇರುವರು.

3. ಆತ್ಮನಿಗಿಂತ ಎರಡನೆಯದಾಗಿ ತಾನೇ ಒಂದು ತತ್ತ್ವವಾಗಿರುವದು ಎಂದು ಅವರ ನಂಬಿಕೆ; ಅದು ಆತ್ಮನಲ್ಲಿ ಕಲ್ಪಿತವೆಂದು ಅವರು ತಿಳಿದಿಲ್ಲ.

4. ಅಚೇತನವಾದದ್ದು ಹೇಗೆ ಪ್ರವರ್ತಿಸುತ್ತದೆ? -ಎಂಬುದನ್ನು ಅವರು ಆಲೋಚಿಸಿರುವದಿಲ್ಲ ಎಂದು ಭಾವ.

ಭಯಾತ್ ಸರ್ವಃ ಕರ್ಮರಾಶಿಃ ಪುಷ್ಪಾಶ್ರಯ ಇವ ಗನ್ಧಃ ಪುಷ್ಪವಿಯೋಗೇಽಪಿ ಪುಟತೈಲಾಶ್ರಯೋ ಭವತಿ ತದ್ವಲ್ಲಿಙ್ಗವಿಯೋಗೇಽಪಿ ಪರಮಾತ್ಮೈಕದೇಶಮ್ ಆಶ್ರಯತಿ। ಸ ಪರಮಾತ್ಮೈಕದೇಶಃ ಕಿಲ ಅನ್ಯತ ಆಗತೇನ ಗುಣೇನ ಕರ್ಮಣಾ ಸಗುಣೋ ಭವತಿ ನಿರ್ಗುಣೋಽಪಿ। ಸ ಕರ್ತಾ ಭೋಕ್ತಾ ಬಧ್ಯತೇ ಮುಚ್ಯತೇ ಚ ವಿಜ್ಞಾನಾತ್ಮಾ ಇತಿ ವೈಶೇಷಿಕಚಿತ್ತಮಪಿ ಅನುಸರನ್ತಿ। ಸ ಚ ಕರ್ಮರಾಶಿಃ ಭೂತರಾಶೇರಾಗನ್ತುಕಃ ಸ್ವತೋ ನಿರ್ಗುಣ ಏವ ಪರಮಾತ್ಮೈಕದೇಶತ್ವಾತ್। ಸ್ವತಃ ಉತ್ಥಿತಾ ಅವಿದ್ಯಾ ಅನಾಗನ್ತುಕಾಪಿ ಊಷರವತ್ ಅನಾತ್ಮಧರ್ಮಃ ಇತ್ಯನಯಾ ಕಲ್ಪನಯಾ ಸಾಂಖ್ಯಚಿತ್ತಮ್ ಅನುವರ್ತನ್ತೇ ॥

(ಭಾಷ್ಯಾರ್ಥ)

ತಾವು ಔಪನಿಷದರೆಂದು ತಿಳಿದುಕೊಂಡಿರುವ ಕೆಲವರು[1] ಕೂಡ (ಹೀಗೆ) ಪ್ರಕ್ರಿಯೆಯನ್ನು ರಚಿಸಿಕೊಂಡಿರುತ್ತಾರೆ. ಮೂರ್ತಾಮೂರ್ತರಾಶಿಯು ಒಂದು, ಪರಮಾತ್ಮರಾಶಿ ಎಂಬುದು ಉತ್ಕೃಷ್ಟರಾಶಿಯು. ಆವೆರಡಕ್ಕಿಂತಲೂ ನಡುವಿನದಾದ ಈ ರಾಶಿಯು ಮೂರನೆಯದಂತೆ. ಅಜಾತಶತ್ರುವು ತಿಳಿಸಿಕೊಟ್ಟಿರುವ ಕರ್ತೃವೂ ಭೋಕ್ತೃವೂ ಆದ ವಿಜ್ಞಾನಮಯನಿಂದೊಡಗೂಡಿದ ವಿದ್ಯಾಕರ್ಮಪೂರ್ವಪ್ರಜ್ಞೆಗಳ ಸಮುದಾಯವೇ (ಈ ರಾಶಿಯು). ಕರ್ಮರಾಶಿಯು ಪ್ರಯೋಜಕವು.[2] ಹಿಂದೆ ಹೇಳಿರುವ ಮೂರ್ತಾಮೂರ್ತಭೂತರಾಶಿಯೂ ಸಾಧನವೂ ಪ್ರಯೋಜ್ಯವು.[3]

ಈ (ಪ್ರಕ್ರಿಯೆ)ಯಲ್ಲಿ ತಾರ್ಕಿಕರೊಡನೆ[4] ಸಂಧಿಯನ್ನೂ ಮಾಡಿಕೊಂಡಿರುತ್ತಾರೆ. ಹೇಗೆಂದರೆ ಈ ಕರ್ಮರಾಶಿಯು ಲಿಂಗವನ್ನಾಶ್ರಯಿಸಿ

1. ಭರ್ತೃಪ್ರಪಂಚರು. ಇವರು 'ತಸ್ಯ ಹ' ಎಂಬುದಕ್ಕೆ ಹೇಳಿರುವ ಸಂಬಂಧವು ೯ರಿಂದ ೧೦೩ನೆಯ ವಾರ್ತಿಕದವರೆಗೆ ವರ್ಣಿತವಾಗಿದೆ. "ವಿಜ್ಞಾನಾತ್ಮನನ್ನು ಸುತ್ತಿಕೊಂಡಿರುವ ಅಧ್ಯಾತ್ಮಾಧಿದೈವನಾಮರೂಪವಿಭಾಗಗಳಾಗಿ ವ್ಯಾಕೃತವಾಗಿರುವದೆಲ್ಲವೂ ಮೂರ್ತ ಅಥವಾ ಅಮೂರ್ತ, ಸತ್ತು ಮತ್ತು ತ್ಯತ್ತು. ಭೂತಗಳೇ ಸತ್ಯ, ತತ್ಸಂಬಂಧವಾದ ಪ್ರಾಣಗಳೂ ಸತ್ಯ. ಪ್ರಾಣಗಳ ನಾಮಾದಿಗಳು ಕೂಡ ಸತ್ಯವೇ. ಪ್ರಾಣಗಳು ನಾಮರೂಪವಿಲ್ಲದವು, ಮತ್ತೊಂದರ ಸಂಯೋಗದಿಂದ ಕಾರ್ಯಕರಣವುಳ್ಳವಾಗಿ ನಾಮರೂಪಗಳಿಂದ ತಿಳಿಸುವದಕ್ಕೆ ಅರ್ಹವಾಗುತ್ತವೆ. ಈ ಸತ್ಯದಿಂದ ವಿವಿಕ್ತವಾಗಿರುವ ವಿಜ್ಞಾನಾತ್ಮಸ್ವರೂಪವನ್ನು ತಿಳಿಸುವದಕ್ಕೆ 'ತಸ್ಯ ಹ' ಎಂಬ ಗ್ರಂಥವು ಬಂದಿದೆ – ಎಂಬುದು ಭರ್ತೃಪ್ರಪಂಚರ ವಚನ.

2. ವಿದ್ಯಾಕರ್ಮಪೂರ್ವಪ್ರಜ್ಞಾಸಮುದಾಯವೇ ಕರ್ಮರಾಶಿಯು ; ಅದು ಪ್ರಯೋಜಕವು ಎಂದರೆ ಉಂಟುಮಾಡತಕ್ಕದ್ದು.

3. ಮೂರ್ತಾಮೂರ್ತಗಳೂ ಕಾರ್ಯಕರಣರೂಪವಾದ ವಿದ್ಯಾಕರ್ಮಸಾಧನವೂ ಪ್ರಯೋಜಕವಾದ ಕರ್ಮರಾಶಿಯಿಂದ ಉಂಟಾಗುವದರಿಂದ ಆವೆರಡೂ ಪ್ರಯೋಜ್ಯವು.

4. ವೈಶೇಷಿಕರು, ಸಾಂಖ್ಯರು– ಇಬ್ಬರೂ ತಾರ್ಕಿಕರೇ, ವೇದಾಂತಿಗಳಲ್ಲ. ಅವರ ಕಲ್ಪನೆಯನ್ನು ಅಷ್ಟಿಷ್ಟು ತೆಗೆದುಕೊಂಡಿರುವದೇ ಅವರೊಡನೆ ಸಂಧಿಮಾಡಿಕೊಂಡಿರುವದು.

ಕೊಂಡಿರುತ್ತದೆ ಎಂದು ಹೇಳಿ, ಮತ್ತೆ ಸಾಂಖ್ಯರಾದೆವಲ್ಲ! –ಎಂಬ ಅಂಜಿಕೆಯಿಂದ ಅದಕ್ಕೆ ಬೆದರಿ, ಕರ್ಮರಾಶಿಯೆಲ್ಲವೂ ಹೂವನ್ನಾಶ್ರಯಿಸಿರುವ ವಾಸನೆಯು ಹೇಗೆ ಹೂವು ಹೋದರೂ ಪುಟಕೆಯನ್ನೂ ತೈಲವನ್ನೂ ಆಶ್ರಯಿಸಿಕೊಂಡಿರುವದೋ ಅದರಂತೆ ಲಿಂಗ(ಶರೀರ)ವು ಹೋದರೂ ಪರಮಾತ್ಮನ ಏಕದೇಶವನ್ನು ಆಶ್ರಯಿಸಿಕೊಂಡಿರುವದು (ಎನ್ನುತ್ತಾರೆ). ಆ ಪರಮಾತ್ಮನ ಏಕದೇಶವು ಮತ್ತೊಂದರಿಂದ[1] ಬಂದಿರುವ ಕರ್ಮವೆಂಬ ಗುಣದಿಂದ– (ತಾನು) ನಿರ್ಗುಣವೇ ಆಗಿದ್ದರೂ ಸಗುಣವಾಗುತ್ತದೆ. ಆ ವಿಜ್ಞಾನಾತ್ಮನೇ ಕರ್ತೃ, ಭೋಕ್ತೃ, ಬದ್ಧನಾಗುವನು, ಮುಕ್ತನಾಗುವನು ಎಂದು ವೈಶೇಷಿಕಚಿತ್ತವನ್ನೂ ಅನುಸರಿಸುತ್ತಾರೆ.[2] ಆ ಕರ್ಮರಾಶಿಯು ಭೂತರಾಶಿಯಿಂದ (ಹೊಸದಾಗಿ) ಬಂದದ್ದು; (ವಿಜ್ಞಾನಾತ್ಮನು) ತಾನುತಾನು ನಿರ್ಗುಣನೇ, ಏಕೆಂದರೆ (ಅವನು) ಪರಮಾತ್ಮನ ಏಕದೇಶವಾಗಿರುತ್ತಾನೆ.[3] ಅವಿದ್ಯೆಯು ಆತ್ಮನಿಂದಲೇ ಎದ್ದದ್ದು, (ನಡುವೆ ಮತ್ತೊಂದರಿಂದ) ಬಂದದ್ದಲ್ಲವಾದರೂ ಚೌಳುಭಾಗದಂತೆ ಅನಾತ್ಮಧರ್ಮವಾಗಿರುತ್ತದೆ ಎಂಬೀ ಕಲ್ಪನೆಯಿಂದ ಸಾಂಖ್ಯಚಿತ್ತವನ್ನು ಅನುಸರಿಸುತ್ತಾರೆ.[4]

## ಭರ್ತೃಪ್ರಪಂಚರಲ್ಲಿ ದೋಷಗಳು

(ಭಾಷ್ಯ)

೩೪೪. ಸರ್ವಮೇತತ್ ತಾರ್ಕಿಕೈಃ ಸಹ ಸಾಮಞ್ಜಸ್ಯಕಲ್ಪನಯಾ ರಮಣೀಯಂ ಪಶ್ಯನ್ತಿ ಸೋಪನಿಷತ್ಸಿದ್ಧಾನ್ತಂ ಸರ್ವನ್ಯಾಯವಿರೋಧಂ ಚ ಪಶ್ಯನ್ತಿ। ಕಥಮ್? ಉಕ್ತಾ ಏವ ತಾವತ್ ಸಾವಯವತ್ವೇ ಪರಮಾತ್ಮನಃ ಸಂಸಾರಿತ್ವಸವ್ರಣತ್ವಕರ್ಮಫಲದೇಶಸಂಸರಣಾನುಪಪತ್ತ್ಯಾದಯೋ ದೋಷಾಃ ನಿತ್ಯಭೇದೇ ಚ ವಿಜ್ಞಾನಾತ್ಮನಃ ಪರೇಣ ಏಕತ್ವಾನುಪಪತ್ತಿಃ। ಲಿಙ್ಗವೇಽವ

---

1. ಕಾರ್ಯಕರಣರೂಪವಾದ ಭೂತರಾಶಿಯಿಂದ ಎಂದರ್ಥ.

2. ವಿಜ್ಞಾನಾತ್ಮನಿಗೆ ಕರ್ತೃತ್ವಾದಿಗಳು ನಿಜವಾಗಿಯೂ ಇರುವವೆಂಬುದು ವೈಶೇಷಿಕರ ಚಿತ್ತ; ಅದನ್ನು ಸಾಂಖ್ಯರು ಒಪ್ಪುವದಿಲ್ಲ, ಏಕೆಂದರೆ ಪುರುಷನು ಕರ್ತೃವಲ್ಲವೆಂದೇ ಅವರು ಹೇಳುತ್ತಾರೆ. ಲಿಂಗಶರೀರದಿಂದ ಬಂದದ್ದು ಆತ್ಮನಲ್ಲಿ ನಿಜವಾಗಿಲ್ಲ ಎಂದದ್ದರಿಂದ ಸಾಂಖ್ಯಮತವನ್ನೂ ಒಂದಿಷ್ಟು ಅನುಸರಿಸಿದಂತೆ ಆಗಿರುತ್ತದೆ.

3. ಸ್ವತಃ ನಿರ್ಗುಣನೇ ಆಗಿರುವ ವಿಜ್ಞಾನಾತ್ಮನನ್ನು ಆಗಂತುಕವಾದ ಕರ್ಮರಾಶಿಯು ಸಗುಣನನ್ನಾಗಿ ಮಾಡುತ್ತದೆ. ಇದೇ ಬಂಧವು.

4. ನೈಸರ್ಗಿಕವಾಗಿ ಪರಮಾತ್ಮನಲ್ಲಿರುವ ಅವಿದ್ಯೆಯು ನೆಲದ ಒಂದು ಪ್ರದೇಶದಲ್ಲಿ ಚೌಳು ಎದ್ದುಕೊಳ್ಳುವಂತೆ ಅಂತಃಕರಣವೆಂಬ ಭಾಗದಲ್ಲಿ ತೋರುವದರಿಂದ ಅನಾತ್ಮವಾದ ಅಂತಃಕರಣದ ಧರ್ಮವೇ ಎಂದು ಅಭಿಪ್ರಾಯ. ಅವಿದ್ಯೆಯು ಅನಾತ್ಮಧರ್ಮವೆಂದದ್ದು ಸಾಂಖ್ಯಚಿತ್ತಾನುಸರಣ, ಆತ್ಮನಲ್ಲಿಯೇ ಇದೆ ಎಂಬುದು ವೈಶೇಷಿಕಚಿತ್ತಾನುಸರಣ. ಈ ವಾದವು ಈಚಿನ ಮೂಲಾವಿದ್ಯಾವಾದಕ್ಕೆ ಬೀಜವಾಗಿದೆ ಎನ್ನಬಹುದು.

ಚೇತ್ ಪರಮಾತ್ಮನ ಉಪಚರಿತದೇಶತ್ವೇನ ಕಲ್ಪಿತಮ್ ಘಟಕರಕಭೂಚ್ಛಿದ್ರಾ ಕಾಶಾದಿವತ್। ತಥಾ ಲಿಙ್ಗವಿಯೋಗೇಽಪಿ ಪರಮಾತ್ಮದೇಶಾಶ್ರಯಣಂ ವಾಸನಾಯಾಃ, ಅವಿದ್ಯಾಯಾಶ್ಚ ಸ್ವತಃ ಉತ್ಥಾನಮ್ ಊಷರವತ್ ಇತ್ಯಾದಿಕಲ್ಪನಾ ಅನುಪಪನ್ನೈವ। ನ ಚ ವಾಸ್ಯದೇಶವ್ಯತಿರೇಕೇಣ ವಾಸನಾಯಾ ವಸ್ತ್ವನ್ತರ ಸಂಚರಣಂ ಮನಸಾಪಿ ಕಲ್ಪಯಿತುಂ ಶಕ್ಯಮ್। ನ ಚ ಶ್ರುತಯೋ ಗಚ್ಛನ್ತಿ "ಕಾಮಃ ಸಂಕಲ್ಪೋ ವಿಚಿಕಿತ್ಸಾ" (೧-೫-೩), "ಹೃದಯೇ ಹ್ಯೇವ ರೂಪಾಣಿ" (೩-೯-೨೦), "ಧ್ಯಾಯತೀವ ಲೇಲಾಯತೀವ" (೪-೩-೭), "ಕಾಮಾ ಯೇಽಸ್ಯ ಹೃದಿ ಶ್ರಿತಾಃ" (೪-೪-೭), "ತೀರ್ಣೋ ಹಿ ತದಾ ಸರ್ವಾಞ್ಶೋಕಾನ್ ಹೃದಯಸ್ಯ" (೪-೩-೨೨) ಇತ್ಯಾದ್ಯಾಃ। ನ ಚ ಆಸಾಂ ಶ್ರುತೀನಾಂ ಶ್ರುತಾತ್ ಅರ್ಥಾನ್ತರಕಲ್ಪನಾ ನ್ಯಾಯ್ಯಾ। ಆತ್ಮನಃ ಪರಬ್ರಹ್ಮತ್ವೋಪಪಾದನಾರ್ಥಪರತ್ವಾತ್ ಆಸಾಮ್। ಏತಾವನ್ಮಾತ್ರಾರ್ಥೋಪಕ್ಷಯತ್ವಾಚ್ಚ ಸರ್ವೋಪನಿಷದಾಮ್। ತಸ್ಮಾತ್ ಶ್ರುತ್ಯರ್ಥಕಲ್ಪನಾಕುಶಲಾಃ ಸರ್ವ ಏವ ಉಪನಿಷದರ್ಥಮ್ ಅನ್ಯಥಾ ಕುರ್ವನ್ತಿ। ತಥಾಪಿ ವೇದಾರ್ಥಶ್ಚೇತ್ ಸ್ಯಾತ್ ಕಾಮಂ ಭವತು ನ ಮೋ ದ್ವೇಷಃ ॥

(ಭಾಷ್ಯಾರ್ಥ)

ತಾರ್ಕಿಕರೊಡನೆ ಸಾಮಂಜಸ್ಯವನ್ನು ಕಲ್ಪಿಸಿಕೊಂಡಿರುವದರಿಂದ ಇದೆಲ್ಲವೂ ರಮಣೀಯ(ವಾಗಿದೆ ಎಂದು ಅವರು) ತಿಳಿದುಕೊಂಡಿರುತ್ತಾರೆ; (ಆದರೆ) ಉಪನಿಷತ್ಸಿದ್ಧಾಂತವಾಗಲಿ ಸರ್ವನ್ಯಾಯಗಳಿಗೂ ವಿರೋಧವಾಗಲಿ (ಅವರಿಗೆ) ಕಾಣಿಸುವದಿಲ್ಲ. ಹೇಗೆಂದರೆ, ಪರಮಾತ್ಮನು ಸಾವಯವನೆಂದರೆ ಸಂಸಾರಿತ್ವ, ಸ್ರವಣತ್ವ, ಕರ್ಮಫಲ(ವನ್ನನುಭವಿಸಬೇಕಾದ) ಪ್ರದೇಶಕ್ಕೆ ಹೋಗುವದೆಂಬುದು ಹೊಂದದಿರುವದು ಮುಂತಾದ ದೋಷಗಳನ್ನು (ಹಿಂದೆ ೨-೧-೨೦, ಭಾ. ಭಾ. ೩೧೫ರಲ್ಲಿ) ಹೇಳಿಯೇ ಇವೆ.[1] (ವಿಜ್ಞಾನಾತ್ಮನಿಗೂ ಪರಮಾತ್ಮನಿಗೂ) ನಿತ್ಯಭೇದವೇ ಇದ್ದರೆ ಪರಮಾತ್ಮನೊಡನೆ ವಿಜ್ಞಾನಾತ್ಮನಿಗೆ ಐಕ್ಯವನ್ನು (ಪಡೆಯುವದೆಂಬುದು) ಹೊಂದುವದಿಲ್ಲ.[2] ಲಿಂಗ(ಶರೀರ)ವೇ- ಗಡಿಗೆ, ಕುಡಿಕೆ, ನೆಲದ ಬಿರುಕು ಮುಂತಾದವುಗಳ ಆಕಾಶವೇ ಮುಂತಾದವುಗಳಂತೆ- ಪರಮಾತ್ಮನ ಏಕದೇಶವೆಂದು ಉಪಚಾರಕ್ಕೆ ಕಲ್ಪಿಸುವೆವು ಎಂದರೆ ಹಾಗಾದರೆ ಲಿಂಗವಿಲ್ಲದಿದ್ದರೂ[3] ವಾಸನೆಯು ಪರಮಾತ್ಮದೇಶವನ್ನು ಆಶ್ರಯಿಸುವದು, ಅವಿದ್ಯೆಯು ಚೌಳುನೆಲದ ಭಾಗವೇ ಮುಂತಾದದ್ದರಂತೆ ಆತ್ಮನಿಂದಲೇ ಎದ್ದು

1. ಆದ್ದರಿಂದ ವಿಜ್ಞಾನಾತ್ಮನು ಪರಮಾತ್ಮನ ಏಕದೇಶ ಎಂಬ ಕಲ್ಪನೆ ಸರಿಯಲ್ಲ.

2. ನಿತ್ಯಭೇದವನ್ನು ಭರ್ತೃಪ್ರಪಂಚರು ಒಪ್ಪುವದೂ ಇಲ್ಲ; ಏಕೆಂದರೆ ಮುಕ್ತಿಯಲ್ಲಿ ಐಕ್ಯವನ್ನು ಒಪ್ಪಿರುತ್ತಾರೆ. ಭೇದಾಭೇದವೆಂಬುದು ವಿರುದ್ಧ.

3. ಸುಷುಪ್ತ್ಯಾದಿಗಳಲ್ಲಿ ಲಿಂಗಶರೀರದ ಸಂಬಂಧವಿರುವದಿಲ್ಲ.

(ಕಾಣಿಸುವದು), ಮುಂತಾದದ್ದು ಅಯುಕ್ತವೇ ಆಗುವದು.[1] ವಾಸನೆಯು ವಾಸ್ಯ(ವಸ್ತುವಿನ) ಪ್ರದೇಶವನ್ನು ಬಿಟ್ಟು ಮತ್ತೊಂದು ವಸ್ತುವಿನ ಬಳಿಗೆ ಹೋಗುವದೆಂಬುದು ಮನಸ್ಸಿನಿಂದಲೂ ಕಲ್ಪಿಸುವದಕ್ಕೆ ಆಗುವದಿಲ್ಲ.[2]

(ಈ ಮತದಲ್ಲಿ) "ಕಾಮ, ಸಂಕಲ್ಪ, ಸಂಶಯ.... ಇದೆಲ್ಲವೂ ಮನಸ್ಸೇ" (೧-೫-೩), "ಹೃದಯದಲ್ಲಿಯೇ ಅಲ್ಲವೆ, ರೂಪಗಳು?" (೩-೯-೨೦), "ಧ್ಯಾನ ಮಾಡುವವನಂತೆ, ಚಲಿಸುವವನಂತೆ" (೪-೩-೭) "ಇವನ ಹೃದಯದಲ್ಲಿರುವ ಕಾಮಗಳಿವೆಯಲ್ಲ, (ಅವು ಯಾವಾಗ ನಾಶವಾಗುವವೋ" (೪-೪-೭) ಆಗ ಹೃದಯದ ಶೋಕಗಳನ್ನೆಲ್ಲ ದಾಟಿರುವನಲ್ಲವೆ?" (೪-೩-೨೨)- ಇವೇ ಮುಂತಾದ ಶ್ರುತಿಗಳೂ ಹೊಂದುವದಿಲ್ಲ.[3] ಈ ಶ್ರುತಿಗಳಿಗೆ (ಇಲ್ಲಿ) ಹೇಳಿರುವದನ್ನು ಬಿಟ್ಟು[4] ಮತ್ತೊಂದು ಅರ್ಥವನ್ನು ಕಲ್ಪಿಸುವದೂ ನ್ಯಾಯವಲ್ಲ; ಏಕೆಂದರೆ ಆತ್ಮನು ಪರಬ್ರಹ್ಮವೆಂದು ತೋರಿಸಿಕೊಡುವದರಲ್ಲಿಯೇ ಇವಕ್ಕೆ ತಾತ್ಪರ್ಯವಿರುತ್ತದೆ,[5] ಮತ್ತು ಎಲ್ಲಾ ಉಪನಿಷತ್ತುಗಳೂ ಇಷ್ಟರ್ಥವನ್ನು (ತಿಳಿಸುವದರಲ್ಲಿಯೇ) ಕೊನೆಗಂಡಿವೆ.[6] ಆದ್ದರಿಂದ ಶ್ರುತ್ಯರ್ಥವನ್ನು ಕಲ್ಪಿಸುವದರಲ್ಲಿ ಕುಶಲರಾದವರು,[6] ಎಲ್ಲರೂ[7] ಉಪನಿಷತ್ತಿನ ಅರ್ಥವನ್ನು ಬೇರೆಯಾಗಿ

---

1. ಏಕೆಂದರೆ ಪರಮಾತ್ಮನಲ್ಲಿ ನಿಜವಾಗಿ ಏಕದೇಶವನ್ನು ನೀವು ಒಪ್ಪಿರುವದಿಲ್ಲ

2. ದೃಷ್ಟಾಂತದಲ್ಲಿ ಹೂವಿಗೆ ಅವಯವಗಳಿರುವದರಿಂದ ಅವು ಪುಟಕೆಯೇ ಮುಂತಾದದ್ದಕ್ಕೆ ಅಂಟಿಕೊಳ್ಳಬಹುದು; ಆದರೆ ದಾರ್ಷ್ಟಾಂತಿಕದಲ್ಲಿ ಕರ್ಮರಾಶಿಗೆ ಅವಯವಗಳೇ ಇಲ್ಲ. ಆತ್ಮನಂತೂ ಅಸಂಗನು. ಆತ್ಮನಿಗೆ ಕರ್ಮರಾಶಿಯು ಅಂಟಿಕೊಳ್ಳುವದು ಹೇಗಾದೀತು?

3. ಏಕೆಂದರೆ ಈ ಶ್ರುತಿಗಳಲ್ಲಿ ಕಾಮಾದಿಗಳು ಹೃದಯದ ಧರ್ಮವೆಂದೇ ಹೇಳಿದೆ, ಆತ್ಮನ ಧರ್ಮವೆಂದಿಲ್ಲ.

4 ಆತ್ಮನಲ್ಲಿಯೂ ಕಾಮಾದಿಗಳಿರುತ್ತವೆ ಎಂಬರ್ಥವು ಬರುವಂತೆ ಈ ಶ್ರುತಿಗೆ ಅರ್ಥವನ್ನು ಮಾಡೋಣ ಎನ್ನುವದಕ್ಕಾಗುವದಿಲ್ಲ. ಏಕೆಂದರೆ ಬ್ರಹ್ಮಾತ್ಮೈಕ್ಯವನ್ನು ಹೇಳುವ ಪ್ರಕರಣದಲ್ಲಿ ಆತ್ಮನಲ್ಲಿ ಕಾಮಗಳಿವೆ ಎಂದು ಹೇಳುವದು ಅಸಂಬದ್ಧವಾಗುವದು.

5. ಬ್ರಹ್ಮಾತ್ಮೈಕ್ಯವಲ್ಲದೆ ಮತ್ತೊಂದು ತಾತ್ಪರ್ಯವೂ ಯಾವದಾದರೂ ಉಪನಿಷತ್ತಿಗೆ ಇದ್ದಿದ್ದರೆ ಒಂದು ವೇಳೆ ಬೇರೆಯ ಅರ್ಥವನ್ನು ಮಾಡಬಹುದಾಗಿತ್ತು.

6 ಇದು ಹಾಸ್ಯಕ್ಕಾಗಿ ಪ್ರಯೋಗಿಸಿದ ಮಾತು; ಅಥವಾ ಅಕುಶಲಾಃ ಎಂದು ಛೇದವನ್ನು ಮಾಡಿ ಶ್ರುತ್ಯರ್ಥವನ್ನು ಗೊತ್ತುಮಾಡಲಾರದ ದಡ್ಡರು ಎಂದೂ ಅನುವಾದ ಮಾಡಬಹುದು. ಮುಂದೆ "ವೇದಾರ್ಥಮೂಢಾನಾಂ" ಎಂಬ ಮಾತೂ ಇದೆ.

7. 'ಸರ್ವೇ' ಎಂಬ ಅಚ್ಚಿನ ಪಾಠವನ್ನು ಇಟ್ಟುಕೊಂಡು ಹೀಗೆ ಕನ್ನಡಿಸಿದೆ. 'ಸರ್ವಮ್' ಎಂದಿದ್ದರೆ 'ಉಪನಿಷತ್ತಿನ ಅರ್ಥವೆಲ್ಲವನ್ನೂ' ಎಂದು ಕನ್ನಡಿಸಬೇಕಾಗುವದು. ಸಂಸಾರಿಯಾಗಿ ಕಾಣುತ್ತಿರುವ ಜೀವನು ನಿಜವಾಗಿ ಅದ್ವಿತೀಯನಾದ ಪರಮಾತ್ಮನೇ ಎಂಬುದೇ ಉಪನಿಷತ್ತಿನ ಸಾರಸರ್ವಸ್ವವೆಂದು ಭಾವ.

ಮಾಡುತ್ತಿರುತ್ತಾರೆ. ಆದರೂ (ಅದು) ವೇದಾರ್ಥವಾಗುವದಾದರೆ ಅವಶ್ಯವಾಗಿ ಆಗಲಿ, ನನಗೇನೂ ದ್ವೇಷವಿಲ್ಲ.[1]

## ಬ್ರಹ್ಮದ ರೂಪಗಳು ಎರಡೇ ಎಂಬುದೂ ಪೂರ್ವಪಕ್ಷದಲ್ಲಿ ಹೊಂದುವದಿಲ್ಲ

(ಭಾಷ್ಯ)

೩೪೫. ನ ಚ ದ್ವೇ ಏವ ಬ್ರಹ್ಮಣೋ ರೂಪೇ ಇತಿ ರಾಶಿತ್ರಯಪಕ್ಷೇ ಸಮಞ್ಜಸಮ್ । ಯದಾ ತು ಮೂರ್ತಾಮೂರ್ತೇ ತಜ್ಜನಿತವಾಸನಾಶ್ಚ[2] ಮೂರ್ತಾಮೂರ್ತೇ ದ್ವೇ ರೂಪೇ, ಬ್ರಹ್ಮ ಚ ರೂಪಿ ತೃತೀಯಮ್, ನ ಚಾನ್ಯತ್ ಚತುರ್ಥಮ್ ಅನ್ತರಾಲೇ, ತದಾ ಏತದನುಕೂಲಮ್ ಅವಧಾರಣಮ್ "ದ್ವೇ ಏವ ಬ್ರಹ್ಮಣೋ ರೂಪೇ" ಇತಿ । ಅನ್ಯಥಾ ಬ್ರಹ್ಮೈಕದೇಶಸ್ಯ ವಿಜ್ಞಾನಾತ್ಮನೋ ರೂಪೇ ಇತಿ ಕಲ್ಪ್ಯಮ್, ಪರಮಾತ್ಮನೋ ವಾ ವಿಜ್ಞಾನಾತ್ಮದ್ವಾರೇಣ ಇತಿ । ತದಾ ಚ ರೂಪೇ ಏವೇತಿ ದ್ವಿವಚನಮ್ ಅಸಮಞ್ಜಸಮ್ । 'ರೂಪಾಣಿ' ಇತಿ ವಾಸನಾಭಿಃ ಸಹ ಬಹುವಚನಂ ಯುಕ್ತತರಂ ಸ್ಯಾತ್ । ದ್ವೇ ಚ ಮೂರ್ತಾಮೂರ್ತೇ ವಾಸನಾಶ್ಚ ತೃತೀಯಮ್ ಇತಿ । ಅಥ ಮೂರ್ತಾಮೂರ್ತೇ ಏವ ಪರಮಾತ್ಮನೋ ರೂಪೇ ವಾಸನಾಸ್ತು ವಿಜ್ಞಾನಾತ್ಮನಃ ಇತಿ ಚೇತ್ । ತದಾ "ವಿಜ್ಞಾನಾತ್ಮದ್ವಾರೇಣ ವಿಕ್ರಿಯಮಾಣಸ್ಯ ಪರಮಾತ್ಮನಃ" ಇತೀಯಂ ವಾಚೋ ಯುಕ್ತಿರನರ್ಥಿಕಾ ಸ್ಯಾತ್ । ವಾಸನಾಯಾ ಅಪಿ ವಿಜ್ಞಾನಾತ್ಮದ್ವಾರತ್ವಸ್ಯ ಅವಿಶಿಷ್ಟತ್ವಾತ್ । ನ ಚ ವಸ್ತು ವಸ್ತ್ವನ್ತರದ್ವಾರೇಣ ವಿಕ್ರಿಯತ ಇತಿ ಮುಖ್ಯಯಾ ವೃತ್ತ್ಯಾ ಶಕ್ಯಂ ಕಲ್ಪಯಿತುಮ್ । ನ ಚ ವಿಜ್ಞಾನಾತ್ಮಾ ಪರಮಾತ್ಮನೋ ವಸ್ತ್ವನ್ತರಮ್ । ತಥಾ ಕಲ್ಪನಾಯಾಂ ಸಿದ್ಧಾನ್ತಹಾನಾತ್ । ತಸ್ಮಾತ್ ವೇದಾರ್ಥಮೂಢಾನಾಂ ಸ್ವಚಿತ್ತಪ್ರಭವಾ ಏವಮಾದಿಕಲ್ಪನಾ ಅಕ್ಷರಬಾಹ್ಯಾಃ । ನ ಹಿ ಅಕ್ಷರಬಾಹ್ಯೋ ವೇದಾರ್ಥೋ ವೇದಾರ್ಥೋಪಕಾರೀ ವಾ । ನಿರಪೇಕ್ಷತ್ವಾತ್ ವೇದಸ್ಯ ಪ್ರಾಮಾಣ್ಯಂ ಪ್ರತಿ । ತಸ್ಮಾತ್ ರಾಶಿತ್ರಯಕಲ್ಪನಾ ಅಸಮಞ್ಜಸಾ ॥

(ಭಾಷ್ಯಾರ್ಥ)

ರಾಶಿತ್ರಯ(ವನ್ನು ಹೇಳುವವರ) ಪಕ್ಷದಲ್ಲಿ 'ಬ್ರಹ್ಮದ ರೂಪಗಳು ಎರಡೇ' (೨-೩-೧) ಎಂಬ (ವಚನವೂ) ಸರಿಯಾಗಿ ಹೊಂದುವದಿಲ್ಲ. ಆದರೆ ಮೂರ್ತಾಮೂರ್ತಗಳೂ ಅವುಗಳಿಂದಾದ ವಾಸನೆಗಳೂ ಮೂರ್ತಾಮೂರ್ತಗಳೆಂಬ

---

1. ಆದರೆ ಉಪಕ್ರಮೋಪಸಂಹಾರಾದಿಲಿಂಗಗಳನ್ನು ಪರೀಕ್ಷಿಸಿದರೆ ಬ್ರಹ್ಮಾತ್ಮೈಕತ್ವವೇ ವೇದಾರ್ಥವೆಂದು ನಿರ್ಣಯವಾಗುತ್ತದೆ ಎಂದು ಭಾವ.

2. ಈ ವಾ॥ ಪಾಠವೇ ಮೇಲು.

ಎರಡೇ ರೂಪಗಳು, ಬ್ರಹ್ಮವು ಮೂರನೆಯದಾದ ರೂಪಿಯು; (ಇಷ್ಟೇ ಹೊರತು) ನಡುವೆ ಮತ್ತೊಂದು ನಾಲ್ಕನೆಯದಿಲ್ಲ ಎಂದು ಯಾವಾಗ (ಒಪ್ಪುವೆವೋ) ಆಗ "ಬ್ರಹ್ಮದ ರೂಪಗಳು ಎರಡೇ" ಎಂಬೀ ಅವಧಾರಣೆಯು ಹೊಂದುತ್ತದೆ. ಹಾಗಿಲ್ಲದಿದ್ದರೆ ಬ್ರಹ್ಮೈಕದೇಶವಾಗಿರುವ ವಿಜ್ಞಾನಾತ್ಮನ ರೂಪಗಳು ಎಂದೋ ವಿಜ್ಞಾನಾತ್ಮನ ಮೂಲಕವಾಗಿ ಪರಮಾತ್ಮನ (ರೂಪಗಳು) ಎಂದೋ ಕಲ್ಪಿಸಬೇಕಾಗುವದು. ಆಗ 'ರೂಪೇ ಏವ' (ಎರಡು ರೂಪಗಳೇ) ಎಂಬ ದ್ವಿವಚನವು ಸಮಂಜಸವಾಗುವದಿಲ್ಲ; ವಾಸನೆಗಳೂ ಕೂಡಿ 'ರೂಪಾಣಿ' (ರೂಪಗಳು) ಎಂದು ಬಹುವಚನವನ್ನು (ಪ್ರಯೋಗಿಸುವದೇ) ಯುಕ್ತತರವಾಗುತ್ತದೆ. (ಏಕೆಂದರೆ ಆಗ) ಮೂರ್ತಾಮೂರ್ತಗಳು ಎರಡು (ರೂಪಗಳು), ವಾಸನೆಗಳು ಮೂರನೆಯ (ರೂಪವು). ಇನ್ನು ಮೂರ್ತಾಮೂರ್ತಗಳೇ ಪರಮಾತ್ಮನ ರೂಪಗಳು, ವಾಸನೆಗಳಾದರೋ ವಿಜ್ಞಾನಾತ್ಮನ (ರೂಪಗಳು) ಎನ್ನುವದಾದರೆ ಆಗ "ವಿಜ್ಞಾನಾತ್ಮನ ಮೂಲಕ ವಿಕಾರವನ್ನು ಹೊಂದುವ ಪರಮಾತ್ಮನ" ಎಂಬೀ ವಾಚೋಯುಕ್ತಿಯು[1] ವ್ಯರ್ಥವಾಗುವದು; ಏಕೆಂದರೆ ವಾಸನೆಯೂ ವಿಜ್ಞಾನಾತ್ಮನ ಮೂಲಕ(ವಾಗಿ ಪರಮಾತ್ಮನಿಗೆ ವಿಕಾರವನ್ನುಂಟುಮಾಡುವದೆಂಬುದು) ಸಮಾನವಾಗಿರುತ್ತದೆ. (ಒಂದು) ವಸ್ತು ಮತ್ತೊಂದು ವಸ್ತುವಿನ ಮೂಲಕವಾಗಿ ವಿಕಾರವನ್ನು ಹೊಂದುತ್ತದೆ ಎಂದು ಮುಖ್ಯವೃತ್ತಿಯಿಂದ ಕಲ್ಪಿಸುವದು ಶಕ್ಯವೂ ಅಲ್ಲ. ವಿಜ್ಞಾನಾತ್ಮನು ಪರಮಾತ್ಮನಿಗಿಂತ ಬೇರೆಯಲ್ಲವೂ ಅಲ್ಲ; ಏಕೆಂದರೆ ಹಾಗೆಂದು ಕಲ್ಪಿಸಿದರೆ (ಭರ್ತೃಪ್ರಪಂಚರು ತಮ್ಮ) ಸಿದ್ಧಾಂತವನ್ನೇ ಬಿಟ್ಟಂತಾಗುವದು.[2] ಆದ್ದರಿಂದ ವೇದಾರ್ಥವನ್ನು (ಅರಿಯದ) ಮೂಢರಿಗೆ[3] ತಮ್ಮ ಚಿತ್ತದಲ್ಲಿಯೇ ಉಂಟಾಗಿರುವ ಇವೇ ಮುಂತಾದ ಕಲ್ಪನೆಗಳು ಅಕ್ಷರಬಾಹ್ಯವಾಗಿರುತ್ತವೆ.[4] **ಅಕ್ಷರಬಾಹ್ಯವಾದದ್ದು ವೇದಾರ್ಥವೂ ಆಗುವದಿಲ್ಲ, ವೇದಾರ್ಥಕ್ಕೆ ಉಪಕಾರಿಯೂ ಆಗುವದಿಲ್ಲ.**[5] ಏಕೆಂದರೆ ವೇದವು (ತನ್ನ) ಪ್ರಾಮಾಣ್ಯಕ್ಕೆ

---

1. ವಾಚೋಯುಕ್ತಿ ಎಂದರೆ ವಾಕ್ಯದಲ್ಲಿರುವ ಮಾತುಗಳ ಒಕ್ಕಣೆ ಭರ್ತೃಪ್ರಪಂಚರು ವಿಜ್ಞಾನಾತ್ಮನ ಮೂಲಕವಾಗಿ ವಿಕಾರವನ್ನು ಹೊಂದುವ ಪರಮಾತ್ಮನ ರೂಪಗಳು ಮೂರ್ತಾಮೂರ್ತಗಳು ಎನ್ನುತ್ತಿದ್ದರು.

2. ಏಕೆಂದರೆ ವಿಜ್ಞಾನಾತ್ಮನು ಪರಮಾತ್ಮನಿಗಿಂತ ಭಿನ್ನಾಭಿನ್ನನು ಎಂಬುದೇ ಭರ್ತೃಪ್ರಪಂಚರ ಸಿದ್ಧಾಂತ.

3. ಅರ್ಥವನ್ನು ತಿಳಿಯಲಾರದೆ ಒದ್ದಾಡುತ್ತಿರುವವರಿಗೆ.

4. ಶ್ರುತಿಯಲ್ಲಿ ಹೇಳದವುಗಳಾಗಿವೆ.

5. ಶ್ರುತಿಗೆ ವಿರುದ್ಧವಾದ ವಿಷಯವನ್ನು ವೇದಾರ್ಥನಿರ್ಣಯಕ್ಕೆ ಉಪಯೋಗಿಸಿಕೊಳ್ಳುವದಕ್ಕೆ ಬರುವದಿಲ್ಲ; ಶ್ರುತಿಯಲ್ಲಿರುವ ಯುಕ್ತಿಗೆ ಅನುಗುಣವಾಗಿರುವ ಯುಕ್ತಿಯು ಉಪಕಾರಕವಾಗಿಯಾದರೂ ಇರುತ್ತದೆ.

(ಮತ್ತೆ ಯಾವ ಪ್ರಮಾಣವನ್ನೂ) ಬಯಸುವದಿಲ್ಲ.[1] ಆದ್ದರಿಂದ ರಾಶಿತ್ರಯ ವನ್ನು ಕಲ್ಪಿಸುವದು ಸಮಂಜಸವಲ್ಲ.

## 'ತಸ್ಯ ಹ' ಎಂಬಲ್ಲಿ ತಚ್ಛಬ್ದದ ಅರ್ಥ

(ಭಾಷ್ಯ)

"ಯೋಽಯಂ ದಕ್ಷಿಣೇಽಕ್ಷನ್ ಪುರುಷಃ" (೨-೩-೫) ಇತಿ ಲಿಙ್ಗಾತ್ಮಾ ಪ್ರಸ್ತುತೋಽಧ್ಯಾತ್ಮೇ। ಅಧಿದೈವೇ ಚ "ಯ ಏಷ ಏತಸ್ಮಿನ್ ಮಣ್ಡಲೇ ಪುರುಷಃ" (೨-೩-೩) ಇತಿ। ತಸ್ಯ ಇತಿ ಪ್ರಕೃತೋಪಾದಾನಾತ್ ಸ ಏವೋಪಾದೀಯತೇ ಯೋಽಸೌ ತ್ಯಸ್ಯ ಅಮೂರ್ತಸ್ಯ ರಸಃ, ನ ತು ವಿಜ್ಞಾನಮಯಃ। ನನು ವಿಜ್ಞಾನಮಯಸ್ಯೈವ ಏತಾನಿ ರೂಪಾಣಿ ಕಸ್ಮಾತ್ ನ ಭವನ್ತಿ? ವಿಜ್ಞಾನಮಯಸ್ಯಾಪಿ ಪ್ರಕೃತತ್ವಾತ್ 'ತಸ್ಯ' ಇತಿ ಚ ಪ್ರಕೃತೋಪಾದಾನಾತ್? ನೈವಮ್। ವಿಜ್ಞಾನಮಯಸ್ಯ ಅರೂಪಿತ್ವೇನ ವಿಜಿಜ್ಞಾಪಯಿಷಿತತ್ವಾತ್। ಯದಿ ಹಿ ತಸ್ಯೈವ ವಿಜ್ಞಾನಮಯಸ್ಯ ಏತಾನಿ ಮಾಹಾರಜನಾದೀನಿ ರೂಪಾಣಿ ಸ್ಯುಃ ತಸ್ಯೈವ 'ನೇತಿನೇತಿ' ಇತ್ಯನಾಖ್ಯೇಯರೂಪತಯಾ ಆದೇಶೋ ನ ಸ್ಯಾತ್। ನನು ಅನ್ಯಸ್ಯೈವ ಅಸಾವಾದೇಶಃ, ನ ತು ವಿಜ್ಞಾನಮಯಸ್ಯ ಇತಿ। ನ। ಷಷ್ಠಾನ್ತ ಉಪಸಂಹಾರಾತ್। "ವಿಜ್ಞಾತಾರಮರೇ ಕೇನ ವಿಜಾನೀಯಾತ್" (೪-೫-೧೫) ಇತಿ ವಿಜ್ಞಾನಮಯಂ ಪ್ರಸ್ತುತ್ಯ "ಸ ಏಷ ನೇತಿನೇತಿ" (೪-೫-೧೫) ಇತಿ। "ವಿಜ್ಞಪಯಿಷ್ಯಾಮಿ" (೨-೧-೧೫) ಇತಿ ಚ ಪ್ರತಿಜ್ಞಾಯಾ ಅರ್ಥವತ್ತ್ವಾತ್। ಯದಿ ಚ ವಿಜ್ಞಾನಮಯಸ್ಯೈವ ಅಸಂವ್ಯವಹಾರ್ಯಮ್ ಆತ್ಮಸ್ವರೂಪಂ ಜ್ಞಾಪಯಿತುಮಿಷ್ಟಂ ಸ್ಯಾತ್ ಪ್ರಧ್ವಸ್ತಸರ್ವೋಪಾಧಿವಿಶೇಷಮ್, ತತ ಇಯಂ ಪ್ರತಿಜ್ಞಾ ಅರ್ಥವತೀ ಸ್ಯಾತ್। ಯೇನ ಅಸೌ ಜ್ಞಾಪಿತೋ ಜಾನಾತಿ ಆತ್ಮಾನಮೇವ 'ಅಹಂ ಬ್ರಹ್ಮಾಸ್ಮಿ' ಇತಿ ಶಾಸ್ತ್ರನಿಷ್ಠಾಂ ಪ್ರಾಪ್ನೋತಿ ನ ಬಿಭೇತಿ ಕುತಶ್ಚನ। ಅಥ ಪುನರನ್ಯೋ ವಿಜ್ಞಾನಮಯಃ, ಅನ್ಯೋ 'ನೇತಿ ನೇತಿ' ಇತಿ ವ್ಯಪದಿಶ್ಯತೇ ತದಾ 'ಅನ್ಯತ್ ಅದೋ ಬ್ರಹ್ಮ, ಅನ್ಯೋಽಹಮಸ್ಮಿ' ಇತಿ ವಿಪರ್ಯಯೋ ಗೃಹೀತಃ ಸ್ಯಾತ್ 'ನಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ' (೧-೪-೧೦)। ತಸ್ಮಾತ್ ತಸ್ಯ ಹೈತಸ್ಯ ಇತಿ ಲಿಙ್ಗಪುರುಷಸ್ಯೈವ ಏತಾನಿ ರೂಪಾಣಿ ॥

(ಭಾಷ್ಯಾರ್ಥ)

"ಬಲಗಣ್ಣಿನಲ್ಲಿರುವ ಈ ಪುರುಷನಿದಾನಲ್ಲ" (೨-೩-೫) ಎಂದು ಅಧ್ಯಾತ್ಮದಲ್ಲಿ ಲಿಂಗಾತ್ಮನನ್ನು ತಿಳಿಸುವದಕ್ಕೆ ಪ್ರಾರಂಭಿಸಿತ್ತು; ಅಧಿದೈವದಲ್ಲಿಯೂ

1. ಪೌರುಷೇಯವಾಕ್ಯವು ಪ್ರತ್ಯಕ್ಷಾದಿಗಳಿಂದ ತಿಳಿದದ್ದನ್ನೇ ಹೇಳುವದರಿಂದ ಅದರ ಪ್ರಾಮಾಣ್ಯವು ಸಾಪೇಕ್ಷವು; ಆದರೆ ವೇದವು ಪ್ರತ್ಯಕ್ಷಾದಿಗಳಿಂದ ತಿಳಿಯುವದಕ್ಕಾಗದ ಅರ್ಥವನ್ನೇ ಹೇಳುವದರಿಂದ ಅದರ ಪ್ರಾಮಾಣ್ಯವು ನಿರಪೇಕ್ಷವು.

"ಈ ಮಂಡಲದಲ್ಲಿರುವ ಈ ಪುರುಷನಿದಾನಲ್ಲ" (೨-೩-೫) ಎಂದು (ಲಿಂಗಾತ್ಮನನ್ನು ಹೇಳಿತ್ತು). "ತಸ್ಯ" (ಆ ಈ ಪುರುಷನ) ಎಂದು ಪ್ರಕೃತವಾಗದ್ದನ್ನೇ ತೆಗೆದುಕೊಂಡಿರುವದರಿಂದ[1] ತ್ಯತ್ತ್ರನ, ಅಮೂರ್ತದ, ರಸವಿದೆಯಲ್ಲ, ಅದನ್ನೇ (ಇಲ್ಲಿ) ತೆಗೆದುಕೊಂಡಿದೆಯೇ ಹೊರತು ವಿಜ್ಞಾನಮಯನನ್ನು ತೆಗೆದುಕೊಂಡಿಲ್ಲ.

(ಆಕ್ಷೇಪ) :- ಈ ರೂಪಗಳು ವಿಜ್ಞಾನಮಯನವೇ ಎಂದು ಏಕೆ ಆಗಬಾರದು? ವಿಜ್ಞಾನಮಯನೂ ಪ್ರಕೃತನಾಗಿರುತ್ತಾನಲ್ಲ! 'ತಸ್ಯ' (ಅವನ) ಎಂದು (ಇಲ್ಲಿ) ಪ್ರಕೃತವಾದದ್ದನ್ನೇ ತೆಗೆದುಕೊಂಡಿದೆಯಲ್ಲ!

(ಪರಿಹಾರ) :- ಹಾಗಲ್ಲ. ಏಕೆಂದರೆ ವಿಜ್ಞಾನಮಯನು ರೂಪಿಯಲ್ಲ ಎಂದೇ (ಇಲ್ಲಿ) ತಿಳಿಸಿಕೊಡಬೇಕೆಂಬ ಅಭಿಪ್ರಾಯವಿದೆ. ಈ ಮಾಹಾರಜನಾದಿ ರೂಪಗಳು ಅದೇ ವಿಜ್ಞಾನಮಯನವಾಗಿದ್ದರೆ ಅವನನ್ನೇ 'ನೇತಿ ನೇತಿ' (ಹೀಗಲ್ಲ, ಹೀಗಲ್ಲ) ಎಂದು (ಗೊತ್ತಾಗಿ) ಹೇಳುವದಕ್ಕಾಗದ ರೂಪದವನೆಂದು ಉಪದೇಶ ಮಾಡಿದೆ ಎಂದಾಗಲಾರದು.

(ಆಕ್ಷೇಪ) :- ಇದು ಮತ್ತೊಬ್ಬನನ್ನೇ ಉಪದೇಶಮಾಡಿದ್ದು, ವಿಜ್ಞಾನಮಯನನ್ನಲ್ಲ (ಎನ್ನಬಹುದಲ್ಲ)!

(ಪರಿಹಾರ) :- ಹಾಗಲ್ಲ. ಏಕೆಂದರೆ ಆರನೆಯ (ಅಧ್ಯಾಯದ) ಕೊನೆಯಲ್ಲಿ[2] "ಎಲೆ, ವಿಜ್ಞಾತೃವನ್ನು ಏತರಿಂದ ಅರಿತಾನು?" (೪-೫-೧೫) ಎಂದು ವಿಜ್ಞಾನಮಯನನ್ನು (ಹೇಳುವದಕ್ಕೆ) ಉಪಕ್ರಮಿಸಿ "ಆ ಇವನೇ ನೇತಿ ನೇತಿ (ಎಂದ ಆತ್ಮನು)" (೪-೫-೧೫) ಎಂದು ಉಪಸಂಹಾರಮಾಡಿರುತ್ತದೆ. "ವಿಜ್ಞಾಪಿಸಿಕೊಳ್ಳುವೆನು" (೨-೧-೧೫ರ ಅರ್ಥ) ಎಂಬ ಪ್ರತಿಜ್ಞೆಯೂ (ಹೀಗಾದರೇ) ಸಾರ್ಥಕವಾಗುತ್ತದೆ. (ಇದರ ವಿವರ) : ವಿಜ್ಞಾನಮಯನ, ವ್ಯವಹಾರಕ್ಕೆ ನಿಲುಕದಿರುನ ಯಾವ ಉಪಾಧಿಗಳಿಂದಾದ ವಿಶೇಷವೂ ಇಲ್ಲದ ಆತ್ಮಸ್ವರೂಪವನ್ನೇ ತಿಳಿಸಿಕೊಡಬೇಕೆಂದು ಇಷ್ಟವಾಗಿದೆ ಎಂದರೆ ಆಗ ಈ ಪ್ರತಿಜ್ಞೆಯು ಸಾರ್ಥಕವಾದೀತು. ಏಕೆಂದರೆ ಅದನ್ನು ತಿಳಿಸಿದರೆ ಈ (ವಿಜ್ಞಾನಾತ್ಮನು) ತನ್ನನ್ನೇ ನಾನು ಬ್ರಹ್ಮವು ಎಂದು ಅರಿತುಕೊಳ್ಳುತ್ತಾನೆ, ಶಾಸ್ತ್ರದ

1. ಸರ್ವನಾಮವು ಪ್ರಕೃತವಾದದ್ದನ್ನೇ ಪರಾಮರ್ಶಿಸುತ್ತದೆ; ಅದ್ದರಿಂದ ತಸ್ಯ (ಅವನ) ಎಂದರೆ ಪ್ರಕೃತನಾಗಿರುವ ಲಿಂಗಾತ್ಮನ ಎಂದೇ ತಿಳಿಯಬೇಕು.

2. ಆರಣ್ಯಕದ ಆರನೆಯ ಅಧ್ಯಾಯದ ಕೊನೆಯಲ್ಲಿ, ಈ ಉಪನಿಷತ್ತಿನ ನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ.

ಪರ್ಯವಸಾನವನ್ನು ಮುಟ್ಟಿದವನಾಗುತ್ತಾನೆ[1], ಏತಕ್ಕೂ ಅಂಜುವದಿಲ್ಲ[2]. ಹಾಗಿಲ್ಲದ ವಿಜ್ಞಾನಮಯನೇ ಬೇರೆ, (ಅವನಿಗಿಂತ) ಬೇರೊಬ್ಬನನ್ನೇ 'ನೇತಿ ನೇತಿ' (ಹೀಗಲ್ಲ, ಹೀಗಲ್ಲ) ಎಂದು ಹೇಳಿದೆ ಎನ್ನುವದಾದರೆ 'ಆ ಬ್ರಹ್ಮವು ಬೇರೆ, ನಾನು ಬೇರೆ' ಎಂದು ವಿಪರೀತಾರ್ಥವನ್ನೇ ಗ್ರಹಿಸಿದಂತೆ ಆಗುವದೇ ಹೊರತು "ನಾನು ಬ್ರಹ್ಮವಾಗಿರುವೆನೆಂದು ತನ್ನನ್ನೇ ಅರಿತುಕೊಂಡಿತು" (೧-೪-೧೦) ಎಂದಾಗುವದಿಲ್ಲ[3].

ಆದ್ದರಿಂದ[4] 'ಆ ಈ (ಪುರುಷನ)' ಎಂದು (ಹೇಳಿರುವ) ಈ ರೂಪಗಳು ಲಿಂಗಪುರುಷನವೇ ಎಂದು ನಿಶ್ಚಯವಾಯಿತು.

## ಲಿಙ್ಗಾತ್ಮನ ರೂಪಗಳು

(ಭಾಷ್ಯ)

೩೪೭. ಸತ್ಯಸ್ಯ ಚ ಸತ್ಯೇ ಪರಮಾತ್ಮಸ್ವರೂಪೇ ವಕ್ತವ್ಯೇ ನಿರವಶೇಷಂ ಸತ್ಯಂ ವಕ್ತವ್ಯಮ್ । ಸತ್ಯಸ್ಯ ಚ ವಿಶೇಷರೂಪಾಣಿ ವಾಸನಾಃ । ತಾಸಾಮ್ ಇಮಾನಿ ರೂಪಾಣಿ ಉಚ್ಯನ್ತೇ । ಏತಸ್ಯ ಪುರುಷಸ್ಯ ಪ್ರಕೃತಸ್ಯ ಲಿಙ್ಗಾತ್ಮನಃ ಏತಾನಿ ರೂಪಾಣಿ । ಕಾನಿ ತಾನೀತ್ಯುಚ್ಯನ್ತೇ[5] । ಯಥಾ ಲೋಕೇ ಮಹಾರಜನಂ ಹರಿದ್ರಾ, ತಯಾ ರಕ್ತಂ ಮಾಹಾರಜನಂ ಯಥಾ ವಾಸೋ . ಲೋಕೇ ಏವಂ ಸ್ತ್ರ್ಯಾದಿವಿಷಯಸಂಯೋಗೇ ತಾದೃಶಂ ವಾಸನಾರೂಪಂ ರಞ್ಜನಾಕಾರಮ್ ಉತ್ಪದ್ಯತೇ ಚಿತ್ತಸ್ಯ । ಯೇನ ಅಸೌ ಪುರುಷೋ ರಕ್ತಃ ಇತ್ಯುಚ್ಯತೇ ವಸ್ತ್ರಾದಿ ವತ್ । ಯಥಾ ಚ ಲೋಕೇ ಪಾಣ್ಡ್ವಾವಿಕಮ್ । ಅವೇರಿದಮ್ ಆವಿಕಮ್ ಊರ್ಣಾದಿ । ಯಥಾ ಚ ತತ್ ಪಾಣ್ಡುರಂ ಭವತಿ ತಥಾ ಅನ್ಯತ್ ವಾಸನಾ ರೂಪಮ್ । ಯಥಾ ಚ ಲೋಕೇ ಇನ್ದ್ರಗೋಪಃ ಅತ್ಯನ್ತರಕ್ತೋ ಭವತಿ

1. ಬ್ರಹ್ಮವು ತನ್ನನ್ನು ತಾನು ಅರಿತುಕೊಂಡು ಸರ್ವವಾಯಿತು ಎಂಬ (೧-೪-೧೦) ಶ್ರುತಿಯಲ್ಲಿ ಹೇಳಿರುವ ಪುರುಷಾರ್ಥವು ಪ್ರಾಪ್ತಿಯಾಗುತ್ತದೆ; ಏತಕ್ಕೂ ಹೆದರುವದಿಲ್ಲ (ತೈ. ೨-೯) ಎಂಬ ಶ್ರುತಿಯಲ್ಲಿ ಹೇಳಿರುವಂತೆ ಸಕಲಾನರ್ಥಗಳೂ ನಾಶವಾಗುವವೆಂಬ ಫಲವೂ ಪ್ರಾಪ್ತವಾಗುತ್ತದೆ.

2. ವಿಪರೀತವಾಗಿ ತಿಳಿದುಕೊಂಡರೆ ಸಾವಿನಮೇಲೆ ಸಾವು ಬರುವದು ಎಂದು (೧-೪-೧೦) ಶ್ರುತಿ ಹೇಳುವದರಿಂದ ಬ್ರಹ್ಮವಿದ್ಯೋಪದೇಶವು ವ್ಯರ್ಥವಾಗುವದು.

3. ಏಕೆಂದರೆ ಈ ಪಕ್ಷದಲ್ಲಿ ವಿಜ್ಞಾನಮಯನು ತನಗಿಂತ ಬೇರೆಯಾದ ಪರಮಾತ್ಮನನ್ನು ಅರಿತುಕೊಳ್ಳಬೇಕಾಗಿರುತ್ತದೆ.

4. ತಸ್ಯ ಎಂಬುದು ವಿಜ್ಞಾನಮಯನನ್ನು ಹೇಳುವದೆಂಬ ಪಕ್ಷವು ಕೂಡುವದಿಲ್ಲವಾದ್ದರಿಂದ.

5. "ಕಾನಿ ತಾನೀತಿ ? ಉಚ್ಯತೇ" ಎಂದೂ ಇರಬಹುದಾಗಿತ್ತು; "ರೂಪಾಣಿ ಉಚ್ಯನ್ತೇ" ಎಂದು ಈಗ ಅನ್ವಯಿಸಿಕೊಳ್ಳಬೇಕು.

ಏವಮ್ ಅಸ್ಯ ವಾಸನಾರೂಪಮ್। ಕ್ವಚಿತ್ ವಿಷಯವಿಶೇಷಾಪೇಕ್ಷಯಾ ರಾಗಸ್ಯ ತಾರತಮ್ಯಮ್, ಕ್ವಚಿತ್ ಪುರುಷಚಿತ್ತವೃತ್ತ್ಯಪೇಕ್ಷಯಾ। ಯಥಾ ಚ ಲೋಕೇ ಅಗ್ನ್ಯರ್ಚಿಃ ಭಾಸ್ವರಂ ಭವತಿ ತಥಾ ಕ್ವಚಿತ್ ಕಸ್ಯಚಿತ್ ವಾಸನಾರೂಪಂ ಭವತಿ। ಯಥಾ ಪುಣ್ಡರೀಕಂ ಶುಕ್ಲಂ ತದ್ವದಪಿ ವಾಸನಾರೂಪಂ ಕಸ್ಯಚಿತ್ ಭವತಿ। ಯಥಾ ಸಕೃದ್ವಿದ್ಯುತ್ತಮ್। ಯಥಾ ಲೋಕೇ ಸಕೃದ್ವಿದ್ಯೋತನಂ ಸರ್ವತಃ ಪ್ರಕಾಶಕಂ ಭವತಿ ತಥಾ ಜ್ಞಾನಪ್ರಕಾಶವಿವೃದ್ಧ್ಯಪೇಕ್ಷಯಾ ಕಸ್ಯಚಿತ್ ವಾಸನಾರೂಪಮ್ ಉಪಜಾಯತೇ। ನೈಷಾಂ ವಾಸನಾರೂಪಾಣಾಮ್ ಆದಿಃ, ಅನ್ತಃ, ಮಧ್ಯಮ್, ಸಂಖ್ಯಾ ವಾ ದೇಶಃ ಕಾಲೋ ನಿಮಿತ್ತಂ ವಾ ಅವಧಾರ್ಯತೇ। ಅಸಂಖ್ಯೇಯತ್ವಾತ್ ವಾಸನಾಯಾಃ, ವಾಸನಾಹೇತೂನಾಂ ಚ ಆನನ್ತ್ಯಾತ್। ತಥಾ ಚ ವಕ್ಷ್ಯತಿ ಷಷ್ಠೇ "ಇದಂಮಯೋಽದೋಮಯಃ" (೪-೪-೫) ಇತ್ಯಾದಿ। ತಸ್ಮಾತ್ ನ ಸ್ವರೂಪಸಂಖ್ಯಾವಧಾರಣಾರ್ಥಾ ದೃಷ್ಟಾನ್ತಾಃ 'ಯಥಾ ಮಾಹಾರಜನಂ ವಾಸಃ' ಇತ್ಯಾದಯಃ, ಕಿಂ ತರ್ಹಿ ಪ್ರಕಾರಪ್ರದರ್ಶನಾರ್ಥಾಃ। ಏವಂಪ್ರಕಾರಾಣಿ ಹಿ ವಾಸನಾರೂಪಾಣಿ ಇತಿ। ಯತ್ತು ವಾಸನಾರೂಪಮ್ ಅಭಿಹಿತಮ್ ಅನ್ತೇ ಸಕೃದ್ವಿದ್ಯೋತನಮಿವ ಇತಿ ತತ್ಕಿಲ ಹಿರಣ್ಯಗರ್ಭಸ್ಯ ಅವ್ಯಾಕೃತಾತ್ ಪ್ರಾದುರ್ಭವತಃ ತಡಿದ್ವತ್ ಸಕೃದೇವ ವ್ಯಕ್ತಿರ್ಭವತಿ ಇತಿ ತತ್ ತದೀಯಂ ವಾಸನಾರೂಪಂ ಹಿರಣ್ಯಗರ್ಭಸ್ಯ ಯೋ ವೇದ ತಸ್ಯ ಸಕೃದ್ವಿದ್ಯುತ್ತೇವ। ಹ ವಾ ಇತ್ಯವಧಾರಣಾರ್ಥೌ। ಏವಮೇವಾಸ್ಯ ಶ್ರೀಃ ಖ್ಯಾತಿರ್ಭವತಿ ಇತ್ಯರ್ಥಃ। ಯಥಾ ಹಿರಣ್ಯಗರ್ಭಸ್ಯ। ಏವಮ್ ಏತದ್ ಯಥೋಕ್ತಂ ವಾಸನಾರೂಪಮ್ ಅನ್ತ್ಯಂ ಯೋ ವೇದ ॥

(ಭಾಷ್ಯಾರ್ಥ)

ಸತ್ಯಕ್ಕೂ ಸತ್ಯನಾದ ಪರಮಾತ್ಮನ ಸ್ವರೂಪವನ್ನು ಹೇಳಬೇಕಾಗಿರುವದರಿಂದ ಸ್ವಲ್ಪವೂ ಉಳಿಯದಂತೆ ಸತ್ಯವನ್ನು ಹೇಳಬೇಕು. (ಈ) ಸತ್ಯಕ್ಕೆ ವಾಸನೆಗಳೇ ವಿಶೇಷರೂಪಗಳು. ಅವುಗಳಲ್ಲಿ ಈ ರೂಪಗಳನ್ನು ಹೇಳಲಾಗುತ್ತದೆ.

ಈ ಪುರುಷನಿಗೆ, ಪ್ರಕೃತವಾದ ಲಿಂಗಾತ್ಮನಿಗೆ, ಇವು ರೂಪಗಳು. ಅವು ಯಾವವು? ಎಂದರೆ (ಶ್ರುತಿ) ಹೇಳುತ್ತದೆ: ಹೇಗೆ ಲೋಕದಲ್ಲಿ -ಮಹಾರಜನವೆಂದರೆ ಅರಿಶಿನವು; ಅದರ ಬಣ್ಣಬಳಿದಿರುವ ಬಟ್ಟೆಯು ಮಾಹಾರಜನವು. (ಅದು) ಲೋಕದಲ್ಲಿ ಹೇಗಿರುವದೋ, ಅದರಂತೆ ಸ್ತ್ರ್ಯಾದಿವಿಷಯಗಳ ಸಂಯೋಗವಾದರೆ ಅಂಥ ರಂಜನಾಕಾರವಾದ ವಾಸನಾರೂಪವು ಚಿತ್ತದಲ್ಲಿ ಉಂಟಾಗುತ್ತದೆ. ಅದರಿಂದ ಈ ಪುರುಷನು ಬಟ್ಟೆಯೇ ಮುಂತಾದವುಗಳಂತೆ 'ರಕ್ತ'ನಾಗಿರುತ್ತಾನೆ ಎನ್ನುತ್ತಾರೆ. ಮತ್ತು ಹೇಗೆ ಲೋಕದಲ್ಲಿ ಬಿಳಿಯ ಆವಿಕವು; ಅವಿಯ (ಕುರಿಯ) ದಾಗಿರುವದರಿಂದ ಉಣ್ಣೆಯೇ ಮುಂತಾದದ್ದನ್ನು ಆವಿಕ(ವೆನ್ನುತ್ತಾರೆ). ಅದು

ಹೇಗೆ ಬೆಳ್ಳಗಿರುತ್ತದೆಯೋ ಹಾಗೆ ಮತ್ತೊಂದು ವಾಸನಾರೂಪ(ವಿರುವದು). ಮತ್ತು ಹೇಗೆ ಇಂದ್ರಗೋಪವು[1] ಅತ್ಯಂತ ಕೆಂಪಾಗಿರುವದೋ ಹಾಗೆ ಇವನ (ಒಂದು) ವಾಸನಾರೂಪ(ವಿರುವದು). ಕೆಲವು ಕಡೆಯಲ್ಲಿ ಆಯಾ ವಿಷಯಗಳ ಅಪೇಕ್ಷೆಯಿಂದಲೂ ಕೆಲವು ಕಡೆಗಳಲ್ಲಿ ಪುರುಷಚಿತ್ತವೃತ್ತಿಯ ಅಪೇಕ್ಷೆಯಿಂದಲೂ ರಾಗದ ತಾರತಮ್ಯವುಂಟಾಗಿರುತ್ತದೆ. ಮತ್ತು ಹೇಗೆ ಲೋಕದಲ್ಲಿ ಬೆಂಕಿಯ ಉರಿಯು ಥಳಗುಟ್ಟುತ್ತಿರುವದೋ ಹಾಗೆ ಒಬ್ಬೊಬ್ಬನ ವಾಸನಾರೂಪವಾಗಿರುತ್ತದೆ. ಹೇಗೆ ಬೆಳ್ದಾವರೆಯು ಬೆಳ್ಳಗಿರುತ್ತದೆಯೋ ಅದರಂತೆಯೂ ಒಬ್ಬೊಬ್ಬನ ವಾಸನಾರೂಪವಿರುತ್ತದೆ. ಹೇಗೆ ಬಹುಕಾಲವಿರುವ ಮಿಂಚೋ- ಹೇಗೆ ಬಹುಕಾಲ ಮಿಂಚುವದು ಎಲ್ಲಾ ಕಡೆಯಲ್ಲಿಯೂ ಪ್ರಕಾಶಕವಾಗಿರುತ್ತದೆಯೋ- ಹಾಗೆಯೇ ಜ್ಞಾನಪ್ರಕಾಶವು ಬೆಳೆದುಕೊಂಡದ್ದರ ಅಪೇಕ್ಷೆಯಿಂದ ಒಬ್ಬೊಬ್ಬನ ವಾಸನಾರೂಪವುಂಟಾಗಿರುತ್ತದೆ.

ಈ ವಾಸನಾರೂಪಗಳಿಗೆ ಆದಿಯನ್ನಾಗಲಿ ಅಂತವನ್ನಾಗಲಿ ನಡುವೆಯನ್ನಾಗಲಿ ಸಂಖ್ಯೆಯನ್ನಾಗಲಿ ದೇಶವನ್ನಾಗಲಿ ಕಾಲವನ್ನಾಗಲಿ ನಿಮಿತ್ತವನ್ನಾಗಲಿ (ಇಲ್ಲಿ) ಗೊತ್ತುಮಾಡಿ (ಹೇಳಿರು)ವದಿಲ್ಲ. ಏಕೆಂದರೆ ವಾಸನೆಯನ್ನು ಎಣಿಸುವದಕ್ಕೆ ಆಗುವದಿಲ್ಲ, ವಾಸನೆಯ ಕಾರಣಗಳೂ ಅನಂತವಾಗಿರುತ್ತವೆ. ಆದ್ದರಿಂದಲೇ ಆರನೆಯ ಅಧ್ಯಾಯದಲ್ಲಿ "ಇದಂಮಯನು, ಅದೋಮಯನು" (೪-೪-೫) ಎಂದು ಮುಂತಾಗಿ ಹೇಳಲಾಗಿರುತ್ತದೆ. ಆದ್ದರಿಂದ ಸ್ವರೂಪಸಂಖ್ಯೆಗಳನ್ನು ಗೊತ್ತುಪಡಿಸುವದಕ್ಕಾಗಿ ಮಾಹಾರಜನದ ಬಟ್ಟೆಯೇ ಮುಂತಾದ ದೃಷ್ಟಾಂತಗಳನ್ನು ಹೇಳಿರುವದಿಲ್ಲ; ಮತ್ತೇನೆಂದರೆ ವಾಸನಾರೂಪಗಳು ಈ ಪ್ರಕಾರವಾಗಿರುವವಲ್ಲವೆ? -ಎಂದು ಪ್ರಕಾರಗಳನ್ನು ತಿಳಿಸುವದಕ್ಕಾಗಿ (ಹೇಳಿದೆ). ಇನ್ನು ಕೊನೆಯಲ್ಲಿ ಬಹುಕಾಲವಿರುವ ಮಿಂಚಿನಂತೆ ಎಂದು ವಾಸನೆಯ ರೂಪವನ್ನು ಹೇಳಿದೆಯಲ್ಲ, ಅದು ಅವ್ಯಾಕೃತದಿಂದ ಹೊರತೋರಿಕೊಳ್ಳುವ ಹಿರಣ್ಯಗರ್ಭನದು. ಏಕೆಂದರೆ (ಅದು) ಮಿಂಚಿನಂತೆ ಯಾವಾಗಲೂ ತೋರಿಕೊಳ್ಳುತ್ತಿರುತ್ತದೆ. ಆದ್ದರಿಂದ ಆತನಿಗೆ -ಹಿರಣ್ಯಗರ್ಭನ ವಾಸನಾರೂಪವನ್ನು ಯಾವನು ಅರಿತುಕೊಳ್ಳುವನೋ ಆತನಿಗೆ- ಬಹುಕಾಲದ ಮಿಂಚಿನಂತೆ. (ಮೂಲದಲ್ಲಿರುವ) ಹ ವಾ ಎಂಬಿವೆರಡೂ ಅವಧಾರಣೆಗಾಗಿ (ಬಂದವುಗಳು). ಹೇಗೆ (ಬಹುಕಾಲದ ಮಿಂಚಿನ) ಹಾಗೆಯೇ ಅವನ ಶ್ರೀಯು ಎಂದರೆ ಖ್ಯಾತಿಯು ಇರುತ್ತದೆ ಎಂದರ್ಥ. ಹಿರಣ್ಯಗರ್ಭನ (ಖ್ಯಾತಿಯು) ಹೇಗೋ

---

1. ಇದು ಯಾವ ಹುಳುವೆಂಬುದು ತಿಳಿಯಲಿಲ್ಲ. ಹಸುರು ಜೀರುಂಬೆ (ಅಥವಾ ಜೀರುಂಡೆ)ಯಂತೆ ಇರುವ ಕೆಂಪುಹುಳುವಿದು. ಕೆಂಬುಳು, ಹೊನ್ನಿಹುಳು ಎಂದು ಕಿಟಲ್ ನಿಘಂಟುವಿನಲ್ಲಿದೆ.

ಹಾಗೆ (ಇರುತ್ತದೆ). ಇದನ್ನು ಎಂದರೆ ಕೊನೆಯಲ್ಲಿ ಹೇಳಿರುವ (ಈ) ವಾಸನಾ ರೂಪವನ್ನು ಯಾವನು ಅರಿತುಕೊಳ್ಳುವನೋ (ಅವನಿಗೆ ಈ ಫಲವಾಗುವದು).

## ಪರಮಾತ್ಮನ ಸ್ವರೂಪ

(ಭಾಷ್ಯ)

೩೪೮. ಏವಂ ನಿರವಶೇಷಂ ಸತ್ಯಸ್ಯ ಸ್ವರೂಪಮ್ ಅಭಿಧಾಯ ಯತ್ತತ್ ಸತ್ಯಸ್ಯ ಸತ್ಯಮ್ ಅವೋಚಾಮ ತಸ್ಯೈವ ಸ್ವರೂಪಾವಧಾರಣಾರ್ಥಂ ಬ್ರಹ್ಮಣ ಇದಮಾರಭ್ಯತೇ। ಅಥ ಅನನ್ತರಂ ಸತ್ಯಸ್ವರೂಪನಿರ್ದೇಶಾನನ್ತರಂ ಯತ್ (ತತ್)[1] ಸತ್ಯಸ್ಯ ಸತ್ಯಂ ತದೇವಾವಶಿಷ್ಯತೇ ಯಸ್ಮಾತ್ ಅತಃ ತಸ್ಮಾತ್ ಅತಃ ತಸ್ಮಾತ್ ಸತ್ಯಸ್ಯ ಸತ್ಯಂ ಸ್ವರೂಪಂ ನಿರ್ದೇಕ್ಷ್ಯಾಮಃ। ಆದೇಶೋ ನಿರ್ದೇಶೋ ಬ್ರಹ್ಮಣಃ। ಕಃ ಪುನರಸೌ ನಿರ್ದೇಶ ಇತಿ ? ಉಚ್ಯತೇ। 'ನೇತಿ ನೇತಿ' ಇತ್ಯೇವಂ ನಿರ್ದೇಶಃ, ನನು ಕಥಮ್ ಆಭ್ಯಾಂ ನೇತಿ ನೇತಿ ಇತಿ ಶಬ್ದಾಭ್ಯಾಂ ಸತ್ಯಸ್ಯ ಸತ್ಯಂ ನಿರ್ದಿದಿಕ್ಷಿತಮ್ ಇತಿ? ಉಚ್ಯತೇ। ಸರ್ವೋಪಾಧಿವಿಶೇಷಾಪೋಹೇನ ಯಸ್ಮಿನ್ ನ ಕಶ್ಚಿತ್ ವಿಶೇಷೋಽಸ್ತಿ ನಾಮ ವಾ ರೂಪಂ ವಾ ಕರ್ಮ ವಾ ಭೇದೋ ವಾ ಜಾತಿರ್ವಾ ಗುಣೋ ವಾ। ತದ್ದ್ವಾರೇಣ ಹಿ ಶಬ್ದಪ್ರವೃತ್ತಿರ್ಭವತಿ। ನ ಚೈಷಾಂ ಕಶ್ಚಿತ್ ವಿಶೇಷೋ ಬ್ರಹ್ಮಣಿ ಅಸ್ತಿ। ಅತೋ ನ ನಿರ್ದೇಷ್ಟುಂ ಶಕ್ಯತೇ ಇದಂ ತತ್ ಇತಿ। ಗೌರಸೌ ಸ್ಪನ್ದತೇ ಶುಕ್ಲೋ ವಿಷಾಣೀ ಇತಿ ಯಥಾ ಲೋಕೇ ನಿರ್ದಿಶ್ಯತೇ ತಥಾ। ಅಧ್ಯಾರೋಪಿತನಾಮರೂಪಕರ್ಮದ್ವಾರೇಣ ಬ್ರಹ್ಮ ನಿರ್ದಿಶ್ಯತೇ "ವಿಜ್ಞಾನಮಾನನ್ದಂ ಬ್ರಹ್ಮ" (೩-೯-೨೮), "ವಿಜ್ಞಾನಘನ ಏವ" (೨-೪-೧೨), 'ಬ್ರಹ್ಮ', 'ಆತ್ಮಾ'- ಇತ್ಯೇವಮಾದಿಶಬ್ದೈಃ। ಯದಾ ಪುನಃ ಸ್ವರೂಪಮೇವ ನಿರ್ದಿದಿಕ್ಷಿತಂ ಭವತಿ ನಿರಸ್ತಸರ್ವೋಪಾಧಿವಿಶೇಷಮ್, ತದಾ ನ ಶಕ್ಯತೇ ಕೇನಚಿದಪಿ ಪ್ರಕಾರೇಣ ನಿರ್ದೇಷ್ಟುಮ್। ತದಾ ಅಯಮೇವ ಅಭ್ಯುಪಾಯೋ ಯದುತ ಪ್ರಾಪ್ತನಿರ್ದೇಶಪ್ರತಿಷೇಧದ್ವಾರೇಣ 'ನೇತಿ ನೇತಿ' ಇತಿ ನಿರ್ದೇಶಃ ॥

(ಭಾಷ್ಯಾರ್ಥ)

ಹೀಗೆ 'ಸತ್ಯ'ದ ಸ್ವರೂಪವನ್ನು ಸ್ವಲ್ಪವೂ ಉಳಿಯದಂತೆ ಸತ್ಯಕ್ಕೂ ಸತ್ಯವು ಎಂದು ಹೇಳಿದೆವಲ್ಲ, ಆ ಬ್ರಹ್ಮದ ಸ್ವರೂಪವನ್ನೇ ನಿಶ್ಚಯಿಸುವದಕ್ಕಾಗಿ ಇದನ್ನು ಆರಂಭಿಸಿರುತ್ತದೆ. ಇನ್ನು ಎಂದರೆ ಬಳಿಕ, ಸತ್ಯದ ಸ್ವರೂಪವನ್ನು ತಿಳಿಸಿದ ಬಳಿಕ, (ಆ) ಸತ್ಯದ ಸತ್ಯವೆಂಬುದೊಂದೇ ಉಳಿದಿದೆಯಷ್ಟೆ, ಆದ್ದರಿಂದ ಆ ಕಾರಣದಿಂದ ಸತ್ಯದ ಸತ್ಯವೆಂಬ ಸ್ವರೂಪವನ್ನು ತಿಳಿಸಿಕೊಡುವೆವು. ಆದೇಶವು

---

1. ಈ ಮಾತು ಇಲ್ಲಿಯೂ ಇರಬೇಕೆಂದು ತೋರುತ್ತದೆ.

ಎಂವರೆ ಬ್ರಹ್ಮದ ನಿರ್ದೇಶವು. ಆ ನಿರ್ದೇಶವು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ: 'ನೇತಿ, ನೇತಿ' (ಹೀಗಲ್ಲ, ಹೀಗಲ್ಲ) ಎಂಬಿದೇ ನಿರ್ದೇಶವು.

(ಆಕ್ಷೇಪ) :– ಈ 'ನೇತಿ, ನೇತಿ' ಎಂಬ ಶಬ್ದಗಳಿಂದ ಸತ್ಯದ ಸತ್ಯವನ್ನು ತಿಳಿಸಬೇಕೆಂದು (ಶ್ರುತಿಯು) ಹೇಗೆ ಹೊರಟಿದೆ ?

(ಪರಿಹಾರ) :– ಹೇಳುತ್ತೇವೆ. ಎಲ್ಲಾ ಉಪಾಧಿವಿಶೇಷಗಳನ್ನೂ ಅಲ್ಲಗಳೆಯುವದರಿಂದ (ತಿಳಿಸಬೇಕೆಂದು ಹೊರಟಿದೆ). ಯಾವದರಲ್ಲಿ ನಾಮವಾಗಲಿ, ರೂಪವಾಗಲಿ, ಕರ್ಮವಾಗಲಿ, ಭೇದವಾಗಲಿ, ಜಾತಿಯಾಗಲಿ, ಗುಣವಾಗಲಿ, ಯಾವದೊಂದು ವಿಶೇಷವೂ ಇಲ್ಲವೋ (ಅದನ್ನು ಹೀಗೆಯೇ ತಿಳಿಸಬೇಕು). ಇವುಗಳ ಮೂಲಕವಾಗಿಯೇ ಅಲ್ಲವೆ, ಶಬ್ದಗಳ ಪ್ರವೃತ್ತಿಯಾಗುವದು[1] ? ಇವುಗಳೊಳಗೆ ಯಾವದೊಂದು ವಿಶೇಷವೂ ಬ್ರಹ್ಮದಲ್ಲಿರುವದಿಲ್ಲ. ಆದ್ದರಿಂದ 'ಇದು ಎತ್ತು, ಓಡಾಡುತ್ತದೆ, ಬೆಳ್ಳನೆಯದು, ಕೋಡುಗಳುಳ್ಳದ್ದು' ಎಂದು ಹೇಗೆ ಲೋಕದಲ್ಲಿ ತಿಳಿಸುವರೋ ಹಾಗೆ 'ಅದು ಇಂಥದ್ದು' ಎಂದು ತಿಳಿಸುವದಕ್ಕೆ ಆಗುವಂತಿಲ್ಲ. ಅಧ್ಯಾರೋಪಿತವಾಗಿರುವ ನಾಮರೂಪಕರ್ಮಗಳ ಮೂಲಕವೇ "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (೩-೯-೨೮), "ವಿಜ್ಞಾನಘನನೇ" (೨-೪-೧೨) 'ಬ್ರಹ್ಮ', 'ಆತ್ಮಾ'- ಎಂಬಿವೇ ಮುಂತಾದ ಶಬ್ದಗಳಿಂದ ಬ್ರಹ್ಮವನ್ನು ತಿಳಿಸುತ್ತಾರೆ[2]. ಆದರೆ ಯಾವಾಗ ಯಾವ ಉಪಾಧಿಯ ವಿಶೇಷವೂ ಇಲ್ಲದ ಸ್ವರೂಪವನ್ನೇ ತಿಳಿಸಬೇಕೆಂಬ ಇಚ್ಛೆಯಾಗುವದೋ ಆಗ ಯಾವ ಪ್ರಕಾರದಿಂದಲೂ (ಅದನ್ನು) ತಿಳಿಸುವದಾಗುವದಿಲ್ಲ. ಆಗ ಪ್ರಾಪ್ತವಾಗಿರುವ ನಿರ್ದೇಶಗಳನ್ನು ಅಲ್ಲಗಳೆಯುವ ಮೂಲಕ "ಹೀಗಲ್ಲ, ಹೀಗಲ್ಲ" ಎಂದು ತಿಳಿಸುವ ಇದೊಂದೇ ಉಪಾಯವು.

## ನಕಾರದ್ವಯದ ಅರ್ಥ

(ಭಾಷ್ಯ)

೩೪೬. ಇದಂ ಚ ನಕಾರದ್ವಯಂ ವೀಪ್ಸಾವ್ಯಾಪ್ತ್ಯರ್ಥಮ್ । ಯದ್ಯತ್ ಪ್ರಾಪ್ತಂ ತತ್ತತ್ ನಿಷಿಧ್ಯತೇ । ತಥಾ ಚ ಸತಿ ಅನಿರ್ದಿಷ್ಟಾಶಙ್ಕಾ ಬ್ರಹ್ಮಣಃ

---

1. ತೈ. ಭಾ. ೨-೧ (ಭಾ. ಭಾ. ೧೦೭); ಮಾಂ. ಭಾ. ೭ (ಭಾ. ಭಾ. ೩೫)- ಗೀ. ಭಾ.ಭಾ. ೧೩-೧೨ ಇವುಗಳಲ್ಲಿಯೂ ಶಬ್ದಪ್ರವೃತ್ತಿನಿಮಿತ್ತಗಳ ವಿಚಾರವಿದೆ.

2. ಜ್ಞಾನ, ಆನಂದ, ಆತ್ಮ, ಬ್ರಹ್ಮ –ಎಂಬೀ ಶಬ್ದಗಳೂ ನಾಮರೂಪಗಳಿಂದೊಡಗೂಡಿದ ಪರಮಾರ್ಥತತ್ತ್ವಕ್ಕೇ ವಾಚಕಗಳು, ಕೇವಲಸ್ವರೂಪಕ್ಕಲ್ಲ –ಎಂದರ್ಥ. ವಿಧಿಮುಖವಾದ ಸತ್ಯಜ್ಞಾನಾದಿಶಬ್ದಗಳಿಂದ ನಿರ್ದೇಶಮಾಡುವದು ನಿಷೇಧಮುಖದಿಂದ ನಿರ್ದೇಶಮಾಡುವದಕ್ಕಿಂತ ಉತ್ತಮಪ್ರಕಾರ ಎಂದು ಈಚಿನ ವೇದಾಂತಿಗಳ ಮತವು ಈ ಭಾಷ್ಯಕ್ಕೆ ವಿರುದ್ಧವೆಂಬುದು ಸ್ಪಷ್ಟ.

ಪರಿಹೃತಾ ಭವತಿ । ಅನ್ಯಥಾ ಹಿ ನಕಾರದ್ವಯೇನ ಪ್ರಕೃತದ್ವಯಪ್ರತಿಷೇಧೇ ಯದನ್ಯತ್ ಪ್ರಕೃತಾತ್ ಪ್ರತಿಷಿದ್ಧದ್ವಯಾತ್ ಬ್ರಹ್ಮ ತನ್ನ ನಿರ್ದಿಷ್ಟಮ್, ಕೀದೃಶಂ ನು ಖಲು ? ಇತ್ಯಾಶಙ್ಕಾ ನ ನಿವರ್ತಿಷ್ಯತೇ । ತಥಾ ಚ ಅನರ್ಥಕಶ್ಚ ಸ ನಿರ್ದೇಶಃ। ಪುರುಷಸ್ಯ ವಿವಿದಿಷಾಯಾಃ ಅನಿವರ್ತಕತ್ವಾತ್ । "ಬ್ರಹ್ಮ ಜ್ಞಪಯಿಷ್ಯಾಮಿ" ಇತಿ ಚ ವಾಕ್ಯಮ್ ಅಪರಿಸಮಾಪ್ತಾರ್ಥಂ ಸ್ಯಾತ್। ಯದಾ ತು ಸರ್ವದಿಕ್ಕಾಲಾದಿವಿವಿದಿಷಾ ನಿವರ್ತಿತಾ ಸ್ಯಾತ್ ಸರ್ವೋಪಾಧಿನಿರಾಕರಣ ದ್ವಾರೇಣ ತದಾ ಸೈನ್ಧವಘನವದೇಕರಸಂ ಪ್ರಜ್ಞಾನಘನಮ್ ಅನನ್ತರಮಬಾಹ್ಯಂ ಸತ್ಯಸ್ಯ ಸತ್ಯಮ್ ಅಹಂ ಬ್ರಹ್ಮಾಸ್ಮೀತಿ ಸರ್ವತೋ ನಿವರ್ತತೇ ವಿವಿದಿಷಾ ಆತ್ಮನ್ಯೇವ ಅವಸ್ಥಿತಾ ಪ್ರಜ್ಞಾ ಭವತಿ। ತಸ್ಮಾತ್ ವೀಪ್ಸಾರ್ಥಂ ನೇತಿನೇತೀತಿ ನಕಾರದ್ವಯಮ್ ॥

(ಭಾಷ್ಯಾರ್ಥ)

ಈ ಎರಡು ನಕಾರಗಳು ವೀಪ್ಸೆಯಿಂದ (ಸರ್ವವಿಷಯಗಳನ್ನೂ) ವ್ಯಾಪಿಸುವದಕ್ಕಾಗಿ (ಪ್ರಯುಕ್ತವಾಗಿದೆ. ಇದರ ವಿವರ) : ಯಾವಯಾವದು (ಬ್ರಹ್ಮಧರ್ಮವೆಂದು) ಒದಗುತ್ತದೆಯೋ ಅದನ್ನು (ಇವುಗಳಿಂದ ಅಲ್ಲಗಳೆಯುತ್ತದೆ). ಮತ್ತು ಹಾಗಾದರೇ ಬ್ರಹ್ಮವನ್ನು (ಸರಿಯಾಗಿ) ತಿಳಿಸಿಕೊಟ್ಟಂತೆ ಆಗಲಿಲ್ಲ ಎಂಬ ಆಶಂಕೆಯನ್ನು ಪರಿಹಾರಮಾಡಿದಂತೆ ಆಗುತ್ತದೆ; ಏಕೆಂದರೆ ಹಾಗಲ್ಲದಿದ್ದರೆ ಎರಡು ನಕಾರಗಳಿಂದ ಪ್ರಕೃತವಾಗಿರುವ ಎರಡನ್ನೂ ಅಲ್ಲಗಳೆದರೆ ಪ್ರಕೃತವಾಗಿ ನಿಷಿದ್ಧವಾಗಿರುವ (ಈ) ಎರಡಕ್ಕಿಂತ ಬೇರೆಯಾಗಿರುವದಲ್ಲ, ಆ ಬ್ರಹ್ಮವನ್ನು ತಿಳಿಸಿದಂತೆ ಆಗುವದಿಲ್ಲ[1] ! '(ಅದು) ಎಂಥದ್ದೊ !' ಎಂಬ ಆಶಂಕೆಯು ಹೋಗುವದೇ ಇಲ್ಲ. ಆದ್ದರಿಂದ ಆ ನಿರ್ದೇಶವು ವ್ಯರ್ಥವಾಗುವದು; ಏಕೆಂದರೆ (ಅದು) ಪುರುಷನ ಜಿಜ್ಞಾಸೆಯನ್ನು ತೊಲಗಿಸಿದಂತೆ ಆಗುವದಿಲ್ಲ[2]. "ಬ್ರಹ್ಮವನ್ನು ವಿಜ್ಞಾಪಿಸಿಕೊಳ್ಳುವೆನು" (೨-೧-೧೫) ಎಂಬ (ಪ್ರತಿಜ್ಞಾ)ವಾಕ್ಯದ ಅರ್ಥವು ಮುಗಿಯಿತೆಂದೂ ಆಗುವದಿಲ್ಲ[3]. ಆದರೆ ಯಾವ

1. ಇದಲ್ಲ, ಇದಲ್ಲ –ಎಂದರೆ ಮೂರ್ತವಲ್ಲ, ಅಮೂರ್ತವಲ್ಲ –ಎಂದಿಷ್ಟೇ ಅರ್ಥ ಮಾಡಿಟ್ಟುಕೊಂಡರೆ ಇವುಗಳಿಗಿಂತ ಬೇರೆ ಎಂದು ಹೇಳಿದಂತಾಗುವದೇ ಹೊರತು ಅದು ಎಂಥದ್ದು ? ಎಂಬುದನ್ನು ಹೇಳಿದಂತೆ ಆಗುವದಿಲ್ಲ; ರೂಪಿಯಾದ ಬ್ರಹ್ಮವು ರೂಪಗಳಿಗಿಂತ ಬೇರೆ ಎಂಬುದು ತಾನೇ ಸಿದ್ಧವಾಗಿರುವದರಿಂದ ಅದನ್ನೇ ಹೇಳುವ ವಾಕ್ಯವು ಅನುವಾದವೂ ಆಗುವವೆಂದು ತಿಳಿಯಬೇಕು. ಮಾಂಡೂಕ್ಯಭಾಷ್ಯ ೭, ಭಾ.ಭಾ. ೩೮ನ್ನು ನೋಡಿ. ವೀಪ್ಸಾರ್ಥದ ವಿಷಯಕ್ಕೆ ಸೂ.ಭಾ. ೩-೨-೨೨, ಭಾ.ಭಾ. ೨೯೬ನ್ನು ನೋಡಿ.

2. ಪ್ರಮಾಣದ ಫಲವು ಜಿಜ್ಞಾಸಾಪರಿಸಮಾಪ್ತಿ, ವಿಷಯವು ತಿಳಿಯಿತೆಂಬ ತೃಪ್ತಿ ; ಮೂರ್ತಾಮೂರ್ತಗಳಲ್ಲ ಎಂದಿಷ್ಟೇ ಅರ್ಥವಾದರೆ ಜಿಜ್ಞಾಸಾಪರಿಸಮಾಪ್ತಿಯಾಗಲಾರದು.

3. ಅಜಾತಶತ್ರುವೂ ಬಾಲಾಕಿಯಂತೆಯೇ ಪರಿಚ್ಛಿನ್ನವಾದದ್ದನ್ನೇ ಹೇಳಿದನು, ಅಥವಾ ತಾನು ಪ್ರತಿಜ್ಞೆಮಾಡಿದ್ದನ್ನು ತಿಳಿಸಲೇ ಇಲ್ಲ ಎಂದಾಗುವದು ಎಂಬರ್ಥ.

(ಪಕ್ಷ)ದಲ್ಲಿ ಎಲ್ಲಾ ಉಪಾಧಿಗಳನ್ನೂ ತಳ್ಳಿಹಾಕುವ ಮೂಲಕ ದಿಕ್ಕು, ಕಾಲ- ಮುಂತಾದ ಎಲ್ಲಾ (ವಿಷಯದ) ಜಿಜ್ಞಾಸೆಯನ್ನೂ ತೊಲಗಿಸಿದಂತಾಗುವದೋ, ಆಗ "ಉಪ್ಪಿನ ಹರಳಿನಂತೆ ಏಕರಸವಾದ ಪ್ರಜ್ಞಾನಘನವೂ ಅನಂತರವೂ ಅಬಾಹ್ಯವೂ ಸತ್ಯದ ಸತ್ಯವೂ ಆಗಿರುವ ಬ್ರಹ್ಮವೇ ನಾನಾಗಿರುವೆನು" ಎಂದು ಎಲ್ಲಾ (ವಿಷಯದ) ಜಿಜ್ಞಾಸೆಯೂ ತೊಲಗುತ್ತದೆ, ಪ್ರಜ್ಞೆಯು ಆತ್ಮನಲ್ಲಿಯೇ ನೆಲೆಸಿಲ್ಲುತ್ತದೆ. ಆದ್ದರಿಂದ ನೇತಿನೇತಿ ಎಂಬ ನಕಾರದ್ವಯವನ್ನು ವೀಪ್ಸಾರ್ಥ ವಾಗಿಯೇ (ಪ್ರಯೋಗಿಸಿದೆ ಎಂದು ನಿಶ್ಚಯವಾಯಿತು).

## ನೇತಿ ನೇತಿ ಎಂಬುದೇ ಬ್ರಹ್ಮದ ಉತ್ತಮನಿರ್ದೇಶ

(ಭಾಷ್ಯ)

೩೫೦. ನನು ಮಹತಾ ಯತ್ನೇನ ಪರಿಕರಬನ್ಧಂ ಕೃತ್ವಾ ಕಿಂ ಯುಕ್ತ ಮೇವಂ[2] ನಿರ್ದೇಷ್ಟುಂ ಬ್ರಹ್ಮ ? ಬಾಢಮ್ । ಕಸ್ಮಾತ್ ? ನ ಹಿ ಯಸ್ಮಾತ್ ಇತಿ ನ ಇತಿ ನ ಇತ್ಯೇತಸ್ಮಾತ್ ಇತಿ ಇತಿ ವ್ಯಾಪ್ತವ್ಯಪ್ರಕಾರಾಃ ನಕಾರದ್ವಯ ವಿಷಯಾ ನಿರ್ದಿಶ್ಯನ್ತೇ । ಯಥಾ ಗ್ರಾಮೋ ಗ್ರಾಮೋ ರಮಣೀಯಃ ಇತಿ । ಅನ್ಯತ್ ಪರಂ ನಿರ್ದೇಶನಂ ನಾಸ್ತಿ । ತಸ್ಮಾತ್ ಅಯಮೇವ ನಿರ್ದೇಶೋ ಬ್ರಹ್ಮಣಃ । ಯದುಕ್ತಂ "ತಸ್ಯೋಪನಿಷತ್ ಸತ್ಯಸ್ಯ ಸತ್ಯಮ್[3]" (೨-೧-೨೦) ಇತಿ ಏವಂಪ್ರಕಾರೇಣ ಸತ್ಯಸ್ಯ ಸತ್ಯಂ ತತ್ ಪರಂ ಬ್ರಹ್ಮ । ಅತೋ ಯುಕ್ತ ಮುಕ್ತಮ್ ನಾಮಧೇಯಂ ಬ್ರಹ್ಮಣಃ । ನಾಮ್ನೈವ ನಾಮಧೇಯಮ್ । ಕಿಂ ತತ್ ಸತ್ಯಸ್ಯ ಸತ್ಯಂ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮಿತಿ ॥

(ಭಾಷ್ಯಾರ್ಥ)

(ಆಕ್ಷೇಪ) : ಬಹಳ ಯತ್ನದಿಂದ ಸೊಂಟವನ್ನು ಕಟ್ಟಿಕೊಂಡು ಬ್ರಹ್ಮ ವನ್ನು ಹೀಗೆ ತಿಳಿಸಿದ್ದು ಯುಕ್ತವೆ ?

(ಪರಿಹಾರ) :- ಹೌದು. ಏಕೆ ? (ಹಿ = ಯಸ್ಮಾತ್) ಏಕೆಂದರೆ ಇತಿ ನ ಇತಿ ನ ಎಂಬಿದಕ್ಕಿಂತ- ಎಂದು ಇತಿ (ಶಬ್ದದಿಂದ) ವ್ಯಾಪ್ತವ್ಯವಾದ ಪ್ರಕಾರ ಗಳಾಗಿರುವ ನಕಾರದ್ವಯದ ವಿಷಯಗಳನ್ನು ಹೇಳಿರುತ್ತದೆ. ಉದಾಹರಣೆಗೆ 'ಹಳ್ಳಿ ಹಳ್ಳಿಯೂ ರಮಣೀಯ(ವಾಗಿದೆ)' ಎನ್ನುವರಲ್ಲ, (ಹಾಗೇಯೇ

---

1. ಇಲ್ಲಿಂದ ಮುಂದಕ್ಕೆ ೨-೪-೧೨, ೨-೫-೧೯ –ಈ ಶ್ರುತಿಗಳ ಅರ್ಥವನ್ನು ತಿಳಿಸಿದೆ. ಇದರಿಂದ ಬ್ರಹ್ಮವಿಜ್ಞಾನದ ಸ್ವರೂಪವೇನೆಂಬುದು ಗೊತ್ತಾಗುತ್ತದೆ.

2. 'ಏವ' ಎಂಬ ಪಾಠಕ್ಕಿಂತ ಇದು ಮೇಲು.

3. ಇತಿ ಎಂಬ ಮಾತೊಂದು ಇಲ್ಲಿ ಬೇಕು ; ಅಥವಾ ಮುಂದಿನ ಇತಿಯನ್ನು ಮಧ್ಯಮಣಿನ್ಯಾಯದಿಂದ ಇದಕ್ಕೂ ಜೋಡಿಸಿಕೊಳ್ಳಬೇಕು.

ಇದು)[1] –ಬೇರೆಯ ಮತ್ತೊಂದು ತಿಳಿಸುವ (ಪ್ರಕಾರವು) ಇರುವದಿಲ್ಲ, ಆದ್ದರಿಂದ ಇದೇ ಬ್ರಹ್ಮದ ನಿರ್ದೇಶ(ಪ್ರಕಾರವು)[2]

'ಅವನ ಉಪನಿಷತ್ತು ಸತ್ಯದ ಸತ್ಯವೆಂಬುದು' (೨-೧-೨೦)ರಲ್ಲಿ ಹೇಳಿತ್ತಷ್ಟೆ, ಆ ಪರಬ್ರಹ್ಮವು ಈ ಪ್ರಕಾರದಿಂದ ಸತ್ಯದ ಸತ್ಯವು[3]. ಆದ್ದರಿಂದ[4] ಬ್ರಹ್ಮಕ್ಕೆ (ಹಿಂದೆ) ಹೇಳಿದ ನಾಮಧೇಯವು ಯುಕ್ತವಾಗಿದೆ. ನಾಮವೇ ನಾಮಧೇಯವು (ಎಂದು ನಾಮಧೇಯಶಬ್ದದಲ್ಲಿ ಸ್ವಾರ್ಥದಲ್ಲಿ ಧೇಯಪ್ರತ್ಯಯವು ಬಂದಿದೆ). ಆ (ನಾಮಧೇಯವು) ಯಾವದು ? 'ಸತ್ಯದ ಸತ್ಯವು' (ಎಂಬುದು). ಪ್ರಾಣಗಳೇ ಸತ್ಯ, ಇವನು ಅವುಗಳಿಗೂ ಸತ್ಯವು[5].

---

1. ಹಳ್ಳಿಹಳ್ಳಿ ಎಂಬುದು ಎಲ್ಲಾ ಹಳ್ಳಿಗಳನ್ನೂ ವ್ಯಾಪಿಸುವಂತೆ ನಕಾರದ್ವಯಕ್ಕೆ ಇತಿ ಇತಿ ಎಂಬ ಎರಡು ಮಾತುಗಳಿಂದ ಎಲ್ಲಾ ಪ್ರಕಾರಗಳನ್ನೂ ವಿಷಯವಾಗಿ ಹೇಳಿದೆ ಎಂದರ್ಥ. ಇತಿ ನೇತ್ಯೇತಸ್ಮಾತ್ ಎಂದೇ ಮೂಲದಲ್ಲಿದೆ, ಭಾಷ್ಯಕಾರರು ಇದನ್ನು ಇತಿ ನ ಇತಿ ನ ಇತ್ಯೇತಸ್ಮಾತ್ ಎಂದು ವಿವರಿಸಿದ್ದಾರೆಂದು ಕಾಣುತ್ತದೆ. ಗ್ರಾಮ ದೃಷ್ಟಾಂತವು ಎರಡು ಇತಿ ನ ಇದ್ದರೇ ಹೆಚ್ಚು ಹೊಂದಿಗೆಯಾಗುತ್ತದೆ. ಸೂ.ಭಾ. ೩-೨-೨೨ (ಭಾ.ಭಾ. ೨೯೭)ನ್ನು ನೋಡಿ.

2. ಇತಿ ನ ಇತಿ ನ – ಎಂದು ಬ್ರಹ್ಮದಲ್ಲಿ ಕಲ್ಪಿತವಾಗಿರುವ ವಿಶೇಷಗಳನ್ನು ನಿಷೇಧ ಮಾಡುವದಕ್ಕಿಂತ ಬೇರೆಯಾಗಿ ಬ್ರಹ್ಮಸ್ವರೂಪವನ್ನು ತಿಳಿಸುವದಕ್ಕೆ ಉಪಾಯವಿಲ್ಲ; ಏಕೆಂದರೆ ಬ್ರಹ್ಮವು ಇಂಥದ್ದೆಂದು ತಿಳಿಸುವದಕ್ಕೆ ಅದರಲ್ಲಿ ಯಾವ ವಿಶೇಷವೂ ಇರುವದೇ ಇಲ್ಲ ; ಆದ್ದರಿಂದ ಇದೇ ನಿರ್ದೇಶಪ್ರಕಾರವು.

3. ಸತ್ಯಶಬ್ದವಾಚ್ಯವಾದದ್ದು ಇದರಲ್ಲಿ ಕಲ್ಪಿತವಾಗಿರುವದರಿಂದ ಬ್ರಹ್ಮವು ಸತ್ಯದ ಸತ್ಯವು.

4. ಉಪನಿಷತ್ತಿನಲ್ಲಿರುವ ಅಥ ಎಂಬ ಶಬ್ದಕ್ಕೇ ಅತಃ (ಆದ್ದರಿಂದ) ಎಂಬರ್ಥವನ್ನು ಮಾಡಿ ಹಿಂದೇ ೨-೧-೨೦ ರಲ್ಲಿ ತಸ್ಯೋಪನಿಷತ್ ಎಂದು ಹೇಳಿದ್ದನ್ನು ಇಲ್ಲಿ ನಾಮಧೇಯಮ್ ಎಂದು ಉಪಸಂಹಾರಮಾಡಿದೆ ; ಉಪಕ್ರಮೋಪಸಂಹಾರಗಳಿಗೆ ಏಕವಾಕ್ಯತೆಯನ್ನು ಮಾಡಿರುತ್ತದೆ.

5. ಇಲ್ಲಿ ನಾಮರೂಪಗಳಿಲ್ಲದ ಬ್ರಹ್ಮಕ್ಕೆ ನಾಮವನ್ನು ಹೇಳಿದಂತಾಯಿತೆಂದು ಶಂಕಿಸಬಾರದು ; ಏಕೆಂದರೆ ಸತ್ಯಸ್ಯ ಸತ್ಯಮ್ ಎಂಬುದು ಕಲ್ಪಿತವಾದದ್ದರ ನಿಷೇಧವನ್ನೇ ತಿಳಿಸುತ್ತದೆ.

# ಮೂರನೆಯ ಬ್ರಾಹ್ಮಣದ ಸಾರ

ಹಿಂದಿನ ಬ್ರಾಹ್ಮಣದಲ್ಲಿ ಪ್ರಾಣಗಳು ಯಾವವು? ಎಂಬುದನ್ನು ತಿಳಿಸಿದ್ದಾಯಿತು. ಈ ಬ್ರಾಹ್ಮಣದಲ್ಲಿ ಪ್ರಾಣಗಳ ಸ್ವರೂಪವು ಯಾವದು? ಅವುಗಳು ಸತ್ಯವೆಂಬುದು ಹೇಗೆ? ಎಂಬುದನ್ನು ತಿಳಿಸಿ ಪರಮಾತ್ಮನು ಸತ್ಯದ ಸತ್ಯವು ಹೇಗೆಂಬುದನ್ನೂ ತಿಳಿಸಲಾಗುವದು.

೧-೨. ಬ್ರಹ್ಮವು ತಾನುತಾನು ನಿರ್ವಿಶೇಷವಾಗಿರುತ್ತಿದ್ದರೂ ಕಾರ್ಯಕರಣಗಳ ರೂಪವಾಗಿರುವ ಪಂಚಭೂತಗಳ ಸಂಬಂಧದಿಂದ ಸವಿಶೇಷವಾಗಿರುತ್ತದೆ. ಈ ಬ್ರಹ್ಮಕ್ಕೆ ಮೂರ್ತ, ಅಮೂರ್ತ -ಎಂಬ ಎರಡು ರೂಪಗಳುಂಟು. ಇವುಗಳಲ್ಲಿ ಮೂರ್ತದ ಸ್ವರೂಪ ವೇನೆಂದರೆ ಅದು ಮರ್ತ್ಯವು, ಸ್ಥಿತವು (ಪರಿಚ್ಛಿನ್ನವಾದದ್ದು), ಸತ್ತು (ಅಸಾಧಾರಣರೂಪ ವುಳ್ಳದ್ದು). ವಾಯು, ಆಕಾಶ - ಈ ಎರಡನ್ನು ಬಿಟ್ಟರೆ ಮಿಕ್ಕ ಮೂರು ಭೂತಗಳೂ ಮೂರ್ತವು. ಈ ಮೂರು ಭೂತಗಳ ಸಾರವೇ, ಆಧಿದೈವಿಕಕಾರ್ಯದ ರಸವೇ, ಸೂರ್ಯ ಮಂಡಲವು.

೩. ಇನ್ನುಳಿದ ವಾಯ್ವಾಕಾಶಗಳೆಂಬ ಭೂತಗಳೆರಡೂ ಅಮೂರ್ತವು. ಅಮೂರ್ತದ ಸ್ವರೂಪವೇನೆಂದರೆ ಅದು ಅಮೃತವು, ಯತ್ತು (ವ್ಯಾಪಿ, ಪರಿಚ್ಛಿನ್ನವಲ್ಲ), ತ್ಯತ್ತು (ಪರೋಕ್ಷ ವಾಗಿ ಅದು ಎಂದು ಹೇಳಿಸಿಕೊಳ್ಳತಕ್ಕದ್ದು). ಈ ಎರಡು ಭೂತಗಳ ಸಾರವೇ ಆಧಿದೈವಿಕ ಕರಣವಾದ, ಸೂರ್ಯಮಂಡಲದಲ್ಲಿರುವ, ಹಿರಣ್ಯಗರ್ಭನ ಲಿಂಗಶರೀರವೆಂಬ ಪುರುಷನು.

೪-೬. ಆಧಿದೈವಿಕವಾಗಿ ಮೂರ್ತಾಮೂರ್ತಗಳ ರಸಗಳನ್ನು ಅರಿತುಕೊಂಡಂತೆಯೇ ಆಧ್ಯಾತ್ಮಿಕರಸಗಳನ್ನೂ ಅರಿತುಕೊಳ್ಳಬೇಕು. ಹೇಗೆಂದರೆ ಶರೀರದಲ್ಲಿರುವ ಆಕಾಶ, ಪ್ರಾಣ- ಈ ಎರಡನ್ನುಳಿದು ಮಿಕ್ಕಭಾಗವೆಲ್ಲ ಮರ್ತ್ಯವೂ ಸ್ಥಿತವೂ ಸತ್ತೂ ಆದ ಮೂರ್ತವು; ಚಕ್ಷುಸ್ಸೇ ಅದರ ರಸವು. ಶರೀರಸ್ಥಾಕಾಶ ಮತ್ತು ಪ್ರಾಣ- ಈ ಎರಡೂ ಅಮೃತವೂ ತ್ಯತ್ತೂ ಆಗಿರುವ ಅಮೂರ್ತವು; ಬಲಗಣ್ಣಿನಲ್ಲಿ ವಿಶೇಷವಾಗಿರುತ್ತದೆ ಎಂದು ಶಾಸ್ತ್ರ ಪ್ರಸಿದ್ಧವಾದ ಕರಣಾತ್ಮಕಲಿಂಗವು ಅದರ ರಸವು. ಮೂರ್ತಾಮೂರ್ತವಾಸನೆಗಳಿಗೂ ವಿಜ್ಞಾನಮಯನಿಗೂ ಆದ ಸಂಬಂಧದಿಂದ ಈ ಕರಣಾತ್ಮಕಲಿಂಗಕ್ಕೆ ಬಗೆಬಗೆಯ ವಾಸನಾ ಮಯರೂಪಗಳುಂಟಾಗುವವು. ಅರಿಶಿನವನ್ನು ಬಳಿದ ಬಟ್ಟೆಯಂತೆ ವಿಷಯಗಳಲ್ಲಿ ರಕ್ತ ವಾಗಿರುವ ರೂಪವೊಂದು, ಬಿಳಿಯ ಧಾವಳಿಯಂತೆ ಶುಭ್ರವಾದ ರೂಪವೊಂದು, ಕೆಂಜೀರುಂ ಬೆ (ಜೀರುಂಡೆ)ಯಂತೆ ವಿಷಯರಾಗವು ಪ್ರಚುರವಾಗಿರುವ ರೂಪವೊಂದು, ಹರಡುಮಿಂಚಿ ನಂತೆ ಅತ್ಯಂತಪ್ರಕಾಶಮಯವಾಗಿರುವ ರೂಪವೊಂದು-ಹೀಗೆಲ್ಲ ಇರುವ ವಾಸನಾರೂಪಗಳು ಲೆಕ್ಕವಿಲ್ಲದಷ್ಟಿರುವವು.

೬. ಇದುವರೆಗೆ ವರ್ಣಿಸಿದ್ದು 'ಪ್ರಾಣಗಳು ಸತ್ಯವು' ಎಂದು (೨-೧-೨೦ರಲ್ಲಿ) ಹೇಳಿದ ಸತ್ಯದ ವರ್ಣನೆಯು. ಇನ್ನು ಸತ್ಯದ ಸತ್ಯವಾಗಿರುವ ಮೂರ್ತಾಮೂರ್ತತದ್ವಾಸನಾ ವಿವರ್ಜಿತವಾದ ಆತ್ಮನು ಶುದ್ಧಸ್ವರೂಪವನ್ನು ತಿಳಿಸಬೇಕಷ್ಟೆ. ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ನಿಷೇಧದಿಂದಲೇ ಅದನ್ನು ತಿಳಿಸಬೇಕಾಗಿದೆ. ಇದಕ್ಕಿಂತ ಅದನ್ನು ತಿಳಿಸುವ ಬೇರೊಂದು ಉತ್ತಮಪ್ರಕಾರವಿಲ್ಲ. ಈ ರೀತಿಯಲ್ಲಿ ನಾಮರೂಪಾತ್ಮಕಪ್ರಾಣ ಗಳು ಸತ್ಯವಾಗಿರುತ್ತವೆ, ಅವುಗಳ ತಿರುಳಾದ ಸತ್ಯವೇ ಈ ಪರಮಾತ್ಮತತ್ತ್ವವು. ಆದ್ದ ರಿಂದ ಅದಕ್ಕೆ 'ಸತ್ಯದ ಸತ್ಯ' ಎಂಬ ರಹಸ್ಯವಾದ ಹೆಸರು ಒಪ್ಪುತ್ತದೆ.

---

# ಎರಡನೆಯ ಅಧ್ಯಾಯ- ನಾಲ್ಕನೆಯ ಬ್ರಾಹ್ಮಣ

## (ಸಂನ್ಯಾಸಾಂಗಸಹಿತವಾದ ಆತ್ಮಜ್ಞಾನ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೩೫೧. ಆತ್ಮೇತ್ಯೇವೋಪಾಸೀತ.....ತದೇವೈತತ್ಸರ್ವಸ್ಮಿನ್[1] ಪದನೀಯಮ್ ಆತ್ಮತತ್ತ್ವಮ್, (೧-೪-೭) ಯಸ್ಮಾತ್ ಪ್ರೇಯಃ ಪುತ್ರಾದೇಃ (೧-೪-೮) ಇತ್ಯುಪನ್ಯಸ್ತಸ್ಯ ವಾಕ್ಯಸ್ಯ ವ್ಯಾಖ್ಯಾನವಿಷಯೇ ಸಂಬನ್ಧಪ್ರಯೋಜನೇ ಅಭಿಹಿತೇ 'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ ತತ್ಸರ್ವಮಭವತ್' (೧-೪-೧೦)। ಏವಂ ಪ್ರತ್ಯಗಾತ್ಮಾ ಬ್ರಹ್ಮವಿದ್ಯಾಯಾ ವಿಷಯಃ ಇತ್ಯೇತದುಪನ್ಯಸ್ತಮ್। ಅವಿದ್ಯಾಯಾಶ್ಚ ವಿಷಯಃ 'ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ' (೧-೪-೧೦) ಇತ್ಯಾರಭ್ಯ ಚಾತುರ್ವರ್ಣ್ಯಪ್ರವಿಭಾಗಾದಿನಿಮಿತ್ತಪಾಙ್ಕ್ತಕರ್ಮಸಾಧ್ಯಸಾಧನಲಕ್ಷಣೋ ಬೀಜಾಙ್ಕುರವತ್ ವ್ಯಾಕೃತಾವ್ಯಾಕೃತಸ್ವಭಾವಃ, ನಾಮರೂಪಕರ್ಮಾತ್ಮಕಃ ಸಂಸಾರಃ 'ತ್ರಯಂ ವಾ ಇದಂ ನಾಮ ರೂಪಂ ಕರ್ಮ' (೧-೬-೧) ಇತ್ಯುಪಸಂಹೃತಃ। ಶಾಸ್ತ್ರೀಯ ಉತ್ಕರ್ಷಲಕ್ಷಣೋ ಬ್ರಹ್ಮಲೋಕಾನ್ತಃ। ಅಧೋಭಾವಶ್ಚ ಸ್ಥಾವರಾನ್ತೋಽಶಾಸ್ತ್ರೀಯಃ ಪೂರ್ವಮೇವ ಪ್ರದರ್ಶಿತಃ 'ದ್ವಯಾ ಹ' (೧-೩-೧) ಇತ್ಯಾದಿನಾ। ಏತಸ್ಮಾತ್ ಅವಿದ್ಯಾವಿಷಯಾತ್ ವಿರಕ್ತಸ್ಯ ಪ್ರತ್ಯಗಾತ್ಮವಿಷಯಬ್ರಹ್ಮವಿದ್ಯಾಯಾಮ್ ಅಧಿಕಾರಃ ಕಥಂ ನಾಮ ಸ್ಯಾತ್ ಇತಿ ತೃತೀಯೋಽಧ್ಯಾಯೋ ಉಪಸಂಹೃತಃ ಸಮಸ್ತೋಽವಿದ್ಯಾವಿಷಯಃ। ಚತುರ್ಥೇ ತು ಬ್ರಹ್ಮವಿದ್ಯಾವಿಷಯಂ ಪ್ರತ್ಯಗಾತ್ಮಾನಂ "ಬ್ರಹ್ಮ ತೇ ಬ್ರವಾಣಿ" (೨-೧-೧) ಇತಿ, "ಬ್ರಹ್ಮ ಜ್ಞಪಯಿಷ್ಯಾಮಿ" (೨-೧-೧) ಇತಿ ಚ ಪ್ರಸ್ತುತ್ಯ ತದ್ಬ್ರಹ್ಮ ಏಕಮ್ ಅದ್ವಯಂ ಸರ್ವವಿಶೇಷಶೂನ್ಯಂ ಕ್ರಿಯಾಕಾರಕಫಲಸ್ವಭಾವಸತ್ಯಶಬ್ದವಾಚ್ಯಾಶೇಷಭೂತಧರ್ಮಪ್ರತಿಷೇಧದ್ವಾರೇಣ ನೇತಿನೇತೀತಿ (೨-೩-೬) ಜ್ಞಾಪಿತಮ್। ಅಸ್ಯಾ ಬ್ರಹ್ಮವಿದ್ಯಾಯಾ ಅಙ್ಗತ್ವೇನ ಸಂನ್ಯಾಸೋ ವಿಧಿತ್ಸಿತಃ। ಜಾಯಾಪುತ್ರವಿತ್ತಾದಿಲಕ್ಷಣಂ ಪಾಙ್ಕ್ತಂ ಕರ್ಮ ಅವಿದ್ಯಾವಿಷಯಂ ಯಸ್ಮಾತ್ ನಾತ್ಮಪ್ರಾಪ್ತಿಸಾಧನಮ್। ಅನ್ಯಸಾಧನಂ ಹಿ ಅನ್ಯಸ್ಮೈ ಫಲಸಾಧನಾಯ ಪ್ರಯುಜ್ಯಮಾನಂ ಪ್ರತಿಕೂಲಂ ಭವತಿ। ನ ಹಿ ಬುಭುಕ್ಷಾಪಿಪಾಸಾನಿವೃತ್ತ್ಯರ್ಥಂ ಧಾವನಂ ಗಮನಂ ವಾ ಸಾಧನಮ್। ಮನುಷ್ಯಲೋಕಪಿತೃಲೋಕದೇವಲೋಕಸಾಧನತ್ವೇನ ಹಿ ಪುತ್ರಾದಿಸಾಧನಾನಿ ಶ್ರುತಾನಿ ನಾತ್ಮಪ್ರಾಪ್ತಿಸಾಧನತ್ವೇನ। ವಿಶೇಷಿತತ್ವಾಚ್ಚ। ನ ಚ ಬ್ರಹ್ಮವಿದೋ ವಿಹಿತಾನಿ।

---

1 'ಏತಸ್ಮಿನ್', ಏತಸ್ಮಿನ್ ಸರ್ವಸ್ಮಿನ್' ಎಂಬ ಪಾಠಗಳಿಗಿಂತ ಇದೇ ಮೇಲು.

ಕಾಮ್ಯತ್ವಶ್ರವಣಾತ್ "ಏತಾವಾನ್ ವೈ ಕಾಮಃ" (೧-೪-೧೭) ಇತಿ। ಬ್ರಹ್ಮವಿದಶ್ಚ ಆತ್ಮಕಾಮತ್ವಾತ್ ಆಪ್ತಕಾಮಸ್ಯ[1] ಕಾಮಾನುಪಪತ್ತೇಃ। "ಯೇಷಾಂ ನೋಽಯಮಾತ್ಮಾಯಂ ಲೋಕಃ" (೪-೪-೨೨) ಇತಿ ಚ ಶ್ರುತೇಃ ॥

(ಭಾಷ್ಯಾರ್ಥ)

ಆತ್ಮನೆಂದೇ ಉಪಾಸನೆಮಾಡಬೇಕು.....ಆ ಇದೇ ಎಲ್ಲದರೊಳಗೆ ಪದನೀಯವು (೧-೪-೭), ಏಕೆಂದರೆ (ಅದು) ಪುತ್ರಾದಿಗಳಿಗಿಂತ ಪ್ರಿಯತರವಾದದ್ದು (೧-೪-೮) ಎಂದು ಮುಂದಿಟ್ಟ ವಾಕ್ಯದ ವ್ಯಾಖ್ಯಾನದ ವಿಷಯದಲ್ಲಿ "ಅದು ತನ್ನನ್ನೇ ತಾನು ಬ್ರಹ್ಮವಾಗಿರುವೆನು ಎಂದು ಅರಿತುಕೊಂಡಿತು, ಅದರಿಂದ ಎಲ್ಲವೂ ಆಯಿತು" (೧-೪-೧೦) ಎಂದು **ಸಂಬಂಧಪ್ರಯೋಜನಗಳನ್ನು**[2] ಹೇಳಿದ್ದಾಯಿತು. ಹೀಗೆ ಪ್ರತ್ಯಗಾತ್ಮನೇ ಬ್ರಹ್ಮವಿದ್ಯೆಗೆ ವಿಷಯವು ಎಂದು (ಮೊದಲು) ಹೇಳಿದ್ದಾಯಿತು. ಮತ್ತು ಅವಿದ್ಯೆಯ ವಿಷಯವನ್ನು ಈ (ದೇವತೆ) ಬೇರೆ, ನಾನು ಬೇರೆಯಾಗಿರುವೆನು- ಎಂದು ತಿಳಿಯುವವನು ಅರಿಯನು" (೧-೪-೧೦) ಎಂದು ಪ್ರಾರಂಭಿಸಿ ಚಾತುರ್ವರ್ಣ್ಯದ ವಿಭಾಗವೇ ಮುಂತಾದ ನಿಮಿತ್ತದಿಂದಾಗುವ ಪಾಙ್ಕ್ತಕರ್ಮದ ಸಾಧ್ಯಸಾಧನರೂಪವಾದ ಬೀಜಾಂಕುರಗಳಂತೆ ವ್ಯಾಕೃತಾವ್ಯಾಕೃತಸ್ವಭಾವದ್ದಾಗಿರುವ ನಾಮರೂಪಕರ್ಮಾತ್ಮಕವಾದ ಸಂಸಾರವನ್ನು "ಇದು ನಾಮ, ರೂಪ, ಕರ್ಮ ಎಂಬ ಮೂರೇ" (೧-೬-೧) ಎಂದು ಉಪಸಂಹಾರಮಾಡಿದ್ದಾಯಿತು. ಶಾಸ್ತ್ರೀಯವಾದ ಬ್ರಹ್ಮಲೋಕಾಂತವಾದ ಮೇಲ್ಮೆಯ ರೂಪವಾದ (ಫಲವನ್ನು) "(ಪ್ರಾಜಾಪತ್ಯರು) ಎರಡು ಬಗೆಯವರು" (೧-೩-೧) ಮುಂತಾದ (ಗ್ರಂಥಭಾಗ)ದಿಂದ ಮೊದಲೇ ತೋರಿಸಿಕೊಟ್ಟದ್ದಾಗಿದೆ. ಅವಿದ್ಯಾವಿಷಯವಾದ ಇದರಲ್ಲಿ ವಿರಕ್ತರಾಗಿರುವವರಿಗೆ ಪ್ರತ್ಯಗಾತ್ಮವಿಷಯವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಹೇಗಾದರೂ ಉಂಟಾಗಲಿ ಎಂದು **ಮೂರನೆಯ ಅಧ್ಯಾಯದಲ್ಲಿ,** ಅವಿದ್ಯಾವಿಷಯವನ್ನೆಲ್ಲ ಉಪಸಂಹಾರಮಾಡಿದ್ದಾಯಿತು. **ನಾಲ್ಕನೆಯ (ಅಧ್ಯಾಯದಲ್ಲಿ)**ಯಾದರೋ ಬ್ರಹ್ಮವಿದ್ಯೆಗೆ ವಿಷಯವಾಗಿರುವ ಪ್ರತ್ಯಗಾತ್ಮನನ್ನು "ನಿನಗೆ ಬ್ರಹ್ಮವನ್ನು ಹೇಳಿಕೊಡುವೆನು" (೨-೧-೧) ಎಂದೂ "ಬ್ರಹ್ಮವನ್ನು ವಿಜ್ಞಾಪಿಸಿಕೊಳ್ಳುವೆನು" (೨-೧-೧೫) ಎಂದೂ ಪ್ರಾರಂಭಿಸಿ ಆ ಏಕವೂ ಅದ್ವಯವೂ ಯಾವ ವಿಶೇಷವೂ ಇಲ್ಲದ್ದೂ

---

1. ಆಪ್ತಕಾಮತ್ವಾತ್ ಅಪ್ತಕಾಮಸ್ಯ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಗ್ರಂಥಕ್ಕೆ ಆದಿಯಲ್ಲಿ ಸಂಬಂಧಪ್ರಯೋಜನಗಳನ್ನು ಹೇಳಿದರೆ ಜನರು ಅದರಲ್ಲಿ ಪ್ರವರ್ತಿಸುತ್ತಾರೆ. ಶ್ಲೋ. ವಾ.೧-೧೭. ಇಲ್ಲಿ ನಾನು ಬ್ರಹ್ಮವು ಎಂದು ತಿಳಿದುಕೊಳ್ಳುವದು ಸಾಧನವು, ಸರ್ವಾತ್ಮಭಾವವೆಂಬ ಪ್ರಯೋಜನವೇ ಸಾಧ್ಯವು- ಎಂಬುದು ಸಂಬಂಧವು.

ಆದ ಆ ಬ್ರಹ್ಮವನ್ನು ಕ್ರಿಯಾಕಾರಕಫಲಗಳ ಸ್ವಭಾವದ ಸತ್ಯಶಬ್ದವಾಚ್ಯವಾದ ಎಲ್ಲಾ ಭೂತಗಳ ಧರ್ಮವನ್ನೂ ಅಲ್ಲಗಳೆಯುವ ಮೂಲಕ "ಹೀಗಲ್ಲ, ಹೀಗಲ್ಲ" (೨-೩-೬) ಎಂದು ತಿಳಿಸಿಕೊಟ್ಟದ್ದಾಯಿತು.

ಈ ಬ್ರಹ್ಮವಿದ್ಯೆಗೆ ಅಂಗವಾಗಿ ಸಂನ್ಯಾಸವನ್ನು ವಿಧಿಸಬೇಕಾಗಿದೆ. ಏಕೆಂದರೆ ಜಾಯಾಪುತ್ರವಿತ್ತಗಳೇ ಮುಂತಾದ ರೂಪದ ಅವಿದ್ಯಾವಿಷಯವಾದ ಪಾಙ್ಕ್ತಕರ್ಮವು ಆತ್ಮಪ್ರಾಪ್ತಿಗೆ ಸಾಧನವಲ್ಲ.[1] ಒಂದಕ್ಕೆ ಸಾಧನವಾಗಿರುವದನ್ನು ಮತ್ತೊಂದು ಫಲವನ್ನು ಸಾಧಿಸಿಕೊಳ್ಳುವದಕ್ಕೆ ಉಪಯೋಗಿಸಿದರೆ ಪ್ರತಿಕೂಲವಾಗುತ್ತದೆಯಲ್ಲವೆ ? ಹಸಿವು, ಬಾಯಾರಿಕೆ -ಇವುಗಳನ್ನು ತೊಲಗಿಸಿಕೊಳ್ಳುವದಕ್ಕೆ ಓಡುವದಾಗಲಿ ನಡೆಯುವದಾಗಲಿ ಸಾಧನವಲ್ಲವಷ್ಟೆ ? ಮನುಷ್ಯಲೋಕ, ಪಿತೃಲೋಕ, ದೇವಲೋಕ -ಇವುಗಳಿಗೆ ಸಾಧನವಾಗಿಯಲ್ಲವೆ, ಪುತ್ರಾದಿಸಾಧನಗಳನ್ನು ಶ್ರುತಿಯಲ್ಲಿ ಹೇಳಿದೆ ? ಆತ್ಮಪ್ರಾಪ್ತಿಗೆ ಸಾಧನವೆಂದು (ಅವನ್ನು) ಹೇಳಿರುವದಿಲ್ಲ. (ಕಾಮ)ವಿಶೇಷಣವನ್ನು ಕೊಟ್ಟು ಹೇಳಿರುವದರಿಂದಲೂ[2] (ಇವು ಆತ್ಮಪ್ರಾಪ್ತಿಗೆ ಸಾಧನವಲ್ಲ). "ಇಷ್ಟೇ ಕಾಮವು" (೧-೪-೧೭) ಎಂದು ಕಾಮ್ಯತ್ವವನ್ನು ಶ್ರುತಿಯಲ್ಲಿ ಹೇಳಿರುವದರಿಂದ[3] (ಅವನ್ನು) ಬ್ರಹ್ಮಜ್ಞಾನಿಗೆ ವಿಧಿಸಿಲ್ಲ(ವೆಂದೂ ಗೊತ್ತಾಗುತ್ತದೆ). ಬ್ರಹ್ಮಜ್ಞಾನಿಯಾದರೋ ಆತ್ಮಕಾಮನಾಗಿರುವದರಿಂದ ಆಪ್ತಕಾಮನಾಗಿರುವವನಿಂದ[4] (ಅವನಿಗೆ) ಕಾಮವಿರುವದೆಂಬುದು ಹೊಂದುವದಿಲ್ಲವಾದ್ದರಿಂದಲೂ (ಅವನಿಗೆ ವಿಧಿಸಿಲ್ಲವೆನ್ನಬೇಕು). "ಯಾವ ನಮಗೆ ಇವನೇ ಆತ್ಮನೋ, ಇವನೇ ಲೋಕವೋ......" (೪-೪-೨೨) ಎಂದು ಶ್ರುತಿಯಿರುವದರಿಂದಲೂ (ಇದು ಸಿದ್ಧವಾಗುತ್ತದೆ).[5]

## ಜ್ಞಾನಕರ್ಮಸಮುಚ್ಚಯಖಂಡನೆ

(ಭಾಷ್ಯ)

೩೫೨. ಕೇಚಿತ್ತು ಬ್ರಹ್ಮವಿದೋಽಪಿ ಏಷಣಾಸಂಬನ್ಧಂ ವರ್ಣಯನ್ತಿ । ತೈರ್ಬೃಹದಾರಣ್ಯಕಂ ನ ಶ್ರುತಮ್। ಪುತ್ರಾದ್ಯೇಷಣಾನಾಮ್ ಅವಿದ್ವದ್ವಿಷಯ

1. ವೈರಾಗ್ಯದಿಂದ ಸಂನ್ಯಾಸವು ಪ್ರಾಪ್ತವಾಗಬಹುದಾದರೂ ಸಂನ್ಯಾಸವು ಜ್ಞಾನಕ್ಕೆ ಅಂಗವೆಂಬುದನ್ನು ಶಾಸ್ತ್ರವೇ ತಿಳಿಸಿಕೊಡಬೇಕಾಗಿದೆ ಎಂದು ವಾರ್ತಿಕ.

2. ವಿಶೇಷಿತತ್ವಾತ್ ಎಂದು ಚಕಾರರಹಿತಪಾಠವಿದ್ದರೆ ಮನುಷ್ಯಲೋಕವನು ಪುತ್ರನಿಂದಲೇ ಗೆಲ್ಲಬೇಕು ಎಂದು ಮುಂತಾಗಿ ಆಯಾ ಫಲಗಳಿಗೇ ಇವು ಸಾಧನಗಳು, ಇವೇ ಸಾಧನಗಳು -ಎಂದು ವಿಶೇಷವಾಗಿ ಹೇಳಿರುವದರಿಂದ (ಅವು ಆತ್ಮಪ್ರಾಪ್ತಿಗೆ ಸಾಧನವಲ್ಲ)- ಎಂದು ಹಿಂದಿನ ವಾಕ್ಯಕ್ಕೇ ಇದನ್ನು ಸೇರಿಸಿಕೊಳ್ಳಬಹುದಾಗುತ್ತದೆ.

3. ಕಾಮಿಗಳಿಗೇ ಇವನ್ನು ವಿಧಿಸಿದೆ ಎಂದು ಹೇಳಬೇಕಾಗುತ್ತದೆ.

4. 'ಆಪ್ತಕಾಮ ಆತ್ಮಕಾಮಃ' (೪-೪-೬) ಎಂಬ ಶ್ರುತಿಯನ್ನು ಇಲ್ಲಿ ಸೂಚಿಸಿದೆ.

5. ಆತ್ಮನಿಗಿಂತ ವ್ಯತಿರಿಕ್ತವಾದ ಸಾಧ್ಯಲೋಕವಾಗಲಿ, ಸಾಧನವಾದ ಪ್ರಜಾದಿಗಳಾಗಲಿ, ಜ್ಞಾನಿಗೆ ಇಲ್ಲವೆಂದು ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

ತ್ವಮ್, ವಿದ್ಯಾವಿಷಯೇ ಚ "ಯೇಷಾಂ ನೋಽಯಮಾತ್ಮಾಯಂ ಲೋಕಃ" ಇತ್ಯತಃ "ಕಿಂ ಪ್ರಜಯಾ ಕರಿಷ್ಯಾಮಃ" ಇತ್ಯೇಷ ವಿಭಾಗಃ ತೈರ್ನ ಶ್ರುತಃ ಶ್ರುತ್ಯಾ ಕೃತಃ । ಸರ್ವಕ್ರಿಯಾಕಾರಕಫಲೋಪಮರ್ದಸ್ವರೂಪಾಯಾಂ ಚ ವಿದ್ಯಾಯಾಂ ಸತ್ಯಾಂ ಸಹ ಕಾರ್ಯೇಣ ಅವಿದ್ಯಾಯಾ ಅನುಪಪತ್ತಿಲಕ್ಷಣಶ್ಚ ವಿರೋಧಃ ತೈರ್ನ ವಿಜ್ಞಾತಃ । ವ್ಯಾಸವಾಕ್ಯಂ ಚ ತೈರ್ನ ಶ್ರುತಮ್ । ಕರ್ಮವಿದ್ಯಾಸ್ವರೂಪಯೋರ್ವಿದ್ಯಾವಿದ್ಯಾತ್ಮಕಯೋಃ ಪ್ರತಿಕೂಲವರ್ತನಂ ವಿರೋಧಃ "ಯದಿದಂ ವೇದವಚನಂ ಕುರು ಕರ್ಮ ತ್ಯಜೇತಿ ಚ । ಕಾಂ ಗತಿಂ ವಿದ್ಯಯಾ ಯಾನ್ತಿ ಕಾಂ ಚ ಗಚ್ಛನ್ತಿ ಕರ್ಮಣಾ । ಏತದ್ವೈ ಶ್ರೋತುಮಿಚ್ಛಾಮಿ ತದ್ಭವಾನ್ ಪ್ರಬ್ರವೀತು ಮೇ । ಏತಾವನ್ಯೋನ್ಯವೈರೂಪ್ಯೇ ವರ್ತೇತೇ ಪ್ರತಿಕೂಲತಃ ॥" (ಮೋ. ಧ. ೨೪೧-೧.೨) ಇತ್ಯೇವಂ ಪೃಷ್ಟಸ್ಯ ಪ್ರತಿವಚನೇನ "ಕರ್ಮಣಾ ಬಧ್ಯತೇ ಜನ್ತುರ್ವಿದ್ಯಯಾ ಚ ವಿಮುಚ್ಯತೇ । ತಸ್ಮಾತ್ ಕರ್ಮ ನ ಕುರ್ವನ್ತಿ ಯತಯಃ ಪಾರದರ್ಶಿನಃ" (ಮೋ. ಧ. ೨೪೧-೭) ಇತ್ಯೇವಮಾದಿವಿರೋಧಃ ಪ್ರದರ್ಶಿತಃ ॥

(ಭಾಷ್ಯಾರ್ಥ)

ಆದರೆ ಕೆಲವರು[1] ಬ್ರಹ್ಮಜ್ಞಾನಿಗೂ ಏಷಣೆಗಳ ಸಂಬಂಧವನ್ನು ಹೇಳುತ್ತಾರೆ. ಅವರು ಬೃಹದಾರಣ್ಯಕವನ್ನು ಶ್ರವಣಮಾಡಿಲ್ಲ. ಪುತ್ರನೇ ಮುಂತಾದ ಏಷಣೆಗಳು ಅಜ್ಞಾನಿಗಳ ವಿಷಯವೆಂಬುದನ್ನೂ ವಿದ್ಯಾವಿಷಯದಲ್ಲಿ "ಯಾವ ನಮಗೆ ಇವನೇ ಆತ್ಮನೂ ಇವನೇ ಲೋಕವೂ ಆಗಿರುವದರಿಂದ ಪ್ರಜೆಯಿಂದ (ನಾವು) ಏನು ಮಾಡಿಕೊಳ್ಳೋಣ ?" (೪-೪-೨೨ರ ಅರ್ಥ) ಎಂಬೀ ವಿಭಾಗವನ್ನು ಶ್ರುತಿಯು ಮಾಡಿ (ತಿಳಿಸಿರು)ವದನ್ನು ಅವರು ಕಿವಿಗೆ ಹಾಕಿಕೊಂಡಿರುವದಿಲ್ಲ. ಎಲ್ಲಾ ಕ್ರಿಯಾಕಾರಕಫಲಗಳೂ ನಾಶವಾಗುವ ಸ್ವರೂಪದ ವಿದ್ಯೆಯುಂಟಾಗಲು ಅವಿದ್ಯೆಯು (ತನ್ನ) ಕಾರ್ಯದೊಡನೆ ಇರಲಾರದು ಎಂಬ ವಿರೋಧವೂ ಅವರಿಗೆ ಅರಿವಾಗಿರುವದಿಲ್ಲ. ವ್ಯಾಸವಚನವನ್ನು ಅವರು ಕೇಳಿಲ್ಲ. (ಏಕೆಂದರೆ) ಕರ್ಮ, ವಿದ್ಯೆ - (ಇವು)ಗಳ ಸ್ವರೂಪಗಳು ವಿದ್ಯಾವಿದ್ಯಾತ್ಮಕವಾಗಿರುವದರಿಂದ (ಒಂದಕ್ಕೊಂದು) ಪ್ರತಿಕೂಲವಾಗಿ ವರ್ತಿಸುವವೆಂಬ ವಿರೋಧವು- (ಹೇಗೆಂದರೆ) ಕರ್ಮವನ್ನು ಮಾಡು, ಮತ್ತು ಬಿಡು - ಎಂಬೀ ವೇದವಚನವಿದೆಯಲ್ಲ, (ಇಲ್ಲಿ) ವಿದ್ಯೆಯಿಂದ ಯಾವ ಗತಿಯನ್ನು ಪಡೆಯುತ್ತಾರೆ ? ಮತ್ತು ಕರ್ಮದಿಂದ ಯಾವ ಗತಿಯನ್ನು ಪಡೆಯುತ್ತಾರೆ ? ಇದನ್ನೇ ಕೇಳಲಿಚ್ಛಿಸುತ್ತೇನೆ; ಇದನ್ನು ತಾವು ನನಗೆ ಹೇಳಬೇಕು. ಇವೆರಡೂ ಒಂದಕ್ಕೊಂದಕ್ಕೆ ಸ್ವರೂಪದಿಂದ ವಿರುದ್ಧವಾಗಿರುತ್ತವೆ,(ಒಂದಕ್ಕೊಂದಕ್ಕೆ) ಪ್ರತಿಕೂಲ

1. ಭರ್ತೃಪ್ರಪಂಚರೇ ಮುಂತಾದ ಸಮುಚ್ಚಯವಾದಿಗಳು.

ವಾಗಿಯೇ ವರ್ತಿಸುತ್ತವೆಯಲ್ಲ!" (ಮೋ. ಧ. ೨೪೧-೧,೨) ಎಂದು (ಶುಕನು) ಕೇಳಲು (ವ್ಯಾಸರು) ಉತ್ತರವಾಗಿ "ಜೀವನು ಕರ್ಮದಿಂದ ಬದ್ಧನಾಗುತ್ತಾನೆ, ಮತ್ತು ವಿದ್ಯೆಯಿಂದ ವಿಮುಕ್ತನಾಗುತ್ತಾನೆ. ಆದ್ದರಿಂದ ಪಾರವನ್ನು ಕಂಡಿರುವ ಯತಿಗಳು ಕರ್ಮವನ್ನು ಮಾಡುವದಿಲ್ಲ" (ಮೋ. ಧ. ೨೪೧-೭) ಎಂಬಿವೇ ಮುಂತಾದ ವಿರೋಧವನ್ನು ತಿಳಿಸಿಕೊಟ್ಟಿರುತ್ತಾರೆ.

## ಪಾರಿವ್ರಾಜ್ಯವಿಧಾನಕ್ಕಾಗಿಯೇ ಬ್ರಾಹ್ಮಣಾರಂಭ

(ಭಾಷ್ಯ)

೩೫೩. ತಸ್ಮಾತ್ ನ ಸಾಧನಾನ್ತರಸಹಿತಾ ಬ್ರಹ್ಮವಿದ್ಯಾ ಪುರುಷಾರ್ಥಸಾಧನಮ್ । ಸರ್ವವಿರೋಧಾತ್ । ಸಾಧನನಿರಪೇಕ್ಷೈವ ಪುರುಷಾರ್ಥಸಾಧನಮ್ ಇತಿ ಪಾರಿವ್ರಾಜ್ಯಂ ಸರ್ವಸಾಧನಸಂನ್ಯಾಸಲಕ್ಷಣಮ್ ಅಙ್ಗತ್ವೇನ ವಿಧಿತ್ಸ್ಯತೇ। ಏತಾವದೇವಾಮೃತಸಾಧನಮ್ ಇತ್ಯವಧಾರಣಾತ್ ಷಷ್ಠಸಮಾಪ್ತೌ। ಲಿಙ್ಗಾಚ್ಚ ಕರ್ಮೀ ಸನ್ ಯಾಜ್ಞವಲ್ಕ್ಯಃ ಪ್ರವವ್ರಾಜ ಇತಿ। ಮೈತ್ರೇಯ್ಯೈ ಚ ಕರ್ಮಸಾಧನರಹಿತಾಯೈ ಸಾಧನತ್ವೇನ ಅಮೃತತ್ವಸ್ಯ, ಬ್ರಹ್ಮವಿದ್ಯೋಪದೇಶಾತ್ । ವಿತ್ತನಿನ್ದಾವಚನಾಚ್ಚ । ಯದಿ ಹಿ ಅಮೃತತ್ವಸಾಧನಂ ಕರ್ಮ ಸ್ಯಾತ್ ವಿತ್ತಸಾಧ್ಯಂ ಪಾಙ್ಕ್ತಂ ಕರ್ಮ ಇತಿ ತನ್ನಿನ್ದಾವಚನಮ್ ಅನಿಷ್ಟಂ ಸ್ಯಾತ್ । ಯದಿ ತು ಪರಿತಿತ್ಯಾಜಯಿಷಿತಂ ಕರ್ಮ, ತತೋ ಯುಕ್ತಾ ತತ್ಸಾಧನನಿನ್ದಾ। ಕರ್ಮಾಧಿಕಾರನಿಮಿತ್ತವರ್ಣಾಶ್ರಮಾದಿಪ್ರತ್ಯಯೋಪಮರ್ದಾಚ್ಚ 'ಬ್ರಹ್ಮ ತಂ ಪರಾದಾತ್' (೨-೪-೬), 'ಕ್ಷತ್ರಂ ತಂ ಪರಾದಾತ್' (೨-೪-೬) ಇತ್ಯಾದೇಃ। ನ ಹಿ ಬ್ರಹ್ಮಕ್ಷತ್ರಾದ್ಯಾತ್ಮಪ್ರತ್ಯಯೋಪಮರ್ದೇ 'ಬ್ರಾಹ್ಮಣೇನೇದಂ ಕರ್ತವ್ಯಮ್', 'ಕ್ಷತ್ರಿಯೇಣೇದಂ ಕರ್ತವ್ಯಮ್' ಇತಿ ವಿಷಯಾಭಾವಾತ್ ಆತ್ಮಾನಂ ಲಭತೇ ವಿಧಿಃ। ಯಸ್ಯೈವ ಪುರುಷಸ್ಯ ಉಪಮರ್ದಿತಃ ಪ್ರತ್ಯಯೋ ಬ್ರಹ್ಮಕ್ಷತ್ರಾದ್ಯಾತ್ಮವಿಷಯಃ, ತಸ್ಯ ತತ್ಪ್ರತ್ಯಯಸಂನ್ಯಾಸಾತ್ ತತ್ಕಾರ್ಯಾಣಾಂ ಚ ಕರ್ಮಣಾಂ ಕರ್ಮಸಾಧನಾನಾಂ ಚ, ಅರ್ಥಪ್ರಾಪ್ತಃ ಸಂನ್ಯಾಸಃ। ತಸ್ಮಾತ್ ಆತ್ಮಜ್ಞಾನಾಙ್ಗತ್ವೇನ ಸಂನ್ಯಾಸವಿಧಿತ್ಸಯೈವ ಆಖ್ಯಾಯಿಕೇಯಮ್ ಆರಭ್ಯತೇ॥

(ಭಾಷ್ಯಾರ್ಥ)

ಆದ್ದರಿಂದ ಮತ್ತೊಂದು ಸಾಧನದಿಂದೊಡಗೂಡಿ ಬ್ರಹ್ಮವಿದ್ಯೆಯು ಪುರುಷಾರ್ಥಕ್ಕೆ ಸಾಧನವಾಗಿರುವದಿಲ್ಲ. ಏಕೆಂದರೆ (ಅದು) ಎಲ್ಲಕ್ಕೂ ವಿರುದ್ಧವಾಗಿರುತ್ತದೆ[1] ; ಸಾಧನನಿರಪೇಕ್ಷವಾಗಿಯೇ ಪುರುಷಾರ್ಥಕ್ಕೆ ಸಾಧನ

1. ವಿದ್ಯೆಯು ದ್ವೈತವೆಲ್ಲಕ್ಕೂ ವಿರುದ್ಧವಾಗಿರುತ್ತದೆ.

ವಾಗಿರುತ್ತದೆ. ಆದ್ದರಿಂದ ಎಲ್ಲಾ ಸಾಧನಗಳನ್ನೂ ಬಿಡುವದೆಂಬ **ಪಾರಿವ್ರಾಜ್ಯವನ್ನು** (ಬ್ರಹ್ಮವಿದ್ಯೆಗೆ) ಅಂಗವಾಗಿ ವಿಧಿಸಬೇಕೆಂದು ಹೊರಟಿರುತ್ತದೆ.[1] "ಇಷ್ಟೇ ಅಮೃತತ್ವಕ್ಕೆ ಸಾಧನವು" (೪-೫-೧೫ರ ಅರ್ಥ) ಎಂದು ಆರನೆಯ ಅಧ್ಯಾಯದ ಕೊನೆಯಲ್ಲಿ ಒತ್ತಿಹೇಳಿರುವದರಿಂದಲೂ (ಇದೇ ಸರಿ). ಯಾಜ್ಞವಲ್ಕ್ಯನು, ಕರ್ಮಿಯಾಗಿದ್ದವನು ಪರಿವ್ರಾಜಕನಾದನು (೪-೫-೬ರ ಅರ್ಥ) ಎಂಬ ಲಿಂಗದಿಂದಲೂ[2] (ಹೀಗೆಂದು ನಿರ್ಣಯಿಸಬೇಕು).

ಕರ್ಮಸಾಧನವಿಲ್ಲದ ಮೈತ್ರೇಯಿಗೆ ಬ್ರಹ್ಮವಿದ್ಯೆಯನ್ನು ಅಮೃತತ್ವಕ್ಕೆ ಸಾಧನವೆಂದು ಉಪದೇಶಿಸಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ).[3] ವಿತ್ತವನ್ನು ನಿಂದಿಸಿರುವ ವಚನದಿಂದಲೂ (ಇದೇ ಸಿದ್ಧವಾಗುತ್ತದೆ). (ಹೇಗೆಂದರೆ): ಅಮೃತತ್ವಕ್ಕೆ ಕರ್ಮವು ಸಾಧನವಾಗಿದ್ದರೆ ಪಾಙ್ಕ್ತಕರ್ಮವು ವಿತ್ತಸಾಧ್ಯವಾಗಿರುವದರಿಂದ ಆ (ವಿತ್ತ)ವನ್ನು ನಿಂದೆಮಾಡಿರುವ ವಚನವು ಒಪ್ಪಾಗುತ್ತಿರಲಿಲ್ಲ; ಆದರೆ ಕರ್ಮವನ್ನು ಬಿಡಿಸಬೇಕು ಎಂಬುದೇ (ಶ್ರುತಿಗೆ) ಇಷ್ಟವಾದರೆ ಆಗ ಅದರ ಸಾಧನವನ್ನು ನಿಂದಿಸಿರುವದು ಯುಕ್ತವಾಗುವದು. ಕರ್ಮಾಧಿಕಾರಕ್ಕೆ ನಿಮಿತ್ತವಾದ ವರ್ಣಾಶ್ರಮಗಳೇ ಮುಂತಾದವುಗಳ ಪ್ರತ್ಯಯವು 'ಬ್ರಹ್ಮವು ಅವನನ್ನು ತಿರಸ್ಕರಿಸುತ್ತದೆ' (೨-೪-೬), 'ಕ್ಷತ್ರವು ಅವನನ್ನು ನಿರಾಕರಿಸುತ್ತದೆ' (೨-೪-೬) ಮುಂತಾದ(ಶ್ರುತಿಯಿಂದ) ಬಾಧಿತವಾಗಿರುವದರಿಂದಲೂ (ಹೀಗೆಂದು ನಿಶ್ಚಯಿಸಬೇಕು). ಏಕೆಂದರೆ ಬ್ರಹ್ಮಕ್ಷತ್ರಾದಿಸ್ವರೂಪನು ತಾನೆಂಬ ಪ್ರತ್ಯಯವು ಬಾಧಿತವಾದರೆ 'ಬ್ರಾಹ್ಮಣನು ಇದನ್ನು ಮಾಡಬೇಕು', 'ಕ್ಷತ್ರಿಯನು ಇವನ್ನು ಮಾಡಬೇಕು' ಎಂಬ ವಿಧಿಯು (ತನಗೆ) ವಿಷಯವೇ ಇಲ್ಲದ್ದರಿಂದ ಹುಟ್ಟಲೇ ಆರದಲ್ಲವೆ? ಯಾವ ಪುರುಷನಿಗೆ ಬ್ರಹ್ಮಕ್ಷತ್ರಾದ್ಯಾತ್ಮಕನು ತಾನು ಎಂಬ ವಿಷಯದ ಪ್ರತ್ಯಯವು ಬಾಧಿತವಾಗಿರುವದೋ ಅವನು ಆ ಪ್ರತ್ಯಯವನ್ನು ಬಿಟ್ಟುಬಿಡುವದರಿಂದ ಅದರ ಕಾರ್ಯವಾದ ಕರ್ಮಗಳನ್ನೂ ಕರ್ಮಸಾಧನಗಳನ್ನೂ ಸಂನ್ಯಾಸಮಾಡುವನೆಂದು ತಾನೇ ಬಂದೊದಗುತ್ತದೆ. ಆದ್ದರಿಂದ ಆತ್ಮಜ್ಞಾನಕ್ಕೆ ಅಂಗವಾಗಿ ಸಂನ್ಯಾಸ

---

1. ಸಂನ್ಯಾಸಸಹಿತವಾದ ಜ್ಞಾನನಿಷ್ಠೆಯೇ ಮೋಕ್ಷಕ್ಕೆ ಸಾಧನವೆಂದಂತಾಯಿತು.

2. ಕರ್ಮವು ಮುಕ್ತಿಗೆ ಅವಶ್ಯಕ[illegible]ನವಾಗಿದ್ದರೆ [illegible]ಜ್ಞವಲ್ಕ್ಯನು ಆ ಕರ್ಮವನ್ನು ಬಿಟ್ಟುಹೋಗುತ್ತಿರಲಿಲ್ಲ; ಆದರೆ ಬಿಟ್ಟುಹೋದನು -ಎಂಬುದು ಜ್ಞಾನಕ್ಕೆ ಕರ್ಮಾಪೇಕ್ಷೆಯಿಲ್ಲವೆಂಬುದಕ್ಕೆ ಲಿಂಗವು.

3. ಇದೂ ಒಂದು ಲಿಂಗವು.

ವನ್ನು ವಿಧಿಸಬೇಕೆಂದೇ ಈ ಕಥೆಯನ್ನು ಆರಂಭಿಸಿರುತ್ತದೆ.[1]

## ಪಾರಿವ್ರಾಜ್ಯಕ್ಕೆ ಸಿದ್ಧತೆ

(ಉಪನಿಷತ್ತು)

**ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯ ಉದ್ಯಾಸ್ಯನ್ ವಾ ಅರೇಽಹಮಸ್ಮಾತ್ ಸ್ಥಾನಾದಸ್ಮಿ ಹನ್ತ ತೇಽನಯಾ ಕಾತ್ಯಾಯನ್ಯಾನ್ತಂ ಕರವಾಣೀತಿ ॥ ೧ ॥**

೧. ಯಾಜ್ಞವಲ್ಕ್ಯನು "ಎಲೆ ಮೈತ್ರೇಯಿಯೆ, ನಾನು ಈ ಸ್ಥಾನದಿಂದ ಮೇಲಕ್ಕೆ ಹೋಗುವವನಾಗಿದ್ದೇನೆ. ನಿನಗೂ ಈ ಕಾತ್ಯಾಯನಿಗೂ ಅಂತವನ್ನು ಮಾಡುವೆನು'' ಎಂದನು.

(ಭಾಷ್ಯ)

೨೫೪. ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ । ಮೈತ್ರೇಯೀಂ ಸ್ವಭಾರ್ಯಾಮ್ ಆಮನ್ತ್ರಿತವಾನ್ ಯಾಜ್ಞವಲ್ಕ್ಯೋ ನಾಮ ಋಷಿಃ । ಉದ್ಯಾಸ್ಯನ್ ಊರ್ಧ್ವಂ ಯಾಸ್ಯನ್ ಪಾರಿವ್ರಾಜ್ಯಾಖ್ಯಮ್ ಆಶ್ರಮಾನ್ತರಂ ವೈ । ಅರೇ ಇತಿ ಸಂಬೋಧನಮ್ । ಅಹಮಸ್ಮಾತ್ ಗಾರ್ಹಸ್ಥ್ಯಾತ್ ಸ್ಥಾನಾತ್ ಆಶ್ರಮಾತ್ ಊರ್ಧ್ವಂ ಗನ್ತುಮ್ ಇಚ್ಛನ್ ಅಸ್ಮಿ ಭವಾಮಿ । ಅತಃ ಹನ್ತ ಅನುಮತಿಂ ಪ್ರಾರ್ಥಯಾಮಿ ತೇ[2] ತವ । ಕಿಂ ಚಾನ್ಯತ್ ತೇ ತವ ಅನಯಾ ದ್ವಿತೀಯಯಾ ಭಾರ್ಯಯಾ ಕಾತ್ಯಾಯನ್ಯಾ ಅನ್ತಂ ವಿಚ್ಛೇದಂ ಕರವಾಣಿ । ಪತಿದ್ವಾರೇಣ ಯುವಯೋಃ ಮಯಾ ಸಂಬಧ್ಯಮಾನಯೋಃ ಯಃ ಸಂಬನ್ಧ ಆಸೀತ್ ತಸ್ಯ ಸಂಬನ್ಧಸ್ಯ ವಿಚ್ಛೇದಂ ಕರವಾಣಿ ದ್ರವ್ಯವಿಭಾಗಂ ಕೃತ್ವಾ ವಿತ್ತೇನ ಸಂವಿಭಜ್ಯ ಯುವಾಂ ಗಮಿಷ್ಯಾಮಿ ॥

---

1. ಬ್ರಹ್ಮವು ಮೂರ್ತಾಮೂರ್ತಾದಿಗಳಲ್ಲ– ಎಂದರೆ ಅದರಲ್ಲಿ ಅವುಗಳ ಅಭಾವವಿದೆ ಎಂದಾಗಬಹುದು; ಆಗಲೂ ಅದ್ವೈತವು ಸಿದ್ಧವಾಗುವದಿಲ್ಲ. ಅವು ಬ್ರಹ್ಮಕ್ಕಿಂತ ಬೇರೆಯೆಂದಾದರಂತೂ ಅದ್ವೈತವಿಲ್ಲ. ಎಲ್ಲಾ ದ್ವೈತವನ್ನೂ ಉಪಸಂಹರಿಸಿದ್ದು ಬ್ರಹ್ಮವೆಂದರೆ ಜೀವನೂ ಇಲ್ಲವೆಂದಾಗುವದಲ್ಲ ?– ಎಂದು ಶಂಕಿಸಿ ಬ್ರಹ್ಮದಲ್ಲಿ ದ್ವೈತದ ಅನ್ವಯವೂ ಇಲ್ಲ. ವ್ಯತಿರೇಕವೂ ಇಲ್ಲ– ಎಂದು ತಿಳಿಸುವವಕ್ಕೆ ಈ ಬ್ರಾಹ್ಮಣವು ಬಂದಿದೆ ಎಂದು ವಾರ್ತಿಕದಲ್ಲಿ ಬೇರೊಂದು ಬಗೆಯ ಸಂಬಂಧವನ್ನು ಹೇಳಿದೆ. ಹಿಂದಿನ ಬ್ರಾಹ್ಮಣದಲ್ಲಿ ಬ್ರಹ್ಮವೆಂದರೆ ಆತ್ಮನೇ ಎಂಬುದು ಹೇಳಿದೆ; ಈಗ ಆತ್ಮನೆಂದರೆ ಬ್ರಹ್ಮವೇ ಎಂದು ಹೇಳಲಾಗುತ್ತದೆ ಇದು ಮತ್ತೊಂದು ಅಭಿಪ್ರಾಯವೂ ವಾರ್ತಿಕದಲ್ಲಿದೆ.

2. ಮೂಲದಲ್ಲಿ ಎರಡು ತೇ ಇಲ್ಲ. ಆದ್ದರಿಂದ ಇಲ್ಲಿ ಭಾಷ್ಯಕಾರರೇ ತೇ ಎಂದು ಸೇರಿಸಿಕೊಂಡಿದ್ದಾರೆಂದು ಕಲ್ಪಿಸಬೇಕಾಗುತ್ತದೆ; ಆಗ ತವ ಎಂಬಿದು ಬರೆದವರ ಕೈತಪ್ಪಿನಿಂದ ಸೇರಿಕೊಂಡಿರಬೇಕೆಂದು ಹೇಳಬೇಕಾಗುತ್ತದೆ.

(ಭಾಷ್ಯಾರ್ಥ)

"ಮೈತ್ರೇಯಿತಿ ಹೋವಾಚ ಯಾಜ್ಞವಲ್ಕ್ಯಃ" (ಎಂಬ ಕಂಡಿಕೆಯ ಅರ್ಥವಿದು) : ತನ್ನ ಹೆಂಡತಿಯಾದ ಮೈತ್ರೇಯಿಯನ್ನು ಯಾಜ್ಞವಲ್ಕ್ಯನೆಂಬ ಋಷಿಯು ಕರೆದು (ಇಂತೆಂದನು) : (ಉದ್ಯಾಸ್ಯನ್=ಊರ್ಧ್ವಂ ಯಾಸ್ಯನ್) ಮೇಲಕ್ಕೆ ಹೋಗುವವನಾಗಿ, **ಪಾರಿವ್ರಾಜ್ಯ**ವೆಂಬ ಮತ್ತೊಂದು ಆಶ್ರಮಾಂತರಕ್ಕೆ[1] (ಹೋಗುವವನಾಗಿ)- ಅರೇ (ಎಲೆ), ಎಂಬುದು ಕರೆಯುವದಕ್ಕೆ (ಉಪಯೋಗಿಸಿರುವ ನಿಪಾತವು). ನಾನು ಈ ಗಾರ್ಹಸ್ಥ್ಯವೆಂಬ ಸ್ಥಾನದಿಂದ ಆಶ್ರಮದಿಂದ, ಮೇಲಕ್ಕೆ ಹೋಗುವ ಇಚ್ಛೆಯುಳ್ಳವನಾಗಿ ಇದ್ದೇನೆ, ಇರುತ್ತೇನೆ. ಅದ್ದರಿಂದ ('ಹನ್ತ') ನಿನ್ನ ಅನುಮತಿಯನ್ನು ಪ್ರಾರ್ಥಿಸುತ್ತೇನೆ.[2] ಮತ್ತೊಂದು ಇನ್ನೊಂದು (ಮಾತು. ತೇ=ತವ) ನಿನಗೂ ಈ ಎರಡನೆಯ ಹೆಂಡತಿಯಾದ ಕಾತ್ಯಾಯನಿಗೂ ಅಂತವನ್ನು ಬಿಡುಗಡೆಯನ್ನು ಮಾಡಬಯಸುವೆನು. ಪತಿಯ ದ್ವಾರದಿಂದ ನನ್ನ ಸಂಬಂಧವುಳ್ಳ ನಿಮ್ಮಿಬ್ಬರಿಗೂ (ಈವರೆಗೆ) ಯಾವ ಸಂಬಂಧವಿತ್ತೋ ಆ ಸಂಬಂಧದ ಬಿಡುಗಡೆಯನ್ನು ಮಾಡಬಯಸಿರುವೆನು. ದ್ರವ್ಯವನ್ನು ಹಂಚಿ ವಿತ್ತವನ್ನು ನಿಮ್ಮಿಬ್ಬರಿಗೂ ಪಾಲುಮಾಡಿಕೊಟ್ಟು ಹೋಗುವೆನು.[3]

## ವಿತ್ತವು ಮೋಕ್ಷಕ್ಕೆ ಕಾರಣವಲ್ಲ

( ಉಪನಿಷತ್ತು )

**ಸಾ ಹೋವಾಚ ಮೈತ್ರೇಯೀ । ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ಕಥಂ ತೇನಾಮೃತಾ. ಸ್ಯಾಮಿತಿ ನೇತಿ ಹೋವಾಚ ಯಾಜ್ಞವಲ್ಕ್ಯೋ ಯಥೈವೋಪ ಕರಣವತಾಂ ಜೀವಿತಂ ತಥೈವ ತೇ ಜೀವಿತಗ್ಂ ಸ್ಯಾದಮೃತ ತ್ವಸ್ಯ ತು ನಾಶಾಸ್ತಿ ವಿತ್ತೇನೇತಿ ॥ ೨ ॥**

೨. ಆ ಮೈತ್ರೇಯಿ ಇಂತೆಂದಳು. ಭಗವಂತನೆ, ಈ ಪೃಥ್ವಿಯೆಲ್ಲವೂ ವಿತ್ತದಿಂದ ತುಂಬಿರುವದಾದರೆ, ಅದರಿಂದ (ನಾನು) ಅಮೃತಳಾದೇನೋ ಹೇಗೆ? ಯಾಜ್ಞವಲ್ಕ್ಯನಿಂತೆಂದನು : ಇಲ್ಲ. ಉಪಕರಣವುಳ್ಳವರಿಗೆ ಜೀವಿತವು ಹೇಗಿ(ರುವದೋ) ಹಾಗೆಯೇ ನಿನ್ನ ಜೀವಿತವೂ ಇದ್ದೀತು. ಆದರೆ ವಿತ್ತದಿಂದ ಅಮೃತತ್ವದ ಆಶೆಯಿಲ್ಲ.

1. ಗಾರ್ಹಸ್ಥ್ಯದಿಂದಲೇ ನೇರಾಗಿ ಸಂನ್ಯಾಸವನ್ನು ಮಾಡಬಹುದು ಎಂಬ ಶ್ರುತಿಗೆ ಇದೊಂದು ಉದಾಹರಣೆ.

2. ಹನ್ತ ಎಂಬ ಮಾತಿನ ಸ್ವಾರಸ್ಯವಿದು. ಹೆಂಡತಿ ಮೊದಲಾದವರಿದ್ದರೆ ಅವರ ಅನುಮತಿಯಿಂದಲೇ ಪಾರಿವ್ರಾಜ್ಯವನ್ನು ಸ್ವೀಕರಿಸಬೇಕೆಂದು ಸ್ಮೃತಿ. ಅದಕ್ಕೆ ಇದು ಲಿಂಗ.

3. ತನ್ನ ಆಸ್ತಿಯನ್ನು ಹೆಂಡತಿ ಮುಂತಾದವರಿಗೆ ಹಂಚಿ ದಾನಧರ್ಮಗಳನ್ನು ಮಾಡಿ ಸಂನ್ಯಾಸವನ್ನು ಮಾಡಬೇಕೆಂಬುದಕ್ಕೆ ಜ್ಞಾಪಕವಿದು.

(ಭಾಷ್ಯ)

೩೫೫. ಸಾ ಏವಮುಕ್ತಾ ಹ ಉವಾಚ ಯದ್ ಯದಿ। ನು ಇತಿ ವಿತರ್ಕೇ। ಮೇ ಮಮ ಇಯಂ ಪೃಥಿವೀ ಭಗೋಃ ಭಗವನ್ ಸರ್ವಾ ಸಾಗರ ಪರಿಕ್ಷಿಪ್ತಾ ವಿತ್ತೇನ ಧನೇನ ಪೂರ್ಣಾ ಸ್ಯಾತ್ ಕಥಂ ನ ಕಥಂಚನ ಇತಿ ಆಕ್ಷೇಪಾರ್ಥಃ। ಪ್ರಶ್ನಾರ್ಥೋ ವಾ। ತೇನ ಪೃಥಿವೀ ಪೂರ್ಣವಿತ್ತಸಾಧ್ಯೇನ ಕರ್ಮಣಾ ಅಗ್ನಿಹೋತ್ರಾದಿನಾ ಅಮೃತಾ ಕಿಂ ಸ್ಯಾಮ್? ಇತಿ ವ್ಯವಹಿತೇನ ಸಂಬನ್ಧಃ। ಪ್ರತ್ಯುವಾಚ ಯಾಜ್ಞವಲ್ಕ್ಯಃ। ಕಥಮ್ ಇತಿ ಯದಿ ಆಕ್ಷೇಪಾರ್ಥಮ್ ಅನುಮೋದನಮ್ ನೇತಿ ಹೋವಾಚ ಯಾಜ್ಞವಲ್ಕ್ಯಃ ಇತಿ। ಪ್ರಶ್ನಶ್ಚೇತ್ ಪ್ರತಿವಚನಾರ್ಥಮ್। ನೈವ ಸ್ಯಾ ಅಮೃತಾ। ಕಿಂ ತರ್ಹಿ ಯಥೈವ ಲೋಕೇ ಉಪಕರಣವತಾಂ ಸಾಧನವತಾಂ ಜೀವಿತಂ ಸುಖೋಪಾಯ ಭೋಗಸಂಪನ್ನಮ್, ತಥೈವ ತದ್ವದೇವ ತವ ಜೀವಿತಂ ಸ್ಯಾತ್ ಅಮೃತತ್ವಸ್ಯ ತು ನಾಶಾ ಮನಸಾಪ್ಯಸ್ತಿ ವಿತ್ತೇನ ವಿತ್ತಸಾಧ್ಯೇನ ಕರ್ಮಣಾ ಇತಿ ॥

(ಭಾಷ್ಯಾರ್ಥ)

ಹೀಗೆನ್ನಲು ಆ (ಮೈತ್ರೇಯಿ) ಇಂತೆಂದಳು: (ಯದ್=ಯದಿ) ನು ಎಂಬುದು ವಿತರ್ಕವನ್ನು (ಹೇಳುವದು ಮೇ=ಮಮ) ನನಗೆ ಈ ಪೃಥ್ವಿಯು (ಭಗೋಃ=ಭಗವನ್) ಪೂಜ್ಯನೆ, ಈ ಸಾಗರವು ಸುತ್ತುವರಿದಿರುವ (ಪೃಥ್ವಿಯು) ವಿತ್ತದಿಂದ ಧನದಿಂದ ತುಂಬಿದ್ದರೆ (ಮೂಲದಲ್ಲಿ ಕಥಮ್) ಹೇಗೆ ಎಂಬುದು ಹೇಗೂ ಅಲ್ಲ ಎಂಬ ಆಕ್ಷೇಪಾರ್ಥವಲ್ಲಿ ಬಂದಿರುತ್ತದೆ; ಅಥವಾ ಪ್ರಶ್ನಾರ್ಥದಲ್ಲಿ (ಬಂದಿರುತ್ತದೆ).[1] ಅದರಿಂದ ಆ ಪೃಥ್ವಿಯೆಲ್ಲ ತುಂಬಿರುವ ವಿತ್ತದಿಂದ ಆಗಬಹುದಾದ ಅಗ್ನಿಹೋತ್ರವೇ ಮುಂತಾದ ಕರ್ಮದಿಂದ[2] ಅಮೃತಳಾದೇನೇನು?- ಎಂದು ದೂರವಿರುವ (ಕಥಂಶಬ್ದಕ್ಕೆ) ಸಂಬಂಧ (ವನ್ನು ಮಾಡಿಕೊಳ್ಳಬೇಕು).

---

1. ಕಥಮ್ ಎಂಬ ಮಾತಿಗೆ ಆಕ್ಷೇಪ, ಪ್ರಶ್ನೆ –ಎಂಬ ಎರಡು ಅರ್ಥಗಳೂ ಇವೆ. ಹೇಗೆ ತಾನೆ ಮುಕ್ತಿಯನ್ನು ಪಡೆದೇನು? –ಎಂಬುದು ಆಕ್ಷೇಪ; ಮುಕ್ತಿಯನ್ನು ಪಡೆದೇನೋ ಹೇಗೆ? ಎಂಬುದು ಪ್ರಶ್ನೆ. ಇಲ್ಲಿ ಪ್ರಶ್ನೆ ಎಂದಿಟ್ಟುಕೊಳ್ಳುವದೇ ಯುಕ್ತತರವೆಂದು ತೋರುತ್ತದೆ. ಏಕೆಂದರೆ ಆ ಪ್ರಶ್ನೆಗೆ ಉತ್ತರವನ್ನು ಹೇಳುವ ನೆಪದಿಂದಲೇ ಯಾಜ್ಞವಲ್ಕ್ಯನು ಆತ್ಮಜ್ಞಾನಕ್ಕೆ ಅವತರಣಿಕೆಯನ್ನು ಮಾಡಿಕೊಂಡಿರುತ್ತಾನೆ.

2. ಧನವು ಬರಿಯ ಇರುವಿಕೆಯಿಂದ ಉಪಕಾರಕವಾಗುವದಿಲ್ಲ, ಕ್ರಿಯೆಯ ದ್ವಾರದಿಂದಲೇ ಅದು ಉಪಕಾರಕವಾಗುತ್ತದೆ. ಆದ್ದರಿಂದ ಪ್ರಶ್ನೋತ್ತರಗಳಲ್ಲಿರುವ ವಿತ್ತಶಬ್ದಕ್ಕೆ ವಿತ್ತಸಾಧ್ಯವಾದ ಕರ್ಮವೆಂದೇ ಅರ್ಥವನ್ನು ಮಾಡಬೇಕು ಎಂದು ಭಾವ. ಲೌಕಿಕಕರ್ಮದಿಂದ ಅಮೃತತ್ವವು ಸಿಕ್ಕುವದಿಲ್ಲವೆಂಬುದು ಪ್ರಸಿದ್ಧವೇ ಆಗಿರುವದರಿಂದ ಶಾಸ್ತ್ರೀಯವಾದ ಅಗ್ನಿಹೋತ್ರಾದಿಕರ್ಮದಿಂದಲೂ ಅದು ಸಿಕ್ಕುವದಿಲ್ಲ ಎಂಬುದನ್ನು ಇಲ್ಲಿ ಹೇಳಿದೆ.

ಯಾಜ್ಞವಲ್ಕ್ಯನು (ಹೀಗೆಂದು) ಉತ್ತರವನ್ನು ಕೊಟ್ಟನು. ಕಥಮ್ (ಹೇಗೆ) ಎಂಬುದು ಆಕ್ಷೇಪಾರ್ಥಕವಾದರೆ ನೇತಿ ಹೋವಾಚ ಯಾಜ್ಞವಲ್ಕ್ಯಃ (ಯಾಜ್ಞವಲ್ಕ್ಯನು ಇಲ್ಲ ಎಂದನು) ಎಂಬುದು ಒಪ್ಪಿಗೆ(ಯನ್ನು ತಿಳಿಸುತ್ತದೆ); (ಅದು) ಪ್ರಶ್ನೆಯಾದರೆ ಉತ್ತರಕ್ಕಾಗಿ ಹೇಳಿದ್ದು. (ನೀನು ಅದರಿಂದ) ಅಮೃತಳಾಗುವದೇ ಇಲ್ಲ; ಮತ್ತೇನೆಂದರೆ ಲೋಕದಲ್ಲಿ ಉಪಕರಣವುಳ್ಳವರಿಗೆ ಸಾಧನಗಳುಳ್ಳವರಿಗೆ ಜೀವಿತವು ಹೇಗೆ ಸುಖೋಪಾಯಗಳಿಂದಾದ ಭೋಗದಿಂದ ಕೂಡಿರುವದೋ ಹಾಗೆಯೇ ಅದರಂತೆಯೇ ನಿನ್ನ ಜೀವಿತವು ಇದ್ದೀತು. ಆದರೆ ವಿತ್ತದಿಂದ ವಿತ್ತಸಾಧ್ಯವಾದ ಕರ್ಮದಿಂದ ಅಮೃತತ್ವದ ಆಶೆಯು ಮನಸ್ಸಿನಲ್ಲಿ ಕೂಡ ಇರುವ(ಹಾಗಿಲ್ಲ).

## ಮೈತ್ರೇಯಿಯು ಅಮೃತತ್ವಕ್ಕೆ ಸಾಧನವನ್ನು ಕೇಳಿದ್ದು

(ಉಪನಿಷತ್ತು)

**ಸಾ ಹೋವಾಚ ಮೈತ್ರೇಯೀ ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ಯದೇವ ಭಗವಾನ್ ವೇದ ತದೇವ ಮೇ ಬ್ರೂಹೀತಿ ॥ ೩ ॥**

೩. ಆ ಮೈತ್ರೇಯಿ ಇಂತೆಂದಳು. "ಯಾವದರಿಂದ ನಾನು ಅಮೃತಳಾಗಲಾರೆನೋ, ಅದರಿಂದ ನಾನು ಏನು ಮಾಡಿಕೊಳ್ಳಲಿ? ಭಗವಂತ, (ನೀನು) ಯಾವದನ್ನು ತಿಳಿದುಕೊಂಡಿರುವೆಯೋ ಅದನ್ನೇ ನನಗೆ ಹೇಳು."

(ಭಾಷ್ಯ)

೩೫೬. ಸಾ ಹೋವಾಚ ಮೈತ್ರೇಯೀ । ಏವಮುಕ್ತಾ ಪ್ರತ್ಯುವಾಚ ಮೈತ್ರೇಯೀ । ಯದ್ಯೇವಂ ಯೇನಾಹಂ ನಾಮೃತಾ ಸ್ಯಾಮ್ ಕಿಮಹಂ ತೇನ ವಿತ್ತೇನ ಕುರ್ಯಾಮ್? ಯದೇವ ಭಗವಾನ್ ಕೇವಲಮ್ ಅಮೃತತ್ವಸಾಧನಂ ವೇದ ತದೇವ ಅಮೃತತ್ವಸಾಧನಂ ಮೇ ಮಹ್ಯಂ ಬ್ರೂಹಿ ॥

(ಭಾಷ್ಯಾರ್ಥ)

'ಸಾ ಹೋವಾಚ ಮೈತ್ರೇಯೀ' (ಎಂಬ ಕಂಡಿಕೆಯ ಅರ್ಥವಿದು): ಹೀಗೆನ್ನಲು ಮೈತ್ರೇಯಿ ಅದಕ್ಕೆ ಉತ್ತರವಾಗಿ ಇಂತೆಂದಳು. ಹೀಗಾದರೆ, ಯಾವದರಿಂದ ನಾನು ಅಮೃತಳಾಗಲಾರೆನೋ ನಾನು ಆ ವಿತ್ತದಿಂದ ಏನು ಮಾಡಿಕೊಳ್ಳಲಿ? ಕೇವಲ ಅಮೃತತ್ವಸಾಧನವೇ ಎಂದು ಯಾವದನ್ನು ಭಗವಂತನಾದ (ನೀನು) ತಿಳಿದುಕೊಂಡಿರುವೆಯೋ ಅದೇ ಅಮೃತತ್ವಸಾಧನವನ್ನೇ (ಮೇ=ಮಹ್ಯಮ್) ನನಗೆ ಹೇಳು.

## ಮೈತ್ರೇಯಿಯ ವಿದ್ಯಾಧಿಕಾರ

(ಉಪನಿಷತ್ತು)

**ಸ ಹೋವಾಚ ಯಾಜ್ಞವಲ್ಕ್ಯಃ ಪ್ರಿಯಾ ಬತಾರೇ ನಃ ಸತೀ ಪ್ರಿಯಂ ಭಾಷಸ ಏಹ್ಯಾಸ್ಸ್ವ ವ್ಯಾಖ್ಯಾಸ್ಯಾಮಿ ತೇ ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವೇತಿ ॥ ೪ ॥**

೪. ಆ ಯಾಜ್ಞವಲ್ಕ್ಯನಿಂತೆಂದನು: "ಆಹಾ! ನಮಗೆ (ಈ) ಸತಿಯು (ಎಂಥ) ಪ್ರಿಯಳು! ಪ್ರಿಯವನ್ನು ನುಡಿಯುತ್ತಿದ್ದೀಯೆ. ಬಾ, ಕುಳಿತುಕೊ, ನಿನಗೆ ವ್ಯಾಖ್ಯಾನಮಾಡುವೆನು. ಆದರೆ ನಾನು ವ್ಯಾಖ್ಯಾನಮಾಡುವದನ್ನು ನಿದಿಧ್ಯಾಸನಮಾಡು!''

(ಭಾಷ್ಯ)

೩೫೭. ಸ ಹೋವಾಚ ಯಾಜ್ಞವಲ್ಕ್ಯಃ। ಏವಂ ವಿತ್ತಸಾಧ್ಯೇ ಅಮೃತತ್ವಸಾಧನೇ ಪ್ರತ್ಯಾಖ್ಯಾತೇ ಯಾಜ್ಞವಲ್ಕ್ಯಃ ಸ್ವಾಭಿಪ್ರಾಯಸಂಪತ್ತೌ ತುಷ್ಟ ಆಹ। ಸ ಹೋವಾಚ। ಪ್ರಿಯಾ ಇಷ್ಟಾ ಬತ ಇತ್ಯನುಕಮ್ಪ್ಯ ಆಹ। ಅರೇ ಮೈತ್ರೇಯಿ ನಃ ಅಸ್ಮಾಕಂ ಪೂರ್ವಮಪಿ ಪ್ರಿಯಾ ಸತೀ ಭವನ್ತೀ ಇದಾನೀಂ ಪ್ರಿಯಮೇವ ಚಿತ್ತಾನುಕೂಲಂ ಭಾಷಸೇ। ಅತಃ ಏಹಿ ಆಸ್ಸ್ವ ಉಪವಿಶ। ವ್ಯಾಖ್ಯಾಸ್ಯಾಮಿ ಯತ್ ತೇ ತವ ಇಷ್ಟಮ್ ಅಮೃತತ್ವಸಾಧನಮ್ ಆತ್ಮಜ್ಞಾನಂ ಕಥಯಿಷ್ಯಾಮಿ। ವ್ಯಾಚಕ್ಷಾಣಸ್ಯ ತು ಮೇ ಮಮ ವ್ಯಾಖ್ಯಾನಂ ಕುರ್ವತೋ ನಿದಿಧ್ಯಾಸಸ್ವ ವಾಕ್ಯಾನಿ ಅರ್ಥತೋ ನಿಶ್ಚಯೇನ ಧ್ಯಾತುಮಿಚ್ಛ ಇತಿ ॥

(ಭಾಷ್ಯಾರ್ಥ)

'ಸ ಹೋವಾಚ ಯಾಜ್ಞವಲ್ಕ್ಯಃ' (ಎಂಬ ಕಂಡಿಕೆಯ ಅರ್ಥ). ಹೀಗೆ ವಿತ್ತಸಾಧ್ಯವಾದ (ಕರ್ಮವು) ಅಮೃತತ್ವಕ್ಕೆ ಸಾಧನವಲ್ಲವೆಂದು ತಿರಸ್ಕರಿಸಲಾಗಿ ಯಾಜ್ಞವಲ್ಕ್ಯನು ತನ್ನ ಅಭಿಪ್ರಾಯವು ಸಿದ್ಧವಾಯಿತೆಂದು ಸಂತೋಷದಿಂದ ಇಂತೆಂದನು. ಸ ಹೋವಾಚ (ಮುಂತಾದ ವಾಕ್ಯದ ಅರ್ಥವೇನೆಂದರೆ) ಪ್ರಿಯಳು ಇಷ್ಟಳು; ಬತ (ಆಹಾ!) ಎಂಬುದು ಅನುಕಂಪೆಯಿಂದ ಹೇಳಿದನು (ಎಂದು ತಿಳಿಸುವದಕ್ಕೆ). ಎಲೆ ಮೈತ್ರೇಯಿ, (ನಃ= ಅಸ್ಮಾಕಮ್) ನಮಗೆ ಮೊದಲೂ ಪ್ರಿಯಳೇ ಆಗಿದ್ದು ಈಗ ಪ್ರಿಯವನ್ನೇ ಚಿತ್ತಕ್ಕೆ ಅನುಕೂಲವಾದದ್ದನ್ನೇ ಹೇಳುತ್ತಿದ್ದೀಯೆ.[1] ಆದ್ದರಿಂದ ಬಾ, ಕುಳಿತುಕೊ, (ಆಸನದಲ್ಲಿ) ಕುಳ್ಳಿರು. ವ್ಯಾಖ್ಯಾನಮಾಡುವೆನು. ನಿನಗೆ ಬೇಕಾಗಿರುವ ಅಮೃತತ್ವಸಾಧನ

1. ಜ್ಞಾನವೇ ಮುಕ್ತಿಹೇತು, ಕರ್ಮವಲ್ಲ- ಎಂಬುದು ನನ್ನ ಚಿತ್ತಕ್ಕೆ ಅನುಕೂಲವಾದದ್ದು; ಅದಕ್ಕೆ ಅನುಗುಣವಾದದ್ದನ್ನೇ ನೀನು ಈಗ ಹೇಳುತ್ತಿದ್ದೀಯೆ.

ವಾದ ಆತ್ಮಜ್ಞಾನವನ್ನು ಹೇಳುವೆನು. ಆದರೆ ನಾನು ವ್ಯಾಖ್ಯಾನಮಾಡುತ್ತಿರುವದನ್ನು ವಿವರಿಸಿ ಹೇಳುವದನ್ನು ನಿದಿಧ್ಯಾಸನಮಾಡು, ವಾಕ್ಯಗಳನ್ನು ಅರ್ಥಕ್ಕೆ ತಕ್ಕಂತೆ ನಿಶ್ಚಯಿಸಿ ಚಿಂತನೆಮಾಡಲೆಳಸುವಳಾಗು ![1]

## ಪ್ರಿಯನಾದ ಆತ್ಮನ ದರ್ಶನವನ್ನು ಮಾಡಿಕೊಳ್ಳಬೇಕು

(ಉಪನಿಷತ್ತು)

**ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ । ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ । ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ । ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಬ್ರಹ್ಮ ಪ್ರಿಯಂ ಭವತಿ । ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ನ ವಾ ಅರೇ ಲೋಕಾನಾಂ ಕಾಮಾಯ ಲೋಕಾಃ ಪ್ರಿಯಾ ಭವನ್ತಿ ಆತ್ಮನಸ್ತು ಕಾಮಾಯ ಲೋಕಾಃ ಪ್ರಿಯಾ ಭವನ್ತಿ । ನ ವಾ ಅರೇ ದೇವಾನಾಂ ಕಾಮಾಯ ದೇವಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವನ್ತಿ । ನ ವಾ ಅರೇ ಭೂತಾನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವನ್ತ್ಯಾತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವನ್ತಿ । ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಗ್ಂ ಸರ್ವಂ ವಿದಿತಮ್ ॥ ೫ ॥**

೫. ಅವನು ಇಂತೆಂದನು : ಎಲೆ, ಪತಿಯ ಕಾಮಕ್ಕಾಗಿ ಪತಿಯು ಪ್ರಿಯನಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮ

---

1. ನಿದಿಧ್ಯಾಸನವೆಂದರೆ ಅರ್ಥವನ್ನು ಮನದಟ್ಟುಮಾಡಿಕೊಳ್ಳುವದು.

ಕ್ಕಾಗಿಯೇ ಪತಿಯು ಪ್ರಿಯನಾಗಿರುತ್ತಾನೆ. ಎಲೆ ಹೆಂಡತಿಯ ಕಾಮಕ್ಕಾಗಿ ಹೆಂಡತಿಯು ಪ್ರಿಯಳಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಹೆಂಡತಿಯು ಪ್ರಿಯಳಾಗಿರುತ್ತಾಳೆ. ಎಲೆ, ಮಕ್ಕಳ ಕಾಮಕ್ಕಾಗಿ ಮಕ್ಕಳು ಪ್ರಿಯರಾಗಿರುವದೇ ಇಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಮಕ್ಕಳು ಪ್ರಿಯರಾಗಿರುತ್ತಾರೆ. ಎಲೆ, ವಿತ್ತದ ಕಾಮಕ್ಕಾಗಿ ವಿತ್ತವು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ವಿತ್ತವು ಪ್ರಿಯವಾಗಿರುತ್ತದೆ. ಎಲೆ, ಬ್ರಹ್ಮದ ಕಾಮಕ್ಕಾಗಿ ಬ್ರಹ್ಮವು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಬ್ರಹ್ಮವು ಪ್ರಿಯವಾಗಿರುತ್ತದೆ. ಎಲೆ, ಕ್ಷತ್ರದ ಕಾಮಕ್ಕಾಗಿ ಕ್ಷತ್ರವು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಕ್ಷತ್ರವು ಪ್ರಿಯವಾಗಿರುತ್ತದೆ. ಎಲೆ, ಲೋಕಗಳ ಕಾಮಕ್ಕಾಗಿ ಲೋಕಗಳು ಪ್ರಿಯವಾಗಿರುವದೇ ಇಲ್ಲ ; ಆತ್ಮನ ಕಾಮಕ್ಕಾಗಿ ಲೋಕಗಳು ಪ್ರಿಯವಾಗಿರುತ್ತವೆ. ಎಲೆ, ದೇವತೆಗಳ ಕಾಮಕ್ಕಾಗಿ ದೇವತೆಗಳು ಪ್ರಿಯರಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ದೇವತೆಗಳು ಪ್ರಿಯರಾಗಿರುತ್ತಾರೆ. ಎಲೆ, ಭೂತಗಳ ಕಾಮಕ್ಕಾಗಿ ಭೂತಗಳು ಪ್ರಿಯಗಳಾಗಿರುವದೇ ಇಲ್ಲ ; ಮತ್ತೇನೆಂದರೆ ಆತ್ಮನ ಕಾಮಕ್ಕಾಗಿ ಭೂತಗಳು ಪ್ರಿಯವಾಗಿರುತ್ತವೆ. ಎಲೆ, ಯಾವದೇ ಆಗಲಿ (ಅದರದರ) ಕಾಮಕ್ಕಾಗಿ ಪ್ರಿಯವಾಗಿರುವದೇ ಇಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಎಲ್ಲವೂ ಪ್ರಿಯವಾಗಿರುತ್ತದೆ. ಎಲೆ, ಮೈತ್ರೇಯಿ, ಆತ್ಮನೇ ಕಂಡುಕೊಳ್ಳತಕ್ಕವನು, ಶ್ರವಣಮಾಡತಕ್ಕವನು, ಮನನಮಾಡತಕ್ಕವನು, ನಿದಿಧ್ಯಾಸನಮಾಡತಕ್ಕವನು. ಎಲೆ, ಆತ್ಮನನ್ನೇ ಕಂಡುಕೊಳ್ಳುವದರಿಂದ ಶ್ರವಣಮಾಡುವದರಿಂದ, ಮನನಮಾಡುವದರಿಂದ, ಅರಿತುಕೊಳ್ಳುವದರಿಂದ ಇದೆಲ್ಲವೂ ವಿದಿತ(ವಾಗುತ್ತದೆ).

## ಆತ್ಮನೇ ಮುಖ್ಯಾರ್ಥದಲ್ಲಿ ಪ್ರಿಯನು

**(ಭಾಷ್ಯ)**

**೩೫೮. ಸ ಹೋವಾಚ । ಅಮೃತತ್ವಸಾಧನಂ ವೈರಾಗ್ಯಮುಪದಿದಿಕ್ಷುಃ ಜಾಯಾಪತಿಪುತ್ರಾದಿಭ್ಯೋ ವಿರಾಗಮ್ ಉತ್ಪಾದಯತಿ ತತ್ಸಂನ್ಯಾಸಾಯ ।**

ನ ವೈ । ವೈಶಬ್ದಃ ಪ್ರಸಿದ್ಧಸ್ಮರಣಾರ್ಥಃ[1] । ಪ್ರಸಿದ್ಧಮೇವೈತಲ್ಲೋಕೇ । ಪತ್ಯುರ್ಭರ್ತುಃ ಕಾಮಾಯ ಪ್ರಯೋಜನಾಯ ಜಾಯಾಯಾಃ ಪತಿಃ ಪ್ರಿಯೋ ನ ಭವತಿ । ಕಿಂ ತರ್ಹಿ ಆತ್ಮನಸ್ತು ಕಾಮಾಯ ಪ್ರಯೋಜನಾಯೈವ ಭಾರ್ಯಾಯಾಃ[2] ಪತಿಃ ಪ್ರಿಯೋ ಭವತಿ । ತಥಾ 'ನ ವಾ ಅರೇ ಜಾಯಾಯಾ' ಇತ್ಯಾದಿ ಸಮಾನಮ್ ಅನ್ಯತ್ । ನ ವಾ ಅರೇ ಪುತ್ರಾಣಾಮ್ । ನ ವಾ ಅರೇ ವಿತ್ತಸ್ಯ, ನ ವಾ ಅರೇ ಬ್ರಹ್ಮಣಃ, ನ ವಾ ಅರೇ ಕ್ಷತ್ರಸ್ಯ, ನ ವಾ ಅರೇ ಲೋಕಾನಾಮ್, ನ ವಾ ಅರೇ ದೇವಾನಾಮ್, ನ ವಾ ಅರೇ ಭೂತಾನಾಮ್, ನ ವಾ ಅರೇ ಸರ್ವಸ್ಯ । ಪೂರ್ವಂ ಪೂರ್ವಂ ಯಥಾಸನ್ನೇ ಪ್ರೀತಿಸಾಧನೇ ವಚನಮ್ । ತತ್ರ ತತ್ರ ಇಷ್ಟತರತ್ವಾತ್ ವೈರಾಗ್ಯಸ್ಯ । ಸರ್ವಗ್ರಹಣಮ್ ಉಕ್ತಾನುಕ್ತಾರ್ಥಮ್ । ತಸ್ಮಾತ್ ಲೋಕಪ್ರಸಿದ್ಧಮೇತತ್ ಆತ್ಮೈವ ಪ್ರಿಯೋ ನಾನ್ಯತ್ । "ತದೇತತ್ ಪ್ರೇಯಃ ಪುತ್ರಾತ್" (೧-೪-೮) ಇತ್ಯುಪನ್ಯಸ್ತಂ ತಸ್ಯೈತತ್ ವೃತ್ತಿಸ್ಥಾನೀಯಂ ಪ್ರಪಞ್ಚಿತಮ್ । ತಸ್ಮಾತ್ ಆತ್ಮಪ್ರೀತಿಸಾಧನತ್ವಾತ್ ಗೌಣೀ ಅನ್ಯತ್ರ ಪ್ರೀತಿಃ, ಆತ್ಮನ್ಯೇವ ಮುಖ್ಯಾ ॥

(ಭಾಷ್ಯಾರ್ಥ)

ಸ ಹೋವಾಚ (ಎಂದು ಮುಂತಾಗಿರುವ ಈ ಕಂಡಿಕೆಯ ಅರ್ಥವೇನೆಂದರೆ) : ಅಮೃತತ್ವಕ್ಕೆ ಸಾಧನವಾದ ವೈರಾಗ್ಯವನ್ನು ಉಪದೇಶಮಾಡಲೆಳಸಿ ಹೆಂಡತಿ, ಗಂಡ, ಮಕ್ಕಳು ಮುಂತಾದವುಗಳಲ್ಲಿ- ಅವುಗಳನ್ನು ಬಿಡಲೆಂಬುದಕ್ಕಾಗಿ- ವಿರಾಗವನ್ನುಂಟುಮಾಡುತ್ತಿದಾನೆ. ನ ವೈ ಎಂಬಲ್ಲಿ ವೈ (ಅಷ್ಟೆ, ಅಲ್ಲವೆ) ಶಬ್ದವು ಪ್ರಸಿದ್ಧವಾದದ್ದನ್ನು ನೆನಪಿಗೆ ತರುವದಕ್ಕೆ (ಉಪಯೋಗಿಸಿದ್ದು). ಲೋಕದಲ್ಲಿ ಇದು ಗೊತ್ತೇ ಇದೆ. (ಏನೆಂದರೆ) ಪತಿಯ, ಗಂಡನ, ಕಾಮಕ್ಕಾಗಿ ಪ್ರಯೋಜನಕ್ಕಾಗಿ ಹೆಂಡತಿಗೆ ಪತಿಯು ಪ್ರಿಯನಾಗಿರುವದೇ ಇಲ್ಲ. ಮತ್ತೇನೆಂದರೆ ತನ್ನ ಕಾಮಕ್ಕಾಗಿಯೇ ಹೆಂಡತಿಗೆ ಗಂಡನು ಪ್ರಿಯನಾಗಿರುತ್ತಾನೆ.[4] ಹೀಗೆಯೇ 'ಎಲೆ ಹೆಂಡತಿಯ ಕಾಮಕ್ಕಾಗಿ' ಮುಂತಾದ ಮಿಕ್ಕದ್ದೆಲ್ಲವೂ ಇದಕ್ಕೆ ಸಮಾನವಾಗಿ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದಾಗಿದೆ). 'ಎಲೆ ಮಕ್ಕಳ', 'ಎಲೆ

---

1. ಸ್ಮಾರಣಾರ್ಥಃ ಎಂದಿದ್ದರೆ ಚೆನ್ನಾಗಿತ್ತು.

2. ಭಾರ್ಯಾಯಾಃ ಎಂಬುದರ ಬದಲು ಭಾಷ್ಯದಲ್ಲಿ 'ಜಾಯಾಯಾಃ' ಎಂದೇ ಮೊದಲು ಇತ್ತೆಂದು ಊಹಿಸುವದಕ್ಕೆಡೆಯಿದೆ.

3. ಶ್ರುತಿಕ್ರಮದಲ್ಲಿ ಗಂಡನನ್ನೇ ಮೊದಲು ಹೇಳಿದೆ ; ಏಕೆಂದರೆ ಮೈತ್ರೇಯಿಗೆ ಗಂಡನೇ ಮೊದಲನೆಯ ಪ್ರೀತಿಸಾಧನ.

4. ತನ್ನಮೇಲಿರುವ ಪ್ರೀತಿಯೇ ಗಂಡನನ್ನು ಪ್ರೀತಿಸುವದಕ್ಕೆ ಕಾರಣವಾಗಿರುತ್ತದೆ ಎಂದರ್ಥ. ಸಂಸ್ಕೃತದಲ್ಲಿ ಆತ್ಮನು ಎಂದರೆ ತಾನು ಎಂದರ್ಥ. ಆತ್ಮನು ಪ್ರತಿಯೊಬ್ಬನ ಸ್ವರೂಪವೇ ಆಗಿರುವದರಿಂದ ಅತ್ಯಂತಪ್ರಿಯವಾದದ್ದು ಎಂಬುದು ಪ್ರಕೃತದಲ್ಲಿ ವಿವಕ್ಷಿತ.

ವಿತ್ತದ', 'ಎಲೆ ಬ್ರಾಹ್ಮಣಜಾತಿಯ', 'ಎಲೆ ಕ್ಷತ್ರಿಯಜಾತಿಯ', 'ಎಲೆ ಲೋಕಗಳ', 'ಎಲೆ ಭೂತಗಳ', 'ಎಲೆ ಯಾವದೇ ಆಗಲಿ' (ತನ್ನತನ್ನ ಕಾಮಕ್ಕಾಗಿ ಅಲ್ಲ. ಆತ್ಮನ ಕಾಮಕ್ಕಾಗಿಯೇ ಪ್ರಿಯವಾಗಿರುತ್ತದೆ). ನಮಗೆ ಹತ್ತಿರಹತ್ತಿರವಾಗಿರುವ ಪ್ರೀತಿಸಾಧನವನ್ನು (ಇಲ್ಲಿ) ಮೊದಮೊದಲು ಹೇಳಿರುತ್ತದೆ; ಏಕೆಂದರೆ ಅದದರಲ್ಲಿ ವೈರಾಗ್ಯವು (ಅಷ್ಟು) ಹೆಚ್ಚಾಗಿ (ಆಗಬೇಕಾದದ್ದು) ಇಷ್ಟವಾಗಿರುತ್ತದೆ.[1] "ಯಾವದೇ ಆಗಲಿ" ಎಂದು (ಸರ್ವಶಬ್ದವನ್ನು) ಗ್ರಹಣ ಮಾಡಿರುವದು (ಇಲ್ಲಿ) ಹೇಳಿರುವ ಮತ್ತು ಹೇಳದಿರುವ (ಎಲ್ಲವನ್ನೂ ತೆಗೆದುಕೊಳ್ಳಬೇಕೆಂದು ತಿಳಿಸು)ವದಕ್ಕಾಗಿ.[2] ಆದ್ದರಿಂದ ಆತ್ಮನೇ ಪ್ರಿಯನು ಮತ್ತೆ ಯಾವದೂ (ಪ್ರಿಯ)ವಲ್ಲ ಎಂಬುದು ಲೋಕಪ್ರಸಿದ್ಧವಾಗಿದೆ (ಎಂದಾಯಿತು). "ಆ ಇದು ಮಗನಿಗಿಂತ ಪ್ರಿಯತರವಾದದ್ದು" (೧-೪-೮) ಎಂದು (ಮೊದಲೇ) ಹೇಳಿತ್ತಷ್ಟೆ; ಅದಕ್ಕೇ (ಇಲ್ಲಿ) ವೃತ್ತಿಯಂತಿರುವ ಈ (ಕಂಡಿಕೆಯಲ್ಲಿ) ವಿವರವಾಗಿ ಹೇಳಿರುತ್ತದೆ. ಆದ್ದರಿಂದ ಆತ್ಮನ ಪ್ರೀತಿಗೆ ಸಾಧನವಾಗಿರುವದರಿಂದ ಮತ್ತೊಂದರಲ್ಲಿ ಗೌಣಪ್ರೀತಿ(ಯಿರುತ್ತದೆ), ಆತ್ಮನಲ್ಲಿಯೇ ಮುಖ್ಯ (ಪ್ರೀತಿಯಿದೆ).

## ಆತ್ಮನನ್ನೇ ಶ್ರವಣಾದಿಗಳಿಂದ ಕಂಡುಕೊಳ್ಳಬೇಕು

(ಭಾಷ್ಯ)

೩೫೫. ತಸ್ಮಾತ್ ಆತ್ಮಾ ವಾ ಅರೇ ದ್ರಷ್ಟವ್ಯೋ ದರ್ಶನಾರ್ಹಃ ದರ್ಶನವಿಷಯಮ್ ಆಪಾದಯಿತವ್ಯಃ। ಶ್ರೋತವ್ಯಃ, ಪೂರ್ವಮ್ ಆಚಾರ್ಯತಃ ಆಗಮತಶ್ಚ। ಪಶ್ಚಾತ್ ಮಂತವ್ಯಃ, ತರ್ಕತಃ। ತತೋ ನಿದಿಧ್ಯಾಸಿತವ್ಯಃ, ನಿಶ್ಚಯೇನ ಧ್ಯಾತವ್ಯಃ। ಏವಂ ಹಿ ಅಸೌ ದೃಷ್ಟೋ ಭವತಿ ಶ್ರವಣಮನನನಿದಿಧ್ಯಾಸನಸಾಧನೈರ್ನಿರ್ವರ್ತಿತೈಃ। ಯದಾ ಏಕತ್ವಮ್ ಏತಾನ್ಯುಪಗತಾನಿ ತದಾ ಸಮ್ಯಗ್ದರ್ಶನಂ ಬ್ರಹ್ಮೈಕತ್ವವಿಷಯಂ ಪ್ರಸೀದತಿ ನಾನ್ಯಥಾ ಶ್ರವಣಮಾತ್ರೇಣ। ಯತ್ ಬ್ರಹ್ಮಕ್ಷತ್ರಾದಿಕರ್ಮನಿಮಿತ್ತಂ[3] ವರ್ಣಾಶ್ರಮಾದಿಲಕ್ಷಣಮ್ ಆತ್ಮನಿ ಅವಿದ್ಯಾರೋಪಣ[4] ಪ್ರತ್ಯಯವಿಷಯಂ ಕ್ರಿಯಾಕಾರಕಫಲಾತ್ಮಕಮ್

---

1. ಪ್ರಿಯವೆಂದು ಭಾವಿಸುವ ವಸ್ತು ಎಷ್ಟೆಷ್ಟು ತನಗೆ ಹತ್ತಿರವಿರುವದೋ ಅಷ್ಟಷ್ಟು ಅದರಲ್ಲಿ ಅಭಿಮಾನವು ಹೆಚ್ಚಾಗಿರುತ್ತದೆ; ಆ ಅಭಿಮಾನವೇ ಆತ್ಮಜ್ಞಾನಕ್ಕೆ ಮುಖ್ಯವಾದ ಪ್ರತಿಬಂಧಕವಾಗಿರುತ್ತದೆ.

2. ಇಲ್ಲಿ ಕೊಟ್ಟಿರುವಷ್ಟು ವಸ್ತುಗಳಲ್ಲಿ ಪ್ರಿಯತ್ವದ ಅಭಿಮಾನವು ಹೋದರೆ ಸಾಲದು; ಅನಾತ್ಮವೆಲ್ಲವೂ ನಿಜವಾಗಿ ಆತ್ಮಾರ್ಥವಾಗಿಯೇ ಪ್ರಿಯ, ತಾನೇ ಪ್ರಿಯವಲ್ಲ–ಎಂದು ತಿಳಿಸಬೇಕಾಗಿದೆ.

3. 'ಕರ್ಮನಿಮಿತ್ತಮ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. 'ಅಧ್ಯಾರೋಪಿತ' ಎಂಬದಕ್ಕಿಂತ ಈ ಪಾಠವೇ ಮೇಲು.

**ಅವಿದ್ಯಾಪ್ರತ್ಯಯವಿಷಯಂ ರಜ್ಜ್ವಾಮಿವ ಸರ್ಪಪ್ರತ್ಯಯವಿಷಯಃ[1] ತದುಪಮರ್ದನಾರ್ಥಮ್ ಆಹ—ಆತ್ಮನಿ ಖಲು ಅರೇ ಮೈತ್ರೇಯಿ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿದಿತಂ ವಿಜ್ಞಾತಂ ಭವತಿ ॥**

(ಭಾಷ್ಯಾರ್ಥ)

ಆದ್ದರಿಂದ, ಎಲೆ, ಆತ್ಮನೇ ಕಂಡುಕೊಳ್ಳತಕ್ಕವನು ಕಂಡುಕೊಳ್ಳುವದಕ್ಕೆ ತಕ್ಕವನು, ದರ್ಶನಕ್ಕೆ ವಿಷಯವಾಗಿ ಮಾಡಿಕೊಳ್ಳತಕ್ಕವನು[2], ಶ್ರವಣಮಾಡತಕ್ಕವನು. ಮೊದಲು ಆಚಾರ್ಯರಿಂದಲೂ ಆಗಮದಿಂದಲೂ ಕೇಳಿ (ತಿಳಿದುಕೊಳ್ಳುವದಕ್ಕೆ) ತಕ್ಕವನು; ಬಳಿಕ ತರ್ಕದಿಂದ ಮನನಮಾಡತಕ್ಕವನು; ಆಮೇಲೆ ನಿದಿಧ್ಯಾಸನಮಾಡತಕ್ಕವನು, ನಿಶ್ಚಯದಿಂದ ಧ್ಯಾನಮಾಡಿ (ಅರಿಯುವದಕ್ಕೆ) ತಕ್ಕವನು.[3] ಹೀಗೆ **ಶ್ರವಣಮನನನಿದಿಧ್ಯಾಸನಗಳೆಂಬ ಸಾಧನಗಳನ್ನು ಮಾಡಿದರಲ್ಲವೆ, ಇವನನ್ನು ಕಂಡರೆ ಆಗುವದು? ಯಾವಾಗ ಇವುಗಳು ಒಂದಾಗುವವೋ ಆಗ ಬ್ರಹ್ಮೈಕತ್ವವಿಷಯದ ಸಮ್ಯಗ್ದರ್ಶನವು ಪ್ರಸನ್ನವಾಗುತ್ತದೆ. ಹಾಗಿಲ್ಲದೆ ಬರಿಯ ಶ್ರವಣಮಾತ್ರದಿಂದ (ಪ್ರಸನ್ನವಾಗು)ವದಿಲ್ಲ.**[4]

ಆತ್ಮನಲ್ಲಿ ತಪ್ಪುತಿಳಿವಳಿಕೆಯಿಂದ ಅಧ್ಯಾರೋಪವನ್ನು ಮಾಡುವ[5] ಪ್ರತ್ಯಯಕ್ಕೆ ವಿಷಯವಾಗಿರುವ ಕರ್ಮನಿಮಿತ್ತವಾದ ವರ್ಣಾಶ್ರಮಗಳೇ

---

1. 'ಸರ್ಪಪ್ರತ್ಯಯಃ' ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

2. ಆತ್ಮನ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು ಎಂದೇ ಅರ್ಥ; ವಿಷಯವನ್ನಾಗಿ ಮಾಡಿಕೊಳ್ಳಬೇಕು ಎಂಬುದೇನೂ ವಿವಕ್ಷಿತವಲ್ಲ; ಏಕೆಂದರೆ ಆತ್ಮನು ವಿಷಯವಲ್ಲ.

3. ಇಲ್ಲಿ ಧ್ಯಾನವೆಂದರೆ ವಸ್ತುವನ್ನು ಸೂಕ್ಷ್ಮಬುದ್ಧಿಯಿಂದ ಚೆನ್ನಾಗಿ ನೋಡಿ ಅರಿತುಕೊಳ್ಳುವದು; ಉಪಾಸನೆಯಂತೆ ಬರಿಯ ಭಾವನೆಯಲ್ಲ.

4. ಶ್ರವಣಮನನನಿದಿಧ್ಯಾಸನಗಳು ಒಂದಾಗುವದು —ಎಂದರೆ ಶ್ರುತಿಯುಕ್ತ್ಯನುಭವಗಳು ಹೊಂದಿಕೊಳ್ಳುವದು. ಆಗಲೇ ಆತ್ಮದರ್ಶನವು ಸರಿಯಾಯಿತೆಂದು ನಿಶ್ಚಯಿಸಬಹುದು ಎಂದರ್ಥ. ಬರಿಯ ಶ್ರವಣಮಾತ್ರದಿಂದ ಎಂದರೆ ಮನನನಿದಿಧ್ಯಾಸನಗಳಿಗೆ ಹೊಂದದೆ ಇರುವ ಶ್ರವಣಮಾತ್ರದಿಂದ ಎಂದರ್ಥ; ಮನನನಿದಿಧ್ಯಾಸನಗಳಿಲ್ಲದ ಎಂದೇನೂ ಅರ್ಥವಲ್ಲ; ಏಕೆಂದರೆ ಉತ್ತಮಾಧಿಕಾರಿಗಳಿಗೆ ವಾಕ್ಯಶ್ರವಣಮಾತ್ರದಿಂದಲೂ ಜ್ಞಾನವುಂಟಾಗಬಹುದು; ಸೂ. ಭಾ. ೪-೧-೨, (ಭಾ. ಭಾ. ೫೦೬).

5. 'ಆರೋಪಿತಪ್ರತ್ಯಯ' ಎಂಬುದು ಹೊಂದುವದಿಲ್ಲವಾದ್ದರಿಂದ ಆರೋಪಣಪ್ರತ್ಯಯ ಎಂದು ತಿದ್ದಿಕೊಂಡಿದೇವೆ. ವರ್ಣಾಶ್ರಮಗಳು ಅವಿದ್ಯಾಪ್ರತ್ಯಯಕ್ಕೆ ವಿಷಯಗಳು, ಎಂದರೆ ಹುಸಿತೋರಿಕೆಗಳು ಎಂದರ್ಥ.

ಮುಂತಾದ[1] ರೂಪದ ಬ್ರಹ್ಮಕ್ಷತ್ರಾದಿಯಾದ ಯಾವ ಕ್ರಿಯಾಕಾರಕಫಲಾತ್ಮಕವಾದ (ದ್ವೈತವಿರುವದೋ) ಹಗ್ಗದಲ್ಲಿ ಸರ್ಪಪ್ರತ್ಯಯಕ್ಕೆ ವಿಷಯವಾಗಿರುವ[2] (ಹುಸಿತೋರಿಕೆ)ಯಂತೆ ಅವಿದ್ಯಾಪ್ರತ್ಯಯಕ್ಕೆ ವಿಷಯವಾಗಿರುವ ಅದನ್ನು ತೊಡೆದುಹಾಕುವದಕ್ಕಾಗಿ (ಶ್ರುತಿ ಹೀಗೆಂದು) ಹೇಳುತ್ತಿದೆ: ಎಲೆ, ಮೈತ್ರೇಯಿ, ಆತ್ಮನನ್ನು ಕಂಡುಕೊಂಡರೆ, ಶ್ರವಣಮಾಡಿಕೊಂಡರೆ, ಮನನಮಾಡಿದರೆ, ಅರಿತುಕೊಂಡರೆ, ಇದೆಲ್ಲವೂ ವಿದಿತವಾಗುವದು, ಅರಿಯಲ್ಪಟ್ಟದ್ದಾಗುವದು.[3]

## ೨೮೩. ದ್ವೈತವೆಲ್ಲವೂ ಆತ್ಮನಲ್ಲಿಯೇ ಅಧ್ಯಾರೋಪಿತ

(ಉಪನಿಷತ್ತು)

**ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮ ವೇದ ಕ್ಷತ್ರಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಕ್ಷತ್ರಂ ವೇದ ಲೋಕಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ಲೋಕಾನ್ ವೇದ ದೇವಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ದೇವಾನ್ ವೇದ ಭೂತಾನಿ ತಂ ಪರಾದುರ್ಯೋಽನ್ಯತ್ರಾತ್ಮನೋ ಭೂತಾನಿ ವೇದ ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದೇದಂ ಬ್ರಹ್ಮೇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮಾನಿ ಭೂತಾನೀದಗ್ಂ ಸರ್ವಂ ಯದಯಮಾತ್ಮಾ ॥ ೬ ॥**

---

1. ಈ ಭಾಷ್ಯವಾಕ್ಯವು ಲೇಖಕರ ಪ್ರಮಾದದಿಂದ ಏನೋ ಹೆಚ್ಚು ಕಡಿಮೆಯಾಗಿರುವಂತೆ ಕಾಣುತ್ತದೆ. 'ಕರ್ಮನಿಮಿತ್ತಂ' ಎಂಬ ಅಚ್ಚಿನ ಪಾಠದಲ್ಲಿ ಬ್ರಹ್ಮಕ್ಷತ್ರಾದಿಕರ್ಮನಿಮಿತ್ತವು ಕ್ರಿಯಾಕಾರಕಫಲಾತ್ಮಕವಾಗಿರುವವೆಂದು ಹೇಳುವದಕ್ಕೆ ಬರುವದಿಲ್ಲ; ಏಕೆಂದರೆ ಕಾರಕಮಾತ್ರವಾಗಿದೆ. ಆದ್ದರಿಂದ ನಾವು ಕರ್ಮನಿಮಿತ್ತವರ್ಣಾಶ್ರಮಾದಿ -ಎಂದು ಸಮಾಸವಾಗಿಟ್ಟುಕೊಂಡಿದೇವೆ. ಈಗ ಆದಿ ಎಂಬ ಮಾತಿಗೆ ಕ್ರಿಯಾಫಲಗಳು ಅರ್ಥವಾಗಬಹುದಾಗುತ್ತದೆ. ವರ್ಣಾಶ್ರಮಗಳೇ ಮುಂತಾದ ಎಂಬಲ್ಲಿ ಆದಿಪದಕ್ಕೆ ಅವಸ್ಥಾದಿಗಳು ಎಂದು ಟೀಕೆಯ ಅರ್ಥ ; ಮುಂದಿನ ಕಂಡಿಕೆಯಲ್ಲಿ ಹೇಳಿರುವ ಲೋಕದೇವಾದಿಗಳು ಎಂದು ನಾವು ಗ್ರಹಿಸಿದೇವೆ.

2. 'ಸರ್ಪಪ್ರತ್ಯಯಃ' ಎಂಬ ಅಚ್ಚಿನ ಪಾಠವನ್ನು ಸರ್ಪಪ್ರತ್ಯಯವಿಷಯಃ ಎಂದು ತಿದ್ದಿಕೊಂಡಿರುತ್ತೇವೆ; ಏಕೆಂದರೆ ಅವಿದ್ಯಾಪ್ರತ್ಯಯಕ್ಕೆ ವಿಷಯವಾಗಿರುವ ದ್ವೈತಕ್ಕೇ ದೃಷ್ಟಾಂತವು ಬೇಕಾಗಿದೆ.

3. ಶ್ರುತಿಯಲ್ಲಿ 'ದರ್ಶನೇನ ಮತ್ಯಾ ವಿಜ್ಞಾನೇನ' ಎಂದಿದ್ದರೂ ಭಾಷ್ಯದಲ್ಲಿ ೪-೫-೬ರ ಅಕ್ಷರಕ್ಕೆ ಅನುಗುಣವಾಗಿ ದೃಷ್ಟೇ ಶ್ರುತೇ ಎಂದು ಮುಂತಾಗಿ ಬರೆದುಕೊಂಡಿರುವದಕ್ಕೆ ಕಾರಣವು ತಿಳಿಯಲಿಲ್ಲ ; ವಾರ್ತಿಕದಲ್ಲಿ 'ವಿಜ್ಞಾನೇನ' ಎಂದೇ ಶ್ರುತಿಯನ್ನು ಉದಾಹರಿಸಿಕೊಂಡಿದೆ.

೬. ಯಾವನು ಆತ್ಮನಿಗಿಂತ ಬೇರೆಯಾಗಿ ಬ್ರಹ್ಮವನ್ನು ಅರಿಯುತ್ತಾನೋ ಅವನನ್ನು ಬ್ರಹ್ಮವು ಹೊರಕ್ಕೆ ದೂಡುವದು. ಯಾವನು ಆತ್ಮನಿಗಿಂತ ಬೇರೆಯಾಗಿ ಕ್ಷತ್ರವನ್ನು ಅರಿಯುತ್ತಾನೋ, ಅವನನು ಕ್ಷತ್ರವು ಹೊರದೂಡುವದು. ಯಾವನು ಆತ್ಮನಿಗಿಂತ ಬೇರೆಯಾಗಿ ಲೋಕಗಳನ್ನು ಅರಿಯುತ್ತಾನೋ, ಅವನನ್ನು ಲೋಕಗಳು ಹೊರದೂಡುವವು. ಯಾವನು ಆತ್ಮನಿಗಿಂತ ಬೇರೆಯಾಗಿ ದೇವತೆಗಳನ್ನು ಅರಿಯುತ್ತಾನೋ ಅವನನ್ನು ದೇವತೆಗಳು ಹೊರದೂಡುವರು. ಯಾವನು ಆತ್ಮನಿಗಿಂತ ಬೇರೆಯಾಗಿ ಭೂತಗಳನ್ನು ಅರಿಯುತ್ತಾನೋ ಅವನನ್ನು ಭೂತಗಳು ಹೊರದೂಡುವವು. ಯಾವನು ಯಾವದನ್ನೇ ಆಗಲಿ ಆತ್ಮನಿಗಿಂತ ಬೇರೆಯಾಗಿ ಅರಿಯುತ್ತಾನೋ, ಅವನನ್ನು ಅದೆಲ್ಲವೂ ಹೊರದೂಡುವದು. ಈ ಬ್ರಹ್ಮವು, ಈ ಕ್ಷತ್ರವು, ಈ ಲೋಕಗಳು, ಈ ದೇವತೆಗಳು, ಈ ಭೂತಗಳು, ಈ ಎಲ್ಲವೂ ಈ ಆತ್ಮನೆಂಬುದೇ.

## ಆತ್ಮನೊಬ್ಬನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ ಎಂಬುದು ಹೇಗೆ?

(ಭಾಷ್ಯ)

೩೬೦. ನನು ಕಥಮ್ ಅನ್ಯಸ್ಮಿನ್ ವಿದಿತೇ ಅನ್ಯತ್ ವಿದಿತಂ ಭವತಿ? ನೈಷ ದೋಷಃ। ನ ಹಿ ಆತ್ಮವ್ಯತಿರೇಕೇಣ ಅನ್ಯತ್ ಕಿಂಚಿತ್ ಅಸ್ತಿ। ಯದ್ಯಸ್ತಿ ನ ತದ್ ವಿದಿತಂ ಸ್ಯಾತ್। ನ ತ್ವನ್ಯದಸ್ತಿ, ಆತ್ಮೈವ ತು ಸರ್ವಮ್ ಕಸ್ಮಾತ್ ಸರ್ವಂ ಆತ್ಮನಿ ವಿದಿತೇ ವಿದಿತಂ ಸ್ಯಾತ್। ಕಥಂ ಪುನರಾತ್ಮೈವ ಸರ್ವಮಿತಿ ಏತಚ್ಛ್ರಾವಯತಿ। ಬ್ರಹ್ಮ ಬ್ರಾಹ್ಮಣಜಾತಿಃ ತಂ ಪುರುಷಂ ಪರಾದಾತ್ ಪರಾದಧ್ಯಾತ್ ಪರಾಕುರ್ಯಾತ್। ಕಮ್? ಯೋಽನ್ಯತ್ರ ಆತ್ಮನ ಆತ್ಮಸ್ವರೂಪವ್ಯತಿರೇಕೇಣ ಆತ್ಮೈವ ನ ಭವತಿ ಇಯಂ ಬ್ರಾಹ್ಮಣಜಾತಿಃ ಇತಿ ತಾಂ ಯೋ ವೇದ, ತಂ ಪರಾದಧ್ಯಾತ್ ಸಾ ಬ್ರಾಹ್ಮಣಜಾತಿಃ ಅನಾತ್ಮಸ್ವರೂಪೇಣ ಮಾಂ ಪಶ್ಯತೀತಿ। ಪರಮಾತ್ಮಾ ಹಿ ಸರ್ವೇಷಾಮ್ ಆತ್ಮಾ। ತಥಾ ಕ್ಷತ್ರಂ ಕ್ಷತ್ರಿಯಜಾತಿಃ। ತಥಾ ಲೋಕಾಃ ದೇವಾಃ, ಭೂತಾನಿ, ಸರ್ವಮ್, ಇದಂ ಬ್ರಹ್ಮೇತಿ। ಯಾನ್ಯನುಕ್ರಾನ್ತಾನಿ ತಾನಿ ಸರ್ವಾಣಿ ಆತ್ಮೈವ। ಯದಯಮಾತ್ಮಾ ಯೋಽಯಮಾತ್ಮಾ ದ್ರಷ್ಟವ್ಯಃ ಶ್ರೋತವ್ಯಃ ಇತಿ ಪ್ರಕೃತಃ। ಯಸ್ಮಾತ್ ಆತ್ಮನೋ ಜಾಯತೇ ಆತ್ಮನ್ಯೇವ ಲೀಯತೇ ಆತ್ಮಮಯಂ ಚ ಸ್ಥಿತಿಕಾಲೇ ಆತ್ಮವ್ಯತಿರೇಕೇಣ ಅಗ್ರಹಣಾತ್ ಆತ್ಮೈವ ಸರ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ):- ಒಂದನ್ನು ಅರಿತುಕೊಂಡರೆ ಮತ್ತೊಂದನ್ನು ಅರಿತಂತೆ ಆಗುವದೆಂಬುದು ಹೇಗೆ ?

(ಪರಿಹಾರ):- ಇದೇನೂ ದೋಷವಲ್ಲ. ಏಕೆಂದರೆ ಆತ್ಮನಿಗಿಂತ ಬೇರೆಯಾಗಿ ಮತ್ತೆ ಯಾವದೂ ಇರುವದಿಲ್ಲ. (ಹಾಗೆ) ಇರುವದೆಂದಾಗಿದ್ದರೆ ಅದನ್ನು ಅರಿತಿಲ್ಲವೆಂದಾಗುತ್ತಿತ್ತು; ಆದರೆ ಮತ್ತೊಂದು ಇರುವದಿಲ್ಲ, ಎಲ್ಲವೂ ಆತ್ಮನೇ. ಆದ್ದರಿಂದ ಆತನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಆಗಬಹುದಾಗಿದೆ.

ಇನ್ನು ಎಲ್ಲವೂ ಆತ್ಮನೆಂಬುದು ಹೇಗೆ? ಎಂಬಿವನ್ನು ಶ್ರುತಿಯು ತಿಳಿಸುತ್ತದೆ. ಬ್ರಹ್ಮವು, ಬ್ರಾಹ್ಮಣಜಾತಿಯು, ಆ ಪುರುಷನನ್ನು ಹೊರದೂಡುವದು, ಹೊರಕ್ಕೆ ಹಾಕುವದು, ತಿರಸ್ಕಾರಮಾಡೀತು. ಯಾರನ್ನು ? ಎಂದರೆ ಯಾವನು ಆತ್ಮನಿಗಿಂತ ಬೇರೆಯಾಗಿ, ಆತ್ಮಸ್ವರೂಪವನ್ನು ಬಿಟ್ಟು 'ಈ ಬ್ರಾಹ್ಮಣಜಾತಿಯು ಆತ್ಮನೇ ಆಗಿಲ್ಲ' ಎಂದು ಅದನ್ನು ಯಾವನು ಅರಿಯುವನೋ ಅವನನ್ನು, ಆ ಬ್ರಾಹ್ಮಣಜಾತಿಯು 'ನನ್ನನ್ನು ಅನಾತ್ಮಸ್ವರೂಪದಿಂದ ನೋಡುತ್ತಾನಲ್ಲ!' ಎಂದು ಹೊರಗೆ ಹಾಕುವದು. ಪರಮಾತ್ಮನೇ ಅಲ್ಲವೆ, ಎಲ್ಲರಿಗೂ ಆತ್ಮನು[1] ? ಇದರಂತೆ ಕ್ಷತ್ರವು, ಕ್ಷತ್ರಿಯಜಾತಿಯು. ಹೀಗೆಯೇ ಲೋಕಗಳು, ದೇವತೆಗಳು, ಭೂತಗಳು, ಎಲ್ಲವೂ.

'ಈ ಬ್ರಹ್ಮವು.....' ಎಂದು ಯಾವವನ್ನು ಒಂದೊಂದಾಗಿ ಹೇಳಿದೆಯೋ ಅವುಗಳೆಲ್ಲವೂ ಆತ್ಮನೇ. 'ಈ ಆತ್ಮನೆಂಬುದೇ' ಎಂದರೆ "ಕಂಡುಕೊಳ್ಳತಕ್ಕವನು, ಶ್ರವಣಮಾಡತಕ್ಕವನು......" (೨-೪-೫) ಎಂದು ಪ್ರಕೃತನಾಗಿರುತ್ತಾನಲ್ಲ, ಆ ಈ ಆತ್ಮನೇ. ಏಕೆಂದರೆ ಆತ್ಮನಿಂದ ಹುಟ್ಟುತ್ತದೆ, ಆತ್ಮನಲ್ಲಿಯೇ ಅಡಗುತ್ತದೆ, ಮತ್ತು ಸ್ಥಿತಿಕಾಲದಲ್ಲಿ ಆತ್ಮಮಯವಾಗಿಯೇ (ಇರುತ್ತದೆ). (ಯಾವದೇ ಆಗಲಿ) **ಆತ್ಮನನ್ನು ಬಿಟ್ಟು ತಿಳಿಯಬರುವದಿಲ್ಲವಾದ್ದರಿಂದ ಎಲ್ಲವೂ ಆತ್ಮನೇ.**

## ಸ್ಥಿತಿಕಾಲದಲ್ಲಿ ಯಾವದೂ ಆತ್ಮವ್ಯತಿರಿಕ್ತವಾಗಿರುವದಿಲ್ಲ

(ಉಪನಿಷತ್ತು)

**ಸ ಯಥಾ ದುನ್ದುಭೇರ್ಹನ್ಯಮಾನಸ್ಯ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ಗ್ರಹಣಾಯ ದುನ್ದುಭೇಸ್ತು ಗ್ರಹಣೇನ ದುನ್ದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ ॥ ೭ ॥**

---

1. ಆದ್ದರಿಂದ ಬ್ರಾಹ್ಮಣಜಾತಿಯೇ ಮುಂತಾದವಕ್ಕೂ ಅವನೇ ಆತ್ಮನು, ಅವನ ಸ್ವರೂಪದಲ್ಲಿಯೇ ಅವು ನಿಜವಾಗಿರುತ್ತವೆ.

೭. ಅದು ಹೇಗೆಂದರೆ ದುಂದುಭಿಯನ್ನು ಹೊಡೆಯುತ್ತಿರುವಲ್ಲಿ ಹೊರಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗಲಾರನೋ, ಆದರೆ ದುಂದುಭಿಯುವು (ಎಂದು) ಗ್ರಹಿಸುವದರಿಂದ ಅಥವಾ ದುಂದುಭಿಯ ಆಘಾತವನ್ನು (ಗ್ರಹಿಸುವದರಿಂದ) ಶಬ್ದವು ಗೃಹೀತವಾಗುತ್ತದೆ.

## ಎಲ್ಲವೂ ಚಿದನುಗತವೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೬೬೧. ಕಥಂ ಪುನರಿದಾನೀಮಿದಂ ಸರ್ವಮ್ ಆತ್ಮೈವ ಇತಿ ಗ್ರಹೀತುಂ ಶಕ್ಯತೇ ? ಚಿನ್ಮಾತ್ರಾನುಗಮಾತ್ ಸರ್ವತ್ರ ಚಿತ್ಸ್ವರೂಪತೈವೇತಿ ಗಮ್ಯತೇ । ತತ್ರ ದೃಷ್ಟಾನ್ತ ಉಚ್ಯತೇ। ಯತ್ಸ್ವರೂಪವ್ಯತಿರೇಕೇಣಾಗ್ರಹಣಂ ಯಸ್ಯ ತಸ್ಯ ತದಾತ್ಮತ್ವಮೇವ ಲೋಕೇ ದೃಷ್ಟಮ್। ಸ ಯಥಾ। ಸ ಇತಿ ದೃಷ್ಟಾನ್ತಃ। ಲೋಕೇ ಯಥಾ ದುನ್ದುಭೇಃ ಭೇರ್ಯಾದೇಃ ಹನ್ಯಮಾನಸ್ಯ ತಾಡ್ಯಮಾನಸ್ಯ ದಣ್ಡಾದಿನಾ, ನ ಬಾಹ್ಯಾನ್ ಶಬ್ದಾನ್ ಬಹಿರ್ಭೂತಾನ್ ಶಬ್ದವಿಶೇಷಾನ್ ದುನ್ದುಭಿಶಬ್ದಸಾಮಾನ್ಯಾತ್ ನಿಷ್ಕೃಷ್ಟಾನ್ ದುನ್ದುಭಿಶಬ್ದವಿಶೇಷಾನ್ ನ ಶಕ್ನುಯಾತ್ ಗ್ರಹಣಾಯ ಗ್ರಹೀತುಮ್। ದುನ್ದುಭೇಸ್ತು ಗ್ರಹಣೇನ ದುನ್ದುಭಿಶಬ್ದಸಾಮಾನ್ಯವಿಶೇಷತ್ವೇನ ದುನ್ದುಭಿಶಬ್ದಾ ಏತೇ ಇತಿ, ಶಬ್ದವಿಶೇಷಾ ಗೃಹೀತಾ ಭವನ್ತಿ। ದುನ್ದುಭಿಶಬ್ದಸಾಮಾನ್ಯವ್ಯತಿರೇಕೇಣ ಅಭಾವಾತ್ ತೇಷಾಮ್। ದುನ್ದುಭ್ಯಾಘಾತಸ್ಯ ವಾ। ದುನ್ದುಭೇಃ ಆಹನನಮ್ ಆಘಾತಃ। ದುನ್ದುಭ್ಯಾಘಾತವಿಶಿಷ್ಟಸ್ಯ ಶಬ್ದಸಾಮಾನ್ಯಸ್ಯ ಗ್ರಹಣೇನ ತದ್ಗತಾ ವಿಶೇಷಾಃ ಗೃಹೀತಾ ಭವನ್ತಿ। ನ ತು ತ ಏವ ನಿರ್ಭಿದ್ಯ ಗ್ರಹೀತುಂ ಶಕ್ಯನ್ತೇ। ವಿಶೇಷರೂಪೇಣ ಅಭಾವಾತ್ ತೇಷಾಮ್। ತಥಾ ಪ್ರಜ್ಞಾನವ್ಯತಿರೇಕೇಣ ಸ್ವಪ್ನಜಾಗರಿತಯೋಃ ನ ಕಶ್ಚಿತ್ ವಸ್ತುವಿಶೇಷೋ ಗೃಹ್ಯತೇ। ತಸ್ಮಾತ್ ಪ್ರಜ್ಞಾನವ್ಯತಿರೇಕೇಣ ಅಭಾವೋ ಯುಕ್ತಸ್ತೇಷಾಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :– ಇನ್ನು ಈಗ ಇದೆಲ್ಲವೂ ಆತ್ಮನೇ ಎಂದು ತಿಳಿದುಕೊಳ್ಳಬಹುದೆಂಬುದು ಹೇಗೆ ?

(ಉತ್ತರ) :– (ಹೇಗೆಂದರೆ) ಚಿನ್ಮಾತ್ರವೇ ಎಲ್ಲೆಲ್ಲಿಯೂ ಅನುಗತವಾಗಿರುವದರಿಂದ (ಎಲ್ಲವೂ) ಚಿತ್ಸ್ವರೂಪವೇ ಎಂದು ಗೊತ್ತುಮಾಡಿಕೊಳ್ಳಬಹುದಾಗಿದೆ. ಇದಕ್ಕೆ ದೃಷ್ಟಾಂತವನ್ನು (ಶ್ರುತಿ) ಹೇಳುತ್ತದೆ. **ಯಾವದರ ಸ್ವರೂಪವನ್ನು ಬಿಟ್ಟು ಯಾವದನ್ನು ಅರಿಯುವದಕ್ಕಾಗುವದಿಲ್ಲವೋ ಅದು ಅದರ ಸ್ವರೂಪವೇ (ಆಗಿರು)ವದೆಂದು ಲೋಕದಲ್ಲಿ ಕಂಡಿದು**

ತ್ತದೆ. ಅದು ಎಂದರೆ ದೃಷ್ಟಾಂತವು. ಹೇಗೆ ಲೋಕದಲ್ಲಿ ದುಂದುಭಿಯನ್ನು ಎಂದರೆ ನಗಾರಿಯೇ ಮುಂತಾದದ್ದನ್ನು ಹೊಡೆಯುತ್ತಿರುವಾಗ ಕೋಲು ಮುಂತಾದವುಗಳಿಂದ ಬಾರಿಸುತ್ತಿರುವಾಗ, ಹೊರಚ್ಚಾದ ಶಬ್ದಗಳನ್ನು ಹೊರಗಿರುವ ಶಬ್ದವಿಶೇಷಗಳನ್ನು, ದುಂದುಭಿಶಬ್ದಸಾಮಾನ್ಯಕ್ಕಿಂತ ಬೇರ್ಪಡಿಸಿಕೊಂಡ ದುಂದುಭಿಶಬ್ದವಿಶೇಷಗಳನ್ನು ಗ್ರಹಿಸುವದಕ್ಕೆ, ಅರಿತುಕೊಳ್ಳುವದಕ್ಕೆ ಶಕ್ತನಾಗಲಾರನೋ ಆದರೆ ದುಂದುಭಿಯುವು ಎಂದು ಗ್ರಹಿಸುವದರಿಂದ, ದುಂದುಭಿಶಬ್ದಸಾಮಾನ್ಯದ ವಿಶೇಷಗಳೆಂದು, ಇವು ದುಂದುಭಿಯ ಶಬ್ದಗಳು ಎಂದು (ಗ್ರಹಿಸುವದರಿಂದ, ಆ) ಶಬ್ದವಿಶೇಷಗಳನ್ನು– ಅವು ದುಂದುಭಿಶಬ್ದಸಾಮಾನ್ಯವನ್ನು ಬಿಟ್ಟು ಇಲ್ಲದಿರುವದರಿಂದ– ಗ್ರಹಿಸಬಹುದೋ; ಅಥವಾ ದುಂದುಭಿಯ ಆಘಾತವನ್ನು ದುಂದುಭಿಯ ಆಘಾತವೆಂದರೆ (ಅದನ್ನು) ಹೊಡೆಯುವದು. ದುಂದುಭಿಯನ್ನು ಬಾರಿಸುವಿಕೆಯಿಂದ ಕೂಡಿರುವ ಶಬ್ದಸಾಮಾನ್ಯವನ್ನು ಗ್ರಹಿಸುವದರಿಂದ[1] ಆದರಲ್ಲಿರುವ ವಿಶೇಷಗಳನ್ನು ಗ್ರಹಿಸುವದಕ್ಕಾಗುವದೋ, ಆದರೆ ಆ (ವಿಶೇಷ)ಗಳನ್ನೇ– ವಿಶೇಷರೂಪದಿಂದ ಅವು (ಬೇರೆಯಾಗಿ) ಇಲ್ಲದ್ದರಿಂದ– ಬೇರ್ಪಡಿಸಿಕೊಂಡು ಗ್ರಹಿಸುವದಕ್ಕೆ ಆಗುವದಿಲ್ಲವೋ[2]; ಹಾಗೆಯೇ ಪ್ರಜ್ಞಾನವನ್ನು ಬಿಟ್ಟು ಸ್ವಪ್ನಜಾಗರಿತಗಳಲ್ಲಿ ಯಾವದೊಂದು ವಸ್ತುವಿಶೇಷವನ್ನೂ ಗ್ರಹಿಸುವದಕ್ಕಾಗುವದಿಲ್ಲ. ಆದ್ದರಿಂದ ಅವು ಪ್ರಜ್ಞಾನವನ್ನು ಬಿಟ್ಟು (ಬೇರೆಯಾ)ಗಿಲ್ಲ ಎಂಬುದೇ ಯುಕ್ತವು[3].

## ಚಿದನುಗಮಕ್ಕೆ ಶಂಖದ ದೃಷ್ಟಾಂತ

(ಉಪನಿಷತ್ತು)

**ಸ ಯಥಾ ಶಙ್ಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ಶಙ್ಖಸ್ಯ ತು ಗ್ರಹಣೇನ ಶಙ್ಖಧ್ಮಸ್ಯ ವಾ ಶಬ್ದೋ ಗೃಹೀತಃ ॥ ೮ ॥**

1. ದುಂದುಭಿಯ ಶಬ್ದ ಎಂಬ ಶಬ್ದಸಾಮಾನ್ಯಕ್ಕೆ ಮೊದಲನೆಯದು ದೃಷ್ಟಾಂತ; ಇದು ಜಯಭೇರಿಯ ಶಬ್ದ, ಯುದ್ಧಸಂನಾಹಭೇರಿಯ ಶಬ್ದ – ಎಂದು ಮುಂತಾದ ಅವಾಂತರಶಬ್ದಸಾಮಾನ್ಯಕ್ಕೆ ಎರಡನೆಯದು ದೃಷ್ಟಾಂತ. ಅವಾಂತರಸಾಮಾನ್ಯವನ್ನು ಸಾಮಾನ್ಯವಿಶೇಷವೆಂದೂ ಕರೆಯುವರು.

2. ನಗಾರಿಯ ಶಬ್ದಸಾಮಾನ್ಯವನ್ನು ಬಿಟ್ಟು ಆದರ ವಿಶೇಷಗಳು ಇರುವದಿಲ್ಲ ಎಂಬ ಅರಿವೇ ದೃಷ್ಟಾಂತದಲ್ಲಿ ವಿವಕ್ಷಿತವಾಗಿರುತ್ತದೆ. ನಮಗೆ ಕಾಣುವ ದೃಶ್ಯಗಳು ಚಿತ್ಸಾಮಾನ್ಯದ ವಿಶೇಷಗಳು ಎಂಬುದೇನೂ ವಿವಕ್ಷಿತವಲ್ಲ; ಏಕೆಂದರೆ ಚೈತನ್ಯದಲ್ಲಿ ಸಾಮಾನ್ಯವಿಶೇಷಗಳಿಲ್ಲ.

3. ಸ್ವಪ್ನಜಾಗರಿತದಲ್ಲಿರುವ ವಸ್ತುವಿಶೇಷಗಳಂತಿರಲಿ, ಸ್ವಪ್ನಜಾಗರಿತಗಳೂ ಪ್ರಜ್ಞಾನಕ್ಕಿಂತ ವ್ಯತಿರಿಕ್ತವಾಗಿ ಇರುವದಿಲ್ಲ. ಇದನ್ನೇ ಜ್ಞಾತಸತ್ತೆ ಎನ್ನುವರು. ಜ್ಞಾತವಾಗಿರುವದಕ್ಕಿಂತ ಬೇರೆಯಾದ ಸತ್ತೆಯು ಅನಾತ್ಮಕ್ಕೆ ಇರುವದಿಲ್ಲ.

೮. ಅದು ಹೇಗೆಂದರೆ ಶಂಖವನ್ನು ಊದುತ್ತಿರುವಲ್ಲಿ ಹೊರಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗುವದಿಲ್ಲ; ಆದರೆ ಶಂಖದವು ಎಂದು ಗ್ರಹಿಸುವದರಿಂದ ಅಥವಾ ಶಂಖವನ್ನೂದಿದ್ದನ್ನು ಗ್ರಹಿಸುವದರಿಂದ ಶಬ್ದವು ಗೃಹೀತವಾಗುತ್ತದೆ.

(ಭಾಷ್ಯ)

೩೬೨. ತಥಾ ಸ ಯಥಾ ಶಙ್ಖಸ್ಯ ಧ್ಮಾಯಮಾನಸ್ಯ ಶಬ್ದೇನ ಸಂಯೋಜ್ಯಮಾನಸ್ಯ ಆಪೂರ್ಯಮಾಣಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾತ್ ಇತ್ಯೇವಮಾದಿ ಪೂರ್ವವತ್ ॥

(ಭಾಷ್ಯಾರ್ಥ)

ಹೀಗೆಯೇ ಅದು ಹೇಗೆಂದರೆ, ಶಂಖವನ್ನು ಊದುತ್ತಿರುವಲ್ಲಿ, ಶಬ್ದದಿಂದ ಕೂಡಿಸುತ್ತಿರುವಲ್ಲಿ, ಧ್ವನಿಗೈಯುತ್ತಿರುವಲ್ಲಿ, ಹೊರಚ್ಚಾದ ಶಬ್ದಗಳನ್ನು (ಗ್ರಹಿಸುವದಕ್ಕೆ) ಶಕ್ತನಾಗಲಾರನು ಎಂದು ಮುಂತಾಗಿರುವದನ್ನು ಹಿಂದಿನಂತೆ (ವ್ಯಾಖ್ಯಾನಮಾಡಬೇಕು).

## ಚಿದನುಗಮಕ್ಕೆ ವೀಣೆಯ ದೃಷ್ಟಾಂತ

(ಉಪನಿಷತ್ತು)

**ಸ ಯಥಾ ವೀಣಾಯೈ ವಾದ್ಯಮಾನಾಯೈ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ವೀಣಾಯೈ ತು ಗ್ರಹಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ ॥ ೯ ॥**

೯. ಅದು ಹೇಗೆಂದರೆ ವೀಣೆಯನ್ನು ನುಡಿಸುತ್ತಿರುವಲ್ಲಿ ಹೊರಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗಿರುವದಿಲ್ಲ. ಆದರೆ ವೀಣೆಯವು ಎಂದು ಗ್ರಹಿಸುವದರಿಂದ, ಅಥವಾ ವೀಣೆಯನ್ನು ನುಡಿಸಿದ್ದನ್ನು (ಗ್ರಹಿಸುವದರಿಂದ) ಶಬ್ದವು ಗೃಹೀತವಾಗುತ್ತದೆ.

## ಅನೇಕ ದೃಷ್ಟಾಂತಗಳ ಪ್ರಯೋಜನ

(ಭಾಷ್ಯ)

೩೬೩. ತಥಾ ವೀಣಾಯೈ ವಾದ್ಯಮಾನಾಯೈ ವೀಣಾಯಾ ವಾದ್ಯಮಾನಾಯಾಃ। ಅನೇಕದೃಷ್ಟಾನ್ತೋಪಾದಾನಮ್ ಇಹ ಸಾಮಾನ್ಯಬಹುತ್ವಖ್ಯಾಪನಾರ್ಥಮ್। ಅನೇಕೇ ಹಿ ವಿಲಕ್ಷಣಾಃ ಚೇತನಾಚೇತನರೂಪಾಃ ಸಾಮಾನ್ಯವಿಶೇಷಾಃ। ತೇಷಾಂ ಪಾರಮ್ಪರ್ಯಗತ್ಯಾ ಯಥಾ ಏಕಸ್ಮಿನ್ ಮಹಾಸಾಮಾನ್ಯೇಽನ್ತರ್ಭಾವಃ ಪ್ರಜ್ಞಾನಘನೇ ಕಥಂ ನಾಮ ಪ್ರದರ್ಶಯಿತವ್ಯಃ ಇತಿ ದುನ್ದುಭಿಶಙ್ಖವೀಣಾಶಬ್ದಸಾಮಾನ್ಯವಿಶೇಷಾಣಾಂ ಯಥಾ ಶಬ್ದತ್ವೇ

ಅನ್ತರ್ಭಾವಃ। ಏವಂ ಸ್ಥಿತಿಕಾಲೇ ತಾವತ್ ಸಾಮಾನ್ಯವಿಶೇಷಾವ್ಯತಿರೇಕಾತ್ ಬ್ರಹ್ಮೈಕತ್ವಂ ಶಕ್ಯಮವಗನ್ತುಮ್ ॥

(ಭಾಷ್ಯಾರ್ಥ)

ಇದರಂತೆ "ವೀಣಾಯೈ ವಾದ್ಯಮಾನಾಯೈ" (ವೀಣಾಯಾ ವಾದ್ಯಮಾನಾಯಾಃ ಎಂಬ ಕಂಡಿಕೆಗೂ ವ್ಯಾಖ್ಯಾನ).

ಅನೇಕ ದೃಷ್ಟಾಂತಗಳನ್ನು ತೆಗೆದುಕೊಂಡಿರುವದು, ಸಾಮಾನ್ಯಗಳು, ಅನೇಕವಾಗಿರುವವೆಂಬುದನ್ನು ತಿಳಿಸುವದಕ್ಕೆ[1]. ಏಕೆಂದರೆ ಚೇತನಾಚೇತನ ರೂಪವಾದ (ಒಂದಕ್ಕಿಂತ ಒಂದು) ವಿಲಕ್ಷಣವಾಗಿರುವ ಸಾಮಾನ್ಯವಿಶೇಷಗಳು ಅನೇಕವಾಗಿರುತ್ತವೆ. ಅವುಗಳೆಲ್ಲವೂ– ದುಂದುಭಿ, ಶಂಖ, ವೀಣೆ –ಇವುಗಳ ಶಬ್ದಸಾಮಾನ್ಯವಿಶೇಷಗಳು ಶಬ್ದತ್ವದಲ್ಲಿ ಸೇರಿಹೋಗುವಂತೆ, ಪರಂಪರೆಯ ಗತಿಯಿಂದ ಒಂದೇ ಒಂದಾದ ಪ್ರಜ್ಞಾನಘನವಾದ ಮಹಾಸಾಮಾನ್ಯದಲ್ಲಿ[2] ಸೇರಿಹೋಗಿರುವವೆಂದು ಹೇಗಾದರೂ ತಿಳಿಸಿಕೊಡೋಣವೆಂದು (ಶ್ರುತಿಯು) ಅನೇಕ ದೃಷ್ಟಾಂತಗಳನ್ನು ಕೊಟ್ಟಿದೆ.

ಹೀಗೆ ಮೊದಲನೆಯದಾಗಿ ಸ್ಥಿತಿಕಾಲದಲ್ಲಿ ಸಾಮಾನ್ಯವಿಶೇಷಗಳು (ಅದನ್ನು) ಬಿಟ್ಟಿರುವದಿಲ್ಲವಾದ್ದರಿಂದ (ಅವು) ಬ್ರಹ್ಮದೊಡನೆ ಒಂದಾಗಿರುವವು ಎಂದು ನಿಶ್ಚಯಿಸುವದಕ್ಕಾಗುತ್ತದೆ.

## ಉತ್ಪತ್ತಿಕಾಲದಲ್ಲಿಯೂ ಎಲ್ಲವೂ ಬ್ರಹ್ಮವೇ

(ಉಪನಿಷತ್ತು)

**ಸ ಯಥಾರ್ದ್ರೈಧಾಗ್ನೇರಭ್ಯಾಹಿತಾತ್ ಪೃಥಗ್ಧೂಮಾ ವಿನಿಶ್ಚರನ್ತ್ಯೇವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್**

1. ಹಾಗೆ ತಿಳಿಸಿದರೆ ಅವೂ ವಿಶೇಷಗಳು ಸಾಮಾನ್ಯದಲ್ಲಿ ಅಡಕವಾಗಿರುವಂತೆ ಯಾವದೋ ತಮಗಿಂತ ಬೇರೆಯಾದ ಒಂದರಲ್ಲಿ ಅಡಕವಾಗಿರುವವೆಂಬುದನ್ನು ಸೂಚಿಸಿದಂತೆ ಆಗುವದು.

2. ಪರಮಾತ್ಮನು ಮಹಾಸಾಮಾನ್ಯವೆಂದೂ ಚೇತನಾಚೇತನರೂಪವಾಗಿ ಕಾಣುವವು ಸಾಮಾನ್ಯವಿಶೇಷಗಳೆಂದೂ ಇಲ್ಲಿ ಹೇಳಿರುವದು ಔಪಚಾರಿಕವೆಂಬುದನ್ನು ಮರೆಯಬಾರದು. ಕೆಲವು ಬೇರೆಬೇರೆಯ ಶಬ್ದವಿಶೇಷಗಳು ಜಯಭೇರಿಯ ಶಬ್ದಗಳೆಂಬ ಸಾಮಾನ್ಯವಿಶೇಷಗಳಲ್ಲಿಯೂ ಆ ಸಾಮಾನ್ಯವಿಶೇಷಗಳು ಭೇರಿಯ ಶಬ್ದಗಳೆಂಬ ಸಾಮಾನ್ಯವಿಶೇಷಗಳಲ್ಲಿಯೂ ಅವು ಶಬ್ದಸಾಮಾನ್ಯದಲ್ಲಿಯೂ ಸೇರಿರುವವು. ಹೇಗೆ ಶಬ್ದವಿಶೇಷಗಳೆಲ್ಲ ಶಬ್ದತ್ವವೆಂಬ ಸಾಮಾನ್ಯದಲ್ಲಿ ಅಡಕವಾಗಿರುವವೋ ಹಾಗೆ ಶಬ್ದತ್ವ, ಸ್ಪರ್ಶತ್ವ –ಮುಂತಾದ ಅಚೇತನಸಾಮಾನ್ಯಗಳೂ ಮನುಷ್ಯತ್ವ, ಮೃಗತ್ವ– ಮುಂತಾದ ಚೇತನಸಾಮಾನ್ಯವಿಶೇಷಗಳೂ ಆತ್ಮಚೈತನ್ಯದಲ್ಲಿ ಅಡಕವಾಗಿವೆ; ಏಕೆಂದರೆ ಸಾಮಾನ್ಯವನ್ನು ಬಿಟ್ಟು ವಿಶೇಷಗಳಿಲ್ಲದಿರುವಂತೆ, ಅದನ್ನು ಬಿಟ್ಟು ಇವು ತೋರುವದೇ ಇಲ್ಲ ಎಂಬಿಷ್ಟು ಮಾತ್ರ ವಿವಕ್ಷಿತವಾಗಿದೆ.

**ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಙ್ಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಃಶ್ವಸಿತಾನಿ॥**

೧೦. ಅದು ಹೇಗೆಂದರೆ ಹೊತ್ತಿಕೊಂಡ ಆರ್ದ್ರೈಧಾಗ್ನಿಯಿಂದ ಬೇರೆಬೇರೆಯ ಹೊಗೆಗಳು ಹೊರಟುಬರುತ್ತವೆಯಲ್ಲ, ಹಾಗೆಯೇ ಎಲೆ, ಈ ದೊಡ್ಡಭೂತದ ಕೆಳಉಸಿರು ಇದು ; ಯಾವದೆಂದರೆ ಈ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸ್ಸುಗಳು, ಇತಿಹಾಸವು, ಪುರಾಣವು, ವಿದ್ಯೆ, ಉಪನಿಷತ್ತುಗಳು, ಶ್ಲೋಕಗಳು, ಸೂತ್ರಗಳು, ಅನುವ್ಯಾಖ್ಯಾನಗಳು, ವ್ಯಾಖ್ಯಾನಗಳು- ಇವುಗಳು ಇದರವೇ ಉಸಿರುಗಳು.

## ವೇದವು ಪರಮಾತ್ಮನ ಉಸಿರು

(ಭಾಷ್ಯ)

೩೬೪. ಏವಮ್ ಉತ್ಪತ್ತಿಕಾಲೇ ಪ್ರಾಗುತ್ಪತ್ತೇರ್ಬ್ರಹ್ಮೈವ ಇತಿ ಶಕ್ಯಮ್ ಅವಗನ್ತುಮ್। ಯಥಾ ಅಗ್ನೇರ್ವಿಸ್ಫುಲಿಙ್ಗಧೂಮಾಙ್ಗಾರಾರ್ಚಿಷಾಂ ಪ್ರಾಗ್ ವಿಭಾಗಾತ್ ಅಗ್ನಿರೇವೇತಿ ಭವತಿ ಅಗ್ನ್ಯೇಕತ್ವಮ್, ಏವಂ ಜಗತ್ ನಾಮರೂಪವಿಕೃತಂ ಪ್ರಾಗ್ ಉತ್ಪತ್ತೇಃ ಪ್ರಜ್ಞಾನಘನ ಏವ ಇತಿ ಯುಕ್ತಂ ಗ್ರಹೀತುಮ್ ಇತ್ಯೇತದುಚ್ಯತೇ। ಸ ಯಥಾ ಆರ್ದ್ರೈಧಾಗ್ನೇಃ ಆರ್ದ್ರೈಃ ಏಧೋಭಿಃ ಇದ್ಧೋಽಗ್ನಿಃ। ಆರ್ದ್ರೈಧಾಗ್ನಿಃ, ತಸ್ಮಾತ್ ಅಭ್ಯಾಹಿತಾತ್ ಪೃಥಕ್ ಧೂಮಾಃ ಪೃಥಕ್ ನಾನಾಪ್ರಕಾರಮ್। ಧೂಮಗ್ರಹಣಂ ವಿಸ್ಫುಲಿಙ್ಗಾದಿಪ್ರದರ್ಶನಾರ್ಥಮ್। ಧೂಮವಿಸ್ಫುಲಿಙ್ಗಾದಯೋ ವಿನಿಶ್ಚರನ್ತಿ ವಿನಿರ್ಗಚ್ಛನ್ತಿ। ಏವಂ ಯಥಾಯಂ ದೃಷ್ಟಾನ್ತಃ। ಅರೇ ಮೈತ್ರೇಯಿ। ಅಸ್ಯ ಪರಮಾತ್ಮನಃ ಪ್ರಕೃತಸ್ಯ ಮಹತೋ ಭೂತಸ್ಯ ನಿಃಶ್ವಸಿತಮ್ ಏತತ್। ನಿಃಶ್ವಸಿತಮಿವ ನಿಃಶ್ವಸಿತಮ್। ಯಥಾ ಅಪ್ರಯತ್ನೇನೈವ ಪುರುಷನಿಃಶ್ವಾಸೋ ಭವತಿ ಏವಂ ವಾ ಅರೇ। ಕಿಂ ತನ್ನಿಃಶ್ವಸಿತಮಿವ ತತೋ ಜಾತಮಿತಿ ? ಉಚ್ಯತೇ। ಯದೃಗ್ವೇದಃ ಯಜುರ್ವೇದಃ ಸಾಮವೇದಃ ಅಥರ್ವಾಙ್ಗಿರಸಃ। ಚತುರ್ವಿಧಂ ಮನ್ತ್ರಜಾತಮ್। ಇತಿಹಾಸಃ ಇತಿ ಉರ್ವಶೀಪುರೂರವಸೋಃ ಸಂವಾದಾದಿಃ "ಉರ್ವಶೀ ಹಾಪ್ಸರಾ" (ಶತ. ಬ್ರಾ. ೧೧-೫-೧-೧) ಇತ್ಯಾದಿ ಬ್ರಾಹ್ಮಣಮೇವ। ಪುರಾಣಮ್ "ಅಸದ್ವಾ ಇದಮಗ್ರ ಆಸೀತ್" (ತೈ. ೨-೭) ಇತ್ಯಾದಿ। ವಿದ್ಯಾ "ದೇವಜನವಿದ್ಯಾ ವೇದಃ ಸೋಽಯಮ್...." (ಶತ. ಬ್ರಾ. ೧೩-೪-೩-೧೦ರಿಂದ ೧೪) ಇತ್ಯಾದ್ಯಾ। ಉಪನಿಷದಃ "ಪ್ರಿಯಮಿತ್ಯೇತದುಪಾಸೀತ" (೪-೧-೩) ಇತ್ಯಾದ್ಯಾಃ। ಶ್ಲೋಕಾಃ ಬ್ರಾಹ್ಮಣಪ್ರಭವಾ ಮನ್ತ್ರಾಃ

"ತದೇತೇ ಶ್ಲೋಕಾಃ" (೩-೩-೧೧, ೪-೪-೮) ಇತ್ಯಾದಯಃ। ಸೂತ್ರಾಣಿ ವಸ್ತುಸಂಗ್ರಹವಾಕ್ಯಾನಿ ವೇದೇ ಯಥಾ "ಆತ್ಮೇತ್ಯೇವೋಪಾಸೀತ" (೧-೪-೭) ಇತ್ಯಾದೀನಿ। ಅನುವ್ಯಾಖ್ಯಾನಾನಿ ಮನ್ತ್ರವಿವರಣಾನಿ। ವ್ಯಾಖ್ಯಾನಾನಿ ಅರ್ಥವಾದಾಃ। ಅಥವಾ ವಸ್ತುಸಂಗ್ರಹವಾಕ್ಯವಿವರಣಾನಿ ಅನುವ್ಯಾಖ್ಯಾನಾನಿ। ಯಥಾ ಚತುರ್ಥಾಧ್ಯಾಯಃ "ಆತ್ಮೇತ್ಯೇವೋಪಾಸೀತ" (೧-೪-೭) ಇತ್ಯಸ್ಯ। ಯಥಾ ವಾ "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಮ್......" (೧-೪-೧೦) ಇತ್ಯಸ್ಯ ಅಯಮೇವಾಧ್ಯಾಯಶೇಷಃ। ಮನ್ತ್ರವಿವರಣಾನಿ ವ್ಯಾಖ್ಯಾನಾನಿ। ಏವಮ್ ಅಷ್ಟವಿಧಂ ಬ್ರಾಹ್ಮಣಮ್। ಏವಂ ಮನ್ತ್ರಬ್ರಾಹ್ಮಣಯೋರೇವ ಗ್ರಹಣಮ್॥

(ಭಾಷ್ಯಾರ್ಥ)

ಹೀಗೆಯೇ ಉತ್ಪತ್ತಿಕಾಲದಲ್ಲಿ ಹುಟ್ಟುವ ಮುಂಚೆ (ಇದೆಲ್ಲವೂ) ಬ್ರಹ್ಮವೇ ಎಂದು ನಿಶ್ಚಯಿಸಬಹುದು. ಹೇಗೆ ಬೆಂಕಿಯಿಂದ ಕಿಡಿಗಳು, ಹೊಗೆ, ಕೆಂಡಗಳು, ಉರಿಗಳು –ಇವು ವಿಂಗಡವಾಗುವದಕ್ಕಿಂತ ಮುಂಚೆ (ಇವು) 'ಬೆಂಕಿಯೇ' ಎಂದು ಬೆಂಕಿಯೊಡನೆ ಏಕತ್ವವಿರುವದೋ, ಹಾಗೆ ನಾಮರೂಪಗಳಾಗಿ ಮಾರ್ಪಟ್ಟಿರುವ ಜಗತ್ತು ಹುಟ್ಟುವ ಮುಂಚೆ ಪ್ರಜ್ಞಾನಘನನೇ ಎಂದು ಗ್ರಹಿಸುವದು ಯುಕ್ತವು ಎಂಬಿದನ್ನು (ಶ್ರುತಿ) ಹೇಳುತ್ತಿದೆ:

ಅದು ಹೇಗೆಂದರೆ, ಆರ್ದ್ರೈಧಾಗ್ನಿಯಿಂದ, ಹಸಿಯಾಗಿರುವ ಕಟ್ಟಿಗೆಗಳಿಂದ ಹೊತ್ತಿಸಿದ ಬೆಂಕಿಯು ಆರ್ದ್ರೈಧಾಗ್ನಿಯು; (ಅದು) ಹೊತ್ತಿಕೊಂಡರೆ ಬೇರೆಬೇರೆಯಾಗಿ ಹೊಗೆಗಳು ಬೇರೆಬೇರೆಯಾಗಿ ಎಂದರೆ ಬಗೆಬಗೆಯಾಗಿ; ಹೊಗೆಗಳು ಎಂದಿರುವದು ಕಿಡಿ ಮುಂತಾದವುಗಳಿಗೆ ಉಪಲಕ್ಷಣವಾಗಿ; ಹೊಗೆ, ಕಿಡಿ- ಮುಂತಾದವುಗಳು –ಹೊರಟುಬರುವವೋ ಹೊರಹೊರಡುವವೋ ಹಾಗೆಯೇ ಈ ದೃಷ್ಟಾಂತದಂತೆಯೇ, ಎಲೆ ಮೈತ್ರೇಯಿ, ಈ ದೊಡ್ಡಭೂತದ, ಪ್ರಕೃತನಾಗಿರುವ ಪರಮಾತ್ಮನ ಕೆಳಉಸಿರಿದು. ಕೆಳಉಸಿರಿನಂತಿರುವದರಿಂದ ಕೆಳಉಸಿರು ಎಂದಿದೆ. ಹೇಗೆ (ಯಾವ) ಪ್ರಯತ್ನವೂ ಇಲ್ಲದೆ ಪುರುಷನ ಕೆಳಉಸಿರು ಬರುತ್ತದೆಯೋ ಹಾಗೆಯೇ, ಎಲೆ, (ಇದೂ ಆಗಿರುತ್ತದೆ). ಕೆಳಉಸಿರಿನಂತೆ ಹುಟ್ಟಿದ್ದೆಂಬ ಅದು ಯಾವದು? ಎಂದರೆ ಹೇಳುತ್ತಾನೆ: ಋಗ್ವೇದವು, ಯಜುರ್ವೇದವು, ಸಾಮವೇದವು, ಅಥರ್ವಾಂಗಿರಸಗಳು –ಎಂಬ ನಾಲ್ಕು ಬಗೆಯ **ಮಂತ್ರಜಾತವು. ಇತಿಹಾಸವು** "ಉರ್ವಶೀ ಹಾಪ್ಸರಾಃ" (ಉರ್ವಶಿ ಎಂಬ ಅಪ್ಸರಳಿದ್ದಳಲ್ಲ, ಶತ. ಬ್ರಾ. ೧೧-೫-೧-೧) ಎಂಬಿದೇ ಮುಂತಾದ **ಉರ್ವಶೀಪುರೂರವಸ್ಸುಗಳ ಸಂವಾದವೇ** ಮುಂತಾದ ಬ್ರಾಹ್ಮಣವೇ. **ಪುರಾಣವು** ಎಂದರೆ "ಅಸದ್ವಾ ಇದಮಗ್ರ ಆಸೀತ್" (ಇದು ಮೊದಲು ಅಸತ್ತೇ ಆಗಿತ್ತು ತೈ. ೨-೭) ಮುಂತಾದದ್ದು. **ವಿದ್ಯಾ** ಎಂದರೆ "ದೇವಜನವಿದ್ಯಾ[1]

1. ನೃತ್ಯಗೀತಾದಿಶಾಸ್ತ್ರ.

ವೇದಃ ಸೋಽಯಮ್" (ದೇವಜನವಿದ್ಯೆ ಎಂಬ ಆ ಇದು ವೇದವೇ ಶತ. ಬ್ರಾ. ೧೩-೪-೩-೧೦ ರಿಂದ ೧೪) ಮುಂತಾದದ್ದು. **ಉಪನಿಷತ್ತುಗಳು** ಎಂದರೆ "ಪ್ರಿಯಮಿತ್ಯೇತದುಪಾಸೀತ" ಇದನ್ನು ಪ್ರಿಯವೆಂದು ಉಪಾಸನೆಮಾಡಬೇಕು ೪-೧-೩) ಮುಂತಾದವುಗಳು. **ಶ್ಲೋಕಗಳು** ಎಂದರೆ "ತದೇತೇ ಶ್ಲೋಕಾಃ" (ಆ ಅರ್ಥದಲ್ಲಿ ಈ ಶ್ಲೋಕಗಳಿವೆ. ೩-೩-೧೧, ೪-೪-೮) ಮುಂತಾದ ಬ್ರಾಹ್ಮಣೋತ್ಪನ್ನಮಂತ್ರಗಳು. **ಸೂತ್ರಗಳು** ಎಂದರೆ ವೇದದಲ್ಲಿರುವ ವಸ್ತುಸಂಗ್ರಹ ವಾಕ್ಯಗಳು, ಉದಾಹರಣೆಗೆ "ಆತ್ಮೇತ್ಯೇವೋಪಾಸೀತ" (ಆತ್ಮನೆಂದೇ ಉಪಾಸನೆ ಮಾಡಬೇಕು ೧-೪-೭)ಮುಂತಾದವು (ಸೂತ್ರಗಳು). **ಅನುವ್ಯಾಖ್ಯಾನಗಳು** ಎಂದರೆ ಮಂತ್ರಗಳ ವಿವರಣೆಗಳು[2]. **ವ್ಯಾಖ್ಯಾನಗಳು** ಎಂದರೆ ಅರ್ಥವಾದಗಳು. ಅಥವಾ (ಈ ಎರಡನ್ನು ಹೀಗೂ ವಿವರಿಸಬಹುದು): ವಸ್ತುಸಂಗ್ರಹವಾಕ್ಯಗಳ ವಿವರಣೆಗಳು **ಅನುವ್ಯಾಖ್ಯಾನಗಳು**. ಉದಾಹರಣೆಗೆ "ಆತ್ಮೇತ್ಯೇವೋಪಾಸೀತ" (ಆತ್ಮನೆಂದೇ ಉಪಾಸನೆಮಾಡಬೇಕು ೧-೪-೭) ಎಂಬುದಕ್ಕೆ ನಾಲ್ಕನೆಯ ಅಧ್ಯಾಯವು (ಅನುವ್ಯಾಖ್ಯಾನವು). ಅಥವಾ (ಇದಕ್ಕೆ ಮತ್ತೊಂದು ಉದಾಹರಣೆ): "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಮ್" (ಈ ದೇವತೆ ಬೇರೆ, ನಾನು ಬೇರೆ ಎಂದು ಯಾವನು ಉಪಾಸನೆಮಾಡುವನೋ ಅವನು ಅರಿಯನು, ಪಶುವಿರುವದಲ್ಲ, ಹಾಗೆ......೧-೪-೧೦) ಎಂಬುದಕ್ಕೆ ಇದೇ ಅಧ್ಯಾಯದ ಶೇಷವೇ (ಅನುವ್ಯಾಖ್ಯಾನವು)[3]. ಮಂತ್ರವಿವರಣಗಳು ವ್ಯಾಖ್ಯಾನಗಳು[4]. ಹೀಗೆ (ಇರುವ) ಎಂಟು ಬಗೆಯ ಬ್ರಾಹ್ಮಣವೂ (ಇದರ ಉಸಿರು). ಹೀಗೆ (ಇಲ್ಲಿ) ಮಂತ್ರಬ್ರಾಹ್ಮಣಗಳನ್ನೇ[5] ತೆಗೆದುಕೊಂಡಿದೆ

---

2. ಉದಾಹರಣೆಗೆ 'ಅಸತೋ ಮಾ ಸದ್ಗಮಯ' ಎಂಬ ಮಂತ್ರಕ್ಕೆ (೧-೩-೨೮) ಅದೇ ಕಂಡಿಕೆಯಲ್ಲಿರುವ ವಿವರಣೆಯು ಅನುವ್ಯಾಖ್ಯಾನವು.

3. ಮೊದಲು ಸೂತ್ರರೂಪವಾಗಿ ಹೇಳಿರುವದರ ಅಭಿಪ್ರಾಯವನ್ನು ವಿಸ್ತಾರವಾಗಿ ಹೇಳುವದರಿಂದ ಇದು ಅನುವ್ಯಾಖ್ಯಾನವು.

4. ಅರ್ಥವಾದ ಎಂಬ ಮೊದಲನೆಯ ಅರ್ಥಕ್ಕಿಂತ ಇದು ಹೆಚ್ಚು ಒಪ್ಪುತ್ತದೆ.

5. ಇತಿಹಾಸಪುರಾಣಶಬ್ದಗಳಿಂದಲೂ ಬ್ರಾಹ್ಮಣವನ್ನೇ ತೆಗೆದುಕೊಳ್ಳಬೇಕೆಂಬುದಕ್ಕೆ ನಿಃಶ್ವಸಿತಶ್ರುತಿಯೇ ಆಧಾರವೆಂದು ಭಾವ. ಇಲ್ಲಿ 'ಪ್ರಸಿದ್ಧವಾದ ಇತಿಹಾಸಪುರಾಣಗಳನ್ನೂ ಪರಮಾತ್ಮನ ಉಸಿರೆಂದು ಭಾವಿಸಬಹುದು ; ಏಕೆಂದರೆ ಎಲ್ಲಕ್ಕೂ ಆತನೇ ಮೂಲಕಾರಣನು. ವೇದಾರ್ಥವನ್ನು ತಿಳಿಸುವದರಿಂದ ಅವೂ ಪ್ರಮಾಣವೇ. ವೇದವಿರುದ್ಧವಾದದ್ದನ್ನು ಅಪ್ರಮಾಣವೆಂದು ಹಿಡಿದರೂ ಈ ಅರ್ಥಕ್ಕೆ ಚ್ಯುತಿಯಿಲ್ಲ. ವೇದವಾದರೂ ವೇದೋಕ್ತಿ ಎಂಬ ಕಾರಣದಿಂದೇನೂ ಪ್ರಮಾಣವಲ್ಲ ; ಅಪ್ರಮಾಣಕಾರಣಗಳಿಲ್ಲದ್ದರಿಂದಲೇ ಅದನ್ನು ಪ್ರಮಾಣವೆನ್ನುತ್ತೇವೆ' ಎಂದು ವಾರ್ತಿಕಕಾರರು ಬರೆದಿರುತ್ತಾರೆ. ಭಾಷ್ಯಕಾರರು ಬರೆದಿರುವದು ವ್ಯಾವಹಾರಿಕದೃಷ್ಟಿಯಿಂದ ; ಈ ದೃಷ್ಟಿಯಲ್ಲಿ ಅಪೌರುಷೇಯವೇದಕ್ಕೂ ಪೌರುಷೇಯವಾದ ಇತಿಹಾಸಾದಿಗಳಿಗೂ ತಾರತಮ್ಯವಿದೆ. ಪರಮಾರ್ಥದೃಷ್ಟಿಯಿಂದ ಇಡಿಯ ಜಗತ್ತೇ ಪರಮಾತ್ಮನ ಉಸಿರೆಂಬುದು ಸರಿಯೇ ಸರಿ.

(ಎಂದು ತಿಳಿಯಬೇಕು).

## ನಿಃಶ್ವಸಿತವಾಕ್ಯದ ತಾತ್ಪರ್ಯ

(ಭಾಷ್ಯ)

೩೬೫. ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ಪುರುಷನಿಃಶ್ವಾಸವತ್ ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ । ಅತಃ ಪ್ರಮಾಣಂ ನಿರಪೇಕ್ಷ ಏವ ಸ್ವಾರ್ಥೇ । ತಸ್ಮಾತ್ ಯತ್ತೇನೋಕ್ತಂ ತತ್ ತಥೈವ ಪ್ರತಿಪತ್ತವ್ಯಮ್ ಆತ್ಮನಃ ಶ್ರೇಯ ಇಚ್ಛದ್ಭಿಃ ಜ್ಞಾನಂ ವಾ ಕರ್ಮ ವಾ ಇತಿ । ನಾಮಪ್ರಕಾಶವಶಾ ಹಿ ರೂಪಸ್ಯ ವಿಕ್ರಿಯಾವಸ್ಥಾ[1] । ನಾಮರೂಪಯೋ ರೇವ ಹಿ ಪರಮಾತ್ಮೋಪಾಧಿಭೂತಯೋಃ ವ್ಯಾಕ್ರಿಯಮಾಣಯೋಃ ಸಲಿಲ ಫೇನವತ್ ತತ್ತ್ವಾನ್ಯತ್ವೇನಾನಿರ್ವಕ್ತವ್ಯಯೋಃ ಸರ್ವಾವಸ್ಥಯೋಃ ಸಂಸಾರ ತ್ವಮ್ ಇತ್ಯತೋ ನಾಮ್ನ ಏವ ನಿಃಶ್ವಸಿತತ್ವಮುಕ್ತಮ್ । ತದ್ವಚನೇನೈವ ಇತರಸ್ಯ ನಿಃಶ್ವಸಿತತ್ವಸಿದ್ಧೇಃ । ಅಥವಾ ಸರ್ವಸ್ಯ ದ್ವೈತಜಾತಸ್ಯ ಅವಿದ್ಯಾ ವಿಷಯತ್ವಮುಕ್ತಮ್ "ಬ್ರಹ್ಮ ತಂ ಪರಾದಾತ್ ಇದಂ ಸರ್ವಂ ಯದಯ ಮಾತ್ಮಾ" (೨-೪-೬) ಇತಿ । ತೇನ ವೇದಸ್ಯ ಅಪ್ರಾಮಾಣ್ಯಮ್ ಆಶಙ್ಕ್ಯೇತ[2] । ತದಾಶಙ್ಕಾನಿವೃತ್ತ್ಯರ್ಥಮಿದಮುಕ್ತಮ್ ಪುರುಷನಿಃಶ್ವಾಸವತ್ ಅಪ್ರಯತ್ನೋ ತ್ಥಿತತ್ವಾತ್ ಪ್ರಮಾಣಂ ವೇದಃ ನ ಯಥಾನ್ಯೋ ಗ್ರನ್ಥಃ ಇತಿ ॥

(ಭಾಷ್ಯಾರ್ಥ)

ಗೊತ್ತಾದ ರಚನೆಯುಳ್ಳದ್ದಾಗಿ (ಮೊದಲೂ) ಇದ್ದೇ ಇರುವ[3] ವೇದಕ್ಕೆ ಪುರುಷನ ನಿಃಶ್ವಾಸದಂತೆ (ಪರಮಾತ್ಮನಿಂದ) ಅಭಿವ್ಯಕ್ತಿಯಾಗುವದೇ ಹೊರತು (ವೇದವು) ಪುರುಷಬುದ್ಧಿಪ್ರಯತ್ನಪೂರ್ವಕವಾಗಿ ಆದದ್ದಲ್ಲ. ಆದ್ದರಿಂದ (ಅದು) ನಿರಪೇಕ್ಷವಾಗಿಯೇ ತನ್ನ ಅರ್ಥದಲ್ಲಿ ಪ್ರಮಾಣವಾಗಿರುತ್ತದೆ[4]. ಆದ್ದರಿಂದ ತಮಗೆ ಶ್ರೇಯಸ್ಸು (ಆಗಬೇಕೆಂದು) ಬಯಸುವವರು ಅದು, ಜ್ಞಾನವನ್ನೇ

1. 'ವಿಕ್ರಿಯಾ ವ್ಯವಸ್ಥಾ' ಎಂಬುದಕ್ಕಿಂತ ಈ ಪಾಠವೇ ಮೇಲು.
2. ಆಶಙ್ಕ್ಯತೇ ಎಂಬ ಪಾಠಕ್ಕಿಂತ ಇದೇ ಮೇಲು.
3. ಅದೇ ಸನಾತನವೇದವನ್ನೇ ಪರಮೇಶ್ವರನು ಕಲ್ಪಾದಿಯಲ್ಲಿ ಸೃಷ್ಟಿಸುತ್ತಾನೆಂಬ ಸ್ಮೃತಿಯನ್ನು ಇಲ್ಲಿ ಸೂಚಿಸಿದೆ. ಸೂ. ಭಾ. ೧-೩-೨೮ (ಭಾ. ಭಾ. ೨೯೨).
4. ವೇದವು ನಿತ್ಯವೂ ಅಪೌರುಷೇಯವೂ ಆಗಿರುವದರಿಂದ ಸ್ಮೃತಿಗಳಂತೆ ಸಾಪೇಕ್ಷ ವಲ್ಲ, ಸ್ವತಂತ್ರವಾಗಿ ಪ್ರಮಾಣ -ಎಂದು ಮೀಮಾಂಸಕರು ಹೇಳುವರು. ಪರಮಾತ್ಮನಿಂದ ಹುಟ್ಟಿತೆಂದು ಹೇಳಿದರೆ ಪೌರುಷೇಯತ್ವವೂ ಅಪ್ರಾಮಾಣ್ಯವೂ ಬರುವದಿಲ್ಲವೆ? ಎಂಬ ಶಂಕೆಗೆ ಇದು ಸಮಾಧಾನ. ಬುದ್ಧಿಪೂರ್ವಕವಾಗಿ ರಚಿತವಾಗಿಲ್ಲವಾದ್ದರಿಂದ ಇದು ಪೌರು ಷೇಯವಲ್ಲ ಎಂದು ಭಾವ. ವೇದನಿತ್ಯತ್ವದ ವಿಷಯಕ್ಕೆ ಪರಮಸಿದ್ಧಾಂತವನ್ನು ತೈ. ಭಾ. ೨-೪ (ಭಾ. ಭಾ. ೧೩೨, ೧೩೩)ರಲ್ಲಿ ಕೊಟ್ಟಿದೆ.

ಆಗಲಿ ಕರ್ಮವನ್ನೇ[1] ಆಗಲಿ, ಯಾವದನ್ನು ಹೇಳುತ್ತದೆಯೋ ಅದನ್ನು ಹಾಗೆಯೇ ಅರಿತುಕೊಳ್ಳಬೇಕು.

ರೂಪವು ಕಾರ್ಯಾವಸ್ಥೆಗೆ ಬರುವದು ನಾಮವೆಂಬ ಬೆಳಕಿಗೆ ಅಧೀನವಾಗಿರುವದಲ್ಲವೆ[2] ? **ಪರಮಾತ್ಮನಿಗೆ ಉಪಾಧಿಯಾಗಿರುವ, ನೀರಿನ ನೊರೆಯಂತೆ ಆ (ಪರಮಾತ್ಮ)ನೆಂದಾಗಲಿ (ಅವನಿಗಿಂತ) ಬೇರೆಯೆಂದಾಗಲಿ ನಿರ್ವಚನಮಾಡಲಶಕ್ಯವಾಗಿ ವ್ಯಾಕೃತವಾಗುವ ನಾಮರೂಪಗಳೇ ಅಲ್ಲವೆ, ಎಲ್ಲಾ ಅವಸ್ಥೆಗಳಲ್ಲಿಯೂ ಸಂಸಾರವೆನಿಸುವವು[3] ?** ಆದ್ದರಿಂದ ನಾಮವೊಂದನ್ನೇ ನಿಃಶ್ವಸಿತವೆಂದು (ಇಲ್ಲಿ) ಹೇಳಿದೆ. ಏಕೆಂದರೆ ಅದನ್ನು ಹೇಳಿದ್ದರಿಂದಲೇ ಮತ್ತೊಂದೂ (ಅವನ) ನಿಃಶ್ವಸಿತವೆಂಬುದು ಸಿದ್ಧವಾಗುತ್ತದೆ[4] ಅಥವಾ ಎಲ್ಲಾ ದ್ವೈತವೂ ಅವಿದ್ಯಾವಿಷಯವೇ ಎಂದು "ಬ್ರಹ್ಮವು ಅವನನ್ನು ಹೊರದೂಡುತ್ತದೆ.... ಇದೆಲ್ಲವೂ ಈ ಆತ್ಮನೆಂಬುದೇ" (೨-೪-೬) ಎಂಬ (ವಾಕ್ಯದಲ್ಲಿ) ಹೇಳಿದೆಯಷ್ಟೆ ; ಅದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಶಂಕಿಸಬಹುದು[5]. ಆ ಆಶಂಕೆಯನ್ನು ಪುರುಷನಿಶ್ವಾಸದಂತೆ (ಯಾವ) ಪ್ರಯತ್ನವೂ ಇಲ್ಲದೆ ಎದ್ದುಕೊಂಡಿರುವದರಿಂದ ವೇದವು ಪ್ರಮಾಣವು, ಮಿಕ್ಕ (ಯಾವದಾದರೊಂದು) ಗ್ರಂಥದಂತೆ ಅಲ್ಲ[6] ಎಂದು (ಇಲ್ಲಿ) ಇದನ್ನು ಹೇಳಿರುತ್ತದೆ.

## ಪ್ರಲಯಕಾಲದಲ್ಲಿಯೂ ಎಲ್ಲವೂ ಬ್ರಹ್ಮವೇ

(ಉಪನಿಷತ್ತು)

**ಸ ಯಥಾ ಸರ್ವಾಸಾಮಪಾಗ್ಂ ಸಮುದ್ರ ಏಕಾಯನಮೇವಗ್ಂ ಸರ್ವೇಷಾಗ್ಂ ಸ್ಪರ್ಶಾನಾಂ ತ್ವಗೇಕಾಯನಮೇವಗ್ಂ**

---

1. ಮೀಮಾಂಸಕರಂತೆ ಕರ್ಮವನ್ನು ಮಾತ್ರ ಸ್ವೀಕರಿಸಿ ಜ್ಞಾನವನ್ನು ಕೈಬಿಟ್ಟು ವೇದಪ್ರಾಮಾಣ್ಯವನ್ನು ತಿರಸ್ಕರಿಸಿ ಶ್ರೇಯಸ್ಸಿನಿಂದ ಚ್ಯುತರಾಗಬಾರದು ಎಂಬುದನ್ನು ಜ್ಞಾನವನ್ನೇ ಆಗಲಿ ಕರ್ಮವನ್ನೇ ಆಗಲಿ- ಎಂಬ ವಾಕ್ಯವು ಸೂಚಿಸುತ್ತದೆ.

2. ವಾಚ್ಯದ ಅಭಿವ್ಯಕ್ತಿಯು ವಾಚಕತಂತ್ರ.

3. ವ್ಯಾಕೃತಾವ್ಯಾಕೃತಾವಸ್ಥೆಗಳಲ್ಲಿರುವ ಅನಿರ್ವಚನೀಯನಾಮರೂಪಗಳಿಲ್ಲದಿದ್ದರೆ ಸಂಸಾರವೇ ಇಲ್ಲ.

4. ಆದ್ದರಿಂದ ರೂಪಸೃಷ್ಟಿಯನ್ನು ಇದರಿಂದಲೇ ಹೇಳಿದಂತಾಯಿತೆಂದು ಭಾವ. ರೂಪಸೃಷ್ಟಿಯನ್ನು ಮುಂದೆ ೪-೫-೧೧ರಲ್ಲಿ ಬಾಯಿಬಿಟ್ಟು ಹೇಳಿಯೂ ಇದೆ.

5. ಯಾವದೊಂದೂ ಆತ್ಮನಿಗಿಂತ ಬೇರೆಯಿಲ್ಲ ಎಂದದ್ದರಿಂದ ವೇದವೂ ಅವಿದ್ಯಾವಿಷಯವೇ ಎಂದಾಯಿತಲ್ಲ ! -ಎಂದು ಶಂಕಿಸಬಹುದು ಎಂದರ್ಥ.

6. ವೇದವು ಹುಟ್ಟುವ ಮುಂಚೆ ಆತ್ಮನೇ ಆಗಿದ್ದು, ಇರುವಾಗ ಆತ್ಮನನ್ನೇ ಹೇಳಿ, ಕೊನೆಯಲ್ಲಿ ಆತ್ಮನಲ್ಲಿಯೇ ಲಯವಾಗುತ್ತದೆ. ಪುರುಷಪ್ರಯತ್ನಪೂರ್ವಕವಾಗಿ ರಚಿತವಾಗಿರುವ ಗ್ರಂಥವು ಆಯಾ ಪುರುಷನ ಅಭಿಪ್ರಾಯವನ್ನು ತಿಳಿಸುತ್ತದೆಯೇ ಹೊರತು ವಸ್ತುಯಾಥಾತ್ಮ್ಯವನ್ನು ಹೇಳುವದಿಲ್ಲ. ಆದ್ದರಿಂದ ಶಬ್ದರೂಪದಿಂದ ಅಸತ್ತಾದರೂ ವೇದವು ಪ್ರಮಾಣವೇ ಎಂದು ಭಾವ.

**ಸರ್ವೇಷಾಂ ಗನ್ಧಾನಾಂ ನಾಸಿಕೇ ಏಕಾಯನಮೇವಗ್ಂ ಸರ್ವೇಷಾಗ್ಂ ರಸಾನಾಂ ಜಿಹ್ವೈಕಾಯನಮೇವಗ್ಂ ಸರ್ವೇಷಾಗ್ಂ ರೂಪಾಣಾಂ ಚಕ್ಷುರೇಕಾಯನಮೇವಗ್ಂ ಸರ್ವೇಷಾಗ್ಂ ಶಬ್ದಾನಾಗ್ಂ ಶ್ರೋತ್ರಮೇಕಾಯನಮೇವಗ್ಂ ಸರ್ವೇಷಾಗ್ಂ ಸಂಕಲ್ಪಾನಾಂ ಮನ ಏಕಾಯನಮೇವಗ್ಂ ಸರ್ವಾಸಾಂ ವಿದ್ಯಾನಾಗ್ಂ ಹೃದಯಮೇಕಾಯನಮೇವಗ್ಂ ಸರ್ವೇಷಾಂ ಕರ್ಮಣಾಗ್ಂ ಹಸ್ತಾವೇಕಾಯನಮೇವಗ್ಂ ಸರ್ವೇಷಾಮಾನನ್ದಾನಾಮುಪಸ್ಥ ಏಕಾಯನಮೇವಗ್ಂ ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮೇವಗ್ಂ ಸರ್ವೇಷಾಮಧ್ವನಾಂ ಪಾದಾವೇಕಾಯನಮೇವಗ್ಂ ಸರ್ವೇಷಾಂ ವೇದಾನಾಂ ವಾಗೇಕಾಯನಮ್ ॥ ೧೧ ॥**

೧೧. ಅದು ಹೇಗೆಂದರೆ (ಹೇಗೆ) ಎಲ್ಲಾ ನೀರುಗಳಿಗೂ ಸಮುದ್ರವು ಏಕಾಯನವಾಗಿರುತ್ತದೆಯೋ ಹಾಗೆ ಎಲ್ಲಾ ಸ್ಪರ್ಶಗಳಿಗೂ ತ್ವಕ್ಕು ಏಕಾಯನವು; ಹಾಗೆಯೇ ಎಲ್ಲಾ ಗಂಧಗಳಿಗೂ ನಾಸಿಕವು ಏಕಾಯನವು; ಹಾಗೆಯೇ ಎಲ್ಲಾ ರಸಗಳಿಗೂ ಜಿಹ್ವೆಯು ಏಕಾಯನವು; ಹಾಗೆಯೇ ಎಲ್ಲಾ ರೂಪಗಳಿಗೂ ಚಕ್ಷುಸ್ಸು ಏಕಾಯನವು; ಹಾಗೆಯೇ ಎಲ್ಲಾ ಶಬ್ದಗಳಿಗೂ ಶ್ರೋತ್ರವು ಏಕಾಯನವು; ಹಾಗೆಯೇ ಎಲ್ಲಾ ಸಂಕಲ್ಪಗಳಿಗೂ ಮನಸ್ಸು ಏಕಾಯನವು; ಹಾಗೆಯೇ ಎಲ್ಲಾ ವಿದ್ಯೆಗಳಿಗೂ ಹೃದಯವು ಏಕಾಯನವು; ಹಾಗೆಯೇ ಎಲ್ಲಾ ಕರ್ಮಗಳಿಗೂ ಹಸ್ತಗಳು ಏಕಾಯನವು; ಹಾಗೆಯೇ ಎಲ್ಲಾ ಆನಂದಗಳಿಗೂ ಉಪಸ್ಥವು ಏಕಾಯನವು; ಹಾಗೆಯೇ ಎಲ್ಲಾ ವಿಸರ್ಗಗಳಿಗೂ ಪಾಯುವು ಏಕಾಯನವು; ಹಾಗೆಯೇ ಎಲ್ಲಾ ನಡೆಗಳಿಗೂ ಪಾದವು ಏಕಾಯನವು; ಹಾಗೆಯೇ ಎಲ್ಲಾ ವೇದಗಳಿಗೂ ವಾಕ್ಕು ಏಕಾಯನವು.

## ಕಂಡಿಕೆಯ ಸಂಬಂಧ

**(ಭಾಷ್ಯ)**

**೩೬೬. ಕಿಂ ಚಾನ್ಯತ್ । ನ ಕೇವಲಂ ಸ್ಥಿತ್ಯುತ್ಪತ್ತಿಕಾಲಯೋರೇವ ಪ್ರಜ್ಞಾನವ್ಯತಿರೇಕೇಣಾಭಾವಾತ್ ಜಗತೋ ಬ್ರಹ್ಮತ್ವಮ್ । ಪ್ರಲಯಕಾಲೇ ಚ ಜಲಬುದ್ಬುದಫೇನಾದೀನಾಮಿವ ಸಲಿಲವ್ಯತಿರೇಕೇಣಾಭಾವಃ, ಏವಂ**

ಪ್ರಜ್ಞಾನವ್ಯತಿರೇಕೇಣ ತತ್ಕಾರ್ಯಾಣಾಂ ನಾಮರೂಪಕರ್ಮಣಾಂ ತಸ್ಮಿನ್ನೇವ ಲೀಯಮಾನಾನಾಮ್ ಅಭಾವಃ । ತಸ್ಮಾದೇಕಮೇವ ಬ್ರಹ್ಮ ಪ್ರಜ್ಞಾನಘನಮ್ ಏಕರಸಂ ಪ್ರತಿಪತ್ತವ್ಯಮ್ ಇತ್ಯತ ಆಹ –

(ಭಾಷ್ಯಾರ್ಥ)

ಮತ್ತೊಂದೇನೆಂದರೆ ಬರಿಯ ಸ್ಥಿತ್ಯುತ್ಪತ್ತಿಕಾಲಗಳಲ್ಲಿ ಮಾತ್ರ ಪ್ರಜ್ಞಾನಕ್ಕಿಂತ ಬೇರೆಯಾಗಿಲ್ಲದ್ದರಿಂದ ಜಗತ್ತು ಬ್ರಹ್ಮವೆಂದಲ್ಲ, ಪ್ರಲಯಕಾಲದಲ್ಲಿಯೂ ನೀರಿನಗುಳ್ಳೆ, ನೊರೆ- ಮುಂತಾದವುಗಳು ನೀರನ್ನು ಬಿಟ್ಟು (ಬೇರೆಯಾ)ಗಿರುವದಿಲ್ಲವಲ್ಲ, ಹಾಗೆಯೇ ಅದರ ಕಾರ್ಯವಾದ ನಾಮರೂಪಕರ್ಮಗಳು ಅದರಲ್ಲಿಯೇ ಲಯವಾಗುವದರಿಂದ (ಆ) ಪ್ರಜ್ಞಾನಘನವನ್ನು ಬಿಟ್ಟು (ಬೇರೆಯಾ)ಗಿರುವದಿಲ್ಲ. ಆದ್ದರಿಂದ ಬ್ರಹ್ಮವು ಒಂದೇ, ಪ್ರಜ್ಞಾನಘನವು, ಏಕರಸವು ಎಂದು ತಿಳಿದುಕೊಳ್ಳಬೇಕು. ಆದ್ದರಿಂದ (ಶ್ರುತಿ) ಹೀಗೆನ್ನುತ್ತಿದೆ-

## ಏಕಾಯನಪ್ರಕ್ರಿಯೆಯ ತಾತ್ಪರ್ಯ

(ಭಾಷ್ಯ)

೩೬೭. ಪ್ರಲಯಪ್ರದರ್ಶನಾಯ ದೃಷ್ಟಾನ್ತಃ ಸ ಇತಿ[1] । ಯಥಾ ಯೇನ ಪ್ರಕಾರೇಣ ಸರ್ವಾಸಾಂ ನದೀವಾಪೀತಡಾಗಾದಿಗತಾನಾಮ್ ಅಪಾಂ ಸಮುದ್ರಃ ಅಬ್ಧಿಃ ಏಕಾಯನಮ್, ಏಕಗಮನಮ್, ಏಕಪ್ರಲಯಃ ಅವಿಭಾಗಪ್ರಾಪ್ತಿಃ ಇತ್ಯರ್ಥಃ । ಯಥಾಯಂ ದೃಷ್ಟಾನ್ತಃ ಏವಂ ಸರ್ವೇಷಾಂ ಸ್ಪರ್ಶಾನಾಂ ಮೃದುಕರ್ಕಶಕಠಿನಪಿಚ್ಛಿಲಾದೀನಾಂ ವಾಯೋರಾತ್ಮಭೂತಾನಾಂ ತ್ವಗೇಕಾಯನಮ್ । ತ್ವಗಿತಿ ತ್ವಗ್ವಿಷಯಂ ಸ್ಪರ್ಶಸಾಮಾನ್ಯಮಾತ್ರಮ್ । ತಸ್ಮಿನ್ ಪ್ರವಿಷ್ಟಾಃ ಸ್ಪರ್ಶವಿಶೇಷಾಃ ಆಪ ಇವ ಸಮುದ್ರಂ ತದ್ವ್ಯತಿರೇಕೇಣಾಭಾವಭೂತಾ ಭವನ್ತಿ । ತಸ್ಯೈವ ಹಿ ತೇ ಸಂಸ್ಥಾನಮಾತ್ರಾ ಆಸನ್ । ತಥಾ ತದಪಿ ಸ್ಪರ್ಶಸಾಮಾನ್ಯಮಾತ್ರಂ ತ್ವಕ್ಶಬ್ದವಾಚ್ಯಂ ಮನಃಸಂಕಲ್ಪೇ ಮನೋವಿಷಯಸಾಮಾನ್ಯಮಾತ್ರೇ ತ್ವಗ್ವಿಷಯ ಇವ ಸ್ಪರ್ಶವಿಶೇಷಾಃ ಪ್ರವಿಷ್ಟಂ ತದ್ವ್ಯತಿರೇಕೇಣ ಅಭಾವಭೂತಂ ಭವತಿ । ಏವಂ ಮನೋವಿಷಯೋಽಪಿ ಬುದ್ಧಿವಿಷಯಸಾಮಾನ್ಯಮಾತ್ರೇ ಪ್ರವಿಷ್ಟಃ ತದ್ವ್ಯತಿರೇಕೇಣ ಅಭಾವಭೂತೋ ಭವತಿ । ವಿಜ್ಞಾನಮಾತ್ರಮೇವ ಭೂತ್ವಾ ಪ್ರಜ್ಞಾನಘನೇ ಪರೇ ಬ್ರಹ್ಮಣಿ ಆಪ ಇವ ಸಮುದ್ರೇ ಪ್ರಲೀಯತೇ । ಏವಂ ಪರಂಪರಾಕ್ರಮೇಣ ಶಬ್ದಾದೌ ಸಹ ಗ್ರಾಹಕೇಣ ಕರಣೇನ ಪ್ರಲೀನೇ ಪ್ರಜ್ಞಾನಘನೇ ಉಪಾಧ್ಯಭಾವಾತ್ ಸೈನ್ಧವಘನವತ್ ಪ್ರಜ್ಞಾನಘನಮ್ ಏಕರಸಮ್ ಅನನ್ತಮ್ ಅಪಾರಂ ನಿರನ್ತರಂ ಬ್ರಹ್ಮ ವ್ಯವತಿಷ್ಠತೇ । ತಸ್ಮಾತ್ ಆತ್ಮೈವೈಕಮ್ ಅದ್ವಯಮಿತಿ ಪ್ರತಿಪತ್ತವ್ಯಮ್ ॥

---

1. ಇದರ ಮುಂದಿರುವ 'ದೃಷ್ಟಾನ್ತಃ' ಎಂಬ ಶಬ್ದವನ್ನು ಬಿಟ್ಟುಬಿಟ್ಟಿದೆ.

(ಭಾಷ್ಯಾರ್ಥ)

ಅದು ಎಂದರೆ ಪ್ರಲಯವನ್ನು ತಿಳಿಸುವ ದೃಷ್ಟಾಂತವು. ಹೇಗೆ ಯಾವ ಪ್ರಕಾರದಿಂದ ನದಿಗಳು, ಬಾವಿಗಳು, ಕೆರೆಗಳು- ಮುಂತಾದವುಗಳಲ್ಲಿರುವ ನೀರಿಗೆಲ್ಲ ಸಮುದ್ರವು ಕಡಲು ಏಕಾಯನವೋ, ಒಂದೇ ಗಮನ(ಸ್ಥಾನ)ವೋ, ಒಂದೇ ಪ್ರಲಯ(ಸ್ಥಾನ)ವೋ, ಅವಿಭಾಗವನ್ನು ಹೊಂದುವ (ಸ್ಥಾನ)ವೋ[1] ಎಂದರ್ಥ. ಈ ದೃಷ್ಟಾಂತವು ಹೇಗೋ ಹಾಗೆ ಮೆದು, ತರಕಲು, ಗಟ್ಟಿ, ನುಣುಪು- ಮುಂತಾದ ವಾಯುವಿನ ಸ್ವರೂಪವಾಗಿರುವ[2] ಎಲ್ಲಾ ಸ್ಪರ್ಶಗಳಿಗೂ ತ್ವಕ್ಕು ಏಕಾಯನವು. (ಇಲ್ಲಿ) ತ್ವಕ್ಕು ಎಂದರೆ ತ್ವಕ್ಕಿಗೆ ವಿಷಯವಾಗಿರುವ ಸ್ಪರ್ಶಸಾಮಾನ್ಯವೇ. ಅದರಲ್ಲಿ ಸ್ಪರ್ಶವಿಶೇಷಗಳು- ನೀರಿನ (ವಿಶೇಷ)ಗಳು ಕಡಲಿನಲ್ಲಿ (ಸೇರು)ವಂತೆ- ಸೇರಿಕೊಂಡು ಅದಕ್ಕಿಂತ ಬೇರೆಯಾಗಿ ಇಲ್ಲದವುಗಳಾಗುತ್ತವೆ. ಆ (ಸ್ಪರ್ಶಸಾಮಾನ್ಯ)ಕ್ಕಲ್ಲವೆ, ಅವು ಆಕಾರಮಾತ್ರವಾಗಿದ್ದವು[3]?

ಹಾಗೆಯೇ ತ್ವಕ್‌ಶಬ್ದವಾಚ್ಯವಾದ ಆ ಸ್ಪರ್ಶಸಾಮಾನ್ಯವೂ ಮನಃಸಂಕಲ್ಪದಲ್ಲಿ ಎಂದರೆ ಮನಸ್ಸಿನ ವಿಷಯಸಾಮಾನ್ಯಮಾತ್ರದಲ್ಲಿ- ಸ್ಪರ್ಶವಿಶೇಷಗಳೆಲ್ಲ ತ್ವಗ್ವಿಷಯ(ಸಾಮಾನ್ಯ)ದಲ್ಲಿ (ಸೇರುವಂತೆ)- ಸೇರಿ ಅದಕ್ಕಿಂತ ಬೇರೆಯಾಗಿಲ್ಲವಾಗುವದು. ಹೀಗೆಯೇ ಮನೋವಿಷಯವುಕೂಡ ಬುದ್ಧಿಯ ವಿಷಯಸಾಮಾನ್ಯಮಾತ್ರದಲ್ಲಿ ಸೇರಿಕೊಂಡು ಅದನ್ನು ಬಿಟ್ಟು ಬೇರೆಯಾಗಿಲ್ಲವಾಗುವದು; ಬರಿಯ ವಿಜ್ಞಾನವೇ ಆಗಿ ಪ್ರಜ್ಞಾನಘನವಾದ ಪರಬ್ರಹ್ಮದಲ್ಲಿ- ನೀರುಗಳು ಸಮುದ್ರದಲ್ಲಿ (ಅಡಗು)ವಂತೆ- ಲಯವಾಗುತ್ತದೆ[4]. ಹೀಗೆಯೇ ಪರಂಪರೆಯ ಕ್ರಮದಿಂದ ಶಬ್ದಾದಿಗಳೂ ಗ್ರಾಹಕವಾದ ಕರಣಸಹಿತವಾಗಿ[5] ಪ್ರಜ್ಞಾನಘನನಲ್ಲಿ ಪ್ರಲಯವಾಗಲು ಉಪಾಧಿಯೇ ಇಲ್ಲದ್ದರಿಂದ[6] ಉಪ್ಪಿನ

---

1. ಸಮುದ್ರವೆಂದರೆ ಎಲ್ಲಾ ನೀರಿನ ವಿಶೇಷಗಳ ಸಾಮಾನ್ಯವು. ಗೀ. ಭಾ. ೨-೪೫. ಬಾವಿ, ಕೆರೆ- ಮುಂತಾದವುಗಳಿಗೆ ಸಮುದ್ರವೇ ಗಮನಸ್ಥಾನವೆಂಬ ಅಭಿಪ್ರಾಯವಿಲ್ಲ.

2. ವಾಯುವಿನ ಗುಣಗಳಾದ.

3. ಸ್ಪರ್ಶಗಳೆಲ್ಲ ಸ್ಪರ್ಶಸಾಮಾನ್ಯದ ರೂಪವಿಶೇಷಗಳೇ; ನಿಜವಾಗಿ ಅವು ತೋರುವಾಗಲೂ ಅವಕ್ಕೆ ಸ್ಪರ್ಶಸಾಮಾನ್ಯವೇ ತತ್ತ್ವ.

4. ಪರಬ್ರಹ್ಮದಿಂದಲೇ ಅವು ಎದ್ದುಕೊಂಡು ತೋರುತ್ತಿದ್ದವು; ಈಗ ಹುಟ್ಟಿಗೆ ವಿಪರೀತವಾದ ಕ್ರಮದಿಂದ ಬ್ರಹ್ಮದಲ್ಲಿ ಸೇರಿಹೋಗುತ್ತವೆ.

5. ಆಯಾ ವಿಷಯಗಳು ಲಯವಾಗಲು ಅವುಗಳ ಕರಣಗಳೂ ಲಯವಾಗುವವು. ಕರಣ, ವಿಷಯ- ಎರಡೂ ಒಟ್ಟಿಗೆ ಹೊರತೋರುವವು, ಒಟ್ಟಿಗೆ ಲಯವಾಗುವವು ಎಂದರ್ಥ.

6. ಕರಣವೂ ಇಲ್ಲವೆ ವಿಷಯವೂ ಇಲ್ಲದಿದ್ದರೆ ಬ್ರಹ್ಮಕ್ಕೆ ಆಧ್ಯಾತ್ಮಿಕವಾದ ಅಥವಾ ಆಧಿಭೌತಿಕವಾದ ಯಾವ ಉಪಾಧಿಯೂ ಇಲ್ಲವಾಗುವದು ಎಂದರ್ಥ.

ಹರಳಿನಂತೆ ಪ್ರಜ್ಞಾನಘನನಾಗಿ ಏಕರಸವೂ[1] ಅನಂತವೂ ಅಪಾರವೂ ನಿರಂತರವೂ ಆದ ಬ್ರಹ್ಮವಾಗಿ ನಿಂತುಕೊಳ್ಳುವನು. ಆದ್ದರಿಂದ ಆತ್ಮನೇ ತನಗೆರಡನೆಯದಿಲ್ಲದ ಏಕ(ತತ್ತ್ವ)ವೆಂದು ತಿಳಿಯತಕ್ಕದ್ದು.

## ಪ್ರತಿಪರ್ಯಾಯವೂ ಬ್ರಹ್ಮದಲ್ಲಿ ಪ್ರಲಯವಾಗುವ ರೀತಿ

(ಭಾಷ್ಯ)

೩೬೮. ತಥಾ ಸರ್ವೇಷಾಂ ಗನ್ಧಾನಾಂ ಪೃಥಿವೀವಿಶೇಷಾಣಾಂ ನಾಸಿಕೇ ಘ್ರಾಣವಿಷಯಸಾಮಾನ್ಯಮ್ । ತಥಾ ಸರ್ವೇಷಾಂ ರಸಾನಾಮ್ ಅಬ್ವಿಶೇಷಾಣಾಂ ಜಿಹ್ವಾ। ಜಿಹ್ವೇನ್ದ್ರಿಯವಿಷಯಸಾಮಾನ್ಯಮ್ । ತಥಾ ಸರ್ವೇಷಾಂ ರೂಪಾಣಾಂ ತೇಜೋವಿಶೇಷಾಣಾಂ ಚಕ್ಷುಃ, ಚಕ್ಷುರ್ವಿಷಯಸಾಮಾನ್ಯಮ್ । ತಥಾ ಶಬ್ದಾನಾಂ ಶ್ರೋತ್ರವಿಷಯಸಾಮಾನ್ಯಂ ಪೂರ್ವವತ್ । ತಥಾ ಶ್ರೋತ್ರಾದಿವಿಷಯಸಾಮಾನ್ಯಾನಾಂ ಮನೋವಿಷಯಸಾಮಾನ್ಯೇ ಸಂಕಲ್ಪೇ। ಮನೋವಿಷಯಸಾಮಾನ್ಯಸ್ಯಾಪಿ ಬುದ್ಧಿವಿಷಯಸಾಮಾನ್ಯೇ ವಿಜ್ಞಾನಮಾತ್ರೇ। ವಿಜ್ಞಾನಮಾತ್ರಂ ಭೂತ್ವಾ ಪರಸ್ಮಿನ್ ಪ್ರಜ್ಞಾನಘನೇ ಪ್ರಲೀಯತೇ । ತಥಾ ಕರ್ಮೇನ್ದ್ರಿಯಾಣಾಂ ವಿಷಯಾ ವದನಾದಾನಗಮನವಿಸರ್ಗಾನನ್ದವಿಶೇಷಾಃ ತತ್ತತ್ಕ್ರಿಯಾಸಾಮಾನ್ಯೇಷ್ವೇವ ಪ್ರವಿಷ್ಟಾಃ ನ ವಿಭಾಗಯೋಗ್ಯಾ ಭವನ್ತಿ ಸಮುದ್ರ ಇವ ಅಬ್ವಿಶೇಷಾಃ । ತಾನಿ ಚ ಸಾಮಾನ್ಯಾನಿ ಪ್ರಾಣಮಾತ್ರಮ್, ಪ್ರಾಣಶ್ಚ ಪ್ರಜ್ಞಾ[2]ಮಾತ್ರಮೇವ । "ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವೈ ಪ್ರಜ್ಞಾ ಸ ಪ್ರಾಣಃ" (ಕೌ. ೩-೩) ಇತಿ ಕೌಷೀತಕಿನೋಽಧೀಯತೇ ॥

(ಭಾಷ್ಯಾರ್ಥ)

ಹೇಗೆಯೇ ಎಲ್ಲಾ ಗಂಧಗಳಿಗೂ ಎಂದರೆ ಪೃಥಿವೀವಿಶೇಷಗಳಿಗೂ ನಾಸಿಕವು ಎಂದರೆ ಘ್ರಾಣದ ವಿಷಯಸಾಮಾನ್ಯವು (ಏಕಾಯನವು). ಹೇಗೆಯೇ ಎಲ್ಲಾ ರಸಗಳಿಗೂ ಎಂದರೆ ಅಬ್ವಿಶೇಷಗಳಿಗೂ ಜಿಹ್ವೆಯು ಎಂದರೆ ಜಿಹ್ವೇಂದ್ರಿಯವು ವಿಷಯಸಾಮಾನ್ಯ; ಹೇಗೆಯೇ ಎಲ್ಲಾ ರೂಪಗಳಿಗೂ ಎಂದರೆ ತೇಜೋವಿಶೇಷಗಳಿಗೂ ಚಕ್ಷುಸ್ಸು, ಎಂದರೆ ಚಕ್ಷುಸ್ಸಿನ ವಿಷಯಸಾಮಾನ್ಯವು; ಹೇಗೆಯೇ ಶಬ್ದಗಳಿಗೆ ಶ್ರೋತ್ರದ ವಿಷಯಸಾಮಾನ್ಯವು (ಏಕಾಯನವು ಎಂದು) ಹಿಂದಿನಂತೆ (ವ್ಯಾಖ್ಯಾನ)ಮಾಡಿಕೊಳ್ಳಬೇಕು. ಹೇಗೆಯೇ ಶ್ರೋತ್ರಾದಿಗಳ

1. ಸ್ವಗತಭೇದವಿರುವ ಮರ, ಸಮುದ್ರ– ಮುಂತಾದವುಗಳಂತೆ ನಾನಾರಸವಲ್ಲ ಎಂದರ್ಥ. ಭರ್ತೃಪ್ರಪಂಚರು ನಾನಾರಸಬ್ರಹ್ಮವಾದಿಗಳು; ಆಚಾರ್ಯರು ಏಕರಸ ಬ್ರಹ್ಮವಾದಿಗಳು.

2. ಈ ಮಾತು ಭಾಷ್ಯದಲ್ಲಿದ್ದು ಬರೆದವರ ಕೈತಪ್ಪಿನಿಂದ ಬಿಟ್ಟುಹೋಗಿರಬೇಕು.

3. ಪ್ರಜ್ಞಾನ– ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

ವಿಷಯಸಾಮಾನ್ಯಕ್ಕೆ ಮನಸ್ಸಿನ ವಿಷಯಸಾಮಾನ್ಯವಾದ ಸಂಕಲ್ಪದಲ್ಲಿಯೂ ಮನಸ್ಸಿನ ವಿಷಯಸಾಮಾನ್ಯಕ್ಕೆ ಬುದ್ಧಿಯ ವಿಷಯಸಾಮಾನ್ಯವೂ (ಏಕಾಯನವು. ಹೀಗೆ ಎಲ್ಲವೂ) ವಿಜ್ಞಾನಮಾತ್ರವಾಗಿ ಪ್ರಜ್ಞಾನಘನವಾದ ಪರ(ಬ್ರಹ್ಮ)ದಲ್ಲಿ ಲಯವಾಗುತ್ತದೆ[1].

ಹೀಗೆಯೇ ಕರ್ಮೇಂದ್ರಿಯಗಳ ವಿಷಯಗಳಾದ ಮಾತಾಡುವದು, ಸ್ವೀಕರಿಸುವದು, ನಡೆಯುವದು, ಬಿಡುವದು, ಆನಂದಿಸುವದು- ಎಂಬಿವುಗಳ ವಿಶೇಷಗಳು ಆಯಾ ಕ್ರಿಯಾಸಾಮಾನ್ಯಗಳಲ್ಲಿಯೇ ಒಳಸೇರಿಕೊಂಡು- ಸಮುದ್ರದಲ್ಲಿ ನೀರಿನ ವಿಶೇಷಗಳು ಹೇಗೋ ಹಾಗೆ- •ವಿಭಾಗ(ವಾಗಿ ಅರಿಯುವದಕ್ಕೆ) ಯೋಗ್ಯವಲ್ಲದೆ ಹೋಗುವವು. ಆ ಸಾಮಾನ್ಯಗಳು ಪ್ರಾಣಮಾತ್ರವು, ಪ್ರಾಣವು ಪ್ರಜ್ಞಾಮಾತ್ರವೇ. "ಪ್ರಾಣವೆಂಬುದಿದೆಯಲ್ಲ ಅದು ಪ್ರಜ್ಞೆಯೇ; ಪ್ರಜ್ಞೆಯೆಂಬುದಿದೆಯಲ್ಲ, ಅದು ಪ್ರಾಣವೇ" (ಕೌ. ೩-೩) ಎಂದು ಕೌಷೀತಕಿಗಳು ಅಧ್ಯಯನಮಾಡುತ್ತಿದಾರೆ[2].

## ಕರಣಪ್ರಲಯವನ್ನು ಬೇರೆ ಏಕೆ ಹೇಳಲಿಲ್ಲ ?

(ಭಾಷ್ಯ)

೩೬೯. ನನು ಸರ್ವತ್ರ ವಿಷಯಸ್ಯೈವ ಪ್ರಲಯೋಽಭಿಹಿತಃ, ನ ತು ಕರಣಸ್ಯ। ತತ್ರ ಕೋಽಭಿಪ್ರಾಯ ಇತಿ? ಬಾಢಮ್। ಕಿಂ ತು ವಿಷಯಸಮಾನಜಾತೀಯಂ ಕರಣಂ ಮನ್ಯತೇ ಶ್ರುತಿಃ, ನ ತು ಜಾತ್ಯನ್ತರಮ್। ವಿಷಯಸ್ಯೈವ ಸ್ವಾತ್ಮಗ್ರಾಹಕತ್ವೇನ ಸಂಸ್ಥಾನಾನ್ತರಂ ಕರಣಂ ನಾಮ। ಯಥಾ ರೂಪವಿಶೇಷಸ್ಯೈವ ಸಂಸ್ಥಾನಂ ಪ್ರದೀಪಃ ಕರಣಂ ಸರ್ವರೂಪಪ್ರಕಾಶನೇ, ಏವಂ ಸರ್ವವಿಷಯವಿಶೇಷಾಣಾಮೇವ ಸ್ವಾತ್ಮವಿಶೇಷಪ್ರಕಾಶಕತ್ವೇನ ಸಂಸ್ಥಾನಾನ್ತರಾಣಿ ಕರಣಾನಿ ಪ್ರದೀಪವತ್। ತಸ್ಮಾತ್ ನ ಕರಣಾನಾಂ ಪೃಥಕ್ ಪ್ರಲಯೇ ಯತ್ನಃ ಕಾರ್ಯಃ ವಿಷಯಸಾಮಾನ್ಯಾತ್ಮಕತ್ವಾತ್, ವಿಷಯಪ್ರಲಯೇನೈವ ಪ್ರಲಯಃ ಸಿದ್ಧೋ ಭವತಿ ಕರಣಾನಾಮಿತಿ ॥

---

1. ಬುದ್ಧಿಯ ವಿಷಯಸಾಮಾನ್ಯವಾದ ವಿಜ್ಞಾನಮಾತ್ರವು ಚೈತನ್ಯಸ್ವರೂಪವಾಗಿರುವ ಬ್ರಹ್ಮದಿಂದಲೇ ಬಂದಿದ್ದು ಬ್ರಹ್ಮವೇ ಆಗಿಬಿಡುವದು. ಇಲ್ಲಿ ಒಂದರಲ್ಲೊಂದರ ಲಯವನ್ನು ಹೇಳಿದ್ದರೂ ಬ್ರಹ್ಮವನ್ನು ಬಿಟ್ಟು ಮಿಕ್ಕದ್ದೆಲ್ಲ ಕಾರ್ಯವೇ. ಆದ್ದರಿಂದ ನಿಜವಾಗಿ ಎಲ್ಲವೂ ಬ್ರಹ್ಮದಲ್ಲಿಯೇ ಲಯವಾಗುತ್ತದೆ ಎಂದಭಿಪ್ರಾಯ ಎಂತ ವಾರ್ತಿಕ.

2. ಕ್ರಿಯಾಶಕ್ತಿ, ಜ್ಞಾನಶಕ್ತಿ – ಎರಡೂ ಪರಮಾತ್ಮನ ಉಪಾಧಿಗಳೇ; ಬುದ್ಧೀಂದ್ರಿಯಕರ್ಮೇಂದ್ರಿಯಗಳೆರಡೂ ಪ್ರಾಣನಲ್ಲಿಯೂ ಪ್ರಾಣನು ಪರಮಾತ್ಮನಲ್ಲಿಯೂ ಲಯವಾಗುವವೆಂಬುದು ಒಟ್ಟರ್ಥ. ಬೃ. ವಾ.

(ಭಾಷ್ಯಾರ್ಥ)

(ಪ್ರಶ್ನೆ):- ಇಲ್ಲೆಲ್ಲ ವಿಷಯಕ್ಕೇ ಪ್ರಲಯವನ್ನು ಹೇಳಿದೆಯೇ ಹೊರತು ಕರಣಕ್ಕೆ (ಹೇಳಿಲ್ಲ). ಇದರ ಅಭಿಪ್ರಾಯವೇನು ?

(ಉತ್ತರ) :- ನಿಜ. ಆದರೆ ಕರಣವು ವಿಷಯಸಮಾನಜಾತೀಯ ವಾದದ್ದೆಂದು ಶ್ರುತಿಯು ತಿಳಿದಿರುವದೇ ಹೊರತು (ಅದು) ಬೇರೊಂದು ಜಾತಿಯದೆಂದು (ತಿಳಿದಿಲ್ಲ). ತನ್ನನ್ನು ಅರಿಯುವದಕ್ಕಾಗಿ ಬೇರೊಂದು ಆಕಾರವನ್ನು (ಪಡೆದುಕೊಂಡ) ವಿಷಯವೇ ಕರಣವೆಂಬುದು. ಉದಾಹರಣೆಗೆ ರೂಪವಿಶೇಷದ (ಬೇರೊಂದು) ಆಕಾರವೇ ಪ್ರದೀಪವಾಗಿ ಎಲ್ಲಾ ರೂಪಗಳನ್ನೂ ಬೆಳಗುವ ಕರಣವಾಗಿರುತ್ತದೆ. ಹೀಗೆಯೇ (ಮಿಕ್ಕ) ಎಲ್ಲಾ ವಿಷಯವಿಶೇಷಗಳೂ ತಮ್ಮತಮ್ಮ ವಿಶೇಷಗಳನ್ನು ಬೆಳಗುವದಕ್ಕಾಗಿ (ಪಡೆದುಕೊಂಡ) ಆಕಾರಾಂತರಗಳೇ ಪ್ರದೀಪದಂತೆ ಕರಣಗಳಾಗಿರುತ್ತವೆ. ಆದ್ದರಿಂದ ಕರಣಗಳ ಗಳ ಪ್ರಲಯಕ್ಕಾಗಿ (ಶ್ರುತಿಯು) ಬೇರೊಂದು ಯತ್ನವನ್ನು ಮಾಡಬೇಕಾದದ್ದು ಇರುವದಿಲ್ಲ. ಏಕೆಂದರೆ (ಅವು) ವಿಷಯಸಾಮಾನ್ಯದ ಸ್ವರೂಪವಾಗಿಯೇ ಇರುವದರಿಂದ ವಿಷಯಪ್ರಲಯದಿಂದಲೇ ಕರಣಗಳ ಪ್ರಲಯವೂ ಸಿದ್ಧವಾಗುತ್ತದೆ.

## ಜ್ಞಾನನಿಮಿತ್ತದಿಂದಾಗುವ ಆತ್ಯಂತಿಕಪ್ರಲಯ

(ಉಪನಿಷತ್ತು)

**ಸ ಯಥಾ ಸೈನ್ಧವಖಿಲ್ಯ ಉದಕೇ ಪ್ರಾಸ್ತ ಉದಕಮೇವಾನು ವಿಲೀಯೇತ ನ ಹಾಸ್ಯೋದ್ಗ್ರಹಣಾಯೇವ ಸ್ಯಾತ್ । ಯತೋ ಯತಸ್ತ್ವಾದದೀತ ಲವಣಮೇವೈವಂ ವಾ ಅರ ಇದಂ ಮಹದ್ಭೂತಮನನ್ತಮಪಾರಂ ವಿಜ್ಞಾನಘನ ಏವ। ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ**

೧೨. ಅದು ಹೇಗೆಂದರೆ (ಹೇಗೆ) ಸೈಂಧವಖಿಲ್ಯವು ನೀರಿನಲ್ಲಿ ಹಾಕಿದಾಗ ನೀರನ್ನೇ ಅನುಸರಿಸಿ ಕರಗುತ್ತದೆಯೋ ಅದನ್ನು ಎತ್ತಿಕೊಳ್ಳುವದಕ್ಕೆ ಆಗುವದೇ ಇಲ್ಲವೋ ಎಲ್ಲೆಲ್ಲಿಂದ ತೆಗೆದುಕೊಂಡರೂ ಉಪ್ಪೇ ಆಗಿರುವದೋ ಹಾಗೆಯೇ, ಎಲೆ, ಈ ಮಹದ್ಭೂತವು ಅನಂತವೂ ಅಪಾರವೂ (ಆಗುರುವದು), ವಿಜ್ಞಾನಘನವೇ. ಈ ಭೂತಗಳಿಂದ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ ನಾಶವಾಗುವದು. ಹೊರಟು ಹೋದ ಬಳಿಕ ಅರಿವೇ ಇರುವದಿಲ್ಲ. ಎಲೆ, (ಮೈತ್ರೇಯಿ), ಹೀಗೆಂದು ಹೇಳುತ್ತೇನೆ ಎಂದು ಯಜ್ಞವಲ್ಕ್ಯನೆಂದನು.

## ಕಂಡಿಕೆಯ ಸಂಬಂಧ

(ಭಾಷ್ಯ)

೩೭೦. ತತ್ರ "ಇದಂ ಸರ್ವಂ ಯದಯಮಾತ್ಮಾ" (೨-೪-೬) ಇತಿ ಪ್ರತಿಜ್ಞಾತಮ್। ತತ್ರ ಹೇತುರಭಿಹಿತಃ ಆತ್ಮಸಾಮಾನ್ಯತ್ವಮ್ ಆತ್ಮಜತ್ವಮ್ ಆತ್ಮಪ್ರಲಯತ್ವಂ ಚ। ತಸ್ಮಾತ್ ಉತ್ಪತ್ತಿಸ್ಥಿತಿಪ್ರಲಯಕಾಲೇಷು ಪ್ರಜ್ಞಾನವ್ಯತಿರೇಕೇಣ ಅಭಾವಾತ್ ಪ್ರಜ್ಞಾನಂ ಬ್ರಹ್ಮೈವ (ಇತಿ)[1] ಆತ್ಮೈವೇದಂ ಸರ್ವಮಿತಿ ಪ್ರತಿಜ್ಞಾತಂ ಯತ್ ತತ್ತರ್ಕತಃ ಸಾಧಿತಮ್। ಸ್ವಾಭಾವಿಕೋಽಯಂ ಪ್ರಲಯ ಇತಿ ಪೌರಾಣಿಕಾ ವದನ್ತಿ। ಯಸ್ತು ಬುದ್ಧಿಪೂರ್ವಕಃ ಪ್ರಲಯೋ ಬ್ರಹ್ಮವಿದಾಂ ಬ್ರಹ್ಮವಿದ್ಯಾನಿಮಿತ್ತಃ, ಅಯಮಾತ್ಯನ್ತಿಕ ಇತ್ಯಾಚಕ್ಷತೇ। ಅವಿದ್ಯಾನಿರೋಧದ್ವಾರೇಣ ಯೋ ಭವತಿ, ತದರ್ಥೋಽಯಂ ವಿಶೇಷಾರಮ್ಭಃ ॥

(ಭಾಷ್ಯಾರ್ಥ)

ಇಲ್ಲಿ "ಇದೆಲ್ಲವೂ ಈ ಆತ್ಮನೆಂಬುದೇ" (೨-೪-೬) ಎಂದು ಪ್ರತಿಜ್ಞೆ ಮಾಡಲಾಯಿತು. ಆ (ಪ್ರತಿಜ್ಞೆ)ಗೆ ಆತ್ಮನೇ (ಜಗತ್ತಿಗೆಲ್ಲ) ಸಾಮಾನ್ಯವಾಗಿರುವದು, ಆತ್ಮನಿಂದ ಹುಟ್ಟುವದು, ಮತ್ತು ಆತ್ಮನಲ್ಲಿಯೇ ಪ್ರಲಯವಾಗುವದು -ಎಂಬ ಹೇತುವನ್ನು ಹೇಳಿದ್ದಾಯಿತು.[2] ಆದ್ದರಿಂದ ಉತ್ಪತ್ತಿಸ್ಥಿತಿಪ್ರಲಯ ಕಾಲದಲ್ಲಿ ಪ್ರಜ್ಞಾನವನ್ನು ಬಿಟ್ಟು ಇಲ್ಲದಿರುವದರಿಂದ ಪ್ರಜ್ಞಾನವು ಬ್ರಹ್ಮವೇ ಎಂದು 'ಇದೆಲ್ಲವೂ ಆತ್ಮನೇ' ಎಂದು (ಹಿಂದೆ) ಪ್ರತಿಜ್ಞೆಮಾಡಿತ್ತಲ್ಲ, ಅದನ್ನು ತರ್ಕದಿಂದ ಸಾಧನೆಮಾಡಿದ್ದಾಯಿತು.[3] ಇದು **ಸ್ವಾಭಾವಿಕಪ್ರಲಯ** ಎಂದು ಪೌರಾಣಿಕರು ಕರೆಯುತ್ತಾರೆ; ಬ್ರಹ್ಮಜ್ಞಾನಿಗಳಿಗೆ ಬ್ರಹ್ಮವಿದ್ಯೆಯ ನಿಮಿತ್ತದಿಂದ ಆಗುವ ಬುದ್ಧಿಪೂರ್ವಕವಾದ ಪ್ರಲಯವಿದೆಯಲ್ಲ, ಇದು **ಆತ್ಯಂತಿಕ (ಪ್ರಲಯವು)** ಎಂದು ಕರೆಯುತ್ತಾರೆ.[4] ಅವಿದ್ಯೆಯ ನಾಶದಮೂಲಕ ಆಗು

1. ಇಲ್ಲೊಂದು ಇತಿ ಇದ್ದರೆ ಚೆನ್ನಾಗಿರುತ್ತಿತ್ತು.

2. ಅನೇಕ ಸರ್ವವಿಶೇಷಗಳಿಗೂ ಸಾಮಾನ್ಯವು ಎಂಬುದನ್ನು ೭,೮,೯ನೆಯ ಕಂಡಿಕೆಗಳಲ್ಲಿ ಹೇಳಿದೆ; ಆತ್ಮನಿಂದಲೇ ಎಲ್ಲವೂ ಹುಟ್ಟುತ್ತದೆ ಎಂಬುದನ್ನು ೧೧ನೆಯ ಕಂಡಿಕೆಯಲ್ಲಿ ಹೇಳಿವೆ; ಆತ್ಮನಲ್ಲಿಯೇ ಎಲ್ಲವೂ ಪ್ರಲಯವಾಗುತ್ತದೆ ಎಂಬುದನ್ನು ೧೧ನೆಯ ಕಂಡಿಕೆಯಲ್ಲಿ ಹೇಳಿದೆ.

3. ಪ್ರತಿಜ್ಞೆ, ಹೇತು, ದೃಷ್ಟಾಂತ -ಇವುಗಳನ್ನು ಹೇಳಿ ಪ್ರಕೃತವಿಷಯವು ಸರಿ ಎಂದು ತೋರಿಸುವದು ತರ್ಕಶಾಸ್ತ್ರದ ಪದ್ಧತಿ ; ಆದರೆ ಇಲ್ಲಿ ಹೇಳಿರುವದು ಅನುಮಾನವಲ್ಲ. ಬ್ರಹ್ಮಜ್ಞಾನಕ್ಕೆ ಶ್ರುತ್ಯುಕ್ತತರ್ಕದ ರೀತಿಯಿಂದ ಮಾಡುವ ಮನನವೇ ಬೇಕು. ಸೂ. ಭಾ. ೨-೧-೬ (ಭಾ. ಭಾ. ೪೧೫)ನ್ನು ನೋಡಿ.

4. ವಿಷ್ಣುಪುರಾಣದಲ್ಲಿ ನೈಮಿತ್ತಿಕಪ್ರಲಯ ೬-೩, ಪ್ರಾಕೃತಪ್ರಲಯ ೬-೪, ಆತ್ಯಂತಿಕಪ್ರಲಯ ೬-೫ -ಇವು ಮೂರನ್ನೂ ವಿವರಿಸಿದೆ.

ತ್ತದೆಯಲ್ಲ, ಆ (ಪ್ರಲಯವನ್ನು ತಿಳಿಸು)ವದಕ್ಕಾಗಿ ಈ (ಕಂಡಿಕೆ)ಯನ್ನು (ಈಗ) ವಿಶೇಷವಾಗಿ ಆರಂಭಿಸಿರುತ್ತದೆ[1].

## ಆತ್ಮನು ವಿಜ್ಞಾನಘನನೇ ಎಂಬುದಕ್ಕೆ ದೃಷ್ಟಾಂತ

(ಭಾಷ್ಯ)

೩೭೧. ತತ್ರ ದೃಷ್ಟಾನ್ತ ಉಪಾದೀಯತೇ ಸ ಯಥಾ ಇತಿ। ಸೈನ್ಧವ ಖಿಲ್ಯಃ। ಸಿನ್ಧೋರ್ವಿಕಾರಃ ಸೈನ್ಧವಃ। ಸಿನ್ಧುಶಬ್ದೇನ ಉದಕಮಭಿಧೀಯತೇ। ಸ್ಯನ್ದನಾತ್ ಸಿನ್ಧುರುದಕಮ್, ತದ್ವಿಕಾರಃ ತತ್ರ ಭವೋ ವಾ ಸೈನ್ಧವಃ। ಸೈನ್ಧವಶ್ಚಾಸೌ ಖಿಲ್ಯಶ್ಚೇತಿ ಸೈನ್ಧವಖಿಲ್ಯಃ। ಖಿಲ ಏವ ಖಿಲ್ಯಃ। ಸ್ವಾರ್ಥೇ ಯತ್ಪ್ರತ್ಯಯಃ। ಉದಕೇ ಸಿನ್ಧೌ ಸ್ರಯೋನೌ ಪ್ರಾಸ್ತಃ ಪ್ರಕ್ಷಿಪ್ತಃ ಉದಕಮೇವ ವಿಲೀಯಮಾನಮ್ ಅನು ವಿಲೀಯೇತ। ಯತ್ತದ್ ಭೌಮತೈಜಸಸಂಪರ್ಕಾತ್ ಕಾಠಿನ್ಯಪ್ರಾಪ್ತಿಃ ಖಿಲ್ಯಸ್ಯ ಸ್ವಯೋನಿಸಂಪರ್ಕಾತ್ ಅಪಗಚ್ಛತಿ ತತ್ ಉದಕಸ್ಯ ವಿಲಯನಮ್। ತದನು ಸೈನ್ಧವಖಿಲ್ಯೋ ವಿಲೀಯತ ಇತ್ಯುಚ್ಯತೇ। ತದೇತದಾಹ 'ಉದಕಮೇವ ಅನು ವಿಲೀಯೇತ' ಇತಿ। ನ ಹ ನೈವ ಅಸ್ಯ ಖಿಲ್ಯಸ್ಯ ಉದ್ಗ್ರಹಣಾಯ ಉದ್ಧೃತ್ಯ ಪೂರ್ವವತ್ ಗ್ರಹಣಾಯ ಗ್ರಹೀತುಂ ನೈವ ಸಮರ್ಥಃ ಕಶ್ಚಿತ್ ಸ್ಯಾತ್ ಸುನಿಪುಣೋಽಪಿ। ಇವಶಬ್ದೋಽನರ್ಥಕಃ। ಗ್ರಹಣಾಯ ನೈವ ಸಮರ್ಥಃ। ಕಸ್ಮಾತ್ ? ಯತೋ ಯತೋ ಯಸ್ಮಾತ್ ಯಸ್ಮಾತ್ ದೇಶಾತ್ ತದುದಕಮ್ ಆದದೀತ ಗೃಹೀತ್ವಾ ಆಸ್ವಾದಯೇತ್ ಲವಣಾಸ್ವಾದಮೇವ ತದುದಕಮ್। ನ ತು ಖಿಲ್ಯಭಾವಃ ॥

(ಭಾಷ್ಯಾರ್ಥ)

'ಅದು ಹೇಗೆಂದರೆ' ಎಂಬ (ವಾಕ್ಯದಿಂದ) ಇದಕ್ಕೆ ದೃಷ್ಟಾಂತವನ್ನು ತೆಗೆದುಕೊಂಡಿರುತ್ತದೆ. ಸೈಂಧವಖಿಲ್ಯವು — ಸಿಂಧುವಿನ ವಿಕಾರವು ಸೈಂಧವವು (ಉಪ್ಪು). ಸಿಂಧು ಎಂಬ ಶಬ್ದದಿಂದ ನೀರನ್ನು ಹೇಳಿರುತ್ತದೆ; ನೀರು ಹರಿಯುವದರಿಂದ (ಸ್ಯನ್ದನಾತ್) ಸಿಂಧು ಎನಿಸುತ್ತದೆ. ಅದರ ವಿಕಾರವು, ಅಥವಾ ಅದರಲ್ಲಿರುವದು ಸೈಂಧವವು. ಸೈಂಧವವೂ ಖಿಲ್ಯವೂ ಆಗಿರುವದರಿಂದ ಸೈಂಧವ ಖಿಲ್ಯವು (ಉಪ್ಪಿನಹರಳು). ಖಿಲವೇ ಖಿಲ್ಯವು ಎಂದು ಸ್ವಾರ್ಥದಲ್ಲಿ ಯತ್

---

1. ಉತ್ಪತ್ತ್ಯಾದಿಗಳನ್ನು ಹೇಳುವದು ಪರಮಾರ್ಥವಾಗಿ ಉತ್ಪತ್ತ್ಯಾದಿಗಳು ಆಗುವವೆಂದು ಪ್ರತಿಪಾದಿಸುವದಕ್ಕಲ್ಲ, ಪ್ರಜ್ಞಾನರೂಪನಾದ ಅದ್ವಿತೀಯಪರಮಾತ್ಮನೊಬ್ಬನೇ ಪರಮಾರ್ಥವೆಂದು ತಿಳಿಸುವದಕ್ಕೆ ಎಂದು ಭಾವ. ೧-೪-೭ (ಭಾ. ಭಾ. ೧೩೮, ೧೪೦) ೨-೧-೨೦ (ಭಾ. ಭಾ. ೩೧೬), ಸೂ. ಭಾ. ೨-೧-೧೪ (ಭಾ. ಭಾ. ೪೫೯), ೪-೩-೧೪ (ಭಾ. ಭಾ. ೫೮೩).

(ಎಂಬ ತದ್ಧಿತ)ಪ್ರತ್ಯಯವು (ಬಂದಿದೆ). —ತನಗೆ ಕಾರಣವಾಗಿರುವ ನೀರೆಂಬ ಸಿಂಧುವಿನಲ್ಲಿ ಹಾಕಿ ಕೆಡವಿದ (ಉಪ್ಪಿನಹರಳು) ಕರಗುವ ನೀರನ್ನು ಅನುಸರಿಸಿ (ತಾನೂ) ಕರಗುತ್ತದೆಯೋ (ಎಂದರ್ಥ). ಭೂಮಿಯ ಮತ್ತು ತೇಜಸ್ಸಿನ ಅಂಶಗಳು ಸಂಬದ್ಧವಾಗಿದ್ದದ್ದರಿಂದ ಹರಳು ಗಟ್ಟಿಯಾಗಿದ್ದದ್ದು ತನ್ನ ಕಾರಣವಾದ ನೀರಿನ ಸಂಪರ್ಕದಿಂದ ಹೋಗಿಬಿಡುವದಲ್ಲ, ಅದೇ ನೀರು ಕರಗುವದೆಂಬುದು. ಅದನ್ನನುಸರಿಸಿ ಉಪ್ಪಿನಹರಳು ಕರಗುತ್ತದೆ ಎನಿಸುತ್ತದೆ. ಇದನ್ನೇ (ಶ್ರುತಿಯು) 'ನೀರನ್ನೇ ಅನುಸರಿಸಿ ಕರಗುತ್ತದೆಯೋ' ಎಂದಿದೆ[1]. ಇದನ್ನು (ಈ) ಹರಳನ್ನು ಎತ್ತಿಕೊಳ್ಳುವದಕ್ಕೆ ಮೇಲಕ್ಕೆತ್ತಿ ಮುನ್ನಿನಂತೆ ಹಿಡಿದುಕೊಳ್ಳುವದಕ್ಕೆ ಆಗುವದೇ ಇಲ್ಲ; ಬಹಳ ನಿಪುಣನಾದರೂ ಯಾವನೂ (ಅದನ್ನು ಎತ್ತಿ) ತೆಗೆದುಕೊಳ್ಳುವದಕ್ಕೆ ಸಮರ್ಥನಾಗಲಾರನು. (ಮೂಲದಲ್ಲಿ) ಇವ ಎಂಬ ಮಾತಿಗೆ ಅರ್ಥ(ವೇನೂ) ಇಲ್ಲ. ತೆಗೆದುಕೊಳ್ಳುವದಕ್ಕೆ ಸಮರ್ಥ(ನಾಗುವದೇ) ಇಲ್ಲ. ಏಕೆ? ಎಂದರೆ ಎಲ್ಲೆಲ್ಲಿಂದ ಯಾವಯಾವ ಕಡೆಯಿಂದ ನೀರನ್ನು ತೆಗೆದುಕೊಳ್ಳುವನೋ ತೆಗೆದುಕೊಂಡು ಸವಿನೋಡುವನೋ (ಅಲ್ಲೆಲ್ಲ) ಆ ನೀರು ಆ ಉಪ್ಪಿನ (ಸವಿಯೇ) ಆಗಿರುವದು; ಆದರೆ (ಉಪ್ಪಿನ) ಹರಳಿನ ರೂಪವು (ಮಾತ್ರ) ಇರುವದಿಲ್ಲ.

## ಜ್ಞಾನದಿಂದ ಅಜ್ಞಾನವು ಹೋದರೆ ಆತ್ಮನು ವಿಜ್ಞಾನಘನನು

(ಭಾಷ್ಯ)

೩೭೨. ಯಥಾಯಂ ದೃಷ್ಟಾನ್ತಃ ಏವಂ ವಾ ಏವಮೇವ[2] ಅರೇ ಮೈತ್ರೇಯಿ ಇದಂ ಪರಮಾತ್ಮಾಖ್ಯಂ ಮಹದ್ಭೂತಮ್। ಯಸ್ಮಾತ್ ಮಹತೋ ಭೂತಾತ್ ಅವಿದ್ಯಯಾ ಪರಿಚ್ಛಿನ್ನಾ ಸತೀ ಕಾರ್ಯಕರಣೋಪಾಧಿಸಂಬನ್ಧಾತ್ ಖಿಲ್ಯಭಾವಮ್ ಆಪನ್ನಾಸಿ ಮರ್ತ್ಯಾ ಜನ್ಮಮರಣಾಶನಾಯಾಪಿಪಾಸಾದಿ ಸಂಸಾರಧರ್ಮವತ್ಯಸಿ, ನಾಮರೂಪಕಾರ್ಯಾತ್ಮಿಕಾ ಅಮುಷ್ಯಾನ್ವಯಾಹಮ್ ಇತಿ ಸ ಖಿಲ್ಯಭಾವಃ ತವ ಕಾರ್ಯಕರಣಭೂತೋಪಾಧಿಸಂಪರ್ಕಭ್ರಾನ್ತಿಜನಿತೋ ಮಹತಿ ಭೂತೇ ಸ್ವಯೋನೌ ಮಹಾಸಮುದ್ರಸ್ಥಾನೀಯೇ ಪರಮಾತ್ಮನಿ ಅಜರೇ, ಅಮರೇ, ಅಭಯೇ, ಶುದ್ಧೇ, ಸೈನ್ಧವಘನವತ್ ಏಕರಸೇ, ಪ್ರಜ್ಞಾನಘನೇ, ಅನನ್ತೇ, ಅಪಾರೇ, ನಿರನ್ತರೇ, ಅವಿದ್ಯಾಜನಿತಭ್ರಾನ್ತಿಭೇದವರ್ಜಿತೇ ಪ್ರವೇಶಿತಃ। ತಸ್ಮಿನ್ ಪ್ರವಿಷ್ಟೇ ಸ್ವಯೋನಿಗ್ರಸ್ತೇ ಖಿಲ್ಯಭಾವೇ ಅವಿದ್ಯಾಕೃತೇ

---

1. ನೀರೇ ಉಪ್ಪಾಗುತ್ತದೆ ಎಂಬ ಲೋಕದ ನಂಬಿಕೆಯು ಇದರಲ್ಲಿ ಅಡಗಿದೆ. ದೃಷ್ಟಾಂತವು ಸ್ಫುಟವಾಗುವದಕ್ಕೆ ಮಂಜಿನ ಗಡ್ಡೆ, ಗಟ್ಟಿತುಪ್ಪ —ಮುಂತಾದವುಗಳ ಉದಾಹರಣೆಯನ್ನು ಕೊಡಬಹುದು.

2. ಈ ಪಾಠವೇ ಮೇಲು.

ಭೇದಭಾವೇ ಪ್ರಣಾಶಿತೇ ಇದಮೇಕಮ್ ಅದ್ವೈತಂ ಮಹದ್ಭೂತಂ ಮಹಚ್ಚ ತತ್ ಭೂತಂ ಚ ಮಹದ್ಭೂತಮ್ । ಸರ್ವಮಹತ್ತರತ್ವಾತ್, ಆಕಾಶಾದಿ ಕಾರಣತ್ವಾಚ್ಚ ಭೂತಮ್ । ತ್ರಿಷ್ವಪಿ ಕಾಲೇಷು ಸ್ವರೂಪಾವ್ಯಭಿಚಾರಾತ್ ಸರ್ವದೈವ ಪರಿನಿಷ್ಪನ್ನಮ್ ಇತಿ ತ್ರೈಕಾಲಿಕೋ ನಿಷ್ಠಾಪ್ರತ್ಯಯಃ । ಅಥವಾ ಭೂತಶಬ್ದಃ ಪರಮಾರ್ಥವಾಚೀ । ಮಹಚ್ಚ ಪಾರಮಾರ್ಥಿಕಂ ಚೇತ್ಯರ್ಥಃ । ಲೌಕಿಕಂ ತು ಯದ್ಯಪಿ ಮಹತ್ ಭವತಿ ಸ್ವಪ್ನಮಾಯಾಕೃತಂ ಹಿಮವದಾದಿ ಪರ್ವತೋಪಮಮ್, ನ ಪರಮಾರ್ಥವಸ್ತು । ಅತೋ ವಿಶಿನಷ್ಟಿ ಇದಂ ತು ಮಹಚ್ಚ ತದ್ ಭೂತಂ ಚೇತಿ । ಅನನ್ತಮ್ । ನಾಸ್ಯಾನ್ತೋ ವಿದ್ಯತ ಇತಿ । ಅನನ್ತಂ ಕದಾಚಿತ್ ಆಪೇಕ್ಷಿಕಂ ಸ್ಯಾತ್ ಇತ್ಯತೋ ವಿಶಿನಷ್ಟಿ ಅಪಾರಮ್ ಇತಿ । ವಿಜ್ಞಪ್ತಿರ್ವಿಜ್ಞಾನಮ್ । ವಿಜ್ಞಾನಂ ಚ ತತ್ ಘನಶ್ಚೇತಿ ವಿಜ್ಞಾನಘನಃ । ಘನಶಬ್ದೋ ಜಾತ್ಯನ್ತರಪ್ರತಿಷೇಧಾರ್ಥಃ । ಯಥಾ 'ಸುವರ್ಣಘನಃ', 'ಅಯೋ ಘನಃ' ಇತಿ । ಏವಶಬ್ದೋಽವಧಾರಣಾರ್ಥಃ । ನಾನ್ಯತ್ ಜಾತ್ಯನ್ತರಮ್ ಅನ್ತಕಾಲೇ ವಿದ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ದೃಷ್ಟಾಂತವು ಹೇಗೋ (ಏವಂ ವಾ=ಏವಮೇವ) ಹಾಗೆಯೇ ಎಲೆ ಮೈತ್ರೇಯಿ, ಈ ಪರಮಾತ್ಮನೆಂಬ ಮಹದ್ಭೂತವು— ಯಾವ ಮಹಾಭೂತದಿಂದ ಅವಿದ್ಯೆಯಿಂದ ಪರಿಚ್ಛಿನ್ನಳಾಗಿ ಕಾರ್ಯಕರಣವೆಂಬ (ಭೂತಗಳ) ಉಪಾಧಿಸಂಬಂಧದಿಂದ ಹರಳಿನ ಸ್ವರೂಪವನ್ನು ಪಡೆದಿದ್ದೀಯೋ[1], ನಾಮರೂಪಕರ್ಮಾತ್ಮಳು[2], ಮರ್ತ್ಯಳು, ಇಂಥವನ ವಂಶದವಳು ನಾನು– ಎಂದು ಹುಟ್ಟುಸಾವು, ಹಸಿವುಬಾಯಾರಿಕೆ– ಮುಂತಾದ ಸಂಸಾರಧರ್ಮವುಳ್ಳವಳಾಗಿದ್ದೀಯೋ, ಕಾರ್ಯಕರಣಗಳೆಂಬ ಭೂತಗಳ ಸಂಪರ್ಕದ ಭ್ರಾಂತಿಯಿಂದುಂಟಾದ ಆ ನಿನ್ನ ಹರಳಿನ ಸ್ವರೂಪವು ತನ್ನ ಕಾರಣವಾದ ದೊಡ್ಡ ಸಮುದ್ರದಂತಿರುವ[3] ಮುಪ್ಪಿಲ್ಲದ, ಸಾವಿಲ್ಲದ, ಅಂಜಿಕೆಯಿಲ್ಲದ, ಶುದ್ಧನಾದ, ಉಪ್ಪಿನ ಹರಳಿನಂತೆ ಏಕರಸನಾದ, ಪ್ರಜ್ಞಾನಘನನಾದ ಅನಂತನಾದ ಅಪಾರನಾದ ನಿರಂತರನಾದ ಅವಿದ್ಯೆಯಿಂದುಂಟಾಗುವ ಭ್ರಾಂತಿಯ ಭೇದವಿಲ್ಲದ ಪರಮಾತ್ಮನಲ್ಲಿ ಪ್ರವೇಶಿತವಾಗುವದು. ಖಿಲ್ಯಭಾವವು ಅದರಲ್ಲಿ ಪ್ರವಿಷ್ಟವಾಗಲು, ತನ್ನ ಕಾರಣವು (ತನ್ನನ್ನು) ನುಂಗಿಕೊಳ್ಳಲು, ಅವಿದ್ಯಾಕೃತವಾದ ಭೇದಭಾವವು

---

1. ಉಪ್ಪಿನ ಹರಳು ನೀರಿನಿಂದ ಬೇರ್ಪಟ್ಟಂತೆ ಪರಮಾತ್ಮನಿಂದ ಬೇರ್ಪಟ್ಟಿದ್ದೀಯೋ ಎಂದರ್ಥ. 2. ನಾಮರೂಪದ ಕಾರ್ಯಸ್ವರೂಪಳು ಎಂದೂ ಆಗಬಹುದು.

3. ಉಪ್ಪಿನ ಹರಳು ಸಮುದ್ರದಲ್ಲಿ ಕರಗಿದಂತೆ ಎಂಬ ದೃಷ್ಟಾಂತದ ಸಮುದ್ರಸ್ಥಾನದಲ್ಲಿರುವ ಎಂದರ್ಥ.

ನಾಶವಾಗಲಾಗಿ ಈ ತನಗೆರಡನೆಯದಿಲ್ಲದ ಏಕವಾದ ಮಹದ್ಭೂತವು– ಇದು ಮಹತ್ತೂ ಭೂತವೂ ಆಗಿರುವದರಿಂದ **ಮಹದ್ಭೂತವು;** ಎಲ್ಲಕ್ಕಿಂತಲೂ ದೊಡ್ಡದಾಗಿರುವದರಿಂದಲೂ ಆಕಾಶಾದಿಗಳಿಗೂ ಕಾರಣವಾಗಿರುವದರಿಂದಲೂ (ಮಹತ್ತು), ಮತ್ತು (ಇದು) ಭೂತವು ಎಂದರೆ ಮೂರು ಕಾಲಗಳಲ್ಲಿಯೂ ತನ್ನ ರೂಪವನ್ನು ಬೇರ್ಪಡಿಸುವದಿಲ್ಲವಾದ್ದರಿಂದ[1], ಯಾವಾಗಲೂ ಪರಿನಿಷ್ಪನ್ನವೇ ಆಗಿರುತ್ತದೆಯಾದ್ದರಿಂದ (ಇಲ್ಲಿ ಭೂತ ಎಂಬದರ) ನಿಷ್ಠಾಪ್ರತ್ಯಯವು ಮೂರು ಕಾಲಕ್ಕೂ ಸೇರಿದ್ದು, ಅಥವಾ ಭೂತ ಎಂಬ ಶಬ್ದವು (ಇಲ್ಲಿ) ಪರಮಾರ್ಥ ವಾಚಕವು[2]. ಮಹತ್ತೂ ಪಾರಮಾರ್ಥಿಕವೂ (ಆಗಿದೆ) ಎಂದರ್ಥ, ಲೌಕಿಕ (ವಸ್ತು) ಸ್ವಪ್ನಮಾಯೆಗಳಿಂದಾದ ಹಿಮವತ್ಪರ್ವತವೇ ಮುಂತಾದದ್ದರಂತೆ ದೊಡ್ಡದಾಗಿರಬಹುದಾದರೂ ಪರಮಾರ್ಥವಸ್ತುವಲ್ಲ. ಆದ್ದರಿಂದ (ಇದನ್ನು) ಇದಾದರೋ ಮಹತ್ತೂ ಭೂತವೂ ಆಗಿದೆ- ಎಂದು ವಿಶೇಷಣದಿಂದ ಹೇಳಿರುತ್ತದೆ. (ಇದು) ಅನಂತವು; ಏಕೆಂದರೆ ಇದಕ್ಕೆ ಅಂತವಿಲ್ಲ. ಅನಂತವಾದದ್ದು ಒಂದೊಂದು ವೇಳೆ ಆಪೇಕ್ಷಿಕವಾಗಿ (ಅನಂತ)ವಾಗಿರಬಹುದಾದ್ದರಿಂದ ಅಪಾರವು ಎಂಬ ವಿಶೇಷಣವನ್ನು ಕೊಟ್ಟಿರುತ್ತದೆ. (ವಿಜ್ಞಾನಘನವು); ವಿಜ್ಞಾನವೆಂದರೆ ಅರಿವು; ವಿಜ್ಞಾನವೂ ಘನವೂ ಆಗಿರುವದರಿಂದ ವಿಜ್ಞಾನಘನವು. ಘನ ಶಬ್ದವು ಮತ್ತೊಂದು ಜಾತಿಯ (ವಸ್ತುವಿನ ಸಂಬಂಧವನ್ನು) ಅಲ್ಲಗಳೆಯುವದಕ್ಕೆ (ಬಂದಿದೆ). ಸುವರ್ಣಘನ (ಚಿನ್ನದ ಗಟ್ಟಿ), ಅಯೋಘನ (ಕಬ್ಬಿಣದ ಗಟ್ಟಿ)- ಎಂಬಂತೆಯೇ (ಈ ಪ್ರಯೋಗವು)[3]. ಏವಶಬ್ದವು ಅವಧಾರಣೆಯನ್ನು (ತಿಳಿಸು)ವದಕ್ಕೆ (ಬಂದಿದೆ). ನಡುವೆ ಮತ್ತೊಂದು ಬೇರೆಯ ಜಾತಿಯ (ವಸ್ತು ಇದರ)ಲ್ಲಿಲ್ಲ ಎಂದರ್ಥ.

## ಅಜ್ಞಾನದಿಂದ ಜೀವಭಾವ, ಜ್ಞಾನದಿಂದ ಪರಮಾತ್ಮಭಾವ

(ಭಾಷ್ಯ)

೩೭೩. ಯದೀದಮೇಕಮ್ ಅದ್ವೈತಂ ಪರಮಾರ್ಥತಃ ಸ್ವಚ್ಛಂ ಸಂಸಾರ ದುಃಖಾಸಂಪೃಕ್ತಮ್, ಕಿಂನಿಮಿತ್ತೋಽಯಂ ಖಿಲ್ಯಭಾವಃ ಆತ್ಮನಃ ಜಾತಃ, ಮೃತಃ, ಸುಖೀ, ದುಃಖೀ, ಅಹಮ್, ಮಮ – ಇತ್ಯೇವಮಾದಿಲಕ್ಷಣೋಽನೇಕ

---

1. ಒಂದೇ ಸ್ವರೂಪದಲ್ಲಿರುವದರಿಂದ.

2. ಹಿಂದಿನ ವ್ಯಾಖ್ಯಾನದಲ್ಲಿ ಇದ್ದಂತಿರುವದು ಎಂದು ಭೂತಶಬ್ದವನ್ನು ವಿವರಿಸಿತ್ತು; ಈಗ ಪರಮಾರ್ಥವಾದದ್ದು ಎಂದು ವಿವರಿಸಿದೆ. ಎರಡರ್ಥದಲ್ಲಿಯೂ ಪರಮಾರ್ಥ ಸತ್ಯವೂ ಪರಮಮಹತ್ತೂ ಆದ ವಸ್ತು ಎಂಬುದೇ ವಿವಕ್ಷಿತವಾಗಿದೆ.

3. ಆತ್ಮನಲ್ಲಿ ವೈಚಿತ್ರ್ಯವುಂಟೆಂಬ ಭರ್ತೃಪ್ರಪಂಚರ ಮತವು ವಿಜ್ಞಾನಘನ ಶಬ್ದಕ್ಕೆ ವಿರುದ್ಧವೆಂದು ಭಾವ.

ಸಂಸಾರಧರ್ಮೋಪದ್ರುತ ಇತಿ ? ಉಚ್ಯತೇ। ಏತೇಭ್ಯೋ ಭೂತೇಭ್ಯೋ ಯಾನ್ಯೇತಾನಿ ಕಾರ್ಯಕರಣವಿಷಯಾಕಾರಪರಿಣತಾನಿ ನಾಮರೂಪಾತ್ಮಕಾನಿ ಸಲಿಲಫೇನಬುದ್ಬುದೋಪಮಾನಿ ಸ್ವಚ್ಛಸ್ಯ ಪರಮಾತ್ಮನಃ ಸಲಿಲೋಪಮಸ್ಯ, ಯೇಷಾಂ ವಿಷಯಪರ್ಯನ್ತಾನಾಂ ಪ್ರಜ್ಞಾನಘನೇ ಬ್ರಹ್ಮಣಿ ಪರಮಾರ್ಥ ವಿವೇಕಜ್ಞಾನೇನ ಪ್ರವಿಲಾಪನಮುಕ್ತಂ ನದೀಸಮುದ್ರವತ್, ಏತೇಭ್ಯೋ ಹೇತುಭೂತೇಭ್ಯೋ ಭೂತೇಭ್ಯಃ— ಸತ್ಯಶಬ್ದವಾಚ್ಯೇಭ್ಯಃ ಸಮುತ್ಥಾಯ ಸೈನ್ಧವಖಿಲ್ಯವತ್। ಯಥಾ ಅದ್ಭ್ಯಃ ಸೂರ್ಯಚನ್ದ್ರಾದಿಪ್ರತಿಬಿಮ್ಬಃ, ಯಥಾ ವಾ ಸ್ವಚ್ಛಸ್ಯ ಸ್ಫಟಿಕಸ್ಯ ಅಲಕ್ತಕಾದ್ಯುಪಾದಿಭ್ಯೋ ರಕ್ತಾದಿಭಾವಃ ಏವಂ ಕಾರ್ಯಕರಣಭೂತಭೂತೋಪಾಧಿಭ್ಯೋ ವಿಶೇಷಾತ್ಮಖಿಲ್ಯಭಾವೇನ—ಸಮುತ್ಥಾಯ ಸಮ್ಯಕ್ ಉತ್ಥಾಯ ಯೇಭ್ಯೋ ಭೂತೇಭ್ಯ ಉತ್ಥಿತಃ ತಾನಿ (ಯದಾ)[1] ಕಾರ್ಯಕರಣವಿಷಯಾಕಾರಪರಿಣತಾನಿ ಭೂತಾನಿ ಆತ್ಮನೋ ವಿಶೇಷಾತ್ಮಖಿಲ್ಯಹೇತುಭೂತಾನಿ ಶಾಸ್ತ್ರಾಚಾರ್ಯೋಪದೇಶೇನ ಬ್ರಹ್ಮವಿದ್ಯಯಾ ನದೀಸಮುದ್ರವತ್ ಪ್ರವಿಲಾಪಿತಾನಿ ವಿನಶ್ಯನ್ತಿ ಸಲಿಲಫೇನಬುದ್ಬುದಾದಿವತ್। ತೇಷು ವಿನಶ್ಯತ್ಸು ಅನ್ವೇವ ಏಷ ವಿಶೇಷಾತ್ಮಖಿಲ್ಯಭಾವೋ ವಿನಶ್ಯತಿ। ಯಥಾ ಉದಕಾಲಕ್ತಕಾದಿಹೇತ್ವಪನಯೇ ಸೂರ್ಯಚನ್ದ್ರಸ್ಫಟಿಕಾದಿಪ್ರತಿಬಿಮ್ಬೋ ವಿನಶ್ಯತಿ। ಚನ್ದ್ರಾದಿಸ್ವರೂಪಮೇವ ಪರಮಾರ್ಥತೋ ವ್ಯವತಿಷ್ಠತೇ ತದ್ವತ್ ಪ್ರಜ್ಞಾನಘನಮ್ ಅನನ್ತಮ್ ಅಪಾರಂ ಸ್ವಚ್ಛಂ ವ್ಯವತಿಷ್ಠತೇ ॥

(ಭಾಷ್ಯಾರ್ಥ)

ಇದು ತನಗೆರಡನೆಯದಿಲ್ಲದ ಒಂದೇ ಆಗಿ, ಪರಮಾರ್ಥವಾಗಿ ಸ್ವಚ್ಛವೂ ಸಂಸಾರದುಃಖದ ಸಂಪರ್ಕವಿಲ್ಲದ್ದೂ ಆಗಿರುವದಾದರೆ, ಆತ್ಮನಿಗೆ- ಹುಟ್ಟಿದೆನು, ಸತ್ತೆನು, ಸುಖಿಯು, ದುಃಖಿಯು, ನಾನು, ನನ್ನದು –ಎಂಬಿವೇ ಮುಂತಾದ ಅನೇಕ ಸಂಸಾರಧರ್ಮಗಳ ಅನರ್ಥದಿಂದೊಡಗೂಡಿರುವ- ಈ ಹೆರಳಿನ ಸ್ವಭಾವಕ್ಕೆ ನಿಮಿತ್ತವೇನು ? ಎಂದರೆ ಹೇಳುತ್ತಾನೆ: ಈ ಭೂತಗಳಿಂದ— ಯಾವವು ಈ ಕಾರ್ಯಕರಣವಿಷಯಗಳ ರೂಪದಿಂದ ಪರಿಣಮಿಸಿರುವ ನಾಮರೂಪಾತ್ಮಕವಾದ, ನೀರಿನಂತೆ ಸ್ವಚ್ಛವಾಗಿರುವ ಪರಮಾತ್ಮನಿಗೆ ನೀರಿನ ನೊರೆ, ಗುಳ್ಳೆಗಳಂತಿರುವವೋ, ವಿಷಯಪರ್ಯಂತವಾಗಿರುವ ಯಾವವನ್ನು ಪರಮಾರ್ಥವಿವೇಕಜ್ಞಾನದಿಂದ ನದೀಸಮುದ್ರ(ನ್ಯಾಯ)ದಿಂದ ಪ್ರಜ್ಞಾನಘನವಾದ ಬ್ರಹ್ಮದಲ್ಲಿ ಪ್ರವಿಲಯವನ್ನು ಮಾಡಿಕೊಳ್ಳಬೇಕೆಂದು ಹೇಳಲಾಯಿತೋ,

1. ಈ ಮಾತು ಇಲ್ಲಿ ಬೇಕಿಲ್ಲವೆಂದು ತೋರುತ್ತದೆ; ಅನುವಾದದಲ್ಲಿ ಅದನ್ನು ಬಿಟ್ಟುಬಿಟ್ಟಿದೆ.

ಆ ಈ ಹೇತುಭೂತಗಳಾಗಿರುವ ಸತ್ಯಶಬ್ದವಾಚ್ಯವಾಗಿರುವ[1] ಭೂತಗಳಿಂದ- ಉಪ್ಪಿನ ಹರಳಿನಂತೆ ಎದ್ದು,- (ಅಥವಾ) ಹೇಗೆ ನೀರಿನಿಂದ ಸೂರ್ಯಚಂದ್ರಾದಿಗಳ ಪ್ರತಿಬಿಂಬವು ಎದ್ದುಕೊಳ್ಳುವದೋ, ಅಥವಾ ಹೇಗೆ ಸ್ವಚ್ಛವಾಗಿರುವ ಸ್ಫಟಿಕಕ್ಕೆ ಅರಗೇ ಮುಂತಾದ ಉಪಾಧಿಗಳಿಂದ ಕೆಂಪು ಮುಂತಾದ ರೂಪವು (ಎದ್ದುಕೊಳ್ಳುವದೋ)[2] ಹಾಗೆ- ಕಾರ್ಯಕರಣಗಳಾಗಿರುವ ಭೂತಗಳೆಂಬ ಉಪಾಧಿಗಳಿಂದ ವಿಶೇಷಾತ್ಮನೆಂಬ ಹರಳಿನ ರೂಪವಾಗಿ ಎದ್ದುಕೊಂಡು (ಸಮುತ್ಥಾಯ=ಸಮ್ಯಗುತ್ಥಾಯ) ಚೆನ್ನಾಗಿ ಎದ್ದು ತೋರಿಕೊಂಡು, ಯಾವ ಭೂತಗಳಿಂದ (ಹೀಗೆ) ಎದ್ದುಕೊಂಡನೋ, ಕಾರ್ಯಕರಣವಿಷಯಾಕಾರವಾಗಿ ಪರಿಣಾಮವಾಗಿದ್ದು ಆತ್ಮನಿಗೆ ವಿಶೇಷಾತ್ಮನೆಂಬ ಹರಳಿನ (ಸ್ವರೂಪವನ್ನು ಪಡೆಯುವದಕ್ಕೆ) ಕಾರಣವಾಗಿದ್ದ ಆ ಭೂತಗಳು ಶಾಸ್ತ್ರಾಚಾರ್ಯರ ಉಪದೇಶದಿಂದ- ನದೀಸಮುದ್ರನ್ಯಾಯದಿಂದ ಬ್ರಹ್ಮವಿದ್ಯೆಯಿಂದ ಪ್ರವಿಲಾಪಿತವಾದರೆ ನೀರಿನಸೊರೆ, ಗುಳ್ಳೆ ಮುಂತಾದವುಗಳಂತೆ[3] ನಾಶವಾಗುವವು. ಅವು ನಾಶವಾಗಲು ಅವುಗಳ ಹಿಂದೆಯೇ ಈ ವಿಶೇಷಾತ್ಮನೆಂಬ ಹರಳಿನ ರೂಪವು ನಾಶವಾಗುವದು. ಹೇಗೆ ನೀರು, ಅರಗು- ಮುಂತಾದ ಹೇತುಗಳು ಹೋದರೆ ಸೂರ್ಯಚಂದ್ರಸ್ಫಟಿಕಾದಿಗಳ ಪ್ರತಿಬಿಂಬವು ನಾಶವಾಗುವದೋ, ಚಂದ್ರಾದಿಗಳ ಸ್ವರೂಪವೇ ಪರಮಾರ್ಥವಾಗಿ ಉಳಿದುಕೊಳ್ಳುವದೋ, ಅದರಂತೆ ಪ್ರಜ್ಞಾನಘನವೂ ಅನಂತವೂ ಅಪಾರವೂ ಸ್ವಚ್ಛವೂ ಆಗಿರುವ (ವಸ್ತುವೇ) ಉಳಿದುಕೊಳ್ಳುವದು[4].

---

1. ೧-೫-೨ರಲ್ಲಿ ನಾಮರೂಪಗಳಿಗೆ ಸತ್ಯವೆಂಬ ಹೆಸರನ್ನು ಕೊಟ್ಟಿದೆ. ಮೂರ್ತಾಮೂರ್ತಬ್ರಾಹ್ಮಣದಲ್ಲಿಯೂ ಕಾರ್ಯಕರಣಾತ್ಮಕವಾದ ಪಂಚಭೂತಗಳಿಗೆ ಸತ್ಯವೆಂಬ ಹೆಸರನ್ನು ಉಪಯೋಗಿಸಿದೆ. ಇವನ್ನು ಅವಿದ್ಯೆ ಎಂದು ವೇದಾಂತಿಗಳು ಕರೆಯುತ್ತಾರೆಂದು ವಾರ್ತಿಕದಲ್ಲಿದೆ ೨-೪-೪೧೮; ಅವಿದ್ಯಾಕಲ್ಪಿತವಾಗಿರುವವೆಂದು ಅದಕ್ಕೆ ಅರ್ಥ.

2. ಉಪ್ಪಿನ ಹರಳಿನ ದೃಷ್ಟಾಂತದಿಂದಲೂ ಭೂತಗಳಿಂದುಂಟಾಗಿರುವವೆಂದದ್ದರಿಂದಲೂ ಜೀವನು ನಿಜವಾಗಿ ಪರಮಾತ್ಮನ ವಿಕಾರವೇ ಎಂಬ ಭ್ರಾಂತಿಯು ಅವಿವೇಕಿಗಳಿಗೆ ಉಂಟಾಗಬಹುದು ಎಂಬ ಶಂಕೆಯಿಂದ ಈ ದೃಷ್ಟಾಂತಗಳನ್ನು ಕೊಟ್ಟಿದೆ. ಭೂತಗಳು ಆಕಾಶದಿಂದ ಘಟಾದಿಗಳಾಗುವಂತೆ ಕಾರ್ಯಕರಣಸಂಘಾತಗಳಾಗಲು, ಘಟಾದ್ಯಾಕಾಶಗಳಂತೆ ವಿಶೇಷಾತ್ಮರು ತೋರಿಕೊಳ್ಳುವರು ಎಂದಿಷ್ಟೇ ಇಲ್ಲಿ ವಿವಕ್ಷಿತ. ಮಾಂ. ಕಾ. ಭಾ. ೩-೩ (ಭಾ.ಭಾ. ೧೩೨)ನ್ನು ನೋಡಿ.

3. ಈ ಉಪಮಾನವನ್ನು ಮುಂದಕ್ಕೇ ಅಚ್ಚಿನ ಪುಸ್ತಕದಲ್ಲಿ ಸೇರಿಸಿದೆ. ನದಿಗಳು ಸಮುದ್ರದಲ್ಲಿ ಅಡಗಿ ಸಮುದ್ರವಾಗುವದಕ್ಕೂ ನೊರೆಗುಳ್ಳೆಗಳು ಅಡಗಿ ಸಮುದ್ರವಾಗುವದಕ್ಕೂ ಯಾವ ಹೆಚ್ಚುಕಡಿಮೆಯೂ ಇಲ್ಲದ್ದರಿಂದ ಈ ಎರಡರಲ್ಲಿ ಯಾವದೋ ಒಂದನ್ನು ಲೇಖಕರು ಹೆಚ್ಚಾಗಿ ಸೇರಿಸಿಕೊಂಡಿದ್ದರೂ ಇರಬಹುದೆಂದು ಊಹಿಸಬಹುದಾಗಿದೆ.

4. ಅದೇ ಯಾವಾಗಲೂ ಪರಮಾರ್ಥವಾಗಿರುವ ಆತ್ಮಸ್ವರೂಪವು.

# ಪರಮಾರ್ಥಾವಸ್ಥೆಯಲ್ಲಿ ವಿಶೇಷಾಭಿಮಾನವಿರುವದಿಲ್ಲ

(ಭಾಷ್ಯ)

೩೭೪. ನ ತತ್ರ ಪ್ರೇತ್ಯ ವಿಶೇಷಸಂಜ್ಞಾ ಅಸ್ತಿ ಕಾರ್ಯಕರಣಸಂಘಾತೇಭ್ಯೋ ವಿಮುಕ್ತಸ್ಯ। ಇತಿ ಏವಮ್ ಅರೇ ಮೈತ್ರೇಯಿ ಬ್ರವೀಮಿ ನಾಸ್ತಿ ವಿಶೇಷಸಂಜ್ಞೇತಿ ಅಹಮಸೌ, ಅಮುಷ್ಯಪುತ್ರಃ, ಮಮೇದಂ ಕ್ಷೇತ್ರಮ್, ಧನಮ್, ಸುಖೀ, ದುಃಖೀ- ಇತ್ಯೇವಮಾದಿಲಕ್ಷಣಾ ಅವಿದ್ಯಾಕೃತತ್ವಾತ್ ತಸ್ಯಾ ಅವಿದ್ಯಾಯಾಶ್ಚ ಬ್ರಹ್ಮವಿದ್ಯಯಾ ನಿರನ್ವಯತೋ ನಾಶಿತತ್ವಾತ್ ಕುತೋ ವಿಶೇಷಸಂಜ್ಞಾಸಂಭವೋ ಬ್ರಹ್ಮವಿದಶ್ಚೈತನ್ಯಸ್ವಭಾವಾವಸ್ಥಿತಸ್ಯ। ಶರೀರಾವಸ್ಥಿತಸ್ಯಾಪಿ ವಿಶೇಷಸಂಜ್ಞಾ ನೋಪಪದ್ಯತೇ। ಕಿಮುತ ಕಾರ್ಯಕರಣವಿಮುಕ್ತಸ್ಯ ಸರ್ವತಃ ಇತಿ ಹೋವಾಚ ಉಕ್ತವಾನ್ ಕಿಲ ಪರಮಾರ್ಥದರ್ಶನಂ ಮೈತ್ರೇಯ್ಯೈ ಭಾರ್ಯಾಯೈ ಯಾಜ್ಞವಲ್ಕ್ಯಃ ॥

(ಭಾಷ್ಯಾರ್ಥ)

ಅಲ್ಲಿಗೆ (ಇಲ್ಲಿಂದ) ಹೊರಟುಹೋದ ಬಳಿಕ ಕಾರ್ಯಕರಣಸಂಘಾತಗಳಿಂದ ವಿಮುಕ್ತನಾದವನಿಗೆ ವಿಶೇಷಸಂಜ್ಞೆಯು ಇಲ್ಲ, ಇರುವದಿಲ್ಲ ; ಎಂದು ಹೀಗೆಂದು ಎಲೆ ಮೈತ್ರೇಯಿ, 'ನಾನು ಇಂಥವನು, ಇಂಥವನ ಮಗನು ಈ ಹೊಲವು ಹಣವು ನನ್ನದು, ಸುಖಿಯು, ದುಖಿಯು' ಎಂಬಿದೇ ಮುಂತಾದ ರೂಪದ ವಿಶೇಷಸಂಜ್ಞೆಯು[1] ಇರುವದಿಲ್ಲ ಎಂದು ಹೇಳುತ್ತಿದೇನೆ. ಏಕೆಂದರೆ ಅದು ಅವಿದ್ಯೆಯಿಂದಾಗಿರುತ್ತದೆ, (ಆ) ಅವಿದ್ಯೆಯು ಬ್ರಹ್ಮವಿದ್ಯೆಯಿಂದ ನಿರನ್ವಯವಾಗಿ[2] ನಾಶವಾಗಿಬಿಟ್ಟಿರುತ್ತದೆಯಾದ್ದರಿಂದ ಚೈತನ್ಯಸ್ವಭಾವದಿಂದ ಇದ್ದುಕೊಂಡಿರುವ ಬ್ರಹ್ಮಜ್ಞಾನಿಗೆ ವಿಶೇಷಸಂಜ್ಞೆಯು ಹೇಗೆ ಇರುವದಕ್ಕಾದೀತು ? ಶರೀರದಲ್ಲಿದ್ದುಕೊಂಡಿರುವ (ಜ್ಞಾನಿ)ಗೂ ವಿಶೇಷಸಂಜ್ಞೆಯಿರುವದೆಂಬುದು ಹೊಂದುವಂತಿಲ್ಲ[3]; ಹೀಗಿರುವಲ್ಲಿ ಕಾರ್ಯಕರಣಗಳನ್ನು ಎಲ್ಲಾ ಬಗೆಯಿಂದಲೂ ಬಿಟ್ಟಗಲಿರುವವನಿಗೆ[4] (ಹೊಂದುವದಿಲ್ಲವೆಂದು) ಹೇಳುವ

1. ವಿಶೇಷಾಭಿಮಾನವು ಎಂದರ್ಥ. ಅವಿದ್ಯೆಯಿಂದಾಗಿದ್ದ ಯಾವ ವಿಶೇಷದರಿವೂ ಆಗ ಇರುವದಿಲ್ಲ, ನಾನು ಇದು ಎಂಬ ಭೇದಜ್ಞಾನವು ಉಳಿಯುವದೇ ಇಲ್ಲ ಎಂದರ್ಥ.

2. ಸುಷುಪ್ತ್ಯಾದಿಗಳಲ್ಲಿ ಅಜ್ಞಾನವು ಅವ್ಯಕ್ತವಾಗಿರುತ್ತದೆ, ಆದರೆ ವಿದ್ಯೆಯಿಂದ ನಿರನ್ವಯವಾಗಿ ಮತ್ತೆ ತೋರದಂತೆ ನಾಶವಾಗಿಬಿಡುತ್ತದೆ.

3. ಶರೀರದಲ್ಲಿರುವಾಗಲೂ ಜ್ಞಾನಿಯು ನಿಜವಾಗಿ ಅಶರೀರನೇ ; ೪-೪-೭ರಲ್ಲಿರುವ ಅಶರೀರಃ ಎಂಬುದರ ಭಾಷ್ಯವನ್ನು ನೋಡಿ. ಇಲ್ಲಿ ಸಶರೀರನಾದ ಸುಷುಪ್ತನಿಗೂ ಎಂಬ ಟೀಕಾಕಾರನ ವ್ಯಾಖ್ಯಾನದಲ್ಲಿ ಅಧ್ಯಾಹಾರಕ್ಲೇಶವಿರುವದಲ್ಲದೆ ಆ ಮತದಲ್ಲಿ ಸಶರೀರತ್ವವು ಗೌಣವೆಂದೂ ಆಗುತ್ತದೆ.

4. ಶರೀರಪಾತವಾದ ಬಳಿಕ ಬ್ರಹ್ಮದಲ್ಲಿಯೇ ಸೇರಿಹೋಗಿರುವವನಿಗೆ ಎಂದರ್ಥ.

ದೇನಿದೆ ? ಹೀಗೆಂದು ಯಾಜ್ಞವಲ್ಕ್ಯನು ಹೆಂಡತಿಯಾದ ಮೈತ್ರೇಯಿಗೆ ಪರಮಾರ್ಥದರ್ಶನವನ್ನು ಹೇಳಿಕೊಟ್ಟನಂತೆ.

## ಜ್ಞಾನಸ್ವರೂಪನಿಗೆ ಸಂಜ್ಞೆಯಿರುವದಿಲ್ಲವೆಂಬುದು ಅವಿರುದ್ಧ

(ಉಪನಿಷತ್ತು)

**ಸಾ ಹೋವಾಚ ಮೈತ್ರೇಯ್ಯತ್ರೈವ ಮಾ ಭಗವಾನಮೂಮುಹನ್ನ ಪ್ರೇತ್ಯ ಸಂಜ್ಞಾಸ್ತೀತಿ ಸ ಹೋವಾಚ ನ ವಾ ಅರೇಽಹಂ ಮೋಹಂ ಬ್ರವೀಮ್ಯಲಂ ವಾ ಅರ ಇದಂ ವಿಜ್ಞಾನಾಯ ॥ ೧೩ ॥**

೧೩. ಆ ಮೈತ್ರೇಯಿ "(ಇಲ್ಲಿಂದ) ಹೊರಟುಹೋದಬಳಿಕ ಸಂಜ್ಞೆಯಿರುವದಿಲ್ಲ ಎಂದು ಇಲ್ಲಿಯೇ ಭಗವಂತನಾದ (ನೀನು) ನನ್ನನ್ನು ಮೋಹಗೊಳಿಸುತ್ತಿರುವೆ'' ಎಂದಳು. ಆತನು ಹೇಳಿದನೇನೆಂದರೆ "ಎಲೆ, ನಾನು ಮೋಹವನ್ನು ಹೇಳುತ್ತಿಲ್ಲ, ಇದು ವಿಜ್ಞಾನಕ್ಕೆ ಸಾಕಾಗಿರುತ್ತದೆ.''

## ಸಂಜ್ಞೆ ಎಂದರೆ ವಿಶೇಷಾಭಿಮಾನವು

(ಭಾಷ್ಯ)

೩೭೫. ಏವಂ ಪ್ರತಿಬೋಧಿತಾ ಸಾ ಹ ಕಿಲ ಉವಾಚ ಉಕ್ತವತೀ ಮೈತ್ರೇಯೀ । ಅತ್ರೈವ ಏತಸ್ಮಿನ್ನೇವ ಏಕಸ್ಮಿನ್ ವಸ್ತುನಿ ಬ್ರಹ್ಮಣಿ ವಿರುದ್ಧಧರ್ಮವತ್ತ್ವಮ್ ಆಚಕ್ಷಾಣೇನ ಭಗವತಾ ಮಮ ಮೋಹಃ ಕೃತಃ । ತದಾಹ । ಅತ್ರೈವ ಮಾ ಭಗವಾನ್ ಪೂಜಾವಾನ್ ಅಮೂಮುಹತ್ ಮೋಹಂ ಕೃತವಾನ್ । ಕಥಂ ತೇನ ವಿರುದ್ಧಧರ್ಮವತ್ತ್ವಮ್ ಉಕ್ತಮಿತಿ ? ಉಚ್ಯತೇ । ಪೂರ್ವಂ ವಿಜ್ಞಾನಘನ ಏವೇತಿ ಪ್ರತಿಜ್ಞಾಯ ಪುನರ್ನ ಪ್ರೇತ್ಯ ಸಂಜ್ಞಾಸ್ತೀತಿ । ಕಥಂ ವಿಜ್ಞಾನಘನ ಏವ, ಕಥಂ ವಾ ನ ಪ್ರೇತ್ಯ ಸಂಜ್ಞಾಸ್ತೀತಿ ? ನ ಹಿ ಉಷ್ಣಃ ಶೀತಶ್ಚಾಗ್ನಿರೇವೈಕೋ ಭವತಿ । ಅತೋ ಮೂಢಾಸ್ಮ್ಯತ್ರ । ಸ ಹೋವಾಚ ಯಾಜ್ಞವಲ್ಕ್ಯಃ । ನ ವಾ ಅರೇ ಮೈತ್ರೇಯಿ ಅಹಂ (ಮೋಹಂ) ಬ್ರವೀಮಿ । ಮೋಹನಂ ವಾಕ್ಯಂ ನ ಬ್ರವೀಮಿ ಇತ್ಯರ್ಥಃ । ನನು ಕಥಂ ವಿರುದ್ಧಧರ್ಮತ್ವಮ್ ಅಮೋಚಃ ವಿಜ್ಞಾನಘನಂ ಸಂಜ್ಞಾಭಾವಂ ಚ ? ನ ಮಯಾ ಇದಮೇಕಸ್ಮಿನ್ ಧರ್ಮಿಣಿ ಅಭಿಹಿತಮ್ । ತ್ವಯೈವೇದಂ ವಿರುದ್ಧಧರ್ಮತ್ವೇನ ಏಕಂ ವಸ್ತು ಪರಿಗೃಹೀತಂ ಭ್ರಾನ್ತ್ಯಾ ನ ತು ಮಯೋಕ್ತಮ್ । ಮಯಾ ತು ಇದಮುಕ್ತಮ್। ಯಸ್ತು ಅವಿದ್ಯಾಪ್ರತ್ಯುಪಸ್ಥಾಪಿತಃ ಕಾರ್ಯಕರಣಸಂಬನ್ಧ್ಯಾತ್ಮನಃ ಖಿಲ್ಯಭಾವಃ, ತಸ್ಮಿನ್ ವಿದ್ಯಯಾ ನಾಶಿತೇ ತನ್ನಿಮಿತ್ತಾ ಯಾ ವಿಶೇಷಸಂಜ್ಞಾ

ಶರೀರಾದಿಸಂಬನ್ಧಿನೀ ಅನ್ಯತ್ವದರ್ಶನಲಕ್ಷಣಾ, ಸಾ ಕಾರ್ಯಕರಣಸಂಘಾತೋಪಾಧೌ ಪ್ರವಿಲಾಪಿತೇ ನಶ್ಯತಿ ಹೇತ್ವಭಾವಾತ್ ಉದಕಾದ್ಯಾಧಾರನಾಶಾದಿವ ಚನ್ದ್ರಾದಿಪ್ರತಿಬಿಮ್ಬಃ। ತನ್ನಿಮಿತ್ತಶ್ಚ ಪ್ರಕಾಶಾದಿಃ। ನ ಪುನಃ ಪರಮಾರ್ಥಚನ್ದ್ರಾದಿತ್ಯಸ್ವರೂಪನಾಶವತ್ ಅಸಂಸಾರಿಬ್ರಹ್ಮಸ್ವರೂಪಸ್ಯ ವಿಜ್ಞಾನಘನಸ್ಯ ನಾಶಃ। ತದ್ವಿಜ್ಞಾನಘನ ಇತ್ಯುಕ್ತಮ್, ಸ ಆತ್ಮಾ ಸರ್ವಸ್ಯ ಜಗತಃ ಪರಮಾರ್ಥತಃ ಭೂತನಾಶಾತ್ ನ ವಿನಾಶೀ। ವಿನಾಶೀ ತು ಅವಿದ್ಯಾಕೃತಖಿಲ್ಯಭಾವಃ, "ವಾಚಾರಮ್ಭಣಂ ವಿಕಾರೋ ನಾಮಧೇಯಮ್" (ಛಾಂ. ೬-೧-೪) ಇತಿ ಶ್ರುತ್ಯನ್ತರಾತ್। ಅಯಂ ತು ಪಾರಮಾರ್ಥಿಕಃ ಅವಿನಾಶೀ ವಾ ಅರೇ ಅಯಮಾತ್ಮಾ। ಅತಃ ಅಲಂ ಪರ್ಯಾಪ್ತಂ ವಾ ಅರೇ ಇದಂ ಮಹದ್ಭೂತಮ್ ಅನನ್ತಮ್ ಅಪಾರಮ್ ಯಥಾವ್ಯಾಖ್ಯಾತಂ ವಿಜ್ಞಾನಾಯ ವಿಜ್ಞಾತುಮ್। "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್" (೪-೬-೩೦) ಇತಿ ಹಿ ವಕ್ಷ್ಯತಿ ॥

(ಭಾಷ್ಯಾರ್ಥ)

ಹೀಗೆಂದು ತಿಳಿಸಲು ಆ ಮೈತ್ರೇಯಿ ಇಂತೆಂದಳು. ಇದರಲ್ಲಿಯೇ, ಈ ಒಂದು ವಸ್ತುವಾದ ಬ್ರಹ್ಮದಲ್ಲಿಯೇ ವಿರುದ್ಧಧರ್ಮಗಳಿವೆ ಎಂದು ಹೇಳುತ್ತಿರುವ ಭಗವಂತನಾದ (ನೀನು) ನನಗೆ ಮೋಹವನ್ನುಂಟುಮಾಡಿರುತ್ತೀಯೆ. ಇದನ್ನು (ಶ್ರುತಿ) ಹೇಳುತ್ತಿದೆ: ಇಲ್ಲಿಯೇ ನನ್ನನ್ನು ಭಗವಂತನಾದ (ನೀನು) ಮೋಹಗೊಳಿಸಿರುತ್ತೀಯೆ, (ನನಗೆ) ಮೋಹವನ್ನುಂಟುಮಾಡಿರುತ್ತೀಯೆ. ಅವನು (ಬ್ರಹ್ಮದಲ್ಲಿ) ವಿರುದ್ಧಧರ್ಮಗಳಿವೆ ಎಂದು ಹೇಳಿದ್ದು ಹೇಗೆ ? ಎಂದರೆ ಹೇಳುತ್ತೇವೆ. ಹಿಂದೆ 'ವಿಜ್ಞಾನಘನನೇ' ಎಂದು ಪ್ರತಿಜ್ಞೆಮಾಡಿ ಮತ್ತೆ (ಈಗ) 'ಇಲ್ಲಿಂದ ಹೊರಟುಹೋದ ಬಳಿಕ ಸಂಜ್ಞೆಯಿರುವದಿಲ್ಲ' ಎಂದು (ಹೇಳಿದ್ದು ವಿರುದ್ಧವು). ವಿಜ್ಞಾನಘನನೇ ಎಂಬುದು ಹೇಗೆ ? ಹೊರಟುಹೋದಮೇಲೆ ಸಂಜ್ಞೆಯಿಲ್ಲವೆಂಬುದಾವರೂ ಹೇಗೆ ? ಬೆಂಕಿಯೊಂದೇ ಬಿಸಿಯಾಗಿಯೂ ತಣ್ಣಗೂ ಇರಲಾರದಷ್ಟೆ? ಆದ್ದರಿಂದ ಈ ವಿಷಯದಲ್ಲಿ (ನಾನು) ಏನೂ ತೋಚದವಳಾಗಿರುತ್ತೇನೆ (ಎಂದು ಮೈತ್ರೇಯಿ ಎಂದಳು).

ಆ ಯಾಜ್ಞವಲ್ಕ್ಯನಿಂತೆಂದನು: ಎಲೆ ಮೈತ್ರೇಯಿ, ನಾನು ಮೋಹವನ್ನು ಹೇಳುತ್ತಿಲ್ಲ, ಮೋಹಗೊಳಿಸುವ ವಾಕ್ಯವನ್ನು ಹೇಳುತ್ತಿಲ್ಲ ಎಂದರ್ಥ.

(ಮೈತ್ರೇಯಿ) :- ವಿಜ್ಞಾನಘನನೂ (ಆಗಿರುತ್ತಾನೆ, ಅವನಲ್ಲಿ) ಸಂಜ್ಞೆಯಿಲ್ಲವೂ ಇಲ್ಲ- ಎಂದು (ನೀನು) ಹೇಗೆ ಹೇಳಿದೆ ?

(ಯಾಜ್ಞವಲ್ಕ್ಯ) :- ನಾನು ಒಂದೇ ಧರ್ಮಿಯಲ್ಲಿ ಇದನ್ನೆರಡನ್ನೂ ಹೇಳಿಲ್ಲ. ನೀನೇ ಒಂದೇ ವಸ್ತು ವಿರುದ್ಧವಾದ (ಎರಡು) ಧರ್ಮವುಳ್ಳದ್ದೆಂದು

ಭ್ರಾಂತಿಯಿಂದ ಗ್ರಹಿಸಿಕೊಂಡಿರುತ್ತೀಯೋ ಹೊರತು ನಾನು ಹಾಗೆಂದು ಹೇಳಿರುವದಿಲ್ಲ. ನಾನು ಹೇಳಿರುವದೇನೆಂದರೆ, ಇದು : **ಅವಿದ್ಯೆಯು ತಂದೊಡ್ಡಿರುವ ಕಾರ್ಯಕರಣಸಂಬಂಧಿಯಾದ ಆತ್ಮನ ಹರಳಿನ ರೂಪವಿದೆಯಲ್ಲ, ಅದು ವಿದ್ಯೆಯಿಂದ ನಾಶವಾಗಲಾಗಿ ಅದರ ನಿಮಿತ್ತದಿಂದ ಶರೀರವೇ ಮುಂತಾದ ಸಂಬಂಧವುಳ್ಳ (ಆತ್ಮನಲ್ಲಿ) ಉಂಟಾಗಿದ್ದ ಅನ್ಯತ್ವದರ್ಶನರೂಪವಾದ ವಿಶೇಷಸಂಜ್ಞೆಯಿತ್ತಲ್ಲ, ಅದು ಕಾರ್ಯಕರಣ ಸಂಘಾತವೆಂಬ ಉಪಾಧಿಯನ್ನು ಪ್ರವಿಲಾಪನವಾಡಿಕೊಂಡ ಬಳಿಕ, ನೀರೇ ಮುಂತಾದ ಆಧಾರವು ನಾಶವಾಗಲು, ಚಂದ್ರನೇ ಮುಂತಾದದ್ದರ ಪ್ರತಿಬಿಂಬವೂ ಅದರ ನಿಮಿತ್ತದಿಂದಾಗಿದ್ದ ಪ್ರಕಾಶವೂ ನಾಶವಾಗುವಂತೆ, ತನಗೆ ಹೇತುವಾದ (ಉಪಾಧಿಯು) ಇಲ್ಲವಾದ್ದರಿಂದ (ತಾನೂ) ನಾಶವಾಗುತ್ತದೆ. ಇಷ್ಟೇ ಹೊರತು ನಿಜವಾದ ಚಂದ್ರಸೂರ್ಯರ ಸ್ವರೂಪವೇ ನಾಶ(ವಾಗುವದೆಂಬಂತೆ) ಅಸಂಸಾರಿಯಾದ ವಿಜ್ಞಾನಘನವಾದ ಬ್ರಹ್ಮಸ್ವರೂಪಕ್ಕೆ ನಾಶ(ವಿಲ್ಲ).** ಅದನ್ನೇ (ನಾನು) ವಿಜ್ಞಾನಘನನು ಎಂದು ಹೇಳಿರುವದು. ಸರ್ವಜಗತ್ತಿಗೂ ನಿಜವಾಗಿ ಆತ್ಮನಾಗಿರುವ ಅದು ಭೂತಗಳು ನಾಶವಾದರೂ ನಾಶವಾಗುವದಿಲ್ಲ. ಆದರೆ ವಿನಾಶವಾಗುವದು (ಯಾವದೆಂದರೆ) ಅವಿದ್ಯೆಯಿಂದಾಗಿರುವ ಹರಳಿನ ರೂಪು. "ವಿಕಾರವೆಂಬುದು ಮಾತಿನಿಂದಾದ ನಾಮಧೇಯವು" (ಛಾಂ. ೬-೧-೪) ಎಂದು ಬೇರೊಂದು ಶ್ರುತಿಯಿರುವದರಿಂದ (ಹೀಗೆಂದು ತಿಳಿಯಬೇಕು)[1].

ಆದರೆ ಈ ಪಾರಮಾರ್ಥಿಕನಾದ ಆತ್ಮನಿರುವನಲ್ಲ, ಎಲೆ (ಮೈತ್ರೇಯಿ), ಇವನು ಅವಿನಾಶಿಯೇ[2]. ಆದ್ದರಿಂದ ಎಲೆ (ಮೈತ್ರೇಯಿ), ಮೇಲೆ ವಿವರಿಸಿರುವಂತೆ ಅನಂತವೂ ಅಪಾರವೂ ಆಗಿರುವ ಈ ಮಹದ್ಭೂತವು ವಿಜ್ಞಾನಕ್ಕೆ ಎಂದರೆ ಅರಿತುಕೊಳ್ಳುವದಕ್ಕೆ ಸಾಕಾಗಿರುತ್ತದೆ, ಶಕ್ತವಾಗಿರುತ್ತದೆ[3]. "ವಿಜ್ಞಾತೃವಿನ ವಿಜ್ಞಾತಿಗೆ ವಿಪರಿಲೋಪವಿಲ್ಲ, ಏಕೆಂದರೆ (ಅದು) ಅವಿನಾಶಿಯಾಗಿರುತ್ತದೆ (೪-೩-೩೦) ಎಂದಲ್ಲವೆ, (ಶ್ರುತಿಯು) ಮುಂದೆ ಹೇಳುವದು ?

1. ಆತ್ಮನು ಸ್ವತಃ ಪರಮಾತ್ಮನ ವಿಕಾರವಲ್ಲವಾದರೂ ಭೂತಗಳಿಂದಾಗಿದ್ದ ವಿಶೇಷಾತ್ಮಖಿಲ್ಯಭಾವವು ವಿಕಾರವು ಎಂದು ಇಟ್ಟುಕೊಂಡು ಹೀಗೆಂದು ಹೇಳಿರುತ್ತದೆ.

2. ೪-೫-೧೪ರ ಅಭಿಪ್ರಾಯವಿದು. ೨-೪ ಮತ್ತು ೪-೫ ಈ ಎರಡನ್ನೂ ಒಂದೇ ಗ್ರಂಥವೆಂದು ಹಿಡಿದು ಒಂದರ ಅಭಿಪ್ರಾಯವನ್ನೊಂದರಲ್ಲಿ ಉಪಸಂಹಾರಮಾಡಿಕೊಳ್ಳುವದು ಆಚಾರ್ಯರ ಶೈಲಿ.

3. ವಿಷಯವನ್ನು ಬೆಳಗುವದಕ್ಕೆ ವಿಶೇಷಜ್ಞಾನವೇ ಬೇಕೆಂಬ ನಿರ್ಬಂಧವಿಲ್ಲ; ಅವಿನಾಶಿಯಾದ ಈ ಚೈತನ್ಯಸ್ವರೂಪದ ಆಧಾರದಿಂದಲೇ ವಿಶೇಷಜ್ಞಾನವೂ ತನ್ನ ವಿಷಯವನ್ನು ಬೆಳಗಲು ಶಕ್ತವಾಗಿರುತ್ತದೆ ಎಂದು ಭಾವ.

# ನ ಪ್ರೇತ್ಯಸಂಜ್ಞಾಸ್ತಿ ಎಂಬುದರ ವಿವರಣೆ

( ಉಪನಿಷತ್ತು )

**ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಜಿಘ್ರತಿ[1] ತದಿತರ ಇತರಂ ಪಶ್ಯತಿ ತದಿತರ ಇತರಗ್ಂ ಶೃಣೋತಿ ತದಿತರ ಇತರ ಮಭಿವದತಿ ತದಿತರ ಇತರಂ ಮನುತೇ ತದಿತರ ಇತರಂ ವಿಜಾನಾತಿ ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಜಿಘ್ರೇತ್ ತತ್ಕೇನ ಕಂ ಪಶ್ಯೇತ್ ತತ್ಕೇನ ಕಗ್ಂ ಶೃಣುಯಾತ್ ತತ್ಕೇನ ಕಮಭಿವದೇತ್ ತತ್ಕೇನ ಕಂ ಮನ್ವೀತ ತತ್ಕೇನ ಕಂ ವಿಜಾನೀಯಾತ್। ಯೇನೇದಗ್ಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾದ್ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ॥ ೧೪ ॥**

೧೪. ಏಕೆಂದರೆ ಎಲ್ಲಿ ದ್ವೈತವಿದ್ದಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಂದನ್ನು ಮೂಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಕಾಣುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಕೇಳುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಹೇಳುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಆಲೋಚಿಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಅರಿತುಕೊಳ್ಳುತ್ತಾನೆ. ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಏನನ್ನು ಮೂಸಿಯಾನು, ಅಲ್ಲಿ ಏತರಿಂದ ಏನನ್ನು ಕಂಡಾನು ? ಅಲ್ಲಿ ಏತರಿಂದ ಏನನ್ನು ಕೇಳಿಯಾನು? ಅಲ್ಲಿ ಏತರಿಂದ ಏನನ್ನು ಹೇಳಿಯಾನು ? ಅಲ್ಲಿ ಏತರಿಂದ ಏನನ್ನು ಆಲೋಚಿಸಿಯಾನು? ಅಲ್ಲಿ ಏತರಿಂದ ಏನನ್ನು ಅರಿತಾನು ? ಯಾವನಿಂದ ಇದೆಲ್ಲವನ್ನೂ (ಮನುಷ್ಯನು) ಅರಿತುಕೊಳ್ಳುತ್ತಿರುವನೋ ಅವನನ್ನು ಏತರಿಂದ ಅರಿತುಕೊಂಡಾನು? ಎಲೆ, ವಿಜ್ಞಾತೃವನ್ನು ಏತರಿಂದ ಅರಿತುಕೊಂಡಾನು ?

## ಅವಿದ್ಯಾವಸ್ಥೆಯಲ್ಲಿ ದ್ವೈತವಿಜ್ಞಾನ

(ಭಾಷ್ಯ)

೩೭೬. ಕಥಂ ತರ್ಹಿ ಪ್ರೇತ್ಯ ಸಂಜ್ಞಾ ನಾಸ್ತೀತಿ? ಉಚ್ಯತೇ। ಶೃಣು। ಯತ್ರ ಯಸ್ಮಿನ್ ಅವಿದ್ಯಾಕಲ್ಪಿತೇ ಕಾರ್ಯಕರಣಸಂಘಾತೋಪಾಧಿಜನಿತೇ

1. ಪಶ್ಯತಿ ಎಂದು ಮುಂತಾಗಿ ೪-೫ರಲ್ಲಿರುವಂತೆ ಕೆಲವು ಪುಸ್ತಕಗಳಲ್ಲಿ ಪಾಠಾಂತರ ವಿದೆಯಾದರೂ ಇಲ್ಲಿರುವದೇ ಭಾಷ್ಯಕಾರರು ಒಪ್ಪಿರುವ ಪಾಠ.

ವಿಶೇಷಾತ್ಮನಿ ಖಿಲ್ಯಭಾವೇ ಹಿ ಯಸ್ಮಾತ್ ದ್ವೈತಮಿವ ಪರಮಾರ್ಥತೋಽ ದ್ವೈತೇ ಬ್ರಹ್ಮಣಿ ದ್ವೈತಮಿವ ಭಿನ್ನಮಿವ ವಸ್ತ್ವನ್ತರಮ್ ಆತ್ಮನಃ (ಭವತಿ)[1] ಉಪಲಕ್ಷ್ಯತೇ। ನನು ದ್ವೈತೇನ ಉಪಮೀಯಮಾನತ್ವಾತ್ ದ್ವೈತಸ್ಯ ಪಾರಮಾರ್ಥಿಕತ್ವಮಿತಿ। ನ। "ವಾಚಾರಮ್ಭಣಂ ವಿಕಾರೋ ನಾಮಧೇಯಮ್" (ಛಾಂ. ೬-೧-೪) ಇತಿ ಶ್ರುತ್ಯನ್ತರಾತ್, "ಏಕಮೇವಾದ್ವಿತೀಯಮ್" (ಛಾಂ. ೬-೨-೧). "ಆತ್ಮೈವೇದಂ ಸರ್ವಮ್" (ಛಾಂ.೭-೨೫-೨) ಇತಿ ಚ। ತತ್ ತತ್ರ ಯಸ್ಮಾತ್ ದ್ವೈತಮಿವ ತಸ್ಮಾದೇವ ಇತರೋ ಅಸೌ ಪರಮಾತ್ಮನಃ ಖಿಲ್ಯಭೂತಃ ಆತ್ಮಾ ಅಪರಮಾರ್ಥಃ, ಚನ್ದ್ರಾದೇರಿವ ಉದಕಚನ್ದ್ರಾದಿ ಪ್ರತಿಬಿಮ್ಬಃ, ಇತರೋ ಘ್ರಾತಾ ಇತರೇಣ ಘ್ರಾಣೇನ ಇತರಂ ಘ್ರಾತವ್ಯಂ ಜಿಘ್ರತಿ। ಇತರ 'ಇತರಮ್' ಇತಿ ಕಾರಕಪ್ರದರ್ಶನಾರ್ಥಮ್ ಜಿಘ್ರತಿ ಇತಿ ಕ್ರಿಯಾಫಲಯೋರಭಿಧಾನಮ್। ಯಥಾ ಛಿನತ್ತಿ ಇತಿ। ಯಥಾ ಉದ್ಯಮ್ಯೋದ್ಯಮ್ಯ ನಿಪಾತನಂ ಛೇದ್ಯಸ್ಯ ಚ ದ್ವೈಧೀಭಾವಃ ಉಭಯಂ ಛಿನತ್ತೀತ್ಯೇಕೇನೈವ ಶಬ್ದೇನ ಅಭಿಧೀಯತೇ ಕ್ರಿಯಾವಸಾನತ್ವಾತ್, ಕ್ರಿಯಾವ್ಯತಿರೇಕೇಣ ಚ ತತ್ಫಲಸ್ಯಾನುಪಲಮ್ಭಾತ್। ಇತರೋ ಘ್ರಾತಾ ಇತರೇಣ ಘ್ರಾಣೇನ ಇತರಂ ಘ್ರಾತವ್ಯಂ ಜಿಘ್ರತಿ। ತಥಾ ಇತರ ಇತ್ಯಾದಿ ಸರ್ವಂ ಪೂರ್ವವತ್ ವಿಜಾನಾತಿ। ಇಯಮ್ ಅವಿದ್ಯಾವದವಸ್ಥಾ ॥

(ಭಾಷ್ಯಾರ್ಥ)

(ಪ್ರಶ್ನೆ) :– ಹಾಗಾದರೆ ಹೊರಟುಹೋದಬಳಿಕ ಸಂಜ್ಞೆಯಿಲ್ಲ ಎಂದು ಹೇಳಿದ್ದು ಹೇಗೆ ?

(ಉತ್ತರ) :– ಕೇಳು[2]. (ಹಿ=ಯಸ್ಮಾತ್) ಎಲ್ಲಿ, ಯಾವ ಅವಿದ್ಯಾಕಲ್ಪಿತವಾದ ಕಾರ್ಯಕರಣಸಂಘಾತವೆಂಬ ಉಪಾಧಿಯಿಂದಾಗಿರುವ ವಿಶೇಷಾತ್ಮನೆಂಬ ಖಿಲ್ಯಭಾವದಲ್ಲಿ, ದ್ವೈತದಂತೆ ನಿಜವಾಗಿ ಅದ್ವೈತವೇ ಆಗಿರುವ ಬ್ರಹ್ಮದಲ್ಲಿ(ಯೇ) ದ್ವೈತದಂತೆ, ತನಗಿಂತ ಬೇರೆಯಾಗಿರುವ ಮತ್ತೊಂದು ವಸ್ತುವಿನಂತೆ, ಇರುವದೋ ಕಾಣುತ್ತಿರುವದೋ—

• (ಆಕ್ಷೇಪ) :– ('ದ್ವೈತದಂತೆ' ಎಂದು) ದ್ವೈತಕ್ಕೆ ಹೋಲಿಸಿರುವದರಿಂದ ದ್ವೈತವು ಪರಮಾರ್ಥ(ವೆಂದಾಯಿತಲ್ಲ) !

(ಪರಿಹಾರ) :– ಹಾಗಲ್ಲ. ಏಕೆಂದರೆ "ವಿಕಾರವೆಂಬುದು ಮಾತಿನಿಂದಾದ ನಾಮಧೇಯವು" (ಛಾಂ. ೬-೧-೪) ಎಂದು ಶ್ರುತ್ಯಂತರವಿದೆ, "ತನಗೆರಡ

1. ಈ ಮಾತು ಭಾಷ್ಯದಲ್ಲಿದ್ದು ಬಿಟ್ಟುಹೋಗಿರಬೇಕು.

2. ಇದಕ್ಕೆ ಉತ್ತರವನ್ನು ಈ ಕಂಡಿಕೆಯಲ್ಲಿ 'ಯತ್ರ ವಾ' ಎಂಬಲ್ಲಿಂದ ಹಿಡಿದು ಮುಂದಿನ ವಾಕ್ಯದಲ್ಲಿ ಹೇಳಿದೆಯೆಂದು ಭಾವ.

ನೆಯದಿಲ್ಲದ ಒಂದೇ" (೬-೨-೧), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) ಎಂದೂ (ಶ್ರುತ್ಯಂತರವಿದೆ).

(ತತ್ = ತತ್ರ) ದ್ವೈತದಂತೆ ಇರುವದಲ್ಲ, ಆದ್ದರಿಂದಲೇ[1] ಪರಮಾತ್ಮನಿಗಿಂತ ಬೇರೆಯಾಗಿರುವ ಈ ಹರಳಿನ ಭಾವವನ್ನು ಹೊಂದಿರುವ ಪರಮಾರ್ಥನಲ್ಲದ ಆತ್ಮನು, ಚಂದ್ರನೇ ಮುಂತಾದದ್ದರ ಉದಕಚಂದ್ರನೇ ಮುಂತಾದ ಪ್ರತಿಬಿಂಬದಂತಿರುವ, ಒಬ್ಬನು ಮೂಸುವವನು ಇನ್ನೊಂದಾದ ಘ್ರಾಣದಿಂದ ಇನ್ನೊಂದನ್ನು ಮೂಸತಕ್ಕ (ವಸ್ತು)ವನ್ನು ಮೂಸುತ್ತಾನೆ. ಒಬ್ಬನು ಇನ್ನೊಂದನ್ನು ಎಂದು ಕಾರಕಗಳಿಗೆ ಉಪಲಕ್ಷಣವಾಗಿ[2] (ಹೇಳಿದೆ). 'ಮೂಸುತ್ತಾನೆ' ಎಂದು ಕ್ರಿಯೆ, ಫಲ- ಇವುಗಳನ್ನು ಹೇಳಿದೆ. 'ಕಡಿಯುತ್ತಾನೆ' ಎಂಬಂತೆ(ಯೇ ಈ ಪ್ರಯೋಗವನ್ನು ಅರಿಯಬೇಕು. ಇದರ ವಿವರ): ಹೇಗೆ (ಕೊಡಲಿಯನ್ನು) ಎತ್ತಿ ಎತ್ತಿ ಕೆಳಕ್ಕೆ ಬೀಳಿಸುವದು, ಕತ್ತರಿಸಬೇಕಾದ (ವಸ್ತುವು) ಎರಡು ತುಂಡಾಗುವದೆಂಬ (ಫಲ) ಈ ಎರಡನ್ನೂ- ಕ್ರಿಯೆಯ ಕೊನೆಯಲ್ಲಿ (ಫಲವಾಗು) ವದರಿಂದಲೂ ಕ್ರಿಯೆಯನ್ನು ಬಿಟ್ಟು ಅದರ ಫಲವು ಕಾಣಬರದೆ ಇರುವದರಿಂದಲೂ- ಕಡಿಯುತ್ತಾನೆ ಎಂಬ ಒಂದೇ ಶಬ್ದದಿಂದ ಹೇಳುತ್ತಾರೋ (ಹಾಗೆಯೇ ಇದು). ಒಬ್ಬನು ಮೂಸುವವನು; ಇನ್ನೊಂದಾದ ಘ್ರಾಣದಿಂದ ಇನ್ನೊಂದನ್ನು, ಮೂಸತಕ್ಕ (ಪದಾರ್ಥ)ವನ್ನು ಮೂಸುತ್ತಾನೆ. ಹೀಗೆಯೇ ಇತರ ಮುಂತಾದ (ಮಿಕ್ಕ) ಎಲ್ಲವನ್ನೂ ಹಿಂದೆ (ವ್ಯಾಖ್ಯಾನಮಾಡಿರು)ವಂತೆ ವಿಜಾನಾತಿ (ಅರಿಯುತ್ತಾನೆ ಎಂಬವರೆಗೆ ವ್ಯಾಖ್ಯಾನಮಾಡಿಕೊಳ್ಳಬೇಕು). ಇದು ಅವಿದ್ಯೆಯುಕ್ತವಾದ ಅವಸ್ಥೆ.[3]

## ವಿದ್ಯಾವಸ್ಥೆಯಲ್ಲಿ ಕ್ರಿಯಾಕಾರಕಫಲಗಳಿಲ್ಲ

(ಭಾಷ್ಯ)

೩೭೭. ಯತ್ರ ತು ಬ್ರಹ್ಮವಿದ್ಯಯಾ ನಾಶಮುಪಗಮಿತಾ ತತ್ರ ಆತ್ಮವ್ಯತಿರೇಕೇಣ ಅನ್ಯಸ್ಯಾಭಾವಃ। ಯತ್ರ ವಾ ಅಸ್ಯ ಬ್ರಹ್ಮವಿದಃ ಸರ್ವಂ ನಾಮರೂಪಾದಿ ಆತ್ಮನ್ಯೇವ ಪ್ರವಿಲಾಪಿತಮ್ ಆತ್ಮೈವ ಸಂವೃತ್ತಮ್, ಯತ್ರೈವಮ್, ಆತ್ಮೈವಾಭೂತ್ ತತ್ ತತ್ರ ಕೇನ ಕರಣೇನ ಕಂ ಘ್ರಾತವ್ಯಂ ಕೋ ಜಿಘ್ರೇತ್ ? ತಥಾ ಪಶ್ಯೇತ್.... ವಿಜಾನೀಯಾತ್ ? ಸರ್ವತ್ರ

---

1. ಹಿ= ಯಸ್ಮಾತ್ ಎಂಬಿದನ್ನನುಸರಿಸಿ ತಸ್ಮಾತ್ ಎಂಬಿದನ್ನು ಸೇರಿಸಿಕೊಂಡಿದೆ.

2. ಕರ್ತೃವನ್ನೂ ಕರ್ಮವನ್ನೂ ಹೇಳಿರುವದು ಎಲ್ಲಾ ಕಾರಕಗಳಿಗೂ ಉಪಲಕ್ಷಣವಾಗಿ ಎಂದಭಿಪ್ರಾಯ. ಇದನ್ನು ವಿವರಿಸುವದಕ್ಕಾಗಿಯೇ ಶ್ರುತಿಯಲ್ಲಿ ಕರಣವನ್ನು ಹೇಳದಿದ್ದರೂ ಭಾಷ್ಯದಲ್ಲಿ ಸೇರಿಸಿಕೊಂಡು ವ್ಯಾಖ್ಯಾನಮಾಡಿದೆ.

3. ಆದ್ದರಿಂದ ಕ್ರಿಯಾಕಾರಕಫಲಗಳು ಅವಿದ್ಯಾಕೃತದ್ವೈತಾವಸ್ಥೆಯಲ್ಲಿ ತೋರುತ್ತಿರುವವು ಎಂದು ಹೇಳಿದಂತೆ ಆಯಿತು ಎಂದು ಭಾವ.

ಹಿ ಕಾರಕಸಾಧ್ಯಾ ಕ್ರಿಯಾ। ಅತಃ ಕಾರಕಾಭಾವೇ ಅನುಪಪತ್ತಿಃ ಕ್ರಿಯಾಯಾಃ। ಕ್ರಿಯಾಭಾವೇ ಚ ಫಲಾಭಾವಃ। ತಸ್ಮಾತ್ ಅವಿದ್ಯಾಯಾಮೇವ ಸತ್ಯಾಂ ಕ್ರಿಯಾಕಾರಕಫಲವ್ಯವಹಾರೋ ನ ಬ್ರಹ್ಮವಿದಃ। ಆತ್ಮತ್ವಾದೇವ ಸರ್ವಸ್ಯ ನಾತ್ಮವ್ಯತಿರೇಕೇಣ ಕಾರಕಂ ಕ್ರಿಯಾ ಫಲಂ ವಾ ಅಸ್ತಿ। ನ ಚ ಅನಾತ್ಮಾ ಸನ್ ಸರ್ವಮ್ ಆತ್ಮೈವ ಭವತಿ ಕಸ್ಯಚಿತ್। ತಸ್ಮಾತ್ ಅವಿದ್ಯಯೈವ ಅನಾತ್ಮತ್ವಂ ಪರಿಕಲ್ಪಿತಮ್, ನ ತು ಪರಮಾರ್ಥತಃ ಆತ್ಮವ್ಯತಿರೇಕೇಣ ಅಸ್ತಿ ಕಿಂಚಿತ್। ತಸ್ಮಾತ್ ಪರಮಾರ್ಥಾತ್ಮೈಕತ್ವಪ್ರತ್ಯಯೇ ಕ್ರಿಯಾಕಾರಕಫಲ ಪ್ರತ್ಯಯಾನುಪಪತ್ತಿಃ। ಅತೋ ವಿರೋಧಾತ್ ಬ್ರಹ್ಮವಿದಃ ಕ್ರಿಯಾಣಾಂ ತತ್ಸಾಧನಾನಾಂ ಚ ಅತ್ಯನ್ತಮೇವ ನಿವೃತ್ತಿಃ। ಕೇನ? ಕಮ್? ಇತಿ ಕ್ಷೇಪಾರ್ಥಂ ವಚನಂ ಪ್ರಕಾರಾನ್ತರಾನುಪಪತ್ತಿಪ್ರದರ್ಶನಾರ್ಥಮ್[1]। ಕೇನ ಚಿದಪಿ ಪ್ರಕಾರೇಣ ಕ್ರಿಯಾಕರಣಾದಿಕಾರಕಾನುಪಪತ್ತೇಃ। ಕೇನಚಿತ್ ಕಂ ಚಿತ್ ಕಶ್ಚಿತ್ ಕಥಂಚಿತ್ ನ ಜಿಘ್ರೇದೇವ ಇತ್ಯರ್ಥಃ॥

(ಭಾಷ್ಯಾರ್ಥ)

ಆದರೆ ಎಲ್ಲಿ ಬ್ರಹ್ಮವಿದ್ಯೆಯಿಂದ ಅವಿದ್ಯೆಯು ನಾಶಹೊಂದಿರುವದೋ ಅಲ್ಲಿ ಆತ್ಮನನ್ನು ಬಿಟ್ಟು ಮತ್ತೊಂದು ಇರುವದಿಲ್ಲ. ಎಲ್ಲಿಯಾದರೆ ಈ ಬ್ರಹ್ಮ ಜ್ಞಾನಿಗೆ ಎಲ್ಲವೂ (ಎಂದರೆ) ನಾಮ, ರೂಪ- ಮುಂತಾದದ್ದು ಆತ್ಮನಲ್ಲಿಯೇ ಪ್ರವಿಲಾಪಿತವಾಗಿ ಆತ್ಮನೇ ಆಗಿರುವದೋ- ಎಲ್ಲಿ ಹೀಗೆ (ಎಲ್ಲವೂ) ಆತ್ಮನೇ ಆಗಿರುವದೋ, ಅಲ್ಲಿ ಯಾವ ಕರಣದಿಂದ ಯಾವ ಮೂಸತಕ್ಕ (ವಸ್ತು)ವನ್ನು ಯಾವನು ಮೂಸಿಯಾನು? ಹೀಗೆಯೇ (ಯಾವನು) ಕಂಡಾನು?- (ಯಾವನು) ಅರಿತಾನು? ಎಲ್ಲೆಲ್ಲಿಯೂ ಕ್ರಿಯೆಯು ಕಾರಕಗಳಿಂದ ಆಗತಕ್ಕದ್ದಷ್ಟೆ? ಆದ್ದರಿಂದ ಕಾರಕಗಳಿಲ್ಲದಿದ್ದರೆ ಕ್ರಿಯೆಯು ಇರು ವಂತಿಲ್ಲ; ಕ್ರಿಯೆಯಿಲ್ಲದಿದ್ದರೆ ಫಲವೂ ಇಲ್ಲ. ಆದ್ದರಿಂದ ಅವಿದ್ಯೆ ಯಿದ್ದರೆ ಕ್ರಿಯಾಕಾರಕಫಲವ್ಯವಹಾರವಿದ್ದೀತೇ ಹೊರತು ಬ್ರಹ್ಮ ಜ್ಞಾನಿಗೆ ಇರುವದಿಲ್ಲ. ಎಲ್ಲವೂ ಆತ್ಮನಾಗಿಬಿಟ್ಟಿರುವದರಿಂದಲೇ ಆತ್ಮ ನನ್ನು ಬಿಟ್ಟು ಕಾರಕವಾಗಲಿ ಕ್ರಿಯೆಯಾಗಲಿ ಫಲವಾಗಲಿ ಇರು ವದಿಲ್ಲ. ಆದರೆ ಯಾವನಿಗೇ ಆಗಲಿ, ಎಲ್ಲವೂ ಅನಾತ್ಮವಾಗಿದ್ದು (ಆ ಬಳಿಕ) ಆತ್ಮನೇ ಆಗಲಾರದು; ಆದ್ದರಿಂದ ಅವಿದ್ಯೆಯಿಂದಲೇ ಅನಾತ್ಮವೆಂದು ಕಲ್ಪಿತವಾಗಿರುತ್ತದೆಯೇ ಹೊರತು ನಿಜವಾಗಿ ಆತ್ಮ ನನ್ನು ಬಿಟ್ಟು ಯಾವದೊಂದೂ ಇರುವದೇ ಇಲ್ಲ. ಆದ್ದರಿಂದ ಪರ ಮಾರ್ಥವಾಗಿರುವ ಆತ್ಮನು ಒಬ್ಬನೇ ಎಂಬ ಪ್ರತ್ಯಯವುಂಟಾದರೆ

1. ಇಲ್ಲಿ ಪ್ರದರ್ಶನಾರ್ಥಮ್ ಎಂಬ ಪಾಠವನ್ನು ಕಲ್ಪಿಸಿಕೊಂಡಿದೆ.

**ಕ್ರಿಯೆ, ಕಾರಕ, ಫಲ- ಎಂಬ ಪ್ರತ್ಯಯವು ಇರುವ ಹಾಗಿಲ್ಲ; ಆದ್ದರಿಂದ (ಹೀಗೆ) ವಿರುದ್ಧವಾಗಿರುವದರಿಂದಲೇ ಬ್ರಹ್ಮಜ್ಞಾನಿಗೆ ಕ್ರಿಯೆಗಳೂ ಅವುಗಳ ಸಾಧನಗಳೂ ಅತ್ಯಂತವಾಗಿ ಇಲ್ಲವಾಗುವವು.**

ಏತರಿಂದ ಏನನ್ನು (ಮೂಸಿಯಾನು)? ಎಂದು ಆಕ್ಷೇಪಾರ್ಥಕವಾದ ವಚನ(ವನ್ನು ಪಯೋಗಿಸಿರುವದು) ಮತ್ತೆ ಯಾವ ಪ್ರಕಾರವೂ ಹೊಂದುವದಿಲ್ಲ ಎಂದು ಉಪಲಕ್ಷಣೆಯಿಂದ ತಿಳಿಸುವದಕ್ಕಾಗಿ. ಏಕೆಂದರೆ (ಜ್ಞಾನಿಗೆ) ಯಾವ ಪ್ರಕಾರದಿಂದಲೂ ಕ್ರಿಯೆಯಾಗಲಿ ಕರಣಾದಿಕಾರಕಗಳಾಗಲಿ ಹೊಂದುವದೇ ಇಲ್ಲ.[1] **ಏತರಿಂದಲೂ ಯಾವದೊಂದನ್ನು ಯಾವನೊಬ್ಬನೂ ಹೇಗೂ ಮೂಸಲೇ ಆರನು ಎಂದರ್ಥ.**

## ವಿದ್ಯಾವಸ್ಥೆಯಲ್ಲಾಗಲಿ ಅವಿದ್ಯಾವಸ್ಥೆಯಲ್ಲಾಗಲಿ ಆತ್ಮನನ್ನು ಅರಿಯುವದಕ್ಕಾಗಲಾರದು

(ಭಾಷ್ಯ)

೩೭೮. ಯತ್ರಾಪಿ ಅವಿದ್ಯಾವಸ್ಥಾಯಾಮ್ ಅನ್ಯೋಽನ್ಯಂ ಪಶ್ಯತಿ, ತತ್ರಾಪಿ ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್? ಯೇನ ವಿಜಾನಾತಿ ತಸ್ಯ ಕರಣಸ್ಯ ವಿಜ್ಞೇಯೇ ವಿನಿಯುಕ್ತತ್ವಾತ್। ಜ್ಞಾತುಶ್ಚ ಜ್ಞೇಯ ಏವ ಹಿ ಜಿಜ್ಞಾಸಾ ನಾತ್ಮನಿ। ನ ಚ ಅಗ್ನೇರಿವ ಆತ್ಮಾ ಆತ್ಮನೋ ವಿಷಯಃ। ನ ಚ ಅವಿಷಯೇ ಜ್ಞಾತುರ್ಜ್ಞಾನಮ್ ಉಪಪದ್ಯತೇ। ತಸ್ಮಾತ್ ಯೇನೇದಂ ಸರ್ವಂ ವಿಜಾನಾತಿ ತಂ ವಿಜ್ಞಾತಾರಂ ಕೇನ ಕರಣೇನ ಕೋಽವಾನ್ಯೋ ವಿಜಾನೀಯಾತ್? ಯದಾ ತು[2] ಪುನಃ ಪರಮಾರ್ಥವಿವೇಕಿನೋ ಬ್ರಹ್ಮವಿದೋ ವಿಜ್ಞಾತೈವ ಕೇವಲೋಽದ್ವಯೋ ವರ್ತತೇ, ತಂ ವಿಜ್ಞಾತಾರಮ್ ಅರೇ ಕೇನ ವಿಜಾನೀಯಾತ್ ಇತಿ ॥

(ಭಾಷ್ಯಾರ್ಥ)

ಎಲ್ಲಿ ಎಂದರೆ (ಯಾವ) ಅವಿದ್ಯಾವಸ್ಥೆಯಲ್ಲಿ ಒಬ್ಬನು ಇನ್ನೊಂದನ್ನು ಕಾಣುತ್ತಿರುವನೋ ಅಲ್ಲಿಯೂ ಯಾವನಿಂದ ಇವೆಲ್ಲವನ್ನೂ ಅರಿತುಕೊಳ್ಳುತ್ತಿರುವನೋ ಅವನನ್ನು ಏತರಿಂದ ಅರಿತುಕೊಂಡಾನು? ಏಕೆಂದರೆ **ಯಾವ (ಕಗಣ)ದಿಂದ ಅರಿತುಕೊಳ್ಳುತ್ತಾನೋ ಆ ಕರಣವು ಅರಿತುಕೊಳ್ಳತಕ್ಕ (ವಿಷಯ)ದಲ್ಲಿಯೇ ವಿನಿಯುಕ್ತವಾಗಿರುತ್ತದೆ; ಮತ್ತು ಜ್ಞಾತೃವಾದವ**

---

1. ಅವಿದ್ಯಾವಸ್ಥೆಯಲ್ಲಿರುವ ಕ್ರಿಯಾಕಾರಕಗಳಿಲ್ಲದಿದ್ದರೂ ಜ್ಞಾನಿಗೆ ಬೇರೆಯ ಪ್ರಕಾರದ ಕ್ರಿಯಾದಿಗಳಿರಬಹುದು; ಅವನು ಮತ್ತೊಂದು ಅಲೌಕಿಕಪ್ರಕಾರದಿಂದ ಅರಿಯಬಹುದು –ಎಂಬ ಶಂಕೆಗೆ ಪರಿಹಾರವಿದು.

2. ತು ಪುನಃ ಎಂಬೆರಡು ಶಬ್ದಗಳಲ್ಲಿ ಒಂದು ಇದ್ದರೇ ಸಾಕಾಗುತ್ತದೆ.

**ನಿಗೆ ಜ್ಞೇಯದಲ್ಲಿಯೋ (ಇದನ್ನು) ಅರಿತುಕೊಳ್ಳಬೇಕೆಂಬ ಇಚ್ಛೆಯಿರುತ್ತದೆಯೋ ಹೊರತು ತನ್ನಲ್ಲಿ (ತನ್ನನ್ನು ಅರಿತುಕೊಳ್ಳಬೇಕೆಂಬ ಇಚ್ಛೆ) ಇರುವದಿಲ್ಲವಷ್ಟೆ? ಬೆಂಕಿಯು ಹೇಗೆ (ತನಗೆ ತಾನೇ ವಿಷಯವಲ್ಲವೋ) ಹಾಗೆ ಆತ್ಮನು ತನಗೇ (ತಾನು) ವಿಷಯನಾಗಲಾರನು. ಜ್ಞಾತೃವಿಗೆ ವಿಷಯವಲ್ಲದ್ದರಲ್ಲಿ ಜ್ಞಾನವು ಉಂಟಾಗುವ ಹಾಗೂ ಇಲ್ಲ.** ಆದ್ದರಿಂದ ಯಾವನಿಂದ ಇದೆಲ್ಲವನ್ನೂ ಅರಿತುಕೊಳ್ಳುತ್ತಾನೋ ಆ ವಿಜ್ಞಾತೃವನ್ನು ಯಾವ ಕರಣದಿಂದ ಅಥವಾ (ಅವನಿಗಿಂತ) ಬೇರೆಯಾದ ಯಾವನು ತಾನೆ ಅರಿತುಕೊಂಡಾನು[1] ?

ಇನ್ನು ಯಾವಾಗ ಪರಮಾರ್ಥವಿವೇಕಿಯಾದ ಬ್ರಹ್ಮಜ್ಞಾನಿಯ (ದೃಷ್ಟಿಯಲ್ಲಿ) ಬರಿಯ ಅದ್ವಯನಾದ ವಿಜ್ಞಾತೃವೇ ಇರುವನೋ ಆ ವಿಜ್ಞಾತೃವನ್ನು ಎಲೆ, ಏತರಿಂದ ಅರಿತುಕೊಂಡಾನು[2] ?

---

1. ಆತ್ಮನ ಕರಣಕ್ಕೆ ಜ್ಞೇಯವೇ ವಿಷಯವಾದ್ದರಿಂದಲೂ ಆತ್ಮನು ಏತಕ್ಕೂ ವಿಷಯನಲ್ಲದೆ ಇರುವದರಿಂದಲೂ ಆತ್ಮನಿಗಿಂತ ಬೇರೆಯಾದ ಮತ್ತೊಬ್ಬ ಜ್ಞಾತೃವು ಇಲ್ಲದ್ದರಿಂದಲೂ ಆತ್ಮನನ್ನು ಯಾವ ಕರಣದಿಂದಲೂ ಯಾವ ಕರ್ತೃವೂ ಅರಿಯಲಾರನು ಎಂಬುದು ಅವಿದ್ಯಾವಸ್ಥೆಯ ವಿಷಯದ ಅರ್ಥ. ಉಪ. ಗದ್ಯ. ಅವಗತಿಪ್ರಕರಣವನ್ನು ನೋಡಿ.

2. ಆತ್ಮನು ಅದ್ವಿತೀಯನಾಗಿರುವದರಿಂದ ಅವನನ್ನು ಅರಿಯುವ ಕರಣವಾಗಲಿ ಕರ್ತೃವಾಗಲಿ ಇಲ್ಲವೇ ಇಲ್ಲ ಎಂಬುದು ವಿದ್ಯಾವಿಷಯದ ಅರ್ಥ. ಇಲ್ಲಿ ವಿಜ್ಞಾತೃ ಎಂದರೆ ವಿಜ್ಞಾನಘನನೇ. ಹೀಗೆ ಬದುಕಿರುವಾಗಲೇ ಜ್ಞಾನಿಯ ದೃಷ್ಟಿಯಿಂದ ವಿಶೇಷಜ್ಞಾನವಿರುವದಿಲ್ಲ, ಅವನು ಶರೀರವನ್ನು ಬಿಟ್ಟಮೇಲೆ ಹೇಳಬೇಕಾದದ್ದೇನು? —ಎಂದು ಮೈತ್ರೇಯಿಯ ಶಂಕೆಗೆ ಸಮಾಧಾನವನ್ನು ಹೇಳಿದಂತೆ ಆಯಿತು.

# ನಾಲ್ಕನೆಯ ಬ್ರಾಹ್ಮಣದ ಸಾರ

ಈ ಬ್ರಾಹ್ಮಣದಲ್ಲಿ ಅಮೃತತ್ವಕ್ಕೆ ಬೇಕಾದ ಜ್ಞಾನಕ್ಕೆ ಅಂಗವಾಗಿರುವ ಸಂನ್ಯಾಸವನ್ನು ವಿಧಿಸಿರುತ್ತದೆ.

೧-೩. ಯಾಜ್ಞವಲ್ಕ್ಯನು ಗಾರ್ಹಸ್ಥ್ಯವನ್ನು ಬಿಟ್ಟು ಪಾರಿವ್ರಾಜ್ಯವನ್ನು ಪಡೆಯಲೆಳಸಿ ಮೈತ್ರೇಯಿ, ಕಾತ್ಯಾಯನಿ- ಎಂಬ ಇಬ್ಬರು ಹೆಂಡತಿಯರಿಗೂ ತನ್ನ ಧನವನ್ನು ಪಾಲುಮಾಡಿಕೊಡುವದಕ್ಕೆ ಉದ್ಯುಕ್ತನಾದನು. ಮೈತ್ರೇಯಿಯು 'ಧನದಿಂದ ಅಮೃತತ್ವವು ಸಿಕ್ಕುವದೇನು ?-' ಎಂದು ಕೇಳಲು 'ಧನದಿಂದ ಅದರ ಆಶೆಯೂ ಇಲ್ಲ' ಎಂದು ಯಾಜ್ಞವಲ್ಕ್ಯನು ನುಡಿದನು. ಆಗ ಮೈತ್ರೇಯಿಯು 'ಹಾಗಾದರೆ ನನಗೆ ಆ ಧನವು ಬೇಡ, ತಮಗೆ ತಿಳಿದಿರುವ ಅಮೃತತ್ವಸಾಧನವನ್ನೇ ಹೇಳಿಕೊಡಿ' ಎಂದು ಕೇಳಿಕೊಂಡಳು.

೪-೫. ಯಾಜ್ಞವಲ್ಕ್ಯನು ಅವಳ ಮಾತಿನಿಂದ ಸಂತುಷ್ಟನಾಗಿ ಆಕೆಗೆ ಅತ್ಯಂತ ಪ್ರೀತಿಯಿಂದ ಆತ್ಮಜ್ಞಾನವನ್ನು ಉಪದೇಶಿಸುವದಕ್ಕೆ ಹೊರಟು ಮೊದಲು ಆತ್ಮನೇ ಎಲ್ಲಕ್ಕಿಂತಲೂ ಪ್ರಿಯನು ಎಂಬುದನ್ನು ತಿಳಿಸಿಕೊಟ್ಟನು. ಗಂಡ, ಹೆಂಡತಿ, ಮಕ್ಕಳು, ಹಣ, ಬ್ರಾಹ್ಮಣ, ಕ್ಷತ್ರಿಯತ್ವ, ಲೋಕಗಳು, ದೇವತೆಗಳು, ಭೂತಗಳು, ಅಥವಾ ಮತ್ತೆ ಯಾವದೇ ಪದಾರ್ಥವಾಗಲಿ, ಆಯಾ ಪದಾರ್ಥಕ್ಕಾಗಿ ಪ್ರಿಯವಾಗಿರುವದಿಲ್ಲ. ತನ್ನ ಆತ್ಮನ ಪ್ರೀತಿಗಾಗಿಯೇ ಅವೆಲ್ಲವೂ ಪ್ರಿಯವಾಗಿರುತ್ತವೆ. ಆದ್ದರಿಂದ ಆತ್ಮನೇ ಎಲ್ಲಕ್ಕಿಂತಲೂ ಪ್ರಿಯತಮನು. ಆದ್ದರಿಂದ ಆತ್ಮನನ್ನೇ ಶ್ರವಣಮನನನಿದಿಧ್ಯಾಸನಗಳಿಂದ ಕಂಡುಕೊಳ್ಳಬೇಕು. ಹೀಗೆ ಆತ್ಮನನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತೆ ಆಗುವದು.

೬. ಯಾವನು ಬ್ರಾಹ್ಮಣ್ಯವನ್ನು, ಕ್ಷತ್ರಿಯತ್ವವನ್ನು, ಲೋಕಗಳನ್ನು, ದೇವತೆಗಳನ್ನು, ಭೂತಗಳನ್ನು ಅಥವಾ ಮತ್ತೆ ಯಾವದೊಂದು ಪದಾರ್ಥವನ್ನು ಆತ್ಮನಿಗಿಂತ ಬೇರೆ ಎಂದು ತಿಳಿದುಕೊಳ್ಳುವನೋ ಆ ಅಜ್ಞನನ್ನು ಆ ಬ್ರಾಹ್ಮಣ್ಯವೇ ಮುಂತಾದವು ತಿರಸ್ಕರಿಸುವವು. ಏಕೆಂದರೆ ಪರಮಾರ್ಥವಾಗಿ ಈ ಬ್ರಾಹ್ಮಣ್ಯಾದಿಗಳೆಲ್ಲ ಈ ಆತ್ಮನೇ.

೭-೧೧. ನಗಾರಿಯನ್ನು ಹೊಡೆಯುತ್ತಿರುವಾಗ ಬರಿಯ ಶಬ್ದವಿಶೇಷಗಳನ್ನೇ ಗ್ರಹಿಸುವದಕ್ಕಾಗುವದಿಲ್ಲ; ಇವು ನಗಾರಿಯ ಶಬ್ದಗಳು ಎಂದು ಆ ಶಬ್ದಸಾಮಾನ್ಯದಲ್ಲಿಯೇ ಅವುಗಳನ್ನು ಅಡಕಮಾಡಿಕೊಂಡು ಅರಿಯಬೇಕಾಗುವದು. ಹೀಗೆಯೇ ಶಂಖದ ಶಬ್ದವಿಶೇಷಗಳು, ವೀಣೆಯ ಶಬ್ದವಿಶೇಷಗಳು ಎಲ್ಲವನ್ನೂ ಆಯಾ ಸಾಮಾನ್ಯವಿಶೇಷಗಳಲ್ಲಿ ಅಡಕಮಾಡಿಯೇ ಅರಿಯಬಹುದಾಗುತ್ತದೆ. ಈ ಶಬ್ದಸಾಮಾನ್ಯವಿಶೇಷಗಳನ್ನೆಲ್ಲ, ಶಬ್ದತ್ವವೆಂಬ ಸಾಮಾನ್ಯದಲ್ಲಿಯೇ ಅಡಕಮಾಡಿ ತಿಳಿಯಬೇಕಾಗಿರುತ್ತದೆ. ಇಷ್ಟೇ ಹೊರತು ಈ ಯಾವ ವಿಶೇಷಗಳನ್ನೂ ಶಬ್ದತ್ವಸಾಮಾನ್ಯಕ್ಕಿಂತ ಬೇರೆಯಾಗಿ ಅರಿಯುವದಕ್ಕೆ ಆಗುವಂತಿರುವದಿಲ್ಲ; ಏಕೆಂದರೆ ಅವು ಅದಕ್ಕಿಂತ ಬೇರೆಯಾಗಿ ಇಲ್ಲವೇ ಇಲ್ಲ. ಹೀಗೆಯೇ ಸ್ವಪ್ನಜಾಗರಿತಗಳಲ್ಲಿ ಆತ್ಮಪ್ರಜ್ಞಾನವ್ಯತಿರಿಕ್ತವಾಗಿ ಯಾವ ಸಾಮಾನ್ಯವನ್ನೂ ಅರಿತುಕೊಳ್ಳುವದಕ್ಕೆ ಆಗದೆ ಇರುವದರಿಂದ ಶಬ್ದತ್ವ, ಸ್ಪರ್ಶತ್ವ ಮುಂತಾದ ಆ ಸಾಮಾನ್ಯಗಳು ಯಾವವೂ ಪ್ರಜ್ಞಾನರೂಪವಾಗಿರುವ ಬ್ರಹ್ಮವನ್ನು ಬಿಟ್ಟು ಬೇರೆಯಿರುವದಿಲ್ಲ. ಆದ್ದರಿಂದ ಸ್ಥಿತಿಕಾಲದಲ್ಲಿ ಎಲ್ಲವೂ ಬ್ರಹ್ಮಾತ್ಮನೇ ಎಂದು ತಿಳಿದುಕೊಳ್ಳಬಹುದಾಗಿದೆ.

ಹೀಗೆಯೇ ಉತ್ಪತ್ತಿಕಾಲದಲ್ಲಿಯೂ ಬ್ರಹ್ಮಾವ್ಯತಿರಿಕ್ತವಾಗಿಯೇ ಇದೆಲ್ಲವೂ ಇರುತ್ತದೆ. ಹೇಗೆ ಒಂದು ಬೆಂಕಿಯಿಂದ ಹೊಗೆ, ಕಿಡಿ -ಮುಂತಾದವು ಹೊರಕ್ಕೆ ಬರುವವೋ ಹಾಗೆ

ಈ ಪರಮಾರ್ಥವಸ್ತುವಾದ ಪರಮಾತ್ಮನಿಂದಲೇ ಋಗ್ವೇದಾದಿರೂಪದಲ್ಲಿರುವ ಮಂತ್ರಬ್ರಾಹ್ಮಣಗಳೆಲ್ಲವೂ ಹೊರಕ್ಕೆ ಬಂದಿರುವವು. ನಾಮಕ್ಕೆ ರೂಪವು ವಶವಾಗಿರುವದರಿಂದ ನಾಮರೂಪಾತ್ಮಕವಾದ ಜಗತ್ತು ಪರಮಾತ್ಮನಿಗಿಂತ ಭಿನ್ನವಲ್ಲವೆಂದಾಯಿತು.

ಪ್ರಲಯಕಾಲದಲ್ಲಿಯೂ ಹೀಗೆಯೇ ಎಲ್ಲವೂ ಬ್ರಹ್ಮಾವ್ಯತಿರಿಕ್ತವಾಗಿರುವವು. ಹೇಗೆಂದರೆ ಸ್ಪರ್ಶಾದಿಗಳು ಸ್ಪರ್ಶಾದಿಸಾಮಾನ್ಯದಲ್ಲಿಯೂ ಆ ಸ್ಪರ್ಶಾದಿಸಾಮಾನ್ಯವು ಮನೋವಿಷಯಸಾಮಾನ್ಯದಲ್ಲಿಯೂ ಅದು ಬುದ್ಧಿವಿಷಯಸಾಮಾನ್ಯದಲ್ಲಿಯೂ ಅದು ವಿಜ್ಞಾನಮಾತ್ರವೇ ಆಗಿ ಪ್ರಜ್ಞಾನಘನವಾಗಿರುವ ಬ್ರಹ್ಮದಲ್ಲಿಯೂ ನದೀನದಗಳು ಸಮುದ್ರದಲ್ಲಿ ಲಯವಾದಂತೆ ಲಯವಾಗುತ್ತಿರುವವು. ಹೀಗೆ ವಿಷಯಗಳೆಲ್ಲ ತಮ್ಮತಮ್ಮ ಗ್ರಾಹಕವಾದ ಕರಣಗಳೊಡನೆ ಪ್ರಜ್ಞಾನಘನವಾದ ಬ್ರಹ್ಮದಲ್ಲೇ ಲಯವಾಗುತ್ತಿರುವದರಿಂದ ಎಲ್ಲವೂ ಪ್ರಜ್ಞಾನಘನವಾದ ಬ್ರಹ್ಮವೇ ಎಂದರಿಯಬಹುದು.

೧೨-೧೩. ಇದುವರೆಗೆ ಹೇಳಿದ್ದು ತಾನೇ ಆಗುವ ಪ್ರಾಕೃತಪ್ರಲಯವು. ಇಲ್ಲಿ ಪ್ರಲಯವಾದಮೇಲೂ ಕಾಲಾಂತರದಲ್ಲಿ ಮತ್ತೆ ಜಗತ್ತು ಉತ್ಪನ್ನವಾಗುವದಕ್ಕೆ ಅವಕಾಶವಿರುತ್ತದೆ. ಆದರೆ ಜ್ಞಾನದಿಂದ ಇದಕ್ಕೆ ಆತ್ಯಂತಿಕಪ್ರಲಯವಾಗುವದು. ಹೇಗೆ ಸಮುದ್ರದಿಂದ ಹುಟ್ಟಿದ ಉಪ್ಪಿನಹರಳು ಸಮುದ್ರದ ನೀರಿನಲ್ಲಿ ಸೇರಿಕೊಂಡು ಕರಗಿಹೋದರೆ ಅದನ್ನು ಬೇರೆಯಾಗಿ ಎತ್ತಿ ತೆಗೆದುಕೊಳ್ಳುವದಕ್ಕಾಗುವದಿಲ್ಲವಾದರೂ ನೀರು ಎಲ್ಲೆಲ್ಲಿ ಸವಿದರೂ ಉಪ್ಪೇ ಆಗಿರುವದರಿಂದ ಅಲ್ಲಿದೆ ಎಂದು ಗೊತ್ತಾಗುವದೋ ಇದರಂತೆ ಈ ವಿಶೇಷವಿಜ್ಞಾನಮಯನಾಗಿರುವ ಆತ್ಮನು ಅವಿದ್ಯಾಕೃತವಾದ ಪಂಚಭೂತಗಳಿಂದಾದ ಕಾರ್ಯಕರಣಗಳಿಂದ ತಾನೇ ಬೇರೆಯಾಗಿ ಪರಿಚ್ಛಿನ್ನನಾಗಿ ಕಾಣುತ್ತಿರುತ್ತಾನೆ. ಆದರೆ ವಿದ್ಯೆಯಿಂದ ಈ ಉಪಾಧಿಗಳನ್ನು ಪ್ರವಿಲಯಮಾಡಿಕೊಂಡರೆ ಆಗ ಅವನಲ್ಲಿ ಯಾವ ವಿಶೇಷವಿಜ್ಞಾನವೂ ಇರುವದಿಲ್ಲ; ಅನಂತವೂ ಅಪಾರವೂ ಆಗಿ ವಿಜ್ಞಾನಘನನೇ ಆಗಿರುವ ಪರಮಾರ್ಥಾತ್ಮನೇ ಆಗಿರುತ್ತಾನೆ. ಹೀಗೆ ವಿಶೇಷವಿಜ್ಞಾನವು ಹೋದಮಾತ್ರದಿಂದ ಆತ್ಮನೇ ನಾಶವಾಗುವನೆಂದು ತಿಳಿಯಬಾರದು. ಏಕೆಂದರೆ ಸ್ವರೂಪಚೈತನ್ಯವು ಎಲ್ಲಾ ಜ್ಞಾನದ ತಿರುಳೂ ಆಗಿರುತ್ತದೆ; ಆ ಸ್ವರೂಪವು ಎಂದೆಂದಿಗೂ ಇದ್ದೇ ಇರುತ್ತದೆ.

೧೪. ಅವಿದ್ಯೆಯಿಂದ ಎಲ್ಲಿ ದ್ವೈತವಿರುವಂತೆ ತೋರುತ್ತಿರುವದೋ ಅಲ್ಲಿ ಒಬ್ಬನು ತನಗಿಂತ ಬೇರೆಯಾದ ಕರಣದಿಂದ ತನಗಿಂತ ಬೇರೆಯಾದ ವಿಷಯವನ್ನು ನೋಡುವದು, ಕೇಳುವದು, ಮಾತನಾಡುವದು, ಮೂಸುವದು, ಮುಟ್ಟುವದು, ಯೋಚಿಸುವದು, ಅರಿತುಕೊಳ್ಳುವದು –ಮುಂತಾದ ವ್ಯವಹಾರವನ್ನು ಮಾಡುತ್ತಿರುವನು. ಆದರೆ ವಿದ್ಯೆಯಿಂದ ಎಲ್ಲವೂ ಆತ್ಮನೇ ಆಗಿರುವಾಗ ಇಂಥವನು ಇಂಥ ಕರಣದಿಂದ ಇಂಥದ್ದನ್ನು ಅರಿಯುವನು–ಎಂಬ ಭೇದವ್ಯವಹಾರವಿರುವದಿಲ್ಲ. ಇದಲ್ಲದೆ ಚೈತನ್ಯಸ್ವರೂಪನಾದ ಆತ್ಮನೇ ಎಲ್ಲವನ್ನೂ ಅರಿಯುವ ಪ್ರಮಾತೃವಾಗಿರುತ್ತಾನೆ. ಆದ್ದರಿಂದ ಜ್ಞಾನಿಯು ಬದುಕಿರುವಾಗಲೇ, ಪ್ರತ್ಯಕ್ಷಾದಿವ್ಯವಹಾರಗಳನ್ನು ಮಾಡುವಂತಿದ್ದರೂ, ತನ್ನ ದೃಷ್ಟಿಯಿಂದ ಎಲ್ಲವೂ ಅದ್ವಿತೀಯಪರಮಾತ್ಮನೇ ಆಗಿರುವದರಿಂದಲೂ ವಿಜ್ಞಾತೃವಿನ ಅರಿವಿಗೆ ವಿಜ್ಞೇಯವೆಲ್ಲ ವಿಷಯವಾಗಿದ್ದು ವಿಜ್ಞಾತೃವು ಯಾವಾಗಲೂ ಅವಿಷಯನೇ ಆಗಿರುವದರಿಂದಲೂ ಆ ವಿಜ್ಞಾತೃವಿನ ಸ್ವರೂಪನಾದ ಆತ್ಮನನ್ನು ವಿಷಯೀಕರಿಸಿಕೊಂಡು ಅರಿಯುವದು ಆಗಲಾರದು. ಇನ್ನು ವಿದೇಹಕೈವಲ್ಯದಲ್ಲಿ ಚೈತನ್ಯಮಾತ್ರಸ್ವರೂಪನಾಗಿರುವದರಿಂದ ಆ ಕೇವಲ ವಿಜ್ಞಾತೃವನ್ನು ಅವನನ್ನು ಅರಿಯುವ ಕರಣಾದಿಗಳೇ ಇಲ್ಲವಾಗಿ ಏತರಿಂದ ಅರಿಯುವದಕ್ಕೆ ಆದೀತು? ಆದ್ದರಿಂದ ಎಲ್ಲವೂ ವಿಜ್ಞಾನಘನಸ್ವರೂಪನಾದ ಆತ್ಮನೇ ಎಂಬುದೇ ಸಿದ್ಧಾಂತವು. ಇದನ್ನು ಅರಿತವನಿಗೇ ಅಮೃತತ್ವವು ದೊರಕುವದು.

---

# ಎರಡನೆಯ ಅಧ್ಯಾಯ - ಐದನೆಯ ಬ್ರಾಹ್ಮಣ

## (ಮಧುವಿದ್ಯೆ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೩೭೯. ಯತ್ ಕೇವಲಂ ಕರ್ಮನಿರಪೇಕ್ಷಮ್ ಅಮೃತತ್ವಸಾಧನಮ್, ತದ್ವಕ್ತವ್ಯಮ್ ಇತಿ ಮೈತ್ರೇಯೀಬ್ರಾಹ್ಮಣಮಾರಬ್ಧಮ್ । ತಚ್ಚ ಆತ್ಮಜ್ಞಾನಂ ಸರ್ವ(ಕರ್ಮ)[1] ಸಂನ್ಯಾಸಾಙ್ಗವಿಶಿಷ್ಟಮ್ । ಆತ್ಮನಿ ಚ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ । ಆತ್ಮಾ ಚ ಪ್ರಿಯಃ ಸರ್ವಸ್ಮಾತ್ । ತಸ್ಮಾತ್ ಆತ್ಮಾ ದ್ರಷ್ಟವ್ಯಃ । ಸ ಚ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ ಇತಿ ಚ ದರ್ಶನ ಪ್ರಕಾರಾ ಉಕ್ತಾಃ । ತತ್ರ ಶ್ರೋತವ್ಯಃ ಆಚಾರ್ಯಾಗಮಾಭ್ಯಾಮ್ । ಮನ್ತವ್ಯ ಸ್ತರ್ಕತಃ । ತತ್ರ ಚ ತರ್ಕ ಉಕ್ತಃ 'ಆತ್ಮೈವೇದಂ ಸರ್ವಮ್' ಇತಿ ಪ್ರತಿಜ್ಞಾತಸ್ಯ ಹೇತುವಚನಮ್ ಆತ್ಮೈಕಸಾಮಾನ್ಯತ್ವಮ್ ಆತ್ಮೈಕೋದ್ಭವತ್ವಮ್ ಆತ್ಮೈಕಪ್ರಲಯತ್ವಂ ಚ । ತತ್ರಾಯಂ ಹೇತುರಸಿದ್ಧಃ ಇತ್ಯಾಶಙ್ಕ್ಯತೇ ಆತ್ಮೈಕ ಸಾಮಾನ್ಯೋದ್ಭವಪ್ರಲಯಾಖ್ಯಃ । ತದಾಶಙ್ಕಾನಿವೃತ್ತ್ಯರ್ಥಮ್ ಏತದ್ ಬ್ರಾಹ್ಮಣಮ್ ಆರಭ್ಯತೇ । ಯಸ್ಮಾತ್ ಪರಸ್ಪರೋಪಕಾರ್ಯೋಪಕಾರಕ ಭೂತಂ ಜಗತ್ ಸರ್ವಂ ಪೃಥಿವ್ಯಾದಿ । ಯಚ್ಚ ಲೋಕೇ ಪರಸ್ಪರೋಪ ಕಾರ್ಯೋಪಕಾರಕಭೂತಂ ತದೇಕಕಾರಣಪೂರ್ವಕಮ್ ಏಕಸಾಮಾನ್ಯಾತ್ಮಕ ಮ್ ಏಕಪ್ರಲಯಂ ಚ ದೃಷ್ಟಮ್ । ತಸ್ಮಾತ್ ಇದಮಪಿ ಪೃಥಿವ್ಯಾದಿಲಕ್ಷಣಂ ಜಗತ್ ಪರಸ್ಪರೋಪಕಾರ್ಯೋಪಕಾರಕತ್ವಾತ್ ತಥಾಭೂತಂ ಭವಿತುಮರ್ಹತಿ । ಏಷ ಹ್ಯರ್ಥೋಽಸ್ಮಿನ್ ಬ್ರಾಹ್ಮಣೇ ಪ್ರಕಾಶ್ಯತೇ । ಅಥವಾ ಆತ್ಮೈವೇದಂ ಸರ್ವಮ್ ಇತಿ ಪ್ರತಿಜ್ಞಾತಸ್ಯ ಆತ್ಮೋತ್ಪತ್ತಿಸ್ಥಿತಿಪ್ರಲಯತ್ವಂ[2] ಹೇತು ಮುಕ್ತ್ವಾ ಪುನರಾಗಮಪ್ರಧಾನೇನ ಮಧುಬ್ರಾಹ್ಮಣೇನ ಪ್ರತಿಜ್ಞಾತ ಸ್ಯಾರ್ಥಸ್ಯ ನಿಗಮನಂ ಕ್ರಿಯತೇ । ತಥಾ ಹಿ ನೈಯಾಯಿಕೈರುಕ್ತಮ್ "ಹೇತ್ವಪದೇಶಾತ್ ಪ್ರತಿಜ್ಞಾಯಾಃ ಪುನರ್ವಚನಂ ನಿಗಮನಮ್" (ನ್ಯಾ. ಸೂ. ೧-೧-೩೦) ಇತಿ ॥

(ಭಾಷ್ಯಾರ್ಥ)

ಕರ್ಮದ (ಸಹಾಯವನ್ನು) ಬಯಸದೆ ತಾನೊಂದೇ ಅಮೃತತ್ವಕ್ಕೆ ಯಾವದು ಸಾಧನವೋ ಅದನ್ನು ಹೇಳಬೇಕೆಂದು ಮೈತ್ರೇಯೀಬ್ರಾಹ್ಮಣವನ್ನು ಆರಂಭಿಸಲಾಯಿತು. ಅದೇ ಸರ್ವ(ಕರ್ಮ)ಸಂನ್ಯಾಸವೆಂಬ ಅಂಗದಿಂದೊಡ

1. ಈ ಮಾತು ಭಾಷ್ಯದಲ್ಲಿದ್ದು ಬರೆದವರು ಕೈಬಿಟ್ಟಿರಬೇಕೆಂದು ತೋರುತ್ತದೆ.
2. ಆ॥ ಪಾಠದಲ್ಲಿ 'ಪ್ರಲಯತ್ವಂ' ಎಂಬುದರ ಬದಲು ಲಯತ್ವಂ ಎಂದಿಷ್ಟೇ ಇದೆ.

ಗೂಡಿದ ಆತ್ಮಜ್ಞಾನವು. ಆತ್ಮನನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತಾಗುವದು; ಆತ್ಮನೇ ಎಲ್ಲಕ್ಕಿಂತಲೂ ಪ್ರಿಯನಾದವನು. ಆದ್ದರಿಂದ ಆತ್ಮನನ್ನು ಕಂಡುಕೊಳ್ಳಬೇಕು. **ಈ (ಆತ್ಮನನ್ನು) ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು -ಎಂದು ದರ್ಶನ ಪ್ರಕಾರಗಳನ್ನು ಹೇಳಿದ್ದಾಯಿತು.**[1] ಅವುಗಳೊಳಗೆ ಶ್ರವಣಮಾಡಬೇಕಾದದ್ದು ಆಚಾರ್ಯಾಗಮಗಳಿಂದ[2]; ಮನನಮಾಡಬೇಕಾದದ್ದು ತರ್ಕದಿಂದ. ಮತ್ತು ಆ (ಮನನ)ಕ್ಕೆ, ಆತ್ಮನೇ ಇದೆಲ್ಲವೂ ಎಂದು ಮಾಡಿದ ಪ್ರತಿಜ್ಞೆಗೆ ಆತ್ಮನೊಬ್ಬನೇ (ಎಲ್ಲಕ್ಕೂ) ಸಾಮಾನ್ಯವಾಗಿರುವದು, ಆತ್ಮನೊಬ್ಬನಿಂದಲೇ (ಎಲ್ಲವೂ) ಹುಟ್ಟುವದು, ಆತ್ಮನೊಬ್ಬನಲ್ಲಿಯೇ (ಎಲ್ಲವೂ) ಪ್ರಲಯವಾಗುವದು -ಎಂಬ ಹೇತುವಚನ(ರೂಪವಾದ) ತರ್ಕವನ್ನೂ ಹೇಳಿದ್ದಾಯಿತು.[3] ಅಲ್ಲಿ ಆತ್ಮೈಕಸಾಮಾನ್ಯೋದ್ಭವಪ್ರಲಯವೆಂಬ ಈ ಹೇತುವು ಅಸಿದ್ಧವು ಎಂದು ಆಶಂಕೆಮಾಡಬಹುದು. ಆ ಆಶಂಕೆಯನ್ನು ಪರಿಹರಿಸುವದಕ್ಕಾಗಿ ಈ ಬ್ರಾಹ್ಮಣವನ್ನು ಪ್ರಾರಂಭಿಸಿರುತ್ತದೆ. ಹೇಗೆಂದರೆ, ಪೃಥಿವಿಯೇ ಮುಂತಾದ ಜಗತ್ತೆಲ್ಲವೂ ಒಂದಕ್ಕೊಂದು ಉಪಕಾರ್ಯೋಪಕಾರಕವಾಗಿರುತ್ತದೆ. ಲೋಕದಲ್ಲಿ ಯಾವದು ಒಂದಕ್ಕೊಂದು ಉಪಕಾರ್ಯೋಪಕಾರಕವಾಗಿರುತ್ತದೆಯೋ ಅದು ಒಂದೇ ಕಾರಣದಿಂದ (ಆದದ್ದು), ಒಂದೇ ಸಾಮಾನ್ಯವುಳ್ಳದ್ದು, ಒಂದರಲ್ಲಿಯೇ ಪ್ರಲಯವಾಗಿರುವದು- (ಎಂದು) ಕಂಡುಬಂದಿರುತ್ತದೆ. ಆದ್ದರಿಂದ ಈ ಪೃಥಿವ್ಯಾದಿ ಜಗತ್ತೂ ಪರಸ್ಪರೋಪಕಾರ್ಯೋಪಕಾರಕವಾಗಿರುವದರಿಂದ ಹಾಗೆಯೇ ಇರಬೇಕು.[4] ಈ ಅರ್ಥವಲ್ಲವೆ, ಈ ಬ್ರಾಹ್ಮಣದಲ್ಲಿ ಕಂಡುಬರುತ್ತದೆ[5]?

---

1. ದರ್ಶನಕ್ಕೆ ಸಾಧನಗಳಾಗಿರುವ ಶ್ರವಣಾದಿಗಳನ್ನು ದರ್ಶನಪ್ರಕಾರಗಳೆಂದು ವರ್ಣಿಸಿರುವದೇಕೆಂದರೆ ಶ್ರವಣಾದಿಗಳಿಂದಲೇ ಅಪ್ರತ್ಯಕ್ಷವಾಗಿ ಆತ್ಮಜ್ಞಾನವಾಗುತ್ತದೆಂದು ತಿಳಿಸುವದಕ್ಕೆ. ಇವಕ್ಕೆ ದೃಷ್ಟಫಲವಿದೆ, ಅದೃಷ್ಟಫಲವಿಲ್ಲ.

2. ವೇದಾಂತವಾಕ್ಯವನ್ನು ಶ್ರವಣಮಾಡಬೇಕು, ಗುರೂಪದೇಶದಿಂದಲೇ ಶ್ರವಣಮಾಡಬೇಕು -ಎಂದರ್ಥ. ಗುರುವಿನ ಮೂಲಕವಾಗಿಯೇ ವೇದಾಂತಾರ್ಥವನ್ನು ತಿಳಿದುಕೊಳ್ಳಬೇಕು ಎಂದು ಇದರಿಂದ ಏರ್ಪಡುತ್ತದೆ.

3. ಶ್ರುತ್ಯನುಗೃಹೀತತರ್ಕವೇ ವೇದಾಂತಾರ್ಥನಿರ್ಧಾರಣೆಗೆ ಬೇಕು ಎಂಬುದನ್ನು ಇದು ಸೂಚಿಸುತ್ತದೆ.

4. ಏಕಕಾರಣಕವಾಗಿ ಏಕಸಾಮಾನ್ಯವಾಗಿ ಏಕಪ್ರಲಯವಾಗಿ ಇರಬೇಕು ಎಂದರ್ಥ. ಇಲ್ಲಿಯವರೆಗೆ ಹೇತುವನ್ನು ಸಾಧಿಸಿ ಅನುಮಾನದ ಆಕಾರವನ್ನು ಪೂರ್ತಿಮಾಡಿದಂತೆ ಆಯಿತು ಎಂದರ್ಥ.

5. ಪರಸ್ಪರೋಪಕಾರ್ಯೋಪಕಾರಕಭಾವವನ್ನು ತಿಳಿಸಿ ಇವೆಲ್ಲವೂ ಬ್ರಹ್ಮವೇ ಎಂದು ನಿಶ್ಚಯಿಸುವದೇ ಈ ಬ್ರಾಹ್ಮಣದಲ್ಲಿ ಅನುಗತವಾಗಿರುವ ಅರ್ಥ- ಎಂದು ಅಭಿಪ್ರಾಯ. ಈ ಬ್ರಾಹ್ಮಣದ ತಾತ್ಪರ್ಯವನ್ನು ಮಾಂ. ಕಾ. ಭಾ. ೩-೧೨ರಲ್ಲಿ ಬೇರೊಂದು ರೀತಿಯಲ್ಲಿ ವರ್ಣಿಸಿದೆ. ಈ ವರ್ಣನೆಗಳ ಪ್ರಕಾರಭೇದಕ್ಕೆ ಕಾರಣವೇನೆಂಬುದು ತಿಳಿಯ ಲಿಲ್ಲ. ಪೀಠಿಕೆಯನ್ನು ನೋಡಿ.

ಅಥವಾ 'ಇದೆಲ್ಲವೂ ಆತ್ಮನೇ' ಎಂದು (ಹಿಂದೆ) ಮಾಡಿದ್ದ ಪ್ರತಿಜ್ಞೆಗೆ ಆತ್ಮೋತ್ಪತ್ತಿಸ್ಥಿತಿಪ್ರಲಯತ್ವವೆಂಬ ಹೇತುವನ್ನು ಹೇಳಿ ಮತ್ತೆ ಆಗಮಪ್ರಧಾನವಾದ[1] (ಈ) ಮಧುಬ್ರಾಹ್ಮಣದಿಂದ ಪ್ರತಿಜ್ಞಾತವಾಗಿದ್ದ ವಿಷಯವನ್ನು ನಿಗಮನಮಾಡಿರುತ್ತದೆ (ಎಂದೂ ಸಂಬಂಧವನ್ನು ಹೇಳಬಹುದು).[2] ಆದ್ದರಿಂದಲೇ ನೈಯಾಯಿಕರು "ಪ್ರತಿಜ್ಞೆಗೆ ಹೇತುವನ್ನು ಹೇಳಿದ ಬಳಿಕ ಅದನ್ನು ಮತ್ತೆ ಹೇಳುವದು ನಿಗಮನವು" (ನ್ಯಾ. ಸೂ. ೧-೧-೩೦) ಎಂದು ಹೇಳಿರುತ್ತಾರೆ.[3]

## ಭರ್ತೃಪ್ರಪಂಚರ ಸಂಬಂಧವರ್ಣನೆಯ ವಿಮರ್ಶೆ

(ಭಾಷ್ಯ)

೩೮೦. ಅನ್ಯೈರ್ವ್ಯಾಖ್ಯಾತಮ್—ಆ ದುನ್ದುಭಿದೃಷ್ಟಾನ್ತಾತ್ ಶ್ರೋತವ್ಯಾರ್ಥಮ್ ಆಗಮವಚನಮ್। ಪ್ರಾಙ್ಮಧುಬ್ರಾಹ್ಮಣಾತ್ ಮನ್ತವ್ಯಾರ್ಥಮ್ ಉಪಪತ್ತಿಪ್ರದರ್ಶನೇನ। ಮಧುಬ್ರಾಹ್ಮಣೇನ ತು ನಿದಿಧ್ಯಾಸನವಿಧಿರುಚ್ಯತೇ ಇತಿ। ಸರ್ವಥಾಪಿ ತು ಯಥಾ ಆಗಮೇನ ಅವಧಾರಿತಂ ತರ್ಕತಸ್ತಥೈವ ಮನ್ತವ್ಯಮ್। ಯಥಾ ತರ್ಕತೋ ಮತಮ್, ತಸ್ಯ[4] ತರ್ಕಾಗಮಾಭ್ಯಾಂ ನಿಶ್ಚಿತಸ್ಯ ತಥೈವ ನಿದಿಧ್ಯಾಸನಂ ಕ್ರಿಯತ ಇತಿ ಪೃಥಙ್ನಿದಿಧ್ಯಾಸನವಿಧಿರನರ್ಥಕ ಏವ। ತಸ್ಮಾತ್ ಪೃಥಕ್ ಪ್ರಕರಣವಿಭಾಗೋಽನರ್ಥಕಃ ಇತ್ಯಸ್ಮದಭಿಪ್ರಾಯಃ ಶ್ರವಣಮನನನಿದಿಧ್ಯಾಸನಾನಾಮಿತಿ[5]। ಸರ್ವಥಾಪಿ ತು ಅಧ್ಯಾಯದ್ವಯಸ್ಯಾರ್ಥೋಽಸ್ಮಿನ್ ಬ್ರಾಹ್ಮಣೇ ಉಪಸಂಹ್ರಿಯತೇ ॥

(ಭಾಷ್ಯಾರ್ಥ)

ಮತ್ತೆ ಕೆಲವರು (ಇದನ್ನು) ವ್ಯಾಖ್ಯಾನಮಾಡಿರುವದು ಹೇಗೆಂದರೆ ದುಂದುಭಿದೃಷ್ಟಾಂತದವರೆಗಿನ (ಗ್ರಂಥವು) ಶ್ರೋತವ್ಯವೆಂಬುದನ್ನು (ವಿವರಿಸು)ವದಕ್ಕೆ (ಬಂದಿರುವ) ಆಗಮವಚನವು; ಮಧುಬ್ರಾಹ್ಮಣಕ್ಕಿಂತ ಹಿಂದಿನ (ಗ್ರಂಥಭಾಗವು) ಮಂತವ್ಯವೆಂಬುವನ್ನು ಉಪಪತ್ತಿಯನ್ನು ತಿಳಿಸುವ ಮೂಲಕ

1. ಉಪದೇಶಪ್ರಧಾನವಾದ.

2. ಈ ವ್ಯಾಖ್ಯಾನದಲ್ಲಿ, ಹೇತುವು ಸಿದ್ಧವಾಗಿದೆ ಎಂದೇ ಇಟ್ಟುಕೊಂಡಿದೆ; ಆದ್ದರಿಂದ ಪ್ರತಿಜ್ಞೆಯು ಸರಿ ಎಂದು ತೀರ್ಮಾನಿಸಿದೆ.

3. ಅನುಮಾನಕ್ಕೆ ಪ್ರತಿಜ್ಞೆ, ಹೇತು, ದೃಷ್ಟಾಂತ, ಉಪನಯ, ನಿಗಮನ—ಎಂಬ ಐದು ಅವಯವಗಳಿರಬೇಕೆಂದು ನೈಯಾಯಿಕರು ಹೇಳುತ್ತಾರೆ. ಲೋಕಬುದ್ಧಿಯನ್ನು ಅನುಸರಿಸಿ ಅನುಮಾನದ ರೂಪದಲ್ಲಿ ವಿಷಯವನ್ನು ಇಟ್ಟಿದ್ದರೂ ಈ ಕಾಂಡವೇ ಆಗಮಪ್ರಧಾನವಾದದ್ದೆಂಬುದನ್ನು ವಾಚಕರು ಮರೆಯಬಾರದು.

4. ಈ ಪಾಠವೇ 'ಯಥಾ ತರ್ಕತೋ ಮತಸ್ಯ' ಎಂಬುದಕ್ಕಿಂತ ಮೇಲು.

5. ಇಲ್ಲಿರುವ ಇತಿಯು ಇಲ್ಲದಿದ್ದರೂ ಆಗುತ್ತದೆ.

(ವಿವರಿಸುವವಕ್ಕೆ ಬಂದದ್ದು); ಮಧುಬ್ರಾಹ್ಮಣದಲ್ಲಾದರೋ ನಿದಿಧ್ಯಾಸನ ವಿಧಿಯನ್ನು ಹೇಳಿರುತ್ತದೆ ಎಂದು (ಅವರ ವ್ಯಾಖ್ಯಾನ). ಆದರೆ ಹೇಗೇ ಆಗಲಿ ಹೇಗೆ ಆಗಮದಿಂದ ನಿಶ್ಚಯಿಸಲಾಗಿರುವದೋ ತರ್ಕದಿಂದಲೂ ಹಾಗೆಯೇ ಮನನಮಾಡಬೇಕಾಗಿರುತ್ತದೆ; ಹೇಗೆ ತರ್ಕದಿಂದ ಮನನಮಾಡಿರುತ್ತದೆಯೋ, ತರ್ಕಾಗಮಗಳಿಂದ ನಿಶ್ಚಿತವಾಗಿರುವ ಅದನ್ನು ಹಾಗೆಯೇ ನಿದಿಧ್ಯಾಸನವನ್ನು ಮಾಡಬೇಕಾಗಿರುತ್ತದೆ. ಆದ್ದರಿಂದ (ಇಲ್ಲಿ) ಬೇರೆಯಾಗಿ ನಿದಿಧ್ಯಾಸನವನ್ನು ವಿಧಿಸಿರುವದು ವ್ಯರ್ಥವೇ (ಸರಿ). ಆದ್ದರಿಂದ ಶ್ರವಣ, ಮನನ, ನಿದಿಧ್ಯಾಸನ-(ಇವು)ಗಳನ್ನು (ಹೀಗೆ) ಬೇರೆಬೇರೆಯಾಗಿ ವಿಂಗಡಿಸುವದು ವ್ಯರ್ಥವೆಂದು ನಮ್ಮ ಅಭಿಪ್ರಾಯವು.[1] ಹೇಗೇ ಆಗಲಿ[2], (ಹಿಂದಿನ) ಎರಡು ಅಧ್ಯಾಯಗಳ ವಿಷಯವನ್ನು ಈ ಬ್ರಾಹ್ಮಣದಲ್ಲಿ ಉಪಸಂಹಾರಮಾಡಲಾಗಿರುತ್ತದೆ (ಎಂಬುದು ನಿಶ್ಚಯವು).

## ಪೃಥಿವ್ಯಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧ್ವಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೧ ॥**

೧. ಈ ಪೃಥಿವಿಯು ಎಲ್ಲಾ ಭೂತಗಳಿಗೂ ಮಧು; ಈ ಪೃಥಿವಿಗೆ ಎಲ್ಲಾ ಭೂತಗಳೂ ಮಧು. ಈ ಪೃಥಿವಿಯಲ್ಲಿ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದಾನಲ್ಲ ಅವನೂ ಮತ್ತು ಅಧ್ಯಾತ್ಮವಾಗಿ ಶಾರೀರನಾದ ತೇಜೋಮಯನೂ ಅಮೃತಮಯನೂ ಆದ ಪುರುಷನಿದಾನಲ್ಲ ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ ಇವನೇ ಅವನು, ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

---

1. ಐಕಾತ್ಮ್ಯಜ್ಞಾನವೇ ನಿದಿಧ್ಯಾಸನವೆಂಬುದು ವಾರ್ತಿಕಕಾರರ ಮತವು; ಆದ್ದರಿಂದ ನಿದಿಧ್ಯಾಸನವಿಧಿಯನ್ನು ಅವರೂ ಖಂಡಿಸಿರುತ್ತಾರೆ. ೨-೫-೧೬, ೧೭.

2 ನಿದಿಧ್ಯಾಸನವಿಧಿಯನ್ನು ಒಪ್ಪಿದರೂ ಎಂದರ್ಥ. ಭರ್ತೃಪ್ರಪಂಚರು ಹೇಳುವ ಧ್ಯಾನವನ್ನು ಇಲ್ಲಿ ಒಪ್ಪಿಲ್ಲ; ಮನನಮಾಡಿದಂತೆ ಅನುಭವಕ್ಕೆ ತಂದುಕೊಳ್ಳುವ ಪ್ರಯತ್ನವನ್ನೇ ಆ ಹೆಸರಿನಿಂದ ಕರೆದಿದೆ.

# ಮಧುಪರ್ಯಾಯಗಳಿಗೆ ಸಂಕ್ಷೇಪಾರ್ಥ

(ಭಾಷ್ಯ)

೩೮೧. ಇಯಂ ಪೃಥಿವೀ ಪ್ರಸಿದ್ಧಾ ಸರ್ವೇಷಾಂ ಭೂತಾನಾಂ ಮಧು। ಸರ್ವೇಷಾಂ ಬ್ರಹ್ಮಾದಿಸ್ತಂಬಪರ್ಯಂತಾನಾಂ ಭೂತಾನಾಂ ಪ್ರಾಣಿನಾಂ ಮಧು ಕಾರ್ಯಮ್। ಮಧ್ವಿವ ಮಧು। ಯಥಾ ಏಕೋ ಮಧ್ವಪೂಪಃ ಅನೇಕೈರ್ಮಧುಕರೈರ್ನಿರ್ವರ್ತಿತಃ, ಏವಮಿಯಂ ಪೃಥಿವೀ ಸರ್ವಭೂತನಿರ್ವರ್ತಿತಾ। ತಥಾ ಸರ್ವಾಣಿ ಭೂತಾನಿ ಅಸ್ಯೈ ಪೃಥಿವ್ಯೈ ಪೃಥಿವ್ಯಾ ಅಸ್ಯಾಃ ಮಧು ಕಾರ್ಯಮ್। ಕಿಂ ಚ ಯಶ್ಚಾಯಂ ಪುರುಷಃ ಅಸ್ಯಾಂ ಪೃಥಿವ್ಯಾಂ ತೇಜೋಮಯಃ ಚಿನ್ಮಾತ್ರಪ್ರಕಾಶಮಯಃ ಅಮೃತಮಯಃ ಅಮರಣಧರ್ಮಾ ಪುರುಷಃ, ಯಶ್ಚಾಯಮ್ ಅಧ್ಯಾತ್ಮಂ ಶಾರೀರಃ ಶರೀರೇ ಭವಃ ಪೂರ್ವವತ್ ತೇಜೋಮಯೋಽಮೃತಮಯಃ ಪುರುಷಃ ಸ ಚ ಲಿಙ್ಗಾಭಿಮಾನೀ। ಸ ಚ ಸರ್ವೇಷಾಂ ಭೂತಾನಾಮ್ ಉಪಕಾರಕತ್ವೇನ[2] ಮಧು। ಸರ್ವಾಣಿ ಚ ಭೂತಾನಿ ಅಸ್ಯ ಮಧು। ಚಶಬ್ದಸಾಮರ್ಥ್ಯಾತ್। ಏವಮ್ ಏತಚ್ಚತುಷ್ಟಯಂ ತಾವದೇಕಂ ಸರ್ವಭೂತಕಾರ್ಯಮ್, ಸರ್ವಾಣಿ ಚ ಭೂತಾನಿ ಅಸ್ಯ ಕಾರ್ಯಮ್। ಅತೋಽಸ್ಯ ಏಕಕಾರಣಪೂರ್ವಕತಾ। ಯಸ್ಮಾತ್ ಏಕಸ್ಮಾತ್ ಕಾರಣಾತ್ ಏತಜ್ಜಾತಮ್, ತದೇವೈಕಂ ಪರಮಾರ್ಥತೋ ಬ್ರಹ್ಮ। ಇತರತ್ ಕಾರ್ಯಂ ವಾಚಾರಮ್ಭಣಂ ವಿಕಾರೋ ನಾಮಧೇಯಮಾತ್ರಮ್ ಇತ್ಯೇಷ ಮಧುಪರ್ಯಾಯಾಣಾಂ ಸರ್ವೇಷಾಮ್ ಅರ್ಥಃ ಸಂಕ್ಷೇಪತಃ॥

(ಭಾಷ್ಯಾರ್ಥ)

ಈ ಪ್ರಸಿದ್ಧವಾಗಿರುವ ಪೃಥ್ವಿಯು ಎಲ್ಲಾ ಭೂತಗಳಿಗೂ ಮಧು ; ಬ್ರಹ್ಮನು ಮೊದಲಾಗಿ ಸ್ತಂಬದವರೆಗಿನ ಎಲ್ಲಾ ಭೂತಗಳಿಗೂ ಮಧು, ಕಾರ್ಯವು. (ಇದು) ಮಧುವಿನಂತೆ (ಕಾರ್ಯವಾಗಿರುವದರಿಂದ) ಮಧು(ವೆನಿಸುವದು). ಹೇಗೆ ಒಂದೇ ಜೇನುಹುಟ್ಟಿಯು ಅನೇಕವಾದ ಜೇನುನೊಣಗಳಿಂದ ಆಗಿರುತ್ತದೆಯೋ ಅದರಂತೆ ಈ ಪೃಥ್ವಿಯು ಎಲ್ಲಾ ಭೂತಗಳಿಂದಲೂ ಮಾಡಲ್ಪಟ್ಟದ್ದಾಗಿರುತ್ತದೆ. ಹೀಗೆಯೇ ಎಲ್ಲಾ ಭೂತಗಳೂ (ಅಸ್ಯೈ ಪೃಥಿವ್ಯೈ=ಅಸ್ಯಾಃ ಪೃಥಿವ್ಯಾಃ) ಈ ಪೃಥಿವಿಗೆ ಮಧು, ಕಾರ್ಯವು.

ಮತ್ತು ಈ ಪುರುಷನಿದಾನಲ್ಲ – ಈ ಪೃಥ್ವಿಯಲ್ಲಿ ತೇಜೋಮಯನೂ ಎಂದರೆ ಚಿನ್ಮಾತ್ರಪ್ರಕಾಶಮಯನೂ, ಅಮೃತಮಯನೂ ಸಾವಿಲ್ಲದ ಧರ್ಮ

1. ಈ ಮಾತು ಕೈಬಿಟ್ಟುಹೋಗಿದೆ ಎಂದು ಸೇರಿಸಿಕೊಂಡಿದೆ.
2. 'ಉಪಕಾರಕಕರಣತ್ವೇನ' –ಎಂಬ ಆ॥ ಪಾಠದಲ್ಲಿ 'ಕರಣ' ಹೆಚ್ಚು.

ವುಳ್ಳವನೂ ಆದ ಪುರುಷನಿದಾನಲ್ಲ – ಅವನೂ ಮತ್ತು ಅಧ್ಯಾತ್ಮವಾಗಿ ಶಾರೀರ ನಾದ ಶರೀರದಲ್ಲಿರುವ, ಹಿಂದೆ ಹೇಳಿರುವಂತೆ ತೇಜೋಮಯನೂ ಅಮೃತ ಮಯನೂ ಆಗಿರುವ ಪುರುಷನಿದಾನಲ್ಲ – ಇವನೇ ಲಿಂಗಾಭಿಮಾನಿ(ಯಾದ ಪುರುಷನು– ಅವನೂ ಎಲ್ಲಾ ಭೂತಗಳಿಗೂ ಉಪಕಾರವನ್ನುಂಟುಮಾಡುತ್ತಿರು ವದರಿಂದ ಮಧು ; ಎಲ್ಲಾ ಭೂತಗಳಿಗೂ ಈ (ಪುರುಷ)ನಿಗೆ ಮಧು ಎಂದು ಚಶಬ್ದದ ಸಾಮರ್ಥ್ಯದಿಂದ (ಸೇರಿಸಿಕೊಳ್ಳಬೇಕು).

ಹೀಗೆ ಮೊದಲನೆಯದಾಗಿ ಈ ನಾಲ್ಕೂ ಸೇರಿ ಒಂದಾಗಿ ಎಲ್ಲಾ ಭೂತ ಗಳಿಗೂ ಕಾರ್ಯವು, ಎಲ್ಲಾ ಭೂತಗಳೂ ಇದರ ಕಾರ್ಯವು. ಆದ್ದರಿಂದ ಈ (ನಾಲ್ಕು) ಏಕಕಾರಣಪೂರ್ವಕವಾಗಿರುವ (ಕಾರ್ಯವಾಗಿರುತ್ತದೆ). ಯಾವ ಒಂದು ಕಾರಣದಿಂದ ಇದು ಹುಟ್ಟಿರುವದೋ ಅದೊಂದೇ ಪರಮಾರ್ಥವು. ಮಿಕ್ಕ ಕಾರ್ಯವು ವಾಚಾರಂಭಣವಾದ ವಿಕಾರವು ಬರಿಯ ನಾಮಧೇಯವು– ಎಂಬಿದು ಮಧುಪರ್ಯಾಯಗಳ ಸಂಕ್ಷೇಪಾರ್ಥವು.[1]

## ಇದೆಲ್ಲವೂ ಆತ್ಮನೇ

(ಭಾಷ್ಯ)

೩೮೨. ಅಯಮೇವ ಸಃ ಯೋಽಯಂ ಪ್ರತಿಜ್ಞಾತಃ "ಇದಂ ಸರ್ವಂ ಯದಯಮಾತ್ಮಾ" (೨-೪-೬) ಇತಿ । ಇದಮಮೃತಮ್ । ಯನ್ಮೈತ್ರೇಯ್ಯೈ ಅಮೃತತ್ವಸಾಧನಮುಕ್ತಮ್ ಆತ್ಮವಿಜ್ಞಾನಮ್ ಇದಂ ತದಮೃತಮ್ । ಇದಂ ಬ್ರಹ್ಮ । ಯತ್ "ಬ್ರಹ್ಮ ತೇ ಬ್ರವಾಣಿ" (೨-೧-೧), "ಜ್ಞಪಯಿಷ್ಯಾಮಿ" (೨-೧-೧೫) ಇತಿ ಅಧ್ಯಾಯಾದೌ ಪ್ರಕೃತಮ್, ಯದ್ವಿಷಯಾ ಚ ವಿದ್ಯಾ ಬ್ರಹ್ಮವಿದ್ಯೇತ್ಯುಚ್ಯತೇ । ಇದಂ ಸರ್ವಮ್ । ಯಸ್ಮಾತ್ ಬ್ರಹ್ಮಣೋ ವಿಜ್ಞಾನಾತ್ ಸರ್ವಂ ಭವತಿ ॥

(ಭಾಷ್ಯಾರ್ಥ)

"ಇದೆಲ್ಲವೂ ಈ ಆತ್ಮನೆಂಬುದೇ" (೨-೪-೬) ಎಂದು ಪ್ರತಿಜ್ಞೆಮಾಡಿ ತ್ತಲ್ಲ, ಇವನೇ ಅವನು. ಇದೇ ಅಮೃತವು ; ಮೈತ್ರೇಯಿಗೆ ಅಮೃತತ್ವಸಾಧನ ವೆಂದು ಯಾವ ಆತ್ಮಜ್ಞಾನವನ್ನು ಹೇಳಿತ್ತೋ ಇದೇ ಆ ಅಮೃತವು. ಇದೇ ಅಮೃತವು. ಇದೇ ಬ್ರಹ್ಮವು, ಯಾವದು "ಬ್ರಹ್ಮವನ್ನು ನಿನಗೆ ಹೇಳಿಕೊಡು ತ್ತೇನೆ" (೨-೧-೧), "ವಿಜ್ಞಾಪನೆಮಾಡಿಕೊಳ್ಳುವೆನು" (೨-೧-೧೫) ಎಂದು (ಈ) ಅಧ್ಯಾಯದ ಮೊದಲಿನಲ್ಲಿ ಪ್ರಕೃತವಾಗಿದೆಯೋ ಅದು, ಮತ್ತು ಯಾವದರ ವಿಷಯವಾದ ವಿದ್ಯೆಯು ಬ್ರಹ್ಮವಿದ್ಯೆ ಎನಿಸುವದೋ (ಅದು).

---

1. ಛಾಂ. ಶಾ. ಭಾ. ೬-೧೨ನ್ನು ಇದಕ್ಕೆ ಹೋಲಿಸಿರಿ.

ಇದೇ ಎಲ್ಲವು; ಯಾವ ಬ್ರಹ್ಮದ ವಿಜ್ಞಾನದಿಂದ ಎಲ್ಲವೂ ಆಗುತ್ತಾನೋ (ಅದು).[1]

## ಅಬಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಇಮಾ ಆಪಃ ಸರ್ವೇಷಾಂ ಭೂತಾನಾಂ ಮಧ್ವಾಸಾಮಪಾಗ್ಂ ಸರ್ವಾಣಿ ಭೂತಾನಿ ಮಧು ಯಶ್ಚಾಯಮಾಸ್ವಪ್ಸು ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂ ರೈತಸಸ್ತೇಜೋಽಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೨ ॥**

೨. ಈ ಅಪ್ಪು ಎಲ್ಲಾ ಭೂತಗಳಿಗೂ ಮಧು; ಈ ಅಪ್ಪಿಗೆ ಎಲ್ಲಾ ಭೂತಗಳೂ ಮಧು. ಈ ಅಪ್ಪಿನಲ್ಲಿ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದ್ದಾನಲ್ಲ, ಅವನೂ ಮತ್ತು ಅಧ್ಯಾತ್ಮವಾಗಿ ರೈತಸನಾದ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದ್ದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದ್ದಾನಲ್ಲ, ಇವನೇ ಅವನು, ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೩. ತಥಾ ಆಪಃ। ಅಧ್ಯಾತ್ಮಂ ರೇತಸಿ ಅಪಾಂ ವಿಶೇಷತೋಽವಸ್ಥಾನಮ್ ॥

(ಭಾಷ್ಯಾರ್ಥ)

ಹೀಗೆಯೇ ಅಪ್ಪು. ಅಧ್ಯಾತ್ಮವಾಗಿ ರೇತಸ್ಸಿನಲ್ಲಿ ವಿಶೇಷವಾಗಿ ಇದ್ದುಕೊಂಡಿದೆ.[2]

---

1. ಬ್ರಹ್ಮಾತ್ಮನೇ ಎಲ್ಲವೂ ಆಗಿರುತ್ತಾನೆ, ಅವನನ್ನು ತಿಳಿದುಕೊಂಡರೇ ಅಮೃತತ್ವವು—ಎಂಬಿದೇ ಅಧ್ಯಾಯಾರ್ಥವೆಂದು ಭಾವ.

2. ಪ್ರತಿಪರ್ಯಾಯದಲ್ಲಿಯೂ ಅಕ್ಷರಾರ್ಥವು ಒಂದೇ ಆಗಿರುವದರಿಂದ ಮತ್ತೆ ವ್ಯಾಖ್ಯಾನಮಾಡಿಲ್ಲ; ಪರ್ಯಾಯಗಳ ಒಟ್ಟರ್ಥವನ್ನು ಆಗಲೆ ಸಂಗ್ರಹವಾಗಿ ಕೊಟ್ಟಿದೆ.

## ಅಗ್ನ್ಯಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಮಗ್ನಿಃ ಸರ್ವೇಷಾಂ ಭೂತಾನಾಂ ಮಧ್ವಸ್ಯಾಗ್ನೇಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ವಾಙ್ಮಯಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೩ ॥**

೩. ಈ ಅಗ್ನಿಯು ಎಲ್ಲಾ ಭೂತಗಳಿಗೂ ಮಧು ; ಈ ಅಗ್ನಿಗೆ ಎಲ್ಲಾ ಭೂತಗಳೂ ಮಧು. ಈ ಅಗ್ನಿಯಲ್ಲಿ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ವಾಙ್ಮಯನೂ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದಾನಲ್ಲ ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೪. ತಥಾ ಅಗ್ನಿಃ। ವಾಚಿ ಅಗ್ನೇರ್ವಿಶೇಷತೋಽವಸ್ಥಾನಮ್ ॥

(ಭಾಷ್ಯಾರ್ಥ)

ಹೀಗೆಯೇ ಅಗ್ನಿಯು ; ವಾಕ್ಕಿನಲ್ಲಿ ಅಗ್ನಿಯು ವಿಶೇಷವಾಗಿರುತ್ತದೆ.

## ವಾಯ್ವಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಂ ವಾಯುಃ ಸರ್ವೇಷಾಂ ಭೂತಾನಾಂ ಮಧ್ವಸ್ಯ ವಾಯೋಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ ವಾಯೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಪ್ರಾಣಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೪ ॥**

೪. ಈ ವಾಯು ಎಲ್ಲಾ ಭೂತಗಳಿಗೂ ಮಧು ; ಈ ವಾಯುವಿಗೆ ಎಲ್ಲಾ ಭೂತಗಳೂ ಮಧು. ಈ ವಾಯುವಿನಲ್ಲಿ ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದಾನಲ್ಲ ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆಗಿರುವ ಪ್ರಾಣನೆಂಬ ಪುರುಷನಿದಾನಲ್ಲ ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೫. ತಥಾ ವಾಯುಃ । ಅಧ್ಯಾತ್ಮಂ ಪ್ರಾಣಃ । ಭೂತಾನಾಂ ಶರೀರಾರಮ್ಭಕತ್ವೇನ ಉಪಕಾರಕತ್ವಾತ್ ಮಧುತ್ವಮ್। ತದನ್ತರ್ಗತಾನಾಂ ತೇಜೋಮಯಾದೀನಾಂ ಕರಣತ್ವೇನೋಪಕಾರಕತ್ವಾನ್ಮಧುತ್ವಮ್ । ತಥಾ ಚೋಕ್ತಮ್ "ತಸ್ಯೈ ವಾಚಃ ಪೃಥಿವೀ ಶರೀರಂ ಜ್ಯೋತೀರೂಪಮಯಮಗ್ನಿಃ" (೧-೫-೧೧) ಇತಿ ॥

(ಭಾಷ್ಯಾರ್ಥ)

ಹೇಗೆಯೇ ವಾಯು; ಅಧ್ಯಾತ್ಮವಾಗಿ ಪ್ರಾಣನು, ಭೂತಗಳು ಶರೀರವನ್ನುಂಟುಮಾಡುವದರಿಂದ ಉಪಕಾರಕವಾಗಿವೆಯಾಗಿ ಮಧು ; ಅವುಗಳೊಳಗಿನ ತೇಜೋಮಯಾದಿ(ಪುರುಷರು)ಗಳು ಕರಣವಾಗಿ ಉಪಕಾರಕವಾಗಿರುವದರಿಂದ ಮಧು.[1] ಆದ್ದರಿಂದಲೇ "ಆ ವಾಕ್ಕಿಗೆ ಪೃಥಿವಿಯು ಶರೀರವು, ಈ ಅಗ್ನಿಯು ಜ್ಯೋತೀರೂಪವು" (೧-೫-೧೧) ಎಂದು (ಹಿಂದೆ) ಹೇಳಿರುತ್ತದೆ.

## ಆದಿತ್ಯಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಮಾದಿತ್ಯಃ ಸರ್ವೇಷಾಂ ಭೂತಾನಾಂ ಮಧ್ವಸ್ಯಾದಿತ್ಯಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾದಿತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಚಾಕ್ಷುಷಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೫ ॥**

---

1. ಪೃಥಿವ್ಯಾದಿಭೂತಗಳು ಕಾರ್ಯರೂಪವಾದ ಶರೀರಕ್ಕೆ, ಪೃಥಿವ್ಯಾದ್ಯಂತರ್ಗತವಾದ ಲಿಂಗಾತ್ಮರು ಕರಣರೂಪವಾದ ವಾಗಾದಿಗಳಿಗೂ ಮಧು, ಎಂದರೆ ಉಪಕಾರಕರು.

೫. ಈ ಆದಿತ್ಯನು ಎಲ್ಲಾ ಭೂತಗಳಿಗೂ ಮಧು; ಈ ಆದಿತ್ಯನಿಗೆ ಎಲ್ಲಾ ಭೂತಗಳೂ ಮಧು. ಈ ಆದಿತ್ಯನಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದ್ದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆದ ಈ ಚಾಕ್ಷುಷಪುರುಷನಿದ್ದಾನಲ್ಲ ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದ್ದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಅಮೃತವು, ಇದೇ ಎಲ್ಲವೂ.

(ಭಾಷ್ಯ)

೩೮೬. ತಥಾ ಆದಿತ್ಯೋ ಮಧು । ಚಾಕ್ಷುಷೋಽಧ್ಯಾತ್ಮಮ್ ॥

(ಭಾಷ್ಯಾರ್ಥ)

ಹೀಗೆಯೇ ಆದಿತ್ಯನು ಮಧು; ಅಧ್ಯಾತ್ಮವಾಗಿ ಚಾಕ್ಷುಷಪುರುಷನು.

## ದಿಗಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಇಮಾ ದಿಶಃ ಸರ್ವೇಷಾಂ ಭೂತಾನಾಂ ಮಧ್ವಾಸಾಂ ದಿಶಾಗ್ಂ ಸರ್ವಾಣಿ ಭೂತಾನಿ ಮಧು ಯಶ್ಚಾಯಮಾಸು ದಿಕ್ಷು ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂ ಶ್ರೌತ್ರಃ ಪ್ರಾತಿಶ್ರುತ್ಕಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೬ ॥**

೬. ಈ ದಿಕ್ಕುಗಳು ಎಲ್ಲಾ ಭೂತಗಳಿಗೂ ಮಧು; ಈ ದಿಕ್ಕುಗಳಿಗೆ ಎಲ್ಲಾ ಭೂತಗಳೂ ಮಧು. ಈ ದಿಕ್ಕುಗಳಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದ್ದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆದ ಶ್ರೌತ್ರ ಪ್ರಾತಿಶ್ರುತ್ಕನಾದ ಪುರುಷನಿದ್ದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದ್ದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೭. ತಥಾ ದಿಶೋ ಮಧು । ದಿಶಾಂ ಯದ್ಯಪಿ ಶ್ರೋತ್ರಮ್ ಅಧ್ಯಾತ್ಮಮ್ । ಶಬ್ದಪ್ರತಿಶ್ರವಣವೇಲಾಯಾಂ ತು ವಿಶೇಷತಃ ಸಂನಿಹಿತೋ ಭವತೀತಿ ಅಧ್ಯಾತ್ಮಂ ಪ್ರಾತಿಶ್ರುತ್ಕಃ । ಪ್ರತಿಶ್ರುತ್ಕಾಯಾಂ ಪ್ರತಿಶ್ರವಣವೇಲಾಯಾಂ ಭವಃ ಪ್ರಾತಿಶ್ರುತ್ಕಃ ॥

(ಭಾಷ್ಯಾರ್ಥ)

ಹೀಗೆಯೇ ದಿಕ್ಕುಗಳು ಮಧು. ದಿಕ್ಕುಗಳಿಗೆ ಶ್ರೋತ್ರವೇ ಅಧ್ಯಾತ್ಮರೂಪವೇ ಸರಿ; ಆದರೆ ಶಬ್ದವನ್ನು ಕೇಳುವ ಕಾಲದಲ್ಲಿ ವಿಶೇಷವಾಗಿ ಸಂನಿಹಿತನಾಗಿರುವನೆಂಬ ಕಾರಣದಿಂದ ಅಧ್ಯಾತ್ಮವಾಗಿ ಪ್ರಾತಿಶ್ರುತ್ಕನು (ಎಂದಿದೆ). ಪ್ರತಿಶ್ರುತ್ಕದಲ್ಲಿ, ಪ್ರತಿಶ್ರವಣ(ಶಬ್ದವನ್ನು ಕೇಳುವ ಸಮಯ)ದಲ್ಲಿ ಇರುವವನು ಪ್ರಾತಿಶ್ರುತ್ಕನು.

## ಚಂದ್ರಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಂ ಚನ್ದ್ರಃ ಸರ್ವೇಷಾಂ ಭೂತಾನಾಂ ಮಧ್ವಸ್ಯ ಚನ್ದ್ರಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿಗ್ಂಶ್ಚನ್ದ್ರೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಮಾನಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೭ ॥**

೭. ಈ ಚಂದ್ರನು ಎಲ್ಲಾ ಭೂತಗಳಿಗೂ ಮಧು; ಈ ಚಂದ್ರನಿಗೆ ಎಲ್ಲಾ ಭೂತಗಳೂ ಮಧು. ಈ ಚಂದ್ರನಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆದ ಮಾನಸ ಪುರುಷನಿದಾನಲ್ಲ, ಅವನೂ (ಹೀಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ, ಇವನೇ ಅವನು, ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೮. ತಥಾ ಚನ್ದ್ರಃ । ಅಧ್ಯಾತ್ಮಂ ಮಾನಸಃ ॥

(ಭಾಷ್ಯಾರ್ಥ)

ಹೀಗೆಯೇ ಚಂದ್ರನು. ಅಧ್ಯಾತ್ಮವಾಗಿ ಮಾನಸ(ಪುರುಷನು).

## ವಿದ್ಯುದಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಇಯಂ ವಿದ್ಯುತ್ ಸರ್ವೇಷಾಂ ಭೂತಾನಾಂ ಮಧ್ವಸ್ಯೈ ವಿದ್ಯುತಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಯಾಂ ವಿದ್ಯುತಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ತೈಜಸಸ್ತೇಜೋಮಯೋಽಮೃತ ಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮ ಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೮ ॥**

೮. ಈ ಮಿಂಚು ಎಲ್ಲಾ ಭೂತಗಳಿಗೂ ಮಧು; ಈ ಮಿಂಚಿಗೆ ಎಲ್ಲಾ ಭೂತಗಳೂ ಮಧು. ಈ ಮಿಂಚಿನಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆದ ತೈಜಸಪುರುಷನಿದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೮೯. ತಥಾ ವಿದ್ಯುತ್ । ತ್ವಕ್ತೇಜಸಿ ಭವಃ ತೈಜಸಃ ಅಧ್ಯಾತ್ಮಮ್ ॥

(ಭಾಷ್ಯಾರ್ಥ)

ಹೀಗೆಯೇ ಮಿಂಚು, ತ್ವಕ್ತೇಜಸ್ಸಿನಲ್ಲಿ ಇರುವವನು ತೈಜಸನು. ಅಧ್ಯಾತ್ಮ ವಾಗಿ(ರುವ ಪುರುಷನು).

## ಗುಡುಗು ಮುಂತಾದವುಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಗ್ಂ ಸ್ತನಯಿತ್ನುಃ ಸರ್ವೇಷಾಂ ಭೂತಾನಾಂ ಮಧ್ವಸ್ಯ ಸ್ತನಯಿತ್ನೋಃ ಸರ್ವಾಣಿ ಭೂತಾನಿ ಮಧು ಯಶ್ಚಾಯ ಮಸ್ಮಿನ್ ಸ್ತನಯಿತ್ನೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂಶಾಬ್ದಃ ಸೌವರಸ್ತೇಜೋ ಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯ ಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೯ ॥**

೯. ಈ ಗುಡುಗು ಎಲ್ಲಾ ಭೂತಗಳಿಗೂ ಮಧು; ಈ ಗುಡುಗಿಗೆ ಎಲ್ಲಾ ಭೂತಗಳೂ ಮಧು. ಈ ಗುಡುಗಿನಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆದ ಶಾಬ್ದಸೌವರಪುರುಷ ನಿದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವ ನಿದಾನಲ್ಲ, ಇವನೇ. ಇದೇ ಅಮೃತವು, ಇದೇ ಬ್ರಹ್ಮವು; ಇದೇ ಎಲ್ಲವೂ.

(ಭಾಷ್ಯ)

೩೯೦. ತಥಾ ಸ್ತನಯಿತ್ನುಃ। ಶಬ್ದೇ ಭವಃ ಶಾಬ್ದಃ ಅಧ್ಯಾತ್ಮಂ ಯದ್ಯಪಿ, ತಥಾಪಿ ಸ್ವರೇ ವಿಶೇಷತೋ ಭವತೀತಿ ಸೌವರಃ ಅಧ್ಯಾತ್ಮಮ್ ॥

(ಭಾಷ್ಯಾರ್ಥ)

ಹೀಗೆಯೇ ಗುಡುಗು. ಶಬ್ದದಲ್ಲಿರುವ ಶಬ್ದ(ಪುರುಷನೇ) ಅಧ್ಯಾತ್ಮ ನಾದರೂ ಸ್ವರದಲ್ಲಿ ವಿಶೇಷವಾಗಿರುವವರಿಂದ ಸೌವರನು ಅಧ್ಯಾತ್ಮವಾಗಿ(ರುವ ಪುರುಷನೆಂದಿದೆ).

## ಆಕಾಶಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಮಾಕಾಶಃ ಸರ್ವೇಷಾಂ ಭೂತಾನಾಂ ಮಧ್ವಸ್ಯಾಕಾಶಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾಕಾಶೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಗ್ಂ ಹೃದ್ಯಾಕಾಶಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೧೦ ॥**

೧೦. ಈ ಆಕಾಶವು ಎಲ್ಲಾ ಭೂತಗಳಿಗೂ ಮಧು; ಈ ಆಕಾಶಕ್ಕೆ ಎಲ್ಲಾ ಭೂತಗಳೂ ಮಧು. ಈ ಆಕಾಶದಲ್ಲಿ ತೇಜೋಮಯನೂ ಅಮೃತಮಯನೂ ಆಗಿರುವ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆಗಿ ಹೃದಯದಲ್ಲಿನ ಆಕಾಶನೆಂಬ ಪುರುಷನಿದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವನಿದಾನಲ್ಲ, ಇವನೇ. ಇವು ಅಮೃತವೂ ಇದು ಬ್ರಹ್ಮವು, ಇದು ಎಲ್ಲವೂ.

(ಭಾಷ್ಯ)

೩೯೧. ತಥಾ ಆಕಾಶಃ । ಅಧ್ಯಾತ್ಮಂ ಹೃದ್ಯಾಕಾಶಃ ॥

(ಭಾಷ್ಯಾರ್ಥ)

ಹೀಗೆಯೇ ಆಕಾಶವು. ಅಧ್ಯಾತ್ಮವಾಗಿ ಹೃದಯದಲ್ಲಿರುವ ಆಕಾಶ (ನೆಂಬ ಪುರುಷನು).

## ಮುಂದಿನ ಮಧುಪರ್ಯಾಯಗಳ ಸಂಬಂಧ

(ಭಾಷ್ಯ)

೩೯೨. ಆಕಾಶಾನ್ತಾಃ ಪೃಥಿವ್ಯಾದಯೋ ಭೂತಗಣಾಃ ದೇವತಾಗಣಾಶ್ಚ ಕಾರ್ಯಕರಣಸಂಘಾತಾತ್ಮಾನಃ ಉಪಕುರ್ವನ್ತೋ ಮಧು ಭವನ್ತಿ ಪ್ರತಿ ಶರೀರಿಣಮ್ ಇತ್ಯುಕ್ತಮ್ । ಯೇನ ತೇ ಪ್ರಯುಕ್ತಾಃ ಶರೀರಿಭಿಃ ಸಂಬಧ್ಯಮಾನಾಃ ಮಧುತ್ವೇನ ಉಪಕುರ್ವನ್ತಿ ತದ್ ವಕ್ತವ್ಯಮ್ ಇತೀದಮ್ ಆರಭ್ಯತೇ—

(ಭಾಷ್ಯಾರ್ಥ)

ಆಕಾಶದವರೆಗಿನ ಪೃಥಿವ್ಯಾದಿಭೂತಗಳೂ ದೇವತಾಗಣಗಳೂ ಕಾರ್ಯಕರಣಸಂಘಾತರೂಪವಾಗಿ ಉಪಕಾರವಮಾಡುತ್ತಿರುವದರಿಂದ ಪ್ರತಿಯೊಬ್ಬ ಶರೀರಿಗೂ ಮಧುವಾಗಿರುತ್ತವೆ ಎಂದು ಹೇಳಿದ್ದಾಯಿತು. ಅವು ಯಾವದರಿಂದ ಪ್ರೇರಿಸಲ್ಪಟ್ಟು ಶರೀರಿಗಳಿಗೆ ಸಂಬಂಧಿಸಿಕೊಂಡು ಮಧುವಾಗಿ ಉಪಕಾರಮಾಡುತ್ತಿವೆಯೋ ಅದನ್ನು ಹೇಳಬೇಕು ಎಂದು ಈ (ಮುಂದಿನ ಗ್ರಂಥವು ಆರಂಭವಾಗಿರುತ್ತದೆ.

## ಧರ್ಮಾದಿಗಳ ಪರಸ್ಪರಮಧುತ್ವ

( ಉಪನಿಷತ್ತು )

**ಅಯಂ ಧರ್ಮಃ ಭೂತಾನಾಂ ಮಧ್ವಸ್ಯ ಧರ್ಮಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ ಧರ್ಮೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಧರ್ಮಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೧೧ ॥**

೧೧. ಈ ಧರ್ಮವು ಎಲ್ಲಾ ಭೂತಗಳಿಗೂ ಮಧು ; ಈ ಧರ್ಮಕ್ಕೆ ಎಲ್ಲಾ ಭೂತಗಳೂ ಮಧು. ಈ ಧರ್ಮದಲ್ಲಿ ತೇಜೋಮಯನೂ ಅಮೃತಮಯನೂ ಆದ ಪುರುಷನಿದಾನಲ್ಲ, ಅವನೂ ಅಧ್ಯಾತ್ಮವಾಗಿ ತೇಜೋಮಯನೂ ಅಮೃತಮಯನೂ ಆಗಿರುವ ಧಾರ್ಮಪುರುಷ ನಿದಾನಲ್ಲ, ಅವನೂ (ಹಾಗೆಯೇ. ಇದೆಲ್ಲವೂ) ಈ ಆತ್ಮನೆಂಬವ ನಿದಾನಲ್ಲ, ಇವನೇ. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೪೯೩. ಅಯಂ ಧರ್ಮಃ। ಅಯಮಿತಿ ಅಪ್ರತ್ಯಕ್ಷೋಽಪಿ ಧರ್ಮಃ ಕಾರ್ಯೇಣ ತತ್ಪ್ರಯುಕ್ತೇನ ಪ್ರತ್ಯಕ್ಷೇಣ ವ್ಯಪದಿಶ್ಯತೇ ಅಯಂ ಧರ್ಮಃ ಇತಿ ಪ್ರತ್ಯಕ್ಷವತ್ । ಧರ್ಮಶ್ಚ ವ್ಯಾಖ್ಯಾತಃ ಶ್ರುತಿಸ್ಮೃತಿಲಕ್ಷಣಃ ಕ್ಷತ್ರಾದೀನಾಮಪಿ ನಿಯನ್ತಾ ಜಗತೋ ವೈಚಿತ್ರ್ಯಕೃತ್ ಪೃಥಿವ್ಯಾದೀನಾಂ ಪರಿಣಾಮಹೇತುತ್ವಾತ್ ಪ್ರಾಣಿಭಿರನುಷ್ಠೀಯಮಾನರೂಪಶ್ಚ । ತೇನ ಚಾಯಂ ಧರ್ಮಃ ಇತಿ ಪ್ರತ್ಯಕ್ಷೇಣ ವ್ಯಪದೇಶಃ। ಸತ್ಯಧರ್ಮಯೋಶ್ಚ ಅಭೇದೇನ ನಿರ್ದೇಶಃ ಕೃತಃ ಶಾಸ್ತ್ರಾಚಾರಲಕ್ಷಣಯೋಃ। ಇಹ ತು ಭೇದೇನ ವ್ಯಪದೇಶಃ ಏಕತ್ವೇ ಸತ್ಯಪಿ ದೃಷ್ಟಾದೃಷ್ಟಭೇದರೂಪೇಣ ಕಾರ್ಯಾರಮ್ಭಕತ್ವಾತ್ । ಯಸ್ತ್ವದೃಷ್ಟೋಽಪೂರ್ವಾಖ್ಯೋ ಧರ್ಮಃ ಸ ಸಾಮಾನ್ಯವಿಶೇಷಾತ್ಮನಾ ಅದೃಷ್ಟೇನ ರೂಪೇಣ ಕಾರ್ಯಮಾರಭತೇ । ಸಾಮಾನ್ಯರೂಪೇಣ ಪೃಥಿವ್ಯಾದೀನಾಂ ಪ್ರಯೋಕ್ತಾ ಭವತಿ । ವಿಶೇಷರೂಪೇಣ ಚಾಧ್ಯಾತ್ಮಂ ಕಾರ್ಯಕರಣಸಂಘಾತಸ್ಯ। ತತ್ರ ಪೃಥಿವ್ಯಾದೀನಾಂ ಪ್ರಯೋಕ್ತರಿ ಯಶ್ಚಾಯಮಸ್ಮಿನ್ ಧರ್ಮೇ ತೇಜೋಮಯಃ ತಥಾ ಅಧ್ಯಾತ್ಮಂ ಕಾರ್ಯಕರಣಸಂಘಾತಕರ್ತರಿ ಧರ್ಮೇ ಭವೋ ಧಾರ್ಮಃ ॥

(ಭಾಷ್ಯಾರ್ಥ)

ಅಯಂ ಧರ್ಮಃ (ಎಂಬ ಕಂಡಿಕೆಯ ತಾತ್ಪರ್ಯವೇನೆಂದರೆ), 'ಇದು' (ಎಂಬುದರ ಅರ್ಥವಿದು): ಧರ್ಮವು ಅಪ್ರತ್ಯಕ್ಷವಾಗಿದ್ದರೂ ಅದರ ಕಾರ್ಯವು ಪ್ರತ್ಯಕ್ಷವಾಗಿರುವದರಿಂದ (ಆ ಕಾರ್ಯದ ಮೂಲಕ) ಪ್ರತ್ಯಕ್ಷವಾಗಿರುವಂತೆ ಭಾವಿಸಿ ( ಈ ಧರ್ಮ) ಎಂದು ಪ್ರಯೋಗಿಸಿರುತ್ತದೆ. ಧರ್ಮವೆಂದರೆ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಕ್ಷತ್ರಾದಿಗಳನ್ನೂ ಕಟ್ಟಿನಲ್ಲಿಟ್ಟಿರುವ ಪೃಥಿವ್ಯಾದಿಗಳ ಪರಿಣಾಮಕ್ಕೆ ಕಾರಣವಾಗಿರುವದರಿಂದ ಜಗತ್ತಿನ ವೈಚಿತ್ರ್ಯವನ್ನುಂಟುಮಾಡುವದೆಂದೂ ಜೀವರುಗಳು ಅನುಷ್ಠಾನಮಾಡುತ್ತಿರುವ ಸ್ವರೂಪದ್ದೆಂದೂ ಹಿಂದೆ (೧-೪-೧೪ರಲ್ಲಿ) ವಿವರಿಸಿ ಹೇಳಿರುವದು. ಅದರಿಂದಲೂ 'ಈ ಧರ್ಮವು' ಎಂದು (ಅದನ್ನು) ಪ್ರತ್ಯಕ್ಷವಾದ (ಹೆಸರಿನಿಂದ) ಕರೆದಿರುತ್ತದೆ.

ಹಿಂದೆ ಶಾಸ್ತ್ರ, (ಜ್ಞಾನ), ಆಚಾರ – ಇವುಗಳ ರೂಪವಾದ ಸತ್ಯಧರ್ಮ ಗಳನ್ನು ಅಭಿನ್ನವಾಗಿಟ್ಟುಕೊಂಡು ಹೇಳಲಾಗಿತ್ತು. ಇಲ್ಲಿ (ಅವೆರಡೂ) ಒಂದೇ ಆದರೂ ಬೇರೆಬೇರೆಯಾಗಿ ಹೇಳಿರುತ್ತದೆ. ಏಕೆಂದರೆ (ಅವು) ದೃಷ್ಟ, ಅದೃಷ್ಟ– ಎಂದು ಬೇರೆಬೇರೆಯ ರೂಪದ ಕಾರ್ಯವನ್ನುಂಟುಮಾಡುತ್ತವೆ[1]. (ಅವುಗಳಲ್ಲಿ) ಅದೃಷ್ಟವಾದ **ಅಪೂರ್ವವೆಂಬ** ಧರ್ಮವಿದೆಯಲ್ಲ[2], ಅದು ಸಾಮಾನ್ಯವಿಶೇಷ ರೂಪಗಳಿಂದ ಅದೃಷ್ಟರೂಪದಲ್ಲಿ ಕಾರ್ಯವನ್ನುಂಟುಮಾಡುತ್ತದೆ. ಸಾಮಾನ್ಯ ರೂಪದಿಂದ ಪೃಥಿವ್ಯಾದಿಗಳಿಗೆ ಕಾರಣವಾಗಿರುತ್ತದೆ; ವಿಶೇಷರೂಪದಿಂದ ಅಧ್ಯಾತ್ಮವಾಗಿ ಕಾರ್ಯಕಾರಣಸಂಘಾತಕ್ಕೂ ಕಾರಣವಾಗಿರುತ್ತದೆ.

ಇವುಗಳೊಳಗೆ ಪೃಥಿವ್ಯಾದಿಗಳಿಗೆ ಕಾರಣವಾಗಿರುವ ಈ ಧರ್ಮದಲ್ಲಿ ಯಾವ ಪುರುಷನಿರುವನೋ ಮತ್ತು ಅಧ್ಯಾತ್ಮವಾಗಿ ಕಾರ್ಯಕರಣಸಂಘಾತ ವನ್ನುಂಟುಮಾಡುವ ಧರ್ಮದಲ್ಲಿರುವ ಧಾರ್ಮನೆಂಬ (ಯಾವ ಪುರುಷನಿರು ವನೋ, ಅವರಿಬ್ಬರೂ ಹಾಗೆಯೇ ಮಧುಗಳು ಎಂದರ್ಥ).

## ಸತ್ಯಾದಿಗಳ ಪರಸ್ಪರಮಧುತ್ವ

(ಉಪನಿಷತ್ತು)

**ಇದಗ್‍ಂ ಸತ್ಯಗ್‍ಂ ಸರ್ವೇಷಾಂ ಭೂತಾನಾಂ ಮಧ್ವಸ್ಯ ಸತ್ಯಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ ಸತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮ ಧ್ಯಾತ್ಮಗ್‍ಂ ಸಾತ್ಯಸ್ತೇಜೋಮಯೋಽಮೃತಮಯಃ ಪುರು ಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್‍ಂ ಸರ್ವಮ್ ॥ ೧೨ ॥**

೧೨. ಈ ಸತ್ಯವು ಎಲ್ಲಾ ಭೂತಗಳಿಗೂ ಮಧು; ಈ ಸತ್ಯಕ್ಕೆ ಎಲ್ಲಾ ಭೂತಗಳೂ ಮಧು. ಈ ಸತ್ಯದಲ್ಲಿ ತೇಜೋಮಯನೂ ಅಮೃತಮಯನೂ ಆಗಿರುವ ಪುರುಷನಿದಾನಲ್ಲ, ಅವನೂ ಅಧ್ಯಾತ್ಮ ವಾಗಿ ತೇಜೋಮಯನೂ ಅಮೃತಮಯನೂ ಆಗಿರುವ ಸಾತ್ಯ ಪುರುಷನಿದಾನಲ್ಲ, ಅವನೂ (ಹಾಗೆಯೇ.) ಇದು ಈ ಆತ್ಮನೆಂಬವನಿದಾ ನಲ್ಲ, ಅವನೇ ಇವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

---

1. ಸತ್ಯವು ದೃಷ್ಟರೂಪದಿಂದಲೂ ಧರ್ಮವೆಂಬ ಶಾಸ್ತ್ರೀಯಕರ್ಮವು ಅದೃಷ್ಟ ರೂಪದಿಂದಲೂ ಬೇರೆಬೇರೆಯ ಕಾರ್ಯಗಳನ್ನುಂಟುಮಾಡುತ್ತವೆ ಎಂದರ್ಥ.

2. ಮುಂದೆ ೩-೮-೯ (ಭಾ.ಭಾ. ೮೫)ರಲ್ಲಿಯೂ ಸೂ. ಭಾ. ೩-೨-೪೧ (ಭಾ.ಭಾ. ೩೧೭)ರಲ್ಲಿಯೂ ಖಂಡಿಸಿರುವದು ಪರಮೇಶ್ವರನಿರಪೇಕ್ಷವಾದ ಅಪೂರ್ವವನ್ನು ಮಾತ್ರ.

(ಭಾಷ್ಯ)

೩೯೪. ತಥಾ ದೃಷ್ಟೇನ ಅನುಷ್ಠೀಯಮಾನೇನ ಆಚಾರರೂಪೇಣ ಸತ್ಯಾಖ್ಯೋ ಭವತಿ ಸ ಏವ ಧರ್ಮಃ । ಸೋಽಪಿ ದ್ವಿಪ್ರಕಾಶ ಏವ ಸಾಮಾನ್ಯವಿಶೇಷಾತ್ಮರೂಪೇಣ । ಸಾಮಾನ್ಯರೂಪಃ ಪೃಥಿವ್ಯಾದಿಸಮವೇತಃ, ವಿಶೇಷರೂಪಃ ಕಾರ್ಯಕರಣಸಂಘಾತಸಮವೇತಃ । ತತ್ರ ಪೃಥಿವ್ಯಾದಿಸಮವೇತೇ ವರ್ತಮಾನಕ್ರಿಯಾರೂಪೇ ಸತ್ಯೇ, ತಥಾ ಅಧ್ಯಾತ್ಮಂ ಕಾರ್ಯಕರಣಸಂಘಾತಸಮವೇತೇ ಸತ್ಯೇ ಭವಃ ಸಾತ್ಯಃ । "ಸತ್ಯೇನ ವಾಯುರಾವಾತಿ" (ತೈ. ನಾ. ೨೨-೧) ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

ಹೀಗೆಯೇ ದೃಷ್ಟವಾದ, ಅನುಷ್ಠಾನಮಾಡಲ್ಪಡುತ್ತಿರುವ ಆಚಾರರೂಪದಿಂದ ಇದೇ ಧರ್ಮವು ಸತ್ಯವೆಂಬ ಹೆಸರುಳ್ಳದ್ದಾಗುವದು. ಅದೂ ಸಾಮಾನ್ಯವಿಶೇಷರೂಪದಿಂದ ಎರಡು ಬಗೆಯಾಗಿಯೇ ಇರುತ್ತದೆ. ಸಾಮಾನ್ಯರೂಪವು ಪೃಥಿವ್ಯಾದಿಸಂಬದ್ಧವಾಗಿಯೂ ವಿಶೇಷರೂಪವು ಕಾರ್ಯಕರಣಸಂಬದ್ಧವಾಗಿಯೂ ಇರುತ್ತದೆ[1]. ಅವುಗಳೊಳಗೆ ಪೃಥಿವ್ಯಾದಿಸಂಬದ್ಧವಾಗಿರುವ ವರ್ತಮಾನಕ್ರಿಯಾರೂಪವಾದ ಸತ್ಯದಲ್ಲಿ (ಇರುವ ಪುರುಷನೂ), ಅಧ್ಯಾತ್ಮವಾಗಿ ಕಾರ್ಯಕರಣಸಂಘಾತಸಂಬದ್ಧವಾಗಿರುವ ಸತ್ಯದಲ್ಲಿ(ರುವ) ಸಾತ್ಯನೆಂಬ (ಪುರುಷನೂ ಹೀಗೆಯೇ ಮಧುಗಳು ಎಂದರ್ಥ). "ಸತ್ಯದಿಂದ ಗಾಳಿಯು ಬೀಸುತ್ತದೆ" (ತೈ. ನಾ. ೨೨-೧) ಎಂಬ ಮತ್ತೊಂದು ಶ್ರುತಿಯಿಂದ (ಇದು ಸಿದ್ಧವಾಗುತ್ತದೆ)[2].

## ಮನುಷ್ಯಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಇದಂ ಮಾನುಷಗ್ಂ ಸರ್ವೇಷಾಂ ಭೂತಾನಾಂ ಮಧ್ವಸ್ಯ ಮಾನುಷಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ ಮಾನುಷೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಮಾನುಷಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್ ॥ ೧೩ ॥**

೧೩. ಈ ಮಾನುಷವು ಎಲ್ಲಾ ಭೂತಗಳಿಗೂ ಮಧು ; ಈ ಮಾನುಷಕ್ಕೆ ಎಲ್ಲಾ ಭೂತಗಳೂ ಮಧು. ಈ ಮಾನುಷದಲ್ಲಿ ತೇಜೋ

---

1. ಕಾರಣವಾಗಿ ಅನುಗತವಾಗಿದೆ ಎಂದರ್ಥ.
2. ಪೃಥಿವ್ಯಾದಿಗಳಲ್ಲಿಯೂ ಸತ್ಯವಿದೆ ಎಂಬುದಕ್ಕೆ ಶ್ರುತಿಯಿದು.

ಮಯನೂ ಅಮೃತಮಯನೂ ಆಗಿರುವ ಪುರುಷನಿದಾನಲ್ಲ ಅವನೂ ಅಧ್ಯಾತ್ಮವಾಗಿ ಈ ಮಾನುಷನಿದಾನಲ್ಲ ಅವನೂ (ಹಾಗೆಯೇ). ಈ ಆತ್ಮನೆಂಬವನಿದಾನಲ್ಲ, ಇವನೇ ಅವನು, ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೯೫. ಧರ್ಮಸತ್ಯಾಭ್ಯಾಂ ಪ್ರಯುಕ್ತೋಽಯಂ ಕಾರ್ಯಕರಣಸಂಘಾತವಿಶೇಷಃ। ಸ ಯೇನ ಜಾತಿವಿಶೇಷೇಣ ಸಂಯುಕ್ತೋ ಭವತಿ ಸ ಜಾತಿವಿಶೇಷೋ ಮಾನುಷಾದಿಃ। ತತ್ರ ಮಾನುಷಾದಿಜಾತಿವಿಶಿಷ್ಟಾ ಏವ ಸರ್ವೇ ಪ್ರಾಣಿನಿಕಾಯಾಃ ಪರಸ್ಪರೋಪಕಾರ್ಯೋಪಕಾರಕಭಾವೇನ ವರ್ತಮಾನಾ ದೃಶ್ಯನ್ತೇ। ಅತೋ ಮಾನುಷಾದಿಜಾತಿರಪಿ ಸರ್ವೇಷಾಂ ಭೂತಾನಾಂ ಮಧು। ತತ್ರ ಮಾನುಷಾದಿಜಾತಿರಪಿ ಬಾಹ್ಯಾ ಆಧ್ಯಾತ್ಮಿಕೀ ಚೇತ್ಯುಭಯಥಾ ನಿರ್ದೇಶಭಾಗ್ ಭವತಿ ॥

(ಭಾಷ್ಯಾರ್ಥ)

ಈ ಕಾರ್ಯಕರಣಸಂಘಾತವಿಶೇಷವು ಧರ್ಮಸತ್ಯಗಳಿಂದ ಪ್ರಯುಕ್ತವಾಗಿರುತ್ತದೆ. ಅದು ಯಾವ ಜಾತಿವಿಶೇಷದಿಂದ ಕೂಡಿರುವದೋ ಆ ಜಾತಿವಿಶೇಷವು ಮಾನುಷಾದಿಯು[1]. ಇಲ್ಲಿ ಮಾನುಷವೇ ಮುಂತಾದ ಜಾತಿಯಿಂದ ಕೂಡಿಯೇ ಎಲ್ಲಾ ಪ್ರಾಣಿರಾಶಿಗಳೂ ಒಂದಕ್ಕೊಂದು ಉಪಕಾರ್ಯೋಪಕಾರಕ ಭಾವದಿಂದ ಇರುವವಾಗಿ ಕಾಣುತ್ತವೆ. ಆದ್ದರಿಂದ ಮಾನುಷಾದಿಜಾತಿಯೂ ಎಲ್ಲಾ ಭೂತಗಳಿಗೂ ಮಧು. ಇಲ್ಲಿ ಮಾನುಷಾದಿಜಾತಿಯೂ ಬಾಹ್ಯ, ಆಧ್ಯಾತ್ಮಿಕ- ಎಂದು ಎರಡು ಬಗೆಯ ನಿರ್ದೇಶವನ್ನು ಪಡೆಯುತ್ತದೆ.

## ಕಾರ್ಯಕರಣಸಂಘಾತಾದಿಗಳಿಗೆ ಪರಸ್ಪರಮಧುತ್ವ

(ಉಪನಿಷತ್ತು)

**ಅಯಮಾತ್ಮಾ ಸರ್ವೇಷಾಂ ಭೂತಾನಾಂ ಮಧ್ವಸ್ಯಾತ್ಮನಃ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾತ್ಮನಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಾತ್ಮಾ ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್॥**

೧೪. ಈ ಆತ್ಮವು ಎಲ್ಲಾ ಭೂತಗಳಿಗೂ ಮಧು; ಈ ಆತ್ಮಕ್ಕೆ ಎಲ್ಲಾ ಭೂತಗಳೂ ಮಧು. ಈ ಆತ್ಮದಲ್ಲಿ ತೇಜೋಮಯನೂ

1. ಉಪನಿಷತ್ತಿನಲ್ಲಿರುವ ಮಾನುಷಶಬ್ದವು ಎಲ್ಲಾ ಜಾತಿಗಳಿಗೂ ಉಪಲಕ್ಷಣ ಎಂದು ಭಾವ.

ಅಮೃತಮಯನೂ ಆದ ಪುರುಷನಿದಾನಲ್ಲ ಅವನೂ ಮತ್ತು ತೇಜೋಮಯನೂ ಅಮೃತಮಯನೂ ಆದ ಈ ಪುರುಷನಿದಾನಲ್ಲ ಅವನೂ (ಹಾಗೆಯೇ). ಈ ಆತ್ಮನೆಂಬವನಿದಾನಲ್ಲ, ಇವನೇ ಅವನು. ಇದೇ ಅಮೃತವು, ಇದೇ ಬ್ರಹ್ಮವು, ಇದೇ ಎಲ್ಲವೂ.

(ಭಾಷ್ಯ)

೩೯೬. ಯಸ್ತು ಕಾರ್ಯಕರಣಸಂಘಾತೋ ಮಾನುಷಾದಿಜಾತಿವಿಶಿಷ್ಟಃ ಸೋಽಯಮಾತ್ಮಾ ಸರ್ವೇಷಾಂ ಭೂತಾನಾಂ ಮಧು। ನನ್ವಯಂ ಶಾರೀರ ಶಬ್ದೇನ ನಿರ್ದಿಷ್ಟಃ ಪೃಥಿವೀಪರ್ಯಾಯ ಏವ । ನ । ಪಾರ್ಥಿವಾಂಶಸ್ಯೈವ ತತ್ರ ಗ್ರಹಣಾತ್। ಇಹ ತು ಸರ್ವಾತ್ಮಾ ಪ್ರತ್ಯಸ್ತಮಿತಾಧ್ಯಾತ್ಮಾಧಿಭೂತಾದಿ[1] ಸರ್ವವಿಶೇಷಃ ಸರ್ವಭೂತದೇವತಾಗುಣ[2]ವಿಶಿಷ್ಟಃ ಕಾರ್ಯಕರಣಸಂಘಾತಃ ಸಃ[3] 'ಅಯಮಾತ್ಮಾ' ಇತ್ಯುಚ್ಯತೇ। ತಸ್ಮಿನ್ನಸ್ಮಿನ್ ಆತ್ಮನಿ ತೇಜೋಮಯೋಽಮೃತಮಯಃ ಪುರುಷೋಽಮೂರ್ತರಸಃ ಸರ್ವಾತ್ಮಕೋ ನಿರ್ದಿಶ್ಯತೇ। ಏಕದೇಶೇನ ತು ಪೃಥಿವ್ಯಾದಿನಾ ನಿರ್ದಿಷ್ಟಃ। ಅತ್ರ ಅಧ್ಯಾತ್ಮವಿಶೇಷಾಭಾವಾತ್ ಸ ನ ನಿರ್ದಿಶ್ಯತೇ। ಯಸ್ತು ಪರಿಶಿಷ್ಟೋ ವಿಜ್ಞಾನಮಯಃ, ಯದರ್ಥೋಽಯಂ ದೇಹಲಿಙ್ಗಸಂಘಾತ ಆತ್ಮಾ ಸ 'ಯಶ್ಚಾಯಮಾತ್ಮಾ' ಇತ್ಯುಚ್ಯತೇ ॥

(ಭಾಷ್ಯಾರ್ಥ)

ಇನ್ನು ಮಾನುಷಾದಿಜಾತಿವಿಶಿಷ್ಟವಾದ ಕಾರ್ಯಕರಣಸಂಘಾತವಿದೆಯಲ್ಲ, ಆ ಈ ಆತ್ಮವು ಎಲ್ಲಾ ಭೂತಗಳಿಗೂ ಮಧು.

(ಆಕ್ಷೇಪ):– ಇದನ್ನು 'ಶಾರೀರ' ಎಂಬ ಶಬ್ದದಿಂದ ಪೃಥಿವೀಪರ್ಯಾಯದಲ್ಲಿಯೇ (೨-೫-೧) ತಿಳಿಸಿಲ್ಲವೆ?

(ಪರಿಹಾರ):– ಇಲ್ಲ. ಏಕೆಂದರೆ ಅಲ್ಲಿ ಪಾರ್ಥಿವಾಂಶವನ್ನು ಮಾತ್ರ ಗ್ರಹಿಸಿತ್ತು. ಆದರೆ ಇಲ್ಲಿ ಸರ್ವಾತ್ಮವಾಗಿರುವ ಅಧ್ಯಾತ್ಮ, ಅಧಿಭೂತ, –ಮುಂತಾದ ಯಾವ ವಿಶೇಷವೂ ಇಲ್ಲದ, ಎಲ್ಲಾ ಭೂತಗಳ, ಮತ್ತು ಎಲ್ಲಾ ದೇವತೆಗಳ[4] ಗುಣಗಳಿಂದ ಕೂಡಿರುವ ಕಾರ್ಯಕರಣಸಂಘಾತವಿದೆಯಲ್ಲ, ಅದನ್ನು 'ಅಯಮಾತ್ಮಾ' (ಈ ಆತ್ಮವು) ಎಂದಿದೆ. ಆ ಈ ಆತ್ಮದಲ್ಲಿ ತೇಜೋಮಯನೂ ಅಮೃತಮಯನೂ ಆಗಿರುವ ಪುರುಷನು ಎಂದು ಸರ್ವಾತ್ಮಕವಾದ ಅಮೂರ್ತರಸವನ್ನು (೨-೩-೩) ತಿಳಿಸಿರುತ್ತದೆ[5]; ಪೃಥಿವ್ಯಾದಿಗಳಲ್ಲಿ ಏಕದೇಶ

1. 'ಭೂತಾಧಿದೈವಾದಿ' ಎಂಬ ಪಾಠವಲ್ಲಿ ಆದಿ ಹೆಚ್ಚು; ಆದ್ದರಿಂದ ಈ ಪಾಠವನ್ನೇ ಹಿಡಿದಿದೆ. 2. ಗಣ ಎಂಬುದಕ್ಕಿಂತ ಈ ಪಾಠವು ಮೇಲು.

3. ಇದಕ್ಕನುಗುಣವಾಗಿ 'ಇಹ ತು' ಆದಮೇಲೆ ಯಃ ಇರಬೇಕಾಗಿತ್ತು; ಅದನ್ನು ಅಧ್ಯಾಹಾರಮಾಡಿಕೊಂಡರೂ ಆಗುತ್ತದೆ.

4. ಇಂದ್ರಿಯಗಳ. 5. ಒಟ್ಟು ಲಿಂಗಶರೀರವನ್ನೇ ತಿಳಿಸಿರುತ್ತದೆ.

ವಾಗಿ (ಇದನ್ನು ತಿಳಿಸಿತ್ತು). ಇಲ್ಲಿ ಅಧ್ಯಾತ್ಮವೆಂಬ ವಿಶೇಷವಿಲ್ಲದ್ದರಿಂದ (ಅಧ್ಯಾತ್ಮವನ್ನು) ಹೇಳಿಲ್ಲ[1]. ಆದರೆ ಉಳಿದಿರುವ **ವಿಜ್ಞಾನಮಯನಿದಾನಲ್ಲ**– ಯಾವನಿಗೋಸ್ಕರವೇ ಈ ದೇಹಲಿಂಗಸಂಘಾತವೆಂಬ ಆತ್ಮವು ಇರುತ್ತದೆಯೋ– ಅವನನ್ನು (ಇಲ್ಲಿ) ಈ ಆತ್ಮನೆಂಬ (ಪುರುಷನು) ಎಂದು ಹೇಳಿರುತ್ತದೆ[2].

## ಪರಮಾತ್ಮನ ಸರ್ವೈಶ್ವರ್ಯ, ಸರ್ವಾಶ್ರಯತ್ವ

(ಉಪನಿಷತ್ತು)

**ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏತ ಆತ್ಮಾನಃ ಸಮರ್ಪಿತಾಃ ॥ ೧೫ ॥**

೧೫. ಆ ಈ ಆತ್ಮನಿದಾನಲ್ಲ, (ಇವನು) ಎಲ್ಲಾ ಭೂತಗಳಿಗೂ ಅಧಿಪತಿಯು ರಾಜನು. ಅದು ಹೇಗೆಂದರೆ (ಹೇಗೆ) ರಥದ ಗುಂಬದಲ್ಲಿಯೂ ರಥದ ಹಳಿಯಲ್ಲಿಯೂ ಹಾರೆಕೋಲುಗಳೆಲ್ಲವೂ ಇಡಲ್ಪಟ್ಟಿರುವವೋ ಹಾಗೆಯೇ ಈ ಆತ್ಮನಲ್ಲಿ ಎಲ್ಲಾ ಭೂತಗಳೂ ಎಲ್ಲಾ ದೇವತೆಗಳೂ ಎಲ್ಲಾ ಲೋಕಗಳೂ ಎಲ್ಲಾ ಪ್ರಾಣಗಳೂ ಎಲ್ಲಾ ಈ ಆತ್ಮರುಗಳೂ ಇಡಲ್ಪಟ್ಟಿರುವರು.

## ಬ್ರಹ್ಮವಿದ್ಯೆಯಿಂದಾಗುವ ಸರ್ವಾತ್ಮತ್ವ

(ಭಾಷ್ಯ)

೩೯೭. ಯಸ್ಮಿನ್ ಆತ್ಮನಿ ಪರಿಶಿಷ್ಟೋ ವಿಜ್ಞಾನಮಯೋಽನ್ತ್ಯೇ ಪರ್ಯಾಯೇ ಪ್ರವೇಶಿತಃ ಸೋಽಯಮಾತ್ಮಾ । ತಸ್ಮಿನ್ ಅವಿದ್ಯಾಕೃತಕಾರ್ಯ

---

1. ಹಿಂದಿನ ಪರ್ಯಾಯದವರೆಗೂ 'ಯಶ್ಚಾಯಮಧ್ಯಾತ್ಮಮ್' ಎಂದು ಹೇಳಿತ್ತು. ಏಕೆಂದರೆ ಅಲ್ಲಿ ಅಧಿದೈವವಾಗಿ ಲಿಂಗಶರೀರದ ಒಂದು ಭಾಗವನ್ನು ಹೇಳಿ ಅಧ್ಯಾತ್ಮವಾಗಿ ಒಂದೊಂದು ವಿಶೇಷರೂಪದಿಂದ ಅದನ್ನು ಹೇಳಿತ್ತು. ಆದರೆ ಇಲ್ಲಿ ಅಧ್ಯಾತ್ಮ, ಅಧಿಭೂತ, ಅಧಿದೈವ– ಎಂಬ ಯಾವ ಭೇದವೂ ಇಲ್ಲದ ಒಟ್ಟು ಕಾರ್ಯಕರಣಸಂಘಾತವನ್ನೇ ಆತ್ಮ ಎಂಬ ಶಬ್ದದಿಂದ ಹೇಳಿಬಿಟ್ಟಿರುವದರಿಂದ ಅಧ್ಯಾತ್ಮವೆಂಬುದು ಬೇರೆ ಉಳಿದುಕೊಳ್ಳುವದಿಲ್ಲ.

2 ಇಲ್ಲಿ ಹೇಳಿರುವ ಆತ್ಮನು, ತೇಜೋಮಯನೂ ಅಮೃತಮಯನೂ ಎಂಬ ಪುರುಷನು, ವಿಜ್ಞಾನಾತ್ಮನೇ. ಅವನೇ ಇವನು ಎಂದು ಪರಮಾತ್ಮನಲ್ಲಿ ಇವನ್ನು ಲಯ ಮಾಡಿರುತ್ತದೆ.

ಕರಣಸಂಘಾತೋಪಾಧಿವಿಶಿಷ್ಟೇ ಬ್ರಹ್ಮವಿದ್ಯಯಾ ಪರಮಾರ್ಥಾತ್ಮನಿ ಪ್ರವೇಶಿತೇ ಸ ಏವಮುಕ್ತೋ ಅನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನಭೂತಃ—ಸ ವೈ ಸ ಏವಾಽಯಮಾತ್ಮಾ ಅವ್ಯವಹಿತಪೂರ್ವಪರ್ಯಾಯೋ ತೇಜೋಮಯ ಇತ್ಯಾದಿನಾ ನಿರ್ದಿಷ್ಟೋ ವಿಜ್ಞಾನಾತ್ಮಾ ವಿದ್ವಾನ್[1] . ಸರ್ವೇಷಾಂ ಭೂತಾನಾಮ್ ಅಯಮಾತ್ಮಾ ಸರ್ವೈರುಪಾಸ್ಯಃ। ಸರ್ವೇಷಾಂ ಭೂತಾನಾಮ್ ಅಧಿಪತಿಃ ಸರ್ವಭೂತಾನಾಂ ಸ್ವತನ್ತ್ರಃ। ನ ಕುಮಾರಾಮಾತ್ಯವತ್, ಕಿಂ ತರ್ಹಿ ಸರ್ವೇಷಾಂ ಭೂತಾನಾಂ ರಾಜಾ। ರಾಜತ್ವವಿಶೇಷಣಮ್ ಅಧಿಪತಿರಿತಿ। ಭವತಿ ಕಶ್ಚಿತ್ ರಾಜೋಚಿತವೃತ್ತಿಮ್ ಆಶ್ರಿತ್ಯ ರಾಜಾ ನ ತ್ವಧಿಪತಿಃ। ಅತೋ ವಿಶಿನಷ್ಟಿ 'ಅಧಿಪತಿಃ' ಇತಿ। ಏವಂ ಸರ್ವಭೂತಾತ್ಮಾ ವಿದ್ವಾನ್ ಬ್ರಹ್ಮವಿತ್ ಮುಕ್ತೋ ಭವತಿ। ಯದುಕ್ತಂ "ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯನ್ತೋ ಮನುಷ್ಯಾ ಮನ್ಯನ್ತೇ ಕಿಮು ತದ್ಬ್ರಹ್ಮಾವೇದ್ ಯಸ್ಮಾತ್ ತತ್ ಸರ್ವಮಭವತ್" (೧-೪-೯) ಇತಿ ಇದಂ ತದ್ ವ್ಯಾಖ್ಯಾತಮ್। ಏವಮ್ ಆತ್ಮಾನಮೇವ ಸರ್ವಾತ್ಮತ್ವೇನ ಆಚಾರ್ಯಾಗಮಾಭ್ಯಾಂ ಶ್ರುತ್ವಾ, ಮತ್ವಾ, ತರ್ಕತೋ, ವಿಜ್ಞಾಯ ಸಾಕ್ಷಾತ್ ಏವಂ ಯಥಾ ಮಧುಬ್ರಾಹ್ಮಣೇ ದರ್ಶಿತಂ ತಥಾ (ಅವೇತ್)[2]। ತಸ್ಮಾತ್ ಬ್ರಹ್ಮವಿಜ್ಞಾನಾತ್ ಏವಂಲಕ್ಷಣಾತ್ ಪೂರ್ವಮಪಿ ಬ್ರಹ್ಮೈವ ಸತ್ ಅವಿದ್ಯಯಾ ಅಬ್ರಹ್ಮಾಸೀತ್। ಸರ್ವಮೇವ ಚ ಸತ್ ಅಸರ್ವಮಾಸೀತ್। ತಾಂ ತು ಅವಿದ್ಯಾಮ್ ಅಸ್ಮಾದ್ ವಿಜ್ಞಾನಾತ್ ತಿರಸ್ಕೃತ್ಯ ಬ್ರಹ್ಮವಿದ್ ಬ್ರಹ್ಮೈವ ಸನ್ ಬ್ರಹ್ಮಾಭವತ್ ಸರ್ವಃ ಸನ್[3] ಸರ್ವಮಭವತ್॥

(ಭಾಷ್ಯಾರ್ಥ)

ಯಾವ ಆತ್ಮನಲ್ಲಿ (ಕಾರ್ಯಕರಣವನ್ನು ಕಳೆದು) ಉಳಿದ ವಿಜ್ಞಾನಾತ್ಮನನ್ನು ಕೊನೆಯ ಪರ್ಯಾಯದಲ್ಲಿ ಹೊಗಿಸಲಾಯಿತೋ[4] ಅವನೇ ಈ ಆತ್ಮನು. ಅವನಲ್ಲಿ ಅವಿದ್ಯಾಕೃತವಾದ ಕಾರ್ಯಕರಣಸಂಘಾತವೆಂಬ ಉಪಾಧಿಯಿಂದ ಕೂಡಿದ ಆ (ವಿಜ್ಞಾನಮಯನನ್ನು) ಬ್ರಹ್ಮವಿದ್ಯೆಯಿಂದ ಪರಮಾರ್ಥನಲ್ಲಿ ಹೊಗಿಸಲಾಗಿ ಹೀಗೆ ಹೇಳಿದಂಥ ಅವನು, ಅನಂತರನೂ ಅಬಾಹ್ಯನೂ ಕೃತ್ಸ್ನನೂ ಪ್ರಜ್ಞಾನಘನನೂ ಆದ[5]—(ಆತ್ಮನು) (ಸ ವೈ=ಸ ಏವ) ಹಿಂದುಗಡೆಯೋ

1. ಎರಡು ಲಿಖಿತಪುಸ್ತಕಗಳಲ್ಲಿ ಮಾತ್ರ- ಚಿಹ್ನೆಯೊಳಗಿಟ್ಟಿರುವ ಈ ಹೆಚ್ಚಿನ ಪಾಠವಿರುವದಾಗಿ ಆ॥ ಮುದ್ರಿತಪುಸ್ತಕದಲ್ಲಿದೆ. ಅನುವಾದದ ಟಿಪ್ಪಣಿಯನ್ನು ನೋಡಿರಿ.

2. ಇಲ್ಲಿ ಈ ಮಾತು ಬಿಟ್ಟುಹೋಗಿದೆ ಎಂದು ತೋರುತ್ತದೆ.

3. ಸ ಎಂಬ ಆಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. 'ಅಯಮೇವ ಸಃ ಯೋಽಯಮಾತ್ಮಾ' (ಅವನೇ ಈ ಆತ್ಮನೆಂಬುವನು) ಎಂದು ಪರಮಾತ್ಮನಲ್ಲಿ ಒಂದುಗೂಡಿಸಲಾಯಿತೋ.

5. ಹಿಂದಿನ ಬ್ರಾಹ್ಮಣದ ಕಂಡಿಕೆಯಲ್ಲಿ ಹೇಳಿದ ಲಕ್ಷಣವುಳ್ಳ (ಪರಮಾತ್ಮನು).

ಇರುವ ಪರ್ಯಾಯದಲ್ಲಿ 'ತೇಜೋಮಯನು' ಎಂದು ಮುಂತಾಗಿ ತಿಳಿಸಿರುವ ವಿಜ್ಞಾನಾತ್ಮನೆಂಬ ಜ್ಞಾನಿಯು[1] —ಇವನು ಸರ್ವಭೂತಗಳಿಗೂ ಇವನೇ ಎಲ್ಲರಿಂದಲೂ ಉಪಾಸ್ಯನಾದ ಆತ್ಮನು[2]. (ಅವನು) ಎಲ್ಲಾ ಭೂತಗಳಿಗೂ ಅಧಿಪತಿಯು. ಸರ್ವಭೂತಗಳಿಗೂ ಸ್ವತಂತ್ರರಾದ ರಾಜಕುಮಾರ, ಮಂತ್ರಿ-ಇವರಂತಲ್ಲ[3] ; ಮತ್ತೇನೆಂದರೆ ಸರ್ವಭೂತಗಳಿಗೂ ರಾಜನು. ಅಧಿಪತಿಯು ಎಂಬುದು ರಾಜತ್ವಕ್ಕೆ ವಿಶೇಷಣವು ; ಒಬ್ಬನು ರಾಜನಿಗೆ ತಕ್ಕ ವೃತ್ತಿಯನ್ನು ಆಶ್ರಯಿಸಿಕೊಂಡು ರಾಜನಾಗಿರಬಹುದು, ಆದರೆ ಅಧಿಪತಿಯಾಗಿರುವದಿಲ್ಲ. ಆದ್ದರಿಂದ ಅಧಿಪತಿಯಾದ (ರಾಜನು) ಎಂದು ವಿಶೇಷಣವನ್ನು ಕೊಟ್ಟಿದೆ[4].

ಹೀಗೆ ಎಲ್ಲರಿಗೂ ಆತ್ಮನಾಗಿರುವ ಜ್ಞಾನಿಯಾದ ಬ್ರಹ್ಮವಿದನು ಮುಕ್ತನಾಗುತ್ತಾನೆ. "ಆ ಬ್ರಹ್ಮವು ಏನನ್ನು ಅರಿತುಕೊಂಡು ಅದರಿಂದ ಎಲ್ಲವೂ ಆಯಿತೊ ! -ಎಂದು ಬ್ರಹ್ಮವಿದ್ಯೆಯಿಂದ ಎಲ್ಲವೂ ಆಗುವೆವೆಂದು ಮನುಷ್ಯರು ಯೋಚಿಸಿಕೊಳ್ಳುತ್ತಾರೆ" (೧-೪-೯). ಎಂದು ಹೇಳಿತ್ತಲ್ಲ, ಅದನ್ನು (ಇಲ್ಲಿ) ವಿವರಿಸಿದಂತೆ ಆಯಿತು. ಎಲ್ಲರ ಆತ್ಮನೆಂದು—ಆಚಾರ್ಯರಿಂದಲೂ ಆಗಮದಿಂದಲೂ ಶ್ರವಣಮಾಡಿ, ತರ್ಕದಿಂದ ಮನನಮಾಡಿ, ಮಧುಬ್ರಾಹ್ಮಣದಲ್ಲಿ ಹೇಳಿತಲ್ಲ ಹಾಗೆ (ತಾನೇ) ನೇರಾಗಿ ಅರಿತುಕೊಂಡು, ತನ್ನನ್ನೇ (ಅರಿತುಕೊಂಡಿತು)[5]. **ಈ ರೂಪದ ಆ ಬ್ರಹ್ಮವಿಜ್ಞಾನಕ್ಕಿಂತಲೂ ಮೊದಲೂ ಬ್ರಹ್ಮವೇ ಆಗಿದ್ದುಕೊಂಡು ಅವಿದ್ಯೆಯಿಂದ ಅಬ್ರಹ್ಮವಾಗಿತ್ತು ; ಸರ್ವವೇ ಆಗಿದ್ದುಕೊಂಡು ಅಸರ್ವವಾಗಿತ್ತು. ಆ ಅವಿದ್ಯೆಯನ್ನು ವಿಜ್ಞಾನದಿಂದ ತೆಗೆದುಹಾಕಿ ಬ್ರಹ್ಮಜ್ಞಾನಿಯು (ಮೊದಲೂ) ಬ್ರಹ್ಮವೇ ಆಗಿದ್ದುಕೊಂಡು ಬ್ರಹ್ಮವಾದನು, (ಮೊದಲೂ) ಸರ್ವವಾಗಿದ್ದುಕೊಂಡು ಸರ್ವವಾದನು[6].**

1. ಇಲ್ಲಿಯವರೆಗಿನ ಅನುವಾದವು ಪಾಠಾಂತರದ್ದು. 'ಸ ವಾ ಅಯಮಾತ್ಮಾ' ಎಂಬ ಮೂಲದಲ್ಲಿ 'ಸ ವೈ' ಎಂಬ ಭಾಗವು ಭಾಷ್ಯದಲ್ಲಿ ಬರಲಿಲ್ಲವಲ್ಲ ಎಂದು ಯಾರೋ ಇದನ್ನು ಸೇರಿಸಿದ್ದರೂ ಇರಬಹುದೆಂದು ತೋರುತ್ತದೆ. 'ಪ್ರಜ್ಞಾನಘನಭೂತಃ ಸ ವೈ ಸ ಏವ ಸರ್ವೇಷಾಂ ಭೂತಾನಾಮಯಮಾತ್ಮಾ ಸರ್ವೈರುಪಾಸ್ಯಃ' ಎಂದಿಷ್ಟೇ ಇದ್ದರೂ ಸಾಕಾಗುತ್ತದೆ.

2. ಆತ್ಮನೆಂದೇ ಉಪಾಸನೆಮಾಡಬೇಕು ಎಂದು ಹೇಳಿದ ಪೂರ್ಣಾತ್ಮನು ಎಂದರ್ಥ.

3. ರಾಜಕುಮಾರಾದಿಗಳು ಅಧಿಪತಿಗಳಾದರೂ ಸ್ವತಂತ್ರರಲ್ಲ, ರಾಜನೇ ಸ್ವತಂತ್ರನು.

4. ರಾಜನೂ ಅಧಿಪತಿಯೂ ಆಗಿದ್ದರೇ ಪೂರ್ಣಾಧಿಕಾರವಿದ್ದು ಅದನ್ನು ಸ್ವಾತಂತ್ರ್ಯದಿಂದ ನಡೆಯಿಸುವವನು ಎಂದರ್ಥವಾಗುತ್ತದೆ ಎಂದು ಭಾವ. ಈ ವಿಶೇಷಣಗಳು ಆತ್ಮಸ್ವರೂಪಕ್ಕೇ ಸೇರಿದವು, ಉಪಾಸ್ಯವಾದ ಸಗುಣಬ್ರಹ್ಮದವಲ್ಲ.

5. ಅವೇತ್ ಎಂಬ ಮಾತು ಇಲ್ಲಿದ್ದರೇ ಹೀಗೆ ಪೂರ್ಣವಾಗಿ ವಾಕ್ಯವಾಗುವದು.

6. ಅಜ್ಞಾನದಿಂದಲೇ ಅಬ್ರಹ್ಮ, ಅಸರ್ವ ; ಜ್ಞಾನದಿಂದ ಬ್ರಹ್ಮ, ಸರ್ವ. ಇಷ್ಟೇ ಹೊರತು ಮೊದಲು ನಿಜವಾಗಿ ಅಬ್ರಹ್ಮವೂ ಅಸರ್ವವೂ ಆಗಿದ್ದು ಹೊಸದಾಗಿ ಬ್ರಹ್ಮವೂ ಸರ್ವವೂ ಆಗಲಿಲ್ಲ.

# ಬ್ರಹ್ಮಜ್ಞಾನಿಯು ಸರ್ವಾಶ್ರಯನು

(ಭಾಷ್ಯ)

೩೯೮. ಪರಿಸಮಾಪ್ತಃ ಶಾಸ್ತ್ರಾರ್ಥೋ ಯದರ್ಥಃ ಪ್ರಸ್ತುತಃ । ತಸ್ಮಿನ್ ಏತಸ್ಮಿನ್ ಸರ್ವಾತ್ಮಭೂತೇ ಬ್ರಹ್ಮವಿದಿ ಸರ್ವಾತ್ಮನಿ ಸರ್ವಂ ಜಗತ್ ಸಮರ್ಪಿತಮ್ ಇತ್ಯೇತಸ್ಮಿನ್ನರ್ಥೇ ದೃಷ್ಟಾನ್ತ ಉಪಾದೀಯತೇ । ತದ್ಯಥಾ ರಥನಾಭೌ ಚ ರಥನೇಮೌ ಚ ಅರಾಃ ಸರ್ವೇ ಸಮರ್ಪಿತಾಃ ಇತಿ ಪ್ರಸಿದ್ಧೋಽರ್ಥಃ । ಏವಮೇವ ಅಸ್ಮಿನ್ನಾತ್ಮನಿ ಪರಮಾತ್ಮಭೂತೇ ಬ್ರಹ್ಮವಿದಿ ಸರ್ವಾಣಿ ಭೂತಾನಿ ಬ್ರಹ್ಮಾದಿಸ್ತಮ್ಬಪರ್ಯನ್ತಾನಿ ಸರ್ವೇ ದೇವಾ ಅಗ್ನ್ಯಾದಯಃ ಸರ್ವೇ ಲೋಕಾಃ ಭೂರಾದಯಃ ಸರ್ವೇ ಪ್ರಾಣಾಃ ವಾಗಾದಯಃ ಸರ್ವ ಏತೇ ಆತ್ಮಾನಃ ಜಲಚನ್ದ್ರವತ್ ಪ್ರತಿಶರೀರಾನುಪ್ರವೇಶಿನೋಽವಿದ್ಯಾಕಲ್ಪಿತಾಃ । ಸರ್ವಂ ಜಗತ್ ಅಸ್ಮಿನ್ ಸಮರ್ಪಿತಮ್ । ಯದುಕ್ತಂ ಬ್ರಹ್ಮವಿದ್ "ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ" ಸ ಏಷ ಸರ್ವಾತ್ಮಭಾವೋ ವ್ಯಾಖ್ಯಾತಃ । ಸ ಏಷ ವಿದ್ವಾನ್ ಸರ್ವೋಪಾಧಿಃ ಸರ್ವಾತ್ಮಾ ಸರ್ವೋ ಭವತಿ । ನಿರುಪಾಧಿರ್ನಿರುಪಾಖ್ಯೋಽನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನೋಽಜೋಽಜರೋಽಮರೋಽಭಯೋಽಮೃತೋಽಚಲೋ ನೇತಿ ನೇತಿ, ಅಸ್ಥೂಲೋಽನಣುಃ— ಇತ್ಯೇವಂವಿಶೇಷಣೋ ಭವತಿ ॥

(ಭಾಷ್ಯಾರ್ಥ)

ಯಾವ (ಅರ್ಥವನ್ನು ವಿವರಿಸುವ)ದಕ್ಕಾಗಿ (ಶಾಸ್ತ್ರವಿಚಾರವು) ಪ್ರಾರಂಭವಾಗಿತ್ತೋ ಆ ಶಾಸ್ತ್ರಾರ್ಥವು[2] ಮುಗಿಯಿತು. ಆ ಈ ಸರ್ವಾತ್ಮಭೂತನಾದ ಬ್ರಹ್ಮಜ್ಞಾನಿ ಎಂಬ ಸರ್ವಾತ್ಮನಲ್ಲಿ ಸರ್ವಜಗತ್ತೂ ಇಡಲ್ಪಟ್ಟಿದೆ –ಎಂಬೀ ಅರ್ಥದಲ್ಲಿ ದೃಷ್ಟಾಂತವನ್ನು (ಶ್ರುತಿಯು) ತೆಗೆದುಕೊಳ್ಳುತ್ತಿದೆ. ಅದು ಹೇಗೆಂದರೆ ರಥ(ಚಕ್ರದ) ಗುಂಬದಲ್ಲಿಯೂ ರಥ(ಚಕ್ರದ) ಹಳಿಯಲ್ಲಿಯೂ ಹಾರೆಕೋಲುಗಳೆಲ್ಲವೂ ಸೇರಿಕೊಂಡಿರುತ್ತವೆ ಎಂಬರ್ಥವು ಪ್ರಸಿದ್ಧವಷ್ಟೆ[3]. ಹೀಗೆಯೇ ಈ ಆತ್ಮನಲ್ಲಿ ಎಂದರೆ ಪರಮಾತ್ಮನಾದ ಬ್ರಹ್ಮಜ್ಞಾನಿಯಲ್ಲಿ ಬ್ರಹ್ಮನಿಂದ ಹಿಡಿದು ಸ್ತಂಬದಪರ್ಯಂತವಾಗಿರುವ ಸರ್ವಭೂತಗಳೂ, ಅಗ್ನಿಯೇ

1. ಅಮರೋಽಮೃತೋ ಎಂಬ ಪಾಠವನ್ನೇ ಇಟ್ಟುಕೊಂಡಿದೆ.

2. ಜ್ಞಾನದಿಂದ ಸರ್ವಾತ್ಮಭಾವವೆಂಬುದೇ ಶಾಸ್ತ್ರಾರ್ಥ.

3. ಈ ದೃಷ್ಟಾಂತದ ಬಲದಿಂದ ಭರ್ತೃಪ್ರಪಂಚರು ತನ್ನ ಆತ್ಮನನ್ನು ಪರಮಾತ್ಮನಲ್ಲಿ ಏಕೀಕರಣಮಾಡಿಕೊಂಡು ತಾನು ಬ್ರಹ್ಮಚಕ್ರದ ಗುಂಬ, ಶರೀರವು ಹಳಿ, ದೇವತಾದಿ ಜಗತ್ತು ಹಾರೆಕೋಲುಗಳು ಎಂದು ಭಾವನೆಮಾಡಿ ಸಾಕ್ಷಾತ್ಕಾರಮಾಡಿಕೊಂಡರೆ ಸರ್ವೋಪಾಸ್ಯನಾಗುವನು –ಎಂದು ವ್ಯಾಖ್ಯಾನಮಾಡಿರುತ್ತಾರೆ. ಇದರ ಅನುವಾದವೂ ಖಂಡನೆಯೂ ಬೃ. ವಾ. ೬೮, ೬೯ರಿಂದ ೭೫ರವರೆಗಿನ ಗ್ರಂಥದಲ್ಲಿದೆ.

ಮುಂತಾದ ಸರ್ವದೇವತೆಗಳೂ ಭೂರಾದಿಯಾದ ಸಮಸ್ತಲೋಕಗಳೂ ವಾಗಾದಿಯಾದ ಎಲ್ಲಾ ಪ್ರಾಣಗಳೂ **ಜಲಚಂದ್ರರಂತೆ ಒಂದೊಂದು ಶರೀರದೊಳಗೂ ಹೊಕ್ಕಿರುವ ಅವಿದ್ಯಾಕಲ್ಪಿತರಾದ ಈ ಎಲ್ಲಾ ಆತ್ಮರುಗಳೂ** – (ಈ) ಎಲ್ಲಾ ಜಗತ್ತೂ ಇದರಲ್ಲಿ ಸೇರಿಕೊಂಡಿರುತ್ತದೆ[1] ಬ್ರಹ್ಮವನ್ನು ಅರಿತುಕೊಂಡು 'ವಾಮದೇವನು ನಾನು ಮನುವೂ ಸೂರ್ಯನೂ ನಾನೇ ಆಗಿದ್ದೆನು'[2] (೧-೪-೧೦) ಎಂದು ಹೇಳಿತ್ತಷ್ಟೆ ; ಆ ಈ ಸರ್ವಾತ್ಮಭಾವವನ್ನು ವಿವ ಸಿದ್ಧಾಯಿತು. ಆ ಈ ಜ್ಞಾನಿಯಾದ ಬ್ರಹ್ಮವಿದನು ಸರ್ವೋಪಾಧಿಗಳಿಂದ ಸರ್ವಾತ್ಮನೂ ಸರ್ವವೂ ಆಗಿರುತ್ತಾನೆ ; ನಿರುಪಾಧಿಕನಾಗಿ ನಿರುಪಾಖ್ಯನೂ ಅನಂತರನೂ ಅಬಾಹ್ಯನೂ ಕೃತ್ಸ್ನನೂ ಪ್ರಜ್ಞಾನಘನನೂ ಅಜನೂ ಅಮರನೂ ಅಮೃತನೂ[3] ಅಭಯನೂ ಅಚಲನೂ 'ಹೀಗಲ್ಲ, ಹೀಗಲ್ಲ', 'ಅಸ್ಥೂಲನು, ಅನಣುವು' ಎಂಬೀ ವಿಶೇಷಣಗಳುಳ್ಳವನಾಗಿರುವನು[4].

## ಆತ್ಮತತ್ತ್ವವು ತರ್ಕಾತೀತ, ಆಗಮಮಾತ್ರಗಮ್ಯ

(ಭಾಷ್ಯ)

೩೯. ತಮೇತಮರ್ಥಮ್ ಅಜಾನನ್ತಸ್ತಾರ್ಕಿಕಾಃ ಕೇಚಿತ್ ಪಣ್ಡಿತಂಮನ್ಯಾಶ್ಚ ಆಗಮವಿದಃ ಶಾಸ್ತ್ರಾರ್ಥಂ ಉಪಯನ್ತಿ[5] ತಮೇತಮರ್ಥಮ್ ಏತೌ ಮನ್ತ್ರೌ ಅನುವದತಃ– "ಅನೇಜದೇಕಂ ಮನಸೋ ಜವೀಯಃ" (ಈ. ೪) "ತದೇಜತಿ ತನ್ನೈಜತಿ" (ಈ. ೫) ಇತಿ । ತಥಾ ಚ ತೈತ್ತಿರೀಯಕೇ "ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್" (ತೈ. ನಾ. ೧೦-೪)), "ಏತತ್ ಸಾಮಗಾಯನ್ನಾಸ್ತೇ । ಅಹಮನ್ನಮಹಮನ್ನಮಹಮನ್ನಮ್" (ತೈ. ೩-೧೦) ಇತ್ಯಾದಿ ತಥಾ ಚ ಛಾನ್ದೋಗ್ಯೇ "ಜಕ್ಷತ್ ಕ್ರೀಡನ್ರಮಮಾಣಃ" (ಛಾ. ೮-೧೨-೩) "ಸ ಯದಿ ಪಿತೃಲೋಕಕಾಮಃ" (ಛಾಂ. ೮-೨-೧) "ಸರ್ವಗನ್ಧಃ ಸರ್ವರಸಃ" (ಛಾಂ. ೩-೧೪-೨), ["ಸರ್ವಜ್ಞಃ ಸರ್ವವಿತ್" (ಮುಂ. ೧-೧-೯)][6]

1. ಎಲ್ಲಕ್ಕೂ ಇವನೇ ಆಧಾರನಾಗಿರುತ್ತಾನೆ ಎಂದರ್ಥ. ಸರ್ವಜಗತ್ತೂ ಪರಮಾತ್ಮನಲ್ಲಿ ಅವಿದ್ಯಾಕಲ್ಪಿತವಾಗಿರುವದರಿಂದ ಅವನು ಸರ್ವಾಧಾರನು.

2. 'ಆದೆನು' ಎಂದೂ ಇದನ್ನು ಕನ್ನಡಿಸಬಹುದು.

3. ಸಾಯುವ ಸ್ವಭಾವವಿಲ್ಲದವನು.

4. ಉಪಾಧಿಯ ಅಪೇಕ್ಷೆಯಿಂದ ಬೇರೆಬೇರೆಯ ರೂಪದವನೂ ಉಪಾಧಿರಹಿತನಾಗಿ ಸ್ವರೂಪದಿಂದ ನಿರ್ವಿಶೇಷನೂ ಆಗಿರುತ್ತಾನೆ ಎಂದರ್ಥ. ಐ. ಭಾ. ೩-೧ (ಭಾ.ಭಾ. ೮೮) ನೋಡಿ.

5. ಉಪಯೂನ್ತಿ ಎಂಬ ಪಾಠವೂ ಆಗಬಹುದು.

6. 'ಸರ್ವಜ್ಞಃ ಸರ್ವವಿತ್' ಎಂಬ ವಾಕ್ಯವು ಹಿಂದಿನ ಮಂತ್ರದಲ್ಲಿಲ್ಲ ; ಮುಂಡಕವನ್ನು ಅಥರ್ವಣೇ ಚ ಎಂದು ಬೇರೆಯಾಗಿಯೇ ಪ್ರಾರಂಭಿಸಿರುವದರಿಂದ ಆ ಶ್ರುತಿಯು ಇಲ್ಲಿಗೆ ಹೊಂದುವದಿಲ್ಲ. ಆದ್ದರಿಂದ ಈ ಶ್ರುತಿಯು ಲೇಖಕರ ಪ್ರಮಾದದಿಂದ ಹೆಚ್ಚಾಗಿ ಬಿದ್ದಿರಬೇಕೆಂದು ಕಲ್ಪಿಸಿದೆ.

ಇತ್ಯಾದಿ। ಆಥರ್ವಣೇ ಚ "ದೂರಾತ್ಸುದೂರೇ ತದಿಹಾನ್ತಿಕೇ ಚ" (ಮುಂ. ೩-೧-೭) ಕಠವಲ್ಲೀಷ್ವಪಿ "ಅಣೋರಣೀಯಾನ್ಮಹತೋ ಮಹೀಯಾನ್" (ಕ. ೧-೨-೨೧) "ಕಸ್ತಂ ಮದಾಮದಂ ದೇವಮ್" (ಕ. ೧-೨-೨೧), ["ತದ್ಧಾವತೋಽನ್ಯಾನತ್ಯೇತಿ ತಿಷ್ಠತ್" (ಈ. ೪)][1] ಇತಿ ಚ । ತಥಾ ಗೀತಾಸು "ಅಹಂ ಕ್ರತುರಹಂ ಯಜ್ಞಃ" (ಗಿ. ೯-೧೦), "ಪಿತಾಹಮಸ್ಯ ಜಗತಃ" (ಗೀ. ೯-೧೭), "ನಾದತ್ತೇ ಕಸ್ಯಚಿತ್ ಪಾಪಮ್" (ಗೀ. ೫-೧೦), "ಸಮಂ ಸರ್ವೇಷು ಭೂತೇಷು" (ಗೀ. ೧-೩-೭), "ಅವಿಭಕ್ತಂ ವಿಭಕ್ತೇಷು" (ಗೀ. ೧೭-೨೦), "ಗ್ರಸಿಷ್ಣು ಪ್ರಭವಿಷ್ಣು ಚ" (ಗೀ. ೧೩-೧೬) -ಇತಿ । ಏವಮಾದ್ಯಾಗಮಾರ್ಥಂ ಪಿರುದ್ಧಮಿವ ಪ್ರತಿಭಾನ್ತಂ ಮನ್ಯಮಾನಾಃ ಸ್ವಚಿತ್ತಸಾಮರ್ಥ್ಯಾತ್ ಅರ್ಥನಿರ್ಣಯಾಯ ವಿಕಲ್ಪಯನ್ತಃ[2] 'ಅಸ್ತ್ಯಾತ್ಮಾ ನಾಸ್ತ್ಯಾತ್ಮಾ' ಕರ್ತಾ ಅಕರ್ತಾ, ಮುಕ್ತೋ ಬದ್ಧಃ, ಕ್ಷಣಿಕೋ ವಿಜ್ಞಾನಮಾತ್ರಂ ಶೂನ್ಯಂ ಚ- ಇತ್ಯೇವಂ ವಿಕಲ್ಪಯನ್ತಃ ನ ಪಾರಮ್ ಅಧಿಗಚ್ಛನ್ತ್ಯವಿದ್ಯಾಯಾಃ ವಿರುದ್ಧಧರ್ಮದರ್ಶಿತ್ವಾತ್ ಸರ್ವತ್ರ। ತಸ್ಮಾತ್ ತತ್ರ ಯ ಏವ ಶ್ರುತ್ಯಾಚಾರ್ಯದರ್ಶಿತಮಾರ್ಗಾನುಸಾರಿಣಃ, ತ ಏವಾವಿದ್ಯಾಯಾಃ ಪಾರಮ್ ಅಧಿಗಚ್ಛನ್ತಿ। ತ ಏವ ಚಾಸ್ಮಾನ್ ಮೋಹಸಮುದ್ರಾತ್ ಅಗಾಧಾತ್ ಉತ್ತರಿಷ್ಯನ್ತಿ, ನೇತರೇ ಸ್ವಬುದ್ಧಿಕೌಶಲಾನುಸಾರಿಣಃ ॥

(ಭಾಷ್ಯಾರ್ಥ)

ಆ ಈ ಅರ್ಥವನ್ನು[3] ಅರಿತುಕೊಳ್ಳದ **ತಾರ್ಕಿಕರು,** ತಾವೇ ಪಂಡಿತರೆಂದುಕೊಂಡಿರುವ ಆಗಮವಿದರೂ[4] ಶಾಸ್ತ್ರಾರ್ಥವು (ಪರಸ್ಪರ)ವಿರುದ್ಧವಾಗಿರುವದೆಂದು ಭಾವಿಸಿ ವಿರುದ್ಧವಾಗಿ ಕಲ್ಪಿಸುತ್ತಾ ಹೆಚ್ಚಿನ ಮೋಹವನ್ನು ಹೊಂದುತ್ತಿರುವರು[5]. ಆ ಈ ಅರ್ಥವನ್ನು ಈ ಎರಡು ಮಂತ್ರಗಳು ಅನುವಾದ

---

1. ಕಂಸದಲ್ಲಿರುವ ಈ ವಾಕ್ಯವು ಹೆಚ್ಚೆಂದು ತೋರುತ್ತದೆ.

2. ಈ ಮಾತು ಇಲ್ಲದೆಯೇ ವಾಕ್ಯವು ಪೂರ್ಣವಾಗುತ್ತದೆ; ಅನ್ವಯಕ್ಕಾಗಿ ಮತ್ತೊಂದು 'ವಿಕಲ್ಪಯನ್ತಃ' ಬಂದಿದೆ ಎಂದೂ ಕಲ್ಪಿಸಬಹುದು.

3. ಸೋಪಾಧಿಕನಿರುಪಾಧಿಕಭೇದದಿಂದ ಅವಿರೋಧವೆಂಬುದನ್ನು

4. ಆಗಮವನ್ನರಿಯದವರು ಎಂಬರ್ಥದಲ್ಲಿ ವಿಪರೀತಲಕ್ಷಣೆಯಿಂದ ಪ್ರಯೋಗಿಸಿದೆ. ಶಾಸ್ತ್ರಾರ್ಥವನ್ನು ಬೇರೆ ರೀತಿಯಿಂದ ಅರ್ಥಮಾಡಿಬೇಕೆನ್ನುವ ಮೀಮಾಂಸಕರನ್ನೂ ವೇದಾಂತಿಗಳನ್ನೂ ಈ ಗುಂಪಿನಲ್ಲಿ ಆಡಕಮಾಡಿದೆ.

5. ಒಬ್ಬರಿಗೊಬ್ಬರು ವಿರುದ್ಧವಾಗಿ ಅಭಿಪ್ರಾಯಪಡುತ್ತಾ, ಶಾಸ್ತ್ರವನ್ನು ಬಿಟ್ಟು ಮೋಹದಿಂದ ಸಂಸಾರಕ್ಕೆ ಪಕ್ಕಾಗುತ್ತಿರುವರು.

ಮಾಡುತ್ತವೆ[1]. "ತಾನೊಂದೇ ಆಗಿ ಚಲಿಸದೆ ಇರುವದು, ಮನಸ್ಸಿಗಿಂತಲೂ ವೇಗವುಳ್ಳದ್ದು" (ಈ. ೪), "ಅದು ಚಲಿಸುತ್ತದೆ, ಅದು ಚಲಿಸುವದಿಲ್ಲ" (ಈ. ೫)[2]. ಹೀಗೆಯೇ ತೈತ್ತಿರೀಯಕದಲ್ಲಿ "ಅದಕ್ಕಿಂತ ಹೆಚ್ಚಿನದಾಗಲಿ ಕಡಿಮೆಯದಾಗಲಿ ಯಾವದೊಂದೂ ಇರುವದಿಲ್ಲ" (ತೈ.ನಾ. ೧೦-೪)[3] "ಈ ಸಾಮವನ್ನು ಗಾನಮಾಡುತ್ತಾ ಕುಳಿತಿರುವನು : 'ನಾನು ಅನ್ನವು, ನಾನು ಅನ್ನವು, ನಾನು ಅನ್ನವು'......" (ತೈ. ೩-೧೦) ಮುಂತಾಗಿ[4]. ಹೀಗೆಯೇ ಛಾಂದೋಗ್ಯದಲ್ಲಿ "ತಿನ್ನುತ್ತಾ, ಆಡುತ್ತಾ, ರಮಿಸುತ್ತಾ" (ಛಾಂ. ೮-೧೨-೩)[5], "ಅವನು ಪಿತೃಲೋಕಕಾಮನಾದರೆ (ಸಂಕಲ್ಪಮಾತ್ರದಿಂದ ಅವರು ಬಂದು ನಿಲ್ಲುವರು)" (ಛಾಂ. ೮-೨-೧)[6], "ಸರ್ವಗಂಧಗಳುಳ್ಳವನು, ಸರ್ವರಸಗಳುಳ್ಳವನು....[7]" (ಛಾಂ. ೩-೧೪-೨), ["ಯಾವನು ಸರ್ವಜ್ಞನೋ ಸರ್ವವಿತ್ತೋ" (ಮುಂ. ೧-೧-೯) ][8] ಎಂದು ಮುಂತಾಗಿದೆ. ಆಥರ್ವಣದಲ್ಲಿಯೂ "ದೂರಕ್ಕಿಂತಲೂ ಹೆಚ್ಚು ದೂರದಲ್ಲಿರುವವನು, ಅದು ಇಲ್ಲಿಯೇ ಇರುವದು" (ಮು೦. ೩-೧-೭ ಎಂದಿದೆ). ಕಠವಲ್ಲಿಗಳಲ್ಲಿಯೂ "ಅಣುವಿಗಿಂತಲೂ ಅಣುವಾಗಿರುವ, ಮಹತ್ತಿಗಿಂತಲೂ ಮಹತ್ತಾಗಿರುವ (ಆತ್ಮನು)" (ಕ. ೨-೧-೨೦), "ಆ ಮದಾಮದನಾದ ದೇವನನ್ನು (ನನಗಿಂತ ಬೇರೆ ಯಾವನು ತಿಳಿದಾನು) ?" (ಕ.೨-೧-೨೧) [ಅದು ಓಡುತ್ತಿರುವ ಮಿಕ್ಕವರನ್ನು ನಿಂತುಕೊಂಡೇ ಅತಿಕ್ರಮಿಸಿರುವದು"

---

1. ಈ ಮಂತ್ರಗಳು ಪ್ರಮಾಣಾಂತರದಿಂದ ತಿಳಿದದ್ದನ್ನು ಅನುವಾದಮಾಡುತ್ತವೆ ಎಂದೇನೂ ಅರ್ಥವಲ್ಲ ; ಸೋಪಾಧಿಕನಿರುಪಾಧಿಕರೂಪಭೇದವನ್ನನುಸರಿಸಿ ಹೇಳುತ್ತವೆ ಎಂದೇ ಅರ್ಥ.

2. ಸೋಪಾಧಿಕವಾಗಿ ಚಲಿಸುತ್ತದೆ, ನಿರುಪಾಧಿಕವಾಗಿ ಚಲಿಸುವದಿಲ್ಲ ಎಂದರ್ಥ.

3. ಸೋಪಾಧಿಕರೂಪದಿಂದ ಅದು ಎಲ್ಲಕ್ಕೂ ಹೆಚ್ಚಿನದು, ಎಲ್ಲಕ್ಕೂ ಕಡಿಮೆಯದು ; ಪರಮಾರ್ಥವಾಗಿ ಅದ್ವಿತೀಯ.

4. 'ನಾನು ಅನ್ನಾದನು' ಮುಂತಾದ ವಾಕ್ಯವನ್ನು ಸೇರಿಸಿಕೊಳ್ಳಬೇಕು. ಅನ್ನವೂ ಅನ್ನಾದನೂ ಒಬ್ಬನೇ ಆಗಿರುವದು ಉಪಾಧಿಭೇದದಿಂದ.

5. ತನ್ನ ರೂಪದಿಂದ ನಿಲ್ಲುತ್ತಾನೆ, ಅವನು ಉತ್ತಮಪುರುಷನು' ಎಂಬ ಹಿಂದಿನ ವಾಕ್ಯಕ್ಕೆ ಇದು ವಿರುದ್ಧವಾಗಿರುವಂತೆ ತೋರುತ್ತದೆಯೆಂದು ಭಾವ.

6. ಬ್ರಹ್ಮಲೋಕಕ್ಕೆ ಪ್ರತಿದಿನವೂ ಜೀವರು ಹೋಗುತ್ತಿರುತ್ತಾರೆಂಬ ವಚನಕ್ಕೆ ಇದು ವಿರುದ್ಧವಾಗಿ ತೋರುತ್ತಿದೆ ಎಂದು ಭಾವ.

7. ಈ ವಾಕ್ಯದಲ್ಲಿ ಸರ್ವಗಂಧಗಳೇ ಮುಂತಾದ ನನ್ನ ಆತ್ಮನನ್ನು ಇಲ್ಲಿಂದ ಹೊರಟು ಹೋಗಿ ಪಡೆಯುವೆನು ಎಂಬುದು ವ್ಯಾಹತವಚನದಂತೆ ಕಾಣುತ್ತಿದೆ ಎಂದು ಭಾವ.

8. ಈ ಮುಂಡಕವಾಕ್ಯವು ಇಲ್ಲಿ ಬರಲು ಕಾರಣವಿಲ್ಲ; 'ಎಂದು ಮುಂತಾಗಿ' ಎಂಬುದು ಛಾಂದೋಗ್ಯಕ್ಕೆ ಸೇರತಕ್ಕದ್ದು. ಆದ್ದರಿಂದ ಯಾರೋ ಇದನ್ನು ಸೇರಿಸಿರಬೇಕು.

(ಈ. ೪) ][1] ಎಂದೂ (ಇದೆ). ಮತ್ತು **ಗೀತೆಗಳಲ್ಲಿಯೂ** "ನಾನು ಕ್ರತುವು, ನಾನೇ ಯಜ್ಞವು" (ಗೀ.೯-೧೦) "ನಾನು ಈ ಜಗತ್ತಿಗೆ ತಂದೆ" (ಗೀ.೯-೧೭), "ಯಾವನ ಪಾಪವನ್ನೂ ತೆಗೆದುಕೊಳ್ಳುವದಿಲ್ಲ" (ಗೀ. ೫-೧೧), "ಸರ್ವಭೂತಗಳಲ್ಲಿಯೂ ಸಮನಾಗಿ'' (ಗೀ. ೧೩-೭), "ವಿಭಕ್ತರಾದವರಲ್ಲಿ (ತಾನು) ಅವಿಭಕ್ತವಾಗಿರುವದು" (ಗೀ ೧೭-೨೦), "ನುಂಗುವದೂ ಉಂಟುಮಾಡತಕ್ಕದ್ದೂ" (ಗೀ. ೧೩-೧೬)- ಇದೇ ಮುಂತಾದ ಆಗಮಾರ್ಥವನ್ನು ನಿರ್ಣಯಿಸುವದಕ್ಕಾಗಿ ವಿಕಲ್ಪಿಸುತ್ತಾ[2] 'ಆತ್ಮನು ಇರುತ್ತಾನೆ, ಆತ್ಮನು ಇರುವದಿಲ್ಲ; ಕರ್ತೃ, ಅಕರ್ತೃ; ಮುಕ್ತನು, ಬದ್ಧನು; ಕ್ಷಣಿಕನಾದ ವಿಜ್ಞಾನಮಾತ್ರ (ಸ್ವರೂಪನು), ಶೂನ್ಯನು" ಎಂದಿಂತು ವಿಕಲ್ಪಿಸುತ್ತಾ[3] ಎಲ್ಲೆಲ್ಲಿಯೂ ವಿರುದ್ಧ ಧರ್ಮಗಳನ್ನೇ ಕಾಣುವವರಾಗಿ ಅವಿದ್ಯೆಯ (ೞ) ಕಡೆಯನ್ನು ಕಾಣದಿರುವರು. ಆದ್ದರಿಂದ ಇಲ್ಲಿ ಯಾರು ಶ್ರುತ್ಯಾಚಾರ್ಯರುಗಳು ತೋರಿಸಿಕೊಟ್ಟಿರುವ ಮಾರ್ಗವನ್ನು ಅನುಸರಿಸುವವರೋ ಅವರೇ ಅವಿದ್ಯೆಯ ಪಾರವನ್ನು ಸೇರುವರು ; ಅವರೇ ನಮ್ಮನ್ನು ಅಗಾಧವಾದ ಮೋಹಸಮುದ್ರದಿಂದ ದಾಟಿಸುವರೇ ಹೊರತು ತಮ್ಮ ಬುದ್ಧಿಯ ಕೌಶಲವನ್ನೇ ಅನುಸರಿಸುತ್ತಿರುವವರಲ್ಲ.

## ಬ್ರಹ್ಮವಿದ್ಯೆಯ ಸ್ತುತಿ

(ಭಾಷ್ಯ)

೪೦೦. ಪರಿಸಮಾಪ್ತಾ ಬ್ರಹ್ಮವಿದ್ಯಾ ಅಮೃತತ್ವಸಾಧನಭೂತಾ । ಯಾಂ ಮೈತ್ರೇಯೀ ಪೃಷ್ಟವತೀ ಭರ್ತಾರಂ "ಯದೇವ ಭಗವಾನಮೃತತ್ವಸಾಧನಂ ವೇದ ತದೇವ ಮೇ ಬ್ರೂಹಿ" (೨-೪-೩) ಇತಿ । ಏತಸ್ಯಾ ಬ್ರಹ್ಮವಿದ್ಯಾಯಾಃ ಸ್ತುತ್ಯರ್ಥಾ ಇಯಮಾಖ್ಯಾಯಿಕಾ ಆನೀತಾ । ತಸ್ಯಾ ಆಖ್ಯಾಯಿಕಾಯಾಃ ಸಂಕ್ಷೇಪತೋಽರ್ಥಪ್ರಕಾಶನಾರ್ಥೌ ಏತೌ ಮನ್ತ್ರೌ ಭವತಃ । ಏವಂ ಹಿ ಮನ್ತ್ರಬ್ರಾಹ್ಮಣಾಭ್ಯಾಂ ಸ್ತುತತ್ವಾತ್ ಅಮೃತತ್ವಸರ್ವಪ್ರಾಪ್ತಿಸಾಧನತ್ವಂ ಬ್ರಹ್ಮವಿದ್ಯಾಯಾಃ ಪ್ರಕಟೀಕೃತಂ ರಾಜಮಾರ್ಗಮುಪನೀತಂ ಭವತಿ । ಯಥಾ ಆದಿತ್ಯ ಉದ್ಯನ್ ಶಾರ್ವರಂ ತಮೋಽಪನಯತೀತಿ ತದ್ವತ್ । ಅಪಿ ಚೈವಂ ಸ್ತುತಾ ಬ್ರಹ್ಮವಿದ್ಯಾ । ಯಾ ಇನ್ದ್ರರಕ್ಷಿತಾ[4] ಸಾ ದುಷ್ಪ್ರಾಪ್ಯಾ ದೇವೈರಪಿ ।

---

1. ಹಿಂದೆ ಈಶೋಪನಿಷತ್ತಿನ ಎರಡು ಮಂತ್ರಗಳನ್ನು ಉದಾಹರಿಸಿದ್ದಾಗಿದೆ ; ಇಲ್ಲಿ ಮತ್ತೆ ಕಠವಲ್ಲಿಗಳ ವಚನಗಳ ಜೊತೆಗೆ ಬರಲು ಕಾರಣವಿಲ್ಲ. ಆದ್ದರಿಂದ ಇದನ್ನು ಯಾರೋ ಹೆಚ್ಚಾಗಿ ಸೇರಿಸಿರಬೇಕು.

2. ವಿಕಲ್ಪಿಸುತ್ತಾ ಎಂಬ ಮಾತು ಮುಂದೂ ಬಂದಿದೆ. ಅನ್ವಯಕ್ಕಾಗಿ ಹಾಗೆ ಬಂದಿದೆಯೋ ಪುನರುಕ್ತಿಯೋ ತಿಳಿಯದು.

3. ಐ.ಭಾ.ಭಾ. ೭ನ್ನು ನೋಡಿ. 4. 'ಇನ್ದ್ರರಾಜ' ಎಂಬಲ್ಲಿ 'ರಾಜ' ಹೆಚ್ಚು.

ಯಸ್ಮಾತ್ ಅಶ್ವಿಭ್ಯಾಮಪಿ ದೇವಭಿಷಗ್ಭ್ಯಾಮ್ ಇನ್ದ್ರರಕ್ಷಿತಾ ವಿದ್ಯಾ ಮಹತಾ ಆಯಾಸೇನ ಪ್ರಾಪ್ತಾ । ಬ್ರಾಹ್ಮಣಸ್ಯ ಶಿರಶ್ಛಿತ್ತ್ವಾ ಅಶ್ವ್ಯಂ ಶಿರಃ ಪ್ರತಿಸಂಧಾಯ ತಸ್ಮಿನ್ ಇನ್ದ್ರೇಣ ಛಿನ್ನೇ ಪುನಃ ಸ್ವಶಿರ ಏವ ಪ್ರತಿಸಂಧಾಯ ತೇನ ಬ್ರಾಹ್ಮಣಸ್ಯ ಸ್ವಶಿರಸೈವೋಕ್ತಾ ಅಶೇಷಾ ಬ್ರಹ್ಮವಿದ್ಯಾ ಶ್ರುತಾ । ತಸ್ಮಾತ್ ತತಃ ಪರತರಂ ಕಿಂಚಿತ್ ಪುರುಷಾರ್ಥಸಾಧನಂ ನ ಭೂತಂ ನ ಭಾವಿ ವಾ ಕುತ ಏವ ವರ್ತಮಾನಮಿತಿ। ನಾತಃ ಪರಾ। ಸ್ತುತಿರಸ್ತಿ । ಅಪಿ ಚೈವಂ ಸ್ತೂಯತೇ ಬ್ರಹ್ಮವಿದ್ಯಾ । ಸರ್ವಪುರುಷಾರ್ಥಾನಾಂ ಕರ್ಮ ಹಿ ಸಾಧನಮಿತಿ ಲೋಕೇ ಪ್ರಸಿದ್ಧಮ್ । ತಚ್ಚ ಕರ್ಮ ವಿತ್ತಸಾಧ್ಯಮ್ । ತೇನ ಆಶಾಪಿ ನಾಸ್ತ್ಯಮೃತತ್ವಸ್ಯ । ತದಿದಮ್ ಅಮೃತತ್ವಂ ಕೇವಲಯಾ ಆತ್ಮವಿದ್ಯಯಾ ಕರ್ಮನಿರಪೇಕ್ಷಯಾ ಪ್ರಾಪ್ಯತೇ । ಯಸ್ಮಾತ್ ಕರ್ಮಪ್ರಕರಣೇ ವಕ್ತುಂ ಪ್ರಾಪ್ತಾಪಿ ಸತೀ ಪ್ರವರ್ಗ್ಯಪ್ರಕರಣೇ ಕರ್ಮಪ್ರಕರಣಾತ್ ಉತ್ತೀರ್ಯ ಕರ್ಮಣಾ ವಿರುದ್ಧತ್ವಾತ್ ಕೇವಲಾ ಸಂನ್ಯಾಸಸಹಿತಾ ಅಭಿಹಿತಾ[1] ಅಮೃತತ್ವಸಾಧನಾಯ । ತಸ್ಮಾನ್ನಾತಃ ಪರಂ ಪುರುಷಾರ್ಥಸಾಧನಮಸ್ತಿ । ಅಪಿ ಚೈವಂ ಸ್ತುತಾ ಬ್ರಹ್ಮವಿದ್ಯಾ । ಸರ್ವೋ ಹಿ ಲೋಕೋ ದ್ವಂದ್ವಾರಾಮಃ । "ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ" (೧-೪-೩) ಇತಿ ಶ್ರುತೇಃ । ಯಾಜ್ಞವಲ್ಕ್ಯೋ ಲೋಕಸಾಧಾರಣೋಽಪಿ ಸನ್ ಆತ್ಮಜ್ಞಾನಬಲಾತ್ ಭಾರ್ಯಾಪುತ್ರವಿತ್ತಾದಿಸಂಸಾರರತಿಂ ಪರಿತ್ಯಜ್ಯ ಪ್ರಜ್ಞಾನತೃಪ್ತ ಆತ್ಮರತಿರ್ಬಭೂವ । ಅಪಿ ಚೈವಂ ಸ್ತುತಾ ಬ್ರಹ್ಮವಿದ್ಯಾ । ಯಸ್ಮಾತ್ ಯಾಜ್ಞವಲ್ಕ್ಯೇನ ಸಂಸಾರಮಾರ್ಗಾತ್ ವ್ಯುತ್ತಿಷ್ಠತಾಪಿ ಪ್ರಿಯಾಯೈ ಭಾರ್ಯಾಯೈ ಪ್ರೀತ್ಯರ್ಥಮೇವ ಅಭಿಹಿತಾ । 'ಪ್ರಿಯಂ ಭಾಷಸ ಏಹ್ಯಾಸ್ಸ್ವ' (೨-೪-೪) ಇತಿ ಲಿಙ್ಗಾತ್ ॥

(ಭಾಷ್ಯಾರ್ಥ)

ಅಮೃತತ್ವಕ್ಕೆ ಸಾಧನವಾಗಿರುವ ಬ್ರಹ್ಮವಿದ್ಯೆಯು ಮುಗಿಯಿತು. ಇದನ್ನೇ ಮೈತ್ರೇಯಿಯು (ತನ್ನ) ಗಂಡನನ್ನು "ಅಮೃತತ್ವಕ್ಕೆ ಸಾಧನವೆಂದು ಪೂಜ್ಯನಾದ ನೀನು ತಿಳಿದಿರುವೆಯೋ ಅದನ್ನೇ ನನಗೆ ಹೇಳು" (೨-೪-೩) ಎಂದು ಕೇಳಿದ್ದು. ಈ ಬ್ರಹ್ಮವಿದ್ಯೆಯನ್ನು ಹೊಗಳುವದಕ್ಕಾಗಿ (ಶತಪಥಬ್ರಾಹ್ಮಣದಲ್ಲಿ) ಈ ಕಥೆಯನ್ನು ತಂದಿರುತ್ತದೆ. ಆ ಕಥೆಯ ಅರ್ಥವನ್ನು ಸಂಕ್ಷೇಪದಿಂದ ತಿಳಿಸುವದಕ್ಕಾಗಿ ಈ ಎರಡು ಮಂತ್ರಗಳು ಇರುತ್ತವೆ; ಏಕೆಂದರೆ ಹೀಗೆ ಮಂತ್ರಬ್ರಾಹ್ಮಣಗಳೆರಡೂ ಹೊಗಳಿರುವದರಿಂದ ಬ್ರಹ್ಮವಿದ್ಯೆಯು ಅಮೃತತ್ವವನ್ನು ಪಡೆಯುವದಕ್ಕೂ ಸರ್ವಾತ್ಮಪ್ರಾಪ್ತಿಗೂ ಸಾಧನವೆಂದು ಪ್ರಕಟಿಸಿ ರಾಜ

1. 'ಕೇವಲಸಂನ್ಯಾಸ' ಎಂಬ ಸಮಾಸಪಾಠಕ್ಕಿಂತ ಕೇವಲಾ ಎಂದು ಬಿಡಿಸಿರುವದೇ ಉತ್ತಮವೆಂದು ಕಲ್ಪಿಸಿದೆ.

ಮಾರ್ಗಕ್ಕೆ ತಂದಂತೆ ಆಗುತ್ತದೆ. ಸೂರ್ಯನು ಹುಟ್ಟಿದರೆ ರಾತ್ರಿಯ ಕತ್ತಲೆಯನ್ನು ತೊಲಗಿಸುತ್ತಾನೆ ಎಂಬುದು ಹೇಗೋ ಹಾಗೆಯೇ ಇದು.

ಮತ್ತು ಬ್ರಹ್ಮವಿದ್ಯೆಯನ್ನು ಹೀಗೂ ಹೊಗಳಿದಂತೆ (ಆಗಿದೆ. ಹೇಗೆಂದರೆ), ಇದು ಇಂದ್ರರಕ್ಷಿತವಾಗಿರುವದರಿಂದ ದೇವತೆಗಳಿಗೂ ಪಡೆಯಲಶದಳವಾದದ್ದು. ಏಕೆಂದರೆ ದೇವವೈದ್ಯರಾದ ಅಶ್ವಿನೀದೇವತೆಗಳು ಕೂಡ (ಈ) ಇಂದ್ರರಕ್ಷಿತವಾದ ವಿದ್ಯೆಯನ್ನು ಬಹಳ ಆಯಾಸದಿಂದ ಪಡೆದುಕೊಳ್ಳಬೇಕಾಯಿತು. ಬ್ರಾಹ್ಮಣನ ತಲೆಯನ್ನು ಕಡಿದು, ಕುದುರೆಯ ತಲೆಯನ್ನು (ಅವನಿಗೆ) ಜೋಡಿಸಿಟ್ಟು, ಅದನ್ನು ಇಂದ್ರನು ಕತ್ತರಿಸಲು ಮತ್ತೆ ಅವನ ತಲೆಯನ್ನೇ ಸೇರಿಸಿಟ್ಟು ಆ ಬ್ರಾಹ್ಮನು (ಆ) ತನ್ನ ತಲೆಯಿರುವ(ಬಾಯಿ)ಯಿಂದಲೇ ಹೇಳಿದ (ಈ) ಬ್ರಹ್ಮವಿದ್ಯೆಯನ್ನು ಸಂಪೂರ್ಣವಾಗಿ ಕೇಳಿದರು[1]. ಆದ್ದರಿಂದ ಇದಕ್ಕಿಂತ ಹೆಚ್ಚಿನ ಪುರುಷಾರ್ಥಸಾಧನವು ಹಿಂದಿರಲಿಲ್ಲ, ಮುಂದೆ ಇರುವದಿಲ್ಲ; ಇನ್ನು ಈಗ ಇದೆ ಎಂಬುದಾದರೂ ಎಲ್ಲಿ ಬಂತು? –ಎಂಬಿನಕ್ಕಿಂತ ಹೆಚ್ಚಿನ ಸ್ತುತಿಯು ಮತ್ತೆ ಯಾವದೂ ಇಲ್ಲ.

ಮತ್ತು ಬ್ರಹ್ಮವಿದ್ಯೆಯನ್ನು ಹೀಗೂ ಹೊಗಳಿದಂತೆ ಆಗಿದೆ. (ಹೇಗೆಂದರೆ) ಎಲ್ಲಾ ಪುರುಷಾರ್ಥಗಳಿಗೂ ಕರ್ಮವು ಸಾಧನವು ಎಂದಲ್ಲವೆ, ಪ್ರಸಿದ್ಧವಾಗಿರುತ್ತದೆ? ಆ ಕರ್ಮವು ವಿತ್ತದಿಂದ ಸಾಧಿಸತಕ್ಕದ್ದು; ಆ (ವಿತ್ತ)ದಿಂದ ಅಮೃತತ್ವದ ಆಶೆಯುಕೂಡ ಇರುವದಿಲ್ಲ. ಆ ಈ ಅಮೃತತ್ವವು ಕರ್ಮನಿರಪೇಕ್ಷವಾದ ಕೇವಲ ಆತ್ಮವಿದ್ಯೆಯಿಂದ ಪಡೆಯತಕ್ಕದ್ದಾಗಿರುತ್ತದೆ. ಏಕೆಂದರೆ ಕರ್ಮಪ್ರಕರಣವಾದ ಪ್ರವರ್ಗ್ಯದಲ್ಲಿ ಹೇಳಬೇಕಾಗಿ ಬಂದೊದಗಿದ್ದರೂ (ಇದು) ಕರ್ಮಕ್ಕೆ ವಿರುದ್ಧವಾಗಿರುವದರಿಂದ ಕರ್ಮಪ್ರಕರಣವನ್ನು ದಾಟಿ ಇದೊಂದನ್ನೇ ಸಂನ್ಯಾಸಸಹಿತವಾಗಿ ಅಮೃತತ್ವಕ್ಕೆ ಸಾಧನವಾಗಲೆಂದು (ಇಲ್ಲಿ) ಹೇಳಿರುತ್ತದೆ. ಆದ್ದರಿಂದ ಇದಕ್ಕಿಂತ ಹೆಚ್ಚಿನ ಪುರುಷಾರ್ಥಸಾಧನವು ಇರುವದಿಲ್ಲ (ಎಂದಂತಾಯಿತು).

ಮತ್ತು ಬ್ರಹ್ಮವಿದ್ಯೆಯನ್ನು ಹೀಗೂ ಹೊಗಳಿದಂತಾಗಿದೆ. (ಹೇಗೆಂದರೆ), ಎಲ್ಲಾ ಜನರೂ ದ್ವಂದ್ವಗಳಲ್ಲಿ ಕ್ರೀಡಿಸುತ್ತಿರುವರು. "ಅವನಿಗೆ ರತಿಯುಂಟಾಗಲೇ ಇಲ್ಲ. ಆದ್ದರಿಂದ ಒಂಟಿಯಾಗಿರುವವನಿಗೆ ರತಿಯುಂಟಾಗಿರುವದಿಲ್ಲ" (೧-೪-೩) ಎಂಬ ಶ್ರುತಿ(ಯಿಂದ ಇದು ತಿಳಿದುಬರುತ್ತದೆ). ಯಾಜ್ಞವಲ್ಕ್ಯನು

1. ಭಾ. ಭಾ. ೪೬೧ರಲ್ಲಿ ಹೇಳಿರುವ ಕಥೆಯಲ್ಲಿ ಅಶ್ವದ ಶಿರಸ್ಸಿನಿಂದಲೇ ಋಷಿಯು ಉಪದೇಶಿಸಿದನೆಂಬಂತೆ ಹೇಳಿದೆ. ಇಲ್ಲಿ ತನ್ನ ಶಿರಸ್ಸಿನಿಂದಲೇ ಹೇಳಿದನೆಂದು ಬರೆದಿರುವದಕ್ಕೆ ಕಾರಣವೇನೆಂಬುದು ತಿಳಿಯಲಿಲ್ಲ. 'ತೇನ ಬ್ರಾಹ್ಮಣಸ್ಯಾಶ್ವ ಶಿರಸೈವ' ಎಂದು ಮೂಲಪಾಠವಿದ್ದು ಸ್ವ ಶಿರಸೈವ ಎಂದು ತಪ್ಪಾಗಿ ಬರೆದುಕೊಂಡಿರಬಹುದೆ? ಯೋಚಿಸಬೇಕಾದದ್ದು.

ಎಲ್ಲರಂತೆ ಮನುಷ್ಯನೇ ಆಗಿದ್ದರೂ ಆತ್ಮಜ್ಞಾನದ ಬಲದಿಂದ ಹೆಂಡತಿ, ಮಗ, ಧನ- ಮುಂತಾದ ಸಂಸಾರದಲ್ಲಿ ರತಿಯನ್ನು ಬಿಟ್ಟು ಪ್ರಜ್ಞಾನತೃಪ್ತನಾಗಿ ಆತ್ಮರತಿಯಾದನು.

ಮತ್ತು ಬ್ರಹ್ಮವಿದ್ಯೆಯನ್ನು ಹೀಗೂ ಹೊಗಳಿರುತ್ತದೆ. ಹೇಗೆಂದರೆ ಯಾಜ್ಞವಲ್ಕ್ಯನು ಸಂಸಾರಮಾರ್ಗವನ್ನು ಬಿಟ್ಟೇಳುವಾಗಲೂ ಪ್ರಿಯಳಾದ (ತನ್ನ) ಹೆಂಡತಿಗೆ (ಇದನ್ನು) ಪ್ರೀತಿಗಾಗಿಯೇ ಹೇಳಿರುತ್ತಾನೆ. "ಪ್ರಿಯವನ್ನು ನುಡಿಯುತ್ತಿದೀಯೆ, ಬಾ ಕುಳಿತುಕೊ" (೨-೪-೪) ಎಂಬ ಲಿಂಗದಿಂದ (ಹೀಗೆಂದು ನಿಶ್ಚಯಿಸಬಹುದಾಗಿದೆ).

## ಮಧುವಿದ್ಯೆಯ ಕಥೆ

(ಉಪನಿಷತ್ತು)

**ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**
**ತದ್ವಾಂ ನರಾ ಸನಯೇ ದಂಸ ಉಗ್ರ**
**ಮಾವಿಷ್ಕೃಣೋಮಿ ತನ್ಯತುರ್ನ ವೃಷ್ಟಿಮ್ ।**
**ದಧ್ಯಙ್ ಹ ಯನ್ಮಧ್ವಾಥರ್ವಣೋ ವಾ**
**ಮಶ್ವಸ್ಯ ಶೀರ್ಷ್ಣಾ ಪ್ರಯದೀಮುವಾಚ ಇತಿ ॥ ೧೬ ॥**

೧೬. ಇದೇ ದಧ್ಯಙ್ಙಾಥರ್ವಣನು[1] ಅಶ್ವಿನೀದೇವತೆಗಳಿಗೆ ಹೇಳಿದ ಆ ಮಧುವು. ಇದನ್ನು ಕಂಡು ಋಷಿ ಹೇಳಿದನೇನೆಂದರೆ: "ಎಲೈ ನರರೆ, ಆ ಉಗ್ರವಾದ ದಂಸವನ್ನು ನಿಮ್ಮ ಲಾಭಕ್ಕಾಗಿ ಮಾಡಿದಿರಷ್ಟೆ, ತನ್ಯತುವು ಮಳೆಯನ್ನು (ಬೆಳಗುವಂತೆ) ಅದನ್ನು ಹೊರಗೆಡಹುವೆನು. ದಧ್ಯಙ್ಙಾಥರ್ವಣನು ಮಧುವನ್ನು ಕುದುರೆಯತಲೆಯಮೂಲಕ ನಿಮಗೆ ಹೇಳಿದನಲ್ಲ, ಅದನ್ನೂ (ಹೊರಗೆಡಹುವೆನು)!

## ಕಥೆಯ ಸಂಬಂಧ

(ಭಾಷ್ಯ)

೪೦೧. ತತ್ರ ಇಯಂ ಸ್ತುತ್ಯರ್ಥಾ ಆಖ್ಯಾಯಿಕಾ ಇತ್ಯವೋಚಾಮ । ಕಾ ಪುನಃ ಸಾ ಆಖ್ಯಾಯಿಕೇತಿ ? ಉಚ್ಯತೇ । ಇದಮ್ ಇತಿ ಅನನ್ತರನಿರ್ದಿಷ್ಟಂ ವ್ಯಪದಿಶತಿ । ಬುದ್ಧೌ ಸಂನಿಹಿತತ್ವಾತ್ । ವೈಶಬ್ದಃ ಸ್ಮಾರಣಾರ್ಥಃ[2] । ತದಿತಿ ಆಖ್ಯಾಯಿಕಾನಿರ್ವೃತ್ತಂ ಪ್ರಕರಣಾನ್ತರಾಭಿಹಿತಂ ಪರೋಕ್ಷಂ ವೈಶಬ್ದೇನ

1. ಅಥರ್ವವೇದದಲ್ಲಿ ನಿಷ್ಣಾತನಾದ ಋಷಿಯು.
2. 'ಸ್ಮರಣಾರ್ಥಃ' ಎಂಬುದಕ್ಕಿಂತ ಇದೇ ಮೇಲು.

ಸ್ಮಾರಯನ್ ಇಹ ವ್ಯಪದಿಶತಿ। ಯತ್ ತತ್ ಪ್ರವರ್ಗ್ಯಪ್ರಕರಣೇ ಸೂಚಿತಂ ನಾವಿಷ್ಕೃತಂ ಮಧು, ತದಿದಂ ಮಧು ಇಹ ಅನನ್ತರಂ ನಿರ್ದಿಷ್ಟಮ್ 'ಇಯಂ ಪೃಥಿವೀ' (೨-೫-೧೧) ಇತ್ಯಾದಿನಾ। ಕಥಂ ತತ್ರ ಪ್ರಕರಣಾನ್ತರೇ ಸೂಚಿತಮ್? "ದಧ್ಯಙ್ ಹ ವಾ ಆಭ್ಯಾಮಾಥರ್ವಣೋ ಮಧು ನಾಮ ಬ್ರಾಹ್ಮಣಮುವಾಚ। ತದೇನಯೋಃ ಪ್ರಿಯಂ ಧಾಮ ತದೇವೈನಯೋರೇತೇನೋಪಗಚ್ಛತಿ" । (೧೪-೧-೪-೧೩) "ಸ ಹೋವಾಚೇನ್ದ್ರೇಣ ವಾ ಉಕ್ತೋಽಸ್ಮ್ಯೇತಚ್ಚೇದನ್ಯಸ್ಮಾ ಅನುಬ್ರೂಯಾಸ್ತತ ಏವ ತೇ ಶಿರಶ್ಛಿನ್ದ್ಯಾಮಿತಿ। ತಸ್ಮಾದ್ವೈ ಬಿಭೇಮಿ ಯದ್ವೈ ಮೇ ಸ ಶಿರೋ ನ ಛಿನ್ದ್ಯಾತ್ತತ್ತ್ವೋಪನೇಷ್ಯ ಇತಿ। ತೌ ಹೋಚತುರಾವಾಂ ತ್ವಾ ತಸ್ಮಾತ್ ತ್ರಾಸ್ಯಾವಹೇ ಇತಿ। ಕಥಂ ಮಾ ತ್ರಾಸ್ಯೇಥೇ ಇತಿ। ಯದಾ ನಾವುಪನೇಷ್ಯಸೇ। ಅಥ ತೇ ಶಿರಶ್ಛಿತ್ತ್ವಾಽನ್ಯತ್ರಾಪಹೃತ್ಯೋಪನಿಧಾಸ್ಯಾವಃ। ಅಥಾಶ್ವಸ್ಯ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವಃ। ತೇನ ನಾವನುವಕ್ಷ್ಯಸಿ। ಸ ಯದಾ ನಾವನುವಕ್ಷ್ಯಸಿ। ಅಥ ತೇ ತದಿನ್ದ್ರಃ ಶಿರಶ್ಛೇತ್ಸ್ಯತಿ। ಅಥ ತೇ ಸ್ವಂ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವ ಇತಿ। ತಥೇತಿ ತೌ ಹೋಪನಿನ್ಯೇ। ತೌ ಯದೋಪನಿನ್ಯೇ। ಅಥಾಸ್ಯ ಶಿರಶ್ಛಿತ್ತ್ವಾಽನ್ಯತ್ರೋಪನಿದಧತುಃ। ಅಥಾಶ್ವಸ್ಯ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಃ। ತೇನ ಹಾಭ್ಯಾಮನೂವಾಚ। ಸ ಯದಾಽಭ್ಯಾಮನೂವಾಚಾಥಾಸ್ಯ ತದಿನ್ದ್ರಃ ಶಿರಶ್ಚಿಚ್ಛೇದ। ಅಥಾಸ್ಯ ಸ್ವಂ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಃ"[1] । (ಶತ.ಬ್ರಾ. ೧೪-೧-೧-೨೨ರಿಂದ೨೪) ಇತಿ। ಯಾವತ್ತು ಪ್ರವರ್ಗ್ಯಕರ್ಮಾಙ್ಗಭೂತಂ ಮಧು ತಾವದೇವ ತತ್ರಾಭಿಹಿತಂ ನ ತು ಕಕ್ಷ್ಯಮ್ ಆತ್ಮಜ್ಞಾನಾಖ್ಯಮ್। ತತ್ರ ಯಾಽಽಖ್ಯಾಯಿಕಾ ಅಭಿಹಿತಾ ಸೇಹ ಸ್ತುತ್ಯರ್ಥಾ ಪ್ರದರ್ಶ್ಯತೇ। ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽನೇನ ಪ್ರಪಞ್ಚೇನ ಅಶ್ವಿಭ್ಯಾಮ್ ಉವಾಚ ॥

(ಭಾಷ್ಯಾರ್ಥ)

ಇಲ್ಲಿ ಈ ಕಥೆಯು (ಆತ್ಮವಿದ್ಯೆಯನ್ನು) ಹೊಗಳುವದಕ್ಕಾಗಿ (ಬಂದಿದೆ) ಎಂದು ಹೇಳಿದೆವಷ್ಟೆ. ಆ ಕಥೆಯು ಯಾವದು? ಎಂದರೆ ಹೇಳಲಾಗುತ್ತದೆ: 'ಇದು' ಎಂಬ (ಮಾತಿನಿಂದ) ಹಿಂದೆಯೇ ಹೇಳಿರುವ (ಮಧುವಿದ್ಯೆಯನ್ನು) ತಿಳಿಸಿದೆ; ಏಕೆಂದರೆ (ಅದೇ) ಬುದ್ಧಿಯಲ್ಲಿ ಹತ್ತಿರವಾಗಿದ್ದುಕೊಂಡಿದೆ. ವೈ ಎಂಬ ಮಾತು ನೆನಪಿಗೆ ತರುವದಕ್ಕಾಗಿ. ಅದು ಎಂದು ಕಥೆಯಲ್ಲಿ ನಡೆದಿದ್ದ ಮತ್ತೊಂದು ಪ್ರಕರಣದಲ್ಲಿ ಹೇಳಿದ್ದರಿಂದ ಪರೋಕ್ಷವಾಗಿರುವದನ್ನು ವೈಶಬ್ದದಿಂದ ನೆನಪಿಗೆ ತಂದುಕೊಟ್ಟು ಇಲ್ಲಿ ಹೇಳಿರುತ್ತದೆ. ಪ್ರವರ್ಗ್ಯಪ್ರಕರಣದಲ್ಲಿ ಮಧು ಸೂಚಿತವಾಗಿತ್ತಲ್ಲ, (ಆದರೆ) ಹೊರಪಡಿಸಿ ಹೇಳಿರಲಿಲ್ಲವಲ್ಲ, ಆ ಈ ಮಧುವನ್ನು, ಇಲ್ಲಿ ಹಿಂದಿನ (ಕಂಡಿಕೆಗಳಲ್ಲಿ) "ಈ ಪೃಥಿವಿಯು....." (೨-೫-೧೧ರಿಂದ ೧೪ರವರೆಗೆ) ಮುಂತಾದ (ಗ್ರಂಥ)ದಿಂದ ತಿಳಿಸಿರುತ್ತದೆಯಲ್ಲ

1. ಇಲ್ಲಿರುವದು ಕಾಣ್ವಪಾಠವೆಂತ ಕಾಣುತ್ತದೆ.

(ಅದನ್ನು). ಆ ಪ್ರಕರಣಾಂತರದಲ್ಲಿ ಹೇಗೆ ಸೂಚಿತವಾಗಿತ್ತು ? ಎಂದರೆ: "ದಧ್ಯಙ್ಙಾಥರ್ವಣನು ಈ (ಅಶ್ವಿನೀದೇವತೆ)ಗಳಿಗೆ ಮಧು ಎಂಬ ಬ್ರಾಹ್ಮಣವನ್ನು ಹೇಳಿದನು. ಅದು ಇವರಿಗೆ ಪ್ರಿಯವಾದ ಸ್ಥಾನವು; ಆದ್ದರಿಂದಲೇ ಈ (ಮಧು ಮಾಧ್ವೀಭ್ಯಾಂ ಎಂಬ ಮಂತ್ರ)ದಿಂದ ಆ (ಸ್ಥಾನವನ್ನೇ) ಪಡೆದುಕೊಳ್ಳುತ್ತಾನೆ" (ಶತ. ಬ್ರಾ. ೧೪-೧-೪-೧೩) "ಅವನು ಹೇಳಿದನೇನೆಂದರೆ 'ಇದನ್ನು ಮತ್ತೊಬ್ಬನಿಗೆ ಹೇಳಿದೆಯಾದರೆ ಆಗಲೆ ನಿನ್ನ ತಲೆಯನ್ನು ಕಡಿದು ಹಾಕುವೆನು' ಎಂದು ಇಂದ್ರನು ನನಗೆ ಹೇಳಿರುತ್ತಾನೆ. ಅವನು ನನ್ನ ತಲೆಯನ್ನು ಕಡಿದುಹಾಕದೆಇದ್ದರೆ ಆಗ ನಿಮಗೆ ಉಪದೇಶಮಾಡಿಯೇನು. ಅವರು 'ನಾವು ನಿನ್ನನ್ನು ಅವನಿಂದ ರಕ್ಷಿಸುವೆವು' ಎಂದರು. 'ನನ್ನನ್ನು ಹೇಗೆ ರಕ್ಷಿಸುವಿರಿ ?' ಎನ್ನಲು ಯಾವಾಗ ನಮಗೆ ಉಪದೇಶಿಸುವೆಯೋ ಆಗ ನಿನ್ನ ತಲೆಯನ್ನು ಕಡಿದು ಮತ್ತೆಲ್ಲಿಗಾದರೂ ತೆಗೆದುಕೊಂಡು ಹೋಗಿ ಇಟ್ಟಿರುವೆವು. ಮತ್ತು ಕುದುರೆಯ ತಲೆಯನ್ನು ತಂದು ಅದನ್ನು ನಿನಗೆ ಸೇರಿಸಿಡುವೆವು. ಅದರಿಂದ ನಮಗೆ ನೀನು ಹೇಳಿಕೊಡಬಹುದು. ಆ (ನೀನು) ಯಾವಾಗ ನಮಗೆ ಹೇಳಿಕೊಡುವೆಯೋ ಆಗ ಇಂದ್ರನು ಆ ನಿನ್ನ (ತಲೆ)ಯನ್ನು ಕತ್ತರಿಸುವನು. ಆಗ ನಿನ್ನ ಸ್ವಂತತಲೆಯನ್ನು ತಂದು ಅದನ್ನು ನಿನಗೆ ಸೇರಿಸಿಡುವೆವು. ಹಾಗೇ (ಆಗಲಿ) ಎಂದು ಅವರಿಗೆ ಹೇಳಿಕೊಟ್ಟನು. ಅವರಿಗೆ ಯಾವಾಗ ಹೇಳಿಕೊಟ್ಟನೋ ಆಗ ಇವನ ತಲೆಯನ್ನು ಕತ್ತರಿಸಿ ಮತ್ತೊಂದು ಕಡೆಯಲ್ಲಿ ಇಟ್ಟರು; ಮತ್ತು ಕುದುರೆಯ ತಲೆಯನ್ನು ತಂದು ಅದನ್ನು ಇವನಿಗೆ ಕೂಡಿಸಿಟ್ಟರು. ಅದರಿಂದ ಇವರಿಗೆ ಹೇಳಿಕೊಟ್ಟನು[1]. ಅವನು ಯಾವಾಗ ಇವರಿಗೆ ಹೇಳಿಕೊಡುತ್ತಿದ್ದನೋ ಆಗ ಆ ಇವನ ತಲೆಯನ್ನು ಇಂದ್ರನು ಕತ್ತರಿಸಿದನು. ಆಗ ಇವನ ಸ್ವಂತತಲೆಯನ್ನು ತಂದು ಅವನಿಗೆ ಸೇರಿಸಿಕೊಟ್ಟರು". (ಶತ. ಬ್ರಾ. ೧೪-೧-೧-೨೨ ರಿಂದ ೨೪).

ಆದರೆ ಪ್ರವರ್ಗ್ಯಕರ್ಮಕ್ಕೆ ಅಂಗವಾಗಿರುವ ಮಧುವೆಷ್ಟೋ ಅಷ್ಟನ್ನೇ ಅಲ್ಲಿ ಹೇಳಿತ್ತು, ಆದರೆ ಆತ್ಮಜ್ಞಾನವೆಂಬ ಕಕ್ಷ್ಯವನ್ನು (ಹೇಳ)ಲಿಲ್ಲ. ಅಲ್ಲಿ ಹೇಳಿತ್ತಲ್ಲ, ಆ ಕಥೆಯನ್ನು (ಮಾತ್ರ) ಇಲ್ಲಿ (ವಿದ್ಯೆಯ) ಸ್ತುತಿಗಾಗಿ ಹೇಳಿರುತ್ತದೆ. ಈ (ಮೇಲೆ ಹೇಳಿದ) ವಿವರದಿಂದ ದಧ್ಯಙ್ಙಾಥರ್ವಣನು ಅಶ್ವಿನಿಗಳಿಗೆ ಹೇಳಿದ್ದನಲ್ಲ, ಆ ಮಧುವು ಇದೇ.

## ಮಧುವಿದ್ಯೆಯ ಉಪದೇಶದ ವಿಷಯಕ್ಕೆ ಮಂತ್ರ

(ಭಾಷ್ಯ)

೪೦೨. ತದೇತದೃಷಿಃ ತದೇತತ್ ಕರ್ಮ ಋಷಿಃ ಮಂತ್ರಃ ತದ್ದ್ರಷ್ಟಾ ವಾ[2]

1. ಹಿಂದಿನ ಭಾ.ಭಾ. ದಲ್ಲಿ ತನ್ನ ತಲೆಯಿಂದಲೇ ಹೇಳಿಕೊಟ್ಟನು ಎಂದಿದೆ.
2. ಈ ಪಾಠವೇ ಭಾಷ್ಯಕಾರಸಮ್ಮತವೆಂದು ತೋರುತ್ತದೆ.

ಪಶ್ಯನ್ ಉಪಲಭಮಾನಃ ಅವೋಚತ್ ಉಕ್ತವಾನ್ । ಕಥಮ್ ? ತದ್ ದಂಸಃ ಇತಿ ವ್ಯವಹಿತೇನ ಸಂಬನ್ಧಃ । ದಂಸಃ ಇತಿ ಕರ್ಮಣೋ ನಾಮ ಧೇಯಮ್ । ತಚ್ಚ ದಂಸಃ ಕಿಂವಿಶಿಷ್ಟಮ್ ? ಉಗ್ರಂ ಕ್ರೂರಮ್ । ವಾಂ ಯುವಯೋಃ । ಹೇ ನರಾಃ ನರಾಕಾರೌ ಅಶ್ವಿನೌ । ತಚ್ಚ ಕರ್ಮ ಕಿಂ ನಿಮಿತ್ತಮ್ ? ಸನಯೇ ಲಾಭಾಯ । ಲಾಭಲುಬ್ಧೋ ಹಿ ಲೋಕೇಽಪಿ ಕ್ರೂರಂ ಕರ್ಮ ಆಚರತಿ । ತಥೈವ ಏತೌ ಉಪಲಭ್ಯೇತೇ ಯಥಾ ಲೋಕೇ । ತತ್ ಆವಿಃ ಪ್ರಕಾಶಂ ಕೃಣೋಮಿ ಕರೋಮಿ ಯದ್ ರಹಸಿ ಭವದ್ಭ್ಯಾಂ ಕೃತಮ್ । ಕಿಮಿವೇತಿ ? ಉಚ್ಯತೇ । ತನ್ಯತುಃ ಪರ್ಜನ್ಯೋ ನ ಇವ । ನಕಾರಸ್ತು ಉಪರಿಷ್ಟಾದುಪಚಾರಃ ಉಪಮಾರ್ಥೀಯೋ ವೇದೇ ನ ಪ್ರತಿ ಷೇಧಾರ್ಥಃ । ಯಥಾ 'ಅಶ್ವಂ ನ' (ಋ.ಸಂ. ೧-೬-೨೪-೧) ಅಶ್ವಮಿವೇತಿ ಯದ್ವತ್[1] ತನ್ಯತುರಿವ ವೃಷ್ಟಿಮ್ । ಯಥಾ ಪರ್ಜನ್ಯೋ ವೃಷ್ಟಿಂ ಪ್ರಕಾಶ ಯತಿ ಸ್ತನಯಿತ್ನ್ವಾದಿಶಬ್ದೈಃ ತದ್ವತ್ ಅಹಂ ಯುವಯೋಃ ಕ್ರೂರಂ ಕರ್ಮ ಆವಿಷ್ಕೃಣೋಮಿ ಇತಿ ಸಂಬನ್ಧಃ । ನನು ಅಶ್ವಿನೋಃ ಸ್ತುತ್ಯರ್ಥೌ ಕಥಮಿಮೌ ಮನ್ತ್ರೌ ಸ್ಯಾತಾಮ್, ನಿನ್ದಾವಚನೌ ಹೀಮೌ । ನೈಷ ದೋಷಃ । ಸ್ತುತಿ ರೇವೈಷಾ ನ ನಿನ್ದಾವಚನೌ । ಯಸ್ಮಾತ್ ಈದೃಶಮಪಿ ಅತಿಕ್ರೂರಂ ಕರ್ಮ ಕುರ್ವತೋರ್ಯುವಯೋಃ ನ ಲೋಮ ಚ ಮೀಯತೇ ಇತಿ । ನ ಚಾನ್ಯತ್ ಕಿಂಚಿತ್ ಹೀಯತ ಏವೇತಿ ಸ್ತುತೌ ಏತೌ ಭವತಃ । ನಿನ್ದಾಂ ಪ್ರಶಂಸಾಂ ಹಿ ಲೌಕಿಕಾಃ ಸ್ಮರನ್ತಿ । ತಥಾ ಪ್ರಶಂಸಾರೂಪಾ ಚ ನಿನ್ದಾ ಲೋಕೇ ಪ್ರಸಿದ್ಧಾ । ದಧ್ಯಙ್ನಾಮ ಆಥರ್ವಣಃ । ಹ । ಇತ್ಯನರ್ಥಕೋ ನಿಪಾತಃ । ಯತ್ ಮಧು ಕಕ್ಷ್ಯಮ್ ಆತ್ಮಜ್ಞಾನಲಕ್ಷಣಮ್ ಆಥರ್ವಣಃ ವಾಂ ಯುವಾ ಭ್ಯಾಮ್ ಅಶ್ವಸ್ಯ ಶೀರ್ಷ್ಣಾ ಶಿರಸಾ ಪ್ರಯದೀಮ್ ಉವಾಚ ಯತ್ಪ್ರೋವಾಚ ಮಧು । ಈಮ್ ಇತ್ಯನರ್ಥಕೋ ನಿಪಾತಃ ॥

(ಭಾಷ್ಯಾರ್ಥ)

ತದೇತದೃಷಿಃ (ಎಂಬ ಮಂತ್ರದ ವ್ಯಾಖ್ಯಾನವಿದು): ಆ ಇದನ್ನು ಆ ಈ ಕರ್ಮವನ್ನು ಕಂಡು ಅರಿತು ಋಷಿಯು, ಮಂತ್ರವು ಅಥವಾ ಆ (ಮಂತ್ರ)ದ್ರಷ್ಟೃವು ಹೇಳಿದ್ದೇನೆಂದರೆ, 'ಆ ದಂಸವನ್ನು' ಎಂದು (ಮೂಲದಲ್ಲಿ ರುವ ತತ್ ಎಂಬ ಮಾತನ್ನು ದಂಸಃ ಎಂಬುದಕ್ಕೆ) ಸಂಬಂಧಮಾಡಿಕೊಳ್ಳ ಬೇಕು. ದಂಸವೆಂದು ಕರ್ಮಕ್ಕೆ ಹೆಸರು. ಆ ದಂಸವು ಎಂಥದ್ದು ? ಎಂದರೆ ಉಗ್ರವಾದದ್ದು (ವಾಮ್=ಯುವಯೋಃ) ನಿಮ್ಮಗಳ (ಕ್ರೂರಕರ್ಮವನ್ನು ಹೇಳುತ್ತೇನೆ ಎಂದರ್ಥ). ಎಲೈ ನರರೆ, ಮನುಷ್ಯಾಕಾರದ ಅಶ್ವಿನೀದೇವತೆ

---

1. ಇಲ್ಲಿ ಯದ್ವತ್ ಹೆಚ್ಚೆಂದು ಕಾಣುತ್ತದೆ.

ಗಳೆ, (ಎಂದರ್ಥ). ಆ ಕರ್ಮವು ಏತಕ್ಕಾಗಿ ? ಎಂದರೆ ಸನಿಗೆ ಎಂದರೆ ಲಾಭಕ್ಕಾಗಿ. ಲಾಭದ ಆಶೆಗಲ್ಲವೆ, ಲೋಕದಲ್ಲಿಯೂ ಕ್ರೂರವಾದ ಕೆಲಸವನ್ನು ಮಾಡುತ್ತಾರೆ ? ಹಾಗೆಯೇ ಇವರಿಬ್ಬರೂ (ಕ್ರೂರಕರ್ಮವನ್ನು ಮಾಡುವವರಾಗಿ) ಕಂಡುಬರುತ್ತಾರೆ. ನೀವು ಗುಟ್ಟಿನಲ್ಲಿ ಮಾಡಿದಿರಲ್ಲ, ಅದನ್ನು ಹೊರಗೆಡಹುತ್ತೇನೆ, ಪ್ರಕಾಶಗೊಳಿಸುತ್ತೇನೆ. ಏತರಂತೆ ? ಎಂದರೆ, -ತನ್ಯತು ವೆಂದರೆ ಮೋಡವು ನ ಎಂದರೆ ಇವ. ವೇದದಲ್ಲಿ ನಕಾರವನ್ನು (ಯಾವದಾದರೊಂದು ಮಾತಿನ) ಮುಂದುಗಡೆ ಇಟ್ಟರೆ ಉಪಮೆ ಎಂದರ್ಥವುಳ್ಳದ್ದಾಗುವದೇ ಹೊರತು ಪ್ರತಿಷೇಧಾರ್ಥಕ(ವಾಗು)ವದಿಲ್ಲ ; ಉದಾಹರಣೆಗೆ : 'ಅಶ್ವಂ ನ' (ಋ.ಸಂ. ೧-೬-೨೪-೧) ಎಂದರೆ ಅಶ್ವಮಿವ (ಕುದುರೆಯಂತೆ ಎಂದರ್ಥ). ಮಳೆಯನ್ನು ತನ್ಯತುವಿನಂತೆ ಎಂದರೆ ಹೇಗೆ ಮೋಡವು ಮಳೆಯನ್ನು ಗುಡುಗು ಮುಂತಾದ ಶಬ್ದಗಳಿಂದ (ಪ್ರಕಾಶಕ್ಕೆ ತರುವದೋ) ಅದರಂತೆ ನಾನು ನಿಮ್ಮಗಳ ಕ್ರೂರವಾದ ಕರ್ಮವನ್ನು ಹೊರಗೆಡಹುತ್ತೇನೆ ಎಂದು (ಪದಗಳ) ಸಂಬಂಧವು.

(ಆಕ್ಷೇಪ):- ಈ (ಎರಡು) ಮಂತ್ರಗಳು ಅಶ್ವಿನೀದೇವತೆಗಳ ಸ್ತುತಿಗಾಗಿ ಬಂದಿವೆ ಎಂದು (ಹೇಳುವದು) ಹೇಗೆ ? ಇವುಗಳು ನಿಂದಾವಚನಗಳಲ್ಲವೆ ?

(ಪರಿಹಾರ) : ಇದೇನೂ ದೋಷವಲ್ಲ. ಇದು ಸ್ತುತಿಯೇ, (ಇವು) ನಿಂದಾವಚನಗಳಲ್ಲ. ಏಕೆಂದರೆ ಇಂಥ ಅತಿಕ್ರೂರವಾದ ಕರ್ಮವನ್ನು ಮಾಡಿದರೂ ನಿಮ್ಮಗಳ ಕೂದಲೆಳೆಗೂ ಹಿಂಸೆಯಾಗಲಿಲ್ಲ. ಮತ್ತೆ ಯಾವದಕ್ಕೂ ಹಾನಿಯಾಗಲಿಲ್ಲವಲ್ಲ !- ಎಂದು ಇವರನ್ನು ಸ್ತುತಿಗೈದಂತೆ ಆಗಿರುತ್ತದೆ. ನಿಂದೆಯೂ ಪ್ರಶಂಸೆಯಾಗಬಹುದೆಂದಲ್ಲವೆ ಲೌಕಿಕರ ಸ್ಮೃತಿ(ಯಿದೆ)?[1] ಹೀಗೆಯೇ ಪ್ರಶಂಸಾರೂಪವಾದ ನಿಂದೆಯೂ ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ.[2]

ದಧ್ಯಙ್ಙಾಮನಾದ ಆಥರ್ವಣನು- ಇಲ್ಲಿ ಹ ಎಂಬ ನಿಪಾತಕ್ಕೆ ಅರ್ಥವಿಲ್ಲ. ಯಾವ ಮಧುವನ್ನು ಆತ್ಮಜ್ಞಾನರೂಪವಾದ ಕಕ್ಷ್ಯವನ್ನು (ವಾಮ್=ಯುವಭ್ಯಾಮ್) ನಿಮ್ಮಗಳಿಗೆ ಆಥರ್ವಣನು ಕುದುರೆಯ ಶೀರ್ಷದಿಂದ ತಲೆಯಿಂದ ಹೇಳಿಕೊಟ್ಟನೋ (ಅದನ್ನೂ ಹೊರಗೆಡಹುವೆನು). ಈಮ್ ಎಂಬುದು ಅರ್ಥರಹಿತವಾದ ನಿಪಾತವು.

## ದಧ್ಯಙ್ಙಾಥರ್ವಣನು ಹೇಳಿಕೊಟ್ಟ ಮಧುವಿದ್ಯೆ

(ಉಪನಿಷತ್ತು)

**ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**

---

1. ಅಲಂಕಾರಶಾಸ್ತ್ರದವರು ಹೀಗೆಂದು ಹೇಳುತ್ತಾರೆ.
2. ವಿಪರೀತಲಕ್ಷಣೆಯಿಂದ ಹೀಗೆ ಶಬ್ದವು ವಿರುದ್ಧಾರ್ಥವನ್ನು ಹೇಳಬಹುದಾಗಿದೆ.

**ಆಥರ್ವಣಾಯಾಶ್ವಿನಾ ದಧೀಚೇಽ**
**ಶ್ವ್ಯಗ್ಂ ಶಿರಃ ಪ್ರತ್ಯೈರಯತಮ್ ।**
**ಸ ವಾಂ ಮಧು ಪ್ರವೋಚದೃತಾಯನ್**
**ತ್ವಾಷ್ಟ್ರಂ ಯದ್ದಸ್ರಾವಪಿ ಕಕ್ಷ್ಯಂ ವಾಮ್॥ ಇತಿ ॥ ೧೭ ॥**

೧೭. ಇದೇ ದಧ್ಯಙ್ಙಾಥರ್ವಣನು ಅಶ್ವಿನೀದೇವತೆಗಳಿಗೆ ಹೇಳಿದ ಆ ಮಧು. ಆ ಇದನ್ನು ಋಷಿಯು ಕಂಡು ಇಂತೆಂದನು: ಅಶ್ವಿನೀದೇವತೆಗಳೆ, ದಧ್ಯಙ್ಙಾಥರ್ವಣನಿಗೆ ಅಶ್ವ್ಯವಾದ ತಲೆಯನ್ನು ಕಳುಹಿಸಿಕೊಟ್ಟಿರಿ. ಅವನು (ತನ್ನ ಮಾತನ್ನು) ನಿಜವಾಗಿ ಮಾಡಲೆಳಸಿ ತ್ವಾಷ್ಟ್ರಮಧುವನ್ನು ಹೇಳಿಕೊಟ್ಟನು; ದಸ್ರರೆ, ನಿಮಗೆ ಕಕ್ಷ್ಯವನ್ನೂ ಹೇಳಿಕೊಟ್ಟನು.

(ಭಾಷ್ಯ)

೪೦೩. 'ಇದಂ ವೈ ತನ್ಮಧು' ಇತ್ಯಾದಿ ಪೂರ್ವವತ್ ಮನ್ತ್ರಾನ್ತರಪ್ರದರ್ಶನಾರ್ಥಮ್ । ತಥಾಽನ್ಯೋ ಮನ್ತ್ರಃ ತಾಮೇವ ಆಖ್ಯಾಯಿಕಾಮ್ ಅನುಸರತಿ ಸ್ಮ । ಆಥರ್ವಣೋ ದಧ್ಯಙ್ನಾಮಾ । ಆಥರ್ವಣೋಽನ್ಯೋ ವಿದ್ಯತ ಇತ್ಯತೋ ವಿಶಿನಷ್ಟಿ ದಧ್ಯಙ್ನಾಮಾ ಆಥರ್ವಣ (ಇತಿ) । ತಸ್ಮೈ ದಧೀಚೇ ಆಥರ್ವಣಾಯ । ಹೇ ಅಶ್ವಿನಾ ಇತಿ ಮನ್ತ್ರದೃಶೋ ವಚನಮ್ । ಅಶ್ವ್ಯಂ ಅಶ್ವಸ್ಯ ಸ್ವಭೂತಂ ಶಿರೋ ಬ್ರಾಹ್ಮಣಸ್ಯ ಶಿರಸಿ ಛಿನ್ನೇ ಅಶ್ವಸ್ಯ ಶಿರಶ್ಛಿತ್ತ್ವಾ ಈದೃಶಮ್ ಅತಿಕ್ರೂರಂ ಕರ್ಮ ಕೃತ್ವಾ ಅಶ್ವ್ಯಂ ಶಿರಃ ಬ್ರಾಹ್ಮಣಂ ಪ್ರತಿ ಐರಯತಂ ಗಮಿತವನ್ತೌ ಯುವಾಮ್ । ಸ ಚ ಆಥರ್ವಣಃ ವಾಂ ಯುವಾಭ್ಯಾಂ ತನ್ಮಧು ಪ್ರವೋಚತ್ । ಯತ್ ಪೂರ್ವಂ ಪ್ರತಿಜ್ಞಾತಂ ವಕ್ಷ್ಯಾಮೀತಿ। ಸ ಕಿಮರ್ಥಮೇವಂ ಜೀವಿತಸಂದೇಹಮ್ ಆರುಹ್ಯ ಪ್ರವೋಚತ್ ಇತಿ? ಉಚ್ಯತೇ । ಋತಾಯನ್ ಯತ್ ಪೂರ್ವಂ ಪ್ರತಿಜ್ಞಾತಂ ಸತ್ಯಮ್ ತತ್ ಪರಿಪಾಲಯಿತುಮಿಚ್ಛನ್ । ಜೀವಿತಾದಪಿ ಹಿ ಸತ್ಯಪರಿಪಾಲನಾ ಗುರುತರಾ ಇತ್ಯೇತಸ್ಯ ಲಿಙ್ಗಮೇತತ್ । ಕಿಂ ತನ್ಮಧು ಪ್ರವೋಚತ್ ಇತಿ? ಉಚ್ಯತೇ । ತ್ವಾಷ್ಟ್ರಂ ತ್ವಷ್ಟಾ ಆದಿತ್ಯಃ ತಸ್ಯ ಸಂಬನ್ಧಿ । ಯಜ್ಞಸ್ಯ ಶಿರಶ್ಛಿನ್ನಂ ತ್ವಷ್ಟಾ ಅಭವತ್ । ತತ್ಪ್ರತಿಸಂಧಾನಾರ್ಥಂ ಪ್ರವರ್ಗ್ಯಂ ಕರ್ಮ । ತತ್ರ ಪ್ರವರ್ಗ್ಯಕರ್ಮಾಙ್ಗಭೂತಂ ಯದ್ವಿಜ್ಞಾನಂ ತತ್ ತ್ವಾಷ್ಟ್ರಂ ಮಧು ಯಜ್ಞಸ್ಯ ಶಿರಶ್ಛೇದನಪ್ರತಿಸಂಧಾನಾದಿವಿಷಯಂ ದರ್ಶನಮ್ । ತತ್ ತ್ವಾಷ್ಟ್ರಂ ಯನ್ಮಧು ಹೇ ದಸ್ರೌ । ದಸ್ರಾವಿತಿ ಪರಬಲಾನಾಮ್ ಉಪಕ್ಷಪಯಿತಾರೌ, ಶತ್ರೂಣಾಂ ವಾ ಹಿಂಸಿತಾರೌ । ಅಪಿ ಚ ನ ಕೇವಲಂ ತ್ವಾಷ್ಟ್ರಮೇವ ಮಧು ಕರ್ಮಸಂಬನ್ಧಿ ಯುವಾಭ್ಯಾಮ್ ಅವೋಚತ್, ಅಪಿ ಚ ಕಕ್ಷ್ಯಂ ಗೋಪ್ಯಂ ರಹಸ್ಯಂ

ಪರಮಾತ್ಮಸಂಬನ್ಧಿ ಯದ್ ವಿಜ್ಞಾನಮ್ ಮಧು ಮಧುಬ್ರಾಹ್ಮಣೇನ ಉಕ್ತಮ್ ಅಧ್ಯಾಯದ್ವಯಪ್ರಕಾಶಿತಮ್ । ತಚ್ಚ ವಾಂ ಯುವಾಭ್ಯಾಂ ಪ್ರೋವಾಚೇತ್ ಇತ್ಯನುವರ್ತತೇ ॥

(ಭಾಷ್ಯಾರ್ಥ)

'ಇದಂ ವೈ ತನ್ಮಧು' ಮುಂತಾದ ವಾಕ್ಯಕ್ಕೆ ಹಿಂದಿನಂತೆಯೇ (ವ್ಯಾಖ್ಯಾನ ಮಾಡಬೇಕು. ಇದು) ಮತ್ತೊಂದು ಮಂತ್ರವನ್ನು ತಿಳಿಸುವದಕ್ಕೆ (ಬಂದಿದೆ). ಹೀಗೆಯೇ ಮತ್ತೊಂದು ಮಂತ್ರವೂ ಅದೇ ಕಥೆಯನ್ನೇ ಅನುಸರಿಸಿ (ಹೀಗೆಂದಿ)ತು. ದಧ್ಯಂಚನೆಂಬ ಹೆಸರಿನ ಆಥರ್ವಣನು (ದಧ್ಯಙ್ಙಾಥರ್ವಣಃ)-ಮತ್ತೊಬ್ಬ ಆಥರ್ವಣನೂ ಇರುತ್ತಾನಾದ್ದರಿಂದ ದಧ್ಯಙ್ಙಾಥರ್ವಣನು ಎಂದು ವಿಶೇಷಣವನ್ನು ಕೊಟ್ಟಿದೆ- ಆ ದಧ್ಯಂಚನೆಂಬ ಆಥರ್ವಣನಿಗೆ ಎಲೈ, ಅಶ್ವಿನೀ ದೇವತೆಗಳೆ, ಎಂಬುದು ಮಂತ್ರದ್ರಷ್ಟೃವಾದ (ಋಷಿಯು)[1] ಮಾತು. ಅಶ್ವ್ಯವಾದ, ಎಂದರೆ ಕುದುರೆಗೆ ಸೇರಿದ ಶಿರಸ್ಸನ್ನು- ಬ್ರಾಹ್ಮಣನ ತಲೆಯನ್ನು ಕತ್ತರಿಸಿದ ಬಳಿಕ ಕುದುರೆಯ ತಲೆಯನ್ನು ಕತ್ತರಿಸಿ ಇಂಥ ಅತಿಕ್ರೂರವಾದ ಕರ್ಮವನ್ನು ಮಾಡಿ- ಅಶ್ವ್ಯವಾದ ತಲೆಯನ್ನು (ಆ) ಬ್ರಾಹ್ಮಣನ ಕಡೆ ಕಳುಹಿಸಿದಿರಿ, ನೀವುಗಳು (ಅವನಿಗೆ ಅದನ್ನು ಸೇರಿಸಿದಿರಿ. ಮತ್ತು ಆ ಆಥರ್ವಣನು (ವಾಮ್= ಯುವಾಭ್ಯಾಮ್) ನಿಮ್ಮಗಳಿಗೆ ಆ ಮಧುವನ್ನು -ನಿಮಗೆ ಹೇಳಿಕೊಡುವೆನೆಂದು ಮೊದಲೇ ಪ್ರತಿಜ್ಞೆಮಾಡಿದ್ದನಲ್ಲ, (ಅದನ್ನು)-ಹೇಳಿಕೊಟ್ಟನು. ಅವನು ಹೀಗೆ ಪ್ರಾಣದ ಸಂದೇಹದಲ್ಲಿದ್ದರೂ ಏತಕ್ಕಾಗಿ ಹೇಳಿಕೊಟ್ಟನು ? ಎಂದರೆ (ಋಷಿ) ಹೇಳುತ್ತಾನೆ: ನಿಜವಾಗಿ ಮಾಡುವದಕ್ಕಾಗಿ ; ಮೊದಲೇ ಸತ್ಯ(ಪ್ರತಿಜ್ಞೆ)ಮಾಡಿದ್ದನಲ್ಲ, ಅದನ್ನು ಕಾಪಾಡಿಕೊಳ್ಳುವದಕ್ಕಿಚ್ಛಿಸಿ (ಎಂದರ್ಥ). ಪ್ರಾಣಕ್ಕಿಂತಲೂ ಸತ್ಯಧರ್ಮವನ್ನು ಕಾಪಾಡಿಕೊಳ್ಳುವದು ಹೆಚ್ಚಿನದು ಎಂಬುದಕ್ಕೆ ಈ (ವಾಕ್ಯವು) ಲಿಂಗವು.

ಅವನು ಹೇಳಿಕೊಟ್ಟ ಆ ಮಧು ಯಾವದು ? ಎಂದರೆ ಹೇಳುತ್ತಾನೆ. ತ್ವಾಷ್ಟ್ರವು- ತ್ವಷ್ಟೃ ಎಂದರೆ ಆದಿತ್ಯನು, ಅವನಿಗೆ ಸಂಬದ್ಧವಾದದ್ದು. ಯಜ್ಞದ ಶಿರಸ್ಸನ್ನು ಕಡಿಯಲು ಅದು ತ್ವಷ್ಟೃವಾಯಿತು.[2] ಅದನ್ನು ಕೂಡಿಸುವದ

1. ಕಕ್ಷೀವಂತನೆಂಬ ಋಷಿಯು. ೧೬,೧೭ ಮತ್ತು ೧೯ ಈ ಕಂಡಿಕೆಗಳಲ್ಲಿರುವ ಮಂತ್ರಗಳು ಋ. ಸಂಹಿತೆಯಲ್ಲಿ ೧-೧೧೬-೧೨, ೧-೧೧೭-೨೨ ಮತ್ತು ೬-೪೭-೧೮ ಇವುಗಳು.

2. ವಿಷ್ಣುವು ತಾನೇ ದೇವೋತ್ತಮನೆಂಬ ಹೆಮ್ಮೆಯಿಂದ ಒಂದು ಧನುಸ್ಸಿನ ಬಿಲ್ಲಿನ ತುದಿಯಮೇಲೆ ತನ್ನ ಗದ್ದವನ್ನಿಟ್ಟುಕೊಂಡು ನಿಂತಿದ್ದನು. ಮಿಕ್ಕ ದೇವತೆಗಳು ಅಸೂಯೆಯಿಂದ ಆ ಬಿಲ್ಲಿನ ತುದಿಯನ್ನು ತಿಂದುಹಾಕುವಂತೆ ಗೆದ್ದಲುಹುಳುಗಳನ್ನು ಪ್ರೇರಿಸಿದರು. ಇದರಿಂದ ಯಜ್ಞನಾಮಕನಾದ ವಿಷ್ಣುವಿನ ತಲೆ ಕತ್ತರಿಸಿತು ಎಂದು ಮುಂತಾಗಿ ಒಂದು ಕಥೆ. (ಶತ.ಬ್ರಾ. ೧೪-೧-೧,೬-೧೦)ವಲ್ಲಿದೆ. ತೈ. ಆ. ೫-೧-೩ರಿಂದ ೬ರವರೆಗೂ ನೋಡಿ.

ಕ್ಕಾಗಿ (ಮಾಡತಕ್ಕದ್ದು) **ಪ್ರವರ್ಗ್ಯಕರ್ಮವು.** ಅಲ್ಲಿ ಪ್ರವರ್ಗ್ಯಕರ್ಮಕ್ಕೆ ಅಂಗವಾಗಿರುವ ಉಪಾಸನೆಯಿದೆಯಲ್ಲ, ಅದು ತ್ವಾಷ್ಟ್ರವೆಂಬ ಮಧು- ಯಜ್ಞದ ತಲೆ ಕತ್ತರಿಸಿಹೋದದ್ದು. (ಅದನ್ನು ಮತ್ತೆ) ಕೂಡಿಸಿದ್ದು ಮುಂತಾದದ್ದರ ವಿಷಯದ ದರ್ಶನವಿದೆಯಲ್ಲ, ಆ ತ್ವಾಷ್ಟ್ರಮಧುವನ್ನೂ ಎಲೆ ದಸ್ರರೇ- ದಸ್ರರು ಎಂದರೆ ಮತ್ತೊಬ್ಬರ ಸೈನ್ಯಗಳನ್ನು ಕ್ಷಯಿಸುವಂತೆ ಮಾಡುವವರು; ಅಥವಾ ಶತ್ರುಗಳನ್ನು ಹಿಂಸಿಸುವವರು- ಮತ್ತು ಬರಿಯ ತ್ವಾಷ್ಟ್ರಮಧುವನ್ನು ಮಾತ್ರ ನಿಮಗೆ (ಅವನು) ಹೇಳಲಿಲ್ಲ. ಮತ್ತೇನೆಂದರೆ ಕಕ್ಷವನ್ನೂ ಗೋಪ್ಯವಾದ ರಹಸ್ಯವಾದ ಪರಮಾತ್ಮಸಂಬಂಧಿಯಾದ ವಿಜ್ಞಾನವಿದೆಯಲ್ಲ. ಮಧುಬ್ರಾಹ್ಮಣದಲ್ಲಿ ಹೇಳಿದ್ದು, (ಈ) ಎರಡು ಅಧ್ಯಾಯಗಳಿಂದ ಪ್ರಕಾಶಿತವಾಗಿರುವ (ಮಧುವಿದ್ಯೆಯಲ್ಲ), ಅದನ್ನೂ (ವಾಮ್= ಯುವಾಭ್ಯಾಮ್) ನಿಮ್ಮಗಳಿಗೆ ಹೇಳಿಕೊಟ್ಟನು ಎಂದು (ಹಿಂದಿನ ವಾಕ್ಯದಿಂದ) ಸೇರಿಸಿಕೊಳ್ಳಬೇಕು.

## ದಧ್ಯಙ್ಙಾಥರ್ವಣನು ಹೇಳಿಕೊಟ್ಟ ಮಧುವಿದ್ಯಾರಹಸ್ಯ

( ಉಪನಿಷತ್ತು )

**ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**
**ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।**
**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್॥ ಇತಿ ।**
**ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಮ್ ನೈನೇನ ಕಿಂಚನಾಸಂವೃತಮ್ ॥ ೧೮ ॥**

೧೮. ಇದೇ ಆ ದಧ್ಯಙ್ಙಾಥರ್ವಣನು ಅಶ್ವಿನೀದೇವತೆಗಳಿಗೆ ಹೇಳಿಕೊಟ್ಟ ಮಧು. ಆ ಇದನ್ನು ಕಂಡು ಋಷಿ ಹೇಳಿದನೇನೆಂದರೆ: "ಎರಡುಕಾಲಿನ ಪುರಗಳನ್ನು ಮಾಡಿದನು, ನಾಲ್ಕುಕಾಲಿನ ಪುರಗಳನ್ನು ಮಾಡಿದನು. ಮೊದಲು ಅವನು ಪಕ್ಷಿಯಾಗಿ (ಆ) ಪುರುಷನು ಪುರಗಳನ್ನು ಪ್ರವೇಶಿಸಿದನು.'' ಆ ಈತನು ಪುರುಷನೇ; (ಏಕೆಂದರೆ) ಎಲ್ಲಾ ಪುರಗಳಲ್ಲಿಯೂ ಪುರಿಶಯನಾಗಿರುತ್ತಾನೆ. ಇವನಿಂದ ಆವೃತವಲ್ಲದ್ದು ಯಾವದೊಂದೂ ಇಲ್ಲ, ಇವನಿಂದ ಸಂವೃತವಲ್ಲದ್ದು ಯಾವದೊಂದೂ ಇಲ್ಲ.

## ಕಂಡಿಕೆಯ ಸಂಬಂಧ

(ಭಾಷ್ಯ)

**೪೦೪.** ಇದಂ ವೈ ತನ್ಮಧು ಇತಿ ಪೂರ್ವವತ್ । ಉಕ್ತೌ ದ್ವೌ ಮನ್ತ್ರೌ

ಪ್ರವರ್ಗ್ಯಸಂಬನ್ಧ್ಯಾಖ್ಯಾಯಿಕೋಪಸಂಹರ್ತಾರೌ। ದ್ವಯೋಃ ಪ್ರವರ್ಗ್ಯಕರ್ಮಾರ್ಥಯೋಃ ಅಧ್ಯಾಯಯೋರರ್ಥಃ ಆಖ್ಯಾಯಿಕಾಭೂತಾಭ್ಯಾಂ ಮನ್ತ್ರಾಭ್ಯಾಂ ಪ್ರಕಾಶಿತಃ। ಬ್ರಹ್ಮವಿದ್ಯಾರ್ಥಯೋಸ್ತು ಅಧ್ಯಾಯಯೋಃ ಅರ್ಥಃ ಉತ್ತರಾಭ್ಯಾಮ್ ಋಗ್ಭ್ಯಾಂ ಪ್ರಕಾಶಯಿತವ್ಯಃ ಇತ್ಯತಃ ಪ್ರವರ್ತತೇ ॥

(ಭಾಷ್ಯಾರ್ಥ)

'ಇದಂ ವೈ ತನ್ಮಧು' –ಮುಂತಾದ (ವಾಕ್ಯಕ್ಕೆ) ಹಿಂದಿನಂತೆ (ವ್ಯಾಖ್ಯಾನ ಮಾಡಬೇಕು. ಈ ಕಂಡಿಕೆಯ ಸಂಬಂಧವೇನೆಂದರೆ): ಪ್ರವರ್ಗ್ಯಕರ್ಮಕ್ಕಾಗಿ ಬಂದಿರುವ ಎರಡು ಅಧ್ಯಾಯಗಳ ಅರ್ಥವನ್ನು ಕಥೆಯ ರೂಪದಲ್ಲಿರುವ ಎರಡು ಮಂತ್ರಗಳಿಂದ ತಿಳಿಸಿಕೊಟ್ಟದ್ದಾಯಿತು. ಆದರೆ ಬ್ರಹ್ಮವಿದ್ಯೆಗಾಗಿ ಬಂದಿರುವ ಎರಡು ಅಧ್ಯಾಯಗಳ ಅರ್ಥವನ್ನು[1] ಮುಂದಿನ (ಎರಡು) ಋಕ್ಕುಗಳಲ್ಲಿ ಪ್ರಕಾಶಿಸಬೇಕಾಗಿರುವದರಿಂದ (ಮುಂದಿನ ಗ್ರಂಥವು) ಹೊರಟಿರುತ್ತದೆ.

## ಪರಮಾತ್ಮನು ಶರೀರಗಳಲ್ಲಿ ಪ್ರವೇಶಿಸಿದ್ದು

(ಭಾಷ್ಯ)

೪೦೫. ಯತ್ ಕಕ್ಷ್ಯಂ ಚ ಮಧೂಕ್ತವಾನ್ ಆಥರ್ವಣೋ ಯುವಾಭ್ಯಾಮ್ ಇತ್ಯುಕ್ತಮ್। ಕಿಂ ಪುನಸ್ತನ್ಮಧು ಇತಿ? ಉಚ್ಯತೇ। ಪುರಶ್ಚಕ್ರೇ ಪುರಃ ಪುರಾಣಿ ಶರೀರಾಣಿ। ಯತ ಇಯಮ್ ಅವ್ಯಾಕೃತವ್ಯಾಕರಣಪ್ರಕ್ರಿಯಾ; ಸ ಪರಮೇಶ್ವರಃ, ನಾಮರೂಪೇ ಅವ್ಯಾಕೃತೇ ವ್ಯಾಕುರ್ವಾಣಃ ಪ್ರಥಮಂ ಭೂರಾದೀನ್ ಲೋಕಾನ್ ಸೃಷ್ಟ್ವಾ ಚಕ್ರೇ ಕೃತವಾನ್ ದ್ವಿಪದಃ ದ್ವಿಪಾದುಪಲಕ್ಷಿತಾನಿ ಮನುಷ್ಯಶರೀರಾಣಿ ಪಕ್ಷಿಶರೀರಾಣಿ (ಚ?)। ತಥಾ ಪುರಃ ಶರೀರಾಣಿ ಚಕ್ರೇ ಚತುಷ್ಪದಃ ಚತುಷ್ಪಾದುಪಲಕ್ಷಿತಾನಿ ಪಶುಶರೀರಾಣಿ। ಪುರಃ ಪುರಸ್ತಾತ್ ಸ ಈಶ್ವರಃ ಪಕ್ಷೀ ಲಿಙ್ಗಶರೀರಂ ಭೂತ್ವಾ ಪುರಃ ಶರೀರಾಣಿ ಪುರುಷ ಆವಿಶತ್ ಇತಿ ॥

(ಭಾಷ್ಯಾರ್ಥ)

ಕಕ್ಷ್ಯಮಧುವನ್ನು ಆಥರ್ವಣನು ನಿಮಗೆ ಹೇಳಿಕೊಟ್ಟನು ಎಂದಿದೆಯಷ್ಟೆ, ಆ ಮಧು ಯಾವದು? ಎಂದರೆ (ಮಂತ್ರವು) ಹೇಳುತ್ತದೆ. ಪುರಶ್ಚಕ್ರೇ ಎಂಬಲ್ಲಿ (ಪುರಃ= ಪುರಾಣಿ) ಪುರಗಳು ಎಂದರೆ ಶರೀರಗಳು. ಏಕೆಂದರೆ ಇದು

---

1. ಪ್ರವರ್ಗ್ಯಾಧ್ಯಾಯಗಳು ಕರ್ಮಕ್ಕೆ ಸಂಬಂಧಪಟ್ಟವುಗಳು; ಈ ಮಧುಕಾಂಡದ ಎರಡು ಅಧ್ಯಾಯಗಳು ಬ್ರಹ್ಮವಿದ್ಯೆಗೆ ಸಂಬಂಧಪಟ್ಟವುಗಳು. ಪ್ರವರ್ಗ್ಯಭಾಗವು ಉಪನಿಷತ್ತಿನ ಆರಂಭದಲ್ಲಿದ್ದರೂ ಬ್ರಹ್ಮವಿದ್ಯೆಗೆ ಸಂಬಂಧಪಟ್ಟದ್ದಲ್ಲವೆಂಬುದಕ್ಕೆ ಜ್ಯೋತಿಷ್ಟೋಮಕರ್ಮಕ್ಕೆ ಅವನ್ನು ವೇದವೇ ಸಂಬಂಧಿಸಿರುವದೂ ವಿದ್ಯೆಗೆ ಹೊಂದುವ ಯಾವ ಅರ್ಥವೂ ಅದರಲ್ಲಿಲ್ಲದಿರುವದೂ ಕಾರಣ. ಸೂ. ಭಾ. ೩-೩-೨೫, ಭಾ. ಭಾ. ೩೬೭ನ್ನು ನೋಡಿ.

ಅವ್ಯಾಕೃತದ ವ್ಯಾಕರಣದ ಪ್ರಕಾರವು: ಈ ಪರಮೇಶ್ವರನು[1] ಅವ್ಯಾಕೃತವಾದ ನಾಮರೂಪಗಳನ್ನು ವ್ಯಾಕರಣಮಾಡುವವನಾಗಿ ಮೊದಲು ಭೂರಾದಿಲೋಕಗಳನ್ನು ಸೃಜಿಸಿ ದ್ವಿಪದಗಳನ್ನು ಎರಡು ಕಾಲುಗಳಿಂದ ಉಪಲಕ್ಷಿತವಾದ ಮನುಷ್ಯಶರೀರಗಳನ್ನೂ ಪಕ್ಷಿಶರೀರಗಳನ್ನೂ (ಮಾಡಿದನು). ಹಾಗೂ ನಾಲ್ಕು ಕಾಲಿನ ಪುರಗಳನ್ನು ಎಂದರೆ ಶರೀರಗಳನ್ನು ಮಾಡಿದನು, ನಾಲ್ಕುಕಾಲುಗಳಿಂದ ಉಪಲಕ್ಷಿತವಾಗಿರುವ ಪಶುಶರೀರಗಳನ್ನು ಮಾಡಿದನು.[2] ಮೊದಲು ಆ ಈಶ್ವರನು ಪಕ್ಷಿಯಾಗಿ, ಲಿಂಗಶರೀರವಾಗಿ, ಪುರಗಳನ್ನು ಎಂದರೆ ಶರೀರಗಳನ್ನು, (ಆ) ಪುರುಷನು ಪ್ರವೇಶಿಸಿದನು.[3]

## ಪುರಶ್ಚಕ್ರೇ ಎಂಬ ಮಂತ್ರದ ಸಂಕ್ಷೇಪಾರ್ಥ

(ಭಾಷ್ಯ)

೪೧೬. ಅಸ್ಯಾರ್ಥಮ್ ಆಚಷ್ಟೇ ಶ್ರುತಿಃ। ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಸರ್ವಶರೀರೇಷು ಪುರಿಶಯಃ ಪುರಿ ಶೇತೇ ಇತಿ ಪುರಿಶಯಃ ಸನ್ ಪುರುಷ ಇತ್ಯುಚ್ಯತೇ। ನೈನೇನ ನಾನೇನ ಕಿಂಚನ ಕಿಂಚಿದಪಿ ಅನಾವೃತಮ್ ಅನಾಚ್ಛಾದಿತಮ್। ತಥಾ ನೈನೇನ ಕಿಂಚನ ಅಸಂವೃತಮ್ ಅನ್ತರನನು ಪ್ರವೇಶಿತಂ ಬಾಹ್ಯಭೂತೇನ ಅನ್ತರ್ಭೂತೇನ ಚ ನಾನಾವೃತಮ್। ಏವಂ ಸ ಏವ ನಾಮರೂಪಾತ್ಮನಾ ಅನ್ತರ್ಬಹಿರ್ಭಾವೇನ ಕಾರ್ಯಕರಣರೂಪೇಣ (ಚ) ವ್ಯವಸ್ಥಿತಃ। ಪುರಶ್ಚಕ್ರೇ ಇತ್ಯಾದಿಮನ್ತ್ರಃ ಸಂಕ್ಷೇಪತಃ ಆತ್ಮೈಕತ್ವಮ್ ಆಚಷ್ಟೇ ಇತ್ಯರ್ಥಃ॥

(ಭಾಷ್ಯಾರ್ಥ)

ಇದರ ಅರ್ಥವನ್ನು ಶ್ರುತಿಯು ಹೇಳುತ್ತಿದೆ: ಆ ಇವನೇ ಪುರುಷನು. ಏಕೆಂದರೆ ಎಲ್ಲಾ ಪುರಗಳಲ್ಲಿಯೂ, ಎಲ್ಲಾ ಶರೀರಗಳಲ್ಲಿಯೂ (ಇರುವದರಿಂದ) ಪುರಿಶಯನಾಗಿರುತ್ತಾನೆ. ಪುರದಲ್ಲಿರುತ್ತಾನೆ (ಪುರಿ ಶೇತೇ) ಆದ್ದರಿಂದ ಪುರಿಶಯನಾಗಿರುವದರಿಂದ ಪುರುಷನೆನಿಸಿರುತ್ತಾನೆ. (ಏನೇನ= ಅನೇನ)

---

1. 'ಯಾವನಿಂದ ಈ ಅವ್ಯಾಕೃತದ ವ್ಯಾಕರಣವು ಪ್ರಾರಂಭವಾಗಿರುವನೋ ಆ ಪರಮೇಶ್ವರನು' ಎಂದೂ ಕನ್ನಡಿಸಬಹುದು. ಆದರೆ ಅವ್ಯಾಕೃತವ್ಯಾಕರಣದ ಪ್ರಕಾರವಿದು ಎಂದು ವ್ಯಾಖ್ಯಾನಮಾಡಿದರೆ ಶರೀರಗಳನ್ನು ಮಾಡಿ ಅವುಗಳಲ್ಲಿ ಹೊಕ್ಕಿರುತ್ತಾನೆಂಬುದೇ ಪ್ರಕಾರವು ಎಂದಂತೆ ಆಗಿ ವಿಷಯವು ಸ್ಫುಟವಾಗುತ್ತದೆ.

2. ಎರಡು ಕಾಲುಗಳ ಪುರಗಳು, ನಾಲ್ಕುಕಾಲುಗಳ ಪುರಗಳು- ಎಂಬಲ್ಲಿ ಉಪಲಕ್ಷಣವಾಗಿ ಕಾಲುಗಳನ್ನುಪಯೋಗಿಸಿದೆ. ಇಂಥಿಂಥ ರಚನೆಯ ಶರೀರಗಳು ಎಂದೇ ಅಭಿಪ್ರಾಯ.

3. ಸ್ಥೂಲಸೂಕ್ಷ್ಮಶರೀರಗಳನ್ನು ಸೃಜಿಸಿದ್ದರಿಂದಲೇ ಸರ್ವವ್ಯಾಪಿಯಾದ ಪರಮೇಶ್ವರನು ಆಯಾ ಶರೀರದ ಒಳಗೆ ಹೊಕ್ಕವನಂತೆ ತೋರುತ್ತಿದ್ದಾನೆ ಎಂದು ಅಭಿಪ್ರಾಯ.

ಇವನಿಂದ ಅನಾವೃತವಾದದ್ದು ಮುಚ್ಚಲ್ಪಡದೆ ಇರುವದು ಯಾವದೊಂದೂ ಇಲ್ಲ ಹಾಗೂ ಇವನಿಂದ ಅಸಂವೃತವಾದದ್ದು, ಎಂದರೆ (ಇವನ) ಹೊರಗಿದ್ದು ಒಳಗೆ ಪ್ರವೇಶಮಾಡದೆ ಇರುವದು ಯಾವದೊಂದೂ ಇಲ್ಲ; ಒಳಗಿದ್ದು ಮುಚ್ಚಿಕೊಳ್ಳದೆ ಇರುವದು ಯಾವದೊಂದೂ ಇಲ್ಲ. **ಹೀಗೆ ಅವನೇ ನಾಮರೂಪಗಳಾಗಿಯೂ ಕಾರ್ಯಕರಣರೂಪದಿಂದಲೂ ಒಳಗೂ ಹೊರಗೂ ಇರುತ್ತಾನೆ.**[1] 'ಪುರಶ್ಚಕ್ರೇ' ಮುಂತಾದ ಮಂತ್ರವು ಸಂಕ್ಷೇಪವಾಗಿ ಆತ್ಮೈಕತ್ವವನ್ನು ಹೇಳುತ್ತದೆ ಎಂದರ್ಥ.[2]

## ಪರಮಾತ್ಮನ ಸರ್ವಾತ್ಮತ್ವ

(ಉಪನಿಷತ್ತು)

**ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**
**ರೂಪಂ ರೂಪಂ ಪ್ರತಿರೂಪೋ ಬಭೂವ**
**ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ**
**ಯುಕ್ತಾ ಹ್ಯಸ್ಯ ಹರಯಃ ಶತಾ ದಶೇತಿ ॥**
**ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ**
**ಬಹೂನಿ ಚಾನನ್ತಾನಿ ಚ ತದೇತದ್ಬ್ರಹ್ಮಾಪೂರ್ವಮನಪರ**
**ಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ**
**ಸರ್ವಾನುಭೂರಿತ್ಯನುಶಾಸನಮ್** ॥ ೧೯ ॥

೧೯. ಇದೇ ದಧ್ಯಙ್ಙಾಥರ್ವಣನು ಅಶ್ವಿನೀದೇವತೆಗಳಿಗೆ ಹೇಳಿಕೊಟ್ಟ ಮಧು. ಆ ಇದನ್ನು ಕಂಡು ಋಷಿಯು ಹೇಳಿದ್ದೇನೆಂದರೆ: "ರೂಪರೂಪಕ್ಕೂ ಪ್ರತಿರೂಪನಾದನು. ಆ ಇವನ ರೂಪವು ತಿಳಿಯಪಡಿಸುವದಕ್ಕಾಗಿ. ಇಂದ್ರನು ಮಾಯೆಗಳಿಂದ ಪುರುರೂಪನಾಗಿ ಕಾಣುತ್ತಾನೆ; ಏಕೆಂದರೆ ಅವನಿಗೆ ನೂರಹತ್ತು ಹರಿಗಳು ಕೂಡಿಕೊಂಡಿರುತ್ತವೆ.'' ಇವನೇ ಹರಿಗಳು, ಇವನೇ ಹತ್ತುಸಾವಿರಗಳು ಬಹು, ಮತ್ತು ಅನಂತ(ವಾದ ಹರಿ)ಗಳು. ಆ ಈ ಬ್ರಹ್ಮವು ಅಪೂರ್ವವು, ಅನಪರವು, ಅನಂತರವು, ಅಬಾಹ್ಯವು; ಈ ಆತ್ಮನು ಬ್ರಹ್ಮವು,

1. ಹೊರಗೆ ಸಾಮಾನ್ಯನಾಮರೂಪಗಳಾಗಿಯೂ ಒಳಗೆ ಕಾರ್ಯಕರಣಗಳೆಂಬ ವಿಶೇಷರೂಪದಿಂದಲೂ ತಾನೊಬ್ಬನೇ ಇರುತ್ತಾನೆ.

2. ಆತ್ಮನಿಂದ ಹೊರಗಾಗಲಿ ಒಳಗಾಗಲಿ ಆತ್ಮನಿಗಿಂತ ಬೇರೆಯಾದ ಮತ್ತೊಂದು ತತ್ತ್ವವಿಲ್ಲವೆಂದು ಹೇಳುತ್ತದೆ ಎಂದರ್ಥ.

ಸರ್ವಾನುಭೂ- ಇಂತು ಅನುಶಾಸನವು.

## ಆತ್ಮನ ಅನೇಕರೂಪಗಳು

(ಭಾಷ್ಯ)

೪೦೭. ಇದಂ ವೈ ತನ್ಮಧು ಇತ್ಯಾದಿ ಪೂರ್ವವತ್ । ರೂಪಂ ರೂಪಂ ಪ್ರತಿರೂಪೋ ಬಭೂವ । ರೂಪಂ ರೂಪಂ ಪ್ರತಿ ಪ್ರತಿರೂಪಃ ರೂಪಾನ್ತರಂ ಬಭೂವ ಇತ್ಯರ್ಥಃ। ಪ್ರತಿರೂಪಃ ಅನುರೂಪೋ ವಾ । ಯಾದೃಕ್ಸಂಸ್ಥಾನೌ ಮಾತಾಪಿತರೌ ತತ್ಸಂಸ್ಥಾನಃ ತದನುರೂಪ ಏವ ಪುತ್ರೋ ಜಾಯತೇ । ನ ಹಿ ಚತುಷ್ಪದೋ ದ್ವಿಪಾದ್ ಜಾಯತೇ, ದ್ವಿಪದೋ ವಾ ಚತುಷ್ಪಾತ್ । ಸ ಏವ ಹಿ ಪರಮೇಶ್ವರೋ ನಾಮರೂಪೇ ವ್ಯಾಕುರ್ವಾಣಃ ರೂಪಂ ರೂಪಂ ಪ್ರತಿರೂಪೋ ಬಭೂವ। ಕಿಮರ್ಥಂ ಪುನಃ ಪ್ರತಿರೂಪಮ್ ಆಗಮನಂ[1] ತಸ್ಯೇತಿ ? ಉಚ್ಯತೇ । ತದಸ್ಯ ಆತ್ಮನಃ ರೂಪಂ ಪ್ರತಿಚಕ್ಷಣಾಯ ಪ್ರತಿಖ್ಯಾಪನಾಯ । ಯದಿ ಹಿ ನಾಮರೂಪೇ ನ ವ್ಯಾಕ್ರಿಯೇತೇ ತದಾ ಅಸ್ಯಾತ್ಮನೋ ನಿರುಪಾಧಿಕಂ ರೂಪಂ ಪ್ರಜ್ಞಾನಘನಾಖ್ಯಂ ನ ಪ್ರತಿಖ್ಯಾಯೇತ । ಯದಾ ಪುನಃ ಕಾರ್ಯಕರಣಾತ್ಮನಾ ನಾಮರೂಪೇ ವ್ಯಾಕೃತೇ ಭವತಃ, ತದಾ ಅಸ್ಯ ರೂಪಂ ಪ್ರತಿಖ್ಯಾಯೇತ । ಇನ್ದ್ರಃ ಪರಮೇಶ್ವರಃ ಮಾಯಾಭಿಃ ಪ್ರಜ್ಞಾಭಿಃ ನಾಮರೂಪಭೂತಕೃತಮಿಥ್ಯಾಭಿಮಾನೈರ್ವಾ ನ ತು ಪರಮಾರ್ಥತಃ ಪುರುರೂಪೋ ಬಹುರೂಪಃ ಈಯತೇ ಗಮ್ಯತೇ ಏಕರೂಪ ಏವ ಪ್ರಜ್ಞಾನಘನಃ ಸನ್ ಅವಿದ್ಯಾಪ್ರಜ್ಞಾಭಿಃ । ಕಸ್ಮಾತ್ ಪುನಃ ಕಾರಣಾತ್ ? ಯುಕ್ತಾ ರಥೇ ಇವ ವಾಜಿನಃ ಸ್ವವಿಷಯಪ್ರಕಾಶನಾಯ ಹಿ ಯಸ್ಮಾತ್ ಅಸ್ಯ ಹರಯಃ ಹರಣಾತ್ ಇನ್ದ್ರಿಯಾಣಿ ಶತಾ ಶತಾನಿ ದಶ ಚ ಪ್ರಾಣಿಭೇದಬಾಹುಲ್ಯಾತ್ ಶತಾನಿ ದಶ ಚ ಭವನ್ತಿ । ತಸ್ಮಾತ್ ಇನ್ದ್ರಿಯವಿಷಯಬಾಹುಲ್ಯಾತ್ ತತ್ಪ್ರಕಾಶನಾಯೈವ ಚ ಯುಕ್ತಾನಿ ತಾನಿ ನಾತ್ಮಪ್ರಕಾಶನಾಯ । "ಪರಾಞ್ಚಿ ಖಾನಿ ವ್ಯತೃಣತ್ ಸ್ವಯಂಭೂಃ" (ಕ. ೨-೧-೧) ಇತಿ ಹಿ ಕಾಠಕೇ । ತಸ್ಮಾತ್ ತೈರೇವ ವಿಷಯಸ್ವರೂಪೈಃ ಈಯತೇ ನ ಪ್ರಜ್ಞಾನಘನೈಕರಸೇನ ಸ್ವರೂಪೇಣ॥

(ಭಾಷ್ಯಾರ್ಥ)

'ಇದಂ ವೈ ತನ್ಮಧು' ಮುಂತಾದ (ವಾಕ್ಯವು) ಮೊದಲಿನಂತೆ. ರೂಪರೂಪಕ್ಕೂ ಪ್ರತಿರೂಪನಾದನು. ಒಂದೊಂದು ರೂಪಕ್ಕೂ ಪ್ರತಿರೂಪವಾದನು, ರೂಪಾಂತರವುಳ್ಳವನಾದನು ಎಂದರ್ಥ.[2] ಅಥವಾ ಅನುರೂಪವಾಗಿ (ಆದನು

---

1. "ಪ್ರತಿರೂಪಗಮನಂ" ಎಂದು ಮೂಲಭಾಷ್ಯದಲ್ಲಿದ್ದಿರಬಹುದೆ ?

2. ಪ್ರತಿಯೊಂದು ಉಪಾಧಿಗೂ ಒಂದೊಂದು ರೂಪಾಂತರವುಳ್ಳವನಾದನು, ಅನೇಕ ಕಾರ್ಯಕರಣಸಂಘಾತಗಳಿರುವದರಿಂದ ಒಂದೊಂದು ಕನ್ನಡಿಯಲ್ಲಿ ಒಂದೊಂದು ಪ್ರತಿಬಿಂಬವು ತೋರುವಂತೆ ಬೇರೆಬೇರೆಯ ಜೀವರುಗಳಾಗಿ ಕಾಣಿಸುತ್ತಾನೆ ಎಂದು ಅಭಿಪ್ರಾಯ.

ಎಂದರ್ಥ). ತಾಯಿತಂದೆಗಳು ಎಂಥ ಆಕಾರವುಳ್ಳವರೋ ಅಂಥ ಆಕಾರವುಳ್ಳವನಾಗಿ ಅದಕ್ಕನುಗುಣವಾಗಿಯೇ ಮಗನು ಹುಟ್ಟುತ್ತಾನೆ. ನಾಲ್ಕು ಕಾಲಿನ (ಪ್ರಾಣಿಯಿಂದ) ಎರಡು ಕಾಲಿನ ಪ್ರಾಣಿಯಾಗಲಿ, ಎರಡು ಕಾಲಿನ (ಪ್ರಾಣಿ)ಯಿಂದ ನಾಲ್ಕು ಕಾಲಿನ ಪ್ರಾಣಿಯಾಗಲಿ ಹುಟ್ಟುವದಿಲ್ಲವಷ್ಟೆ ![1]

ಅದೇ ಪರಮೇಶ್ವರನೇ ನಾಮರೂಪಗಳನ್ನು ವ್ಯಾಕರಣಮಾಡುವವನಾಗಿ ರೂಪರೂಪಕ್ಕೂ ಪ್ರತಿರೂಪನಾದನು.[2] ಅವನು ಪ್ರತಿರೂಪ(ನಾಗಿ ಇಲ್ಲಿಗೆ) ಬಂದ[3] ಕಾರಣವೇನು ? ಎಂದರೆ (ಮಂತ್ರವು) ಹೇಳುತ್ತದೆ: ಆ ಇವನ ರೂಪವು ತಿಳಿಯಪಡಿಸುವದಕ್ಕಾಗಿ, ತಿಳಿಸಿಕೊಡುವದಕ್ಕಾಗಿ. **ನಾಮರೂಪಗಳನ್ನು ವ್ಯಾಕರಣಮಾಡದೆ ಇದ್ದಿದ್ದರೆ ಆಗ ಈ ಆತ್ಮನ ಪ್ರಜ್ಞಾನಘನವೆಂಬ ನಿರುಪಾಧಿಕರೂಪವನ್ನು ತಿಳಿಸಿಕೊಟ್ಟಂತಾಗುತ್ತಿರಲಿಲ್ಲ ; ಅದಕ್ಕೆ ಬದಲು ಯಾವಾಗ ಕಾರ್ಯಕರಣಗಳ ರೂಪದಿಂದ ನಾಮರೂಪಗಳು ವ್ಯಾಕರಣವಾಗುತ್ತವೆಯೋ ಆಗ ಅವನ ರೂಪವನ್ನು ತಿಳಿಯಪಡಿಸಿದಂತೆ ಆಗುತ್ತದೆ[4].**

ಇಂದ್ರನು, ಪರಮೇಶ್ವರನು, **ಮಾಯೆ**ಗಳಿಂದ ಪ್ರಜ್ಞೆಗಳಿಂದ, ಅಥವಾ ನಾಮರೂಪಭೂತಕೃತವಾದ ಮಿಥ್ಯಾಭಿಮಾನಗಳಿಂದ[5]– (ಇಷ್ಟೇ) ಹೊರತು ನಿಜವಾಗಿಯಲ್ಲ — ಪುರುರೂಪನಾಗಿ ಬಹುರೂಪನಾಗಿ ಕಾಣಿಸುತ್ತಾನೆ, ತಿಳಿಯಬರುತ್ತಾನೆ. ಪ್ರಜ್ಞಾನಘನನಾಗಿ ಒಂದೇ ರೂಪದಲ್ಲಿದ್ದುಕೊಂಡೇ ಅವಿದ್ಯಾಪ್ರಜ್ಞೆಗಳಿಂದ (ಬಹುರೂಪವಾಗಿ ಕಾಣಿಸುತ್ತಾನೆ). ಇದು ಯಾವ ಕಾರಣದಿಂದ ? ಎಂದರೆ ಅವನಿಗೆ ರಥಕ್ಕೆ ಕುದುರೆಗಳನ್ನು (ಕಟ್ಟಿರು)ವಂತೆ ಹರಿಗಳು ಹರಣಮಾಡುವದರಿಂದ (ಹರಿಗಳು ಎನಿಸಿರುವ) ಇಂದ್ರಿಯಗಳು

---

1. ಈ ವ್ಯಾಖ್ಯಾನದಂತೆ ಆಯಾ ಜೀವರ ಆಕೃತಿಗೆ ತಕ್ಕಂತೆ ಆಯಾ ಜೀವರ ರೂಪದಲ್ಲಿ ತೋರುತ್ತಾನೆ ಎಂದರ್ಥ.

2. ಈ ವಾಕ್ಯದಲ್ಲಿ ಎರಡರ್ಥವನ್ನೂ ಸಂಗ್ರಹಿಸಿದೆ. ಆತ್ಮನು ಬಹುವಾಗಿ ವಿಚಿತ್ರವಾಗಿ ತೋರುವದಕ್ಕೆ ನಾಮರೂಪಗಳೆಂಬ ಉಪಾಧಿಗಳೇ ಕಾರಣ ಎಂದು ಅಭಿಪ್ರಾಯ.

3. "ಪ್ರತಿರೂಪಗಮನಮ್" ಎಂದು ಪಾಠವಿದ್ದರೆ 'ಹೀಗೆ ಬೇರೆಬೇರೆ ರೂಪವನ್ನು ಪಡೆದ' ಎಂದು ಕನ್ನಡಿಸಿಕೊಳ್ಳಬೇಕು.

4. ಯಾವನು ನಾಮರೂಪಗಳನ್ನೂ ನಾಮರೂಪಗಳಿಂದಾಗಿರುವ ಕಾರ್ಯಕರಣಸಂಘಾತಗಳನ್ನೂ ಏರ್ಪಡಿಸಿರುವನೋ ಅವನು ಆ ನಾಮರೂಪಗಳಿಗಿಂತ ವಿಲಕ್ಷಣನಾಗಿರಬೇಕು– ಎಂದು ತಿಳಿದುಕೊಳ್ಳುವದಕ್ಕಾಗಿ ನಾಮರೂಪವ್ಯಾಕರಣವು ಅವಶ್ಯ.

5. ಮಾಯೆಗಳು ಎಂದರೆ ಅವಿದ್ಯಾರೂಪವಾದ ಇಂದ್ರಿಯಪ್ರಜ್ಞೆಗಳಿಂದ ಎಂದು ಒಂದು ಅರ್ಥ :- ನಾಮರೂಪಗಳಿಂದಾಗಿರುವ ಬೇರೆಬೇರೆಯ ಕಾರ್ಯಕರಣಸಂಘಾತಗಳ ಅಭಿಮಾನದಿಂದ ಎಂದು ಇನ್ನೊಂದು ಅರ್ಥ. ಮಾಂ. ಕಾ. ಭಾ. ೩-೨೪ (ಭಾ.ಭಾ. ೧೭೨ನ್ನು ನೋಡಿ).

ತಮ್ಮತಮ್ಮ ವಿಷಯಗಳನ್ನು ಬೆಳಗುವದಕ್ಕಾಗಿ[1] ನೂರೂ ಹತ್ತೂ- ಬೇರೆ ಬೇರೆಯ ಪ್ರಾಣಿಗಳು ಬಹಳವಾಗಿರುವದರಿಂದ ನೂರೂ ಹತ್ತೂ ಆಗಿರುತ್ತವೆ.[2] ಆದ್ದರಿಂದ ಇಂದ್ರಿಯವಿಷಯಗಳು ಬಹಳವಾಗಿರುವದರಿಂದ ಅವುಗಳನ್ನು ಬೆಳಗುವದಕ್ಕಾಗಿಯೇ ಅವು (ಶರೀರವೆಂಬ ರಥಕ್ಕೆ) ಹೂಡಿರುತ್ತವೆಯೇ ಹೊರತು ಆತ್ಮನನ್ನು ಬೆಳಗುವದಕ್ಕಲ್ಲ.[3] "ಇಂದ್ರಿಯಗಳನ್ನು ಸ್ವಯಂಭು ಹೊರಗಡೆಗೆ ಕೊರೆದಿರುತ್ತಾನೆ" (ಕ. ೨-೧-೧) ಎಂದಲ್ಲವೆ, ಕಾಠಕದಲ್ಲಿದೆ? ಆದ್ದರಿಂದ ಆ ವಿಷಯಸ್ವರೂಪಗಳಿಂದಲೇ (ಬಹುರೂಪನಾಗಿ) ಕಾಣಿಸುತ್ತಾನೆಯೇ ಹೊರತು ಪ್ರಜ್ಞಾನಘನೈಕರಸವಾದ ಸ್ವರೂಪದಿಂದ (ತಿಳಿಯಬರು)ವದಿಲ್ಲ.[4]

## ಇಂದ್ರಿಯಗಳೂ ಪರಮಾತ್ಮನೇ

(ಭಾಷ್ಯ)

೪೦೮. ಏವಂ ತರ್ಹಿ ಅಯಮನ್ಯಃ ಪರಮೇಶ್ವರಃ, ಅನ್ಯೇ ಹರಯಃ ಇತ್ಯೇವಂ ಪ್ರಾಪ್ತೇ ಉಚ್ಯತೇ । ಅಯಂ ವೈ ಹರಯಃ, ಅಯಂ ವೈ ದಶ ಚ ಸಹಸ್ರಾಣಿ ಬಹೂನಿ ಚ ಅನನ್ತಾನಿ ಚ । ಪ್ರಾಣಿಭೇದಸ್ಯ ಆನನ್ತ್ಯಾತ್ । ಕಿಂ ಬಹುನಾ ತದೇತತ್ ಬ್ರಹ್ಮ ಯ ಆತ್ಮಾ ಅಪೂರ್ವಂ ನಾಸ್ಯ ಕಾರಣಮ್ ಪೂರ್ವಂ ವಿದ್ಯತ ಇತಿ ಅಪೂರ್ವಮ್ । ನಾಸ್ಯ ಅಪರಂ ಕಾರ್ಯಂ ವಿದ್ಯತ ಇತಿ ಅನಪರಮ್ । ನಾಸ್ಯ ಜಾತ್ಯನ್ತರಮ್ ಅನ್ತರಾಲೇ ವಿದ್ಯತ ಇತಿ ಅನನ್ತರಮ್ । ತಥಾ ಬಹಿರಸ್ಯ ನ ವಿದ್ಯತ ಇತಿ ಅಬಾಹ್ಯಮ್ । ಕಿಂ ಪುನಸ್ತತ್ ನಿರನ್ತರಮ್ ? ಬ್ರಹ್ಮ ಅಯಮಾತ್ಮಾ । ಕೋಽಸೌ ? ಯಃ ಪ್ರತ್ಯಗಾತ್ಮಾ ದ್ರಷ್ಟಾ ಶ್ರೋತಾ ಮನ್ತಾ ಬೋದ್ಧಾ ವಿಜ್ಞಾತಾ । ಸರ್ವಾನುಭೂಃ । ಸರ್ವಾತ್ಮನಾ ಸರ್ವಮ್ ಅನುಭವತೀತಿ ಸರ್ವಾನುಭೂಃ । ಇತ್ಯೇತದ್ ಅನುಶಾಸನಂ ಸರ್ವವೇದಾನ್ತೋಪದೇಶಃ । ಏಷ ಸರ್ವವೇದಾನ್ತಾನಾಮ್ ಉಪಸಂಹೃತೋಽರ್ಥಃ । ಏತದ್ ಅಮೃತಮ್, ಅಭಯಮ್ । ಪರಿಸಮಾಪ್ತಶ್ಚ ಶಾಸ್ತ್ರಾರ್ಥಃ ॥

---

1. ಪ್ರತಿಜೀವನಿಗೂ ವಿಷಯಗಳು ಬಹಳವಾಗಿರುವದರಿಂದ ಅವುಗಳನ್ನು ಬೆಳಗುವದಕ್ಕಾಗಿ ಇಂದ್ರಿಯಗಳೂ ಅನೇಕವಾಗಿವೆ ಎಂದು ಅಭಿಪ್ರಾಯ.

2. ನೂರಹತ್ತು ಎಂದೂ ಅರ್ಥಮಾಡಬಹುದು; 'ನೂರೆಂಟು' ಎಂಬ ಕನ್ನಡ ಶಬ್ದದಂತೆ ಇದಕ್ಕೆ ಅರ್ಥ. ಅಥವಾ ಹತ್ತುನೂರು ಎಂದರೆ ಸಾವಿರ ಎಂದೂ ಅರ್ಥಮಾಡಬಹುದು. ಆಗಲೂ ಬಹಳ ಎಂದೇ ಅರ್ಥ.

3. ವಿಷಯಗಳೂ ಅನೇಕ, ಅವುಗಳನ್ನು ಬೆಳಗುವದಕ್ಕಾಗಿರುವ ಇಂದ್ರಿಯಗಳೂ ಅನೇಕ. ಅನೇಕವಾಗಿರುವ ವಿಷಯಗಳನ್ನೂ ಅರಿಯಬಲ್ಲ ಇಂದ್ರಿಯಗಳು ಏಕರೂಪವಾದ ಚೈತನ್ಯಸ್ವರೂಪನಾದ ಆತ್ಮನನ್ನು ಅರಿಯಲಾರವು.

4. ಆತ್ಮನು ಒಬ್ಬನೇ ಆದರೂ ಇಂದ್ರಿಯಗಳ ಮೂಲಕವಾಗಿ ನೋಡಿದಾಗ ಅನೇಕ ವಿಷಯಗಳ ರೂಪವಾಗಿ ಕಾಣಿಸುತ್ತಾನೆ ಎಂದು ಅಭಿಪ್ರಾಯ.

(ಭಾಷ್ಯಾರ್ಥ)

ಹಾಗಾದರೆ ಈ ಪರಮೇಶ್ವರನು ಬೇರೆ, (ಆ) ಹರಿಗಳೇ ಬೇರೆ- ಎಂದು ಬಂದೊದಗಲಾಗಿ[1] (ಶ್ರುತಿ) ಹೇಳುತ್ತಿದೆ: ಇವನೇ ಹರಿಗಳು, ಇವನೇ ಹತ್ತು ಸಾವಿರಗಳು, ಬಹು(ರೂಪ)ಗಳು, ಅನಂತ(ರೂಪ)ಗಳು. ಏಕೆಂದರೆ ಪ್ರಾಣಿ ವಿಶೇಷಗಳು ಅನಂತವಾಗಿವೆ.[2]

ಹೆಚ್ಚು ಹೇಳಿದ್ದರಿಂದೇನು ? ಈ ಆತ್ಮನೆಂಬ ಆ ಈ ಬ್ರಹ್ಮವು ಅಪೂರ್ವವು ; ಇದಕ್ಕೆ ಪೂರ್ವವು ಎಂದರೆ ಕಾರಣವು ಇರುವದಿಲ್ಲವಾದ್ದರಿಂದ ಅಪೂರ್ವವು. ಅನಪರವು ಎಂದರೆ ಕಾರ್ಯವು ಇರುವದಿಲ್ಲವಾದ್ದರಿಂದ ಅನಪರವು. ಇದಕ್ಕೆ ಮತ್ತೊಂದು ಜಾತಿಯ (ವಸ್ತು) ನಡುವೆಯಿರುವದಿಲ್ಲವಾಗಿ (ಇದು) ಅನಂತರವು. ಹೀಗೆಯೇ ಇದಕ್ಕೆ ಹೊರಗು ಇಲ್ಲದ್ದರಿಂದ ಅಬಾಹ್ಯವು. ಆ ನಿರಂತರವಾದದ್ದು ಯಾವದು ? ಬ್ರಹ್ಮವು, ಈ ಆತ್ಮನು. ಈ (ಆತ್ಮ)ನೆಂದರೆ ಯಾರು ? ದ್ರಷ್ಟೃವೂ ಶ್ರೋತೃವೂ ಮನ್ತೃವೂ ಬೋದ್ಧೃವೂ ವಿಜ್ಞಾತೃವೂ ಆಗಿರುವ ಪ್ರತ್ಯಗಾತ್ಮನಿದಾನಲ್ಲ, (ಅವನೇ ಇವನು) ಸರ್ವಾನುಭೂಃ, ಸರ್ವವೂ ಆತ್ಮನೂ ಆಗಿ ಸರ್ವವನ್ನೂ ಅನುಭವಿಸುತ್ತಾನೆ. ಆದ್ದರಿಂದ ಸರ್ವಾನುಭೂಃ[3] (ಎನಿಸಿರುತ್ತಾನೆ).

ಹೀಗೆಂಬುದು ಅನುಶಾಸನವು, ಸರ್ವವೇದಾಂತಗಳ ಉಪದೇಶವು ; ಇದೇ ಸರ್ವವೇದಾಂತಗಳೂ ಒಟ್ಟುಗೂಡಿಸಿ (ಹೇಳಿರುವ) ಅರ್ಥವು ; ಇದೇ ಅಮೃತವು, ಅಭಯವು. (ಇಲ್ಲಿಗೆ) ಶಾಸ್ತ್ರಾರ್ಥವೂ ಪರಿಸಮಾಪ್ತವಾಯಿತು.

---

1. ಇಂದ್ರಿಯಪ್ರಜ್ಞೆಗಳ ನಿಮಿತ್ತದಿಂದ ಇವನು ಬಹುರೂಪವಾಗಿ ಕಾಣಿಸುತ್ತಾನೆ ಎಂದದ್ದರಿಂದ ಈ ಆಕ್ಷೇಪವು ಬಂದೊದಗುತ್ತದೆ.

2. ಹತ್ತುಸಾವಿರ ಎಂಬುದು ಗೊತ್ತಾದ ಸಂಖ್ಯೆಯನ್ನು ಹೇಳುವದಿಲ್ಲ, ಅನಂತವೆಂದೇ ಅಭಿಪ್ರಾಯ.

3. ಯಾರುಯಾರು ಏನೇನು ಅನುಭವಿಸಿದರೂ ಈ ಪರಮಾತ್ಮನೇ ಅದನ್ನು ಅನುಭವಿಸಿದಂತೆ; ಏಕೆಂದರೆ ಎಲ್ಲರ ಅನುಭವವೇ ಇವನು.

# ಐದನೆಯ ಬ್ರಾಹ್ಮಣದ ಸಾರ

ಜಗತ್ತೆಲ್ಲವೂ ಪರಸ್ಪರೋಪಕಾರ್ಯೋಪಕಾರಕವಾಗಿರುವದರಿಂದ ಬ್ರಹ್ಮಾತ್ಮನೆಂಬ ಒಂದೇ ಕಾರಣದಿಂದ ಆಗಿದ್ದು ಅದಕ್ಕಿಂತ ಅವ್ಯತಿರಿಕ್ತವಾಗಿರುತ್ತದೆ ಎಂದು ಇಲ್ಲಿ ಹೇಳಿರುತ್ತದೆ.

೧. ಈ ಪೃಥ್ವಿಯು ಎಲ್ಲಾ ಪ್ರಾಣಿಗಳಿಗೂ ಕಾರ್ಯವು; ಈ ಪೃಥ್ವಿಗೆ ಸರ್ವಭೂತಗಳೂ ಕಾರ್ಯವು. ಆಧಿದೈವಿಕವಾಗಿ ಪೃಥ್ವಿಯೊಳಗೂ ಆಧ್ಯಾತ್ಮಿಕವಾಗಿ ಶರೀರದೊಳಗೂ ಇರುವ ತೇಜೋಮಯನೂ ಅಮೃತಮಯನೂ ಆಗಿರುವ ಲಿಂಗಾತ್ಮನು ಎಲ್ಲಾ ಭೂತಗಳ ಕಾರ್ಯವು; ಎಲ್ಲಾ ಭೂತಗಳೂ ಈ ಲಿಂಗಾತ್ಮನ ಕಾರ್ಯವು. ಹೀಗೆ ಉಪಕಾರ್ಯೋಪಕಾರಕಭಾವದಿಂದ ಸಂಬದ್ಧವಾಗಿರುವ ಈ ನಾಲ್ಕೂ ಒಂದಕ್ಕೊಂದು ಮಧುವೆನಿಸಿವೆ. ಇವಕ್ಕೆ ಕಾರಣವಾಗಿರುವದೇ ಪರಮಾರ್ಥವು, ಈ ಕಾರ್ಯವು ಅದಕ್ಕಿಂತ ಬೇರೆಯಲ್ಲ. ಇದನ್ನೇ ಹಿಂದೆ (೨-೪-೬ರಲ್ಲಿ) 'ಇವೆಲ್ಲವೂ ಈ ಆತ್ಮನೇ' ಎಂದು ಹೇಳಿದೆ; ಇದರ ಜ್ಞಾನವನ್ನೇ ಅಮೃತತ್ವಕ್ಕೆ ಸಾಧನವೆಂದು ಮೈತ್ರೇಯಿಗೆ ಯಾಜ್ಞವಲ್ಕ್ಯನು ಹೇಳುತ್ತಾನೆ; ಇದನ್ನೇ 'ಬ್ರಹ್ಮವನ್ನು ನಿನಗೆ ಹೇಳಿಕೊಡುವೆನು' (೨-೧-೧) ಎಂದು ಬಾಲಾಕಿಯೂ 'ನಿನಗೆ ಅರಿಕೆ ಮಾಡಿಕೊಳ್ಳುವೆನು' (೨-೧-೧೫) ಎಂದು ಅಜಾತಶತ್ರುವೂ ಹೇಳಿರುತ್ತಾರೆ. ಇದನ್ನು ಅರಿಯುವದೇ ಬ್ರಹ್ಮವಿದ್ಯೆ, ಇವನ್ನು ಅರಿತದ್ದರಿಂದಲೇ ಸರ್ವಾತ್ಮಭಾವವೆಂಬ ಫಲವು ಬರುತ್ತದೆ.

೨-೧೩. ಮೇಲೆ ಹೇಳಿದಂತೆಯೇ ಅಪ್ಪಿನಿಂದ ಹಿಡಿದು ಮಾನುಷಜಾತಿಯವರೆಗಿನ ಮಧುಪರ್ಯಾಯಗಳ ಅರ್ಥವನ್ನು ತಿಳಿಯಬೇಕು. ಈ ಮಧುವೆಲ್ಲವೂ ಈ ಬ್ರಹ್ಮಾತ್ಮನ ಕಾರ್ಯವೇ, ಅದಕ್ಕಿಂತ ವ್ಯತಿರಿಕ್ತವಾಗಿರುವದಿಲ್ಲ.

೧೪. ಸಮಷ್ಟಿಕಾರ್ಯಕರಣಸಂಘಾತವೆಲ್ಲವೂ ಎಲ್ಲಾ ಭೂತಗಳ ಮಧು, ಎಲ್ಲಾ ಭೂತಗಳೂ ಇದರ ಮಧು. ಈ ಸಂಘಾತದಲ್ಲಿರುವ ತೇಜೋಮಯನೂ ಅಮೃತಮಯನೂ ಆದ ಲಿಂಗಾತ್ಮನೇ ಬ್ರಹ್ಮದ ಅಮೂರ್ತರಸವು. ಇವೆರಡರೊಳಗಿರುವ ಸ್ವಾಮಿಯಾದ ವಿಜ್ಞಾನಮಯನು ನಿಜವಾಗಿ ಸರ್ವಾತ್ಮನು, ಅಮೃತವಾದ ಬ್ರಹ್ಮವು, ಅವನನ್ನರಿತುಕೊಂಡರೇ ಸರ್ವಾತ್ಮಭಾವವು.

೧೫. ಬ್ರಹ್ಮವಿದ್ಯೆಯಿಂದ ಹೀಗೆ ವಿಜ್ಞಾನಮಯನನ್ನು ಪರಮಾತ್ಮನಲ್ಲಿ ಲಯಿಸಿಕೊಂಡಾಗ ಸರ್ವಕ್ಕೂ ಆಧಾರವಾಗಿ ಉಳಿದುಕೊಳ್ಳುವ ಪರಮಾತ್ಮನು ಸರ್ವಭೂತಗಳಿಗೂ ಅಧಿಪತಿಯಾದ ರಾಜನು, ಚಕ್ರದ ಗುಂಬಹಳಿಗಳಲ್ಲಿ ಹಾರೆಕೋಲುಗಳು ಸೇರಿಕೊಂಡಿರುವಂತೆ ಈ ಪರಮಾತ್ಮನಲ್ಲಿ ಎಲ್ಲಾ ಪ್ರಾಣಗಳೂ, ಎಲ್ಲಾ ದೇವತೆಗಳೂ, ಎಲ್ಲಾ ಇಂದ್ರಿಯಗಳೂ, ಎಲ್ಲಾ ಜೀವರೂ ಸೇರಿ ಒಂದಾಗಿರುವರು.

೧೬-೧೭. ದಧ್ಯಙ್ಙಾಥರ್ವಣನೆಂಬ ಋಷಿಯು ಅಶ್ವಿನೀದೇವತೆಗಳಿಗೆ ಹೇಳಿಕೊಟ್ಟ ಮಧುವಿದ್ಯೆಯಲ್ಲಿ ಈ ಬ್ರಾಹ್ಮಣದರ್ಥವು ಸೇರಿದೆ. ಯಜ್ಞಪುರುಷನ ತಲೆಯು ಕತ್ತರಿಸಿ

